# ಪಂ.ಸಿದ್ಧಲಿಂಗಶಾಸ್ತ್ರಿಗಳ

# ಸಮಗ್ರ ಸಾಹಿತ್ಯ

ಸಂಪಾದಕ

ಡಾ. ಪಂಡಿತ ಕೆ. ರಾಠೋಡ



ಸಾಹಿತ್ಯ ಸಂಸ್ಕೃತಿ ಮಾಲೆ - ೮

# ಪಂ. ಸಿದ್ಧಲಿಂಗಶಾಸ್ತ್ರಿಗಳ ಸಮಗ್ರ ಸಾಹಿತ್ಯ

❋

ಸಂಪಾದಕರು :

ಡಾ. ಪಂಡಿತ ಕೆ. ರಾಠೋಡ

❋

ಪ್ರಕಾಶಕರು

ಪ್ರಭುದೇವರ ಜನಕಲ್ಯಾಣ ಸಂಸ್ಥೆ

ಶ್ರೀ ಪ್ರಭುದೇವರ ಸಂಸ್ಥಾನ ವಿರಕ್ತಮಠ, ಸೊಂಡೂರು– ೫೮೩ ೧೧೯

**PANDIT SIDDHALINGSHASTRIGALA SAMGRA SAHITYA :** Edited By : Dr. Pandit K. Rathod. Published by : Prabhudevar Jankalyan Samste, Shri Prabhudevar Samstan Viraktamath, Sondur Dist. Ballary

■■



First Edition : 2010

Pages : xxvi + 488 = 514

Price : Rs. 300/-

■■

ಗ್ರಂಥದಾನಿಗಳು :

ಶ್ರೀ ಮಹಾಂತೇಶ ಹೊಸಮಠ,

ಸಿದ್ಧಲಿಂಗಶಾಸ್ತ್ರಿ ಸ್ಮಾರಕ ಟ್ರಸ್ಟ್, ಬೂದಿಹಾಳ

ಪಂ. ಸಿದ್ಧಲಿಂಗಶಾಸ್ತ್ರಿಗಳ ಸಮಗ್ರ ಸಾಹಿತ್ಯ : ಸಂಪಾದಕರು : ಡಾ. ಪಂಡಿತ ಕೆ. ರಾಠೋಡ. ಪ್ರಕಾಶಕರು : ಪ್ರಭುದೇವರ ಜನಕಲ್ಯಾಣ ಸಂಸ್ಥೆ, ಶ್ರೀ ಪ್ರಭುದೇವರ ಸಂಸ್ಥಾನ ವಿರಕ್ತಮಠ, ಸೊಂಡೂರು ಜಿ. ಬಳ್ಳಾರಿ

■■



ಪ್ರಥಮ ಮುದ್ರಣ : ೨೦೧೦

ಪುಟಗಳು : xxvi + ೪೮೮ = ೫೧೪

ಬೆಲೆ : ರೂ. ೩೦೦/-

ಮುಖಪುಟ ವಿನ್ಯಾಸ : ಕೆ.ಕೆ. ಮಕಾಳಿ

ಅಕ್ಷರ ಜೋಡಣೆ : ನಾರಾಯಣ ಡಿ.ಟಿ.ಪಿ. ಸೆಂಟರ್, ನೇಕಾರ ನಗರ, ಗದಗ

■■

ಮುದ್ರಕರು :

ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್
ಕಾಗದಗೇರಿ ಓಣಿ, ಗದಗ-582 101
✆ : (08372) 235509, 237566

*

## ಅರ್ಪಣೆ

ನಾಡಿನ ಹಿರಿಯ ಮುತ್ಸದ್ದಿ ರಾಜಕಾರಣಿಗಳು,
ಜನಾನುರಾಗಿ ಅಭಿವೃದ್ಧಿಪರ ನಾಯಕರು,
ಶರಣ ಸಂಸ್ಕೃತಿಯ ಚಿಂತಕರು,
ಲಿಂ. ಸಿದ್ಧಲಿಂಗಶಾಸ್ತ್ರಿಗಳ ನಿಕಟವರ್ತಿಗಳೂ ಆಗಿದ್ದ

**ಲಿಂ. ಶರಣ ಮಾನ್ಯ ಶ್ರೀ ಕೆ. ಎಸ್. ವೀರಭದ್ರಪ್ಪನವರು**

ಮಾಜಿ ಲೋಕಸಭಾ ಸದಸ್ಯರು, ಸೊಂಡೂರ
ಇವರಿಗೆ ಈ ಕೃತಿ ಕುಸುಮ ಸಮರ್ಪಿತ



ತ್ರಿವಿಧ ದಾಸೋಹಿ

**ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು**

ಎಡೆಯೂರು ಶ್ರೀ ಜ. ತೋಂಟದಾರ್ಯ ಸಂಸ್ಥಾನಮಠ, ಡಂಬಳ–ಗದಗ

ಶ್ರೀ ಗುರುಬಸವಲಿಂಗಾಯ ನಮಃ

**ತ್ರಿವಿಧ ದಾಸೋಹಿ ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು**

ಎಡೆಯೂರು ಶ್ರೀ ಜ. ತೋಂಟದಾರ್ಯ ಸಂಸ್ಥಾನಮಠ, ಡಂಬಳ-ಗದಗ ಇವರ

## ಶುಭನುಡಿ

ಕೆಲವರಿರುತ್ತಾರೆ, ಬೆಳೆವ ಸಸಿಗೆ ನೀರು, ಗಾಳಿ, ಗೊಬ್ಬರವನ್ನೊದಗಿಸುವ ರೈತನ ಕೈಗಳಂತೆ; ಬೆಳೆದ ಸಸಿ ತೆನೆದುಂಬಿ ತಲೆದೂಗುವುದನ್ನು ನೋಡಿ ಸಂತೋಷಪಡುವ ಹೃದಯವಂತರಿವರು. ಇಂಥಹ ವಿರಳರ ಸಾಲಿನಲ್ಲಿ ನಿಲ್ಲುವ ವ್ಯಕ್ತಿ ಪಂ. ಸಿದ್ಧಲಿಂಗಶಾಸ್ತ್ರಿಗಳು.

ಪಂ. ಸಿದ್ಧಲಿಂಗಶಾಸ್ತ್ರಿಗಳಿಗೆ 'ಎಡೆಯೂರು ಸಿದ್ಧಲಿಂಗ' ಎಂದರೆ ಸಾಕು, ಮೈದುಂಬಿ ಭಾವಪರವಶರಾಗಿಬಿಡುತ್ತಿದ್ದರು. ಸಿದ್ಧಲಿಂಗೇಶ್ವರ ಪುರಾಣ ಪ್ರವಚಿಸುವಾಗ ಅವರಿಗೆ ಇಹದ ಪರಿವೆಯೇ ಇರುತ್ತಿರಲಿಲ್ಲ. ಒಂದರ್ಥದಲ್ಲಿ ವಾಗ್‌ಭಾವ ಸಮಾಧಿ ಅದು. ೧೯೭೪ರಲ್ಲಿ ನಾವು ಗದುಗಿನ ತೋಂಟದಾರ್ಯ ಮಠದ ಸ್ವಾಮಿಗಳಾಗಿ ಅಧಿಕಾರ ವಹಿಸಿಕೊಂಡ ಮೇಲೆ ಸಿದ್ಧಲಿಂಗಯ್ಯನವರ ನಿಕಟ ಸಂಪರ್ಕ ಬಂತು. ಶ್ರೀಮಠದಲ್ಲಿ ಲಿಂಗಾಯತ ಪ್ರಗತಿಶೀಲ ಸಂಘದ ಆಶ್ರಯದಲ್ಲಿ ಪ್ರತಿ ಸೋಮವಾರ ನಡೆಯುವ ಕಾರ್ಯಕ್ರಮಗಳು, ಪ್ರತಿನಿತ್ಯದ ಪ್ರಾತಃಕಾಲದ ಶಿವಾನುಭವ ಸಿದ್ಧಲಿಂಗಯ್ಯನವರ ಅನುಭಾವಪಥವನ್ನು ವಿಸ್ತರಿಸಿದವು. ಯಾವ ವಿಶ್ವವಿದ್ಯಾಲಯದಲ್ಲಿ ಓದದಿದ್ದ ಸಿದ್ಧಲಿಂಗಯ್ಯ ಜನತಾ ವಿಶ್ವವಿದ್ಯಾಲಯದಿಂದ ಶಾಸ್ತ್ರಿಗಳೆಂಬ ಅಭಿದಾನಕ್ಕೆ ಪಾತ್ರರಾದರು; ಜನರ ಪ್ರೀತಿಯ ಸಿದ್ಧಲಿಂಗಯ್ಯ ಶಾಸ್ತ್ರಿಗಳಾದರು.

ತೋಂಟದ ಸಿದ್ಧಲಿಂಗೇಶ್ವರನಲ್ಲಿ ಅವರ ಅನನ್ಯ ಭಕ್ತಿಗೆ ಕಾರಣ ಅವರ ಬಾಲ್ಯಜೀವನ ಕಳೆದುದು ಶ್ರೀಮಠದಲ್ಲಿಯೇ. ಅವರ ಸಿದ್ಧಲಿಂಗೇಶ್ವರರ ಬಗೆಗಿನ ಪ್ರವಚನ ಕೇಳಿದ ಕಿವಿಗಳೇ ಧನ್ಯ. ಅಲ್ಲಲ್ಲೋ ಸಿದ್ಧಲಂಗೇಶ್ವರರೇ ಸಂಚರಿಸುತ್ತಿದ್ದಾರೇನೋ ಎಂದು ಭಾವಿಸುವಂತೆ ರೂಪಿಸುತ್ತಿದ್ದ ವಾಗ್ ದೃಶ್ಯಾವಳಿ ನಿಜಕ್ಕೂ ಅದ್ಭುತ. ಆ ಕಾಲದ ಮಠದ ಸಾಧಕರೆಲ್ಲ ಭಾಗ್ಯವಂತರು. ಕಾರಣ ಅವರಿಗೆ ಶಾಸ್ತ್ರಿಗಳ ಸಂಪರ್ಕವಿತ್ತು, ಮಾರ್ಗದರ್ಶನವಿತ್ತು.

ಪಂ. ಸಿದ್ಧಲಿಂಗಶಾಸ್ತ್ರಿಗಳು ಗದುಗಿನವರೇನಲ್ಲ. ಅವರ ಮೂಲಸ್ಥಳ ರೋಣ ತಾಲೂಕಿನ ಯರೇಬೂದಿಹಾಳ. ಇವರ ತಂದೆ ಕರಬಸಯ್ಯನವರು ಪ್ರಸಿದ್ಧ

ಗವಾಯಿಗಳು. ಗದುಗಿನ ತೋಂಟದಾರ್ಯಮಠದ ೧೬ನೆಯ ಜಗದ್ಗುರುಗಳಾದ ಪೂಜ್ಯ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳ ಆಸ್ಥಾನ ಗಾಯಕರು. ಲಿಂ. ಸಿದ್ಧೇಶ್ವರ ಜಗದ್ಗುರುಗಳು ಸಂಗೀತ ಪ್ರೀಯರು. ಅವರು ಕುದುರೆ ಸಾರೋಟದಲ್ಲಿ ಪ್ರವಾಸ ಮಾಡುತ್ತಿದ್ದರೆ ಅವರ ಕುದುರೆ ಸಾರೋಟದ ಹಿಂದೆ ಡಮಣಿ ಗಾಡಿಯಲ್ಲಿ ಕರಿಬಸವ ಗವಾಯಿಗಳ ಸಂಗೀತ' ಸದಾ ನಡೆಯುತ್ತಿತ್ತು. ಈ ಕಾರಣವಾಗಿ ಲಿಂ. ಸಿದ್ಧಲಿಂಗಶಾಸ್ತ್ರಿಗಳ ಬಾಲ್ಯ ಪೂಜ್ಯ ಸಿದ್ಧೇಶ್ವರ ಜಗದ್ಗುರುಗಳ ಕಣ್ಣರಿಕೆಯಲ್ಲಿ ಸುಖರೂಪದಲ್ಲಿ ಕಳೆಯಿತು. ಜಗದ್ಗುರುಗಳು ಲಿಂಗೈಕ್ಯರಾದ ಮೇಲೆ ಸಿದ್ಧಲಿಂಗಯ್ಯನವರು ಮಠದಿಂದ ಅನಿವಾರ್ಯವಾಗಿ ದೂರವಾಗಬೇಕಾಯ್ತು.

ಸಿದ್ಧಲಿಂಗಯ್ಯನವರು ಶ್ರೀಮತಿ ಸೋಮಮ್ಮ ಅವರನ್ನು ಮದುವೆಯಾಗಿ ಐದು ಮಕ್ಕಳನ್ನು ಪಡೆದರು; ಮೂರು ಗಂಡು ಎರಡು ಹೆಣ್ಣು. ಶಾಸ್ತ್ರಿಗಳಿಗೆ ಓದುವ ಹುಚ್ಚು. ಈ ಕಾರಣವಾಗಿ ಆ ಕಾಲದ ಕರ್ನಾಟಕ ಬಂಧು ಪತ್ರಿಕೆಯಲ್ಲಿ ಬರೆಯುವ ವೃತ್ತಿ ಮೊಳೆಯಿತು. ಶಾಸ್ತ್ರ, ಪುರಾಣ, ಪ್ರವಚನಗಳ ಕೇಳುವ ಪ್ರವೃತ್ತಿ ಬೆಳೆಯಿತು. ಶಹಪೂರಪೇಟೆಯ ಮಹಾಸ್ವಾಮಿಗಳ ಸಹಾಯದಿಂದ ಕಾಶಿಯಲ್ಲಿ ಅಭ್ಯಾಸ ಮಾಡಿ ಬಂದಿದ್ದ ಪಂ. ನಾಗಭೂಷಣ ಶಾಸ್ತ್ರಿಗಳು ಹಡಗಲಿಮಠದಲ್ಲಿ 'ವೀರಶೈವ ವಿದ್ಯಾಪೀಠ'ವೆಂಬ ಸಂಸ್ಥೆಯನ್ನು ಸ್ಥಾಪಿಸಿ ಆ ಮೂಲಕ ಆಸಕ್ತ ಜನಗಳಿಗೆ ಲಿಂಗಾಯತ ಧರ್ಮದ ಬಗೆಗೆ ಪರೀಕ್ಷೆಗಳನ್ನು ನಡೆಯಿಸುತ್ತಿದ್ದರು. ಅಲ್ಲಿ ಶರಣ ಸಾಹಿತಿಗಳೂ ಶಿಕ್ಷಣಾಧಿಕಾರಿಗಳೂ ಆದ ಕ.ಬ. ಅಂಗಡಿ, ಕೆ.ಹೆಚ್. ಓಲಿ, ವ್ಹಿ.ವ್ಹಿ. ಗಡಾದ ಶಿಕ್ಷಕರು ಪಾಠಮಾಡುತ್ತಿದ್ದರು. ಅವರ ಜತೆಯಲ್ಲಿ ಸೇರಿದ ಸಿದ್ಧಲಿಂಗಯ್ಯನವರು ಓದು, ಚರ್ಚೆ, ಚಿಂತನ–ಮಂಥನಗಳ ಮೂಲಕ ತಮ್ಮ ಜ್ಞಾನದಿಗಂತವನ್ನು ವಿಸ್ತರಿಸಿಕೊಂಡರು. ವಚನಸಾಹಿತ್ಯ, ನಿಜಗುಣರ ವೇದಾಂತದಲ್ಲಿ ಪರಿಣತಿಯನ್ನು ಸಾಧಿಸಿದರು. ಸಣ್ಣ ಸಂಬಳದಲ್ಲಿ ನಾಲ್ಕು ಮಕ್ಕಳ ಸಂಸಾರದ ನಿರ್ವಹಣೆ ಬಹಳ ಕಷ್ಟವಾಗಿತ್ತು. ಆ ಕಾಲದ ಶಹಪೂರಪೇಟೆ ಓಣಿಯ ಹಿರಿಯರು ಈ ಕುಟುಂಬಕ್ಕೆ ಮಾಡಿದ ಸಹಾಯವನ್ನು ಸಿದ್ಧಲಿಂಗಯ್ಯನವರು ಸದಾ ಸ್ಮರಿಸುತ್ತಿದ್ದರು. ಅದು ಕಷ್ಟದ ಕಾಲ. ಆ ಕಷ್ಟದ ಕಾಲವೇ ಸಿದ್ಧಲಿಂಗಯ್ಯನವರನ್ನು ಹೆಚ್ಚು ಆಧ್ಯಾತ್ಮಿಕರನ್ನಾಗಿ ಮಾಡಲು ಕಾರಣವಾಯ್ತು.

ಪಂ. ನಾಗಭೂಷಣಶಾಸ್ತ್ರಿಗಳು, ಧಾರವಾಡ ಮುರುಘಾಮಠದ ಲಿಂ. ಮೃತ್ಯುಂಜಯಪ್ಪಗಳ ಅಪ್ಪಣೆಯ ಮೇರೆಗೆ ಅವರ ಮಠವನ್ನು ಸೇರಿದರು. ಸಾವಧಾನ ಪತ್ರಿಕೆಯ ಸಂಪಾದಕರಾದರು. ಬಳ್ಳಾರಿಯ ವೈ. ನಾಗೇಶಶಾಸ್ತ್ರಿಗಳ ನೇತೃತ್ವದಲ್ಲಿ ಪ್ರಾರಂಭಗೊಂಡ ಶಿವಾನುಭವ ಸಂಸ್ಥೆಯ ಬೋಧಕರಾದರು. ಸಿದ್ಧಲಿಂಗಯ್ಯನವರು ಶಿವಾನುಭವ ಕಾರ್ಯಕ್ರಮಗಳಲ್ಲಿ ಹೆಚ್ಚು ಹೆಚ್ಚು ಭಾಗವಹಿಸಿ ಸಂಸಾರದ ಕಷ್ಟವನ್ನು ಮರೆತರು. ವಿದ್ವಾಂಸರ ಸಂಪರ್ಕದಲ್ಲಿ ಓದು, ಸಂವಾದ, ಚಿಂತನಗಳ ಮೂಲಕ ಪಕ್ವಗೊಂಡರು. ಆಧ್ಯಾತ್ಮದಲ್ಲಿಯ ಇವರ ಆಸಕ್ತಿ,

ಅಭಿಮಾನಗಳನ್ನು ಗುರುತಿಸಿದ 'ಬೆತ್ತದ ಅಜ್ಜಾ' ಎಂದು ಖ್ಯಾತರಾದ ಲಿಂ. ಹಾಳಕೇರಿ ಅನ್ನದಾನ ಸ್ವಾಮಿಗಳು ಪುರಾಣ, ಪ್ರವಚನ ಮಾಡಲು ಆದೇಶಿಸಿದರು. ಆ ಪರಿಣಾಮವಾಗಿ ಸಿದ್ಧಲಿಂಗಯ್ಯನವರ ಪಾಂಡಿತ್ಯ ಪ್ರದರ್ಶನಕ್ಕೆ ಅವಕಾಶ ದೊರೆಯಿತು. ಪೂಜ್ಯರ ಶಾಖಾಮಠಗಳಲ್ಲಿ ಹಾಗೂ ಪ್ರತಿವರ್ಷ ಶ್ರಾವಣ ಮಾಸದಲ್ಲಿ ಕುಷ್ಟಗಿಯಲ್ಲಿ ಇವರ ಪ್ರವಚನ ನಿರಂತರ ನಡೆಯಿತು. ಇವರ ಪ್ರವಚನ ಪ್ರಭಾವ ಬೆಳೆದಂತೆ ಬೇರೆ ಬೇರೆ ಊರು, ನಗರ, ಗ್ರಾಮಗಳಲ್ಲಿ ಪ್ರವಚನ ನಡೆಯಿತು. ಜತೆಗೆ ಲೇಖನ ವ್ಯವಸಾಯ ಕೂಡ ಮುಂದುವರೆಯಿತು.

ಪಂ. ಸಿದ್ಧಲಿಂಗಶಾಸ್ತ್ರಿಗಳವರ ಶಿಷ್ಯಬಳಗ ತುಂಬ ದೊಡ್ಡದು. ಇಂದು ಈ ಕೃತಿ ಪ್ರಕಟನೆಗೆ ಕಾರಣರಾದ ಸಂಡೂರಿನ ಶ್ರೀ ಪ್ರಭುಸ್ವಾಮಿಗಳು ಶಾಸ್ತ್ರಿಗಳ ಪ್ರೀತಿಯ ಶಿಷ್ಯರೆ. ಇವರು ಶ್ರೀ ಶಾಸ್ತ್ರಿಗಳು ಬರೆದ ಎಲ್ಲ ಗ್ರಂಥಗಳ, ಲೇಖನಗಳ ಸಂಗ್ರಹ ಒಂದೇ ಕಡೆ ತರುವ ಮೂಲಕ ತುಂಬಾ ಒಳ್ಳೆಯ ಕಾರ್ಯ ಮಾಡಿದ್ದಾರೆ. ಈ ಕೃತಿಯ ಸಂಪಾದಕರಾದ ಪ್ರೊ. ಪಂಡಿತ ರಾಠೋಡ ಈ ಕೃತಿಯನ್ನು ಚಂದವಾಗಿ ಸಂಪಾದಿಸಿದ್ದಾರೆ. ಪ್ರಕಾಶಕರಿಗೆ, ಸಂಪಾದಕರಿಗೆ ಮಂಗಳವಾಗಲಿ.

ಜಯಬಸವ

*

# ನಿರ್ದೇಶಕರ ಮಾತು

**ಲಿಂಗಾಯತರು ತಾವು ಅಂಜಲೇಕೆ !**

ಲಿಂಗವಶದಿಂದ ಬಂದ ನಡೆ; ಲಿಂಗವಶದಿಂದ ಬಂದ ನುಡಿ; ಲಿಂಗವಂತರು ತಾವು ಅಂಜಲೇಕೆ! ಎಂಬ ಬಸವಣ್ಣನವರ ವಚನದಲ್ಲಿಯ ಲಿಂಗಸಮ್ಮತವಾದ 'ನಡೆ–ನುಡಿ'ಗಳು ಲಿಂಗಾಯತರು ರೂಪಿಸಿದ ಸಮಾಜ ಹಾಗೂ ಕನ್ನಡ ಭಾಷೆಯನ್ನು ಕುರಿತು ಹೇಳಿದ ಪರ್ಯಾಯ ಧ್ವನಿಯೆನಿಸಿದೆ. ಇಂತಹ ವೈಚಾರಿಕ ಧ್ವನಿಗೆ ಕ್ರಿಯೆ–ಜ್ಞಾನಗಳ ನಿಯಂತ್ರಣವನ್ನಿಟ್ಟು, ಶೂನ್ಯಪೀಠದ ಅಧಿಪತಿಯಾಗಿ, ಅಲ್ಲಿ ನಡೆಯುವ ಅನುಭವ ಗೋಷ್ಠಿಗಳಿಗೆ ಹೊಸ ಚೈತನ್ಯವನ್ನು ತಂದುಕೊಟ್ಟವರು ಅಲ್ಲಮ ಪ್ರಭುದೇವರು. ಅವರ ಹೆಸರನ್ನು ಧಾರಣ ಮಾಡಿಕೊಂಡು ಸಾಹಿತ್ಯ, ಸಂಸ್ಕೃತಿ, ಸಮಾಜ ಮತ್ತು ಧಾರ್ಮಿಕ ಪ್ರಸಾರ–ಪರಿಚಲನೆಗಳನ್ನು ಕಾಯಕ ರೂಪದಲ್ಲಿ ಅನುಷ್ಠಾನಗೊಳಿಸುತ್ತಲಿದೆ; ಸೊಂಡೂರಿನ ಶ್ರೀ ಪ್ರಭುದೇವರ ಸಂಸ್ಥಾನ ವಿರಕ್ತಮಠ. ಈ ಮಠದ ಆಶ್ರಯದಲ್ಲಿ ತಲೆಯೆತ್ತಿ ನಿಂತಿದೆ; ಪ್ರಭುದೇವರ ಜನಕಲ್ಯಾಣ ಸಂಸ್ಥೆ.

ಪ್ರಭುದೇವರ ಜನಕಲ್ಯಾಣ ಸಂಸ್ಥೆ ಜನ ಬದುಕಬೇಕೆಂಬ ಉದ್ದೇಶದಿಂದ ಹಲವಾರು ಕಾರ್ಯಯೋಜನೆಗಳನ್ನು ರೂಪಿಸಿಕೊಂಡಿದೆ. ಓದುವ ಹವ್ಯಾಸ ಬೆಳೆಸುವುದರ ಮೂಲಕ ಪುಸ್ತಕ ಸಂಸ್ಕೃತಿಯನ್ನು ಹುಟ್ಟು ಹಾಕಬೇಕೆಂಬ ಕಾರಣದಿಂದ ಪಂ. ಸಿದ್ಧಲಿಂಗಶಾಸ್ತ್ರೀ ಸ್ಮಾರಕ ಗ್ರಂಥಾಲಯವನ್ನು ತೆರೆಯಲಾಗಿದೆ. ಪ್ರಾಚೀನ ಹಾಗೂ ಆಧುನಿಕ ಗ್ರಂಥಗಳು ಈ ಭಂಡಾರದಲ್ಲಿದ್ದು, ಸಂಶೋಧಕರಿಗೆ, ಲೇಖಕರಿಗೆ ಅಧ್ಯಯನ ಯೋಗ್ಯವಾದ ಆಕರ ಸಂಗ್ರಹವಾಗಿದೆ. ಕೂಲಿಕಾರ್ಮಿಕರ, ದೀನ ಅನಾಥ ಮಕ್ಕಳಿಗೆ ಶೈಕ್ಷಣಿಕ ಸೌಲಭ್ಯ ಒದಗಿಸುವ ನಿಟ್ಟಿನಲ್ಲಿ ಪ್ರಭುಲಿಂಗ ಶಿಶುವಿಹಾರ ಹಾಗೂ ಬಸವೇಶ್ವರ ಹಿರಿಯ ಪ್ರಾಥಮಿಕ ಶಾಲೆಗಳನ್ನು ತೆರೆಯಲಾಗಿದೆ. ಶ್ರೀ ಸಿದ್ಧಲಿಂಗೇಶ್ವರ ಪ್ರಸಾದ ನಿಲಯವನ್ನು ಸ್ಥಾಪಿಸಿ ವಿದ್ಯಾರ್ಥಿಗಳಿಗೆ ಶ್ರೀ ಮಠದಲ್ಲಿ ಊಟ, ವಸತಿ ವ್ಯವಸ್ಥೆಯನ್ನು ಕಲ್ಪಿಸಿಕೊಡಲಾಗುತ್ತಿದೆ. ಪ್ರತಿವರ್ಷ ೨೫ ಕ್ಕೂ ಹೆಚ್ಚು ವಿದ್ಯಾರ್ಥಿಗಳು ಈ ಪ್ರಸಾದ ನಿಲಯದ ಸೌಲಭ್ಯವನ್ನು ಪಡೆದುಕೊಳ್ಳುತ್ತಿದ್ದಾರೆ. ಬಸವ ಗುರುಕುಲವನ್ನು ಸ್ಥಾಪಿಸುವುದರ ಮೂಲಕ ಶರಣತತ್ವಗಳಾದ ಲಿಂಗಪೂಜೆ, ಗುರುಸೇವೆ, ಜಂಗಮ ದಾಸೋಹ, ಕಾಯಕ ತತ್ವಗಳಂತಹ ಸಮಾಜೋದ್ಧಾರ್ಮಿಕ ವಿಚಾರಗಳನ್ನು ಆಚರಣೆಗೆ ತರುವ ಯೋಜನೆ ಹಾಕಿಕೊಂಡಿದೆ. ಪ್ರತಿ ತಿಂಗಳು ಮಾಸಿಕಶಿವಾನುಭವ ನಡೆಸುವುದು, ಶರಣಧರ್ಮ ಪ್ರಚಾರ ಕಾರ್ಯಕ್ಕೆ

ಗೊಳ್ಳುವುದು, ಇದರಿಂದ ನಾಡಿನ ಹಿರಿಯ ಹಾಗೂ ಕಿರಿಯ ವಿದ್ವಾಂಸರನ್ನು ಗೌರವಿಸಿ 'ಬಸವ ಬೆಳಗು' ಪ್ರಶಸ್ತಿ ನೀಡಿ ಸತ್ಕರಿಸುವುದು, ಹೀಗೆ ಧರ್ಮ, ಸಾಹಿತ್ಯ ಪೋಷಣೆಯ ಕಾರ್ಯವನ್ನು ನಿರಂತರವಾಗಿ ಆಚರಿಸಿಕೊಂಡು ಬರಲಾಗುತ್ತಿದೆ. ಇವೆಲ್ಲವುಗಳ ಜೊತೆಗೆ ಸಾಹಿತ್ಯ, ಸಂಸ್ಕೃತಿ, ಚಿಂತನ ಮಾಲೆಯಡಿಯಲ್ಲಿ ಕಾವ್ಯ ಭಾಷೆ, ಶಾಸನ, ಹಸ್ತಪ್ರತಿ, ಜಾನಪದ, ಆಚರಣೆ, ಸಂಪ್ರದಾಯಗಳ ಸರ್ವೇಕ್ಷಣೆ, ಸಂಗ್ರಹ, ಸಂಪಾದನೆ, ಪ್ರಕಟಣೆಗಳ ಜೊತೆಗೆ ಸ್ಮಾರಕಗಳಂತಹ ಚಾರಿತ್ರಿಕ ವಿಷಯಗಳ ತಿಳುವಳಿಕೆಯನ್ನು ವಿಚಾರ ಸಂಕೀರಣ, ಕಾರ್ಯಾಗಾರ, ಸಮ್ಮೇಳನಗಳ ಮೂಲಕ ಜನರಿಗೆ ಸಂವಹನಗೊಳಿಸುವ ಗುರುತರವಾದ ಜವಾಬ್ದಾರಿಯನ್ನು ನಿರ್ವಹಿಸುತ್ತ ನಮ್ಮ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಲಿದ್ದೇವೆ. ಅದರಂಗವಾಗಿ ಈ ಮಾಲೆಯಡಿಯಲ್ಲಿ ಪ್ರಕಟಗೊಳ್ಳುತ್ತಿರುವ ಕೃತಿ "ಪಂ. ಸಿದ್ಧಲಿಂಗಶಾಸ್ತ್ರಿಗಳ ಸಮಗ್ರ ಸಾಹಿತ್ಯ".

ನಮ್ಮ ಸಂಸ್ಥೆಯ ಕಾರ್ಯಯೋಜನೆಗಳಿಗೆ ಕ್ರಿಯಾಶಕ್ತಿಯಾಗಿ ನಿಂತವರು ಪ್ರಭುದೇವರ ಜನಕಲ್ಯಾಣ ಸಂಸ್ಥೆಯ ಸಂಸ್ಥಾಪಕರು ಮತ್ತು ಅಧ್ಯಕ್ಷರೂ ಆದ ಪರಮಪೂಜ್ಯ ಶ್ರೀ ಮ.ನಿ.ಪ್ರ. ಪ್ರಭುಮಹಾಸ್ವಾಮಿಗಳವರು. ಅವರಿಗಿರುವ ಲಿಂಗಾಯತ ಕನ್ನಡ ಪ್ರೀತಿಯ ಕಾರಣವಾಗಿ ಇಂತಹ ಯೋಜನೆಗಳು ಅನುಷ್ಠಾನಗೊಳ್ಳುತ್ತಲಿವೆ. ಕರ್ನಾಟಕದ ಪುಸ್ತಕ ಸ್ವಾಮೀಜಿಯೆಂದೇ ಹೆಸರಾಗಿರುವ ಎಡೆಯೂರು ತೋಂಟದಾರ್ಯ ಸಂಸ್ಥಾನಮಠ ಗದಗ-ಡಂಬಳ ಶ್ರೀಗಳಾದ ಡಾ. ಸಿದ್ಧಲಿಂಗ ಮಹಾಸ್ವಾಮಿಗಳವರು ಈ ಕೃತಿಗೆ ಸದಾಶಯದ ಶುಭನುಡಿ ಬರೆದು ಹರಿಸಿದ್ದಾರೆ. ಇದಕ್ಕೆ ಕಾರಣ ದಿ. ಪಂ. ಸಿದ್ಧಲಿಂಗಶಾಸ್ತ್ರಿಗಳ ಗದುಗಿನ ಮಠದೊಳಗಿನ ಭಾವನಾತ್ಮಕ ಸಂಬಂಧ. ಪೂಜ್ಯದ್ವಯರ ಕರ್ತೃತ್ವ ಶಕ್ತಿಗೆ ಪ್ರಣಾಮಗಳು.

ಪ್ರಸ್ತುತ ಕೃತಿಗೆ ಗ್ರಂಥದಾನಿಗಳು ದಿ. ಪಂ. ಸಿದ್ಧಲಿಂಗಶಾಸ್ತ್ರಿಗಳ ಮಗ ಶ್ರೀ ಮಹಾಂತೇಶ ಹೊಸಮಠ ಶ್ರೇಷ್ಠ ಮಟ್ಟದ ವಕೀಲರೂ ಆಗಿರುವ ಇವರು ತಂದೆಯವರ ಸದ್ಗುಣಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡವರು. ಬೂದಿಹಾಳದಲ್ಲಿ ಜನಿಸಿದ ಶ್ರೀ ಮಹಾಂತೇಶ ವಕೀಲರು ಗ್ರಾಮದಲ್ಲಿ ದೇವಸ್ಥಾನ ನಿರ್ಮಾಣ, ಪುರಾಣ-ಪ್ರವಚನ ಅನುಷ್ಠಾನ, ಸಂಘ-ಸಂಸ್ಥೆಗಳ ಸ್ಥಾಪನೆ, ಶ್ರೀ ಸಿದ್ಧಲಿಂಗಶಾಸ್ತ್ರಿಗಳ ಸ್ಮಾರಕ ಟ್ರಸ್ಟ್ ನಿರ್ಮಾಣ ಆ ಮೂಲಕ ಬಡವಿದ್ಯಾರ್ಥಿಗಳಿಗೆ ಆರ್ಥಿಕ ನೆರವು ನೀಡುತ್ತಾ ಬಂದಿದ್ದಾರೆ. ಹೈಕೋರ್ಟ್ ಬಾರ್ ಅಸೋಸಿಯೇಶನ್ನಿನ ಕಾರ್ಯದರ್ಶಿ ಗಳಾಗಿ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ರೂಪಿಸಿದವರು. ಕರ್ನಾಟಕದ ಬಹುತೇಕ ಮಠ-ಮಾನ್ಯಗಳ ಕೇಸುಗಳನ್ನು ಕೈಗೆತ್ತಿಕೊಂಡು ಅವುಗಳಿಗೆ ನ್ಯಾಯದಾನ ಸಿಗುವಲ್ಲಿ ಶ್ರಮಿಸಿದವರು. ಹತ್ತು ವರ್ಷಗಳ ಹಿಂದೆಯೇ ಸಂಡೂರಿನ ಮಠದ ಗ್ರಂಥಾಲಯಕ್ಕೆ ೨೫ ಸಾವಿರ ರೂಪಾಯಿಗಳನ್ನು ದಾನ ಮಾಡಿದವರು. ನೇರ ನುಡಿ,

ಸ್ಪಷ್ಟ ವಿಚಾರಗಳಿಂದ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡಿರುವ ಶ್ರೀ ಮಹಾಂತೇಶ ಹೊಸಮಠ ಅವರು ತಮ್ಮ ತಂದೆಯವರ ''ಬದುಕು–ಬರಹ'' ಕುರಿತಾದ ಗ್ರಂಥಕ್ಕೆ ದಾಸೋಹಿಗಳಾಗಿರುವುದು ಅವರ ಪರಂಪರೆ ಪ್ರಜ್ಞೆಗೆ ಸಾಕ್ಷಿಯಾಗಿದೆ. ಅವರಿಗೂ ನಮ್ಮ ಅನಂತ ಕೃತಜ್ಞತೆಗಳು.

ಡಾ. ಪಂಡಿತ ಕೆ. ರಾಠೋಡ ಅವರು ಈ ಕೃತಿಯನ್ನು ಸಂಪಾದಿಸಿಕೊಟ್ಟಿದ್ದಾರೆ. ಡಾ. ಫ.ಗು. ಹಳಕಟ್ಟಿಯವರ 'ಪತ್ರಿಕಾ ಸಾಹಿತ್ಯ'ವನ್ನು ಕುರಿತು ಅಧ್ಯಯನ ಮಾಡಿರುವ ಶ್ರೀಯುತರು ಡಂಬಳ ಸಾಂಸ್ಕೃತಿಕ ಅಧ್ಯಯನ, ಖ್ಯಾತ ಸಂಶೋಧಕರಾದ ಡಾ. ಎಂ.ಎಂ. ಕಲಬುರ್ಗಿಯವರ ಜೊತೆ ದಾಖಲು ಸಾಹಿತ್ಯ ಸಂ. ೧–೨, ಮೈದುನ ರಾಮಯ್ಯನ ಚರಿತ್ರೆ, ಅಣ್ಣಯ್ಯ–ತಮ್ಮಯ್ಯರ ಶರಣ ಚರಿತ್ರೆ, ಸ್ವರವಚನ ತರಂಗಣಿ, ಲಂಬಾಣಿ ಹೋಳಿಹಬ್ಬ, ಲಿಂಗನಿರ್ಣಯ ಕುಸ್ತಿ ಆಗಮ, ಹಳಕಟ್ಟಿಯವರ ಸಮಗ್ರ ಸಾಹಿತ್ಯ ಸಂಪುಟದಲ್ಲಿ 'ಲೇಖನ ಸಾಹಿತ್ಯ' ಭಾಗ–೨ ರಚಿಸಿದ್ದಾರೆ. ಗ್ರಂಥ ಸಂಪಾದನೆ, ಲಿಂಗಾಯತ ಸಾಹಿತ್ಯದ ಒಳಗಿರುವ ಡಾ. ರಾಠೋಡ ಅವರದು ಸಮನ್ವಯಶೀಲ ಮನಸ್ಸು. ಪ್ರಸ್ತುತ ಕೃತಿಗೆ ಉಪಯುಕ್ತ ಸಂಪಾದಕೀಯ ಬರೆದು ಪಂ. ಸಿದ್ಧಲಿಂಗಶಾಸ್ತ್ರಿಗಳ ಸಾಧನೆಯನ್ನು ನಾಡಿಗೆ ಪರಿಚಯಿಸಿದ್ದಾರೆ. ಈ ಹೊತ್ತು ಶರಣ ಸಾಹಿತ್ಯ ಪರಿಷತ್ತು ಇದೆ, ಕನ್ನಡ ಸಾಹಿತ್ಯ ಪರಿಷತ್ತು ಇದೆ, ಬೇರೆ ಬೇರೆ ಅಕಾಡೆಮಿಕ್ ಸಂಸ್ಥೆಗಳು ಸಾಹಿತ್ಯ–ಸಂಸ್ಕೃತಿ ಪ್ರಭಾರದಲ್ಲಿ ತೊಡಗಿವೆ. ಆದರೆ ಒಂದು ಕಾಲಕ್ಕೆ ಬಸವತತ್ತ್ವ ಹಾಗೂ ಕನ್ನಡ ಸಾಹಿತ್ಯ ಶ್ರೀ ಸಾಮಾನ್ಯರಿಗೆ ಪರಿಚಯವಾದದ್ದು ಶ್ರೀ ಸಿದ್ಧಲಿಂಗಶಾಸ್ತ್ರಿಗಳವರಂತಹ ಪ್ರವಚನಕಾರರಿಂದ ಎಂಬುದು ಗಮನಿಸಬೇಕಾದ ಅಂಶವಾಗಿದೆ. ಹೀಗಾಗಿ ಪಂ. ಸಿದ್ಧಲಿಂಗಶಾಸ್ತ್ರಿಗಳ ಸಾಹಿತ್ಯವನ್ನು ಒಂದೆಡೆ ಸಂಪಾದಿಸಿಕೊಟ್ಟ ಡಾ. ಪಂಡಿತ ಕೆ. ರಾಠೋಡ ಅವರ ಸಮಗ್ರ ನಿಷ್ಠ ಪ್ರೀತಿಯನ್ನು ಅಭಿಮಾನದಿಂದ ನೆನೆಯುತ್ತೇವೆ.

– ಡಾ. ಕೆ. ರವೀಂದ್ರನಾಥ



ಶರಣರಾದ ಶ್ರೀ ಸಿದ್ಧಲಿಂಗಶಾಸ್ತ್ರಿಗಳು ಮತ್ತು ಧರ್ಮಪತ್ನಿ ಸುಮಿತ್ರಮ್ಮನವರು

*

# ಸಂಪಾದಕೀಯ

ಪಂ. ಸಿದ್ಧಲಿಂಗಶಾಸ್ತ್ರಿ ಹೊಸಮಠ ಅವರು ಕನ್ನಡ ಪ್ರವಚನದ ಮೂಲಕ ನುಡಿಯನ್ನು ಉದ್ಧರಿಸಿದ ಪುಣ್ಯ ಪುರುಷರು. ಸ್ವತಂತ್ರ ವಿಚಾರಶೀಲರಾಗಿ ಧಾರ್ಮಿಕ, ತಾತ್ವಿಕ, ಸಾಹಿತ್ಯಿಕ ಕ್ಷೇತ್ರಗಳಲ್ಲಿ ಹೊಸಮಾರ್ಗವನ್ನು ತುಳಿದವರು.

ಕನ್ನಡ ನಾಡಿನ ಅನುಭಾವ ಸಾಹಿತ್ಯವನ್ನು ತಮ್ಮ ಆರಾಧ್ಯದೇವತೆಯಂತೆ ಭಾವಿಸಿ ಅದರ ಏಳಿಗೆಗಾಗಿ ನಿರಂತರ ಶ್ರಮಿಸಿದವರು. ತಮ್ಮ ಸುಧೀರ್ಘವಾದ ಜೀವನಾವಧಿಯಲ್ಲಿ ಅವರು ರಚಿಸಿದ ಗ್ರಂಥಗಳೂ ಪ್ರಕಟಿಸಿದ ಲೇಖನಗಳೂ ಇಂದಿಗೂ ಸಂದರ್ಭ ಸಾಹಿತ್ಯ ಗ್ರಂಥಗಳಾಗಿ ನಿಂತಿವೆ. ಇಂದು ಇವರ ಸಾಹಿತ್ಯ ಅಭ್ಯಾಸಿಗಳಿಗೆ, ಜಿಜ್ಞಾಸುಗಳಿಗೆ ಒಂದೆಡೆ ದೊರೆಯುತ್ತಿಲ್ಲ. ಇದನ್ನು ಮನಗಂಡು ಸಿದ್ಧಲಿಂಗಶಾಸ್ತ್ರಿಯವರ ಸಮಗ್ರ ಸಾಹಿತ್ಯ ಪ್ರಕಟಿಸಲಾಗುತ್ತಿದೆ.

ಪಂ. ಸಿದ್ಧಲಿಂಗ ಶಾಸ್ತ್ರಿಯವರು ಸಂಗೀತ ಘರಾಣಾ ಜಂಗಮ ಮನೆತನದಲ್ಲಿ ಕ್ರಿ.ಶ. ೧೯೧೭ರಲ್ಲಿ ಜನಿಸಿದರು. ತಂದೆ ರಾಷ್ಟ್ರಮಟ್ಟದ ಖ್ಯಾತಿ ಹೊಂದಿದ ಸಂಗೀತ ವಿದ್ವಾಂಸರು. ಹುಟ್ಟಿದ ಆರು ತಿಂಗಳಲ್ಲಿಯೇ ತಾಯಿಯನ್ನು ಕಳೆದುಕೊಂಡು ತಂದೆಯ ಲಾಲನೆ, ಪಾಲನೆಯಲ್ಲಿ ಬೆಳೆದರು. ಹಾಗೂ ಹೀಗೂ ಗದುಗಿನ ಮುನ್ಸಿಪಲ್ ಶಾಲೆಯಲ್ಲಿ ಹತ್ತನೆಯ ತರಗತಿಯವರೆಗೆ ಓದಿದರು. ಓದಿನಲ್ಲಿಯೂ ತುಂಬಾ ಜಾಣರಾಗಿದ್ದರು. ಓದಿದ ಶಾಲೆಯ ಶ್ರೇಷ್ಠ ಶಿಕ್ಷಕರ ಶ್ರೇಷ್ಠ ವಿದ್ಯಾರ್ಥಿಯಾಗಿದ್ದರು. ಮುಂದೆ ಕಾಲೇಜು ಓದಬೇಕೆಂಬ ಹಂಬಲವಿತ್ತಾದರೂ ತಂದೆ ಅಕಾಲಿಕ ಮರಣ ಹೊಂದಿದರು. ಹೀಗಾಗಿ ಶಾಸ್ತ್ರಿಯವರ ಶಿಕ್ಷಣ ಅಲ್ಲಿಗೆ ನಿಂತುಬಿಟ್ಟಿತು.

ಶಾಸ್ತ್ರಿಯವರ ಕುರಿತು ಒಂದು ಮಾತು ಹೇಳುವದೇನೆಂದರೆ; ಶಾಸ್ತ್ರಿಗಳಿಗೆ ಜ್ಞಾನ ಕಲಿಕೆಯಿಂದ ಬಂದುದಲ್ಲ. ಅವುದೋ ಒಂದು ದೈವೀ ಪ್ರೇರಣೆಯಿಂದ ಪ್ರಾಪ್ತವಾದುದೆಂದು ತೋರುತ್ತದೆ. ಇವರ ವ್ಯಕ್ತಿತ್ವದ ವೈಶಿಷ್ಟ್ಯ ಅಡಗಿರುವದೇ ಇಲ್ಲಿ. ದೈವೀ ಪ್ರೇರಣೆಯಿಂದ, ಸ್ವಯಂ ಸಾಧನೆಯಿಂದ ರೂಪುಗೊಂಡ ವ್ಯಕ್ತಿತ್ವ ಅವರದು. ತತ್ವಜ್ಞಾನ, ತರ್ಕ, ನ್ಯಾಯ, ಧರ್ಮ, ಅನುಭಾವ ಸಾಹಿತ್ಯ ಮುಂತಾದ ಕ್ಷೇತ್ರಗಳ ಮಹತ್ವಪೂರ್ಣವಾದ ಗ್ರಂಥಗಳನ್ನು ಓದಿಕೊಂಡರು. ಈ ಎಲ್ಲ ಗ್ರಂಥಗಳನ್ನು ಅರಿದು, ಅರೆದು, ಬರೆದು ನೋಡುವ ಚಿಕಿತ್ಸಕ ಬುದ್ಧಿ ಅವರಿಗೆ ಕರತಲಾಮಲಕವಾಯಿತು. ಅವರು ಯಾವ ಗ್ರಂಥಗಳನ್ನು ಓದಿದರೂ ಮಹತ್ವದ ವಿಷಯಗಳನ್ನು ಟಿಪ್ಪಣಿ ಮಾಡುತ್ತ, ಮುಖ್ಯ ವಿಷಯಗಳ ಬಗೆಗೆ ವಿವೇಚಿಸುತ್ತ ಓದುವದು ಅವರ ಹವ್ಯಾಸವಾಗಿತ್ತು.

ಇಂದಿನಿಂದ ನಾಲ್ಕೈದು ದಶಕಗಳ ಹಿಂದಿನ ಮಾತು. ಕರ್ನಾಟಕದಲ್ಲಿ ಪ್ರವಚನಕಾರರ ಹೆಸರು ಕೇಳಿಬಂದರೆ, ಅಂತಹ ದಿಗ್ಗಜರ ಪೈಕಿ ಒಂದು ವೈ. ನಾಗೇಶಶಾಸ್ತ್ರಿಗಳದು ಮತ್ತೊಂದು ನಾಗಭೂಷಣಶಾಸ್ತ್ರಿಗಳದು. ಅವರೊಂದಿಗೆ ಪುಟ್ಟರಾಜ ಗವಾಯಿಗಳೂ ಪ್ರಮುಖರು. ಅಂತಹ ಪಂಡಿತ ಪ್ರವಚನಕಾರರ ಶಿಷ್ಯ ಪರಂಪರೆಯಲ್ಲಿ ಬೆಳೆದು ಉತ್ತರ ಕರ್ನಾಟಕದ ಮನೆಮಾತಾದ ಇನ್ನೊಬ್ಬ ಪ್ರವಚನಕಾರರೆಂದರೆ, ಪಂ. ಸಿದ್ಧಲಿಂಗಶಾಸ್ತ್ರಿ ಹೊಸಮಠ ಅವರು. ಕನ್ನಡ ನಾಡಿಗೆ ನಿಜಗುಣಶಿವಯೋಗಿಗಳು, ಯಳಂದೂರು ಬಸವಲಿಂಗಸ್ವಾಮಿಗಳು, ಕೋಡಿಕೊಪ್ಪದ ಹುಚ್ಚೀರೇಶ್ವರರು, ತೋಂಟದಾರ್ಯಮಠದ ೧೮ನೆಯ ಪೀಠಾಧಿಪತಿ ಸಿದ್ಧೇಶ್ವರ ಜಗದ್ಗುರುಗಳು ಮುಂತಾದವರನ್ನು ಪರಿಚಯಿಸಿದ ಕೀರ್ತಿ ಪಂ. ಸಿದ್ಧಲಿಂಗ ಶಾಸ್ತ್ರಿಗಳದು. ಬಸವಣ್ಣನವರ ವಾಣಿಯಾದ 'ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು, ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು' ಎಂಬಂತೆ, ನುಡಿಯಿಂದ ನಾಡಿಗೆ ಚಿರಪರಿಚಿತರಾದದ್ದು ಇವರ ವ್ಯಕ್ತಿತ್ವದ ವೈಶಿಷ್ಟ್ಯ.

ವೇದ–ಉಪನಿಷತ್ತಿನಿಂದ ಹಿಡಿದು ರಾಮಾಯಣ, ಮಹಾಭಾರತ, ವಚನ ಸಾಹಿತ್ಯ, ಕನ್ನಡ ಕವಿಪುಂಗವರ ಕಾವ್ಯ ರಸಗಳು, ಪ್ರಭುಲಿಂಗಲೀಲೆ, ಬಸವಪುರಾಣ, ಸಿದ್ಧಲಿಂಗಯತಿಗಳ 'ಷಟ್‌ಸ್ಥಲಾಭರಣ', ನಿಜಗುಣರ ಕೈವಲ್ಯಪದ್ಧತಿ, ಷರೀಫರ ತತ್ತ್ವಪದಗಳು, ಚಿದಾನಂದರ ಸ್ವರವಚನ, ನೂರೊಂದು ವಿರಕ್ತರ ಏಕೋತ್ತರ ಷಟ್‌ಸ್ಥಲ, ಸರ್ವಜ್ಞನ ವಚನಗಳು ಹೀಗೆ ನೂರಾರು ಪುರಾಣ, ಶಾಸ್ತ್ರಗಳಲ್ಲಿನ ಜ್ಞಾನಾಮೃತವನ್ನು ಸಾವಿರಾರು ಜನರಿಗೆ ಉಣಬಡಿಸಿದ ಕೀರ್ತಿ, ಸಾರ್ಥಕತೆಗಳು ಸಿದ್ಧಲಿಂಗಶಾಸ್ತ್ರಿಗಳಿಗೆ ಸಲ್ಲುತ್ತವೆ. ಸರಳಜೀವನ, ಉದಾತ್ತ ಪಾಂಡಿತ್ಯಕ್ಕೆ ಹೆಸರಾದವರು. ಅವರ ಜೀವನ ಸರಳವಾದಷ್ಟೇ ಸ್ವಾರಸ್ಯಕರವೂ ಆಗಿದೆ. ನಾಡಿನ ಹಲವಾರು ಕಡೆ ಪಂಡಿತರಿಂದ, ಹಿಡಿದು ಪಾಮರರವರೆಗೆ ಮನ್ನಿಸಲ್ಪಟ್ಟ ಅವರ ಯಶೋಗಾಥೆ ಬಲು ವಿಶಿಷ್ಟವಾದುದು.

> ಕಾಡಿನ ಮಧ್ಯದಲ್ಲೊಂದು ಸಿಮೆಂಟು ಮನೆ
> ಮಾಳಿಗೆಯ ಬಿರುಕಿನಲ್ಲಿ ಹುಲ್ಲುಗರಿಕೆ
> ಅಮೇರಿಕೆಯ ಮಾರ್ಕೆಟನಲ್ಲಿ ಕೊತ್ತಂಬರಿ ಸೊಪ್ಪು

ಎನ್ನುವ ಎ.ಕೆ. ರಾಮಾನುಜಂ ಅವರ ಕಾವ್ಯದ ಸಾಲುಗಳು ಸಿದ್ಧಲಿಂಗಶಾಸ್ತ್ರಿಗಳ ಜೀವನಕ್ಕೆ ಅಕ್ಷರಶಃ ಅನ್ವಯಿಸುತ್ತವೆ. ಕಾಡಿನಲ್ಲಿ ನಾಗರಿಕತೆಯ ಪ್ರತೀಕವಾದ ಸಿಮೆಂಟಿನ ಮನೆಯಂತೆ, ಬೆಳೆಯಲು ಅಸಾಧ್ಯವಾದ ಪರಿಸರದಲ್ಲಿ ಹುಲ್ಲು ಚಿಗುರಿದಂತೆ, ವಿಭಿನ್ನ ಜನರಿಂದ ಕೂಡಿದ ಸಮಾಜದಲ್ಲಿ ಪಾಂಡಿತ್ಯಪೂರ್ಣ ಪ್ರವಚನ ಪ್ರವಹಿಸಿದ ಸಿದ್ಧಲಿಂಗಶಾಸ್ತ್ರಿಗಳದು ಅನನ್ಯ ಬದುಕು.

'ಅರಿದಡೆ ಶರಣ ಮರೆದೊಡೆ ಮಾನವ' ತನ್ನ ಅಂತರಾತ್ಮದಲ್ಲಿ ಹುದುಗಿರುವ 'ದೈವತ್ವದ ಇರುವನ್ನು ಅರಿತವ ಶರಣ. ಅದನ್ನು ಮರೆತವ ಮಾನವ' ಎಂಬುದನ್ನು ಬಸವಣ್ಣನವರು ತಮ್ಮ ವಚನದಲ್ಲಿ ಸ್ಪಷ್ಟಪಡಿಸಿದಂತೆ ಇಂದು ಸಹ 'ಮರೆವಿನ ಮಾನವರಿರುವಂತೆ ಅರುವಿನ ಶರಣರನ್ನು' ಕಾಣಬಹುದು.

> ''ಅಂದಿನವರು ನಡೆದ ದಾರಿ ಇಂದಿನವರು ನಡೆಯರು,
> ಇಂದಿನವರು ನಡೆದ ದಾರಿ ಅಂದಿನವರು ಕಾಣರು ಎಂಬರಯ್ಯ
> ಅಂದಿಂದು ಎಂಬ ಭೇದವನೆಂದು ಕಾಣೆ ನೋಡಾ ಕಪಿಲ ಸಿದ್ಧಮಲ್ಲಿಕಾರ್ಜುನ''

ಸೃಷ್ಟಿಕರ್ತನಾದ ಪರಮಾತ್ಮ ಅಂದು ಜಗತ್ತಿನ ಹಿತಾರ್ಥವಾಗಿ ದಯಪಾಲಿಸಿದ ಬೆಳಗುವ ಸೂರ್ಯ, ಹೊಳೆಯುವ ಚಂದ್ರ, ಇಳೆಯನಾವರಿಸಿದ ಬಿಸಿಲು, ಬೆಳದಿಂಗಳು, ಸುಳಿಯುವ ಗಾಳಿ, ಕೊರೆಯುವ ಚಳಿ, ಸುರಿಯುವ ಮಳೆ, ಹರಿಯುವ ನದಿಗಳಂತೆ ಹಿಂದಿನಂತೆ ಇಂದಿಗೂ ಶಿವನು ಅವರ ಕರುಣೆಯಲ್ಲವೇ ?

ಹಾಗೆಯೇ ಎಲೆಮರೆಯ ಕಾಯಿಯಂತೆ, ಫಲದ ಒಳಗಿನ ಮಧುರದಂತೆ, ಶರಧಿಯ ಗರ್ಭದ ಮುತ್ತಿನಂತೆ, ಸಾಧು–ಸಂತರು, ಶಿವಯೋಗಿಗಳು ಶರಣ–ಶರಣೆಯರು ಆಗಿನಂತೆ ಈಗಲೂ ಇರುವರೆಂಬುದನ್ನು ಮರೆಯುವ ಹಾಗಿಲ್ಲ. ಮುಪ್ಪಿನ ಷಡಕ್ಷರಿಗಳು ಹೇಳುವ ಹಾಗೆ ''ಅಂದಿನವರಿನಿಂದಿನವರು ಹೊಂದಿ ಹೋಲಲರಿಯರೆಂಬ ನುಡಿಯ ಕಿವಿಯನೊಡ್ಡಿ ಕೇಳಲಾಗದು'' ಎಂದಂತೆ, ಇಂದಿನ –ಹಿಂದಿನ ಎಲ್ಲ ದೇಶ, ಎಲ್ಲ ಕಾಲಗಳಲ್ಲಿ ಮಹಾನ್ ವಿಭೂತಿಗಳು, ಮಹಾತ್ಮರು, ಸಂತರು, ಶರಣರು, ದಾರ್ಶನಿಕರು ಉದಿಸಿ ದೇಶ, ನಾಡು, ಸಮಾಜ ಮೊದಲಾದವುಗಳ ಕಲ್ಯಾಣಕಾರ್ಯಗಳಿಗೆ ಶ್ರಮಿಸಿದಂತೆ ಇಂದಿನ ೨೦ನೆಯ ಶತಮಾನದ ಶರಣ ಸಮೂಹದಲ್ಲಿ ಶೋಭಿಸುವ ಮಾಲಿಕೆಯಲ್ಲಿ ತೊಳಗಿ, ಬೆಳಗಿದ, ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ಪ್ರವಚನಕಾರ, ಪಂಡಿತ ಸಿದ್ಧಲಿಂಗ ಶಾಸ್ತ್ರಿಗಳು ಒಬ್ಬರು.

ಅನ್ನದಾನ ಮಹಾಸ್ವಾಮಿಗಳ ಕೃಪಾಶೀರ್ವಾದದ ಕಾರಣವಾಗಿ ಪುರಾಣ ಪ್ರವಚನಕ್ಕೆ ತೊಡಗಿ, ಆ ಮೂಲಕ ಜನಜಾಗೃತಿ ಮಾಡಿದರು. ಪುರಾಣ ಪ್ರವಚನಗಳ ಮೂಲಕ ಅಪಾರ ಬಂಧು ಬಳಗವನ್ನು ಶಾಸ್ತ್ರಿಗಳು ಹೊಂದಿದರು.

ಸಿದ್ಧಲಿಂಗಶಾಸ್ತ್ರಿಗಳು ಉತ್ತರ ಕರ್ನಾಟಕ, ಹೈದ್ರಾಬಾದ ಕರ್ನಾಟಕ ಭಾಗದಲ್ಲಿ ಹೆಚ್ಚು ಪ್ರವಚನ ನೀಡಿದ್ದಾರೆ. ಅವರ ಪ್ರವಚನ ಶೈಲಿಯೇ ವಿಶಿಷ್ಟವಾದುದು. ಅವರು ಪುರಾಣ ಪ್ರಾರಂಭಿಸಿದೊಡನೆ ನಿಶ್ಯಬ್ಧತೆ ತುಂಬಿರುತ್ತಿತ್ತು. ಶಾಸ್ತ್ರಿಗಳು ವೇದಿಕೆಯಲ್ಲಿ ಕುಳಿತುಕೊಂಡರೆ ಒಂದು ರೀತಿ ಶಿವಸ್ವರೂಪಿ ಆಗಿಬಿಡುತ್ತಿದ್ದರು. ಒಬ್ಬ ಶಿವಯೋಗಿಯ ಸರ್ವಲಕ್ಷಣ ಅಲ್ಲಿ ನೆಲೆಗೊಳ್ಳುತ್ತಿತ್ತು. ಯಾರಾದರೂ ಸ್ವಲ್ಪ ಶಬ್ದ ಮಾಡಿದರೆ ಸಾಕು, ಆಗಲೇ ಅವರನ್ನು ತಕ್ಷಣ ಹೊರಹಾಕಿಸಿಬಿಡುತ್ತಿದ್ದರು. ಕಾರಣ ಶಿವಾನುಭವ ಆಲಿಸುವವರೂ ಶಿವಸ್ವರೂಪರು ಎಂದು ಅವರು ಭಾವಿಸಿದ್ದರು.

ಸಿದ್ಧಲಿಂಗ ಶಾಸ್ತ್ರಿಗಳು ಪುರಾಣ ಹೇಳುವಾಗ ಕೇಳುವವರ ಮೈ ರೋಮುಗಳು ಎದ್ದು ನಿಂತು ಆಲಿಸುವಷ್ಟು ಆಧ್ಯಾತ್ಮಿಕ ಸ್ಥಿತಿಯನ್ನು ಆಳವಾಗಿ ಬೇರೂರುವಂತೆ ಸರಳ ಶೈಲಿಯಲ್ಲಿ ಆಧ್ಯಾತ್ಮಿಕ ಉನ್ನತ ತತ್ವವನ್ನು ನಿರೂಪಿಸುತ್ತಿದ್ದರು. ಸಿದ್ಧಲಿಂಗ ಶಾಸ್ತ್ರಿಗಳು ಗಂಭೀರ ಅಧ್ಯಯನಶೀಲರು. ಶಾಸ್ತ್ರ–ಪುರಾಣ ಪುಣ್ಯ ಕಥೆಗಳನ್ನು ಅಧ್ಯಯನ ಮಾಡಿ ಅದನ್ನು ಮನನ ಮಾಡಿಕೊಂಡು ಪುರಾಣ ಹೇಳುವ ಕಾಲದಲ್ಲಿ ಓದಿದ ವಿಷಯಗಳನ್ನು ನವಿರಾಗಿ ಹಲವಾರು ದೃಷ್ಟಾಂತಗಳ ಮೂಲಕ ತಿಳಿಯಪಡಿಸುವ ಕಲೆ ಅವರಲ್ಲಿ ಕರಗತವಾಗಿತ್ತು

ಪುರಾಣ ಹೇಳುವ ಕಾಲದಲ್ಲಿ ಆಯ್ಕೆ ಮಾಡಿಕೊಂಡ ವಿಷಯವನ್ನು ಹೇಳುತ್ತ ಹೇಳುತ್ತಲೇ ಮೈಮರೆತು ಬಿಡುತ್ತಿದ್ದರು. ಆದರೆ ಎಂದೂ ವಿಷಯಾಂತರ ಮಾಡುತ್ತಿರಲಿಲ್ಲ. ಗಂಭೀರ ಸ್ವರೂಪದಲ್ಲಿ ವಿಷಯದ ಆಳಕ್ಕೆ ಇಳಿದರೆ ವಿಷಯದ ತಳಬುಡವನ್ನು ಜಾಲಾಡಿಸಿ, ತಳದಲ್ಲಿ ಹೂತು ಕುಳಿತ ವಿಷಯವನ್ನು ಎಳೆ ಎಳೆಯಾಗಿ ವ್ಯಾಖ್ಯಾನ ಮಾಡುತ್ತಿದ್ದರು. ಅವರು ಪ್ರವಚನದಲ್ಲಿ ಎಂದೂ ವ್ಯಂಗ್ಯ, ಅಶ್ಲೀಲ ಪದಗಳನ್ನು ಬಳಸಿದವರಲ್ಲ. ಯಾರಿಗೋ ಒಮ್ಮೆ ಶಾಸ್ತ್ರಿಗಳು ಹೇಳಿದರಂತೆ. ''ನಗಿಸುತ್ತಾ ಪುರಾಣ ಹೇಳುವ ಶಾಸ್ತ್ರಿ ನಾನಲ್ಲ. ನಗಿಸುವ ಶಾಸ್ತ್ರಿಗಳನ್ನು ಕರೆದು ಪುರಾಣ ಹೇಳಿಸಿಕೊಳ್ಳಿರಿ''* ಎಂದು ವಿಷಯದ ಬಗ್ಗೆ ಗಂಭೀರವಾಗಿ ಮಾತನಾಡುತ್ತಾ ಬಸವಣ್ಣನ ವಚನಗಳು, ಚೌಡಯ್ಯನ ವಚನಗಳು, ಚಾಮರಸನ ಪ್ರಭುಲಿಂಗ ಲೀಲೆಯಲ್ಲಿ ಬರುವ ಕಥೆಗಳನ್ನು ನವಿರಾಗಿ ಹೇಳುತ್ತಿದ್ದರು. ಅವರು ವಿಷಯಕ್ಕೆ ಸಂಬಂಧಿಸಿದರಲ್ಲೆ ಹಾಸ್ಯಕಥೆಗಳನ್ನು ಹೇಳುತ್ತಿದ್ದರು. ಇವರ ಪುರಾಣದ ಕ್ಯಾಸೆಟ್ಟುಗಳನ್ನು ಕೇಳುತ್ತಾ ಹೋದರೆ ಅಮ್ಮವ್ವೆಯ ಕಥೆ, ಪೋಲಾಳ ದಂಡನಾಥನ ಕಥೆ, ನಿಜಗುಣರ ಅನುಭಾವ, ರಾಮುಸೀತೆಯರ ವನವಾಸದ ಪ್ರಸಂಗ, ಶರೀಫರ ಪದಗಳು, ನಾಗಲಿಂಗ ಅಜ್ಜನ ಪವಾಡದ ಕಥೆಗಳು, ಮುಳಗುಂದದ ಬಾಲಲೀಲಾ ಶಿವಯೋಗಿಗಳ ಪವಾಡದ ಕಥೆಗಳು, ಸಂಸ್ಕೃತ ಶ್ಲೋಕಗಳು ಇವೇ ಹೇರಳವಾಗಿ ಬಳಕೆಯಾಗಿರುವುದನ್ನು ಗಮನಿಸಬಹುದಾಗಿದೆ.

ಹಾಗೆಯೇ ಪ್ರಾಚೀನ ರಾಜರಾಣಿಯರ ಕಥೆಗಳು, ಕರಿಗಡಬದ ಕಥೆಗಳು, ಅತ್ತೆಸೊಸೆ ಕಥೆ, ಚಂದ್ರಮತಿ ಪ್ರಲಾಪದ ಕಥೆ, ತಿರುಕೊಳವಿನಾಚಿಯ ಕಥೆ, ಶಿವನ ಭಿಕ್ಷಾಟನದ ಲೀಲೆಗಳು, ಅರವತ್ಮೂರು ಪುರಾತನರ ಕಥೆಗಳು, ಹುಲಿಗೆಮ್ಮ ದೇವಿಯ ಪವಾಡದ ಕಥೆಗಳು ಅವರ ಪ್ರವಚನಗಳಲ್ಲಿ ಪ್ರಸ್ತಾಪವಾಗಿರುವುದನ್ನು ಕಾಣಬಹುದಾಗಿದೆ.

ಸಿದ್ಧಲಿಂಗ ಶಾಸ್ತ್ರಿಗಳು ಪ್ರವಚನದ ಸಂದರ್ಭದಲ್ಲಿ ಗಹನವಿಚಾರಗಳಿಗೆ ಬಂದಾಗ ಗಂಭೀರರಾಗಿ, ಸರಳ ವಿಚಾರಗಳು ಬಂದಾಗ ಹಸನ್ಮುಖಿಯಾಗಿ ಸರಳ

---

* ಸೊಂಡೂರು ಪ್ರಭುದೇವ ಸ್ವಾಮಿಗಳಿಂದ ತಿಳಿದ ಸಂಗತಿ.

ಶೈಲಿಯಲ್ಲಿ ವಿಶ್ಲೇಷಣೆ ಮಾಡುವದು ಅವರ ವೈಶಿಷ್ಟ್ಯವಾಗಿತ್ತು. ಅಶ್ಲೀಲತೆಯನ್ನು ಬಳಸಿ ಸಭೆಯ ಜನರನ್ನು ನಗಿಸುವುದು ಅವರ ಮೆಚ್ಚುಗೆಗಳಿಸುವದು ಅವರ ಜಾಯಮಾನವಾಗಿರಲಿಲ್ಲ. ಅರ್ಥಪೂರ್ಣ ಪ್ರಾಸ್ತಾವಿಕ ವಿಷಯಗಳನ್ನು ಹೇಳುವದರ ಮೂಲಕ ಸಭಿಕರನ್ನು ನಗೆಗೆ ಒಳಗು ಮಾಡುತ್ತಿದ್ದರು. ಆದರೆ ತಾವು ಮಾತ್ರ ಎಂದೂ ನಗುತ್ತಿರಲಿಲ್ಲ. ಅವರು ಆಧ್ಯಾತ್ಮದ ತತ್ವವೆತ್ತಿಗಳಾಗಿದ್ದರೂ ಕೂಡ ತತ್ವ ಸಿದ್ಧಾಂತ–ಧರ್ಮವನ್ನು ವಾಸ್ತವಿಕ ನೆಲೆಗಟ್ಟಿನಲ್ಲಿ ವಿಶ್ಲೇಷಿಸುವವರಾಗಿದ್ದರು. ಧರ್ಮ, ನಂಬಿಕೆ, ಆಚಾರ, ವಿಚಾರ, ಸಂಸ್ಕಾರ ಮುಂತಾದ ವಿಚಾರಗಳನ್ನು ಅರಿತು ಪಾಲಿಸಲು ಪ್ರೇರೇಪಿಸುವಂತವರಾಗಿದ್ದರು. ಭಾರತೀಯ ಪರಂಪರೆಯಂತೆ 'ಸರ್ವರಿಗೂ ಸಮಬಾಳು ಸರ್ವರಿಗೂ ಸಮಪಾಲು' ಎಂಬ ಸಮಾಜಮುಖಿ ಧೋರಣೆ ಅವರ ಪ್ರವಚನಗಳಲ್ಲಿ ಅಸ್ಖಲಿತವಾಗಿ ಪ್ರತಿಬಿಂಬಿತವಾಗುತ್ತಿತ್ತು.

ಶಾಸ್ತ್ರಿಗಳಿಗೆ ತಮ್ಮಂತೆ ಪುರಾಣ ಪ್ರವಚನ ಮಾಡುವ ಪಂಡಿತರ ಬಗ್ಗೆ ಕೀಳರಿಮೆಗಳಾಗಲಿ, ಮೇಲರಿಮೆಗಳಾಗಲಿ ಇರಲಿಲ್ಲ. ಅವರು ಮತ್ತೊಬ್ಬ ಪ್ರವಚನಕಾರ ನನ್ನಾಗಲಿ, ಪಂಡಿತರನ್ನಾಗಲಿ ದೂಷಿಸಿದವರಲ್ಲ. ಆದರೆ ಪ್ರಚಾರಕೋಸ್ಕರ ವಿಷಯಾಂತರ ಮಾಡಿ, ವ್ಯಂಗ್ಯ ವಿಡಂಬನೆಗಳಿಂದ ಜನರನ್ನು ಮನರಂಜಿಸುವ ಪುರಾಣಿಕರನ್ನು ಕಂಡರೆ ಸಹಿಸಿದವರಲ್ಲ. ಪ್ರವಚನ ಸಂದರ್ಭದಲ್ಲಿ ಜನರಿಗೆ ಕಾಡುವ ಪ್ರಶ್ನೆಗಳಿಗೆ ಅತಿ ಸಂಯಮದಿಂದ ಉತ್ತರಿಸಿ ಅವರಿಗೆ ಪರಿಹಾರ ಸೂಚಿಸುವದು ಅವರ ಪರಿಯಾಗಿತ್ತು.

ಶಾಸ್ತ್ರಿಗಳು ಉತ್ತರ ಕರ್ನಾಟಕದ ಬಹುತೇಕ ಐತಿಹಾಸಿಕ ಪ್ರಸಿದ್ಧ ಊರುಗಳಾದ ಗದಗ, ಅಣ್ಣೀಗೇರಿ, ಮುಂಡರಗಿ, ಇಟಗಿ, ಕುಷ್ಟಗಿ, ಶಿರೋಳ, ಲಾಯದಗುಂದಿ, ಸೊಲ್ಲಾಪೂರ, ಸೊಂಡೂರು ಮುಂತಾದೆಡೆ ಅವರು ಪ್ರವಚನ ಮಾಡಿದ್ದಾರೆ. ಒಮ್ಮೆ ಆ ಊರುಗಳಲ್ಲಿ ಪುರಾಣ ಹೇಳಿದರೆ ಮತ್ತೇ ಬೇರೆ ಪುರಾಣಿಕರು ಆ ಊರಿನವರಿಗೆ ಹಿಡಿಸುತ್ತಿರಲಿಲ್ಲ. ಹೀಗಾಗಿ ಒಂದೊಂದು ಊರಿನಲ್ಲಿ ಹದಿನೈದು–ಹದಿನಾರು ವರ್ಷಗಳವರೆಗೆ ಇವರೇ ಪ್ರವಚನ ಹೇಳಿದ ನಿದರ್ಶನಗಳಿವೆ. ಪುರಾಣದಲ್ಲಿ ಹಾಸ್ಯ ಪ್ರಸಂಗವನ್ನು ಹೇಳಲಾರದೇ ಜನಮೆಚ್ಚುಗೆ ಗಳಿಸಿದ್ದು ಇವರ ವಿದ್ವತ್ತನ್ನು ಎತ್ತಿ ತೋರಿಸುತ್ತದೆ.

ಸಾಮಾನ್ಯ ಜನರಿಗೆ ಪಂಡಿತೋತ್ತಮರ ವಿಚಾರಧಾರೆಗಳನ್ನು ಸಲಿಲ ಶೈಲಿಯಲ್ಲಿ ವಿವರಿಸುವುದು ಅವರಿಗೆ ರೂಢಿಗತವಾದ ಶೈಲಿ. ಪ್ರವಚನದ ಸಂದರ್ಭದಲ್ಲಿ ತೂರಿ ಬರುವ ಪ್ರಶ್ನೆಗಳಿಗೆ ಸೂಕ್ತ ಪರಿಹಾರ ಅವರ ವಿಶ್ಲೇಷಣೆಯಲ್ಲಿರುತ್ತಿತ್ತು. ಎಷ್ಟೇ ದೊಡ್ಡ ಸಭೆಯಿದ್ದರೂ ಅದನ್ನು ಮಂತ್ರಮುಗ್ಧಗೊಳಿಸುವ ಕಲೆ ಅವರಿಗೆ ಕರತಲಾಮಲಕ ವಾಗಿತ್ತು. ಪಂಡಿತರಿಂದ ಹಿಡಿದು ಪಾಮರರವರೆಗೂ ಪ್ರವಚನ ಸಾರವನ್ನು ಉಣಬಡಿಸುವ ವಿದ್ವತ್ತು ಅವರ ಪ್ರವಚನಗಳನ್ನು ಆಲಿಸಿದಾಗ ಸ್ಪಷ್ಟವಾಗುತ್ತದೆ.

ಒಟ್ಟಾರೆ ಸಿದ್ಧಲಿಂಗ ಶಾಸ್ತ್ರಿಗಳು ೨೦ನೆಯ ಶತಮಾನದ ಶ್ರೇಷ್ಠ ಫಕೀರ ಪ್ರವಚನಕಾರ ಎಂದು ಹೇಳಿದರೆ ಅತಿಶಯೋಕ್ತಿ ಆಗಲಾರದು.

ಹೀಗೆ ಪ್ರವಚನಕಾರರಾಗಿ ಉತ್ತರ ಕರ್ನಾಟಕದ ಮನೆ ಮಾತಾದ ಸಿದ್ಧಲಿಂಗಶಾಸ್ತ್ರಿಗಳು ಕೇವಲ ಪುರಾಣ ಪ್ರವಚನಕಷ್ಟೇ ಸೀಮಿತವಾಗದೇ ಸಾಹಿತ್ಯ ಕೃಷಿಯನ್ನು ಗೈದಿದ್ದಾರೆ. ವೈಚಾರಿಕ, ಸಂಶೋಧನಾ ಕೃತಿಗಳು, ಅನೇಕ ಲೇಖನಗಳನ್ನು ಅವರು ಬರೆದಿದ್ದಾರೆ. ಸರಳ ಶೈಲಿಯಲ್ಲಿ ಓದುಗನನ್ನು ಕೃತಿಯ ಆರಂಭದಿಂದ ಅಂತ್ಯದವರೆಗೆ ಓದಿಸಿಕೊಂಡು ಹೋಗುವ, ಹಲವಾರು ನಿದರ್ಶನಗಳ ಮೂಲಕ ಜ್ಞಾನದಾಹ ತಣಿಸುವ ವೈಚಾರಿಕ ಅಂಶಗಳು ಅವರ ಎಲ್ಲ ಕೃತಿಗಳಲ್ಲೂ ಸಾಮಾನ್ಯವಾಗಿ ಕಾಣಸಿಗುತ್ತವೆ. ಸಾಂದರ್ಭಿಕವಾಗಿ ಕಥೆಗಳನ್ನು ನವಿರಾಗಿ, ರಮ್ಯವಾಗಿ ಚಿತ್ರಿಸುವಲ್ಲಿ ಅವರ ಶೈಲಿ ಅತಿ ವಿಶಿಷ್ಟವಾದದ್ದು. ಕನ್ನಡ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆಯನ್ನು ಶಾಸ್ತ್ರಿಗಳು ನೀಡಿದ್ದಾರೆ. ಅವರ ಕೃತಿಗಳ ಪಟ್ಟಿಯನ್ನು ಈ ಕೆಳಗಿನಂತೆ ನೋಡಬಹುದು.

ಸಿದ್ಧಲಿಂಗಶಾಸ್ತ್ರಿಯವರ ಸಮಗ್ರ ಸಾಹಿತ್ಯವನ್ನು ಗ್ರಂಥ ಸಾಹಿತ್ಯ, ಲೇಖನ ಸಾಹಿತ್ಯವೆಂದು ಎರಡು ರೀತಿಯಲ್ಲಿ ವರ್ಗೀಕರಿಸಬಹುದು.

**೧. ಗ್ರಂಥ ಸಾಹಿತ್ಯ :**

ಪಂ. ಸಿದ್ಧಲಿಂಗಶಾಸ್ತ್ರಿಗಳು ರಚಿಸಿದ ಕೃತಿಗಳು ಒಟ್ಟು ನಾಲ್ಕು

೧. ನಮ್ಮ ಮಠ ೧೯೭೨ (ಕಿಶೆ ಆಕಾರ III X 31)
(ಪ್ರಗತಿಶೀಲ ಸಂಘದ ಪ್ರಥಮ ಪುಸ್ತಕವೆಂಬ ಹೆಗ್ಗಳಿಕೆ)

೨. ಲಿಂ. ಎಳಂದೂರು ಬಸವಲಿಂಗ ಮಹಾಸ್ವಾಮಿಗಳು – ೧೯೮೦
(ಜಗದ್ಗುರು ತೋಂಟದಾರ್ಯ ಸೇವಾ ಸಮಿತಿ, ಅಣ್ಣಿಗೇರಿ ಕ್ರೌನ್ ಆಕಾರ)

೩. ಸಿದ್ಧೇಶ್ವರ ಜಗದ್ಗುರುಗಳವರು – ೧೯೮೬
(ವೀರಶೈವ ಅಧ್ಯಯನ ಸಂಸ್ಥೆ ಪುಣ್ಯಪುರುಷ ಸಾಹಿತ್ಯ ರತ್ನ ಮಾಲೆ ಕಿಶೆ ಆಕಾರ)

೪. ಕೋಡಿಕೊಪ್ಪದ ಹುಚ್ಚೀರಪ್ಪಜ್ಜನವರ ದಿವ್ಯ ಜೀವನ ಚರಿತಾಮೃತ – ೧೯೯೪
(ಹಠಯೋಗಿ ಸಾಹಿತ್ಯ ಪ್ರಕಾಶನ, ನರೇಗಲ್ಲ ೧/೮ ಡೆಮಿ ಆಕಾರ).

**೨. ಲೇಖನ ಸಾಹಿತ್ಯ :**

ಪಂ. ಸಿದ್ಧಲಿಂಗಶಾಸ್ತ್ರಿಗಳು ಬರೆದ ಲೇಖನಗಳು ಒಟ್ಟು ಹನ್ನೊಂದು.

೧. ಎಡೆಯೂರು ಕ್ಷೇತ್ರಸ್ಥ ನಿರಂಜನ ಜಗದ್ಗುರು
ಶ್ರೀ ತೋಂಟದ ಸಿದ್ಧಲಿಂಗೇಶ್ವರರು

೨. ಶ್ರೀ ಜಗದ್ಗುರು ತೋಂಟದಾರ್ಯಪೀಠದ ಉಜ್ವಲ ಪರಂಪರೆ

೩. ಮುಮುಕ್ಷುಗಳ ಪುಣ್ಯಕ್ಷೇತ್ರಂ

೪. ಬಾಚಿಗೊಂಡನಹಳ್ಳಿಯ ಕೌದಿ ಮಹಾಂತಸ್ವಾಮಿಗಳ ಮಠ ಸ್ಥಾಪನೆಯಾದ ಹಿನ್ನೆಲೆ

೫. ಶ್ರೀ ನಿರಂಜನ ಜಗದ್ಗುರು ತೋಂಟದ ಅರ್ಧನಾರೀಶ್ವರರು

೬. ತ್ಯಾಗಜೀವಿ

೭. ಶ್ರೀ ಹಾಳಕೇರಿ ಅನ್ನದಾನಸ್ವಾಮಿಗಳ ಪುರಾಣ ಪ್ರವಚನಗಳು

೮. ವೀರಶೈವದರ್ಶನ

೯. ಮುನ್ನುಡಿ

೧೦. ಸಹಕಾರ ತತ್ತ್ವದ ಸಾಂಸ್ಕೃತಿಕ ಆಂದೋಲನ

೧೧. ಸಹಕಾರಿ ಆಂದೋಲನ

ಈ ಎರಡು ಬಗೆಯ ಸಾಹಿತ್ಯವು ವಿಚಾರ ಸಾಹಿತ್ಯ ಪ್ರಕಾರಕ್ಕೆ ಸೇರುತ್ತವೆ. ಹೀಗಾಗಿ ಅದಕ್ಕೆ ಸಾರ್ವಕಾಲೀನತೆ ಪ್ರಾಪ್ತವಾಗಿದೆ. ಅಂತೆಯೇ ಕನ್ನಡ ಸಾಹಿತ್ಯದ ಅತ್ಯವಶ್ಯಕ ಘಟಕವಾಗಿ ಪ್ರಕಟಣೆಗೆ ಅರ್ಹವಾಗಿದೆ. ಅವರ ಕೃತಿಗಳ ಸಂಕ್ಷಿಪ್ತ ವಿವೇಚನೆ ಇಲ್ಲಿ ಮಾಡಲಾಗಿದೆ.

ನಮ್ಮ ಮಠ : ಈ ಕೃತಿ ಪ್ರಗತಿಶೀಲ ಸಂಘದ ಪ್ರಥಮ ಪುಷ್ಪ. ೧೯೭೦ರಲ್ಲಿ ಪ್ರಕಟವಾಗಿದೆ. ಶಾಸ್ತ್ರಿಗಳು ಶ್ರೀಮಠದಲ್ಲಿ ಶಿವಾನುಭವ ಕಾರ್ಯಕ್ರಮಗಳನ್ನು ಆಯೋಜಿಸಿ ಅದಕ್ಕೊಂದು ಸಾಂಸ್ಕೃತಿಕ, ಸಾಮಾಜಿಕ, ಸಾಹಿತ್ಯಕ ಆಯಾಮ ಕಲ್ಪಿಸಿದ ಕಾರ್ಯ ಅನನ್ಯವಾಗಿದೆ. ಶಾಸ್ತ್ರಿಗಳ ಕಾರ್ಯಕ್ಷೇತ್ರ ಇಷ್ಟಕ್ಕೆ ಸಿಮೀತವಾಗಲಿಲ್ಲ. ಸಾಹಿತ್ಯ ಕೃಷಿ ಕಡೆಗೂ ವಾಲಿದರು. ಈ ಕಾರಣವಾಗಿಯೇ 'ನಮ್ಮ ಮಠ'ವೆಂಬ ಪುಸ್ತಕ ರಚಿಸಿದರು. ಈ ಪುಸ್ತಕಕ್ಕೆ ನಮ್ಮ ಮಠ ಎಂದು ಹೆಸರಿಡಲು ಕಾರಣವನ್ನು ಹೀಗೆ ಹೇಳಿದ್ದಾರೆ. ''ನಿರಂಜನ ಜಗದ್ಗುರು, ಚರಕುಲ ಸಾರ್ವಭೌಮ ಷಟ್‌ಸ್ಥಲ ಚಕ್ರವರ್ತಿ ಮುಂತಾದ ವಿಶೇಷಣಗಳಿಂದ ಕೀರ್ತಿ ಪಡೆದ ಗದುಗಿನ ಹೃದಯ ಸ್ಥಾನದಂತೆ ಗೋಚರಿಸುವ ತೋಂಟದ ಸಿದ್ಧಲಿಂಗೇಶ್ವರನ ದಿವ್ಯಪೀಠವೇ ಈ ''ನಮ್ಮ ಮಠ'' ಎಂದು ಹೆಸರಿಟ್ಟು ಪ್ರಕಟಿಸಿದರು.

ಈ ಕೃತಿಯೂ ಐತಿಹಾಸಿಕ, ಚಾರಿತ್ರಿಕ, ಸಾಹಿತ್ಯಕ ಮಹತ್ವ ಪಡೆದಿದೆ. ಶ್ರೀಮಠದ ಪ್ರಾಚೀನ ಪರಂಪರೆಯಿಂದ ಹಿಡಿದು, ಅರ್ವಾಚೀನ ಪರಂಪರೆಯ ಶಿವಕುಮಾರ ಶ್ರೀಗಳವರೆಗಿನ ಪೀಠಾಧಿಕಾರಿಗಳ ಸಂಕ್ಷಿಪ್ತ ಚರಿತ್ರೆ, ಅವರು ಸಾಧಿಸಿದ ಸಿದ್ಧಿ, ಅವರು ಯಾವ ಯಾವ ಜಾಗೃತ ಸ್ಥಾನಗಳಲ್ಲಿ ಶಿವಯೋಗ ಸಮಾಧಿಸ್ಥರಾದರು ಎಂಬುದನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಹಾಗೆಯೇ ಶ್ರೀಮಠದ ರಥೋತ್ಸವ, ಜಾತ್ರೆಗಳು ಹೇಗೆ ನಡೆದುಕೊಂಡು ಬಂದವು ಎಂಬುದರ ಬಗ್ಗೆಯೂ ಸಂಕ್ಷಿಪ್ತವಾಗಿ ಹೇಳಿದ್ದಾರೆ.

ಕೃತಿಯ ಕೊನೆಗೆ ಭಕ್ತರು ನಿತ್ಯ ಪಾರಾಯಣ ಮಾಡಲಿಕ್ಕೆ ಅನುಕೂಲವಾಗಲಿ ಎಂದು ಸಿದ್ಧೇಶ್ವರ ಮಹಾಪುರಾಣದಲ್ಲಿರುವ ಶ್ಲೋಕಗಳನ್ನು ಅನುಬಂಧದಲ್ಲಿ ನೀಡಿದ್ದಾರೆ. ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರು ಕಲ್ಯಾಣದಲ್ಲಿ ಶೂನ್ಯಸಿಂಹಾಸನ ಪೀಠ ಸ್ಥಾಪಿಸಿ ಅಲ್ಲಮಪ್ರಭುಗಳನ್ನು ನಿರಂಜನ ಪ್ರಥಮ ಜಗದ್ಗುರು ಎಂದು ಮೂರ್ತಿಗೊಳಿಸಿದರು. ಅಂದಿನಿಂದ ೧೫ನೆಯ ಶತಮಾನದ ಶ್ರೀ ತೋಂಟದ ಸಿದ್ಧಲಿಂಗೇಶ್ವರರವರೆಗೆ ೧೯ ಜನ ಜಗದ್ಗುರುಗಳ ಪಟ್ಟಿ ನೀಡಿದ್ದಾರೆ. ನಂತರ ಎಡೆಯೂರು ಸಿದ್ಧಲಿಂಗೇಶ್ವರನಿಂದ ಹಿಡಿದು ಪುಸ್ತಕಪ್ರಿಯರು ಕೋಮುಸೌಹಾರ್ದಿಗಳಾದ ಪೂಜ್ಯ ಡಾ. ಸಿದ್ಧಲಿಂಗ ಮಹಾಸ್ವಾಮಿಗಳವರೆಗೆ ಆಗಿಹೋದವರ ವಿವರ ಕೊಟ್ಟಿದ್ದಾರೆ. ಈ ಪಟ್ಟಿಯನ್ನು ಗಮನಿಸಿದಾಗ ಶ್ರೀಮಠದ ಪರಂಪರೆಯ ಬಗ್ಗೆ ಶಾಸ್ತ್ರಿಗಳಿಗಿರುವ ಆಳ ಅಗಲಗಳನ್ನು ಅರಿಯಬಹುದಾಗಿದೆ. ನಿರಂಜನ ಜಗದ್ಗುರು ಪರಂಪರೆಯ ಕುರಿತು ಅಧ್ಯಯನ ಮಾಡುವವರಿಗೆ ಈ ಪುಸ್ತಕ ಆಕರವಾಗಿ ನಿಲ್ಲುತ್ತದೆ.

೮೦. ಎಳಂದೂರು ಬಸವಲಿಂಗ ಮಹಾಸ್ವಾಮಿಗಳು : ಇವರು ಡಂಬಳ ಶ್ರೀ ಜಗದ್ಗುರು ತೋಂಟದಾರ್ಯ ಮಠದ ಚರಮೂರ್ತಿಗಳಲ್ಲಿ ಒಬ್ಬರು. ಕರ್ಮ, ಭಕ್ತಿ, ಜ್ಞಾನ ಈ ಮೂರು ತತ್ವಗಳ ಕೇಂದ್ರಸ್ಥಾನವಾಗಿ ನಿಂತ ಶಿವಯೋಗ ಮಂದಿರದ ರೂವಾರಿಗಳಾದ ಹಾನಗಲ್ಲ ಕುಮಾರಸ್ವಾಮಿಗಳನ್ನು ರೂಪಿಸಿದ ಬಸವಲಿಂಗಸ್ವಾಮಿಗಳು ನಿಜಗುಣರು ತಪಸ್ಸನ್ನು ಆಚರಿಸಿದ ಶಂಭುಲಿಂಗದ ಬೆಟ್ಟಕ್ಕೆ ಬಂದು ತಪಸ್ಸನ್ನು ಆಚರಿಸಿದವರು. ನಿಜಗುಣರ ಷಟ್‌ಸ್ಥಲಗಳು ನಾಲ್ಕು ದಿಕ್ಕಿಗೆ ಪಸರಿಸುವಂತೆ ಮಾಡಿದ ಸಿದ್ಧಾರೂಢರ ದರ್ಶನ ಪಡೆದು ಶಿವಕಾರುಣ್ಯ ಹೊಂದಿದವರು. ರಾಮಕೃಷ್ಣ ಪರಮಹಂಸರಿಗೆ ಶಿಷ್ಯನಾಗಿ ನರೇಂದ್ರ ಸಿಕ್ಕಂತೆ; ಎಳಂದೂರು ಬಸವಲಿಂಗ ಸ್ವಾಮಿಗಳಿಗೆ ಜೋಯಿಸರ ಹಳ್ಳಿಯ ಹಾಲಯ್ಯ (ಹಾನಗಲ್ಲ ಕುಮಾರಸ್ವಾಮಿ) ಶಿಷ್ಯನಾಗಿ ದೊರೆತಿದ್ದು ಯೋಗಾಯೋಗ. ತದನಂತರ ಶಿಷ್ಯನನ್ನು ಎಳಂದೂರಿಗೆ ಬರಮಾಡಿಕೊಂಡರು. ನಿಜಗುಣರ ಷಟ್‌ಶಾಸ್ತ್ರ ಅಭ್ಯಾಸ ಹೇಳಿ ಚಿನ್ಮಯ ದೀಕ್ಷೆ ನೀಡಿದರು. ಮುಂದೆ ಗುರು ಶಿಷ್ಯರಿಬ್ಬರು ಕೂಡಿಕೊಂಡು ದೇಶಪರ್ಯಟನ ಕೈಕೊಂಡು ಮರಳಿ ಶಂಭುಲಿಂಗನ ಬೆಟ್ಟಕ್ಕೆ ಬಂದು ಬಹುಕಾಲದವರೆಗೆ ಅನುಷ್ಠಾನ ಗೈದರು. ಆಮೇಲೆ ಎಳಂದೂರ ಬಸವಲಿಂಗರಿಗೆ ಮುಪ್ಪಾಗಿ ಮರಳಿ ಗುರುಮನೆಗೆ ಬರುತ್ತಾರೆ. ತದನಂತರ ಅಣ್ಣಿಗೇರಿಗೆ ಬಂದು ಸಮಾಧಿಸ್ಥರಾಗುತ್ತಾರೆ. ಮುಂದೆ ಹಾನಗಲ್ಲ ಕುಮಾರಸ್ವಾಮಿಗಳು ತಮ್ಮ ಗುರುಗಳ ಗದ್ದುಗೆಯ ಪೂಜೆಗಾಗಿ ಅಣ್ಣಿಗೇರಿಯಲ್ಲಿಯ ಶಿವಯೋಗ ಮಂದಿರಕ್ಕೆ ಆರು ಕೂರಿಗೆ ಜಮೀನು ದಾನವಾಗಿ ನೀಡಿದ ಉಲ್ಲೇಖಗಳಿವೆ.

ಎಳಂದೂರ ಬಸವಲಿಂಗ ಸ್ವಾಮಿಗಳ ಚರಿತ್ರೆ ತುಂಬಾ ವಿಶಿಷ್ಟವಾಗಿದ್ದರೂ ಲೇಖಕರು ನಿಜಗುಣರ ಶಾಸ್ತ್ರಗ್ರಂಥಗಳನ್ನು ಕ್ರೋಢೀಕರಿಸಿಕೊಂಡು ಜೀವನ ಚರಿತ್ರೆ ಕಟ್ಟಿಕೊಟ್ಟಿದ್ದಾರೆ. ಹೀಗಾಗಿ ಕೇವಲ ಜೀವನ ಚರಿತ್ರೆ ಆಗದೆ ಇದೊಂದು ಆಧ್ಯಾತ್ಮ ಜೀವನ ಚರಿತ್ರೆ ಎಂದೆನಿಸುತ್ತದೆ.

ಈ ಕೃತಿ ಶ್ರೀ ಜಗದ್ಗುರು ತೋಂಟದಾರ್ಯ ಸೇವಾ ಸಮಿತಿ ಅಣ್ಣಿಗೇರಿಯಿಂದ ೧೯೮೦ರಲ್ಲಿ ಪ್ರಕಟವಾಗಿದೆ. ಈ ಕೃತಿಯನ್ನು ಎಡೆಯೂರು ತೋಂಟದ ಸಿದ್ಧಲಿಂಗೇಶ್ವರರಿಗೆ ಅರ್ಪಿಸಲಾಗಿದೆ.

ಶ್ರೀ ಸಿದ್ಧೇಶ್ವರ ಜಗದ್ಗುರುಗಳು : ತೋಂಟದಾರ್ಯ ಸಂಸ್ಥಾನಮಠದ ಲಿಂಗಾಯತ ಅಧ್ಯಯನ ಸಂಸ್ಥೆಯ ಪುಣ್ಯಪುರುಷ ಸಾಹಿತ್ಯರತ್ನಮಾಲಿಕೆಯಲ್ಲಿ ಪ್ರಕಟವಾಗಿದೆ.

ಗದುಗಿನ ತೋಂಟದಾರ್ಯ ಪೀಠಪರಂಪರೆಯ ೧೬ನೆಯ ಜಗದ್ಗುರುಗಳಾದ ಸಿದ್ಧೇಶ್ವರ ಸ್ವಾಮಿಗಳ ಜೀವನ ಚರಿತ್ರೆಯನ್ನು ಸಿದ್ಧಲಿಂಗಶಾಸ್ತ್ರಿಯವರು ಬರೆದಿದ್ದಾರೆ. ಈ ಕೃತಿಯು ಗದುಗಿನ ತೋಂಟದಾರ್ಯ ಪೀಠಪರಂಪರೆಯಿಂದ ಆರಂಭ ವಾಗುತ್ತದೆ. ಸಿದ್ಧೇಶ್ವರ ಜಗದ್ಗುರುಗಳ ಹುಟ್ಟು-ಬಾಲ್ಯ, ಅವರ ವಿದ್ಯಾಭ್ಯಾಸದ ಬಗ್ಗೆ ಹೇಳಿದ್ದಾರೆ. ಸಿದ್ಧೇಶ್ವರ ಜಗದ್ಗುರುಗಳದು ದಿವ್ಯವ್ಯಕ್ತಿತ್ವ. ಇವರ ವ್ಯಕ್ತಿತ್ವಕ್ಕೆ ಆಕರ್ಷಣೆಗೊಂಡು ಲಿಂಗಾಯತ ಧರ್ಮದ ಚಿಂತಕರಾದ ಅರಟಾಳ ರುದ್ರಗೌಡರು, ಸರ್. ಕೆ.ಪಿ. ಪುಟ್ಟಣ್ಣ ಶೆಟ್ಟರು, ದಾನವೀರ ಸಿರಸಂಗಿ ಲಿಂಗರಾಜರು, ರಾಜಾ ಲಖಮಗೌಡ ಸರದೇಸಾಯಿ, ಗಿಲಗಂಚಿ ಗುರುಸಿದ್ಧಪ್ಪನವರು, ಶಾಂತವೀರಪ್ಪ ಮೆಣಸಿನಕಾಯಿ, ಹೈದರಾಬಾದಿನ ಸಾಲಾರಜಂಗ ಮುಂತಾದ ಮಹನೀಯರುಗಳು ಶ್ರೀಗಳಲ್ಲಿ ಬಂದು ದರ್ಶನ ಪಡೆದುಕೊಂಡು ಹೋಗುತ್ತಿದ್ದುದರ ಬಗ್ಗೆ ಆಧಾರ ಸಮೇತ ನಿರೂಪಿಸಿದ್ದಾರೆ. ಹಾಗೆಯೇ ಸನ್ನಿಧಿ ಚರಮೂರ್ತಿ, ಡಂಬಳದ ಶಂಕರಪ್ಪ ಚರಮೂರ್ತಿ, ಅಣ್ಣಿಗೇರಿಯ ಸಿದ್ಧಲಿಂಗಚರಮೂರ್ತಿಗಳು, ಶಿರೋಳದ ಸದಾಶಿವಮೂರ್ತಿಗಳು ಆಗಾಗ್ಗೆ ಸಿದ್ಧೇಶ್ವರ ಜಗದ್ಗುರುಗಳಿಗೆ ಭೇಟಿಯಾಗಿ ದರ್ಶನ ಪಡೆದುಕೊಳ್ಳುತ್ತಿದ್ದರು. ಇವರ ಕಾಲದಲ್ಲಿ ಶ್ರೀಮಠ ಎಲ್ಲಾ ರಂಗಗಳಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿತ್ತು ಎಂಬುದಕ್ಕೆ ದಾಖಲು ಸಾಹಿತ್ಯ ಭಾಗ-೧, ಭಾಗ-೨ರಲ್ಲಿಯ ಪತ್ರಗಳೇ ನಮಗೆ ನಿದರ್ಶನ. ಶ್ರೀ ಸಿದ್ಧೇಶ್ವರ ಜಗದ್ಗುರುಗಳು ಸಂಸ್ಕೃತ ಪಾಠಶಾಲೆ ಮತ್ತು ಸಂಗೀತ ಪಾಠಶಾಲೆಗಳನ್ನು ಆರಂಭಿಸಿದಾಗ ಅವರಿಗೆ ಯಾರು ಯಾರು ಸಹಾಯ ಮಾಡಿದರು ಎಂಬುದನ್ನು ಲೇಖಕರು ಆಧಾರ ಸಮೇತವಾಗಿ ದಾಖಲಿಸಿದ್ದಾರೆ. ಶ್ರೀ ಸಿದ್ಧೇಶ್ವರ ಜಗದ್ಗುರುಗಳು "ಮಾನವಾಕೃತಿಯಿಂದ ಇದ್ದರೂ ಸೋಪೇರವಾನೆ ಆದಿಲ್‌ರಂತೆ ದಿವ್ಯಜ್ಞಾನಿಗಳು." ಆ ದೇವರೆ ಇವರ ದೇಹದಲ್ಲಿ ಚಂದ್ರನನ್ನು ಇಟ್ಟು ಕಳಿಸಿರಬೇಕು. ಹೀಗಾಗಿಯೇ ಶ್ರೀಮಠವನ್ನು ಚಂದ್ರನಂತೆ ಬೆಳಗಿಸಿದರು. ಇಂತಹ ಪೂಜ್ಯರ ಚರಿತ್ರೆಯನ್ನು ಮನಂಬುಗುವಂತೆ ನಿರೂಪಿಸಿ ಶಾಸ್ತ್ರಿಗಳು ಕೃತಕೃತ್ಯರಾಗಿದ್ದಾರೆ. ಕೃತಿಯ ಕೊನೆಗೆ ಸಿದ್ಧಲಿಂಗ ಶಿವಯೋಗಿಗಳ ಪೀಠಪರಂಪರೆಯ ಪಟ್ಟಿ ಕೊಟ್ಟಿರುವದಲ್ಲದೆ ಶ್ರೀ ಜಗದ್ಗುರುಗಳವರು ಎಡೆಯೂರಿಗೆ ದಯಮಾಡಿಸಿದಾಗ ಅವರೊಂದಿಗೆ ಒಯ್ಯಲಾದ ಸರಂಜಾಮುಗಳ ವಿವರ ಹಾಗೂ ಸರಕಾರ ಹೊರಡಿಸಿದ ಆದೇಶ ಪತ್ರವನ್ನು ಅನುಬಂಧದಲ್ಲಿ ನೀಡಿ ಈ ಕೃತಿಯ ಘನತೆ ಹೆಚ್ಚಿಸಿದ್ದಾರೆ.

ಕೋಡಿಕೊಪ್ಪದ ಶ್ರೀ ಹುಚ್ಚೀರಪ್ಪಜ್ಜನವರ ದಿವ್ಯ ಜೀವನ ಚರಿತಾಮೃತ : ಈ ಕೃತಿ ೧೯೯೪ರಲ್ಲಿ ಶ್ರೀ ಹಠಯೋಗಿ ಸಾಹಿತ್ಯ ಪ್ರಕಾಶನ ಟ್ರಸ್ಟ, ನರೇಗಲ್ಲದಿಂದ ಪ್ರಕಟವಾಗಿದೆ. ಪ್ರಕಟಿಸಿದ ಪ್ರತಿಗಳು ೫೦೦೦. ಈ ಕೃತಿ ರಚನೆಗೆ ಕಾರಣವನ್ನು ಲೇಖಕರು ಹೀಗೆ ಹೇಳಿದ್ದಾರೆ. ''ಹುಚ್ಚೀರಪ್ಪನ ಜಾತ್ರೆಯಲ್ಲಿ ನನ್ನ ಪುರಾಣ ಏರ್ಪಡಿಸಿದ್ದರು. ನಾನು ಸಹಜವಾಗಿ ಹುಚ್ಚೀರಪ್ಪನ ಜಾತ್ರೆಗೆ ಹೋಗಿ ಕಾಯಿ ಕರ್ಪೂರ ಮಾಡಿಸಿಕೊಂಡು ಬರಬೇಕೆಂದು ಗದುಗಿನಿಂದ ಹೋಗಿದ್ದೆ. ಅಲ್ಲಿ ಹೋದ ಬಳಿಕವೇ ನನ್ನ ಪ್ರವಚನ ಏರ್ಪಡಿಸಿದ್ದಾರೆಂದು ಗೊತ್ತಾಗಿದ್ದು. ಈ ಮೊದಲು ಆ ಕುರಿತು ತಿಳಿಸದೇ ಇರುವದರಿಂದ ಸಿಟ್ಟಾಗಿ ಪ್ರವಚನ ಸೇವೆ ಮಾಡದೆ ನನ್ನೂರು ಬೂದಿಹಾಳಕ್ಕೆ ಬಂದೆನು. ಮಾರನೇ ದಿನ ಬೂದಿಹಾಳದಿಂದ ಗದುಗಿಗೆ ಹೋಗುವವನಿದ್ದೆ. ಬಟ್ಟೆಗಳು ಸೆಲ್ಫಿನ ಮೇಲಿದ್ದವು. ಸ್ಟೂಲಿನ ಮೇಲೆ ನಿಂತು ಅವುಗಳನ್ನು ತೆಗೆದುಕೊಳ್ಳುವಾಗ ಸ್ಟೂಲಿನ ಮೇಲಿಂದ ಬಿದ್ದು ಬಲಗಡೆ ಕಾಲಿನ ಛಪ್ಪಿ ಎಲುಬು ಮುರಿದು ಹೋಗಿ ಏಳಲಿಕ್ಕೆ ಬಾರದಂತಾಯಿತು. ಈ ಅನರ್ಥಕ್ಕೆ ಕಾರಣ ಹುಚ್ಚೀರಪ್ಪನವರ ಮಠದಲ್ಲಿ ಪುರಾಣ ಸೇವೆ ಸಲ್ಲಿಸಲು ನಿರಾಕರಿಸಿದ್ದೆ ಕಾರಣ'' ಎಂದು ಭಾವಿಸಿದ್ದ ಪತ್ನಿ ಸುಮಿತ್ರಮ್ಮ ಮಠಕ್ಕೆ ಹೋಗಿ 'ಅಜ್ಜ' ನಮ್ಮ ಶಾಸ್ತ್ರಿಗಳು ನೆಟ್ಟಗಾದರೆ ಅವರು ಬದುಕಿರುವವರೆಗೆ ಜಾತ್ರೆಯಲ್ಲಿ ಉಚಿತ ಪ್ರವಚನ ಸೇವೆ ಸಲ್ಲಿಸುವರು ಎಂದು ಬೇಡಿಕೊಂಡು ಬಂದಳಂತೆ. ನಂತರ ''ನಾನು ಕೆಲ ವರ್ಷಗಳು ಹುಚ್ಚೀರಪ್ಪಜ್ಜನ ಜಾತ್ರೆಯಲ್ಲಿ ಪ್ರವಚನ ಸೇವೆ ನಡೆಸುತ್ತ ಬಂದೆನು. ಒಂದು ದಿನ ಕೋಡಿಕೊಪ್ಪದ ಹುಚ್ಚೀರಪ್ಪನ ಗ್ರಂಥ ರಚನೆಗೂ ತೊಡಗಿಕೊಂಡು ೧೯೯೪ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಪಡಿಸಬೇಕಾಯಿತು.'' ಎಂದು ತಮ್ಮ ಆತ್ಮ ನಿವೇದನೆಯಲ್ಲಿ ಹೇಳಿದ್ದಾರೆ.

ನಮ್ಮ ನಾಡಿನ ಅನೇಕ ತಪಸ್ವಿಗಳು, ಯೋಗಿ–ಸಂತರು, ಸಿದ್ಧ ಶರಣರು, ಅನೇಕಾನೇಕ ಮಹಾಪುರುಷರು ಜನಿಸಿ, ಬದುಕಿ ತಮ್ಮ ಜೀವಿತ ಕಾಲದಲ್ಲಿ ಅನೇಕ ಅದ್ಭುತವಾದ ಲೀಲೆ–ಪವಾಡಗಳನ್ನು ಮೆರೆದು ತಮ್ಮ ಅಂತಃಶಕ್ತಿಯ ಅಮೃತ ಧಾರೆಯನ್ನು ಈ ಮರ್ತ್ಯಲೋಕಕ್ಕೆ ಉಣಬಡಿಸಿ ಪಾವನರನ್ನಾಗಿ ಮಾಡಿದ್ದು ನಮ್ಮ ನಿಮ್ಮೆಲ್ಲರ ಪುಣ್ಯದ ಫಲ. ಇಂತಹ ವಿರಳರಲ್ಲಿ ವಿರಳರು ಹಾಗೂ ಬ್ರಹ್ಮೀಭೂತರಾದ ಕೋಡಿಕೊಪ್ಪದ ಹಠಯೋಗಿ ಶ್ರೀ ಹುಚ್ಚೀರಪ್ಪಜ್ಜನವರು ಮಹಿಮಾತೀಶಯರು. ಈ ಐಹಿಕ ಲೋಕದ ಉತ್ತುಂಗಕ್ಕೆ ಏರಿ ಸಹಜ ಮಾರ್ಗಕ್ಕೆ ತಲುಪಿದವರು. ಇವರು ನುಡಿದ ನುಡಿ ಅದೊಂದು ಉಪನಿಷತ್‌ವಾಣಿಯಾಯಿತು. ಅದೆ ''ಯಾವುದು ಹೌದು; ಅದು ಅಲ್ಲ ! ಯಾವುದು ಅಲ್ಲ; ಅದು ಹೌದು !'' ಈ ವಾಕ್ಯ ಕೇಳಲು, ಓದಲು, ಬರೆಯಲು ಬಹು ಸುಲಭ. ಆದರೆ ವಿಚಾರ ಮಂಥನಕ್ಕೀಡು ಮಾಡಿದರೆ ಈ ವಾಕ್ಯ ಬಹು ನಿಗೂಢ. ಈ ಮಾತೇ ಮಂತ್ರವಾಕ್ಯವಾಯಿತು. ಇದೇ ಮುಂದೆ ಬಿಡಿಸಲಾರದ ಒಗಟಾಯಿತು. ಇಂತಹ ದೈವಿಸದೃಶ್ಯ ವ್ಯಕ್ತಿಯ ಚರಿತ್ರೆಯನ್ನು

ಶಾಸ್ತ್ರಿಗಳು ಬಹುಸೊಗಸಾಗಿ ಚಿತ್ರಿಸಿದ್ದಾರೆ. ಸಂಪನ್ನ ಕುಟುಂಬದಲ್ಲಿ ಜನಿಸಿ, ಸಾಮಾನ್ಯನಂತೆ ಬದುಕಿ, ಸಿದ್ಧರಾಮನಂತೆ ಕುರಿಕಾಯ್ದು ಲೌಕಿಕ ಬದುಕಿನಿಂದ ದೂರವಾಗಿ ಐಹಿಕ ಬದುಕು ಪಡೆದುಕೊಂಡ ಅವರ ಯಶೋಗಾಥೆ ರೋಮಾಂಚನಕಾರಿಯಾಗಿದೆ. ಚರಿತ್ರೆಕಾರರು ಬಹು ಮನೋಹರವಾಗಿ ಆಶ್ಚರ್ಯಕರ ರೀತಿಯಲ್ಲಿ ಚಿತ್ರಿಸಿ ತಮ್ಮ ಪಾಂಡಿತ್ಯ ಮೆರೆದಿದ್ದಾರೆ.

ಲೇಖನ ಸಾಹಿತ್ಯ : ಈ ಭಾಗದಲ್ಲಿ ಒಟ್ಟು ೧೧ ಲೇಖನಗಳು ಸಮಾವೇಶ ಗೊಂಡಿವೆ. ಇಲ್ಲಿಯ ಬಹುಪಾಲು ಲೇಖನಗಳು ತೋಂಟದಾರ್ಯಪೀಠ ಪರಂಪರೆಯ ಕುರಿತು ರಚನೆಗೊಂಡಿವೆ. ಅದರಲ್ಲಿ ಶ್ರೀ ಜಗದ್ಗುರು ತೋಂಟದಾರ್ಯ ಪೀಠದ ಉಜ್ವಲ ಪರಂಪರೆ, ಮುಮುಕ್ಷುಗಳ ಪುಣ್ಯಕ್ಷೇತ್ರ, ಶಾಸ್ತ್ರಿಗಳ ಸಂಶೋಧನಾ ದೃಷ್ಟಿಯ ಫಲವಾಗಿದೆ. ನಿರಂಜನ ಪರಂಪರೆಯ ಬಗ್ಗೆ ಅವರಿಗಿದ್ದ ಜ್ಞಾನದ ಪ್ರಭುತ್ವವನ್ನು ತಿಳಿಯಬಹುದಾಗಿದೆ.

ಶಾಸ್ತ್ರಿಗಳು ಕೌದಿಮಹಾಂತ ಸ್ವಾಮಿಗಳು, ಡಂಬಳದ ಅರ್ಧನಾರೀಶ್ವರ ಮತ್ತು ಸಿಂದಗಿಯ ಪಟ್ಟಾಧ್ಯಕ್ಷರ ಕುರಿತು ಸವಿವರದ, ವ್ಯಕ್ತಿ ಆಧಾರಿತ ಲೇಖನಗಳು ಇದರಲ್ಲಿ ಸಮಾವೇಶಗೊಂಡಿವೆ. ಅಲ್ಲದೆ ವೀರಶೈವದರ್ಶನ, ಸಹಕಾರತತ್ವದ ಸಾಂಸ್ಕೃತಿಕ ಆಂದೋಲನ, ಸಹಕಾರಿ ಆಂದೋಲನ ಕುರಿತ ಲೇಖನಗಳು ಶಾಸ್ತ್ರಿಗಳಲ್ಲಿ ಇತಿಹಾಸ ಜ್ಞಾನದ ಆಳ ಅಗಲವನ್ನು ಎತ್ತಿ ತೋರಿಸುತ್ತವೆ. ಸಿದ್ಧಲಿಂಗಶಾಸ್ತ್ರಿಗಳು ಸಂಶೋಧಕ ರಾಗಿ, ಚರಿತ್ರಕಾರರಾಗಿ, ವಾಕ್ಪಟುಗಳಾಗಿ ಕನ್ನಡ ಸಾಹಿತ್ಯದ ಕಣಜವನ್ನು ಶ್ರೀಮಂತಗೊಳಿಸಿ ಅಜರಾಮರರಾಗಿದ್ದಾರೆ.

ಪ್ರಸ್ತುತ ''ಸಿದ್ಧಲಿಂಗಶಾಸ್ತ್ರಿಗಳ ಸಮಗ್ರ ಸಾಹಿತ್ಯ'' ಗ್ರಂಥದಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಎರಡು ಭಾಗಗಳನ್ನು ಮಾಡಲಾಗಿದೆ. ಮೊದಲನೆಯ ಭಾಗದಲ್ಲಿ ''ಪಂ. ಸಿದ್ಧಲಿಂಗಶಾಸ್ತ್ರಿಗಳ ಬದುಕು'', ಎರಡನೆಯ ಭಾಗದಲ್ಲಿ ''ಸಿದ್ಧಲಿಂಗ ಶಾಸ್ತ್ರಿಗಳ ಸಮಗ್ರ ಸಾಹಿತ್ಯ'' ಎಂದು ವಿಂಗಡಿಸಿ ಸಂಪಾದನೆ ಮಾಡಲಾಗಿದೆ.

ಈ ಕಾರ್ಯ ನನಗೆ ಅತ್ಯಂತ ತೃಪ್ತಿ ಹಾಗೂ ಸಂತೋಷವನ್ನುಂಟು ಮಾಡಿದೆ. ಈ ಕೃತಿಯಲ್ಲಿ ಸಂಪಾದಿಸಿದ ಮೊದಲನೆಯ ಭಾಗದಲ್ಲಿ ''ಸಿದ್ಧಲಿಂಗಶಾಸ್ತ್ರಿಗಳ ಬದುಕು'' ಅವರ ಚಿರಂಜೀವಿಗಳಾದ ಶ್ರೀ ಮಹಾಂತೇಶ ಹೊಸಮಠ ವಕೀಲರು ಬರೆದಿದ್ದಾರೆ. ಇಲ್ಲಿ ಸಂಪಾದಕನಾಗಿ ಸಿದ್ಧಲಿಂಗ ಶಾಸ್ತ್ರಿಗಳ ಬದುಕು ಕುರಿತ ಬರಹದಲ್ಲಿ ನಾನು ಯಾವುದೇ ಹಸ್ತಕ್ಷೇಪ ಮಾಡಿರುವದಿಲ್ಲ. ಕಾರಣವೆಂದರೆ ನನಗಿಂತಲೂ ಸಿದ್ಧಲಿಂಗ ಶಾಸ್ತ್ರಿಗಳನ್ನು ಅತೀ ಹತ್ತಿರದಿಂದ ಕಂಡವರು ಮತ್ತು ಅವರ ಪ್ರೀತಿಯ ಮಗ ಮಹಾಂತೇಶ ವಕೀಲರು. ಅವರ ಇಚ್ಛೆಯ ಮೇರೆಗೆ ಶಾಸ್ತ್ರಿಗಳ ಜೀವನ ಚರಿತ್ರೆಯಲ್ಲಿ ಯಾವುದೇ ಬದಲಾವಣೆ ಮಾಡದೇ ಯಥಾಪ್ರಕಾರ ಸಂಗ್ರಹಿಸ ಲಾಗಿದೆ. ಇನ್ನುಳಿದ ಭಾಗದಲ್ಲಿ ಸಿದ್ಧಲಿಂಗಶಾಸ್ತ್ರಿಗಳ ಸಾಹಿತ್ಯವನ್ನು ಒಂದೆಡೆ ತಂದ ಅಪ್ಯಾಯಮಾನವಾದ ಸಂತೋಷ ನನಗಿದೆ.

ಕೃತಜ್ಞತೆಗಳು :

- ಈ ಕೃತಿಯನ್ನು ಸಿದ್ಧಪಡಿಸಲು ಪ್ರೇರಣೆ ನೀಡಿದ್ದಲ್ಲದೆ ಅರ್ಥಪೂರ್ಣ ಆಶೀರ್ವಾದ ರೂಪದ ಶುಭನುಡಿಯನ್ನು ಸದಾಶಯವನ್ನು ಬರೆದುಕೊಟ್ಟ ಸಾಮಾನ್ಯರ ಸ್ವಾಮೀಜಿ, ಕೋಮುಸೌಹಾರ್ದದ ಹರಿಕಾರರು ನನ್ನಂತ, ನಮ್ಮಂತಹ ಭಕ್ತರ ಬಾಳಿಗೆ ಬೆಳಕಾಗಿರುವ ಹಾಗೂ ನನ್ನ ಬದುಕಿಗೆ ಆಸರೆ ಕಲ್ಪಿಸಿದ ಅಂತಃಕರುಣೆಯ ಅವಿರಳ ಪರಂಜ್ಯೋತಿ ಸ್ವರೂಪಿಗಳಾದ ಗದುಗಿನ ತೋಂಟದಾರ್ಯಮಠದ ಜಗದ್ಗುರುಗಳಾದ ಪೂಜ್ಯ ಶ್ರೀ ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರಿಗೆ ಭಕ್ತಿಪೂರ್ವಕ ಶರಣು ಶರಣಾರ್ಥಿಗಳು.
- ಈ ಪುಸ್ತಕವನ್ನು ಹೊರಬರಲು ಎಲ್ಲ ದೃಷ್ಟಿಯಿಂದಲೂ ಸಲಹೆ ಸೂಚನೆಯನ್ನು ನೀಡಿ, ಈ ಕೃತಿಯನ್ನು ಸಿದ್ಧಲಿಂಗಶಾಸ್ತ್ರಿಗಳ ಟ್ರಸ್ಟವತಿಯಿಂದ ಪ್ರಕಟಪಡಿಸಲು ಶ್ರಮಿಸಿದ, ಶಾಸ್ತ್ರಿಗಳ ಬಗ್ಗೆ ಅಪಾರ ಗೌರವ ಆದರಗಳನ್ನು ಹೊಂದಿರುವ ಸಾಮಾನ್ಯರ ಸ್ವಾಮೀಜಿಗಳಾದ ಪೂಜ್ಯ ಪ್ರಭುದೇವ ಶ್ರೀಗಳಿಗೆ ಅನಂತ ಪ್ರಣಾಮಗಳು.
- ಈ ಕೃತಿಗೆ ಸುಂದರವಾದ ನಿರ್ದೇಶಕರ ಮಾತುಗಳನ್ನು ಬರೆದು ಹುರುದುಂಬಿಸಿ, ಕೃತಿಯುದ್ದಕ್ಕೂ ಸಲಹೆ ಸೂಚನೆಗಳನ್ನು ನೀಡಿದ ಸಂಶೋಧಕರೂ ಹಾಗೂ ಆತ್ಮೀಯ ಮಿತ್ರರಾದ ಡಾ. ಕೆ. ರವೀಂದ್ರನಾಥ ಅವರಿಗೂ
- ನನ್ನೆಲ್ಲ ಕಾರ್ಯಗಳಿಗೆ ಬೆನ್ನು ತಟ್ಟಿ ಪ್ರೋತ್ಸಾಹಿಸುತ್ತಿರುವ ನಾಡಿನ ಖ್ಯಾತ ಸಾಹಿತಿಗಳಲ್ಲಿ ಒಬ್ಬರಾದ ಪ್ರಾ. ಚಂದ್ರಶೇಖರ ವಸ್ತ್ರದ ಅವರಿಗೆ, ಜಗದ್ಗುರು ತೋಂಟದಾರ್ಯಮಠದ ದಕ್ಷ ಆಡಳಿತಾಧಿಕಾರಿಗಳೂ ನಮ್ಮೆಲ್ಲರಿಗೂ ಆದರ್ಶ ಪ್ರಾಯರೂ, ಸರಳ ಸಜ್ಜನಿಕೆಯ ಪ್ರಾ. ಎಸ್.ಎಸ್. ಪಟ್ಟಣಶೆಟ್ಟಿ ಅವರಿಗೆ ಹಾಗೂ ಈ ಕೃತಿ ಸಂಪಾದಿಸಿಕೊಡಲು ಪ್ರೀತಿಪೂರ್ವಕ ಒತ್ತಾಸೆ ಮಾಡಿದ ಜಗದ್ಗುರು ತೋಂಟದಾರ್ಯ ಶ್ರೀಮಠದ ಮ್ಯಾನೇಜರರಾದ ಶ್ರೀ ಎಮ್.ಎಸ್. ಅಂಗಡಿ ಮತ್ತು ಕಾರ್ಯದರ್ಶಿಗಳಾದ ಶಿವನಗೌಡ ಗೌಡರ ಅವರಿಗೆಲ್ಲರಿಗೂ
- ಹಲವು ಸಂದರ್ಭದಲ್ಲಿ ಮಾರ್ಗದರ್ಶನ ಮಾಡಿದ ಪೂಜ್ಯ ಶ್ರೀ ಗುರುಸ್ವಾಮಿ ಕಲಕೇರಿ ಇವರಿಗೂ ಹಾಗೂ ಕರಡಚ್ಚು ತಿದ್ದುವಲ್ಲಿ ಸಹಾಯ ಸಹಕಾರ ನೀಡಿದ ಸಂಶೋಧಕ ಮಿತ್ರ ಪ್ರೊ. ಎಸ್.ಎಮ್. ಮಠ ಅವರಿಗೂ

- ಸಿದ್ಧಲಿಂಗ ಶಾಸ್ತ್ರಿಗಳ ಅಪ್ರಕಟಿತ ಕೆಲವು ಲೇಖನಗಳನ್ನು ಒದಗಿಸಿಕೊಟ್ಟ ಸಿದ್ಧಲಿಂಗಶಾಸ್ತ್ರಿಗಳ ಚಿರಂಜೀವಿಗಳಾದ ಹೈಕೋರ್ಟಿನ ವಕೀಲರಾದ ಶ್ರೀ ಮಹಾಂತೇಶ ಹೊಸಮಠರಿಗೂ ಹಾಗೂ ಸಿದ್ಧಲಿಂಗಶಾಸ್ತ್ರಿಗಳ ಬಗ್ಗೆ ಅಪಾರ ಗೌರವ ಹೊಂದಿರುವ ಶ್ರೀ ಚನ್ನಯ್ಯ ಹಿರೇಮಠ ಅವರಿಗೂ
- ಈ ಕೃತಿಯನ್ನು ಅಂದವಾಗಿ ಅಕ್ಷರ ಜೋಡಣೆಗೈದ ನೇಕಾರ ನಗರ–ಬೆಟಗೇರಿಯ ನಾರಾಯಣ ಡಿ.ಟಿ.ಪಿ. ಸೆಂಟರ್ ಅವರಿಗೂ ಮತ್ತು ಅಲ್ಪಾವಧಿಯಲ್ಲಿ ಸುಂದರವಾಗಿ ಮುದ್ರಿಸಿದ ತ್ವರಿತ ಮುದ್ರಣಾಲಯದ ಶ್ರೀ ಅಶೋಕ ಮತ್ತು ಪರಶುರಾಮ ಸಹೋದರರಿಗೂ ಹಾಗೂ ಮುಖಪುಟ ವಿನ್ಯಾಸಗೊಳಿಸಿದ ಕೆ.ಕೆ. ಮಕಾಳೆಯವರಿಗೂ
- ನನ್ನ ಸಾಹಿತ್ಯ ಕಾರ್ಯದ ಅಳಿಲು ಸೇವೆಗೂ ತನ್ನೆಲ್ಲ ಕೆಲಸ ಕಾರ್ಯಗಳ ಮಧ್ಯ ನನ್ನ ಕೆಲಸಗಳಿಗೆ ಸ್ಫೂರ್ತಿಯಾದ ನನ್ನ ಬಾಳ ಸಂಗಾತಿ ಶ್ರೀಮತಿ ಸುನಿತಾ ಇವರಿಗೂ

ಅನಂತಾನಂತ ಹೃದಯಸ್ಪರ್ಶಿ ಕೃತಜ್ಞತೆಗಳು.

**– ಡಾ. ಪಂಡಿತ ಕೆ. ರಾಠೋಡ**

■■

*

## ಪರಿವಿಡಿ

ಪು.ಸಂ.

■■

*

## ಪಂ. ಸಿದ್ಧಲಿಂಗಶಾಸ್ತ್ರಿಗಳ ಬದುಕು

• ಮಹಾಂತೇಶ ಹೊಸಮಠ, ವಕೀಲರು

ಎಡೆಯೂರ, ಡಂಬಳ, ಗದಗ ತೋಂಟದಾರ್ಯ ಸಂಸ್ಥಾನ ಮಠದ ೧೬ನೆಯ ಪೀಠಾಧಿಪತಿ ಸಿದ್ಧೇಶ್ವರ ಜಗದ್ಗುರುಗಳ ಕಾಲದಲ್ಲಿ ಶ್ರೀಮಠ ಎಲ್ಲಾ ರಂಗಗಳಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಜಗದ್ಗುರು ಸಿದ್ಧೇಶ್ವರಸ್ವಾಮಿಗಳು ಒಂದು ಸಾಯಂಕಾಲ ದೀಪಾರಾಧನೆಯ ಸಮಯದಲ್ಲಿ ವಾಡಿಕೆಯಂತೆ ಸದರಿನಲ್ಲಿ ವಿರಾಜಮಾನ ರಾಗಿದ್ದರು. ನಿತ್ಯದ ಪರಿಪಾಠದಂತೆ ಶ್ರೀಮಠದ ವಿದ್ಯಾರ್ಥಿಗಳು ಸದರಿನಲ್ಲಿ ಸಾಲಾಗಿ ಕುಳಿತುಕೊಂಡು ಮಂಗಲ ಹಾಡುತ್ತಿದ್ದರು. ಪ್ರತಿನಿತ್ಯ ಸಿದ್ಧಲಿಂಗೇಶ್ವರರ ಸ್ತುತಿಗೀತೆಯೋ, ಬಸವಣ್ಣನವರ ವಚನವೋ, ಶರಣರ ಸುಪ್ರಭಾತವೋ ಹಾಡುತ್ತಿದ್ದರು. ಅಂದು ವಿಶೇಷ ಕಂಠಶೃತಿಯಿಂದ ಕರಬಸಯ್ಯ ಬಾಲಕನಿಂದ ಮಂಗಲ ಗೀತೆ ಆಯಿತು. ಅದು ನಿತ್ಯದ ಮಂಗಳ ಗೀತೆಯಂತೆ ಇರಲಿಲ್ಲ. ಅದು ನಿತ್ಯ ಹೊರಡುವ ಕಂಠಧ್ವನಿಯಾಗಿರಲಿಲ್ಲ. ಈ ಕಂಠಶೃತಿಯಿಂದ ಕರ್ನಾಟಕ ಸಂಗೀತದ ಅತಿ ಪ್ರಸಿದ್ಧರಾಗಗಳಲ್ಲಿ ಭೈರವಿಯು ಒಂದೆಂಬತಿತ್ತು. ಈ ರಾಗವನ್ನು ಬಸವಣ್ಣನವರ ವಚನಕ್ಕೆ ಅಳವಡಿಸಿ ಮಂಗಲ ಗೀತೆ ಹಾಡಿದಾಗ ಶ್ರೀಗಳು ಭಾವಲೋಕದಲ್ಲಿ ತೇಲಾಡತೊಡಗಿದರು. ಆ ಬಾಲಕ ಹಾಡಿದ ಮಂಗಲ ಗೀತೆಯಲ್ಲಿ ಭಕ್ತನ ಭಕ್ತಿಯ ಮೇರೆಯೇ ಕೇಳಿಬರುತ್ತಿತ್ತು.

ಈ ಮಂಗಲ ''ಯಾರು ಹಾಡಿದರು ? ಹಾಡಿದ ಬಾಲಕನಾರು ? ಎಂದು ವಿದ್ಯಾರ್ಥಿಗಳಿಗೆ ಕೇಳಿದರು''. ಆಗ ಒಬ್ಬ ವಿದ್ಯಾರ್ಥಿ ಎದ್ದು ''ಬುದ್ಧಿ ಈ ಬಾಲಕ ಮಠದಲ್ಲಿರುವ ಅನ್ನದಾನಿ ಮರಿದೇವರ ಅಣ್ಣನ ಮಗ. ಈತನ ತಂದೆ–ತಾಯಿ ತೀರಿಕೊಂಡಿದ್ದರಿಂದ ಇವನ ಊರವರು ಇಲ್ಲಿಗೆ ಕರೆತಂದು ಅನ್ನದಾನ ಮರಿದೇವರಿಗೆ ಒಪ್ಪಿಸಿ ಹೋಗಿದ್ದಾರೆ'' ಎಂದು ಶ್ರೀಗಳಲ್ಲಿ ಅರುಹಿದರು.

ಒಮ್ಮೆ ಕದರ ಮಂಡಲಗಿಯ ಸುಪ್ರಸಿದ್ಧ ಸಂಗೀತ ವಿದ್ವಾಂಸರಾದ ಬಸಪ್ಪ ಗವಾಯಿಗಳು ಪೂಜ್ಯರ ದರ್ಶನ ಪಡೆಯಲು ಗದುಗಿನ ಸಂಸ್ಥಾನ ಮಠಕ್ಕೆ ಆಗಮಿಸಿದರು. ಅವರು ದಕ್ಷಣಾದಿ ಸಂಗೀತದಲ್ಲಿ ಪ್ರಸಿದ್ಧಿ ಪಡೆದಿದ್ದರು. ಅವರು ಭೈರವಿ ರಾಗದಲ್ಲಿ ವಿಶೇಷವಾಗಿ ಪಳಗಿದ್ದರು. ಹೀಗಾಗಿ ಅವರಿಗೆ 'ಭೈರವಿ' ರಾಗದ ಬಸಪ್ಪನವರೆಂದೇ ಸಂಗೀತ ಲೋಕದ ಜನ ಕರೆಯುತ್ತಿದ್ದರು. ದರ್ಶನಾರ್ಥಿಯಾಗಿ ಬಂದ ಬಸಪ್ಪ ಗವಾಯಿಗಳು ಸನ್ನಿಧಿಗಳ ಸಾನ್ನಿಧ್ಯದಲ್ಲಿ ಅಂದು ತಮ್ಮ ಸಂಗೀತ ಸೇವೆಯನ್ನು ಸಲ್ಲಿಸಿ ಸಂಸ್ಥಾನ ಮಠದಿಂದ ಸಂಭಾವನೆ, ಆಶೀರ್ವಾದ ಶ್ರೀಗಳವರಿಂದ

ಲಭಿಸಿತು. ನಂತರ ಶ್ರೀಗಳು ತಮ್ಮ ಆಶೀರ್ವಚನದಲ್ಲಿ ಬಸಪ್ಪ ಗವಾಯಿಗಳನ್ನು ಉದ್ದೇಶಿಸಿ ''ಬಸಪ್ಪನವರೇ ನಿಮಗೊಂದು ಕೆಲಸ ಒಪ್ಪಿಸುತ್ತೇನೆ. ಇಲ್ಲಿ ನಿಂತಿರುವ ಈ ಬಾಲಕ ಸುಪ್ರಸಿದ್ಧ ಸಂಗೀತ ಘರಾಣಾ ಮನೆತನದವನು. ಈ ಬಾಲಕನ ತಂದೆ ಚನ್ನಬಸಯ್ಯನವರು ಪೀಟೀಲು ವಾದಕರು. ಇವರು ಈದೀಗ ಶಿವಾಧೀನರಾದ ಕಾರಣ ಈಗ ನಮ್ಮ ಮಠದಲ್ಲಿದ್ದಾನೆ. ಇವನ ತಂದೆಯ ಶಿಷ್ಯಂದಿರಾದ ಹಡಗಲಿ ಕಪ್ಪತ್ತಯ್ಯ, ಒಂಟೆತ್ತಿನಮಠದ ಬಸಯ್ಯ ಮುಂತಾದವರು ಪಿಟೀಲು ವಾದನದಲ್ಲಿ ಹೆಸರುವಾಸಿಯಾಗಿದ್ದಾರೆ. ಅವರ ಬಳಿಯೇ ಪಿಟೀಲು ಅಭ್ಯಾಸಕ್ಕೆ ಕಳಿಸಬಹುದು. ಆದರೆ ಈ ಬಾಲಕನಿಗೆ ದೈವದತ್ತವಾಗಿ ಸುಮಧುರ ಕಂಠಪ್ರಾಪ್ತವಾಗಿದೆ. (ಸುರೇಲಿ ಅವಾಜ್) ಅದು ವ್ಯರ್ಥವಾಗಬಾರದು. ಅದಕ್ಕೆ ನೀವು ಇವನನ್ನು ಸಂಗೀತ ಅಭ್ಯಾಸಕ್ಕೆ ತಮ್ಮ ಜೊತೆಯಲ್ಲಿ ಕರೆದುಕೊಂಡು ಹೋಗಿ ಸಂಗೀತ ವಿದ್ವಾಂಸನನ್ನಾಗಿ ಮಾಡಿ ನಮ್ಮ ಮಠಕ್ಕೆ ಮರಳಿ ಕಳಿಸಿಕೊಡಿ'' ಎಂದು ಅಪ್ಪಣೆ ಮಾಡಿದರು. ಪೂಜ್ಯರ ಈ ಅಪ್ಪಣೆಗೆ ಬಸಪ್ಪ ಗವಾಯಿಗಳು ಪ್ರತಿಯಾಗಿ ''ಈ ಮಹಾಸೇವೆ ನನಗೆ ದಯಪಾಲಿಸಿದ್ದು ನನ್ನ ಕರ್ತವ್ಯ ಭಾಗ್ಯ. ಸತ್ಪಾತ್ರದಲ್ಲಿ ವಿದ್ಯಾದಾನ ಮಾಡುವ ಅವಕಾಶ ತಮ್ಮ ಕೃಪೆಯಿಂದ ದೊರೆಯಿತು. ನಾನು ಈಗಾಗಲೇ ಸಂಪಾದಿಸಿದ ವಿದ್ಯೆಯನ್ನೆಲ್ಲ ಈ ಬಾಲಕನಿಗೆ ಧಾರೆಯೆರೆದು ಸಂಗೀತ ವಿದ್ವಾಂಸನನ್ನಾಗಿ ಮಾಡುವೆ'' ಎಂದು ಹೇಳಿ ಸನ್ನಿಧಿಯ ಅಪ್ಪಣೆ ಪಡೆದು ಬಾಲಕನಿಗೆ ಕರೆದುಕೊಂಡು ಕದರಮಂಡಲಗಿಗೆ ಹೋದರು.

ಬಾಲಕ ಕರಬಸಯ್ಯನ ಐದಾರು ಗಂಟೆಗಳ ಕಾಲದವರೆಗೆ ಕದರ ಮಂಡಲಗಿಯಲ್ಲಿ ಸಂಗೀತ ಶಿಕ್ಷಣ ದಿನಂ ಪ್ರತಿ ನಡೆಯ ತೊಡಗಿತು. ಬಾಲಕನ ಕಂಠಧ್ವನಿ ಕೇಳಿ ಬಸಪ್ಪನವರು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಆ ಕಾಲದ ದಕ್ಷಿಣಾದಿ ಸಂಗೀತದ ತವರ್ಮನೆಯಾದ ತಂಜಾವರಂಗೆ ತಮ್ಮ ಸ್ವಂತ ಖರ್ಚಿನಲ್ಲಿ ಕಳಿಸಿಕೊಟ್ಟರು. ಹಾಗೆಯೇ ಸಿದ್ಧೇಶ್ವರ ಜಗದ್ಗುರುಗಳು ಪ್ರತಿ ತಿಂಗಳ ಖರ್ಚಿಗೆ ಹಣ ಕಳಿಸುತ್ತಿದ್ದರು. ಗುರುಗಳು ಹಾಕಿಕೊಟ್ಟ ಮಾರ್ಗದರ್ಶನದಂತೆ ಸಮಯ ವ್ಯರ್ಥ ಹಾಳು ಮಾಡದೆ ತಂಜಾವರಂದಲ್ಲಿ ಸಂಗೀತ ಶಿಕ್ಷಣ ಪೂರೈಸಿಕೊಂಡು ಸಂಗೀತ ವಿದ್ವಾನನಾಗಿ ಮರಳಿ ಕದರ ಮಂಡಲಗಿಗೆ ಬಂದನು. ಗುರುಗಳು ಕರಬಸಯ್ಯನನ್ನು ಕರೆದುಕೊಂಡು ಗದುಗಿನ ಸಂಸ್ಥಾನದ ಅಧಿಪತಿಗಳಾದ ಪೂಜ್ಯ ಸಿದ್ಧೇಶ್ವರ ಜಗದ್ಗುರುಗಳ ಬಳಿಗೆ ಬಂದು. ''ಬುದ್ಧಿ ತಾವು ಅಪ್ಪಣೆ ಮಾಡಿದಂತೆ ಬಾಲಕನಿಗೆ ಸಂಗೀತ ವಿದ್ವಾನನ್ನಾಗಿ ಮಾಡಿ ನಿಮಗೆ ಒಪ್ಪಿಸುತ್ತಿದ್ದೇನೆ'' ಎಂದು ಪೂಜ್ಯರಿಗೆ ಒಪ್ಪಿಸಿ ಹೋದರು.

ಬಾಲಕ ಕರಬಸಯ್ಯ ಈ ಹೊತ್ತಿಗಾಗಲೇ 'ಗವಾಯಿ' ಎಂಬ ನಾಮ ಹೊತ್ತು ಅಲ್ಲಿ ಇಲ್ಲಿ ನಡೆಯುವ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಸಂಗೀತ ಕಾರ್ಯಕ್ರಮಗಳನ್ನು ನೀಡತೊಡಗಿದನು. ಈತನ ಸಂಗೀತ ಕೇಳಿದ ಜನರು ಶ್ರೀಗಳವರ ಮುಂದೆ ಗುಣಗಾನ ಮಾಡತೊಡಗಿದರು. ಆಗ ಶ್ರೀಗಳು ಸಂಸ್ಥಾನ

ಮಠದಲ್ಲಿ ಸಂಗೀತ ಪಾಠಶಾಲೆ ಸ್ಥಾಪಿಸಿ ಅದರ ಶಿಕ್ಷಕರನ್ನಾಗಿ ನೇಮಕ ಮಾಡಿದರು. ಮುಂದೆ ಶ್ರೀ ಜಗದ್ಗುರು ತೋಂಟದಾರ್ಯಮಠದ 'ಗವಾಯಿ'ಗಳೆಂದು ಪ್ರಸಿದ್ಧಿಗೆ ಬಂದರು.

ಕ್ರಿ.ಶ. ೧೯೭೪ರ ಕಾಲ ಇಡೀ ದೇಶ ಬರಗಾಲದಿಂದ ತತ್ತರಿಸುತ್ತಿತ್ತು ಮೃತ್ಯುಂಜಯ ಸ್ವಾಮಿಗಳು ಕಾಲವಾಗಿ ತೋಂಟದಾರ್ಯಸಂಸ್ಥಾನಮಠದ ಪೂಜ್ಯ ಡಾ|| ಸಿದ್ಧಲಿಂಗ ಮಾಹಾಸ್ವಾಮಿಗಳವರು ೧೯ನೆಯ ಪೀಠಾಧಿಕಾರಿಯಾಗಿ ಸಿಂಹಾಸನ ರೋಹಣವಹಿಸಿಕೊಳ್ಳುವ ಸುಸಂದರ್ಭ. ಈ ಕಾರಣವಾಗಿ ಪೂರ್ವಭಾವಿಯಾಗಿ ಶ್ರೀಮಠದ ಪದ್ಧತಿಯಂತೆ ಸಿದ್ಧೇಶ್ವರ ಪುರಾಣ ಹಚ್ಚಿದ್ದರು. ಈ ಪುರಾಣ ಪ್ರವಚನವನ್ನು ಪಂ|| ಪುಟ್ಟರಾಜ ಕವಿ ಗವಾಯಿಗಳು ಪ್ರವಚನ ಮಾಡುತ್ತಿದ್ದರು. ಪ್ರವಚನ ಮುಗಿಸಿ ಪಂ|| ಪುಟ್ಟರಾಜರು ತಮ್ಮ ಹಾಗೂ ತೋಂಟದಾರ್ಯ ಸಂಸ್ಥಾನಮಠದ ಸಂಬಂಧವನ್ನು ಮೇಲಕು ಹಾಕುತ್ತ "ನಮ್ಮ ಗುರುಗಳಾದ ಪಂಡಿತ ಪಂಚಾಕ್ಷರಿ ಗವಾಯಿಗಳವರು ತೋಂಟದಾರ್ಯ ಮಠದ ಸುಪ್ರಸಿದ್ಧ ಆಸ್ಥಾನ ಗವಾಯಿಗಳಾದ ಶ್ರೀ ಕರಬಸಯ್ಯನವರಿಂದ ಕೆಲವು ದಕ್ಷಿಣಾದಿ ಸಂಗೀತ ಕಲೆಗಳನ್ನು ಹೇಳಿಸಿಕೊಂಡಿರುವರು. ಹೀಗಾಗಿ ಈ ಮಠ ನಮ್ಮ ಮಠ" ಎಂದು ಹೇಳಿದ ಕೂಡಲೇ ಸಭಿಕರು ಚಪ್ಪಾಳೆ ಕರತಾಡನ ಮೊಳಗಿತು. ಗದುಗಿನ ತೋಂಟದಾರ್ಯ ಸಂಸ್ಥಾನಮಠ ಪ್ರಾಚೀನ ಕಾಲದಿಂದಲೂ ಸಾಹಿತಿಗಳಿಗೆ, ಕಲಾವಿದರಿಗೆ, ಸಂಶೋಧಕರಿಗೆ ಪ್ರೋತ್ಸಾಹ ನೀಡುತ್ತಲೆ ಬಂದಿದೆ. ಹದಿನಾರನೇ ಪೀಠಾಧೀಶರಾದ ಜಗದ್ಗುರು ಶ್ರೀ ಸಿದ್ಧೇಶ್ವರ ಸ್ವಾಮಿಗಳು ಸಂಗೀತ ವಿದ್ಯಾಭಿವೃದ್ಧಿಗಾಗಿ ಶ್ರೀಮಠದಲ್ಲಿ ಸಂಗೀತ ಶಾಲೆಯನ್ನು ಸ್ಥಾಪಿಸಿ ಅದಕ್ಕೆ ಕರಬಸಯ್ಯ ಗವಾಯಿಗಳಿಗೆ ಶಿಕ್ಷಕರನ್ನಾಗಿ ನೇಮಿಸಿ ನಂತರ ಪ್ರಾಚಾರ್ಯರಾಗಿ ಪದೋನ್ನತಿ ನೀಡಿ ಗೌರವಿಸಿದರು.

ಕರಬಸಯ್ಯ ಗವಾಯಿಗಳಿಗೆ ಸಂಗೀತ ಶಿಕ್ಷಣದ ಧಾರೆ ಎರೆದವರು ಒಬ್ಬರಾದರೆ. ಆ ಸಂಗೀತವನ್ನು ದೇಶ ವಿದೇಶಗಳಲ್ಲಿ ನಿನಾದಿಸುವಂತೆ ಮಾಡಿದ ಕೀರ್ತಿ ತೋಂಟದಾರ್ಯ ಮಠಕ್ಕೆ ಸಲ್ಲುತ್ತದೆ.

### ಗವಾಯಿಗಳ ಸಂಗೀತ ಬೈಠಕ್ಕೆ ಪ್ರಯಾಣ :

ಪ್ರಾಥಃ ಕಾಲ ಇನ್ನೂ ಬೆಳ್ಳಿಚುಕ್ಕಿ ಮೀನುಗುತ್ತಿದೆ. ತಂಬೂರಿ ಶೃತಿಯನಾದ ಒಂದು ಕಡೆ, ತಬಲಾ ಪೆಟ್ಟಿಗೆ ಶೃತಿಗೆ ತಕ್ಕಂತೆ ಸುತ್ತಿಗೆ ತಲೆಬಡೆಯುತ್ತಿದೆ. ಹಾರ್ಮೋನಿಯಂ ಶೃತಿ ತಂಬೂರಿಯೊಡನೆ ರಿಂಗಣಿಸುತ್ತಿದೆ. ಬೆಳಗು ಮುಂಜಾನೆಯ ಪ್ರಶಸ್ತ ಶಾಂತ ಸಮಯದಲ್ಲಿ ಝೂಂ, ಝೂಂ ಎಂದು ಗುಂಞಗುಡುವ ಗವಾಯಿಗಳ ಕಂಠ ಶೃತಿಗೆ ಬೆಸುಗುಗೊಂಡಿದೆ. ಒಂದು ಕೋಣೆಯಲ್ಲಿ ಒಂದು ಗುಡಾರ ಹಾಸಿ ಅದರ ಮಧ್ಯದಲ್ಲಿ ಝರಿಪಂಚೆ, ರೇಶ್ಮೆಜುಬ್ಬಾ ತೊಟ್ಟುಕೊಂಡು ಎಡ ಹೆಗಲ ಮೇಲೆ ಗರಿಗರಿ ಶಲ್ಲೆ ಇಳಿಬಿಟ್ಟು, ಎಡಕಿವಿ ಮೇಲೆ ಕೈ ಹಚ್ಚಿ ಹಿಂದೂಸ್ತಾನಿ

ಬಿಲಾವಲ್ ರಾಗ ಆS ಆSSS ಆSSS ಎಂದು ಪ್ರಾರಂಭಿಸಿ ಸಂಗೀತದ ಎಲ್ಲಾ ಪ್ರಕಾರಗಳಲ್ಲಿ ಮೇಳೈಸಿ ಕೊನೆಗೆ ಚೀಜ್ ಮುಗಿದಾಗ ಆಗಲೇ ಮುಂಜಾನೆಯ ಆರು ಗಂಟೆಯಾಗಿತ್ತು. ಸರಿಯಾಗಿ ಎರಡು ಮೂರು ಗಂಟೆಗಳ ಸಮಯದವರೆಗೆ ರಾಗ ಝರಿ ಹರಿದದ್ದು ಹಾಡುವಾತನಿಗೂ ತಬಲಾ ಬಾರಿಸುವವನಿಗೆ ಮತ್ತು ಹಾರ್ಮೋನಿಯಂ ನುಡಿಸುವವನಿಗೂ ಸಮಯ ಕಳೆದಿದ್ದೆ ಅರಿವು ಇರಲಿಲ್ಲ. ಹಾರ್ಮೋನಿಯಂ ನುಡಿಸುವವನು ರಾಗದ ಏರಿಳಿತದ ಸಂದರ್ಭದಲ್ಲಿ ತನ್ಮಯರಾಗಿದ್ದರು. ಇದೆಲ್ಲ ಸುಮ್ಮನೆ ಮಾಡುತ್ತಿರಲಿಲ್ಲ. ಕರಬಸಯ್ಯ ಗವಾಯಿಗಳಿಗೆ ಗ್ವಾಲಿಯರದಿಂದ ಸಂಗೀತ ಬೈಠಕ್ಕೆ ಆಹ್ವಾನ ಬಂದಿತ್ತು. ಗ್ವಾಲಿಯರದ ಕಾರ್ಯಕ್ರಮಕ್ಕೆ ಕೇವಲ ಐದು ದಿನಗಳ ಕಾಲ ಮಾತ್ರ ಬಾಕಿ ಉಳಿದಿತ್ತು. ಈ ಕಾರಣದಿಂದ ಈ ಪ್ರಾಕ್ಟಿಸ್ ತಿಂಗಳಿಂದ ನಡೆದೆಯಿತ್ತು.

ಗ್ವಾಲಿಯರದ ಸಂಗೀತ ಕಛೇರಿ ಎಂದರೆ ಗಂಧರ್ವ ಲೋಕದ ಮನೆಯಂತಿತ್ತು. ಆ ಮನೆಯೇನು ಚಿಕ್ಕದಲ್ಲ. ಅದು ಅರಮನೆಯಾಗಿತ್ತು. ಆಳೆತ್ತರದ ಫೋಟೋಗಳು ನೇತಾಕಿದ್ದರು. ಮೈಸೂರು ಅರಮನೆಯಂತೆ ತೂಗು ತೊಟ್ಟಿಲು, ರಾಜಸ್ಥಾನದ ಅರಮನೆಯ ಉಡುಗೊರೆ, ಕುಶಲ ಕರ್ಮಿಗಳಿಂದ ಕುಸುರಿ ಮಾಡಿಸಿದ ಕಂಬಗಳು, ಅರಮನೆಯ ಮೂಲೆ ಮೂಲೆಯಲ್ಲಿ ತಂಬೂರಿ, ವೀಣೆ, ಸಾರಂಗಿ ವಯೋಲಿನ್, ತಬಲಾ, ಮೃದಂಗ, ಮದ್ದಳೆ ಮುಂತಾದ ವಾದ್ಯಗಳು. ಯಾರಾದರೂ ಹೊಸಬರು ಅಲ್ಲಿ ಹೋದರೆ ತಾನು ದಾರಿ ತಪ್ಪಿ ಯಾವುದಾದರೂ ರಾಜನ ಮನೆಗೆ ಬಂದೀನೇನೊ ಎಂದು ಅನ್ನಿಸುವಷ್ಟು ದೊಡ್ಡ ಮೊಗಸಾಲೆಯಾಗಿತ್ತು.

ಐದಾರು ಜನ ಪೂಜ್ಯರು ಕುಳಿತು ಪೂಜೆ ಮಾಡುವಷ್ಟು ವಿಶಾಲವಾದ ದೇವರ ಕೋಣೆ, ೧೦–೧೫ ಜನರು ನಿಂತು ಅಡಿಗೆ ಮಾಡುವಷ್ಟು ವಿಶಾಲವಾದ ಅಡಿಗೆ ಮನೆ, ೨೦–೨೫ ಜನ ಕುಳಿತುಕೊಳ್ಳುವಷ್ಟು ಅಚ್ಚುಕಟ್ಟಿನ ಹರಾಜ, ಬಾಗಿಲ ಬಳಿಯಲ್ಲೆ ಬಣ್ಣದ ದಮಣೆಗಾಡಿ. ಅಂತಹ ವೈಭವದಿಂದ ಕೂಡಿದ ಆ ಅರಮನೆಯು ಸಂಗೀತ ಸಾಮ್ರಾಟರಿಂದ ಕೂಡುವ ಸ್ಥಳ. ಗದುಗಿನ ಶಹಪೂರ ಪೇಟೆಯ ನಿವಾಸಿ ಶ್ರೀಮಠದ ಆಸ್ಥಾನ ಸಂಗೀತ ವಿದ್ವಾಂಸ ಕರಬಸಯ್ಯ ಗವಾಯಿಯವರಿಗೆ ಬುಲಾವಾಗಿ ಅಲ್ಲಿ ತಮ್ಮ ಸಂಗೀತ ಸಭೆ ನಡೆಸಿ ದೇಶ ವಿದೇಶದಿಂದ ಬಂದ ಸಂಗೀತ ಆಸಕ್ತರಿಗೆ ರಸದೌತಣ ನೀಡಿದರು. ಆ ಸಂಗೀತ ಬೈಠಕದಲ್ಲಿ ಎಲ್ಲರಿಂದ ಭೇಸ್ ಎನಿಸಿಕೊಂಡು ಪ್ರತಿಸ್ಪರ್ಧಿಗಳನ್ನು ಗೆದ್ದು, ಗ್ವಾಲಿಯರ ಮಹಾರಾಜರಿಂದ ಚಿನ್ನದ ಕಡಗ, ಚಿನ್ನದ ಕಂಠಿಹಾರ, ವಜ್ರದ ಉಂಗುರು, ರಾಜಮರ್ಯಾದೆಯಿಂದ ಸನ್ಮಾನಿಸಿಕೊಂಡು ಗದುಗಿನ ಶ್ರೀಮಠಕ್ಕೆ ಮರಳಿದರು. ಶ್ರೀ ಮಠದ ಆರಾಧ್ಯದೈವ ಸಿದ್ಧಲಿಂಗರ ಗದ್ದುಗೆಯ ಎದುರಲ್ಲಿ ನಿಂತು ಫಲ, ಪುಷ್ಪ ಏರಿಸಿ, ಕರ್ಪೂರ ಹಚ್ಚಿ 'ಯಮನ್' ಹಾಗೂ ಭೈರವಿರಾಗದಲ್ಲಿ ಮಂಗಳ ಹಾಡುತ್ತ ನನ್ನ ಈ ಸಾಧನೆಗೆ ಮಹಾಯೋಗಿ ಸಿದ್ಧಲಿಂಗನ ಆಶೀರ್ವಾದವೇ ಕಾರಣವೆಂದು ತುಂಬು ಭಕ್ತಿಯಿಂದ

ಪೂಜೆ ಸಲ್ಲಿಸಿದರು. ಅಷ್ಟರಲ್ಲಿ ಬಿಳಿಬಟ್ಟೆ ಹಾಕಿದ ಕೆಂಪು ಪೇಠಾ ಧರಿಸಿದ ಬಿಲ್ಲೇದಾರ ಬಂದು ''ಗವಾಯಿಯವರೇ ಪೂಜ್ಯರು ತಾವು ಬಂದ್ರೇನು ಅಂತಾ ಕರಿತಿದ್ದಾರೆ. ಪೂಜ್ಯರು ಸದರಿನಲ್ಲಿ ಆಸೀನರಾಗಿದ್ದಾರೆ'' ಎಂದು ಹೇಳಿದನು. ಆಯ್ತು ಬಂದೆ ಎಂದು ಆತನ ಹಿಂದೆ ಹಿಂದೆ ಪೂಜ್ಯರ ಬಳಿಗೆ ಹೋದರು.

ಗದುಗಿನ ತೋಂಟದಾರ್ಯಮಠದ ಸದರು ನೋಡಲು ಬಲು ಚೆಂದ. ಯಾವುದೇ ಅರಸೊತ್ತಿಗೆಯ ಸದರಿಗೆ ಕಮ್ಮಿಯಿಲ್ಲ. ಅಲ್ಲಿ ಪೂಜ್ಯ ಶ್ರೀಸಿದ್ಧೇಶ್ವರ ಜಗದ್ಗುರುಗಳು ಆಸೀನರಾಗಿದ್ದಾರೆ. ಆಳೆತ್ತರದ ವಜ್ರಕಾಯ, ಕಾವಿಹೊದ್ದ ವಿಶಾಲವಾದ ನೊಸಲ, ತ್ರಿನೇತ್ರದಂತೆ ವಿಭೂತಿಯ ತ್ರಿಪುಂಡ, ಶಿವಸ್ವರೂಪವೇ ಮೈದಳೆದಂತೆ; ಸಿಂಹಾಸನದ ಮೇಲೆ ಕುಳಿತ್ತಿದ್ದರು. ಅವರಲ್ಲಿಯ ಶಿವತೇಜ ಕಳೆ ಎಂಥವರನ್ನು ತಲೆಬಾಗಿಸುತ್ತಿತ್ತು.

ಗವಾಯಿಗಳ ಸದರಿನಲ್ಲಿ ಪ್ರವೇಶವಾಗುತ್ತಿದ್ದಂತೆ ಪೂಜ್ಯರ ಹಿಂದೆ ನಿಂತ ಪಂಡಿತರು ಮಂತ್ರೋಚ್ಚಾರಣೆ ಮಾಡುತ್ತಿದ್ದರು. ಗವಾಯಿಗಳು ಪೂಜ್ಯರ ಪಾದಕಮಲಗಳಿಗೆ ಹಣೆಮಣಿದು ಭಕ್ತಿಪೂರ್ವಕವಾದ ಪ್ರಣಾಮ ಸಲ್ಲಿಸಿದರು. ಆಗ ಪೂಜ್ಯ ಜಗದ್ಗುರುಗಳಿಂದ ಝರಿ, ಶಾಲು, ಹಣ್ಣಿನ ತಟ್ಟೆ, ದ್ರಾಕ್ಷಿ, ಗೊಡಂಬಿ ತುಂಬಿದ ಗಂಗಾಳವನ್ನು ಆಶೀರ್ವದಿಸಿದರು. ನಂತರ ''ಗವಾಯಿಗಳೇ ನಿಮ್ಮ ಸಂಗೀತ ಸಾಧನೆಯಿಂದ ಶ್ರೀಮಠದ ಕೀರ್ತಿ ದೇಶದಲ್ಲೆಡೆ ದೇದಿಪ್ಯವಾಯ್ತು. ತಾವು ಗ್ವಾಲಿಯರ ಮಹಾರಾಜರ ಬೈಠಕ ಸ್ವೀಕರಿಸಿ ಒಳ್ಳೆ ಕೆಲಸ ಮಾಡಿದ್ದೀರಿ. ನಿಮ್ಮ ನಯ ವಿನಯಕ್ಕೆ ಆ ಮಹಾರಾಜರು ನಿಮ್ಮನ್ನು ಆಹ್ವಾನಿಸಿದ್ದು. ಅಲ್ಲಿ ಹಮ್ಮು ಬಿಮ್ಮಿನಿಂದ ಬಂದ ಸಂಗೀತ ಪಂಡಿತರನ್ನು ಮಾಯಾಮಾಳವ, ಗೌಳ, ಕಾಂಬೋಜ, ಪಡಿಯಾರ, ದೇವಮನೋಹರಿ, ಸಿಂಧೋಳ ಈ ಎಲ್ಲ ರಾಗಗಳಲ್ಲಿ ಸೋಲಿಸಿದ್ದು; ಗ್ವಾಲಿಯರ ಮಹಾರಾಜರು ಕರಬಸಯ್ಯ ಗವಾಯಿಗಳ ಸಂಗೀತ ಕೇಳಿ ಮಾರುಹೋಗಿ ಈ ಕರ್ನಾಟಕದ ಸಂಗೀತ ವಿದ್ವಾಂಸನಿಗೆ ಯಾವ ವಿದ್ವಾಂಸನು ಸಮನಲ್ಲವೆಂದೂ ತಿಳಿದು ರಾಜಮರ್ಯಾದೆ ನೀಡಿದ್ದಾರೆ. ಹುಟ್ಟಿ ಬೆಳೆದ ಮನೆಗೆ, ಊರಿಗೆ, ನಾಡಿಗೆ ಕೀರ್ತಿ ತಂದಿದ್ದೀರಿ. ಈ ಹಿಂದೆ ಶ್ರೀಮಠಕ್ಕೆ ಕೆಳದಿ, ಬಾಗಳಿ, ಸೊಂಡೂರು ಅರಸರು ಡಂಬಳ ಸಂಸ್ಥಾನ ಮಠಕ್ಕೆ ನಡೆಕೊಂಡು ಬೆಳಗಿಸಿದರೆ ನಮ್ಮ ಶ್ರೀಮಠದ ಗವಾಯಿಗಳು ಉತ್ತರಭಾರತದ ರಾಜಮಹಾರಾಜರ ಪ್ರೀತ್ಯಾಧರಗಳಿಗೆ ಪಾತ್ರರಾಗಿ ಶ್ರೀಮಠದ ಕೀರ್ತಿ ಉತ್ತರಭಾರತದವರೆಗೆ ಹರಡಿಸಿದ್ದಾರೆ ಎಂದು ಆಶೀರ್ವಾದ ಮಾಡಿದಾಗ ನೆರೆದ ಭಕ್ತಸಮೂಹ ಕರಬಸಯ್ಯರನ್ನು ಕೊಂಡಾಡಿದ್ದೆ ಕೊಂಡಾಡಿದ್ದು. ತದ ನಂತರ ಗವಾಯಿಗಳ ಸಂಗೀತ ಬೈಠಕಗಳು ನಿರಂತರವಾಗಿ ನಡೆಯತೊಡಗಿತು.

ಕಾರ್ತಿಕ ಮಾಸದಲ್ಲಿ ಶಹಪುರ ಪೇಟೆಯ ಪ್ರತಿ ಓಣಿ, ಮನೆ, ಮಠಗಳೆಲ್ಲೆಲ್ಲಾ ದೀಪದಿಂದ ಜಗಮಗಿಸುತ್ತಿತ್ತು. ಗವಾಯಿಗಳ ಮನೆ ಜಂಗಮನಿ, ಕುಬಸದ, ಎಂಡಿಗೇರಿ ಅವರ ಮನೆಗಳ ಹತ್ತಿರ, ವೀರಭದ್ರದೇವಸ್ಥಾನದ ಹಿಂದುಗಡೆಯಿತ್ತು.

ವೀರಭದ್ರನ ಪೂಜೆಯ ಸಂದರ್ಭದಲ್ಲಿ ಗವಾಯಿಗಳು "ಜಯ ಜಯ ಶ್ರೀವೀರಭದ್ರ". 'ಕರ್ಪೂರಾರಾರತಿ ಬೆಳಗುವೆ ಕರುಣಾಸಮುದ್ರ', 'ಕೋರೆ ಮೀಸೆಯ ತಿದ್ವಿ, ಓರೆ ಖಡ್ಗ ಬೀಸುತ ನಡದೇನೊ ಭದ್ರ', ಎಂಬ ಮಂಗಲ ಗೀತೆ ಹಾಡುತ್ತಿದ್ದರು. ಹೀಗೆ ಗವಾಯಿಗಳು ಕಾರ್ತಿಕ ಮಾಸದ ಕರ್ಪೂರ ಹಚ್ಚಿ ಭಕ್ತರೊಡಗೊಡಿ ವೀರಭದ್ರನಿಗೆ ತಮ್ಮ ಸಂಗೀತ ನೀನಾದದಿಂದ ಮಂಗಳ ಹಾಡುತ್ತಿದ್ದರೆ ಹಿಂದೆ ಹಿಂದೆ ಭಕ್ತರೂ ಧ್ವನಿ ಗೂಡಿಸುತ್ತಿದ್ದರು. ಇನ್ನೊಂದು ಕಡೆ ಕರಡಿಮಜಲಿನ ಕುಣಿತ. ಕಾರ್ತಿಕದ ದೀಪಮಾಲಿಕಂಬಕ್ಕೆ ಮತ್ತು ಆದರ ಕಟ್ಟೆಯ ಸುತ್ತ ಹಣತೆಗಳ ಸಾಲು, ಆ ಹಣತೆಯ ಬೆಳಕಿನಲ್ಲಿ ವೀರಭದ್ರನ ವೈಭವ ನಡೆಯುತ್ತಿತ್ತು ಶಂಕರಲಿಂಗ, ವೀರಭದ್ರನ ಗುಡಿಯ ಕಾರ್ತಿಕೋತ್ಸವ ನೋಡಲು ಬಲುಚೆಂದ. ಹೀಗೆ ವೈಭವದ ಸಮಾರಂಭದಲ್ಲಿ ಗವಾಯಿಗಳು ತನ್ಮಯರಾಗಿದ್ದಾಗ ಶ್ರೀಮಠದಿಂದ ವ್ಯವಸ್ಥಾಪಕರೊಬ್ಬರು ವೀರಭದ್ರಗುಡಿಗೆ ಬಂದು "ಗವಾಯಿಗಳವರೇ ಪೂಜ್ಯರು ಕರಿತ್ತಿದ್ದಾರೆ. ಬೇಗ ಬರಬೇಕಂತೆ" ಆಗ ರಾತ್ರಿ ೯ ಗಂಟೆ ಆಗಿತ್ತು. ಗವಾಯಿಗಳು ಪೂಜ್ಯರ ಕರೆಗೆ ಓಗೊಟ್ಟು ಮಠದ ಕಡೆಗೆ ಬಂದರು. ಪೂಜ್ಯರಿಗೆ ನಮಸ್ಕರಿಸಿ ಪೂಜ್ಯರ ಅಪ್ಪಣೆಗಾಗಿ ನಿಂತರು. "ವೀರಭದ್ರದೇವರ ಗುಡ್ಯಾಗಿದ್ರಂತೆ. ಕಾರ್ತಿಕ ಹಚ್ಚಿರೇನು? ಆ ಓಣ್ಯಾಗ ಭಾಳ ಭಕ್ತಿಯಿಂದ ಕಾರ್ತಿಕೋತ್ಸವ ಆಚರಸ್ತಾರ. ಊರಾಗೆಲ್ಲ ನಿಮ್ಮ ಸಂಗೀತ ಸೇವೆಯ ಸುದ್ದಿಯಂತೆ ಎಂದು ಹೇಳುತ್ತಲೇ ನಮ್ಮ ಮಠದ ಮೇಣೆ ಎಡೆಯೂರೇಶನ ದರ್ಶನಕ್ಕೆ ಹೊಂಟೈತಿ. ಹೋಗುವಾಗ ಬರುವಾಗ, ಎಡೆಯೂರಿನಲ್ಲಿ ನಿಮ್ಮ ಸಂಗೀತ ಸೇವಾ ಆಗಬೇಕಪಾ. ತಯಾರಿ ಮಾಡಿಕೊಳ್ಳಿ. ಇನ್ನೆರಡು ದಿನ ಬಿಟ್ಟು ಅಂದ್ರ ಸೋಮವಾರ ಪ್ರಯಾಣ ಬೆಳಸ್ತೈತಿ ಎಂದರು". ಪೂಜ್ಯರ ಅಪ್ಪಣೆಯಂತೆ "ಆಗಲಿ ಬುದ್ಧಿ" ಎಂದು ಗವಾಯಿಗಳು ಮನೆಗೆ ಬಂದರು. ಪ್ರಸಾದ ಸ್ವೀಕರಿಸಿ ಮಲಗಿದರು.

ಎರಡು ದಿನ ಕಳೆದ ಬಳಿಕ ಶ್ರಿಮಠದ ಮೇಣೆ ಎಡೆಯೂರಿಗೆ ಹೊರಡಿತು. ಆನೆ, ಕುದುರೆ ಕಟ್ಟಿದ ಟಾಂಗಾಗಳು, ಮ್ಯಾನಾ, ಲಾಂಡಾಗಾಡಿಗಳು, ಬಂಡಿಗಳು, ಒಂಟೆಗಳು, ಭಲ್ಲೆಗಳುಳ್ಳ ಸವಾರರು, ಕತ್ತಿ, ಬಂದೂಕುಗಳು, ರಿವಾಲ್ವರಗಳು, ಅರಸರ ಬೆಳ್ಳಿದಂಡಗಳು, ಛತ್ರಚಾಮರ ಮಧ್ಯಪೂಜ್ಯರು ಪಾಲಕಿ ಸವಾರಿ ಮುಂದೆ ಹೊರಡುತ್ತಿದ್ದರೆ ಹಿಂದೆ ಡಮಣಿ ಬಂಡಿಯಲ್ಲಿ ಸಾರಂಗಿ, ಪಿಟಲು, ವೀಣೆ, ಕೊಳಲು, ತಬಲಾ ವಾಧ್ಯದವರೊಂದಿಗೆ ಝರಿಪೇಟ ರೇಶ್ಮೆ ಜುಬ್ಬಾ, ರೇಶ್ಮೆ ಪಂಚೆ ಧರಿಸಿ ವಾದ್ಯಮೇಳದವರ ಮಧ್ಯದಲ್ಲಿ ಕುಳಿತು ಊರು ದಾಟುತ್ತಲೇ ಕರಬಸಯ್ಯ ಗವಾಯಿಗಳು ಸಂಗೀತ ಪ್ರಾರಂಭಿಸಿದರು.

"ಏಳಯ್ಯ ನಿಮ್ಮ ತಂದೆ ತಾಯಿಗಳು ಬಂದಿಹರು
ಬಾಳಾಕ್ಷ ಶಿಶು ಮಹಾಂತಲಿಂಗ ದೊರೆಯೇ,
ಬಸವ ಮಡಿವಾಳ ಸಿದ್ಧರಾಮೇಶ್ವರರು ಬಂದಿಹರು ಏಳಯ್ಯ"

ಎಂಬ ಮಂಗಲ ಗೀತೆ ರಾಗಮಾಲಿಕೆಯಲ್ಲಿ ಸುಶ್ರಾವ್ಯವಾಗಿ ಹಾಡಿದರು. ಮತ್ತೆ ಬೇರೆ ಮಂಗಲ

> ''ಕರುಣಿಸೋ ಕರುಣಾನಿಧಿ ಶ್ರೀ ಗುರುಸಿದ್ಧ ಮೂಢಬಾಲರು ನಾವು
> ಈ ಪರಿಪರಿಪಾಡಲಾರೆವು ನಿನ್ನ ಬೇಡಿಕೊಂಬೆವು
> ಮಾಡಲಿಲ್ಲವೇ ತಪವಾ ರೂಢಿಗೀಶನನನು ನೆನೆದು''
> ಆದಿ ಜಗದ್ಗುರು ಸಿದ್ಧಲಿಂಗೇಶನ ಧ್ಯಾನಿಸು ನೀ ಮನವೇ
> ನಿರುತದಿ ಧ್ಯಾನಿಸು ನೀ ಮನವೇ
> ಪುಂಡರ ಮತವ ಖಂಡಸಿ ಬಹುಜನ
> ತಂಡ ಕರುಹಿ ಮನ ಸಿದ್ಧಾಂತವ ದಂಡಿಸಿ
> ಮಂಡರ ಬಹುಸಿದ್ಧಾಂತಹ ತಂಡ ಕರುಹಿ
> ಸಿದ್ಧನ ಧ್ಯಾನಿಸು ನೀ ಮನವೆ''

ಎಂಬಂತಹ ತಾತ್ವಿಕ, ಸೈದ್ಧಾಂತಿಕ ಸ್ತುತಿಪರ ಆಶಯಗಳನ್ನು ಹೊಂದಿರುವ ಮಂಗಲ ಹಾಡುಗಳು ಏಕ ಪ್ರಕಾರವಾಗಿ ನಡೆಯ ತೊಡಗಿತು. ಮಾರ್ಗಮಧ್ಯದಲ್ಲಿ ವಸತಿ ಮಾಡುವಾಗ ಪೂಜ್ಯರು ಪ್ರಸಾದ ಸೇವಿಸಿದ ಬಳಿಕ ತಾಂಬೂಲ ಮೆಲ್ಲುತ್ತಾ ರಾತ್ರಿ ಹೊತ್ತು ಕರಬಸಯ್ಯ ಗವಾಯಿಗಳಿಂದ ಒಂದು ವಚನ ಹಾಡಿಸಿಯೇ ಮಲಗುತ್ತಿದ್ದರು. ಗವಾಯಿಗಳ ಸಂಗೀತದಲ್ಲಿ ತನ್ಮಯರಾಗುತ್ತಿದ್ದರು.

ಡಂಬಳ ಗದುಗಿನ ಶ್ರೀ ಜಗದ್ಗುರುಗಳು ತುಮಕೂರ ಜಿಲ್ಲೆ ಕುಣಿಗಲ್ ತಾಲೂಕಿನಲ್ಲಿರುವ ಎಡೆಯೂರಿಗೆ ಪ್ರವಾಸ ಮಾಡುವಾಗ ಅವರಿಗೆ ಎಲ್ಲ ರೀತಿಯ ಸೌಕರ್ಯ ನೀಡಬೇಕೆಂದು ಮೈಸೂರು ಮಹಾರಾಜರ ಕಛೇರಿಯಿಂದ ಚಿತ್ರದುರ್ಗ ಮತ್ತು ತುಮಕೂರ, ಚಿತ್ರದುರ್ಗ ಜಿಲ್ಲೆಗಳ ತಾಲೂಕಾ ಅಮೀಲರುಗಳಿಗೆ ಮೊದಲೇ ತಿಳಿಸುತ್ತಿದ್ದರು.

ಗದಗ ಡಂಬಳದಿಂದ ಎಡೆಯೂರು ತಲುಪಬೇಕಾದರೆ ಕನಿಷ್ಠ ಹದಿನೈದು ದಿನಗಳು ಬೇಕು. ಡಂಬಳ, ಹೂವಿನ ಹಡಗಲಿ, ಹರಿಹರ, ದಾವಣಗೆರೆ, ಚಿತ್ರದುರ್ಗ, ಶಿರಾ, ತುರುವಕೇರೆ, ಕಗ್ಗೆರೆ ಮಾರ್ಗವಾಗಿ ಎಡೆಯೂರು ತಲುಪುತ್ತಿದ್ದರು. ಅಲ್ಲಿ ಎಲ್ಲ ಕಾರ್ಯಕ್ರಮಗಳನ್ನು ಮುಗಿಸಿಕೊಂಡು ಮರಳಿ ಬರುವಾಗ ನಾಗಮಂಗಲ, ಪಾಂಡವಪುರ, ಚನ್ನರಾಯಪಟ್ಟಣ, ಅರಸೀಕೆರೆ, ತರೀಕೆರೆ, ಶಿವಮೊಗ್ಗ, ಹರಿಹರ, ಹಾವೇರಿ, ಗದಗಿಗೆ ಮರಳಿ ವಾಪಸ್ಸಾಗುತ್ತಿದ್ದರು. ಹೋಗಿ ಬರುವವರೆಗೆ ಕರಬಸಯ್ಯ ಗವಾಯಿಗಳಿಂದ ಸಂಗೀತ ಸೇವೆ ನಿರಂತರವಾಗಿ ನಡೆದೇಯಿರುತ್ತಿತ್ತು.

ಇಂಥ ಸರ್ವಶ್ರೇಷ್ಠ ಗವಾಯಿಗಳೆನಿಸಿ ಶ್ರೀಮಠದ ಕೀರ್ತಿಯನ್ನು ಬೆಳಗಿಸಿದ ಕರಬಸಯ್ಯ ಗವಾಯಿಗಳು ಆ ಕಾಲದಲ್ಲಿ ಡೆಲ್ಲಿ, ಮುಂಬಯಿ, ಮದ್ರಾಸ, ಗ್ವಾಲಿಯರ, ನೇಪಾಳ, ಕಲ್ಕತ್ತಾದವರೆಗೆ ತಮ್ಮ ಸಂಗೀತ ಬೈಠಕಗಳನ್ನು ನಡಿಸಿ ದೇಶದ

ಒಳ ಹೊರಗೆ ಮನೆಮಾತಾಗಿದ್ದರು. ಆ ಕಾಲದಲ್ಲಿ ಒಂದು ದಿನದ ಸಂಗೀತ ಬೈಠಕಕ್ಕೆ ೧೦ ಸಾವಿರ ಹಣ ಪಡೆಯುತ್ತಿದ್ದರೆಂದರೆ ಅದೇನು ಸಾಮಾನ್ಯವಲ್ಲ. ಇಂತಹ ಗವಾಯಿಗಳ ಏಕೈಕ ಪುತ್ರರೇ ಚರಿತ್ರಗೊಳ್ಳಲಿರುವ ಪಂಡಿತ ಸಿದ್ಧಲಿಂಗಶಾಸ್ತ್ರಿಗಳು.

ಸಿದ್ಧಲಿಂಗ ಶಾಸ್ತ್ರೀಗಳ ಜನನ :

ತೋಂಟದಾರ್ಯರ ಪುಣ್ಯನೆಲೆಬೀಡಾದ ಶಹಪೂರಪೇಟೆಯ ಸಂಗೀತವಿದ್ವಾಂಸ ಕರಬಸಯ್ಯ ಸಂಗಮ್ಮರ ಉದರದಿಂದ ಎರಡನೇ ದಶಕದಲ್ಲಿ ಅಂದರೆ ೨೪-೧೨-೧೯೧೬ ಸೋಮವಾರ ದಿವಸ ಜನಿಸಿದರು. ಈ ಮಗುವಿಗೆ ತಮ್ಮ ಮನೆಯ ಆರಾಧ್ಯದೈವ ಅನಾದಿ ಸಿದ್ಧಲಿಂಗೇಶನ ಹೆಸರೆ 'ಸಿದ್ಧಲಿಂಗಯ್ಯ' ಎಂದು ನಾಮಕರಣ ಮಾಡಿದರು. ಅಪ್ಪ ಈ ಮಗುವಿಗೆ 'ಚಂಚಲ' ಎಂದು ಕರೆಯುತ್ತಿದ್ದರಂತೆ.* ಮಗು ಜನಿಸಿದ ೬ ತಿಂಗಳಲ್ಲಿ ತಾಯಿ ವಿಧಿವಶರಾದರು. ಮಗುವಿಗೆ ತಾಯಿಯ ಪ್ರೀತಿಯೇ ಸಿಗಲಿಲ್ಲ. ತಾಯಿ ತೀರಿದ ಮೇಲೆ ಎದೆ ಹಾಲು ಕುಡಿಸುವರಾರು ? ಮಮತೆಯಿಂದ ಮುದ್ದಾಡಿಸುವರಾರು ? ಹೊತ್ತು ಹೊತ್ತಿಗೆ ಎರೆದು ಸ್ನಾನ ಮಾಡಿಸುವರಾರು ? ಸಿದ್ಧಲಿಂಗಯ್ಯನ ಹುಟ್ಟಿನ ನಕ್ಷತ್ರ ಅದೆಷ್ಟು ಕೆಟ್ಟದಿರಬೇಕು. ಮಗುವಿಗೆ ತಾಯಿಯಿಲ್ಲದ ಮೇಲೆ ಉಳಿದವರೆಷ್ಟು ಜನರಿದ್ದರೇನು ? ಏನಿದ್ದರೇನು ? ಮಗು ಎದೆ ಹಾಲಿಗಾಗಿ ಅಳುತ್ತಿತ್ತು. ತಾಯಿಯ ಆರೈಕೆಯಲ್ಲಿ ಬೆಳೆಯಬೇಕಾದ ಮಗುವಿಗೆ ತಾಯಿಕರುಳಿನ ಭಾಗ್ಯವಿಲ್ಲದಾಯ್ತು. ಸಹಜ ಬೆಳವಣಿಗೆಗೆ ಅವಕಾಶವಿಲ್ಲದಾಯ್ತು. ತಾಯಿಯ ತಾಯಿ ಬಸಲಿಂಗಮ್ಮನ ಲಾಲನೆ, ಪಾಲನೆ, ಪೋಷಣೆಯಲ್ಲಿ ಬಿದಿಗೆ ಚಂದ್ರಮನಂತೆ ಹಾಗೂ ಹೀಗೂ ಬೆಳೆಯತೊಡಗಿದನು. ಸಿದ್ಧಲಿಂಗನ ಬಾಲ್ಯದ ಕಷ್ಟ ಹೇಳತೀರದು. ಆಗಲೇ ಅಪ್ಪ ಪ್ರಸಿದ್ಧ ಗವಾಯಿಗಳೆಂದು ಪ್ರಖ್ಯಾತಿ ಪಡೆದಿದ್ದರು. ಸಂಗೀತ ಕಛೇರಿಗಾಗಿ ಬೇರೆ ಬೇರೆ ಕಡೆ ಹೋಗಬೇಕಾದಾಗ ಸಿದ್ಧಲಿಂಗಯ್ಯ ಅಜ್ಜಿಯ ಹತ್ತಿರ, ಕೆಲವೊಮ್ಮೆ ಗದುಗಿನ ಕುಬಸದ, ಎಂಡಿಗೇರಿಯವರ ಮನೆಯಲ್ಲಿ ಬಿಟ್ಟು ಹೋಗುತ್ತಿದ್ದರು. ಮಗು ಅವರಿವರ ಕಂಕುಳದಿಂದ ಕಂಕುಳಕ್ಕೆ, ಕೈಯಿಂದ ಕೈಗೆ ಎತ್ತಿಕೊಂಡವರ ಅಕ್ಕರೆಯ ಕೂಸಾದ ಸಿದ್ಧಲಿಂಗಯ್ಯನಿಗೆ ನೆಲದ ಮೇಲೆ ಕೂಡುವ ಅಂಬೆಗಾಲಿನಿಂದ ಓಡಾಡುವ ಅವಕಾಶವೇ ಸಿಗದಾಯಿತು. ಇದಕ್ಕೆ ಕಾರಣ ತಬ್ಬಲಿಕೂಸು ಮುದ್ದು ಮುದ್ದಾಗಿದ್ದರಿಂದ.

ಕರಬಸಯ್ಯನವರು ಗವಾಯಿ ಕೆಲಸಕ್ಕೆ ಕೆಲ ದಿನ ಬಿಟ್ಟುಕೊಟ್ಟು ಮಗನ ಆರೈಕೆಯಲ್ಲಿ ಮಗ್ನರಾದರು. ತುಂಬ ದಿನಗಳಿಂದ ಸಂಗೀತ ಪಾಠಶಾಲೆಗೆ ಬಾರದಿದ್ದಾಗ ಪ್ರಾಚಾರ್ಯರು ಶಾಲೆಗೆ ಏಕೆ ಬರಲಿಲ್ಲವೆಂದು ಸಹಶಿಕ್ಷಕರು ಇವರ ಮನೆಗೆ ಬಂದರೆ ಸಿದ್ಧಲಿಂಗಯ್ಯನನ್ನು ಎತ್ತಿ ಮುದ್ದಾಡದಿದ್ದರೆ ಅವರಿಗೆ ಸಮಾಧಾನವೇ ಇರುತ್ತಿರಲಿಲ್ಲ. ಕಾಲಕಳೆದಂತೆ ಮಗು ಕೈಬಿಟ್ಟು ಆಡತೊಡಗಿತು.

ಬಾಲ್ಯ :

ತಂದೆಯ ಶ್ರೀಮಂತಿಕೆಯ ಸುಖದ ಸುಪ್ಪತ್ತಿಗೆಯಲ್ಲಿ ನಿತ್ಯಚಿನ್ನದ ಝರಿ ತುಂಬಿದ ರಾಜಪೋಷಾಕು ಬೆಳ್ಳಿ ಛತ್ರಿ, ಅಲಂಕೃತ ಡಮಣಿಗಾಡಿ, ಗ್ವಾಲಿಯರದಿಂದ ತಂದ ಅಲಂಕೃತ ಖುರ್ಚಿ, ಟೇಬಲ್, ತೂಗುಮಂಚ, ನಿತ್ಯಮಕಮಲ್ ಹಾಸಿದ ಗಾದಿ, ದಿಂಬುಗಳು, ಜೋಕಾಲಿಯ ಮಂಟಪದಲ್ಲಿ ಸುಖವಾಗಿ ಬೆಳೆಯುತ್ತಿದ್ದ. ತಾಯಿಯಿಲ್ಲದೆ ತಬ್ಬಲಿಯಾದರೂ ಪೂಜ್ಯ ಜಗದ್ಗುರುಗಳ ಮೆರವಣಿಗೆ ಹೊರಟರು ಸಿದ್ಧಲಿಂಗಯ್ಯ ಪೂಜ್ಯರ ತೊಡೆಯ ಮೇಲೆ ಕುಳಿತಿರುತ್ತಿದ್ದನಂತೆ ಅವರಿವರಲ್ಲಿ ತಾಯಿಯ ಪ್ರೀತಿ, ವಾತ್ಸಲ್ಯ, ಮಮತೆ ಎಲ್ಲವನ್ನು ಪಡೆದುಕೊಂಡು ನಾಲ್ಕು ವರ್ಷದವನಾದನು.

ಕರಿಬಸವ ಗವಾಯಿಗಳು ತಮ್ಮ ಮನೆಯಲ್ಲಿ ವಿಶೇಷವಾಗಿ ಗಣೇಶನ ಹಬ್ಬವನ್ನು ಆಚರಿಸುತ್ತಿದ್ದರು. ಗಣೇಶನ ನೋಡಲು ಜವುಳ, ಬೆಟಗೇರಿ, ಒಕ್ಕಲಿಗೇರಿಯಿಂದ ಇವರ ಮನೆಗೆ ಬರುತ್ತಿದ್ದರು. ಗಣೇಶನ ಹತ್ತಿರ ಉತ್ತರ ಭಾರತದಿಂದ ತಂದ ಸಂಗಮವರಿ ಕಲ್ಲಿನ ತಾಜಮಹಲ್, ಆನೆಸಾಲು, ಬೆಣಚು ಕಲ್ಲಿನಲ್ಲಿ ಕೆತ್ತಿದ ಹಣ್ಣಿನಗೊಂಚಲು, ಮೊಸಳೆ ಜೋಡಿ, ನವಿಲು ಜೋಡಿ, ಕೋತಿಗಳಸಾಲು, ಈಶ್ವರನ ಜೋಡಿ, ಗಂಧದ ಕಟ್ಟಿಗೆಯಲ್ಲಿ ಕೆತ್ತಿದ ಸರಸ್ವತಿ, ಲಕ್ಷ್ಮಿ, ಗಣೇಶ, ಶಿವ, ನಂದಿ, ಪಕ್ಷಿಗಳ ಗುಂಪಿನ ಸಾಲು. ಒಂದೇ ಎರಡೇ ಐದು ಮೆಟ್ಟಿಲಿನ ಸಿಂಹಾಸನ ಮಾಡಿ ಗಣೇಶನನ್ನು ಪ್ರತಿಸ್ಥಾಪಿಸಿದರೆ, ಐದು ಮೆಟ್ಟಿಲು ತುಂಬ ಉಳಿದರ್ದ ಅಂಕಣ ಮನೆ ಗೋಡೆಗಳು ಅಲಂಕಾರದಿಂದ ತುಂಬಿರುತ್ತಿತ್ತು. ಅಷ್ಟೊಂದು ವೈಭವದಿಂದ ಗಣೇಶನ ಹಬ್ಬ ಆಚರಿಸುತ್ತಿದ್ದರು. ಸಿದ್ಧಲಿಂಗ ಇನ್ನು ಚಿಕ್ಕ ಬಾಲಕ. ಅವನ ಸ್ನೇಹಿತರು ಬಂದದ್ದು ನೋಡಿ ಕುಪ್ಪಳಿಸಿ ಕುಣಿದಾಡುತ್ತಿದ್ದ.

ಗಣೇಶನ ವಿಸರ್ಜನೆಯ ಮುನ್ನಾದಿನ ಕರಬಸಯ್ಯ ತಮ್ಮ ಸಂಗೀತ ಗೆಳೆಯರಿಗೆ ಅಹ್ವಾನಿಸಿ ರಾತ್ರಿಯಲ್ಲ ಸಂಗೀತ ಕಾರ್ಯಕ್ರಮ ನಡೆಸಿ ಅವರಿಗೆ ತಕ್ಕ ಸಂಭಾವನೆ ನೀಡಿ ಕಳಿಸುತ್ತಿದ್ದರು. (ಅಜ್ಜನ ಪ್ರಭಾವ ಹೈಕೋರ್ಟ ವಕೀಲರ ಮೇಲೆ ಪ್ರಭಾವ ಬೀರಿದಂತಿದೆ. ಕಾರಣ ಹೈಕೋರ್ಟನಲ್ಲಿ ಕಳೆದ ಮೂವತ್ತು ವರ್ಷಗಳಿಂದ ಪ್ರತಿವರ್ಷ ೧೦–೧೫ ದಿನ ಗಣೇಶೋತ್ಸವ ಹಬ್ಬ ಆಚರಿಸಿ ನಾಡಿನ ಖ್ಯಾತ ಸಂಗೀತವಿದ್ವಾಂಸರನ್ನು ಬರಮಾಡಿಕೊಂಡು ಸಂಗೀತ ಕಛೇರಿ ನಡೆಸಿ ಅವರಿಗೆ ಸೂಕ್ತವಾಗಿ ಸನ್ಮಾನಿಸುತ್ತಾರೆ. ಆ ಕಾರ್ಯಕ್ರಮಕ್ಕೆ ಬಂದ ಜನಕ್ಕೆ ಪ್ರಸಾದ ವ್ಯವಸ್ಥೆ ಕಲ್ಪಿಸುತ್ತಾರೆ.)

ಶ್ರಾವಣದ ನಾಗರಪಂಚಮಿ ನಾಡಹಬ್ಬ. ಈಗಿನವರಿಗೆ ಕನಸಲ್ಲೂ ಊಹಿಸಲೂ ಸಾಧ್ಯವಿಲ್ಲದಷ್ಟು ಓಣಿ, ಓಣಿಗಳಲ್ಲಿ ಎತ್ತರದ ಮರಗಳಿಗೆ ಜೋಕಾಲಿ ಕಟ್ಟುತ್ತಿದ್ದರು. ಊರಿಂದ ಬಂದ ಬೀಗರು, ಮಕ್ಕಳು, ಮೊಮ್ಮಕ್ಕಳು ಜೋಕಾಲಿ

ಆಡಲು ಸೇರುತ್ತಿದ್ದರು. ಹೆಣ್ಣು ಮಕ್ಕಳು ಹೊಸಸೀರೆ, ಮೈತುಂಬ ಒಡವೆ ಹಾಕಿಕೊಂಡು ಹಾವಿನ ಹುತ್ತಕ್ಕೆ ಹಾಲಿನ ಅಭಿಷೇಕ ಹೊರಡುತ್ತಿದ್ದರು. ಎಲ್ಲ ಗುಡಿಗಳಿಗೆ ಎಲ್ಲರ ಮನೆಯಿಂದ ಎಡೆಕೊಡುತ್ತಾ, ತೋಂಟದಾರ್ಯ ಮಠಕ್ಕೆ ಬಂದರೆ ಅಲ್ಲಿ ಜನಜಾತ್ರೆ ಓರಿಗೆಯ ಗೆಳತಿಯರು ಮದುವೆ ಮಾಡಿಕೊಂಡು ಬೇರೆ ಊರಿಗೆ ಹೋಗುವರು. ಪಂಚಮಿಯ ಹಬ್ಬಕ್ಕೆ ಬಂದು ಕೂಡಿ ಹಳೆಯ ನೆನಪು ತೆಗೆದು ಜೋಕಾಲಿ ಜೀಕುವದರಲ್ಲಿ ತನ್ಮಯರಾಗುತ್ತಿದ್ದರು. ಗವಾಯಿಗಳಿಗೆ ಸಿದ್ಧಲಿಂಗನನ್ನು ಬಿಟ್ಟು ಬೇರೆ ಮಕ್ಕಳಿಲ್ಲ. ಹೀಗಾಗಿ ಅಕ್ಕ ಪಕ್ಕದ ಚಿಕ್ಕ ಹೆಣ್ಣು ಮಕ್ಕಳನ್ನು ಕರೆದು ಮನೆಯಲ್ಲಿಯ ಚಿನ್ನದ ಸರ ಹಾಕುವುದು, ಬೆಂಡೋಲೆ ಹಾಕಿ, ಕಾಲಿಗೆ ಚೈನಸರ ಹಾಕಿ ಪಂಚಮಿ ಆಚರಿಸುವಲ್ಲಿ, ಮಗನನ್ನು ಅವರೊಡನೆ ಕಳಿಸಿ ತಾಯಿಯಿಲ್ಲವೆಂಬದನ್ನು ತೊರುಗೊಡದೆ ತಂದೆಯೇ ತಾಯಿಯಾಗಿ ಸರ್ವವಿಧದಲ್ಲೂ ಒಂದಾಗಿರುವ ಗುಣ ಮಗನಲ್ಲಿ ಬೆಳೆಸಿದರು. ಹೀಗಾಗಿ ಇಡೀ ಶಹಪೂರಪೇಟೆ ಕರಬಸಯ್ಯ ಹೊಸಮಠ ಗವಾಯಿಗಳ ಮನೆ ಎಂದರೆ ತಮ್ಮ ಮನೆಯಂದೇ ಭಾವಿಸಿದ್ದರು. ಗವಾಯಿಗಳೂ ಅಷ್ಟೆ ಎಲ್ಲರ ಕಷ್ಟ ಸುಖದಲ್ಲಿ ಸದಾ ಸಮಭಾಗಿ. ಕುಬಸದ ನೂರಂದಪ್ಪ, ಕುಬಸದ ಶಿವಪ್ಪ (ಎಂ.ಎಲ್.ಸಿ), ಜಂಗಮನಿ, ಎಂಡಿಗೇರಿ ಹುಣಸಿಮರದ, ಬೇವಿನಮರದ, ಇಟಗಿ ಕಾಡಪ್ಪನವರ ಮುಂತಾದ ಎಲ್ಲಾ ಮನೆಗಳು ಒಂದೇ ಎಂಬ ಭಾವೈಕ್ಯತೆ ತುಂಬಿದ್ದರು. ಗವಾಯಿಗಳು ಆಗರ್ಭ ಶ್ರೀಮಂತರಾಗಿದ್ದರೂ ಅವರಿಗೆ ಒಂದು ಚೂರೂ ಹಮ್ಮಿಲ್ಲ, ಬಿಮ್ಮಿಲ್ಲ ಸದಾ ಚಿನ್ನದ ಕೊಡೆ, ಕಾಲಲ್ಲಿ, ಕೈಯಲ್ಲಿ ಗ್ವಾಲಿಯರ್ ಮಹಾರಾಜರೇ ಹಾಕಿದ್ದ ಚಿನ್ನದ ಕಂಕಣ, ಜೈಪುರ ಅರಸರು ಹಾಕಿದ್ದ ವಜ್ರದ ಉಂಗುರ, ಬರೋಡ ಅರಸರು ಹಾಕಿದ್ದ ಉಂಗುರ, ನಾಲ್ಕು ಬೆರಳಿಗೆ, ಕೊರಳಲ್ಲಿ ಹಾಕಿದ್ದ ೫ ತೊಲೆ ಚೈನ್, ಸದಾ ಮಹಾರಾಜರಂತೆ ಬಾಳಿದವರು.

**ಶಿಕ್ಷಣ :**

ಸಿದ್ಧಲಿಂಗಯ್ಯನ ಪ್ರಾಥಮಿಕ ಶಿಕ್ಷಣ ಗದುಗಿನ ಸರಕಾರಿ ಶಾಲೆಯಲ್ಲಿ ಆಯಿತು. ಮುಂದೆ ಗದುಗಿನ ಮುನ್ಸಿಪಲ್ ಶಾಲೆಯಲ್ಲಿ ಹೈಸ್ಕೂಲ ಶಿಕ್ಷಣ ಪಡೆದುಕೊಂಡರು. ಆ ಕಾಲದಲ್ಲಿ ಮುನ್ಸಿಪಲ್ ಹೈಸ್ಕೂಲು ತುಂಬಾ ಹೆಸರುವಾಸಿಯಾಗಿತ್ತು, ಹಲವಾರು ವಿದ್ವಾಂಸರು ಆ ಶಾಲೆಯಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದರು. ಅವರಲ್ಲಿ ಗ್ರಾಮ ಪುರೋಹಿತ ಮತ್ತು ಎ.ವ್ಹಿ. ಕುಲಕರ್ಣಿ (ಗೌರವ ಶಿಕ್ಷಕರು) ಗುರುಗಳು ಶಿಸ್ತಿನ ಅಧ್ಯಾಪಕರಾಗಿದ್ದರು. ಅವರ ಪಾಠ ಪ್ರವಚನಗಳು ಸಿದ್ಧಲಿಂಗಯ್ಯನ ಮೇಲೆ ಗಾಢ ಪ್ರಭಾವ ಬೀರಿದವು. ಗುರುಗಳು ಹೇಳಿದ ಪಾಠ ಪ್ರವಚನಗಳನ್ನು ಮತ್ತು ಮನೆಗೆಲಸ ತಪ್ಪದೆ ಮಾಡಿಕೊಂಡು ಹೋಗುತ್ತಿದ್ದ. ಗುರುಗಳು ಪಾಠಕ್ಕೆ ಸಂಬಂಧಿಸಿದಂತೆ ಏನಾದರೂ ಪ್ರಶ್ನೆಗಳನ್ನು ಕೇಳಿದರೆ ಥಟ್ಟನೆ ಉತ್ತರಿಸುತ್ತಿದ್ದ. ಹೀಗಾಗಿ ಗ್ರಾಮಪುರೋಹಿತ, ಎ.ವ್ಹಿ. ಕುಲಕರ್ಣಿ ಅಧ್ಯಾಪಕರಿಗೆ ಪ್ರೀತಿಗೆ ಪಾತ್ರನಾಗಿದ್ದ.

ಹೀಗೆ ಸತತ ಅಭ್ಯಾಸಿಯಾಗಿದ್ದ ಸಿದ್ಧಲಿಂಗ ಮೆಟ್ರಿಕ್ ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣನಾದ. ಮಗ ಪ್ರಥಮ ದರ್ಜೆಯಲ್ಲಿ ಪಾಸಾಗಿದ್ದಾನೆ ಎಂದು ಸಂತೋಷ ಹಂಚಿಕೊಳ್ಳಬೇಕೆನ್ನುವಷ್ಟರಲ್ಲಿ ತಾನೊಂದು ಬಗೆದರೆ ದೈವ ಇನ್ನೊಂದು ಬಗೆಯುತ್ತದೆ. (ದೈವೀ ವಿಚಿತ್ರಾಗತೀ) ವಿಧಿಲೀಲೆ ವಿಚಿತ್ರಗತಿಯುಳ್ಳದ್ದಲ್ಲವೆ ! ಎಂಬಂತೆ ತಂದೆ ಕರಬಸಯ್ಯನವರು ಅಕಾಲ ಮರಣ ಹೊಂದಿದರು. ಮಗನನ್ನು ವಿದ್ಯಾವಂತನನ್ನಾಗಿಯೂ, ಗಣ್ಯನನ್ನಾಗಿ ಮಾಡುವ ಕನಸು ಕಂಡಿದ್ದವರಾಗಿದ್ದರು. ಶರಣರು 'ಅರ್ಥರೇಖೆ ಇದ್ದು ಫಲವೇನಯ್ಯ, ಆಯುಷ್ಯರೇಖೆ ಇಲ್ಲದನ್ನಕ್ಕ ! ಎಂಬಂತೆ ಸಿದ್ಧಲಿಂಗನಿಗೆ ೧೬ ವರ್ಷ ತುಂಬುವ ಮೊದಲೇ ತಂದೆ ಶಿವಸಾಯುಜ್ಯ ಹೊಂದಿದರು. ಇದು ಸಿದ್ಧಲಿಂಗಯ್ಯನ ಮನಸ್ಸಿನ ಮೇಲೆ ಬಲವಾದ ಅಘಾತವನ್ನು ಉಂಟುಮಾಡಿತು.

ಸಿದ್ಧಲಿಂಗಯ್ಯನಿಗೆ ತಂದೆಯೇ ಸರ್ವಸ್ವ ! ಕೇವಲ ೬ ತಿಂಗಳ ಹಸುಗೂಸು ಇದ್ದಾಗ ತಾಯಿಯನ್ನು ಕಳೆದುಕೊಂಡು ತಬ್ಬಲಿಯಾಗಿದ್ದ. ೧೬ ವರ್ಷದ ಬಳಿಕ ತಂದೆಯನ್ನು ಕಳೆದುಕೊಂಡು ಅನಾಥನಾದನು. ಭಕ್ತಿಯ ಕುಡಿಯಂತೆ ಮೂಡಿದ್ದ ತಮ್ಮ ವಂಶದ ಕುಡಿ ಬೆಳಕಿನ ಕಿಡಿಯಾಗಿ ಬೆಳಗಬೇಕೆಂಬ ಹಂಬಲ ಕರಬಸಯ್ಯನವರದಾಗಿತ್ತು. ಕಾಲಕಾಲಕ್ಕೆ ನೀಡಬೇಕಾದ ಸಂಸ್ಕಾರ, ಶಿಕ್ಷಣ ಮುಂತಾದವುಗಳನ್ನು ವಿದ್ಯುಕ್ತವಾಗಿ ನೆರವೇರಿಸುವಲ್ಲಿ ಅಪ್ಪನದೇ ವಿಶೇಷ ಆಸಕ್ತಿ, ತಂದೆ ಮಡಿದ ನಂತರದ ದಿನಗಳು ಸಿದ್ಧಲಿಂಗಯ್ಯನಿಗೆ ನಡೆಸುವುದು ಕಷ್ಟವಾಗತೊಡಗಿತು. ಅಪ್ಪನ ಶ್ರೀಮಂತಿಕೆಯಲ್ಲಿ ಬಾಲ್ಯ ಕಳೆಯಬೇಕೆಂದರೆ ಬಾಲ್ಯದ ದುರ್ಲಾಭವನ್ನು ಪಡೆದುಕೊಂಡು ಅಸ್ತಿಯನ್ನೆಲ್ಲ ಲಪಟಾಯಿಸಿಕೊಂಡರು. ಗದುಗಿನಲ್ಲಿ ಜೀವನ ಸಾಗಿಸುವುದು ಕಷ್ಟವೆಂದು ಅರಿತು ಹುಟ್ಟೂರಾದ ಬೂದಿಹಾಳಕ್ಕೆ ಬಂದು ಅಜ್ಜಿ (ತಾಯಿಯ ತಾಯಿ) ಆಶ್ರಯದಲ್ಲಿ ಬೆಳೆಯತೊಡಗಿದ. ಮುಂದೆ ಗದುಗಿನ ಕುಬಸದ ಶಿವಪ್ಪನವರು ಸಿದ್ಧಲಿಂಗಯ್ಯನಿಗೆ ಆಶ್ರಯ ನೀಡಿದರು. ಗದುಗಿನಲ್ಲಿ ತಮ್ಮ ಮನೆಯಲ್ಲಿಟ್ಟುಕೊಂಡು ಪ್ರೀತಿ ಮಮತೆಯಿಂದ ನೋಡಿಕೊಂಡರು. ಕುಬಸದ ಶಿವಪ್ಪನವರು ನಾಡು–ನುಡಿಗಾಗಿ ಹೋರಾಟ ಮಾಡಿದ ಜಕ್ಕಲಿಯ ದೊಡ್ಡಮೇಟಿ ಅಂದಾನಪ್ಪನವರ ಮನೆಯಲ್ಲಿ ವ್ಯವಸ್ಥಾಪಕರಾಗಿ ಸೇವೆ ಸಲ್ಲಿಸುತ್ತಿದ್ದರು. ಕೆಲ ದಿನಗಳ ನಂತರ ಸಿದ್ಧಲಿಂಗಯ್ಯನಿಗೂ ಮೌಲ್ಯಧಾರಿತ ರಾಜಕಾರಣಿ ಅಂದಾನೆಪ್ಪ ದೊಡ್ಡಮೇಟಿಯವರಿಗೆ ಪರಿಚಯಿಸಿಕೊಟ್ಟರು. ಈ ಪರಿಚಯವೇ ಸಿದ್ಧಲಿಂಗಯ್ಯನ ಜೀವನಕ್ಕೆ ಒಂದು ಹೊಸ ತಿರುವು ನೀಡಿತು ಎಂದು ಹೇಳಿಕೊಂಡಿದ್ದಾರೆ. ಸಿದ್ಧಲಿಂಗಯ್ಯನಿಗೆ ಕಾಲೇಜು ಕಲಿಯಬೇಕೆಂಬ ತುಡಿತ. ಆದರೇನು ! ಓದಲನುವಿಲ್ಲದಾಯಿತು. ವಿಧಿಯಿಲ್ಲದೆ ಕಾಲೇಜು ಓದಿಗೆ ಇತಿಶ್ರೀ ಹಾಡಬೇಕಾಯಿತು. ತನ್ನ ಜವಾಬ್ದಾರಿ ಹೆಗಲೇರಿ ನಿಂತಿತು. ಅಪ್ಪ ಕೂಡಿಟ್ಟ ನಗ–ನಾಣ್ಯ ಏನೂ ಇಲ್ಲದಾಗಿತ್ತು, ಅಜ್ಜಿಕೊಟ್ಟ ಹೊಲ ಮಾತ್ರ ಉಳಿದಿತ್ತು

ಹೊಲವಿದ್ದರೇನಾಯಿತು ? ದುಡಿಯಲು ಬರಬೇಕಲ್ಲ, ಕೃಷಿ ಮಾಡುವುದು ಏನೊಂದು ಗೊತ್ತಿಲ್ಲ. ಆದರೂ ಬದುಕುವ ಕೊರಗು ಕರುಳನ್ನು ಹಿಚುಕುತ್ತಿತ್ತು. ಕೊನೆಗೆ ಬೇಸಾಯದ ಕೆಲಸವೇ ಸಿದ್ಧಲಿಂಗಯ್ಯನದಾಯಿತು. ಕೈಯಲ್ಲಿ ಕಾಸಿಲ್ಲ. ಕಾಸಿಲ್ಲದೆ ಕೃಷಿ ಮಾಡುವಂತಿಲ್ಲ, ಕೃಷಿ ಮಾಡದೆ ಕಾಸು ಬರುವಂತಿಲ್ಲ. ಇದೊಂದು ಬಿಡಿಸಲಾರದ ಸಮಸ್ಯೆಯಾಯಿತು. ಆದರಲ್ಲಿ ಸಿದ್ಧಲಿಂಗಯ್ಯನ ನವಜೀವನ – ಅನುಭವವಿಲ್ಲದ ಜೀವನ. ತುಂಬಾ ನೊಂದು ಬೆಂದು ಬಳಲಿದ ಜೀವನ. ಬಂಧು ಬಳಗದವರ ಪ್ರೀತಿಪರ ಮಾತುಕತೆಗಳಿಲ್ಲದ ಜರ್ಜರಿತ ಜೀವನ. ಆದರೂ ಎದೆಗೆಟ್ಟ ಜೀವವಲ್ಲ. ಧೈರ್ಯ, ಸ್ಥೈರ್ಯಗಳಿಂದ ಮುನ್ನುಗ್ಗಿ ಶ್ರದ್ಧೆಯಿಂದ ವ್ಯವಸಾಯವನ್ನು ಮಾಡತೊಡಗಿದನು.

### ದಾಂಪತ್ಯ ಜೀವನ

ಸಿದ್ಧಲಿಂಗಯ್ಯನವರ ಜನನ ೧೯೧೬, ಮದುವೆ ೧೯೩೨ ರಲ್ಲಿ. ೧೩–೧೪ ವರ್ಷದ ಹುಡುಗನನ್ನು ಬಸವಲಿಂಗಮ್ಮನ ಗೆಳತಿ ತೋಟಗಂಟಿ ಶಿವನಮ್ಮ ಗೌಡಶಾನಿ ಬೂದಿಹಾಳದ ತನ್ನ ತವರುಮನೆಯಲ್ಲಿ ವಿಧವೆಯಾಗಿದ್ದಳು. ಆಗಿನ ಕಾಲದ ಗೌಡಶಾನಿಯೆಂದರೆ ಊರಿಗೆ ತಾಯಿಸ್ವರೂಪರಾಗಿರುತ್ತಿದ್ದರು. ಸಿದ್ಧಲಿಂಗನೆಂದರೆ ಬಹಳ ಪ್ರೀತಿ, ಈತನನ್ನು ಶಿವನಮ್ಮ ಗೌಡಶಾನಿ ಸಹ ವಿದ್ಯಾವಂತನನ್ನಾಗಿ ಮಾಡಲು ಕಾರಣೀಭೂತಳು ಹಾಗೂ ಈ ಸಿದ್ಧಲಿಂಗಶಾಸ್ತ್ರಿಗಳ ಮನೆತನದ ಜವಾಬ್ದಾರಿ ಹೊತ್ತವಳು, ಹಾಗೆ ಗದುಗಿನಲ್ಲಿ ಈತನನ್ನು ಎಸ್.ಎಸ್.ಎಲ್.ಸಿ ವರೆಗೆ ಓದಿಸಿದರು. ಹಾಗೇ ಗದುಗಿನ ಗಡ್ಡದ್ದೇವರಮಠದ ಮನೆತನಕ್ಕೆ ಸಂಪರ್ಕಿಸಿ ಕುಬಸದ ನೂರಂದಪ್ಪನವರು ಹಾಗೂ ಶಿವಪ್ಪನವರು ಸುಮಿತ್ರಮ್ಮನೊಡನೆ ಮದುವೆ ನಡೆಸಿ ಬೂದಿಹಾಳಕ್ಕೆ ಕರೆತಂದರು. ಶಿವನಮ್ಮ ಗೌಡಶಾನಿ ಲಿಂ॥ ಬಸಲಿಂಗಮ್ಮಳ ಮೊಮ್ಮಗನ ಮದುವೆ ಮಾಡಿ ಮದುಮಗಳಿಗೆ ಕೊಟ್ಟಿದ್ದ ೩೦ ತೊಲೆ ಬಂಗಾರ ಚಿನ್ನದ ಎಲ್ಲ ಒಡವೆ ಅವರಿಗೆ ನೀಡಿ ಅವರ ಜಮೀನನ್ನು ಕಾಯ್ದಿಟ್ಟುಕೊಂಡು ಅವರಿಗೇ ನೀಡಿದ ಸತ್ಯಶೀಲೆ ಗೌಡತಿಯಾಗಿ ಮೆರೆದಳು. ಸುಮಿತ್ರಮ್ಮ ಕೊನೆಯವರೆಗೂ ಗೌಡತಿಯನ್ನು ಅತ್ತೆ ಅಂತಲೇ ಕರೆಯುತ್ತಿದ್ದರು. ೩೦ ವರ್ಷಗಳ ಕಾಲ ಸೊಸೆಯಾಗಿ ಸುಮಿತ್ರಮ್ಮ ನಡೆದುಕೊಂಡರು. ಈಗಲೂ ಶಿವನಗೌಡ ಪಾಟೀಲ, ಬಸವನಗೌಡ ಪಾಟೀಲ, ಚನ್ನಮ್ಮ ಬಸವನಗೌಡ ಪಾಟೀಲ್, ಸೋಮನಗೌಡ್ರ, ಯಲ್ಲಪ್ಪಗೌಡ್ರ ಹಾಗೂ ಕರಮಡಿ ಈ ಎಲ್ಲಾ ಮನೆತನಗಳು ಈಗಲೂ ಒಂದೇ ಮನೆತನದವರಂತೆ ಬಾಳುತ್ತಿದ್ದಾರೆ.

### ರಾಜಕೀಯ ಮತ್ತು ಸಮಾಜ ಸೇವೆ : (ಗಾಂಧೀವಾದಿ)

ಜಕ್ಕಲಿಯ ಶ್ರೀಮಂತರೂ, ೩೦೦ ಎಕರೆ ಜಮೀನುದಾರರಾದ ಆಂದನಾಪ್ಪ ದೊಡ್ಡ ಮೇಟಿಯವರಿಗೂ, ಗದಗ ಶಹಪೂರಪೇಟದ ಕುಬಸದ ನೂರಂದಪ್ಪ

ಹಾಗೂ ಅವರ ತಮ್ಮ ಶಿವಪ್ಪನವರಿಗೂ ಅನ್ಯೋನ್ಯ ಗೆಳೆತನ. ಮುಂಬೈ ಪ್ರಾಂತದ ಹಿಂದಿನ ಶಿಕ್ಷಣ ಮಂತ್ರಿಗಳಾದ ಸರ್. ಸಿದ್ಧಪ್ಪ ಕಂಬಳಿಯವರ ''ಕಂಬಳಿ ಪಕ್ಷ''ಕ್ಕಾಗಿ ದೊಡ್ಡಮೇಟಿಯವರು ತಮ್ಮನ್ನು ಅರ್ಪಿಸಿಕೊಂಡು ರಾಜಕೀಯದಲ್ಲಿ ದುಡಿಯುತ್ತಿದ್ದರು. ದೊಡ್ಡಮೇಟಿಯವರ ಮನೆ ಸದಾ ೧೦-೨೦ ಆಳುಗಳಿಂದ ತುಂಬಿರುತ್ತಿತ್ತು. ಮೇಜುವಾಣೆ ಒಂದು ಚಿಕ್ಕ ಸಂಸ್ಥಾನದಂತೆ ಇತ್ತು. ಜಕ್ಕಲಿಯ ಜನ ಅವರ ಬೆಂಬಲಿಗರಾಗಿ ಸ್ವಾತಂತ್ರ್ಯ ಆಂದೋಲನಕ್ಕೆ ಧುಮಿಕಿದರು. ಒಮ್ಮೆ ೧೯೩೧ರಲ್ಲಿ ದೊಡ್ಡಮೇಟಿಯವರು ನೆಹರೂರವರನ್ನು ಜಕ್ಕಲಿಗೆ ಕರೆಸಿದ್ದರು. ಗಾಂಧೀವಾದಿ ಅನಂತರಾಯ ಜಾಲಿಹಾಳರ ಬೆಂಬಲ ದೊಡ್ಡಮೇಟಿ ಯವರಿಗಿದ್ದುದರಿಂದ ಇದು ಸಾಧ್ಯವಾಗಿತ್ತು. ಸುಮಾರು ೧೭-೧೮ ಸಾವಿರ ಜನ ಸೇರಿತ್ತು. ಪಕ್ಕದ ಊರಿನ ಸಿದ್ಧಲಿಂಗಯ್ಯನವರೂ ಬೂಹಾಳದ ಜನರೊಡನೆ ನೆಹರೂ ಅವರನ್ನು ನೋಡಲು ಜಕ್ಕಲಿಗೆ ಹೋಗಿದ್ದರು. ಗದಗಿನ ಕುಬಸದ ಬಂಧುಗಳು ದೊಡ್ಡಮೇಟಿಯವರಿಗೆ ಬೆಂಗಾವಲಾಗಿದ್ದರು. ಹೀಗಾಗಿ ಜಕ್ಕಲಿಗೆ ನೆಹರೂ ಬಂದಾಗ ಕುಬಸದವರು ಸಿದ್ಧಲಿಂಗಯ್ಯನವರಿಗೂ ನೆಹರೂ ಭೇಟಿಯಲ್ಲಿ ವಿಶೇಷ ಸ್ಥಾನ ದೊರಕಿಸಿಕೊಟ್ಟರು.

ಮುಂದೆ ಬ್ರಿಟೀಷ ಸರಕಾರ ನೆಹರೂರವರನ್ನು ಜಕ್ಕಲಿಗೆ ಕರೆಸಿದ್ದಕ್ಕೆ ಆಕ್ಷೇಪಿಸಿ ಬ್ರಿಟೀಷರು ದೊಡ್ಡಮೇಟಿಯವರನ್ನು ಜಕ್ಕಲಿ ಚಾವಡಿಗೆ ಕರೆಸಿ ವಿಚಾರಣೆ ನಡೆಸುತ್ತಿದ್ದಾಗ ಇಡೀ ಜಕ್ಕಲಿಯೇ ಬ್ರಿಟೀಷರ ವಿರುದ್ಧ ಎದ್ದು ನಿಂತ ಸಿದ್ಧಲಿಂಗಯ್ಯನವರು ಬೂದಿಹಾಳದಿಂದ ತಮ್ಮ ಊರಿನ ಸ್ವಾತಂತ್ರ್ಯ ಹೋರಾಟಗಾರರನ್ನು ಜಕ್ಕಲಿಗೆ ಕರೆತಂದು ದೊಡ್ಡಮೇಟಿಯವರನ್ನು ಬೆಂಬಲಿಸಿ ಬ್ರಿಟೀಷ ಅಧಿಕಾರಿಯನ್ನು ತರಾಟೆಗೆ ತೆಗೆದುಕೊಂಡು ನೆಹರೂರವರನ್ನು ಕರೆಸಿಕೊಂಡದ್ದನ್ನು ಸಮರ್ಥಿಸಿಕೊಂಡರು.

ಜಕ್ಕಲಿಗೆ ದೊಡ್ಡಮೇಟಿಯವರು, ಗದುಗಿನ ಕರ್ನಾಟಕ ಬಂಧು ಪತ್ರಿಕೆಯ ಸಂಪಾದಕರಾದ ಚನ್ನಬಸಯ್ಯ ಹಿರೇಮಠರು ೧೯೩೩ರಲ್ಲಿ ಮಹಾತ್ಮ ಗಾಂಧೀಜಿಯ ವರನ್ನು ಪುಣೆಯ ಕಾರಗೃಹದಲ್ಲಿ ಕಂಡುಬಂದರು. ಆಗಲೇ ದೊಡ್ಡಮೇಟಿಯವರ ಸ್ವಾತಂತ್ರ್ಯ ಹೋರಾಟ ಗಾಂಧೀಯವರಿಗೆ ತಿಳಿದಿತ್ತು. ಆತ್ಮೀಯತೆಯಿಂದ ಕಂಡು ವಾಪಸ್ಸಾಗುವಾಗ ಜಕ್ಕಲಿಗೆ ಗಾಂಧೀಜಿಯವರನ್ನು ಕರೆಸಬೇಕೆಂದು ನಿರ್ಣಯಿಸಿದಾಗ ದೊಡ್ಡಮೇಟಿಯವರು ಬೂದಿಹಾಳ ಸಿದ್ಧಲಿಂಗಯ್ಯನಿಗೆ ವ್ಯವಸ್ಥೆ ಮಾಡಲು ಮಂಚೂಣಿಯಲ್ಲಿಟ್ಟರು. ಮಹಾತ್ಮರು ಜಕ್ಕಲಿಗೆ ಆಗಮಿಸಿದಾಗ ೨೦-೨೫ ಸಾವಿರ ಜನರು ಮಹಾತ್ಮರ ದರ್ಶನ ಪಡೆದ ಭಾಗ್ಯವಂತರು. ಸ್ವಾತಂತ್ರ್ಯದ ಮೊಳಕೆ ಅಲ್ಲಿಗೆ ಪ್ರಾರಂಭವಾಯಿತು. ಸಿದ್ಧಲಿಂಗಯ್ಯನವರ ಜೊತೆ ಜಕ್ಕಲಿಯಿಂದ ಬಂದ ಸ್ವಾತಂತ್ರ್ಯ ಹೋರಾಟಗಾರರೆಂದರೆ ರಾಜೇಸಾಬ, ಬಸಪ್ಪ, ಕೃಷ್ಣಾಚಾರಿ ಜೋಶಿ ಸ್ವಾತಂತ್ರ್ಯಕ್ಕಾಗಿ ಜೈಲು ಕಂಡುಬಂದರು. ಬೂದಿಹಾಳಕ್ಕೆ ಬಂದು ಊರಿನ ಅಗಸಿಯಲ್ಲಿ

ಭಾರತಾಂಬೆಯ ಫೋಟೋ ಹಾಗೂ ಕಾಂಗ್ರೆಸ್ ಧ್ವಜ ಹಿಡಿದು ''ಭಾರತಮಾತಾ ಕೀ ಜೈ'' ''ಒಂದೇ ಮಾತರಂ'' ಎಂಬ ಎತ್ತರದ ಧ್ವನಿ ಇಡೀ ಊರನ್ನೇ ಕಂಪಿಸುವಂತೆ, ಜಯಘೋಷ ಮಾಡಿದರು. ಈ ಜಯಘೋಷ ಕೇಳಿದ ಸಿದ್ಧಲಿಂಗಯ್ಯ ಮನೆಯಲ್ಲಿದ್ದವರು ಅಗಸಿಯತ್ತ ಓಟ. ಸ್ವಾತಂತ್ರ್ಯ ಹೋರಾಟಗಾರೊಡನೆ ಜಕ್ಕಲಿಯಿಂದ ಬಂದ ಸ್ವಾತಂತ್ರ್ಯ ಹೋರಾಟಗಾರರನ್ನು ಹುರಿದುಂಬಿಸಿ ''ವಂದೇ ಮಾತರಂ'' ''ಭಾರತ ಮಾತಾ ಕೀ ಜೈ'' ಸಿದ್ಧಲಿಂಗಯ್ಯನವರು ಕೂಗತೊಡಗಿದರು. ಎಲ್ಲಾ ಸ್ವಾತಂತ್ರ್ಯ ಹೋರಾಟಗಾರರಿಗೆ ತಮ್ಮ ತೋಟದಲ್ಲೇ ಊಟಕ್ಕೆ ವ್ಯವಸ್ಥೆ ಮಾಡಿ ಬೀಳ್ಕೊಟ್ಟರು. ಅಂದಿನಿಂದ ಸಿದ್ಧಲಿಂಗಯ್ಯನವರು ಪಕ್ಕಾ ಗಾಂಧೀವಾದಿ ಹಾಗೂ ಖಾಧಿದಾರಿಯಾಗಿಬಿಟ್ಟರು. ಇಲ್ಲಿ ಒಂದು ಮಹತ್ವದ ಪ್ರಸಂಗವೆಂದರೆ ಗಾಂಧೀಯವರನ್ನು ಕರೆಸಿದಾಗ ಸಭೆಗೆ ೧೦–೨೦ ಸಾವಿರ ಜನಕ್ಕೆ ಹಿಡಿಯುವಷ್ಟು ಜಾಗ ಬೇಕಾಗಿತ್ತು. ಆಗ ಎಲ್ಲಾ ಹೊಲಗಳು ಗೋಧಿ, ಕಡಲೆ, ಕುಸುಬಿ ಜೋಳದ ಬೆಳೆಗಳಿಂದ ತುಂಬಿದ್ದವು. ಇನ್ನೇನು ೧೫–೨೦ ದಿನಗಳಲ್ಲಿ ಕಟಾವು ಮಾಡಬೇಕಾಗಿತ್ತು. ಆದರೆ ಗಾಂಧೀಯವರ ಆಗಮನ ಹತ್ತಿರವಿದ್ದುದರಿಂದ ಎರಡಲ್ಲ ಹತ್ತು ಕೂರಿಗೆ ಹೊಲ ಹರಗಿಸಿಬಿಟ್ಟರು. ಅದೇ ಜಾಗದಲ್ಲಿ ಸಭೆ ನಡೆಯಿತು. ಆ ಹೊಲದಲ್ಲಿ ಗಾಂಧೀಯವರ ಪಾದ ಸ್ಪರ್ಶವಾಗಿದೆ ಎಂದು ದೊಡ್ಡಮೇಟಿಯವರು ಆ ಹೊಲವನ್ನು ಸಾರ್ವಜನಿಕರಿಗೇ ದಾನ ಮಾಡಿಬಿಟ್ಟರು. ಇಂದಿಗೂ ಆ ಜಾಗದಲ್ಲಿ ಜಕ್ಕಲಿಯ ಸರ್ಕಾರಿ ಶಾಲೆ ಕಟ್ಟಲಾಗಿದೆ ಹಾಗೂ ಗಾಂಧೀ ಮೂರ್ತಿ ಸ್ಥಾಪಿಸಲಾಗಿದೆ. ದೊಡ್ಡಮೇಟಿಯವರ ಈ ದೇಶ ನಿಷ್ಠೆ ಸಿದ್ಧಲಿಂಗಯ್ಯನವರ ಮೇಲೆ ತುಂಬ ಪ್ರಭಾವ ಬೀರಿತು.

ಯಾಕೋ ೨–೩ ಜನ ಬಂದು ಬೆಳಗಿನ ೬ ಘಂಟೆಗೆ ಕರೆದಾಗ ಸಿದ್ಧಲಿಂಗಯ್ಯನವರು ತಣ್ಣೀರು ಸ್ನಾನ ಮಾಡಿ, ಖಾದಿಬಟ್ಟೆ ಧರಿಸಿ ಜಕ್ಕಲಿಗೆ ಹೋಗಿ ಬರ್ತೀನಿ ಅಂತಾ ಸುಮಿತ್ರಮ್ಮಗೆ ಹೇಳಿ ಹೊರಟರು. ವಿಶಾಲವಾದ ಅಕ್ಕಪಕ್ಕದ ಬಂಕ, ಬಾಗಿಲ ಪ್ರವೇಶಿಸದೊಡನೆ ಎಂಟೆತ್ತಿನ ಕಮತದ ಜೋರು ಹೋರಿಗಳು ಗೋದುಲಿಯಲ್ಲಿ ಮೇಯುತ್ತಿವೆ. ಆಳುಗಳ ಓಡಾಟ, ದೊಡ್ಡಮೇಟಿ ಒಳ ಬಂಕದಲ್ಲಿ ಕುಳಿತಿದ್ದಾರೆ, ಸಿದ್ಧಲಿಂಗಯ್ಯನವರನ್ನು ನೋಡುತ್ತಲೇ ''ನೂರು ವರ್ಷ ಆಯುಷ್ಯ ಸಿದ್ಲಿಂಗಪ್ಪ ನಿನಗ ಈಗಲೆ ನೆನಸಿದೆ, ಏನು ಬೂದಿಹಾಳ ಬಾಳ ಚಲೋ ಪರಾಮರ್ಕಿ ಮಾಡ್ತಿ ಅಂತಾ, ನಮ್ಮ ಜನ ಹೇಳಿದರು. ಅದಪ್ಪಾ ಭಾರತಮಾತೆ ಮಕ್ಕಳಂದ್ರ ಆಯ್ತು. ಆ ಲೈಬ್ರರಿ ಒಳಗ ಚಲೋ ಚಲೋ ಪುಸ್ತಕ ಅದಾವ ಅವನ್ನೊದಿಕೋ. ನಾಳೆ ಅಲ್ಲಲ್ಲಿ ಭಾಷಣ ಮಾಡಕ ಬೇಕಾತ್ತದ, ಚಲೋ ಲೇಖನಗಳು ಬರ್‍ಯಾಕ ಶುರುಮಾಡು'' ಅಂದ್ರು.

ಅಲ್ಲಿವರೆಗೆ ಅಲ್ಲಲ್ಲಿ ಅಲೆದಾಡಿದ, ಸಿದ್ಧಲಿಂಗಶಾಸ್ತ್ರಿಗಳಿಗೆ ಒಂದು ನಿಯಮ ಅಪ್ಯಾಯವಾಗಿ ಗೊತ್ತಾಗಿ ನಿತ್ಯ ದೊಡ್ಡಮೇಟಿ ಅವರ ಮನೆಗೆ ಬೆಳಿಗ್ಗೆ ಲೈಬ್ರರಿಯಲ್ಲಿ

ಓದುವುದು, ಅವರ ಕೂಡ ಅಲ್ಲಲ್ಲಿ ಮೀಟಿಂಗ, ಸಭೆ, ಸಮಾರಂಭಗಳಲ್ಲಿ ಭಾಗವಹಿಸುವ ಬೂದಿಹಾಳದಿಂದ ಬಂದು ಬಿಡುತ್ತಿದ್ದರು. ಆ ನಂಟಿನಿಂದ ಸಿದ್ಧಲಿಂಗಯ್ಯನವರಿಗೆ ಹುಲಕೋಟಿ, ಕಂಬಳಿಯವರು (ಅಂದಿನ ನ್ಯಾಯಾಧೀಶ ಹಾಗೂ ಮಾಜಿಮಂತ್ರಿ) ಕರ್ನಾಟಕ ಬಂಧು ಸಂಪಾದಕ ಚನ್ನಬಸವಯ್ಯ ಹಿರೇಮಠ, ಹುಯಿಲಗೋಳ ಕೃಷ್ಣರಾಯರು, ನೇಸ್ವಿ, ಎಸ್.ಆರ್. ಕುಂಠಿ, ಹೈಕೋರ್ಟ್ ನ್ಯಾಯಾಧೀಶ ಮಹಾದೇವಯ್ಯನವರು, ಬೆಳಗಾವಿ ಕೆ.ಎಸ್. ಪಾಟೀಲರ ಪರಿಚಯವಾಯುತು. ದೊಡ್ಡಮೇಟಿಯವರಿಗೆ ಅಂದಿನ ಫೋನ್ ಸಂಪರ್ಕ ಸಹ ಅಷ್ಟೊಂದು ಇದ್ದಿಲ್ಲ ಯಾರನ್ನೇ ಕಾಣಲು ವಿಷಯ ತಿಳಿಸಲು ತಮ್ಮ ರಾಯಭಾರಿಯಾಗಿ ಸಿದ್ಧಲಿಂಗಯ್ಯನವರನ್ನೇ ಸ್ವಾತಂತ್ರ್ಯ ಹೋರಾಟದ ಈ ಭಾಗದ ''ಸರ್ವಾಧಿಕಾರಿ'' (ರಾಯಭಾರಿ) ನಿಷ್ಠಾವಂತ ''ಸಮಾಜಸೇವಕ'' ಹೀಗೆ ಪತ್ರದಲ್ಲಿ ಅವರನ್ನು ಪರಿಚಯಿಸುತ್ತಿದ್ದರು.

ಗಜೆಂದ್ರಗಡದಲ್ಲಿ ಕಬ್ಬೂರ ವಕೀಲರು ಸ್ಥಾನಬದ್ದರಾಗಿದ್ದಾಗ ''ಕರನಿರಾಕರಣೆ'' ಚಳುವಳಿ, ರಾಮದುರ್ಗ ಗುಂಡೇಟಿನ ಘಟನೆಯಿಂದಾಗಿ ದೊಡ್ಡಮೇಟಿಯವರನ್ನು ಜೈಲಿಗೆ ಹಾಕಿದಾಗ ಸಿದ್ಧಲಿಂಗಯ್ಯನವರು ಚಾಣಾಕ್ಷತೆಯಿಂದ ಹೊರಗಿನ ಎಲ್ಲ ಆಗು ಹೋಗುಗಳನ್ನು ಜೇಲಲ್ಲಿ ಇರುವ ದೊಡ್ಡಮೇಟಿಯವರಿಗೆ ತಿಳಿಸುತ್ತಿದ್ದರು. ಶ್ರೀ ರಂಗನಾಥ ದಿವಾಕರ, ಎಮ್.ಸಿ. ಪಾಟೀಲ, ಕೆ.ಎಫ್. ಪಾಟೀಲ, ಕಬ್ಬೂರ, ಜಾಲಿಹಾಳ ಶಾಂತಗೇರಿ ವಕೀಲರು, ರಾಚಯ್ಯ ವಕೀಲರು, ಮೆಣಸಿನಕಾಯಿ ವಕೀಲರು ಮುಂತಾದವರೊಡನೆ ಒಮ್ಮೆ ೨೪–೨೫ ವರ್ಷದ ಚುರುಕು ಸ್ವಾತಂತ್ರ್ಯ ಹೋರಾಟಗಾರ ತನ್ನ ಶಕ್ತಿ ತೋರಿಸಿದ್ದ. ದೊಡ್ಡಮೇಟಿಯವರು ಜೈಲಲ್ಲಿ ಇದ್ದಾಗ ಬ್ರಿಟೀಷರ ಕಣ್ಣು ಜಕ್ಕಲಿ ಗಾಮದ ಮೇಲೆ ಬಿತ್ತು, ಈ ಗ್ರಾಮ ಚಿಕ್ಕದಾದರೂ ''ಕರ್ನಾಟಕದ ಬಾಂಗ್ಲಾ'' ಅಂತಲೇ ಕರೆಯಿಸಿ ಕೊಂಡಿತ್ತು. ಹೀಗಾಗಿ ದೊಡ್ಡಮೇಟಿಯವರ ಸಂಪರ್ಕ ಹೊಂದಿದವರನ್ನೆಲ್ಲಾ ಬಂಧಿಸಲು ಪ್ರಾರಂಭಿಸಿದ್ದರು.

ಫಿರಂಗಿಗಳ ಕಣ್ಣು ಬಿಳಿ ಖಾದಿ ಧರಿಸಿದ ಲಾಲಬಹದ್ದೂರ್ ಶಾಸ್ತ್ರಿ ತರಹ ಇರೋ ಹುಡುಗನನ್ನು ಹುಡುಕಲು ಶುರುವಾಯಿತು. ಮಾಹಿತಿ ಕಲೆಹಾಕಲು ಪ್ರಾರಂಭಿಸಿದಾಗ, ಆ ವ್ಯಕ್ತಿ ಬೇರೆ ಯಾರೂ ಆಗಿರಲಿಲ್ಲ, ಸಿದ್ಧಲಿಂಗಯ್ಯನವರೇ ಆಗಿದ್ದರು. ಸಿದ್ದಲಿಂಗಯ್ಯನಿಗೆ ಜೈಲಿಗೆ ಸೇರಿ ದೇಶಸೇವೆ ಮಾಡುವ ಆಸೆ. ಆದರೆ ಆಚಾರ ವಿಚಾರಕ್ಕೆ ಪ್ರಾಧಾನ್ಯ ನೀಡಿದ ಸಿದ್ಧಲಿಂಗಯ್ಯನವರಿಗೆ ಶಿವಪೂಜೆಗೆ ತೊಂದರೆ, ಆಗಭಾರದೆಂದು ಪತ್ನಿ ಸುಮಿತ್ರಮ್ಮ ಮನೆಗೆ ಬಂದ ಬ್ರಿಟೀಷ್ ಪೋಲಿಸರ ವಿಚಾರಣೆಯಲ್ಲಿ ಊರವರೆಲ್ಲಾ ಸಿದ್ಧಲಿಂಗಯ್ಯನವರು ಶಿವಪೂಜಾನಿಷ್ಠರು. ಜವಳ ಬಸವೇಶನ ಸದ್ಭಕ್ತರು. ಅವರು ಸ್ವಾತಂತ್ರ್ಯ ಹೋರಾಟಗಾರರಲ್ಲವೆಂದು ಹೇಳಿ ಕಳಿಸಿದರು. ಈತನ ಸಾತ್ವಿಕತೆ ತಿಳಿದ ಲೋಕಲ್ ಪೋಲಿಸ್‌ರು ತಮ್ಮ ವಿಚಾರಣೆಯ ರಿಪೋರ್ಟಿನಲ್ಲಿ ಸಿದ್ಧಲಿಂಗಯ್ಯನವರ ಬಗೆಗೆ ಒಳ್ಳೆಯ ಅಭಿಪ್ರಾಯ

ಬರೆದು ಕೈಬಿಟ್ಟರು. ಆದರೂ ಗುಪ್ತಗಾಮಿನಿಯಾಗಿ ಸಿದ್ಧಲಿಂಗಯ್ಯನವರು ರಾತ್ರಿ ಹೊತ್ತು ಜಕ್ಕಲಿಯ ದೊಡ್ಡಮೇಟಿ ಅವರನ್ನು ಕಂಡು ಹೋರಾಟದ ರೂಪರೇಶೆಗಳನ್ನು ಹಾಕಿಸಿಕೊಂಡು ರಾತ್ರಿಯೇ ಬಂದು ಆ ಸ್ವಾತಂತ್ರ್ಯ ಹೋರಾಟದ ಎಲ್ಲಾ ವ್ಯವಸ್ಥೆ ಮಾಡುತ್ತಿದ್ದರು. ಮಾರನಬಸರಿ, ನಿಡಗುಂದಿ, ಹಾಳೆಕೆರೆ, ಗಜೇಂದ್ರಗಡ, ರೋಣ, ತೋಟಗಂಟಿ, ನಾಯಿ ಮಲ್ಲಾಪುರ, ಕೋಡಿಕೊಪ್ಪ, ಅಬ್ಬಿಗೇರಿ, ನರೇಗಲ್ ಜನತೆ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವಂತೆ ಪರೋಕ್ಷ ಅಪರೋಕ್ಷವಾಗಿ ಹುರುದುಂಬಿಸಿದರು.

ದೊಟ್ಟಮೇಟಿ ಮತ್ತು ರೋಣದ ಸಂಗನಗೌಡ ಇಬ್ಬರಲ್ಲಿ ರಾಜಕೀಯ ವೈಷಮ್ಯ ಬೆಳೆದು ಹಾವು–ಮುಂಗಿಸಿಯಂತಾಗಿದ್ದರು. ಯಾರು ಯಾರನ್ನು ಮುಗಿಸುತ್ತಾರೋ ಅನ್ನುವಷ್ಟು ವೈಷಮ್ಯ. ಇದು ಸಿದ್ಧಲಿಂಗಯ್ಯನವರಿಗೆ ಸರಿಕಾಣಲಿಲ್ಲ. ಆಗ ಗದುಗಿನ ಕುಬಸದ ಶಿವಪ್ಪನವರಲ್ಲಿ ಸಿದ್ಧಲಿಂಗಯ್ಯನವರು ಹೀಗೆ ಸಲಹೆ ನೀಡಿ, ''ಒಮ್ಮೆ ಚುನಾವಣೆಯ ಪ್ರಚಾರದಲ್ಲಿ ಸಂಗನಗೌಡ್ರ ಮನೆಗೆ ದೊಡ್ಡಮೇಟಿಯವರು ಹೋಗಿಬರಲಿ. ಅಂದ್ರೆ ಈ ನಡುವೆ ಜಗಳ ಹಚ್ಚೋ ಜನಕ್ಕೆ ಬುದ್ದಿಬರ್ತೈತೆ. ವೈಷಮ್ಯ ದೂರಾಗಬಹುದು ನೋಡ್ರಿ ದೊಡ್ಡವರು ನೀವು. ನನಗ ತಿಳಿದಷ್ಟು ಹೇಳ್ತೀನಿ ಅಂದ್ರು''. ಶಿವಪ್ಪನವರು ಸಿದ್ಧಲಿಂಗಯ್ಯನ ಈ ಮಾತು ತಕ್ಷಣ ಒಪ್ಪದಿದ್ದರೂ ಕುಳಿತು ವಿಚಾರಿಸಿದರು. ಮೂರನೇ ದಿನ ಸಿದ್ಧಲಿಂಗಯ್ಯನವರ ಸಲಹೆ ಸರಿ ಕಾಣಿಸಿತು. ತಕ್ಷಣ ಶಿವಪ್ಪನವರು ಜಕ್ಕಲಿಗೆ ಬಂದ್ರು ಆಗಲೇ ದೊಡ್ಡಮೇಟಿಯವರು ಚುನಾವಣಾ ಪ್ರಚಾರ ಸಲುವಾಗಿ ಪ್ರವಾಸದಲ್ಲಿದ್ದುದನ್ನು ತಿಳಿದು ಹಾಗೇ ನೇರ ರೋಣಕ್ಕೆ ಹೋದರು. ದೊಡ್ಡಮೇಟಿಯವರು ಪ್ರಚಾರ ಮಾಡುತ್ತಿದ್ದಲ್ಲೆ ಹೋಗಿ ''ಸಂಗನಗೌಡ್ರ ಮನೆಗೆ ಹೋಗಿ ನಿಮ್ಮಿಬ್ಬರಲ್ಲಿರುವ ವೈಷಮ್ಯ ತಿಳಿಗೊಳಿಸದಿದ್ದರೆ ಚುನಾವಣೆ ಎದುರಿಸಲು ಕಷ್ಟ'' ಎಂದು ತಿಳಿಸಿದರು.

"Everything is right in love and in politics" ದೊಡ್ಡಮೇಟಿಯವರು ತಮ್ಮ ಅಭಿಮಾನಕ್ಕೆ ಧಕ್ಕೆ ಬಂತೆಂದು ಶಿವಪ್ಪನವರನ್ನು, ಸಿದ್ಧಲಿಂಗಯ್ಯನವರನ್ನು ದುರುದುರು ಸಿಟ್ಟುನಿಂದ ನೋಡಿದರು. (ಸಿಟ್ಟು) ಸ್ವಲ್ಪ ಮೌನದಿಂದ ಆಯ್ತು. ಆಮೇಲೆ ನೋಡೋಣ 'ನೀವು ಗಡಗಿಯವರ ಮನೆಯಲ್ಲಿರಿ' ಅಂತಾ ಅವರ ಬೀಗರ ಮನೆಗೆ ಕಳುಹಿಸಿದರು. ಸಾಯಂಕಾಲ ೫ ಗಂಟೆ ಆಗಿತ್ತು ಗಡಗಿಯವರ ಮನೆ ಆಳು ಓಡಿ ಬಂದು ತೇಕುತ್ತಾನಿಂತನು. ಗಡಗಿಯವರ ಮನೆಯಲ್ಲಿ ಸಿದ್ಧಲಿಂಗಯ್ಯನವರು, ಶಿವಪ್ಪನವರು, ಮಾತಾಡುತ್ತಾ ಕುಳಿತಿದ್ದರು. ''ಎಪ್ಪಾ'' ಅಪ್ಪಾರಽಽ ಅಪ್ಪಾರಽಽ, ಸಂಗನಗೌಡ್ರ ಮನೆಗೇ ಪ್ರಚಾರ ಮಾಡ್ತಾ ಮಾಡ್ತಾ ಹೋಗಿದ್ದಾರೆ. ಶಿವಪ್ಪನವರು, ಸಿದ್ಧಲಿಂಗಯ್ಯ ಈರ್ವರು ಎದ್ದು ನಿಂತರು ಗಾಬರಿಯಾಗಿ ! ''ಏನಾತೋ, ಏನಾತೋ'' ಬೀಗರು ಗಡಿಗಿಯವರಿಗೆ ಕಾತುರ ! ಭಯ. ಏನಿಲ್ರಿ, ಗೌಡ್ರ ಇದ್ದಿಲ್ಲ ಅಮ್ಮಾರಿದ್ರು, ಬಾಳ ಖುಷಿ ಪಟ್ರು. ಅಪ್ಪಾರ್ನ್ ನೋಡಿ ಅವರಿಗೂ ಗಾಬ್ರಿ ಆತ್ರಿ,

ಖುಷೀಲೇ ಮಾತಾಡಿ ಚಹಾ ತರ್ತೇನಂದ್ರು, ಬೇಡವ್ವಾ, ದಣಿವಾಗ್ಯೆತಿ. ಹ್ಯಾಂಗ ಅದೀ ಅಂದ್ರು ಅಪ್ಪಾರು. ಇವತ್ತ ಕೇಳಂಗಾತೇನು ? ಅಂದ್ರ, "ಇಲ್ಲೆ ದಿನಾಲು ಕೇಳಬೇಕಂದ್ರೆ ಈ ಹಾಳು ರಾಜಕಾರಣ ಅಂತಿದ್ರು." "ಹೂಂ ! ಆದ್ರಾ ನಿಮ್ಮಬ್ಬರಿಗೆ ಕೂಳು ಹಾಕ್ಯೆತೆ ನೋಡು. ಲಿಂಬಿಹಣ್ಣಿನ ಜ್ಯೂಸ್ ತಂದ್ರು ಅಪ್ಪಾರು ಖುಷಿಯಿಂದ ಕುಡಿದು ಈಗನೋಡು ಇಡೀ ದಿನದ ಶಕ್ತಿ ಬಂತು. ಬರ್ಲಬೇ ಅಂದ್ರು" ಎಂದೊಡನೆ ಶಿವಪ್ಪನವರು, ಸಿದ್ಧಲಿಂಗಯ್ಯನವರ ಕೈ ಕೈ ಒಬ್ಬರೊಬ್ಬರು ಹಿಸುಕಿ ಗೊತ್ತಿಲ್ಲದಾಂಗ ಖುಷಿ ಪಟ್ರು. ಮನಿಗೆ ಬಂದ ಸಂಗನಗೌಡ್ರಗೆ ವಿಷಯ ಗೊತ್ತಾಗಿ ಕಡು ಕೋಪ ಬಂದರೂ ಒಳಗೇ ಗೆಳೆಯಾ ಮನೆಗೆ ಬಂದ ಹೋದ ಖುಷಿ. ಕೊನೆಗೆ ವೈಷಮ್ಯ ಮರೆತು ಅಂದು ಮಾನಸಿಕವಾಗಿ ರಾಜಿ ಆದವ್ರು ಕೊನೆವರೆಗೂ ವೈರ ಸಾಧಿಸಲಿಲ್ಲ. ಇದು ಸಿದ್ಧಲಿಂಗಯ್ಯನವರು ಅವರಲ್ಲಿ ಬೆಸೆಸಿದ ರಾಜತಂತ್ರನಿಪುಣತೆ. ಇದು ಕುಬಸದ ಶಿವಪ್ಪನವರಿಗೆ ಮತ್ತು ದೊಡ್ಡಮೇಟಿಯವರಿಗೆ ಮನವರಿಕೆಯಾಗಿತ್ತು. ಸ್ವತಃ ಶಿವಪ್ಪನವರೂ ತಂದೆಯವರ ಬಗೆಗೆ ಬೆಂಗಳೂರಿನ ಶಾಸಕರ ಭವನದಲ್ಲಿದ್ದಾಗ ಈ ಮಾತು ಹೇಳ್ತಿದ್ರು. ಅಂದು ಹಾಕಿದ ಖಾದಿ ಕೊನೆಯವರೆಗೂ ಅಪ್ಪಾಜಿ ಅವರ ಯೂನಿಫಾರಂ ಆಯ್ತು. ಖಾದಿ ಉದ್ದನ ಜುಬ್ಬಾ, ಧೋತಿ, ಖಾದಿ ಟೊಪಿ, ಅವನ್ನ ಹೊಲೆಯವವರು ಸಹ ಜಕ್ಕಲಿ ಶರಣಪ್ಪನೇ ಆಗಬೇಕು. ಬೇರೆ ಎಲ್ಲಿ ಹೊಲಿಸಿದ್ರೂ ಶಾಸ್ತ್ರಿಗಳಿಗೆ ತೃಪ್ತಿ ಇಲ್ಲ. ಅವರಲ್ಲಿ ರಾಷ್ಟ್ರಪ್ರೇಮ ಎಷ್ಟೊಂದು ಬೇರೂರಿತು ಎಂದರೆ ಮಕ್ಕಳಾಗಿದ್ದರೂ, ಸುಮಿತ್ರಮ್ಮನ ೫೦ ತೊಲೆ ಬಂಗಾರದ ಒಡವೆಗಳನ್ನು ಮಾರಿದ ಹಣವೆಲ್ಲಾ ಸ್ವಾತಂತ್ರ್ಯ ಹೋರಾಟಕ್ಕಾಗಿ ವ್ಯಯಿಸಿದ್ದರು. ಹೆಂಡತಿಯ ಒಡವೆ ಅಲಂಕಾರಕ್ಕಿಂತ ಅವರಿಗೆ ಭಾರತೀಯ ಸ್ವಾತಂತ್ರ್ಯವೇ ಮುಖ್ಯವಾಗಿತ್ತು.

ಅಂತೂ ಭಾರತಮಾತೆಗೆ ೧೫–೦೮–೧೯೪೭ ಕ್ಕೆ ಸ್ವಾತಂತ್ರ್ಯ ಸಿಕ್ಕಾಗ ಸಿದ್ಧಲಿಂಗಯ್ಯನವರನ್ನು ನೋಡಬೇಕಾಗಿತ್ತು. ಸ್ವರ್ಗವೇ ಬಂದು ವಿಜಯಶ್ರೀ ಬಾಗಿಲ ತೆಗೆದಷ್ಟು ಸಂತಸ. ಕೈಯಲ್ಲಿ ಭಾರತಮಾತೆಯ ಸ್ವಾತಂತ್ರ್ಯದ ಕಾಂಗ್ರೆಸ್ ಧ್ವಜ ಹಿಡಿದು, ತಂಡೋಪ ತಂಡ ಸ್ವಾತಂತ್ರ್ಯ ವೀರರೊಡನೆ ರೋಣ ತಾಲ್ಲೂಕಿನ ಹಳ್ಳಿಹಳ್ಳಿಗಳಲ್ಲಿ ಪ್ರಭಾತಬೇರಿ ನಡೆಸಿದರು. "ಭಾರತಾ ಮಾತಾಕೀ ಜೈ" "ಸ್ವಾತಂತ್ರ್ಯ ವೀರರಿಗೆ ಜಯವಾಯ್ತು" "ಮಹಾತ್ಮ ಗಾಂಧೀಜೀ ಕೀ ಜೈ" "ಜವಾಹರಲಾಲ ಕೀ ಜೈ" "ವೀರ ದೊಡ್ಡಮೇಟಜೀ ಕೀ ಜೈ" "ಕರ್ನಾಟಕ ಮಾತೆಗೆ ಜೈ" ಎಂದು ಒಂದೇ ಎರಡೇ ತನುಮನವನ್ನೆ ಅರ್ಪಿಸಿ ಹೋರಾಟಗೈದ ಎಲ್ಲಾ ಸ್ವಾತಂತ್ರ್ಯ ವೀರರಲ್ಲಿ ವೀರಾವೇಶದ ಧ್ವನಿ. ಆ ಘೋಷಣೆ ನೋಡಲು ಹಬ್ಬವಾದರೆ; ವೀರ ವನಿತೆಯರಿಗೆ, ವೀರಸ್ವಾತಂತ್ರ್ಯ ಹೋರಾಟಗಾರರ ದಶ ದಶಕಗಳ ಕನಸೇ ನನಸಾದ ದಿಗ್ವಿಜಯ ದಿನ. ಸುವರ್ಣಾಕ್ಷರಗಳಿಂದ ಬರೆದ ದಿನ. ಪಂ॥ ಜವಹರಲಾಲ್ ಪ್ರಧಾನಿ, ಉಕ್ಕಿನ ಮನುಷ್ಯ ವಲ್ಲಭಭಾಯಿ ಪಟೇಲರು

ಮುಂತಾದವರನ್ನೊಳಗೊಂಡ ಸರ್ಕಾರ ರಚನೆಯಾದದ್ದು ತಮಗೆಲ್ಲ ತಿಳಿದಿದೆ. ಸಿದ್ಧಲಿಂಗಯ್ಯ ಹೊಸಮಠರವರ ಕಾರ್ಯಶೀಲತೆ ಕಂಡು ಗದಗಿನ ತೋಟದ ಗಂಗಪ್ಪ, ಶಿವಪ್ಪ, ಕುಬಸದ, ಎಸ್.ಪಿ. ಗದಗ (ಮಾಜಿ ಎಂ.ಎಲ್.ಎ) ಗದಗ ಕಾಂಗ್ರೆಸ್ಸಿನ ಕಮೀಟಿ ಸೆಕ್ರೆಟರಿಯನ್ನಾಗಿ ಆಯ್ಕೆ ಮಾಡಿದರು.

ಸಿದ್ಧಲಿಂಗಯ್ಯನವರ ಲೇಖನಿ ಎಷ್ಟು ಚುರಾಕಾಗಿತ್ತೆಂದರೆ ಗದಗದ ಕಾಂಗ್ರೆಸ್ಸಿನ ಯಾವುದೇ ಪತ್ರವ್ಯವಹಾರಗಳು, ಪ್ರಧಾನಿಜೊತೆಯಲ್ಲಿ, ಸಭಾಪತಿ ಜೊತೆಯಿರಲಿ ರಾಜ್ಯ ಕಾಂಗ್ರೆಸ್ಸಿನ ಪೋಷಕರಿರಲಿ, ಸಭೆ, ಸಮಾರಂಭಗಳಿರಲಿ ಅವರಿಗೆ ಪತ್ರ ಬರೆಯುವದಾಗಲಿ, ಭಾಷಣ ರಚನೆ ಮಾಡಿಕೊಡುವದಾಗಲಿ ಸಿದ್ಧಲಿಂಗಯ್ಯನವರೇ ಮಾಡುತ್ತಿದ್ದರು.

ದೊಡ್ಡಮೇಟಿಯವರು ಲೌಖಿಕದತ್ತ ಹೆಚ್ಚು ಒತ್ತು ನೀಡಿದ್ದು ಸಿದ್ಧಲಿಂಗಯ್ಯ ನವರಿಗೆ ಸರಿಕಾಣಲಿಲ್ಲ. ಇವರು ಮೇಧಾವಿ ದಾರ್ಶನಿಕನಾಗಬೇಕೆಂಬುದೇ ಅವರ ಹಿರಿದಾಸೆ ಆಗಿತ್ತು. ರೋಣ ತಾಲ್ಲೂಕನ್ನು ಭಾರತದ ಭೂಪಟದಲ್ಲಿ ಗಣ್ಯ ಸ್ಥಾನದಲ್ಲಿ ನಿಲ್ಲಿಸುವಾಸೆ. ಈ ಆಸೆ ನೆರವೆರಿಸುವ ಛಾತಿ ಇರುವುದು ದೊಡ್ಡಮೇಟಿಯವರಿಗೆ ಮಾತ್ರ. ಕಾರಣ ನೆಹರೂ, ಗಾಂಧೀ, ಅರವಿಂದರ ನೇರ ಸಂಪರ್ಕ, ಅವರಿಗೆ ಮಾತ್ರ ಇರುವುದು. ಈ ಮುಖಂಡ ಅಸಮಾನ್ಯನಲ್ಲ. ಆದರೂ ಜಕ್ಕಲಿ ಗದಗ ಡೆಲ್ಲಿಯ ಎಲ್ಲಾ ರಾಜಕೀಯ ಮುಖಂಡರ ನಾಲಿಗೆ ಮೇಲೆ ಇದೆ ಎಂದರೆ ಅದಕ್ಕೆ ದೊಡ್ಡಮೇಟಿಯವರು, ಶಿವಪ್ಪನವರೇ ಕಾರಣ. ಈ ಎರಡೂ ರತ್ನಗಳು ಕರ್ನಾಟಕದ ಪ್ರತಿಧ್ವನಿಯಾಗಿ ರೂಪಗೊಳ್ಳಬೇಕೆಂದರೆ ಅವರಲ್ಲಿ ಅಧ್ಯಾತ್ಮಿಕ ಮೆಳೈಸಿಕೊಂಡರೆ ಮಾತ್ರ ಸಾಧ್ಯವೆಂದು ಸಿದ್ಧಲಿಂಗಯ್ಯನವರ ಮಹಾದಾಸೆ. ಆದರೆ ಯಾರಿಗೆ ಈ ವಿಷಯ ಹೇಳಿದರೆ ಒಳಿತಾಗಿತ್ತು ಎಂಬ ಪ್ರಶ್ನೆ ಅವರಿಗೆ ಕಾಡುತ್ತಿತ್ತು.

ಕುಬಸದ ಶಿವಪ್ಪನವರು ಕರ್ನಾಟಕ ಬಂಧು ಪತ್ರಿಕೆಯ ಚನ್ನಬಸಯ್ಯ ಹಿರೇಮಠ, ಹಿರೇಗೌಡ್ರು, ನೇಸ್ವಿ, ತೋಟದ ಗಂಗಪ್ಪ, ದೊಡ್ಡಮೇಟಿಯವರು ಮುಂತಾದವರೇ ಒಡನಾಡಿಗಳು, ಆತ್ಮೀಯರು ಕಷ್ಟ ಸುಖ ಹಂಚಿಕೊಂಡವರು. ಅರವಲ್ಲಿ ಈ ಮೇಲೆ ಹೇಳಿದ ವಿಚಾರ ತಿಳಿಸಿದರು. ಸಿದ್ಧಲಿಂಗಯ್ಯನವರ ಈ ಮಾತು ಅವರಿಗೆ ತಕ್ಷಣ ರುಚಿಸಲಿಲ್ಲ. ಕಾರಣ ದೊಡ್ಡಮೇಟಿಯವರಲ್ಲಿ ಇದ್ದ ಒಂದು ವ್ಯಾಮೋಹ, ಅವರೆಲ್ಲರಿಗೆ ತಿಳಿದಿತ್ತು. ಆದರೆ ಸಿದ್ಧಲಿಂಗಯ್ಯನವರಿಗೆ ತಿಳಿದಿರಲಿಲ್ಲ.

ಸಿದ್ಧಲಿಂಗಯ್ಯನವರಿಗೆ ಆಧ್ಯಾತ್ಮವೂ ಗುರುಕರಣೆಯಿಂದ ದೈವದತ್ತವಾಗಿ ಬಂದಿತ್ತು. ಅವರಲ್ಲಿ ಭಾರತ ಸ್ವಾತಂತ್ರ್ಯ ಪ್ರೇಮ, ನಿಷ್ಠೆ ಎಷ್ಟಿತ್ತೋ, ಈ ದೇಶದ ಭವಿಷ್ಯ ಧರ್ಮದ ಮೇಲೆ ನಿಂತಿದೆ ಎಂಬ ತಾತ್ವಿಕ ನೆಲೆಗಟ್ಟು ಅವರಲ್ಲಿ ಬೇರೂರಿತ್ತು. ಸ್ವಾಮಿ ವಿವೇಕಾನಂದರ ಎಂಬೋಣದಂತೆ. "If administration is lost Engalnad will lost, if Economic is lost America will lost. If Dharma

is lost India will lost" ಸ್ವಾತಂತ್ರ್ಯ ಸಿಕ್ಕಿರಬಹುದು. ಆದರೆ ಅದು ಧರ್ಮದನೆಲೆಗಟ್ಟು ಬಿಟ್ಟಲ್ಲಿ ಭದ್ರತೆಯಿಲ್ಲದ ಮನೆ ಆಗುತ್ತದೆ ಎಂಬದನ್ನು ಕಂಡವರು. ಅವರಲ್ಲಿ ರವೀಂದ್ರನಾಥ ಠಾಕೂರರ ಧಾರ್ಮಿಕ, ಸಾಂಸ್ಕೃತಿಕ, ರಾಷ್ಟ್ರೀಯ ನೆಲೆಯ ಬರಹದ ಅರಿವಿತ್ತು.

ಬಸವಾದಿ ಪ್ರಮಥರ ''ಸಕಲ ಜೀವಿಗಳಿಗೆ ಲೇಸನೇ ಬಯಸುವ'' ಮಾನವೀಯ ತತ್ವ, ಕಬೀರರಂಥ ಸಂತರು, ಕನಕದಾಸ, ಪುರಂದರದಾಸರಂಥ ದಾಸಶ್ರೇಷ್ಠರ ನೈತಿಕ ನೆಲೆಯ ಕೊಡುಗೆ ಬರೀ ಬಹಿರಂಗ ಸ್ವಾತಂತ್ರ್ಯದಿಂದ ದೇಶನಿಲ್ಲದು, ಅಂತರಾಳದ ಅಷ್ಟಾವರಣವೂ ಅರಳಬೇಕೆಂದು ಅವರಲ್ಲಿ ಬೇರೂರಿದ ಭವಿಷ್ಯದ ಚಿಂತನೆಯಾಗಿತ್ತು. ಅದಕ್ಕಾಗಿ ನಿಜುಗುಣರ ಶಾಸ್ತ್ರಗಳಾದ ''ಕೈವಲ್ಯಂ ಪದ್ಧತಿ, ಪರಮಾನುಭವ ಭೋದೆ ಅನುಭವಸಾರ, ಪರಮಾರ್ಥಗೀತೆ, ವಿವೇಕಚಿಂತಾಮಣಿ, ಪಾರಮಾರ್ಥ ಪ್ರಾಕಾಶೀಕೆ'' ಮುಂತಾದ ಕೃತಿಗಳನ್ನು ನಿತ್ಯ ಅಭ್ಯಾಸಿಸತೊಡಗಿದರು. ಅದರಿಂದ ಅದೆಷ್ಟು ಪರಿವರ್ತನಗೊಂಡರೆಂದರೆ ಬೇರೆಯವರಿಗೆ ಬುದ್ದಿ ಹೇಳುವದಕ್ಕಿಂತ ಮೊದಲು ತನ್ನನ್ನು ತಾನು ತಿದ್ದಿಕೊಳ್ಳುವುದು. ಕೈವಲ್ಯವೆಂದರೆ ''ಕೇವಲ್ಯಸ್ಯಂ ಭಾವಂ ಕೈವಲಂ'' ಈ ಕೇವಲವೇ ಶಿವಸ್ಥಿತಿ, ಅದಕ್ಕಾಗಿ ''ಶಿವ ಕೇವಲಂ'' ಎಂದು ಹೇಳಲಾಗಿದೆ, ಜೀವಭಾವ ನಷ್ಟವಾಗಿ ಶಿವಭಾವ ಉಂಟಾಗುವುದೇ ಕೈವಲ್ಯ. ಇದನ್ನು ಸಾಧಿಸುವ ಪದ್ಧತಿ, ಅದಕ್ಕಾಗಿ ನಿಜಗುಣರು ಕೈವಲ್ಯ ಪದ್ಧತಿ ಎಂದು ಹೆಸರಿಸಿದರು. ಪರಮಾನುಭವದ ''ಪರಶಿವ ಮತ್ತು ಪರಬ್ರಹ್ಮ ಇದರ ಅನುಭವ ಪಡೆಯುವುದೇ ಶ್ರೀ ನಿಜಗುಣರು ಕನ್ನಡದ ಜಿಜ್ಞಾಸೆಗಳಿಗಾಗಿ ಕನ್ನಡದ ಮಾತೃ ಭಾಷೆಯಲ್ಲಿ ಅನುವಾದಿಸಿದರೆನ್ನುವ ಮಟ್ಟಕ್ಕೆ ಸಿದ್ಧಲಿಂಗಯ್ಯನವರು ವೇದ, ಉಪನಿಷತ್, ಗ್ರಂಥ, ವೇದಾಂತ, ಕ್ರಿಯೆ, ಮೋಕ್ಷದರ್ಶನ, ಬಸವಾದಿ ಪ್ರಮಥರ ದಾರ್ಶನಿಕರ, ಅಲ್ಲಮಪ್ರಭುವಿನ ಶೂನ್ಯಸಂಪಾದನೆ, ಚನ್ನಬಸವನ ದಾರ್ಶನಿಕ ತತ್ವ, ಅಕ್ಕಮಹಾದೇವಿಯ ವೈರಾಗ್ಯ ನಿಲುವು ರಾತ್ರಿಯ ಕಾಯಕವಾಯ್ತು. ಅಲ್ಲಿ ಎಲ್ಲಾ ತರಹದ ಪುಸ್ತಕ ಸಂಗ್ರಹವಿತ್ತು. ಅದನ್ನು ಸಂಪೂರ್ಣ ಅಧ್ಯಯನ ನಡೆಸಿದ್ದು ಬೂದಿಹಾಳದ ಸಿದ್ಧಲಿಂಗಯ್ಯನವರು.

ಹಾಲಕೆರೆ ಬೂದಿಹಾಳಕ್ಕೆ ೪–೫ ಮೈಲಿ ದೂರದ ಹಳ್ಳಿ. ಮಾರನಬಸರಿ ಕೇವಲ ೨ ಮೈಲಿ ದೂರ. ನರೇಗಲ್ ೨ ಮೈಲಿ. ಜಕ್ಕಲಿ ೧ ಮೈಲಿ. ತೋಟಗಂಟಿ ಕೋಡಿಕೊಪ್ಪ ೩ ಮೈಲಿ ದೂರದವು. ಇಟಗಿ ೧೦ ಮೈಲಿ, ಗಜೇಂದ್ರಗಡ ೧೫ ಮೈಲಿ, ಬೂದಿಹಾಳ ಬನಶಂಕರಿಗೆ ೨೦ ಮೈಲಿ ಯಾಕೆ ಈ ದೂರ ಹೇಳುವುದೆಂದರೆ : ಅಂದು ಬಸ್ಸಿನ ಸೌಕರ್ಯ ಅಷ್ಟೊಂದು ಇರಲಿಲ್ಲ, ಕಾಲನಡಿಗೆ ಅಂದಿನ ವಾಹನ. ಸಂತೆಗೆ ಹೋದರು ಕಾಲನಡಿಗೆಯೇ. ಜಾತ್ರೆಗೆ ಹೋದರೂ ಕಾಲನಡಿಗೆ. ಬಹಳ ದೂರ ಅನ್ನಿಸಿದರೆ ಎತ್ತಿನ ಗಾಡಿ ಹೂಡಿಕೊಂಡು ಪ್ರಯಾಣಿಸುತ್ತಿದ್ದರು. ಸಿದ್ಧಲಿಂಗಯ್ಯನವರಿಗೆ ಜಕ್ಕಲಿ ಅಂದರೆ ಬಹಳ ಪ್ರೀತಿ. ದೊಡ್ಡಮೇಟಿಯವರಲ್ಲಿ ಇದ್ದ ಪ್ರೀತಿ, ನಿಷ್ಠೆ,

ಜಕ್ಕಲಿ ಗ್ರಾಮದ ಮೇಲು ಇತ್ತು. ಅದು ಅವರ ಪಾಲಿಗೆ ಬರೀ ರಾಜಕೀಯ ಕ್ಷೇತ್ರವಾಗಿರಲಿಲ್ಲ. ಪವಿತ್ರ ಶರಣರ ಭೂಮಿ. ಅಣ್ಣಯ್ಯ-ತಮ್ಮಯ್ಯರೆಂಬ ಶರಣರು ಮಾಹನ್ ದಾರ್ಶನಿಕರು. ಬಸವಾದಿ ಪ್ರಮಥರ ಸರ್ವತತ್ವಗಳು ನಡೆಯಲ್ಲಿ ತಂದ ಪವಾಡಪುರುಷರು (ಅವರ ಮನೆ, ಗದ್ದುಗೆ, ಜಕ್ಕಲಿ ಪೂರ್ವಭಾಗದಲ್ಲಿ ಇನ್ನೂ ಇದೆ) ಅದು ಸಿದ್ಧಲಿಂಗಯ್ಯನವರ ನಿತ್ಯ ದರ್ಶನ ಪಡೆವ ಸ್ಥಾನ, ಅವರ ಶಕ್ತಿ ಎಷ್ಟಿತ್ತೆಂದರೆ ಯಾರಾದರೂ ದೀನರು ಮಕ್ಕಳ ಮದುವೆಗೆ ಶರಣರಲ್ಲಿ ಸಹಾಯಕ್ಕೆ ಬಂದರೆ, ಮನೆಕಿಟಕಿ ಕಿತ್ತುಕೊಳ್ಳಿ, ''ಶಿವಕೋಡ್ತಾನೆ ಅಂದ್ರೆ'' ''ಕಿಟಕಿ ಕಿತ್ತ ತಕ್ಷಣ ಬೆಳ್ಳಿನಾಣ್ಯ ಉದುರುತ್ತಿತ್ತು'' ಸಾವಿರ ಜನಕ್ಕೆ ಪ್ರಸಾದ ಬರೀ ಸೇರ ಅಕ್ಕಿ ಪಾತ್ರೆಯಲ್ಲಿಂದಲೇ ಸಾಕಾಗುತ್ತಿತ್ತು, ಅಣ್ಣಯ್ಯ ಅಣ್ಣ, ತಮ್ಮನಿಗೆ ಸಾವು, ತಮ್ಮನೂ ಅವರ ಹಿಂದೆ ಹೊರಟ ಕ್ಷೇತ್ರ. ಅಂಥ ತಪೋಭೂಮಿ ದೊಡ್ಡಮೇಟಿಯವರ ಮನೆ ಚಾವಡಿ ಪಕ್ಕದಲ್ಲೇ ಇದೆ. ಅಲ್ಲಿಯೇ ಗದುಗಿನ ತೋಂಟದಾರ್ಯಮಠದ ಶಾಖಾಮಠವೂ ಇದೆ. ಹಾಲಕೆರೆ ಅನ್ನದಾನಮಹಾಸ್ವಾಮಿಗಳ ಮಠದಲ್ಲಿ ಧಾರ್ಮಿಕ ಕಾರ್ಯ ನಡೆಸುತ್ತಿದ್ದರಿಂದ ಹೆಚ್ಚು ಕಡಿಮೆ ಸಿದ್ಧಲಿಂಗಯ್ಯನವರ ಕಾರ್ಯಕ್ಷೇತ್ರ ಜಕ್ಕಲಿ ಅಂದರೆ ತಪ್ಪಾಗಲಿಕ್ಕಿಲ್ಲ.

ಭಾರತೀಯ ಸ್ವಾತಂತ್ರ್ಯ ಹೋರಾಟದಲ್ಲಿ ಸಿದ್ಧಲಿಂಗಯ್ಯನವರನ್ನು ಕಂಡ ಜಕ್ಕಲಿ, ಬೂದಿಹಾಳ, ತೋಟಗಂಟಿ, ಮಾರನಬಸರಿ, ಹಾಳಕೆರೆ, ನಿಡಗುಂದಿ, ನರೇಗಲ್, ಕೋಡಿಕೊಪ್ಪ, ಅಬ್ಬಿಗೇರಿ ಜನಕ್ಕೆ ಸಿದ್ಧಲಿಂಗಯ್ಯನವರು ವೀರಶೈವ ಸಿದ್ಧಾಂತ ಚೆನ್ನಾಗಿ ಬಲ್ಲರು ಎಂಬುದು ಯಾರಿಗೂ ತಿಳಿದಿರಲಿಲ್ಲ. ಸಿದ್ಧಲಿಂಗಯ್ಯನವರೂ ಎಂದೂ ಯಾರೆದುರೂ ತೋರ್ಪಡಿಸಿರಲಿಲ್ಲ. ಒಂದೂ ದಿನ ತಮ್ಮ ಹೆಸರಿಗಾಗಿ ಪರಿತಪಿಸಲಿಲ್ಲ, ನೊಂದಲಿಲ್ಲ, ಎಲೆ ಮರೆಕಾಯಿಯಾಗಿ ಉಳಿದರು. ಈ ಮಧ್ಯದಲ್ಲಿ ಒಂದು ಮಹತ್ತರ ಘಟನೆ ನಡೆಯಿತು. ''ಬೇಡರ ಕಣ್ಣಪ್ಪ'' ಚಲನಚಿತ್ರಕ್ಕೆ ಕಲಾವಿದರನ್ನು ಹುಡುಕುತ್ತಿದ್ದರು. ಕೆಲ ಜನ ಎಲಿವಾಳ ಸಿದ್ಧಯ್ಯನ ಹೆಸರು ಹೇಳುತ್ತಿದ್ದಂತೆ ಕೆಲವರು ಎಲಿವಾಳ ಸಿದ್ಧಯ್ಯ ಕಣ್ಣಪ್ಪನ ಪಾತ್ರಕ್ಕೆ ಸೂಕ್ತ ವ್ಯಕ್ತಿ ಎಂದು ಹೇಳುತ್ತಿದ್ದರು. ಆದರೆ ಕಲೆಯಲ್ಲಿ ನೈಪುಣ್ಯವಿದ್ದರೂ ಅವರಿಗೆ ಜವಾಬ್ದಾರಿ ಕಡಿಮೆ ಎಂದು ಕೊನೆಗೆ ರಾಜಕುಮಾರ ಆಯ್ಕೆಯಾಯ್ತು. ಆದರೆ ಸಂಭಾವನೆ ವ್ಯತ್ಯಾಸದಿಂದ ಆ ಆಯ್ಕೆ ಕಡಿದು ಬಿತ್ತು. ಆ ಸುದ್ದಿ ಕೇಳಿ ಸಿದ್ಧಲಿಂಗಯ್ಯನವರು ತಕ್ಷಣ ಹುಬ್ಬಳ್ಳಿಗೆ ಹೋಗಿ ಕುಬಸದ ಶಿವಪ್ಪನವರಿಗೆ ''ಕಾಕಾ, ಈ ರಾಜಕುಮಾರ ಬೇಡರ ಕಣ್ಣಪ್ಪನ ಪಾತ್ರಕ್ಕೆ ಹೇಳಿಮಾಡಿಸಿದ ವ್ಯಕ್ತಿ. ಈ ಮುಖ ನೋಡು. ತಾವೇ ಚಿತ್ರಿಸಿದ್ದ ೩-೪ ಫೋಟೋ ತೋರಿಸಿ ಕಾಕಾ (ಶಿವಪ್ಪನವರಿಗೆ ಕಾಕಾ ಅಂತಲೇ ಸಂಬೋಧಿಸುತ್ತಿದ್ದರು) ನೋಡು ೬೩ ಪುರಾತನರು ಮಹಾನ್ ಶಿವಸಾಯುಜ್ಯರಲ್ಲಿ ಆದರಲ್ಲಿ ಬೇಡರಕಣ್ಣಪ್ಪರದು ಶಿವಾರ್ಪಿತ ಭಕ್ತಿ. ಆ ಪಾತ್ರಕ್ಕೆ ಭಕ್ತಿರಸ ತುಂಬಬೇಕು. ಆ ಶಕ್ತಿ ರಾಜ್‌ರಲ್ಲಿ ಮಾತ್ರವಿದೆ. ನೀವು ಮಧ್ಯ ಪ್ರವೇಶಿಸಿ ಅವರನ್ನು ಒಪ್ಪಿಸಿ, ಮಾತುಕತೆ ಮಾಡಬೇಕು. ಕಾಕಾ ರಾಜ್‌ರೇ ಇರಲಿ ಅಂತ

ಹೇಳಿದರು.'' ಶಿವಪ್ಪನವರು ಆಲೋಚಿಸಿ ದುಡುಕದೆ ಅವರೊಡನೆ ಚರ್ಚಿಸಿದರು. ಮದ್ರಾಸ್ ಕಂಪನಿಗೆ ಸಂಪರ್ಕಿಸುವ ಮುನ್ನ ರಾಜಕುಮಾರರನ್ನು ಕಂಡು ಚರ್ಚಿಸಿದಾಗ ಪ್ರತಿ ತಿಂಗಳಿಗೆ ೩೦೦/– ಸಂಭಾವನೆ. ಶೂಟಿಂಗ ೬ ತಿಂಗಳಲ್ಲಿ ಮುಗಿಯುದಿದ್ದರೆ ಹೆಚ್ಚಿನ ಸಂಭಾವನೆ ಜತೆಗೆ ಎಲ್ಲ ವ್ಯವಸ್ಥೆ ಮಾಡಬೇಕೆಂದು ಡಾ.ರಾಜ್‌ರ ಕಂಡೀಷನ್ ಆಗಿತ್ತು. ಇದಕ್ಕೆ ನಿರ್ಮಾಪಕರೂ ಒಪ್ಪಿದರು. ಶಿವಪ್ಪನವರು ಕೊನೆಗೆ ರಾಜರನ್ನು ಒಪ್ಪಿಸಿದರು. ಆಗ ಸಿದ್ಧಲಿಂಗಯ್ಯನವರಿಗೆ ತುಂಬಾ ಸಂತೋಷವಾಯಿತು. ಮುಂದೆ ಈ ಚಿತ್ರ ಬಾರಿ ಯಶಸ್ವಿಯಾಯಿತು. ರಾಜರ ಆಯ್ಕೆಯಲ್ಲಿ ಸಿದ್ಧಲಿಂಗಯ್ಯನವರ ವಹಿಸಿದ ಪಾತ್ರ ಬಹುಮುಖ್ಯವಾಗಿದೆ. ಈ ಪ್ರಸಂಗ ಕುಬಸದ ಶಿವಪ್ಪನವರ ಕುರಿತು ಪ್ರಕಟಿಸಿದ ಪುಸ್ತಕದಲ್ಲಿಯೂ ಉಲ್ಲೇಖವಾಗಿದೆ. ಆದರೆ ಅದರಲ್ಲಿ ಸಿದ್ಧಲಿಂಗಯ್ಯನವರ ಈ ಪ್ರಯತ್ನ ದಾಖಲಿಸದೇ ಇರುವದು ಖೇದಕರ ಸಂಗತಿಯಾಗಿದೆ.

ಕಲ್ಯಾಣ ಕ್ರಾಂತಿ ನಂತರ ಚನ್ನಬಸವೇಶ್ವರರು ಶರಣರೊಡಗೂಡಿ ಉಳುವಿಗೆ ಇಂದಿನ ಬೂದಿಹಾಳ ಗ್ರಾಮ ಮೇಲೆ ಹಾಯ್ದು ಹೋಗುತ್ತಿದ್ದರು. ಅಲ್ಲಿ ಹಳ್ಳದ ಮೇಲೆ ಜಿಂಕೆ, ಸುಂದರ ಗಿಡಮರಗಳು, ಜವಳಗಟ್ಟಿದ ಸುಂದರ ತಾಣ ನೋಡಿ ಲಿಂಗಪೂಜೆ ನಿಂತರು. ಎಲ್ಲ ಶರಣರೊಡನೆ ಅಲ್ಲಿ ಹರಿವ ಹಳ್ಳದಲ್ಲಿ ಸ್ನಾನಗೈದು, ಪತ್ರೆ ಪುಷ್ಪದಿಂದ ಲಿಂಗಪೂಜೆ ಮಾಡಿಕೊಂಡು ಮುಂದೆ ಪ್ರಯಾಣ ಬೆಳೆಸುವಾಗ ಎರಡು ಕಲ್ಲು ನೆಟ್ಟು ಹೋದರಂತೆ. ಮುಂದೆ ಪ್ಲೇಗಿನಿಂದ ಮಾರನಬಸರಿ ಬಳಲಿದಾಗ, ಊರು ಬಿಟ್ಟ ಜನ ಸ್ವಚ್ಛವಾಗಿದ್ದ ಜಾಗಕ್ಕೆ ಬಂದು ನೆಲೆಸಿದರಂತೆ. ಅದೇ ಬೂದಿಹಾಳ. ಅಲ್ಲಿ ಚನ್ನಬಸವೇಶ್ವರರು ಲಿಂಗಪೂಜೆ ಮಾಡಿ ಎರಡು ಕಲ್ಲುಗಳಲ್ಲಿ ಜೋಡಿ ಬಸವನನ್ನು ಸ್ಥಾಪಿಸಿ ಚಿಕ್ಕಗುಡಿಯನ್ನು ಅಂದಿನ ಹಿರಯರು ಕಟ್ಟಿ ''ಜವಳಬಸವೇಶ್ವರ'' ಎಂದು ನಾಮಕರಣ ಮಾಡಿದ್ದರು.

ಭೂಮಿ ನೀರಿನಿಂದ ತೊಟ್ಟಿಕ್ಕುತ್ತಿತ್ತು. ಅದಕ್ಕೆ ಜವಳಬಸವೇಶ್ವರ ಎಂದು ನಾಮಕರಣ ಮಾಡಿದ್ದರು. ಯಾವ ಶಕ್ತಿ ಎಲ್ಲಿ ಅಡಗಿದೆಯೊ ಹುಲುಮಾನವನಿಗೆ ಗೊತ್ತಾಗುವುದಿಲ್ಲ. ಅದನ್ನು ಒಬ್ಬ ದಾರ್ಶನಿಕ ಕೈ ಬೆರಳನಿಂದ ತೋರಿದಾಗಲೇ ಗೊತ್ತಾಗುವುದು ಈ ಜಗತ್ತಿಗೆ.

ಒಮ್ಮೆ ಅಂದಿನ ಹಾಲಕೆರೆ ಅನ್ನದಾನ ಮಹಾಸ್ವಾಮಿಗಳು ಜಕ್ಕಲಿಗೆ ಪ್ರಯಾಣಿಸುತ್ತಿದ್ದರಂತೆ. ಎತ್ತಿನ ಗಾಡಿಯವನಿಗೆ ಬೂದಿಹಾಳ ಹಳ್ಳಿಗೆನಡೆ ಎಂದು ಎತ್ತಿನ ಗಾಡಿಯನ್ನು, ದಾರಿ ಮಧ್ಯ ನಿಲ್ಲಿಸಿ ಪೂಜ್ಯರು ಎತ್ತಿನಗಾಡಿಯಿಂದ ಇಳಿದು ಬರಿಗಾಲಿನಿಂದ ಪೂರ್ವ ದಿಕ್ಕಿನೆಡೆಗೆ ಹೋಗುತ್ತಿದ್ದರಂತೆ. ಇದನ್ನು ಕಂಡ ಜನ ಆಶ್ಚರ್ಯಪಟ್ಟು ಪೂಜ್ಯರಬೆನ್ನು ಹತ್ತಿ ಬರುತ್ತಾರೆ. ನೇರವಾಗಿ ಪೂಜ್ಯರು ಜವಳಬಸವನಲ್ಲಿ ದರ್ಶನ ಪಡೆದು ''ಕಲ್ಯಾಣಕ ಬರಬೇಕಂದ್ರೆ, ನೀನಿಲ್ಲೇ ಬಂದ್ಯಾ ಒಡೆಯಾ. ಕಲ್ಯಾಣ ಮತ್ತು ಉಳವಿ ಕ್ಷೇತ್ರ ಒಂದೇ ಕಡೆ ತೋರಿದಿ'' ಎನ್ನುತ್ತಾ

ಅಲ್ಲಿಯೇ ಎರಡು ದಿನ ಅನುಷ್ಠಾನ ಮಾಡಿದರು. ಆಗ ಬೂದಿಹಾಳ ಜನಕ್ಕೆ ಮತ್ತು ಆಸುಪಾಸಿನ ಹಳ್ಳಿಗಳಿಗೆ ಈ ಬೂದಿಹಾಳ ಒಂದು ಪವಿತ್ರ ಸ್ಥಾನ ಎಂಬುದು ಅರಿವಾಗಿದ್ದು. (ಈಗ ಈ ಗುಡಿಯನ್ನು ಸಿದ್ಧಲಿಂಗಶಾಸ್ತ್ರಿಗಳ ಆಜ್ಞೆಯಂತೆ, ನೂರಾರು ಜನ ಕುಳಿತುಕೊಳ್ಳುವಷ್ಟು ದೊಡ್ಡ ದೇವಸ್ಥಾನ ಅವರ ಪುತ್ರ ಮಹಾಂತೇಶ ವಕೀಲರೇ ಕಟ್ಟಿಸಿದ್ದಾರೆ.)

ಒಮ್ಮೆ ಉದ್ದದ ಗಡ್ಡದಾರಿ, ಬಿಳಿ ದೋತ್ರ, ಬಿಳಿ ಶರ್ಟ್, ಕೈಯಲ್ಲಿ ಬಡಿಗೆ ಹಿಡಿದು ಬೂದಿಹಾಳದ ಕಲ್ಮೇಶ್ವರ ಗುಡಿಯಲ್ಲಿ ಬಂದು ಕುಳಿತು ''ಲೇ ಊರನವ್ರ ಬರ್ಲೇ ಇಲ್ಲಿ, ಬರೀ ಹೊಲಮನಿ ಒಕ್ಕಲುತನ ಬಂಗಾರದಾಗ ಐಯ್ತೇನ್ರಲೋ, ಕಲ್ಲಪ್ಪನ್ ಪೂಜಾ ಮಾಡ್ರಿ. ಜವಳಪ್ಪಗೆ ಮಾತ್ರ ಶ್ರಾವಣ, ಕಾರ್ತಿಕ ಭಜನೆ ಮಾಡ್ತೀರಿ. ಅವಽಽ ನಿಮ್ಮೂರಾಗ ಇರ್ತೇನಂತಾ ಹೇಳಿ ಕಲ್ಯಾಣ ಬಿಟ್ಟು ಬಂದಾನಽಽ, ಅವನ್ನ ಮರತೀರಿ. ಮರ್ತರೆ ಸತ್ತೀರಿ. ತಿಳಿರಿನ್ನಽಽ ಊರಾಗಽಽ ಧರ್ಮ ನೀತಿ ಇಟ್ಕೊಂಡು ಬಾಳ್ರಲೇ ಅಂದ್ರೆ ನಿಮಗೆ ಸುಖ. ಇಲ್ಲಾಂದ್ರ ಹಾಳ್‌ಬೂದಿ ಆಗ್ತೈತಿ'' ಎಂದು ಹೇಳಿದವರು ಮತ್ಯಾರು ಅಲ್ಲ ಸಿದ್ಧನಕೊಳ್ಳದ ಮಹಾನ್ ತಪಸ್ವಿ ಮಾರನಬಸರಿ ಸಿದ್ಧಯ್ಯನವರು.''ಲೇ ಅಲ್ಲೇ ಸಿದ್ಧಲಿಂಗಪ್ಪ ಊರಾಗ ಆದಾನೇನ ನೋಡ್ರಿ. ಪ್ರಸಾದಕ ಅಲ್ಲೇ ಬರ್ತೇನಂತ ಹೇಳ್ರಿ.'' ಸುದ್ದಿ ಮುಟ್ಟಿದ್ದೇ ತಡ ಸಿದ್ಧಲಿಂಗಯ್ಯನವರು ಓಡುತ್ತಾ ಅಗಸಿಕಡೆ ಬಂದು ಅಜ್ಜನಿಗೆ ಅಡ್ಡಬಿದ್ದು ಮನೆಗೆ ಬಿನ್ನಹ ಹಾಕಿದ್ರು. ''ಸಿದ್ಲಿಂಗಪ್ಪ ಈ ನೀನಿರೂತನ್ಕ ಈ ಊರಿನ್ನು ಸುತ್ತಾಡಿ ಜವಳಪ್ಪನ ಗುಡಿ ದರ್ಶನ ಮುಗಿಸಿ, ಅಜ್ಜ ಸಿದ್ಧಯ್ಯನವರು ಸಿದ್ಧಲಿಂಗಯ್ಯನವರ ಮನಿಗೆ ಬಂದು ಸ್ನಾನ ಮುಗಿಸಿ ಪ್ರಸಾದಕ್ಕೆ ಕುಳಿತಿದ್ರು. ಅಲಾ ಇವ್ನ ಎಷ್ಟು ರುಚಿ ಆಯ್ತಿ ಈ ಸಾರು. ಸಿದ್ಲಿಂಗಪ್ಪ ನಿನ್ನ ಹೆಂಡ್ತಿ ಸೋಮಕ್ಕಂದ್ರೆ ಅನಪೂರ್ಣೇಶ್ವರಿ. ಮೃಷ್ಟಾನ್ನ ಆಗಬೇಕಂದ್ರ ಮನಸ್ಸು ಚಲೋ ಇರಬೇಕಪಾ. ಅದೆಲ್ಲಾ ಭಕ್ತಿಯಿಂದ ಮಾಡ್ಯಾಳ ಸಾರು. ನಾ ಇಷ್ಟ ರುಚಿ ಸಾರ ಎಲ್ಲಿಯೂ ಉಂಡಿಲ್ಲೋ,'' ''ಬುದ್ಧಿ ಇನ್ನೂ ಸ್ವಲ್ಪ ಸಾರು ನೀಡ್ಲಾ'' ಬ್ಯಾಡ ನಾಳೆ ಮತ್ತೆ ಉಣ್ಬೇಕಪಾ ರುಚಿ ಅಂತಾ ಬಹಳ ತಗೋಬಾರ್ದೋ ಹುಚ್ಚ. ಅತೀ ಯಾವಾಗ್ಲೂ ಕೆಟ್ಟ'' ''ಅಂದಂಗಽ ಸಿದ್ಲಿಂಗಪ್ಪ, ಬಳಗಾನೂರಾಗ ಚಿಕ್ಕೆನಕೊಪ್ಪದ ಶರಣರ ದರ್ಶನ ಮಾಡಿ ಬಾ, ಮಹಾಮಹಿಮರಪಾ ಹಾಳಕೆರೆ ಜಾತ್ರಿಗಿ ಹೋಗ್ತಿಯಲ್ಲಾ ಹೋಗಿ ಬಾ, ಬರೀ ರಾಜಕಾರಣ ಅಂತಾ ಕುಂದರಬ್ಯಾಡ, ಆಯ್ತಲ್ಲಾ. ದೇಶ ಸ್ವತಂತ್ರ ಆತು, ನೀಯಾವಾಗ ಸ್ವತಂತ್ರ ಆಗುದಪಾಽಽ, ಸಿದ್ಲಿಂಗಪ್ಪ ''ಅನ್ನಬೇಕೆ'' ? ಭವಿಷ್ಯ ಮಹಾನ್ ಶರಣರ ಈ ನುಡಿಯಿಂದ ಬಂದಿತ್ತಾ ಅಂತ ಕಾಣುತ್ತೆ, ಆಯ್ತು ಬುದ್ಧಿ ಮತ್ತೆ ಈ ಸಿದ್ಧಲಿಂಗಯ್ಯನವರು ಕಲ್ಯಾಣದ ಶಬರ ಶಂಕರನಂತೆ ಅಲೌಕಿಕದಲ್ಲಿದ್ದು ಲೌಕಿಕನಂತೆ. ಜ್ಞಾನಿಯಿದ್ದರೂ ಅಜ್ಞಾನಿಯಂತೆ. ಅಷ್ಟಾವರಣದಲ್ಲೇ ಗುರು ಜಂಗಮರ ಸೇವೆಯಲ್ಲಿ ನಿರತರಾದರು.

## ಹಾಳಕೆರಿ ಜಾತ್ರೆ

ಊರಲ್ಲಿ ಪ್ರಾಥಕಾಲಃ ಅಗಸಿ ಮುಂದೆ ಹತ್ತಿಪ್ಪತ್ತು ಎತ್ತನ್ನು ಭಾವಿ ಹತ್ತಿರ ಮೈತೊಳೆಯುತ್ತಿದ್ದರು. ಸಿದ್ಧಲಿಂಗಯ್ಯನವರು, ಶಿವನಗೌಡ ತಂದೆಯವರು ಮನೆಯಿಂದ ಬರುತ್ತಿದ್ದರು. ''ಯಾಕ್ರಿ ಅಜ್ಜಾರ ನೀವು ಬರುದಿಲ್ಲೇನು ?'' ಎಂದು ಕರಮುಡಿ ಬಸರೆಡ್ಡೆಪ್ಪ ಕೂಗಿ ಕೇಳಿದ. ''ಎಲ್ಲಿಗಪ್ಪಾ ಬಸರೆಡ್ಡಿ'' ಹಾಳಕೇರಿ ಜಾತ್ರೆಗೇ'' ಊರಾ ಹೊಂಟೈತ್ರಿ, ಅಮ್ಮಾನ ಕರಕೊಂಡು ಬನ್ರಿ, ಚಕ್ಕಡಿ ಕಟ್ಟೇವಿ ''ಕೇಳ್ತೇನೆಪ ಆಕಿ ಎನಂತಾಳಾ'' ''ಏನಂತಾರ ಬರ್ರಿ, ಬಿರ್ರಿ'' ಜಕ್ಕಲಿಗಂದ್ರ ಅಮ್ಮಾನ ಕೇಳೇ ಹೋಗ್ತೀರೇನು ? ಹಾಳಕೆರಿಗ್ಯಾಕ ಆಕಿನ್ನ ಕೇಳೂದು ಎಂದು ತಮಾಸೆ ಮಾಡುತ್ತಾರೆ.

ಚಕ್ಕಡಿಗೆ ಎತ್ತಿಗೆ ಜೂಲಾ, ಕೊಂಬೆಣಸು ಹಣೆಪಟ್ಟಿ, ಕೊರಳಾಗ ಗೆಜ್ಜಿಸರ, ಗಿಲ್, ಗಿಲ್, ಅಂತಾ ಓಡಾಟ, ಬರ್ರಿ ಬಡಾ ಬಡಾ, ಚಕ್ಕಡಿ, ಸವಾರಿ, ಚಿಗರಿಯವರು, ಬಿಂಗಿಯವರು ಚನ್ನಯ್ಯಾ ಹಿರೇಮಠರು, ಜಾಡರಮನಿ ಚಕ್ಕಡಿ, ಶಿವನಗೌಡ್ರ ಚಕ್ಕಡಿ ಹೀಗೆ ೧೦–೧೫ ಚಕ್ಕಡಿ ಒಂದರ ಹಿಂದೆ ಒಂದು ಒಂದು ಸಾಲು ಗಟ್ಟಿ ಅವರಿವರ ಮನಿಯವರು ಚಕ್ಕಡಿ ಹತ್ತುತ್ತಿದ್ದರು, ಸೋಮಮ್ಮನೂ ಪಟ್ಟೆಶರಗ ಸೀರೆ, ಬಗಲಾಗ ಕೂಸು ಎತ್ತಿಕೊಂಡು ಕರಮುಡಿಯವರ ಹೆಣ್ಮಕ್ಕಳಿದ್ದ ಚಕ್ಕಡಿಯನ್ನ ಗಂಡನ ಜತೆ ಹತ್ತಿದ್ದರು. ದಾರ್‍ಯಾಗ ನೋಡಬೇಕು ಎತ್ತಿನ ಹೆಜ್ಜೆಗೆ ಗಿಲ್ ಗಿಲ್ ನಾದ. ಟಕ ಟಕ ಗಾಲಿ ಶಬ್ದ ಎತ್ತು ಒಬ್ಬರಿಗಿಂತ ಒಬ್ಬರು ಹೆಚ್ಚು ಓಡಿಸೋ ಖಯಾಲಿ, ಕೇ ಕೇ ಲೇ ಬಸವ ಅಂತಾ ಒಬ್ಬವ, ಚಕ್ಕಡಿಯ ಲೇ ಹನುಮಂತಾ ಒಬ್ಬವಾ, ಲೇ ಕುರ್ಸಾಲಿ ಅಂತಾ ಒಬ್ಬವಾ, ಮಾರನ ಬಸರಿ ದಾಟಿ, ಕೊಪ್ಪ ದಾಟಿ ಹಾಳಕೇರಿ ಬಂದಿದ್ದು ಗೊತ್ತಾಗುತ್ತಿರಲಿಲ್ಲ, ಅಷ್ಟೊಂದು ಖುಷಿಯಿಂದ ಹಾಳಕೆರೆ ಜಾತ್ರೆಗೆ ಹೋಗುತ್ತಿದ್ದರು. ತೇರು ಎಳಿಯಿತೂ, ಉತ್ತತ್ತಿ ಒಗದ್ರು, ಅಂಗಡಿ, ಅಂಗಡಿ ಅಡ್ಯಾಡಿ ಫಳಾರು ತಗೆದುಕೊಂಡರು. ಎತ್ತಿಗೆ ನೀರು ಕೆರ್‍ಯಾಗ ಕುಡಿಸಿ ತಂದ್ರು ಕಾಯಿ ಒಡ್ಡಿದ್ರು.

ಸಿದ್ಧಲಿಂಗಯ್ಯನವರು ಊರಜನರ ಕರಕೊಂಡು ಹಾಳಕೆರೆ ಅಜ್ಜಾರ ದರ್ಶನಕ ಒಂದು ಬಾಗಲ್ದಾಗ ನಿಂತ್ರು. ಸೇವಕರಿಗೆ ಬೂದ್ಯಾಳ ಭಕ್ತರು ಬಂದಾರಂತ ಹೇಳಪಾ'' ಸ್ವಲ್ಪ ಹೊತ್ತಿಗೆ ಒಳಗಿನ ಭಕ್ತರು ಹೊರಬಂದಾಗ, ''ಬೂದ್ಯಾಳವ್ರು ಬರ್ರಿ'' ಅಂತ ಸೇವಾದಾವ ಕರ್ದ, ಒಬ್ಬೊಬ್ಬರೇ ನಮಸ್ಕಾರ ಮಾಡಿದ್ರು, ಸಿದ್ಲಿಂಗಯ್ಯ ಧರ್ಮಪತ್ನಿ ಸೋಮಮ್ಮನ ಜತಿಗೆ ಬಂದು ಆಶೀರ್ವಾದ ಪಡಕೊಂಡ್ರು ''ಏನ್ ಸಿದ್ಲಿಂಗಪ್ಪ, ಜಾತ್ರೆ ಚಲೋ ಆತ, ಅಲ್ಲಪಾ ಶಾಸ್ತ್ರ ಓದಿದವ, ನೀನು ಜಾತ್ರಿ ಹೆಂಗಿರಬೇಕು ಹೇಳು ? ''ಸಿದ್ಲಿಂಗಯ್ಯನವರಿಗೆ ಮಿಂಚುಹೊಡೆದಂತಾಯ್ತು ಯಾರಿಗೂ ಗೊತ್ತಾಗದ ಹಾಗೆ, ಶಾಸ್ತ್ರಭ್ಯಾಸ ಮಾಡಿದ್ರು ಇವರ್ಗೆ ಅದ್ಯಾಂಗ ಗೊತ್ತು? ತಪಶಕ್ತಿಗೆ ಆ ಗುಣ ಐತಿ ನಿಜ. ಅಜ್ಜಾರ ಹೇಳಿದ್ದು ಸರಿ, ತಪ, ಧ್ಯಾನಕ್ಕೆ ಸಿದ್ದಿಯೋಗದಿಂದ ಎಲ್ಲವೂ ಅರ್ಥ ಆಗುತ್ತೆಂತ.

''ಜಾತ್ರಿ ಶ್ರೀಮಠದ್ದು, ಜಾತ್ರಿ ಹ್ಯಾಂಗ ನಡೀತೈತಿ ಅದು ಆ ಮಠದ ಕಮಿಟಿಯವರಿಗೇ ಬಿಟ್ಟಿದ್ದು ಬುದ್ಧಿ. ನಿಮ್ಮ ಊರಾಗ ನಾ ಹಿರೇತನ ಮಾಡಾಕ ಹ್ಯಾಂಗ ಬರ್ತೈತಿ, ತಮ್ಮ ದರ್ಶನ, ಗದ್ದಿಗೆ ದರ್ಶನ ಆಯ್ತು ಅದೇ ನಮ್ಮ ಪುಣ್ಯ.''

''ಅಲ್ಲಾ ನಿನ್ನಂತ ತತ್ವಶಾಸ್ತ್ರ ಓದಿದವ ಹಂಗಂದ್ರ ಹ್ಯಾಂಗ ? ಬಸವಾದಿ ತತ್ವ ಹಾಳಕೇರಿಗಷ್ಟೇನಾ ? ಜಗತ್ತಿಗೇ ಹೇಳುವರ ಸಾರ ಅದು. ಆಯ್ತು ಮಠಕ್ಕೆ ಬರ್ತಾಯಿರು, ಒಂದು ದಿನ ನಿನ್ನ ಪ್ರವಚನ ಇಡ್ತೇವೆ, ಈ ಬುದ್ಧಿಗೇಡಿ ಜನಕ್ಕೆ ಬುದ್ಧಿಹೇಳು. ಬಸವಣ್ಣವ್ರು, ಶರಣ್ರು, ತಪಸ್ವಿಗಳಂದ್ರ ಏನು ಗೊತ್ತಿಲ್ಲ ಇವಕ. ಬರಿ ಉತ್ತತ್ತಿ ಒಗೆದು, ಫಳಾರ ತಿನ್ನೋದೆ ಜಾತ್ರೆ ಅಂತ ತಿಳ್ದಾರ, ಜ್ಞಾನ ಐತೇನಾ ಇವಕ್ಕ'' ?

''ಬುದ್ಧಿ, ಅವರಿಗೆ ಜ್ಞಾನ ಬರಬೇಕಂದ್ರೆ ವಿದ್ಯಾ ಬೇಕ್ರಪ್ಪಾ, ಇಲ್ಲಿ ಸಾಲಿನಾ ಇಲ್ಲ, ಅವರು ಅವರ ಮಕ್ಕಳು ಹ್ಯಾಂಗ ವಿದ್ಯಾವಂತರಾಗಬೇಕಪಾ, ಈ ತಾಲೂಕಿಗೆ ಸಾಲಿ ಎಷ್ಟದಾವು ಬುದ್ಧಿ ?'' ಮಠಮಾನ್ಯಾನೇ ಜ್ಞಾನ ಕಲಿಸದಿದ್ರ ಹ್ಯಾಂಗ ಇವ್ರು ಉದ್ಧಾರ ಆಗಬೇಕು. ಹ್ಯಾಂಗ ಇವ್ರು ನೀತಿವಂತ್ರು ಆಗಬೇಕು. ಹೌದಿಲ್ಲಾ ಬುದ್ಧಿ'' ಹಾಳಕೆರೆಯವರು ತುಂಬಾ ಮೌನಿಗಳು, ಮಾತೇ ಕಡಿಮೆ, ಸದಾ ಅಂತರ್‌ಮುಖಿ, ಮಡಿವಂತರು. ತ್ರಿಕಾಲಪೂಜಾಕರ್ತರು ಆದರೆ ಶಿಕ್ಷಣದ ಗಂಧ ಗಾಳಿಯಿಲ್ಲ. ಎಂದಾಗ ಪೂಜ್ಯರಿಗೆ ಸಿದ್ಧಲಿಂಗಯ್ಯನ ಮಾತು ಸರಿ ಎನಿಸಿತು.

### ನರೇಗಲ್‌ದ ಶಿಕ್ಷಣ ಸಂಸ್ಥೆಗಳ ಉಗಮಕ್ಕೆ ಸಲಹೆ ನೀಡಿದ್ದು

ಸ್ವಲ್ಪ ದಿನದಲ್ಲೇ ಹಾಳಕೆರೆಯಲ್ಲಿ ಒಂದು ಮೀಟಿಂಗ್ ಆತು. ಭಕ್ತರು ಸೇರಿ ಬಳಿಕ ''ಸಾಲೀ ತಗೀಬೇಕಂತ ಮನಸಾಗೈತಿ, ತಾಲೂಕಿಗೆ ಸಾಲಿ ಇಲ್ಲ, ಹೈಸ್ಕೂಲಿಲ್ಲ, ಬರೀ ಮಠದಾಗ ಪೂಜಾ ಪುನಸ್ಕಾರ, ತೇರು ಇಷ್ಟೆ ಏನ್ರಪಾ ಸಮಾಜದ ಏಳ್ಗೆ ಅಂದ್ರ''

''ಅಪ್ಪಾರ ಸಾಲಿ ತಗ್ಯಾಕ ನಮ್ಮ ಅಭ್ಯಂತರ ಇಲ್ರಿ, ರೊಕ್ಕಬೇಕಲ್ರಿ''

''ಸತ್ಯ ನಿಷ್ಠೆ, ನೀತಿಯಿರುವ ಶರಣನಿಗೆ ಎತ್ತ ನೋಡಿದತ್ತ ಲಕ್ಷ್ಮೀ ಅಂತ'' ಶರಣರೆ ಹೇಳ್ಯಾರಪಾ, ಮೊದಲು ಮನಸ್ಸು ಮಾಡ್ರಿ. ಆಮ್ಯಾಗ ರೊಕ್ಕದ ಯೋಚನೆ''

''ಹಾಗಾದ್ರೆ ನರೇಗಲ್ ಸೂಕ್ತರೆಪಾ, ಬಸ್ ವ್ಯವಸ್ಥೆ ಚಲೋ ಐತಿ, ಎಲ್ಲಾ ಹಳ್ಳಿಗೂ ಮಧ್ಯ ಸ್ಥಳ ಐತಿ ನರೇಗಲ್ ಹಿರಿಯಾರ್ನ ಕೇಳಿ''

''ಆಯ್ತು, ನರೇಗಲ್‌ದಲ್ಲಿ ಕೇಳುನು ನಿಮ್ಮ ಒಪ್ಪಿಗೈತಲ್ಲೋ. ಸಾಕು'' ಅಂದು ಎಲ್ಲ ಭಕ್ತರ ಒಪ್ಪಿಗೆಯನ್ನು ಪಡೆದುಕೊಂಡರು. ಈ ಭಕ್ತರೆಲ್ಲ ಕೋಡಿಕೊಪ್ಪ, ಅಬ್ಬಿಗೇರಿ, ಕೋಟುಮುಚಗಿ, ತೊಂಡ್ಯಾಳ, ಬಂಡ್ಯಾಳ, ಜಕ್ಕಲಿ, ಸೂಡಿ, ಕುರಡಗಿ, ತೋಟಗಂಟಿ, ನಾಯಿಮಲ್ಲಾಪುರ, ಬೂದಿಹಾಳ, ನಿಡಗುಂದಿ, ಕೊಪ್ಪ, ಹಾಳಕೆರೆ,

ಗಜೇಂದ್ರಗಡ ಎಲ್ಲಾ ಕಡೆಯಿಂದ ಬಂದಿದ್ದರು. ಅಜ್ಜಾರ ಕರದಾರಂದ್ರ ಶಿವನಾಜ್ಞೆಯೇ ಅನ್ನುವ ಮಟ್ಟಕ್ಕೆ ಭಕ್ತಿಯಿಂದ ಸೇರಿದ್ರು. ನೂರಾರು ಭಕ್ತರ ಸಭೆ, ಅದೂ ನರೇಗಲ್‌ನಲ್ಲಿ ಹೈಸ್ಕೂಲು ಆಗುತ್ತೆ ಅಂದ್ರೆ ಎಷ್ಟು ಖುಷಿ, ಎಲ್ಲರಿಗೂ ತಮ್ಮ ಮಕ್ಕಳೆಲ್ಲಾ ಎಸ್.ಎಸ್.ಎಲ್.ಸಿ. ಓದ್ತಾರ, ಬಿ.ಎ. ಓದ್ತಾರ, ಸಾಹೇಬರು ಆಗ್ತಾರ ಮಾಸ್ತರು ಆಗ್ತಾರ, ಪ್ರೊಫೇಸರ್ ಆಗ್ತಾರ ಅನ್ನುವ ಕನಸು ಕಾಣತೊಡಗಿದರು.

ಹಠಯೋಗಿ ಹುಚ್ಚೀರೇಶ್ವರನ ಪವಾಡ ಸದೃಶ, ದೈವತ್ವ ಶ್ರೀ ಶೃಂಗೇರಿ ಜಗದ್ಗುರುಗಳೇ ಗುರುತಿಸಿದ್ದರು, ಭಕ್ತರು ಆತನ ಪವಾಡ ಕಂಡಿರದವರು, ಈ ತಪೋಭೂಮಿಯಲ್ಲಿ ಹಾಳಕೆರೆ ಜ್ಞಾನದಾಸೋಹದ ಅನುಭವ ಮಂಟಪ ಶಾಲೆಯ ರೂಪವಾಗಿ ಬರುತ್ತಿದ್ದು ಅದನ್ನು ಕಲ್ಯಾಣವೆಂದೇ ಭಕ್ತಸಮೂಹ ಭಾವಿಸಿದ್ದರಿಂದಲೇ ಪೂಜ್ಯ ಹಾಳಕೆರೆ ಶ್ರೀಗಳ ಆಶೀರ್ವಚನಕ್ಕೆ ಕಾತುರವಾಗಿತ್ತು. ಪೂಜ್ಯರಲ್ಲಿ ಊರ ಮುಖ್ಯರಾದ ಸಂಕನಗೌಡ್ರು, ಹಿರೇಮಠದವರು, ಡಾಕ್ಟರ್ ಚಪ್ಪನ್ನಮಠ ಚನ್ನಯ್ಯನವರು, ಅಬ್ಬಿಗೇರಿ ಯಲ್ಲಪ್ಪಗೌಡ್ರು, ಚುರ್ಚಾಳ್‌ಮಠ, ರೆಡ್ಡೇರ, ಹಾಳಕೇರಿ ಡಾಕ್ಟರರು, ಜಕ್ಕಲಿ ದೊಡ್ಡಮೇಟಿ, ಮುಗಳಿ ಪಾಟೀಲ ಬಸವನಗೌಡ್ರು, ಕಡಗದ ತೊಟ್ಟಪ್ಪನವರ, ಮನೆಯವರು, ಸಣ್ಣಮೇಟಿಯವರು, ಅಣ್ಣಯ್ಯ–ತಮ್ಮಯ್ಯ ಶರಣ ಬಂಧುಗಳ ಮನೆಯವರು ಹೀಗೆ ನೂರಾರು ಶ್ರೀಮಂತರು, ಮಧ್ಯಮ ವರ್ಗದವರು ಎಲ್ಲಾ ಜಾತಿ, ಪಂಗಡದವರು ನೆರೆದಿದ್ದರು. ಪೂಜ್ಯರು ಶಾಲೆ ಕಟ್ಟುವುದಕ್ಕೆ ಎಲ್ಲರೂ ಸಹಮತ ನೀಡಿದರು. ಕಟ್ಟಡದ ಕಲ್ಲಿನ ದಾನ, ಸಿಮೆಂಟಿನ ದಾನ, ಕಟ್ಟಿಗೆ ದಾನ, ಮಜೂರಿ ದಾನ, ಶ್ರಮದಾನ, ಅನ್ನದಾನ ಹೀಗೆ ಎಲ್ಲ ದಾನಭಕ್ತರಿಂದ ಹರಿದುಬಂದಾಗ ಸ್ವತಃ ಪೂಜ್ಯರೇ ಕಲ್ಲು ಹೊತ್ತು ಭಕ್ತರೊಡಗೂಡಿ ಕಟ್ಟಿದ ಶಾಲೆ, "ಹಾಳಕೆರೆ ಅಂದಾನೇಶ್ವರ ಹೈಸ್ಕೂಲು ನರೇಗಲ್" ಈಗ ITI ವರೆಗೂ ಬೆಳೆದುನಿಂತಿದೆ, ಕಾಲೇಜು ಆಗಿದೆ. ಸಿದ್ಧಲಿಂಗಯ್ಯನವರು ಹಾಳಕೆರೆಯ ಜಾತ್ರೆಯಲ್ಲಿ ಪೂಜ್ಯರಲ್ಲಿ ಜ್ಞಾನದ ಬಗೆಗೆ ತಾಲೂಕಿನಲ್ಲಿ ಶಾಲೆಯಿಲ್ಲ, ಕಾಲೇಜಿಲ್ಲ ಜನ ಹೇಗೆ ಸುಸಂಸ್ಕೃತರಾಗಬೇಕು ಅಂದ ೫–೬ ವರ್ಷಗಳಲ್ಲಿ ಪವಾಡ ಸದೃಶವಾಗಿ ಪೂಜ್ಯರು ಕಾರ್ಯರೂಪಕ್ಕೆ ತಂದಿದ್ದರು. ಇದು ಸಿದ್ಧಲಿಂಗಯ್ಯನವರು ಕಂಡ ಕನಸಿನ ಕೂಸು ಆದರೂ ಸಿದ್ಧಲಿಂಗಯ್ಯನವರು ಯಾರಲ್ಲೂ ಇದನ್ನು ಹೇಳಿಕೊಳ್ಳುತ್ತಿದ್ದಿಲ್ಲ. ಇದನ್ನ ಈಗಲೂ ನಾಯಿಮಲ್ಲಾಪುರದ ಲಿಂಗನಗೌಡರು ಮತ್ತು ತೋಟಗಂಟಿ ಪಾಟೀಲರು ಈಗಲೂ ಶಾಸ್ತ್ರೀಗಳ ಮುಂದಾಲೋಚನೆಯನ್ನು ನೆನೆಸುತ್ತಾರೆ.

ಬೂದಿಹಾಳದ ಜನ ಆಗಾಗ್ಗೆ ಅನಾರೋಗ್ಯದಿಂದ ಬಳಲುತ್ತಿದ್ದರು, ಅವರಿಗೆ ಆರೋಗ್ಯಶಾಸ್ತ್ರವೇ ಗೊತ್ತಿರಲಿಲ್ಲ. ಬರೀ ಒಕ್ಕಲುತನ, ಎತ್ತು ಎಮ್ಮೆ ಕಾಯುವುದು, ರಾಶಿ ಮಾಡುವುದು, ಇಷ್ಟೆ ಕೆಲಸಗಳನ್ನು ಕಂಡ ಸಿದ್ಧಲಿಂಗಯ್ಯನವರು ಸೂಡಿಯ ಆಯುರ್ವೇದಿಕ್ ಪ್ರಸಿದ್ಧ ರಾಜಪುರೋಹಿತರಾದ ಮಡಿವಾಳಪ್ಪನವರಲ್ಲಿ ಊರಿನ

ಅನಾರೋಗ್ಯದ ಹಿನ್ನೆಲೆ ಅರುಹಿದರು. ವೈದ್ಯರಿಗೆ ಪುರುಸೊತ್ತಿಲ್ಲ. ಈಗಿನ ಡಾಕ್ಟರ್‌ರಿಗೆ ದುಡ್ಡು ಮುಖ್ಯವಿದ್ದಂತೆ ಅಂದಿನ ಡಾಕ್ಟರರು ದುಡ್ಡಿಗೆ ಪ್ರಾಧಾನ್ಯತೆ ಕೊಡುತ್ತಿರಲಿಲ್ಲ. ಕಾಯಕ ಸೇವೆಯೇ ಅಂದಿನ ಆಯುರ್ವೆದಿಕ ವೈದ್ಯರಲ್ಲಿ ಭಾವನೆ ಆಗಿತ್ತು. ಸಿದ್ಧಲಿಂಗಯ್ಯನವರು ಮಾತಿಗೆ ಓಗೊಟ್ಟು ಬೂದಿಹಾಳದ ಜನತೆಗೆ ಪುಕ್ಕಟೆಯಾಗಿ ಔಷಧಿ ಕೊಡುತ್ತಿದ್ದರು.*

ದಾರಿಯಲ್ಲಿ ಹೋಗು ವ್ಯಕ್ತಿಯನ್ನು ನೋಡಿ ಅವನ ಖಾಯಿಲೆ, ಅವನ ಬದುಕಿನ ಅವಧಿ, ಅವನಿಗೆ ಭವಿಷ್ಯದಲ್ಲಿ ಬರುವ ಖಾಯಿಲೆ ದೂರಿದಿಂದಲೇ ಗ್ರಹಿಸಿ ಹೇಳುವಂತವಳು ವೈದ್ಯರಾಗಿದ್ದರು. ಅವರು ಬಂದರೇ ಧನ್ವಂತರಿಯೇ ಬಂದಂತೆ, ಸಾವಿನಂಚಿನಲ್ಲಿದ್ದವರೂ, ಅವರ ಶುಶ್ರೂಷೆಯಿಂದ ಬದುಕಿ ಹತ್ತಿಪ್ಪತ್ತು ಎಕರೆ ಭೂಮಿ ಗಳಿಸಿದವರು, ಕಾಲಿಲ್ಲದೇ ವರ್ಷವೆಲ್ಲಾ ನೆಲಸವರಿದವರು, ಓಡಾಡಿ ಮುಂದೆ ೪–೫ ಮಕ್ಕಳ ತಂದೆಯಾದರು. ಕಿವಿ ಕೇಳದ ಕಿವುಡ, ಕಣ್ಣು ಕಾಣದ ಕುರುಡ, ಮೇಲೆ ಏಳದೇ ೩–೪ ವರ್ಷ ಹಾಸಿಗೆ ಹಿಡಿದವರೆಲ್ಲಾ ಸೂಡಿ ಶ್ರೀ ಮಡಿವಾಳ ವೈದ್ಯರ ಶುಶ್ರೂಷೆಯಲ್ಲಿ ಹರೆಯದ ಹುಡುಗರಂತೆ ಓಡಾಡಿದರು. ಊರಿಗೇ ಊರೇ ಮಡಿವಾಳ ವೈದ್ಯರನ್ನು ಕರೆಸಿ ಶುಶ್ರೂಷೆ ನೀಡಿಸಿದ ಸಿದ್ಧಲಿಂಗಯ್ಯನವರನ್ನು ಹಾಡಿ ಹರಸಿತ್ತು.

### ಸಿದ್ಧಲಿಂಗಯ್ಯನಿಗೆ ಹೊಸಬದುಕು ಕೊಟ್ಟ ಡಾ. ಚಪ್ಪನ್ನಮಠ

ನರೇಗಲ್‌ದ ಚಪ್ಪನ್ನಮಠ್ ಚನ್ನಯ್ಯನವರಂತೂ ಕರ್ನಾಟಕವೇ ಕಂಡ ಅನರ್ಘ್ಯ ರತ್ನ ವೈದ್ಯರು. ಧನ್ವಂತರಿಯೇ ಮಾನವ ರೂಪದಲ್ಲಿ ಧರೆಗಿಳಿದು ಬಂದಂತೆ. ಅವರ ಠೀವಿ, ಗಾಂಭೀರ್ಯ, ಹಳದಿ ರುಮಾಲು, ಬಿಳೀ ರೇಷ್ಮೆ ಶರ್ಟ್, ಕೋಟು, ಧೋತರ, ಕೈಯಲ್ಲಿ ಛತ್ರಿ ಹಿಡಿದು ನರೇಗಲ್ ವೀರಭದ್ರಸ್ವಾಮಿ ದೇವಸ್ಥಾನದ ಪಕ್ಕದ ಮನೆಯಿಂದ ಹೊರಟರೆ ಸಂತೆಯ ಮೇನ್‌ರೋಡಿನ ಆಸ್ಪತ್ರೆಯವರೆಗೆ ಬರುವಾಗ ನೂರಾರು ಜನ ಗೌರವದ ನಮಸ್ಕಾರ ಮಾಡುತ್ತಿದ್ದರೆ ; ಕೆಲವರು ಪಾದಮುಟ್ಟಿ ನಮಸ್ಕಾರ ಮಾಡುತ್ತಿದ್ದರು.

ಆಸ್ಪತ್ರೆಗೆ ಬಂದ ರೋಗಿಗಳ ಸಾಲು ಸಾಲೇ ನಿಂತಿರುತ್ತಿತ್ತು. ಬೆಳಗಿನ ೯ ಘಂಟೆಗೆ ಪ್ರಾರಂಭವಾದ ವೈದ್ಯರ ಪರೀಕ್ಷೆ ಮುಗಿಯಬೇಕಾದರೆ ಮಧ್ಯಾನ್ಹ ೩ ಘಂಟೆ ಆಗಿರುತ್ತಿತ್ತು. ಸುತ್ತೆಲ್ಲಾ ಹಳ್ಳಿಯ ಜನಕ್ಕೆ ಚಪ್ಪನ್ನಮಠ ಚನ್ನಯ್ಯ ಅವರು ರೋಗಿಯ ಹಸ್ತಮುಟ್ಟಿ ನಾಡಿ ಹಿಡಿದರೇ ಸಾಕು ಅದೇ ದಿವ್ಯಔಷದಿ ಎಂಬ ತೃಪ್ತಿ ಅವರು ಬೇರೆಯಾರು ಅಲ್ಲ ಸಿದ್ಧಲಿಂಗಶಾಸ್ತ್ರಿಗಳ ಪತ್ನಿ ಸೋಮಕ್ಕನ ಅಕ್ಕ ಸೀಮವ್ವನ ಯಜಮಾನರು. ಹೀಗಾಗಿ ಸುಮಿತ್ರಮ್ಮನಿಗೆ ಮಾವನಾಗಬೇಕು. ಸಿದ್ಧಲಿಂಗಯ್ಯ ನವರಿಗೆ ಚಿಕ್ಕಪ್ಪನಾಗಬೇಕು. ಸಿದ್ಧಲಿಂಗಯ್ಯನವರಿಗೂ ಆಯುರ್ವೇದದಲ್ಲಿ ಬಹು ಆಸಕ್ತಿ, ಚನ್ನಯ್ಯನವರ ಸಂಬಂಧವಾದ ಮೇಲಂತೂ ಅವರು ಹೇಳುವ ಎಲ್ಲಾ

ಔಷದಿ ನೋಟ್ ಅಪ್ಪಾಜಿಯವರಲ್ಲಿರುತ್ತಿತ್ತು. ಅಷ್ಟೇ ಅಲ್ಲ ಅವನ್ನ ನೋಟ್ ಮಾಡಿ ಗದುಗಿಗೆ ತಂದು ಬೂದಿಹಾಳದ ತಮ್ಮ ಕಪಾಟಿನಲ್ಲಿಟ್ಟು, ಊರಲ್ಲಿ ಯಾರಿಗಾದರೂ ನೆಗಡಿ, ತಲೆನೋವು, ವಾಂತಿ, ಭೇಧಿ, ಅಶಕ್ತಿ ಅಂತಾ ಒದ್ದಾಡುತ್ತಿದ್ದರೆ ಅವರಿಗೆ ಬೈದು ಚನ್ನಯ್ಯನವರು ಆಸ್ಪತ್ರೆಯಲ್ಲಿ ಜನಕ್ಕೆ ಬರೆಯುತ್ತಿದ್ದ ಔಷಧಿಯನ್ನು ತಂದು ಇಟ್ಟಿರುತ್ತಿದ್ದರಲ್ಲಾ ಅದನ್ನೇ ಜನಕ್ಕೆ ಪುಕ್ಕಟೆಯಾಗಿ ಕೊಟ್ಟು ಬಿಡುತ್ತಿದ್ದರು. ಹೀಗೆ ಹೇಚ್ಚು ಕಡಿಮೆ ಬೂದಿಹಾಳದ ಸಿದ್ಧಲಿಂಗಯ್ಯನವರ ಮನೆ ಚಪ್ಪನ್ನಮಠ್ ಚನ್ನಯ್ಯನವರ ಆಸ್ಪತ್ರೆಯ ಬ್ರಾಂಚ್ ಆಗಿತ್ತು. ಜೇನುತುಪ್ಪದಲ್ಲಿ ಕಷಾಯ, ಲಿಂಬಿಹಣ್ಣಲ್ಲಿ ಬೇರು, ಚೇಳು ಕಡಿದರೆ ಬೇರು, ಲವಣ, ಸಾಂದ್ರಲವಣ, ಏನೇನೋ, ಅಪ್ಪಾಜಿ ಬಾಟಲಿ ಮೇಲೆ ಅದರ ಹೆಸರು ತೆಗೆದುಕೊಳ್ಳುವ ರೀತಿ ಬರೆದು ಇಟ್ಟಿರುತ್ತಿದ್ದರು. ಅದು ಯಾವ ಖಾಯಿಲೆಗೆ ಅಂತಾ ಸಹ ನಮೂದಿರುತ್ತಿತ್ತು.

ಒಮ್ಮೆ ಸಿದ್ಧಲಿಂಗಯ್ಯನವರು ಇದ್ದಕ್ಕಿದ್ದ ಹಾಗೆ ಮನೆಯಲ್ಲಿ ಕುಸಿದು ಬಿದ್ದರು. ಮಕ್ಕಳೆಲ್ಲಾ ಚಿಕ್ಕವು. ೫–೬ ವರ್ಷದವು. ಸುಮಿತ್ರಮ್ಮನಿಗೆ ದಿಕ್ಕೇ ತೋಚಲಿಲ್ಲ. ಗದುಗಿಗೆ ಒಯ್ದರು ಡಾಕ್ಟರರು ಟಿ.ಬಿ. ಅಂತಾ ಹೇಳಿದರು. ಅಂದು ಟಿ.ಬಿ. ಅಂದರೆ ಮಾರಣಾಂತಿಕ ಖಾಯಿಲೆ ಆಗಿತ್ತು. ಸುಮಿತ್ರಮ್ಮ ಭುವಿಗೆ ಕುಸಿದರು. ಸಿದ್ಧಲಿಂಗಯ್ಯ ನವರನ್ನು ವಾಪಸ್ಸು ಬೂದಿಹಾಳಕ್ಕೆ ಕರೆತಂದರು, ಟಿ.ಬಿ. ಅಂದರೆ ಯಾರೂ ಮನೆಹತ್ತಿರ ಬರದಂತಹ ಖಾಯಿಲೆ ಆಗಿನ ಕಾಲದಲ್ಲಿತ್ತು. ದಿನವೂ ಕಣ್ಣೀರು ಮನೆಯಲ್ಲಿ ಚಿಕ್ಕ ಮಕ್ಕಳನ್ನು ನೋಡಿಕೊಳ್ಳಬೇಕೋ, ಗಂಡನನ್ನು ಅದೂ ಟಿ.ಬಿ. ಆದವರನ್ಹೇಗೆ ನಿಭಾಯಿಸಬೇಕು ಅಂತಾ ಎಡೆಯೂರೇಶನನ್ನೇ ನೆನೆಯುತ್ತಲೆ ಸುಮಿತ್ರಮ್ಮ ಕಣ್ಣೀರು ಕಣ್ಣೀರು ಗರೆಯುತ್ತಿದ್ದಳು.

ಯಾರಿಂದಲೋ ವಿಷಯ ತಿಳಿದ ಚನ್ನಯ್ಯನವರು ಸಿದ್ಧಲಿಂಗಯ್ಯನವರನ್ನು ನರೇಗಲ್ಲದ ತಮ್ಮ ಮನೆಗೆ ಕರೆಸಿಕೊಂಡು, ವೈದ್ಯ ಪರೀಕ್ಷೆ ನಡೆಸಿದರು. ನಾಡಿ ಪರೀಕ್ಷೆಮಾಡಿದರು. ನಂತರ ಏನೇನೋ ಕಷಾಯ ಕಾಯಿಸಿ ಕುಡಿಸಿದರು. ಮುಂದೆ ಅರ್ಧ ಘಂಟೆಗೆ ಸಿದ್ಧಲಿಂಗಯ್ಯ ನಿದ್ರೆಗೆ ಶರಣಾದರು. ಯಾರೂ ಎಚ್ಚರಿಸದಿರಲಿ, ಎಂದು ಹೇಳಿ ಚನ್ನಯ್ಯನವರು ಆಸ್ಪತ್ರೆಗೆ ಹೋಗಿ ಇತರ ರೋಗಿಗಳನ್ನು ಪರೀಕ್ಷಿಸಿ ೩ ಘಂಟೆಗೆ ಮನೆಗೆ ಬಂದರು. ಅಷ್ಟರಲ್ಲಿ ಸಿದ್ಧಲಿಂಗಯ್ಯ ನಿದ್ರೆ ಮಾಡಿ ಎದ್ದಿದ್ದರು. ಮನಸ್ಸಿನಲ್ಲಿ ಟಿ.ಬಿ. ಅಂತಾ ಸಿದ್ಧಲಿಂಗಯ್ಯನವರಿಗೆ ಬೇರೂರಿತ್ತು, ಬಾಗಿಲಲ್ಲಿ ಚಪ್ಪಲಿಬಿಟ್ಟು ಕಂಬಕ್ಕೆ ಛತ್ರಿ ಹಾಕಿ. ಮೆಟ್ಟಿಲೇರುತ್ತಾ 'ಹ್ಯಾಂಗ ಅದೀಪಽ ಸಿದ್ಧಿ, ಆರಾಮ ಆತಽಽ.' ಅನ್ನುತ್ತಲೇ ಹಾಸಿಗೆ ಹತ್ರ ಕುಳಿತು ಮತ್ತೆ ಪರೀಕ್ಷಿಸಿದರು.

''ನಿದ್ದಿ ಬಾಳ ಚಲೋ ಆತ್ರಿ, ಬಾಳ ದಿನಾ ಆತ್ರಿ ನಿದ್ದಿ ಮಾಡಿ ಹೊಟ್ಟೇನೂ ಹಸಿದಿದ್ದಿಲ್ಲ ಈಗ ಹಸದಂಗ ಅನಸ್ತೈತಿ''ಎಂದು ಸಿದ್ಧಲಿಂಗಯ್ಯನವರು ಮೆತ್ತಗೆ ಉಸಿರಿದರು.

''ಹೂಂ ಮತ್ತ ತಲ್ಯಾಗ ಇನ್ನಷ್ಟು ಮೆತ್‌ಗೋ ನಿದ್ದಿ ಬರ್‍ತೈತಿ, ಯಾವನ್ನೆ ಅವsss ಟಿ.ಬಿ. ಆಗೈತಂದವಾ. ಅವರಪ್ಪಗಾಗೈತಿ, ಅವರವ್ವಗಾಗೈತಿ, ಸೂsss ಮಕ್ಕಳು ಹಿಂಗ ಜನಾನ ಸಾಯಸ್ತಾರ. ಹೆಂಡ್ತಿ ಕರೆದು ಚನ್ನಯ್ಯನವರು ಇಲ್ಲೋಡು, ಅವ ಏನ್ ಬೇಡ್ತಾನ ಕೊಡು ಎಲ್ಲಾ ಉಣ್ಣು, ಟಿಬಿ ಹ್ಯಾಂಗ ಬರ್‍ತೈತಿ ನೋಡೇಬಿಡ್ತೀನಿ. ಈ ಮನುಷಾ ಊರಿಗೆಲ್ಲಾ ಶಾಸ್ತ್ರಹೇಳ್ತಾನ. ರಾಜಕಾರಣಿ, ಲೀಡರ್ ಅಂತಾ ಲೀಡರ. ದನಕಾಯಕ ಲಾಯಿಕರು ನೀವು. ''ಸಾಕಬಿಡ್ರಿ. ಔಷಧಿ, ಕೊಡ್ರಿ ಅಂತಾ ಬಂದ್ರ ಬೈಗಳಾ ಕೊಡುದನsss, ಸಾಕೇಳ್ರಿ ಉಣ ಬರ್‍ರಿ, ಸೋಮಕ್ಕನೂ ಇನ್ನು ಉಂಡಿಲ್ಲ ಮಾಮ ಬರ್ಲಿಂತಾ ಹಾಂಗ ಉಪಾಸದಳಾ'' ಸುಮಕ್ಕಗ ಹಸುವೆಗಿಂತ ಗಂಡನದೇ ಚಿಂತೆ. ಪಕ್ಕದಲ್ಲಿ ತೋಟಪ್ಪ, ಬಸವಲಿಂಗವ್ವನ ತಲೆಮೇಲೆ ಕೈಯಾಡಿಸುತ್ತಾ ನಾ ಏನ್ ಮಾಡ್ಲಿ ಮಾವsss ಹಿಂಗಾದ್ರ ಅಂತ ಅಳುತ್ತಿದ್ದಳು.

''ಏ ಹುಚ್ಚೀ, ಇಷ್ಟೋತ್ತನ ಏನ್ ಹೇಳ್ದಿ. ಈ ಬಾಗಲಿಗೆ ಹೇಳ್ದೇನೇನ. ನಿನಗ ಹೇಳ್ದಿ. ಏಳ, ಏಳ, ಚಿಕ್ಕ ಚಿಕ್ಕ ಹುಡುಗುರದಾವು ಬರೇ ಇದನ್ನು ಮಾಡೀರಿ. ಇನ್ನ ನಾಕದಿನಕ ಎದ್ದು ಓಡಾಡ್ತಾನ. ಎಲ್ಲಿ ಟಿ.ಬಿ. ಹಚ್ಚಿದೇಳು.'' ಎಲ್ಲರ ಊಟಾವಾಯ್ತು ಸಿದ್ಧಲಿಂಗಯ್ಯನವರು ಎದ್ದು ಓಡಾಡಹತ್ತಿದ್ದರು. ಸುಮಿತ್ರವ್ವನಿಗೆ ಸ್ವರ್ಗವೇ ಬಂದತಾಯ್ತು, ಮಾಮನ ಪಾದದಲ್ಲಿ ತಲೆಯಿಟ್ಟು ''ನನ್ನ ಮುತ್ತೈದಿತನ ಉಳ್ಸಿದಿ ಮಾವ. ಮಕ್ಕಳು ಅನಾಥ ಆಗ್ತಿದ್ವು. ಮನೀ ಉಳಿಸಿದೀ, ನೀನss ನನ್ನ ಖರೇ ತಂದೀ, ತಾಯಿ.

''ಸೋಮವ್ವsss ನೀ ನನ್ನ ಸೊಸಿ ಅಲ್ಲ ಮಗಳು. ಡಾಕ್ಟರ ನಿಮ್ಗ ಸುಳ್ಳತಲೀ ತುಂಬ್ಯಾನ, ಇವಂಗ ಅಶಕ್ತಿ ಆಗೈತಿ. ಏನೂ ಆಗಿಲ್ಲ.'' ಅವನೊಬ್ಬ ಕಲ್ಲು ಬಂಡೆ ಅದಾನ. ಸಿದ್ಧಲಿಂಗಶಾಸ್ತ್ರಿಗಳಿಗೆ ಚನ್ನಯ್ಯನವರ ಸಲಹೆಯಂತೆ ಔಷಧಿ ಊಟೋಪಚಾರ ಮಾಡಿ ಕೊನೆಯ ಅಂತ್ಯದವರೆಗೂ ಖಾಯಿಲೆ ಬರಲಿಲ್ಲ. ಮುಂದೆ ಈ ಡಾಕ್ಟರೇ ಹುಚ್ಚಿರೇಶ್ವರರು ಐಕ್ಯರಾದ ನಂತರ ಆತನ ಯೋಗ ಸಮಾಧಿ ಕೋಡಿಕೊಪ್ಪದ ಹತ್ತಿರ ಬೈಲಹೊಲದಲ್ಲಿ ಕಟ್ಟಿಸಿದವರು. ಈಗ ಇವರ ಚಿರಂಜೀವಿ ಡಾ. ಮಲ್ಲಿಕಾರ್ಜುನ ಹುಚ್ಚೀರಪ್ಪಜ್ಜನ ಕ್ಷೇತ್ರವ್ನು ನಾಡಿನ ಲಕ್ಷಾಂತರ ಜನ ಆತನ ದರ್ಶನ ಪಡೆಯುವಷ್ಟು ಬೆಳೆಸಿ, ಕಲ್ಯಾಣ ಮಂಟಪ, ದಾಸೋಹ ಮಂಟಪ, ವಸತಿ ಗೃಹ ಕಟ್ಟಿಸಿ ಪ್ರತಿ ವರ್ಷವೂ ಹತ್ತಾರು ಸಾವಿರ ಭಕ್ತರೊಡಗೂಡಿ ಜಾತ್ರೆ ನಡೆಸುತ್ತಾರೆ.

ಒಮ್ಮೆ ಅಂದಿನ ಹಾಳಕೆರೆ ಪೂಜ್ಯರಿಗೆ ಕೆಟ್ಟ ಕಾಯಿಲೆ ಬಂದಿತ್ತು. ರಾಜವೈದ್ಯ ಚನ್ನಯ್ಯನವರು ಆಯುರ್ವೇದ ಸಂಜೀವಿನಿ ಧಾರೆ ಎರೆದು ವಾಸಿಮಾಡಿದ ಕರ್ನಾಟಕದ ಮೊದಲ ವೈದ್ಯರು. ಈಗಲೂ ಅವರ ಸುಪುತ್ರ ಮಲ್ಲಿಕಾರ್ಜುನ ಚಪ್ಪನ್ನಮಠದವರಂತೆ ಆಯುರ್ವೇದದಲ್ಲಿ ಅಗಾಧ ಪಾಂಡಿತ್ಯ ಹೊಂದಿದ ವೈದ್ಯರು.

ಈಗ ನರೇಗಲ್ಲದಲ್ಲಿ ಹುಚ್ಚೀರಪ್ಪನ ದೇವಸ್ಥಾನದ ಟ್ರಸ್ಟ್ ಅಧ್ಯಕ್ಷರಾಗಿದ್ದಾರೆ. ಹಾಗೂ ೧೦–೧೫ ವರ್ಷದಲ್ಲಿ ದೇವಸ್ಥಾನ ಪ್ರಗತಿಗೆ ತಂದ ಕೀರ್ತಿ ಅವರ ಸೇವೆಗೆ ಸಲ್ಲುತ್ತೆ. ಮುಂದೇ ಇವರೇ ತಮ್ಮ ಚಿಕ್ಕಪ್ಪ ಸಿದ್ಧಲಿಂಗಶಾಸ್ತ್ರಿಗಳಿಂದ 'ಹುಚ್ಚೀರೇಶ್ವರ ಚರಿತ್ರೆ' ಎಂಬ ಆಧ್ಯಾತ್ಮಿಕ ತುರಿಯಾವಸ್ಥೆ ಬೀರುವ ಮಹಾಚರಿತ್ರೆ ಬರೆಸಿ, ತಮ್ಮ ಸಂಸ್ಥೆಯಿಂದ ಪ್ರಕಟಿಸಿದರು. ಅದರ ೧೦೦೦ ಪ್ರತಿಗಳು ಕೆಲವೇ ತಿಂಗಳಲ್ಲಿ ಮುಗಿದವಂತೆ. ಶಾಸ್ತ್ರಿಗಳ ಪಾಂಡಿತ್ಯ ಸೋಸಿ ಬರೆಸಿದ ಕೀರ್ತಿಯು ಶ್ರೀ ಡಾ. ಮಲ್ಲಿಕಾರ್ಜುನ ಚಪ್ಪನಮಠರಿಗೆ ಸಲ್ಲುತ್ತೆ. ಈ ಗ್ರಂಥ ಈಗ ಅಪ್ಪಾಜಿ ಸಮಗ್ರ ಸಾಹಿತ್ಯದಲ್ಲಿ ಪ್ರಕಟಗೊಳ್ಳುತ್ತಿದೆ.

ನಮ್ಮ ದೊಡ್ಡಮ್ಮ ಸೀಮಮ್ಮನೂ ಅಷ್ಟೇ ಹಣೆ ತುಂಬಾ ಕುಂಕುಮ, ವಿಶಾಲ ಮುಖ ಮುದ್ರೆ, ಸದಾ ಮುಗುಳ್ನಗೆ, ಅವರ ಅಕ್ಕತಂಗಿಯರಾದ ಹುಬ್ಬಳ್ಳಿ ಮಾಂತಮ್ಮ ಮುಂಡರಗಿ ಗಿರಿಜಮ್ಮ, ಬೂದಿಹಾಳ ಸುಮಿತ್ರಮ್ಮ ಗದುಗಿನ ನೀಲಗಂಗಮ್ಮ ಹುಬ್ಬಳೀ ಮಹಾಂತಮ್ಮ ಎಲ್ಲರ ಮಕ್ಕಳಿಗೂ ನರೇಗಲ್ ಆಶ್ರಯತಾಣ. ಅದು ಅನ್ನದಾಸೋಹ ಆರೋಗ್ಯ ದಾಸೋಹ. ಎಲ್ಲದಕ್ಕಿಂತ ಪ್ರೀತಿಯ ದಾಸೋಹ ನೀಡಿತ್ತು. ನನಗಂತೂ ಅದು ಯಶೋಧೆ ಕೃಷ್ಣನನ್ನು ಬೆಳೆಸಿದಂಥಾ ಮನೆ. ಅತ್ತಿಗೆ ಪಾರ್ವತಮ್ಮ ಅಕ್ಕ ಪ್ರಭಕ್ಕ, ಅಣ್ಣ ತಮ್ಮರಂತೆ ಮಲ್ಲಣ್ಣ, ಚಂದ್ರಶೇಖರ, ಪ್ರೇಮಾ, ಎಲ್ಲರೂ ನರೇಗಲ್ ರಸ್ತೆಯಲ್ಲಿ ಹೊರಟರೆ ಪಂಚಪಾಂಡವರು ಐದಾದರೇ ನಾವು ಹತ್ತಾರು ಜನ ಪಾಂಡವರು. ರಾಜಬೀದಿ ನಮ್ಮದೇ ಯಾರೂ ನಮ್ಮ ಹತ್ತಿರ ಹಾಯದಷ್ಟು ಬುಜಬಲದ ಪರಾಕ್ರಮಿಗಳು ಸಾಗಿದಂತೆ. ಅಂದಿನ ದಿನಗಳ ನೆನೆದರೆ ಇಂದಿಗೂ ಮತ್ತೆ ನಾನು ೧೫–೧೬ ವರ್ಷದ ಬಾಲಕನಾಗಿಬೀಡುತ್ತೇನೆ. ಚಪ್ಪನ್ನಮಠದ ಡಾಕ್ಟರರು ತೀರಿದಾಗ ಅಪ್ಪಾಜಿ ಚಿಕ್ಕಮಕ್ಕಳಂತೆ ಅತ್ತು ಬಿಟ್ಟರು. ಅಂತಹ ವೈದ್ಯ ಇನ್ನು ಸಿಗುವುದೇ ದುರ್ಲಭ.

ಮುಂದೆ ಬೂದಿಹಾಳದಲ್ಲಿ ಚಿಕ್ಕಪುಟ್ಟ ಪೀಳಿಗೆಗಳು ಊರಲ್ಲಿ ತಮ್ಮ ತಮ್ಮಲ್ಲಿ ಬಡೆದಾಟದ ಬಣವಾಗಿ ಬೆಂಕಿ, ಹೊಡೆದಾಟ ಕಂಡು ಅಪ್ಪಾಜಿ ತಮ್ಮ ಮಕ್ಕಳಿಗೆ ಈ ಜನರ ಗುಣಗಳು ಬರುತ್ತಾವೆಂದು ಭಯದ ಕಾರಣ ಮಕ್ಕಳ ಭವಿಷ್ಯಕ್ಕಾಗಿ ಅವರ ಮುಂದಿನ ಶಿಕ್ಷಣ, ನೀತಿ, ಸಂಸ್ಕಾರಕ್ಕಾಗಿ ಬೂದಿಹಾಳ ಬಿಟ್ಟು ಗದುಗಿಗೆ ವಾಪಸು ಬಂದು ಶಹಪುರಪೇಟೆಯಲ್ಲಿ ನೆಲೆಸಿದರು, ಮಕ್ಕಳ ಅಭ್ಯಾಸಕ್ಕೆ ವ್ಯವಸ್ಥೆ ಮಾಡಿ, ಮನೆತನದ ಖರ್ಚುವೆಚ್ಚಕ್ಕಾಗಿ ಶಿವಪ್ಪ ಕುಬಸದರಿಗೆ ಸಂಪರ್ಕಿಸಿ ನೇಸ್ವಿಯವರ 'ನವಯುಗ' ಪ್ರಸಿದ್ಧ ಕನ್ನಡ ದಿನ ಪತ್ರಿಕೆ ಕುಬಸದ ಶಿವಪ್ಪನವರ ವ್ಯವಸ್ಥಾಪನೆಯಲ್ಲಿ ನಡೆಯಿತ್ತಿತ್ತು. ಅದರ ಏಜೆನ್ಸಿ ತೆಗೆದುಕೊಂಡರು.

### ಶಹಪುರ ಪೇಟೆ ತರುಣಸಂಘ

ಪತ್ರಿಕೆಯನ್ನು ಗದಗದಲ್ಲಿ ಹಂಚಲು ಹುಡಗರು ಬೇಕಾಗಿತ್ತು. ಅವರಲ್ಲಿ ಬಡವರಲ್ಲಿ ಕಾಳಜಿ ಇತ್ತು; ಅದಕ್ಕಾಗಿ ಶಹಪೂರಪೇಟೆ ಬಡಕುಟುಂಬಗಳ ಮಕ್ಕಳನ್ನೇ ಆಯ್ಕೆ ಮಾಡಿಕೊಂಡರು. ಅವರೆಂದರೆ ಬೇವಿನಮರದ ರಾಚಪ್ಪ, ಸಂಶೀಮಠದ ಪಂಚಣ್ಣ, ಕಾಡಪ್ಪನವರ ಈರಣ್ಣ, ಜಂಗಮನಿ ರಾಚಣ್ಣ, ತಡಸದ ಮನೆಯವರು, ಬಡಿಗಣ್ಣವರ ವೀರಣ್ಣ, ಸಂಬರಗಿ ಹೀಗೆ ಮುಂತಾದವರು. ಇವರನ್ನು ಪತ್ರಿಕೆ ಹಂಚು ಕೆಲಸಕ್ಕೆ ತೆಗೆದುಕೊಂಡರು. ಅವರನ್ನು ಮಕ್ಕಳಂತೆ ಕಂಡು ಅವರ ಶಿಕ್ಷಣಕ್ಕೂ ವ್ಯವಸ್ಥೆ ಮಾಡಿ ಅದರ ವೆಚ್ಚವನ್ನು ತಾವೇ ಭರಿಸಿ ಶಹಪುರಪೇಟೆಯಲ್ಲಿ ಶಹಪುರಪೇಟೆಯಲ್ಲಿ ನೈತಿಕ, ಆಧ್ಯಾತ್ಮಿಕ ಸಾಮಾಜಿಕ ಹಿನ್ನೆಲೆಯಲ್ಲಿ ಒಂದು 'ತರುಣಸಂಘ' ಕಟ್ಟಿದರು, ತರುಣ ವ್ಯಾಪಾರಸ್ಥರು ವ್ಯಾಪಾರ ಮುಗಿಸಿ ಊಟ ಮಾಡಿ ತರುಣ ಸಂಘದಲ್ಲಿ ಸೇರಬೇಕು. ಅಲ್ಲಿ ರಾತ್ರಿ ೯ ಘಂಟೆಯಿಂದ ಎಡೆಯೂರ ಸಿದ್ಧಲಿಂಗನ ನೂರೆಂಟು ನಾಮಾವಳಿ, ನಿಜಗುಣರ ಕೈವಲ್ಯಪದ್ಧತಿ, ಸಿದ್ಧಲಿಂಗೇಶ್ವರರ ಪುರಾಣ, ಬಸವೇಶ್ವರ ವಚನಾಮೃತ ವೀರಶೈವ ನೆಲೆಗಟ್ಟಿಗೆ ಪಾಯ ಹಾಕಿದರು. ಬಾಡಿಗೆ ಖೋಲಿಯಲ್ಲಿ ನಡೆದ ಈ ಕಾರ್ಯ ಶಂಕರಲಿಂಗ ಗುಡಿಯ ಹತ್ತಿರದ ಜಾಗೆಯನ್ನು ಖರೀದಿಸಿ ಬಸವೇಶ್ವರ ವಾಚನಾಲಯ ಸ್ಥಾಪಿಸದರು. ಎಲ್ಲಾ ತರದ ಪತ್ರಿಕೆ ತರಿಸಿ ಶಹಪುರಪೇಟೆ ಜನಕ್ಕೆ ಜ್ಞಾನ ದಾಸೋಹ ಒದಗಿಸಿದರು. ಮೊದಲು ಕಾಮನಕಟ್ಟೆಯಲ್ಲಿದ್ದ ಲೈಬ್ರರಿ ಈಗ ಸ್ವಂತ ಕಟ್ಟಡದಲ್ಲಿ ನಡೆಯಿತು.

'ಕ್ರಾಂತಿವೀರ ಬಸವಣ್ಣ' 'ಬೆಳ್ಳಿಚುಕ್ಕಿ' ನಾಟಕವಾಡಿದಾಗ ಸ್ತ್ರೀ ಪಾತ್ರಕ್ಕೆ ತರುಣಸಂಘದ ಹುಡುಗರನ್ನೇ ಆಯ್ದುಕೊಂಡರು. ಸ್ವತಃ ಬಸವಣ್ಣನ ಪಾತ್ರ ಸಿದ್ಧಲಿಂಗಯ್ಯನವರೇ ನಿರ್ವಹಿಸಿದ್ದರು.

ತರುಣ ಸಂಘದ ಹುಡುಗರಿಗೆ ಸ್ವತಃ ಒಂದೊಂದು ವಿಷಯ ನೀಡಿ ಆಧ್ಯಾತ್ಮಿಕ, ಸಾಹಿತ್ಯ, ರಾಜಕಾರಣ, ಸಮಾಜಸೇವೆ, ಹೀಗೆ ಅವರದೇ ವ್ಯಾಖ್ಯಾನ ಅವರ ಅಭಿಪ್ರಾಯ, ಭಾಷಣ ಕಲೆ, ಕಲಿಸಿ ನೀತಿವಂತರಾಗಿಸಿದರು. ಅಂದಿನ ಸಂಘದ ತರುಣರು ಎಷ್ಟು ಎಚ್ಚತ್ತರೆಂದರೆ ಅವರ ಸಂಘದ ಹೆಸರು ಕೇಳಿಯೇ ಅನೇಕ ಅನೈತಿಕರು ಹೆದರುತ್ತಿದ್ದರು, ಸಮಾಜ, ಸಾಹಿತ್ಯ, ಧರ್ಮ, ರಕ್ಷಣೆಗೆ ಸಿಂಹಪಡೆಯಾಗಿ ನಿಂತ ತರುಣಸಂಘವೆಂದರೆ ಬರೀ ಗದಗಲ್ಲ ಧಾರವಾಡ ಜಿಲ್ಲೆಯೇ ನಡುಗುತ್ತಿತ್ತು.

### ಬಸವ ಜಯಂತಿಗೆ ಸರಕಾರಿ ರಜೆ

ನಮ್ಮ ನಾಡಿನಲ್ಲಿ ಬಸವಜಯಂತಿಯನ್ನು ಸಾರ್ವಜನಿಕವಾಗಿ ಮೊದಲು ಪ್ರಾರಂಭಿಸಿದ ಶ್ರೇಯಸ್ಸು ಧಾರವಾಡ ಮೃತ್ಯುಂಜಯ ಸ್ವಾಮಿಗಳು ಮತ್ತು ದಾವಣಗೆರೆಯ ಹರ್ಡೇಕರ ಮಂಜಪ್ಪನವರಿಗೆ ಸಲ್ಲುತ್ತದೆ. ಇದನ್ನು ಈರ್ವರು ಕೂಡಿಕೊಂಡು ದಾವಣಗೆರೆಯಲ್ಲಿ ಬಸವ ಜಯಂತಿನ್ನು ಪ್ರಾರಂಭಿಸುತ್ತಾರೆ. ಇದರ

ಪರಿಣಾಮ ಮೂರೇ ವರ್ಷದಲ್ಲಿ ಯಲಬುರ್ಗಾ ತಾಲೂಕಿನ ಸಂಗನಾಳದಂತಹ ಸಣ್ಣ ಗ್ರಾಮದಲ್ಲಿ ಬಸವಜಯಂತಿಯನ್ನು ಆಚರಿಸಿದ ದಾಖಲೆಗಳು ಸಿಗುತ್ತದೆ. ರಾಮ ನವಮಿಗೆ, ಕೃಷ್ಣಾಷ್ಟಮಿಗೆ ಸರಕಾರಿ ರಜೆ ಕೊಟ್ಟ ಸರಕಾರ ಈ ನಾಡಿನಲ್ಲಿಯೇ ಹುಟ್ಟಿ ವಿಶ್ವಮಾನವನೆನಿಸಿದ ಕ್ರಾಂತಿ ಪುರುಷ ಬಸವಜಯಂತಿಯಂದು ಸರಕಾರಿ ರಜೆ ಕೊಡಲಾರದ್ದು ಲಿಂಗಾಯತರಿಗೆ ದೊಡ್ಡ ಅಪಮಾನವಾಗಿತ್ತು. ಇದನ್ನು ಮನಗಂಡ ಸಿದ್ಧಲಿಂಗಯ್ಯನವರು ತಾವು ಕಟ್ಟಿಸಿ ಬೆಳಿಸಿದ ತರುಣಸಂಘದ ಮುಖಾಂತರ ಹೋರಾಟ ಮಾಡುತ್ತಾರೆ. ಆಗಿನ ಎಂ.ಎಲ್.ಸಿ. ಯಾದ ಕುಬಸದ ಶಿವಪ್ಪನವರ ಮೂಲಕ ವಿಧಾನ ಸಭೆಯಲ್ಲಿ ಧ್ವನಿ ಎತ್ತುವಂತೆ ಮಾಡುತ್ತಾರೆ. ನೀವು ಬುದ್ಧನನ್ನು ದೇವರು ಎನ್ನುತ್ತೀರಿ, ರಾಮನನ್ನ ದೇವರೇನ್ನುತ್ತೀರಿ, ಕೃಷ್ಣನನ್ನ ದೇವರೆನ್ನುತ್ತೀರಿ. ಹಾಗಾದರೇ ನಿಮ್ಮ ದೃಷ್ಟಿಯಲ್ಲಿ ಬಸವಣ್ಣ ದೇವರಲ್ಲವೇ ? ಮೇಲಿನವುಗಳಿಗೆ ಸರಕಾರಿ ರಜೆಕೊಟ್ಟ ನೀವು ಬಸವಜಯಂತಿಗೂ ಸರಕಾರಿ ರಜೆ ಕೊಡಬೇಕು. ಇಲ್ಲದಿದ್ದರೇ ವಿಧಾನ ಸೌಧದ ಮುಂದೆ ನಮ್ಮ ತರುಣಸಂಘ ಉಪವಾಸ ಸತ್ಯಾಗ್ರಹ ಮಾಡುತ್ತದೆ ಎಂದು ಘರ್ಜಿಸುತ್ತಾರೆ. ಇದಕ್ಕೆ ಮಣಿದ ಸರಕಾರ ಬಸವಜಯಂತಿಗೆ ಸರಕಾರಿ ರಜೆ ಕೊಡುತ್ತಾರೆ. ಈಗ ಬಸವ ಜಂಯತಿಗೆ ಸಿಗುವ ಸರಕಾರಿ ರಜದ ಹಿಂದೆ ಸಿದ್ಧಲಿಂಗಯ್ಯನವರ ಬಹುದೊಡ್ಡ ಪರಿಶ್ರಮವಿದೆ.

ಮಾಸ್ತಿಯವರು ದೊಡ್ಡ ಬರಹಗಾರರೇನೋ ಹೌದು. ಆದರೆ ವೀರಶೈವ ಧರ್ಮದ ಅವಹೇಳನದ ಗುರಿ ಅವರಲ್ಲಿ ತುಂಬಿತ್ತು. ಅವರ "ಚನ್ನಬಸವನಾಯಕ" ಎಂಬ ಕಾದಂಬರಿಯಲ್ಲಿ ಮಹಾ ಸಾಧ್ವಿಯಾದ ಕೆಳದಿ ಚೆನ್ನಮ್ಮರಾಣಿಯ ಮೇಲೆ ವ್ಯಭೀಚಾರದ ಆರೋಪ ಮಾಡಿದರು. ಲಿಂಗಾಯತರ ಬಗ್ಗೆ ಬರೆದ ಇಂತಹ ಅವಹೇಳನ ಕಾರಿ ಘಟನೆಯ ಬಗ್ಗೆ ಸಿದ್ಧಲಿಂಗಯ್ಯ ಬಹಳ ಉಗ್ರವಾಗಿ ಖಂಡಿಸುತ್ತಾರೆ. ಮಾರನೇ ದಿನ ಕನ್ನಡ ಪ್ರಭಪತ್ರಿಕೆಯಲ್ಲಿ ಅನಕೃ ಅವರು ಶಹಪುರ ಪೇಟೆಯ ತರುಣ ಸಂಘದವರು ಪ್ರತಿಭಟನೆ ಮಾಡಿದನ್ನು ಬರೆಯುತ್ತಾರೆ. ಅದಕ್ಕೆ ಪ್ರತಿಯಾಗಿ ಸಿದ್ಧಲಿಂಗಯ್ಯನವರು ಕೆಳದಿ ಚೆನ್ನಮ್ಮ ವ್ಯಭಿಚಾರಿ ಎಂದು ಬರೆಯಲು ಇವರಿಗೆ ಎಷ್ಟು ಧೈರ್ಯ. ಈ ಮಾತುಗಳನ್ನು ಕೇಳಿ ನಾವು ಸುಮ್ಮನೇ ಕೂಡ್ರಬೇಕೆ? ಹಾಗೆ ಬರೆಯಲು ಇವರಿಗೆ ಯಾವ ಆಧಾರವಿದೆ ಎಂದು ಪತ್ರಿಕಾ ಹೇಳಿಕೆ ಮೂಲಕ ಗುಡುಗುತ್ತಾರೆ. ಮಾಸ್ತಿಯವರು ಕ್ಷಮೆಯಾಚಿಸುವವರೆಗೂ ಬಿಡುವದಿಲ್ಲ. ಅನಕೃ ಅವರಿಗೂ ಇದೇ ಪಾಡು. ಬೇಂದ್ರೆಯವರು ಮುನ್ಸಿಪಲ್ ಕಾಲೇಜು ಗ್ರೌಂಡಿನಲ್ಲಿ ಭಾಷಣ ಮಾಡಲು ಬಂದರೇ ಅವರು ಮಾತನಾಡದಂತೆ ಸಿದ್ಧಲಿಂಗಯ್ಯ ಹಾಗೂ ಅವರ ತರುಣಸಂಘದವರು ತಡೆಯುತ್ತಾರೆ. ಆಗ ಬೇಂದ್ರೆಯವರು ಶಹಪುರ ಪೇಟೆ ವೀರಶೈವರು ಕಟ್ಟಾ ಮುಸುಲ್ಮಾನರು ಎಂದು ಹೇಳುವಷ್ಟರ ಮಟ್ಟಿಗೆ ಎಚ್ಚರಿಸಿದವರು ಸಿದ್ಧಲಿಂಗಯ್ಯನವರು ಮತ್ತು ಅವರ ತರುಣ ಸಂಘ.

ಭಕ್ತ ಕನಕದಾಸ ಚಲನಚಿತ್ರದಲ್ಲಿ ''ಡಿಂಬದೊಳಗೆ ಒಂದು ಪ್ರಾಣ ಕುಂಬಸೂತ್ರ ಗೊಂಬೆಯಂತೆ ಒಂದು ದಿನ ಸಾವು ತಪ್ಪದು'' ಇದು ಮುಪ್ಪಿನ ಷಡಕ್ಷರಿಗಳ ಅನುಭಾವ ಗೀತೆಯಾಗಿದ್ದರೂ, ಅದನ್ನು ಕನಕದಾಸರು ರಚಿಸಿದ್ದೆಂದು ತಿರುಚಿತ್ತು. ಸಿದ್ಧಲಿಂಗಯ್ಯ ತರುಣ ಸಂಘದದಿಂದ ಚಲನಚಿತ್ರ ಬಿಡುಗಡೆ ಆಗದಂತೆ ಸತ್ಯಾಗ್ರಹ ಮಾಡಿದಾಗ ಆ ಶೀರ್ಷಿಕೆ ಹಾಡನ್ನೆ ಸೆನ್ಸಾರ ಮಾಡಲಾಯಿತು.

'ಅನಕೃ ಬಸವಾದಿ ಪ್ರಮಥರ ಬಗೆಗೆ ಕಡೆಗಣಿಸಿ ಮಾತನಾಡಿದಾಗ ಮುನಸಿಪಲ್ ಹೈಸ್ಕೂಲ ಮತ್ತು ಕಾಲೇಜಿಗೆ ಅತಿಥಿಯಾಗಿ ಬಂದಾಗ ತರುಣಸಂಘ ಅವರನ್ನು ಘೇರಾವ್ ಹಾಕಿದಾಗ ಅನಕೃ ಕ್ಷಮೆ ಯಾಚಿಸಿದ್ದರು. 'ಬೇಂದ್ರೆ, ಮಾಸ್ತಿಯಂತಹವರೂ ಮುಂದೆ ವೀರಶೈವ ಧರ್ಮದ ಬಗೆಗೆ ಲಘುವಾಗಿ ಮಾತನಾಡುವುದನ್ನು ನಿಲ್ಲಿಸಿದ್ದರು.

ಒಮ್ಮೆ ಅಂದಿನ ರಾಜಕಾರಣಿ, ಗದುಗಿನ ಹುಲಕೋಟಿ ಹುಲಿ ಕೆ.ಎಚ್. ಪಾಟೀಲರು ಶಹಪುರಪೇಟೆಯಲ್ಲಿ ವೀರಶೈವರ ಬಗೆಗೆ ಲಘುವಾಗಿ ಚುನಾವಣಾ ಭಾಷಣ ಮಾಡಿದಾಗ ತಕ್ಷಣ ಅಲ್ಲಿದ್ದ ತರುಣಸಂಘದ ಸದಸ್ಯರು ಎದ್ದು ಕೆ.ಎಚ್. ಪಾಟೀಲರೇ, ಈ ರೀತಿ ಮಾತಾಡಿದರೆ ಶಹಪುರಪೇಟೆ ಸುತ್ತ ಬಾಗಿಲು ಬಂದು ಮಾಡುತ್ತೇವೆ ಎಂಬ ಎಚ್ಚರಿಕೆ ನೀಡಿದಾಗ ಪಾಟೀಲರು ತರುಣ ಸಂಘಕ್ಕೆ ಶರಣಾಗಬೇಕಾಯ್ತು.

ಅಂದಿನ ರಂಭಾಪುರಿ ಜಗದ್ಗುರುಗಳ ಅಡ್ಡಪಲ್ಲಕ್ಕಿ ಉತ್ಸವ ಕೆಲ ಅಧರ್ಮಿಗಳು ಬೇಕಂತಲೇ ತೋಂಟದಾರ್ಯ ಮಠದ ಮುಂದೆ ಸಾಗಿಸಲು ಪ್ರಯತ್ನಪಟ್ಟರು. ಇದು ಕೆಲ ಶ್ರೀಮಂತರ ಕಿತುಬಿಯುಯಾಗಿತ್ತು. ತಕ್ಷಣ ತರುಣಸಂಘದ ಎಲ್ಲ ಸದಸ್ಯರು ಕೈಯಲ್ಲಿ ಲಾಠಿ ಹಿಡಿದು ಮಠದ ಸ್ಟೇಷನ್ ರೋಡಿನಿಂದ ಮಹೇಂದ್ರಕರ್ ಸರ್ಕಲ್‌ವರೆಗೆ ನಿಂತು, ಬೇಕಂತಲೇ ಅಡ್ಡಪಲ್ಲಕ್ಕಿ ತರುವವರನ್ನು ಎಚ್ಚರಿಸಿ ಬೇರೆ ಮಾರ್ಗಕ್ಕೆ ತಿರುಗಿಸಿ ಧಾರ್ಮಿಕ ಶಾಂತಿಗೆ ನಾಂದಿ ಹಾಡಿದ ಕೀರ್ತಿ ಸಿದ್ಧಲಿಂಗಯ್ಯನವರ ಕಟ್ಟಿದ ಶಹಪುರಪೇಟೆ ತರುಣ ಸಂಘಕ್ಕೆ ಸಲ್ಲುತ್ತದೆ.

ಈ ತರುಣ ಸಂಘದ ಸದಸ್ಯರಾದ ರಾಚಪ್ಪ ಬೇವಿನಮರದ, ಮುನಸಿಪಲ್ ಪ್ರೆಸಿಡೆಂಟರಾದರು, ಈರಪ್ಪ ಕಾಡಪ್ಪನವರ ಹೊಸಪೇಟೆ ಪಿ.ಎಲ್.ಡಿ. ಬ್ಯಾಂಕ್ ಮ್ಯಾನೇಜರ್ ಆದರು, ನವಕರ್ನಾಟಕ ಬ್ಯಾಂಕ್ ಸ್ಥಾಪಕರು. ಅವರ ಮಗ ಈಗ ಜಗತ್ತಿನ ಭೂವಿಜ್ಞಾನಶಾಸ್ತ್ರ, ಸಮುದ್ರದ ಅಡಿಗಳ ತೈಲ ಆಗರಶಾಸ್ತ್ರದ ಜರ್ಮನಿ ಮೂಲ ಕಂಪನಿ ಜ್ಯೂಯಲಾಜಿಸ್ಟ್, ದಾನಪ್ಪ ಬಿಳೆ ಅಂಗಡಿ, ಮುನಿಸಿಪಲ್ ಚಿಫ್ ಆಫೀಸರ. ಪಂಚಾಕ್ಷರಿ ಸಂಶೀಮಠ ನಾಡಿನ ಗಣ್ಯ ವ್ಯಾಪಾರಿಗಳು ಅವರ ಚಿ॥ ಈಗ ತಂದೆ ಸೇವೆ ಮುಂದುವರಿಸಿದ್ದಾರೆ. ಚಂಬಣ್ಣ ಬಡಿಗಣ್ಣವರ, ಕರಿಯಪ್ಪ ಬಡಿಗಣ್ಣವರ, ಸದಾಶಿವ ಬಡಿಗಣ್ಣವರ, ಜಂಗಮನಿ ರಾಚಪ್ಪ, ಗುರುಸಿದ್ಧಪ್ಪ ಹುಣಸಿಮರದ,

ಚಳ್ಳಮರದ ರಾಚಪ್ಪ, ಚನ್ನಪ್ಪ ಕಾಡಪ್ಪನವರ, ಸಂಬರಿಗ ವ್ಯಾಪಾರಸ್ಥರು, ರಾಚಪ್ಪ ತಡಸದ, ಬೇವಿನಮರದ ಸಿದ್ರಾಮಪ್ಪ ಬಡಿಗಣ್ಣವರ, ಎಚ್.ಎನ್. ಹೂಗಾರ ಚಲನಚಿತ್ರ ಹಾಗೂ ನಾಟಕಕಾರರು ಕನ್ನಡ ರಾಜ್ಯೋತ್ಸವ ಪ್ರಶಸ್ತಿ ಪಡೆದವರು, ಬಸಣ್ಣ ಬಡಿಗಣ್ಣವರ ಬಣ್ಣದ ವ್ಯಾಪಾರಸ್ಥರು, ದಾನಪ್ಪ ತಡಸದ ಬಣ್ಣದ ವ್ಯಾಪಾರಿಗಳು, ಇಟಗಿ ಚಂಬಣ್ಣ ಹೀಗೆ ಸಿದ್ಧಲಿಂಗಶಾಸ್ತ್ರಿಗಳ ಶಿಷ್ಯಂದಿರರಾಗಿ ಬೆಳೆದು ನಿಂತರು. ತಾತ್ವಿಕ, ಆಧ್ಯಾತ್ಮಿಕ, ನೈತಿಕಕ್ಕೆ ಬಸವಮಾರ್ಗದಲ್ಲಿ ಅವರ ಮನೆತನ ನಡೆಯುತ್ತಿದ್ದರೆ ಅದಕ್ಕೆ ಕಾರಣ ತರುಣಸಂಘದ ವೈಶಿಷ್ಟ್ಯ. ಈಗ ಅವರೆಲ್ಲಾ ತೋಂಟದಾರ್ಯಮಠದ ಲಿಂಗಾಯತ ಅಧ್ಯಯನ ಸಂಸ್ಥೆ, ವೀರಶೈವ ಸಮಾಜ ಸಂಸ್ಥೆ ಸದಸ್ಯರು, ತರುಣಸಂಘದ ಕಾರ್ಯ ಶ್ರೀಮಠದಲ್ಲಿ ಮುಂದುವರೆಸಿಕೊಂಡು ಬರುತ್ತಿದ್ದಾರೆ.

### ಸಿದ್ಧಲಿಂಗಶಾಸ್ತ್ರಿ ಮತ್ತು ಗವಾಯಿಗಳ ಆಶ್ರಮ

ಗದುಗಿಗೂ ವೀರಶೈವ ಪುಣ್ಯಾಶ್ರಮಕ್ಕೂ ಬಹಳ ನಂಟು, ಕರ್ನಾಟಕದ ತಾನಸೇನರಾದ ಪಂ|| ಪಂಚಾಕ್ಷರಿ ಗವಾಯಿಗಳು ಸಂಗೀತ ತಪೋ ಕ್ಷೇತ್ರ ಗದಗ. ಸಂಗೀತ ಕಲಿಸಲೆಂದೇ ಹಾನಗಲ್ ಕುಮಾರಸ್ವಾಮಿಗಳ ಆಜ್ಞೆ ಮೇರೆಗೆ ಈ ಅಂಧ ಪಂಡಿತರು ಬೆಳಗಿನ ೫ ಘಂಟೆಗೆ ತಬಲಾ, ಹಾರ್ಮೋನಿಯಂ ಶಿಷ್ಯರ ಕೊರಳಿಗೆ ಹಾಕಿ, ದಾರಿ ಉದ್ದಕ್ಕೂ ಸಂಗೀತ ಮಾಡುತ್ತಾ ಬರುವದನ್ನು ವರ್ಷಾನುಗಟ್ಟಲೇ ಕಂಡ ಜನ ಬೆರಗುಗೊಂಡು, ಅವರ ಸೇವೆಗೆ ಮಾರುಹೋಗಿ ಮುಸಾರಿಯಲ್ಲಿ ಆಶ್ರಮವನ್ನೇ ಕಟ್ಟಿ ಇಂದು ಲಕ್ಷಾಂತರ ಅಂಧರಿಗೆ ಅನ್ನದಾತರು. ಆಧ್ಯಾತ್ಮಿಕ ನೆಲೆಗಟ್ಟು ತೋರಿದ ಬಸವತತ್ವ ನಿಷ್ಠಾವಂತರೂ, ಪೂಜ್ಯ ತಪಸ್ವಿಗಳಾದವರು ಅವರ ಶಿಷ್ಯರೇ ಪಂ|| ಪುಟ್ಟರಾಜ ಗವಾಯಿಗಳು. ಸಿದ್ಧಲಿಂಗಯ್ಯನವರಿಗೆ ಈ ವೀರಶೈವ ಪುಣ್ಯಾಶ್ರಮ ಪುಟ್ಟರಾಜಗವಾಯಿಗಳೆಂದರೆ ಅನಂತ ವಾತ್ಸಲ್ಯ, ಪ್ರೇಮ, ಸಂಗೀತದ ಹುಚ್ಚು ಎಷ್ಟೆಂದರೆ ಪಂಚಾಕ್ಷರಗವಾಯಿಗಳ ಪುಣ್ಯಸ್ಮರಣೆ ಅಹೋರಾತ್ರಿ ಕಾರ್ಯಕ್ರಮ ಕೇಳದೇ ಸಿದ್ಧಲಿಂಗಯ್ಯ ಮರಳುತ್ತಿರಲಿಲ್ಲ. ಪಂ|| ಭೀಮಸೇನ ಜೋಶಿ, ಪಂ|| ಮಲ್ಲಿಕಾರ್ಜುನ ಮನ್ಸೂರ್, ಪಂ|| ಬಸವರಾಜ ರಾಜಗುರು, ಪಂ|| ಅರ್ಜುನಸಾ ನಾಕೋಡ, ಪಂ|| ಜಂಬಲದಿನ್ನಿ ಸಿದ್ಧಣ್ಣ, ಪಂ|| ಶಿವರಾಜಗವಾಯಿ, ಪಂ|| ಪಂಚಾಕ್ಷರಿ ಮತ್ತಿಗಟ್ಟಿ, ಪಂ|| ಹಾನಗಲ್ ಗಂಗೂಬಾಯಿ ಅವರಲ್ಲಿ ಅನ್ಯೋನ್ಯತೆ, ಪಂ|| ಸೋಮನಾಥ್ ಮರಡೂರು ಹಾಗೂ ಶಿವರಾಜ ಗವಾಯಿಗಳು ತಮ್ಮ ಮನೆಯಲ್ಲಿ ಬೆಳಿದಿದ್ದು. ಅವರಿಂದಲೇ ಮಗ ಮಹಾಂತೇಶ ವಕೀಲರಿಗೆ ಹಿಂದೂಸ್ಥಾನಿ ಸಂಗೀತದ ಅಭ್ಯಾಸ ಮಾಡಿಸಿದ್ದರು.

ನಾನಿನ್ನೂ ಚಿಕ್ಕವ, ಪಂಡಿತ್ ಜಂಬಲದಿನ್ನಿ ಸಿದ್ಧಣ್ಣನಿಗೆ ಬಡತನ ಎಷ್ಟೆಂದರೆ ಸಿದ್ಧಣ್ಣ ಬರುತ್ತಾನೆಂದರೆ ಅವರು ಬೆಳಗಿನ ತಿಂಡಿ ತಿಂದಿಲ್ಲ, ಮನೆಯಲ್ಲಿ ಏನಿಲ್ಲ

ಅಂತಲೇ ಅರ್ಥ, ಅಂದು ಅಪ್ಪಾಜಿ ಅವರನ್ನು ನಮ್ಮ ಮನೆಯಲ್ಲಿ ಬೆಳಗಿನ ತಿಂಡಿ ಮಾಡಿಸಿ ಊಟ, ಸಂಜೆ ಟೀ, ಕಾಫಿ, ಮಾಡಿಸಿ ಬಡಿಗಣ್ಣವರ ಚಂಬಣ್ಣ ಚಳ್ಳಮರದ ರಾಚಣ್ಣ, ಹುಣಸಿಮರದ ಶಂಕ್ರಪ್ಪ, ದೊಡ್ಡವ್ಯಾಪಾರಸ್ಥರನ್ನು ಕರೆಸಿ ಸಂಜೆ ತರುಣಸಂಘದಲ್ಲಿ ಸಂಗೀತ ಕಾರ್ಯಕ್ರಮವಿಡಿಸಿ ಜಂಬಲದಿನ್ನಿ ಸಿದ್ಧಣ್ಣನವರಿಗೆ ಐವತ್ತೋ, ಅರವತ್ತೋ, ನೂರೋ ಎಷ್ಟು ಅಲ್ಲಿ ಸಂಗ್ರಹವಾಗುತ್ತೋ ನೀಡಿ ಆ ಕಲಾವಿದರನ್ನು ಬೆಳೆಸಿದ ಕೀರ್ತಿ ಸಿದ್ಧಲಿಂಗಶಾಸ್ತ್ರಿಗಳಿಗೆ ಸಲ್ಲುತ್ತೆ. ಮುಂದೆ ಅವರೇ ಗುಲ್ಬರ್ಗ ವಿಶ್ವವಿದ್ಯಾನಿಲಯದ ಸಂಗೀತ ಪ್ರೊಫೇಸರ್ ಆದರು. ಅಪ್ಪಾಜಿಗೆ ಗದಗ ವೀರೇಶ್ವರ ಹಿರೇಮಠರ ಬಗೆಗೆ ತುಂಬಾ ಹೆಮ್ಮೆ. ಕಾರಣ, ಪಂ|| ಮಲ್ಲಿಕಾರ್ಜುನ ಮನ್ಸೂರ್ ಅವರಿಗೆ ವೀರೇಶ್ವರರ ಹಾರ್ಮೋನಿಯಂ ಸಾಥ ಇಲ್ಲಾಂದ್ರ ಹಾಡಲೇ ಬರುತ್ತಿರಲಿಲ್ಲ ಅನ್ನುವಷ್ಟು ಮಟ್ಟಕ್ಕೆ ಅನ್ಯೋನ್ಯತೆ. ಅವರೇ ಮುಂದೆ ಕಲಾಮಂದಿರದ ಎದುರಿಗೆ ವಿರೇಶ್ವರ ಎಲೆಕ್ಟ್ರಾನಿಕ್ಸ್ ಎಂಬ ಸಂಗೀತ ಕ್ಯಾಸೆಟ್ ಮತ್ತು ಸಿ.ಡಿ.ಗಳ ಅಂಗಡಿ ಸ್ಥಾಪಿಸಿದರು.

ಸಿದ್ಧಲಿಂಗಯ್ಯನವರಿಗೆ ಸಂಗೀತದ ಹುಚ್ಚೆಷ್ಟಿತ್ತೆಂದರೆ, ಧಾರವಾಡ ಸಾಂಸ್ಕೃತಿಕ ಕೇಂದ್ರ, ಹುಬ್ಬಳ್ಳಿ ವಾಣಿಜ್ಯ ಕೇಂದ್ರ, ಅಲ್ಲಿ ಕುಮಾರ ಗಂದರ್ವ ಇರಲಿ, ಬಸವರಾಜಗುರು ಇರಲಿ, ಮಲ್ಲಿಕಾರ್ಜುನ ಮನ್ಸೂರ್ ಇರಲಿ, ಗಂಗೂಬಾಯಿ ಹಾನಗಲ್ ಇರಲಿ ಅವರ ಸಂಗೀತ ಕಾರ್ಯಕ್ರಮಕ್ಕೆಂದಲ್ಲಿ ಪಾಲ್ಗೊಳ್ಳಲು ಹೋಗುತ್ತಿದ್ದರು. ಸೀದಾ ಧಾರವಾಡಕ್ಕೆ ಹೋಗಿ ಎಂದು ಬೆಳಿಗ್ಗೆದ್ದು ಗದುಗಿಗೆ ವಾಪಸ್ಸು ಆಗುತ್ತಿದ್ದರು ಅದರಲ್ಲಿ ಕುಮಾರಗಂಧರ್ವರ ಕಾರ್ಯಕ್ರಮ ಎಂದು ತಪ್ಪಿಸುತ್ತಿದ್ದಿಲ್ಲ, ಸ್ವತಃ ಉತ್ತಮ ಕಂಠ ಪಡೆದ ಸಿದ್ಧಲಿಂಗಯ್ಯನವರು ಪೂಜೆಗೆ ಕುಳಿತಾಗ ಅವರ ತಂದೆ ಸಂಗೀತ ಸಂಯೋಜನೆ ಮಾಡಿದ್ದ 'ಕಾಡಲೇಕೆ ನರರುಗಳನ್ನು' 'ಎನ್ನಕಾಯವ ದಂಡಿಗೆ ಮಾಡಯ್ಯ' 'ತೋಂಟದಾರ್ಯನೇ ನಿನ್ನ ನಂಬಿ ಬಂದೆ' 'ಶ್ರೀ ಗುರು ಉಪದೇಶವನಾಲಿಸಿದಾಹಳೆ' 'ಮಗನ ತೂಗಿರೋ ಭಕ್ತರು ಮಗನತೂಗಿರೋ' ಎಂಬಂತಹ ಹಾಡುಗಳನ್ನು ಹಬ್ಬ ಹರಿದಿನಗಳಲ್ಲಿ, ಶ್ರೀ ತೋಂಟದಾರ್ಯಮಠದಿಂದ ಪೂಜ್ಯರು ಅಥವಾ ಜಂಗಮರನ್ನು ಕರಿಸಿ ಪೂಜೆ, ಮಾಡಿದ ಪ್ರಸಾದ ಸೇವಿಸಿದ ನಂತರವೇ ಮನೆಯಲ್ಲಿ ಎಲ್ಲರಿಗೂ ಊಟ. ಅವರು ಬರುವವರೆಗೆ ಎಲ್ಲರಿಗೂ ಗಾಳಿಯೇ ಪ್ರಸಾದ, ಅಷ್ಟು ಕಟ್ಟುನಿಟ್ಟು, ಇವರ ಈ ಪ್ರಸಾದ ನಿಷ್ಠೆ ತಿಳಿದು ಮುಂಡರಗಿಯ ಅಂದಿನ ಅಂದಾನ ಶ್ರೀಗಳು, ರಾಚೋಟಿಯ ಮರಿದೇವರು, ಶಿವಮೂರ್ತಿಶಾಸ್ತ್ರಿಗಳು, ರೇವಣಸಿದ್ಧಯ್ಯ ದೇವರು, ಗುಬ್ಬಿ ಮಠಾಧೀಶ್ವರರು, ಮಠದ ಮರಿಯಾಗಿದ್ದ ಶ್ರೀ ಶಿವಕುಮಾರಸ್ವಾಮಿಗಳು ಇವರೇ ಶ್ರೀ ಮಠದ ಜಗದ್ಗುರುಗಳಾದವರು, ಯಶವಂತಪುರದ ಮೌನಸ್ವಾಮಿಗಳು, ತೋಟಯ್ಯನವರು, ಹೀಗೆ ಯಾರಾದರೊಬ್ಬರು ತಕ್ಷಣ ಬಂದು ಬಿಡುತ್ತಿದ್ದರು. ಕಾರಣ ಸಿದ್ಧಲಿಂಗಯ್ಯನವರ ಪ್ರಸಾದ ನಿಷ್ಠೆ, ಅಂದಿನ ಜಗದ್ಗುರುಗಳಾದ ಗುರುಬಸವ

ಪೂಜ್ಯರಿಗೆ ತಿಳಿದಿತ್ತು, ''ಮಕ್ಕಳೊಂದಿಗ ತೀವ್ರ ಹೋಗಿ, ಇಲ್ಲವಾದಲ್ಲಿ ಸಂಜೆವರೆಗೂ ಮಕ್ಕಳನ್ನು ಹೆಂಡತಿಯನ್ನು ಉಪವಾಸ ಕೆಡವಿಬಿಡ್ತಾನೆಂದು'' ಅವರೆಲ್ಲರಿಗೂ ಜಗದ್ಗುರುಗಳ ಅಪ್ಪಣೆಯಾಗಿತ್ತಂತೆ.

## ಗದುಗಿನ ಮಠ ಮತ್ತು ಸಿದ್ಧಲಿಂಗಯ್ಯ ಶಾಸ್ತ್ರಿಗಳು

ಗುರುಬಸವಸ್ವಾಮಿಗಳು ಅಂತ್ಯವಾದ ಬಳಿಕ ಶ್ರೀಮಠಕ್ಕೆ ಹೊಸ ಜಗದ್ಗುರುಗಳನ್ನು ಆಯ್ಕೆ ಮಾಡುವ ಸಲುವಾಗಿ ಎಳಮೆಲಿ ಶಾಂತಪ್ಪ, ಮಾನ್ವಿ ಸಿದ್ರಾಮಪ್ಪ, ಅಂಗಡಿ ಶೆಟ್ಟರು ಮನೆತನದವರೆಲ್ಲ ಸೇರಿ ಶ್ರೀಮಠದಲ್ಲಿ ಸಭೆ ನಡೆಸತೊಡಗಿದರು. ನಂತರ ಧಾರವಾಡ ಮೃತ್ಯುಂಜಯಪ್ಪಗಳ ಸಲಹೆಸೂಚನೆ ಪಡೆಯ ತೊಡಗಿದರು. ಕಾಶಿಯಲ್ಲಿ ಓದಿದ ಶಿವಕುಮಾರ ಶ್ರೀಗಳನ್ನೇ ನೇಮಿಸಬಹುದೆಂದು ಸಿದ್ಧಲಿಂಗಯ್ಯನವರ ಸಲಹೆಗೆ ಸಮಿತಿ ಒಪ್ಪಿತು. ಹಾಗೇ ಪಟ್ಟಾಭಿಷೇಕವೂ ಆಯ್ತು. ಆದರೆ ಯಾಕೋ ೧೮ರ ಪಟ್ಟ 'ಲಟ್ಟಪಟ್ಟ' ಅಂತಾ ಹಿಂದಿನ ಜಗದ್ಗುರುಗಳ ವಾಣಿಯಂತೆ ಸತ್ಯವಾಯ್ತು. 'ಬೋಳ್ಯಾ' ಅನ್ನುವ ಹೆಸರು ಸಂಪನ್ನತೆ, ಆದರೆ ಮಠಕ್ಕೆ ನೇಮಿಸಿದ ಈ ರೆವಿನ್ಯೂ ಅಧಿಕಾರಿ ಹೆಸರು ಬೋಳ್ಯಾ ಆದರೆ ನಂತರ ದಿನಮಾನಗಳಲ್ಲಿ ಸಂಸ್ಥಾನ ಮಠವನ್ನೇ ಬೋಳಿಸಿಬಿಟ್ಟ. ಅಮರಗೌಡರೆಂಬ ವ್ಯವಸ್ಥಾಪಕ ಮಠದ ಆಸ್ತಿ ನುಂಗಿ ನೀರು ಕುಡಿದ. ಕಾಶಪ್ಪನೆಂಬ ಭಕ್ತ ಮಠಕ್ಕೆ ನಾಶಪ್ಪನಾಗಿ ಆಸ್ತಿ ಮಾರಿಕೊಂಡ. ಮಠಕ್ಕೆ ಕಂದಾಯ ಕಟ್ಟಲು ಗತಿಯಿಲ್ಲದ ಪರಿಸ್ಥಿತಿ ೧೦–೧೫ ವರ್ಷಗಳ ಕಾಲ ನಡೆದೆಯಿತ್ತು.

ಇದು ಸಿದ್ಧಲಿಂಗಯ್ಯ ಹೊಸಮಠ ಅವರಿಗೆ ತಡೆದುಕೊಳ್ಳಲಾಗಲಿಲ್ಲ. ಕಾಶಿಯಲ್ಲಿ ಓದಿದವರೆಂದು ಪಟ್ಟಾಧಿಕಾರಕ್ಕೆ ಸೂಚಿಸಿದ್ದೆ ನನ್ನ ತಪ್ಪಾಯ್ತು. ಅಮರಗೌಡನನ್ನು ಕರೆದು ಮಠದ ಜೀಪು ಮಠಕ್ಕೆ ಕೊಡು ಅಂದ್ರು, ಒಪ್ಪದ ಗೌಡ, ಜೀಪಿನ ಕಾಗದ ಪತ್ರ ತನ್ನ ಹೆಸರಲೇ ಮಾಡ್ಸಿ ಮಠಕ್ಕೆ ಮೋಸ ಮಾಡಿದ್ದ. ಸಿದ್ಧಲಿಂಗಯ್ಯನ ಕೋಪ ಮಡಿವಾಳ ಮಾಚಯ್ಯನಾಗಿ ಮಠದಲ್ಲಿ 'ಏ ಅಮರ್ಯಾ' ಜಗದ್ಗುರುಗಳು ಪಾದವಿಟ್ಟ ವಾಹನ ಅದು. ಸ್ವಾಮಿಗಳ ಮುಖ್ಯ ಪೀಠ ಅದು ಸಾಕ್ಷಾತ್ ಸಿದ್ಧಲಿಂಗನ ಪೀಠ. ಅರ್ಧನಾರೀಶ್ವರನ ಪೀಠ. ಅವನ್ನು ಹಿಡಿದ ನಿನ್ನ ಕೈ ಕಾಲು ಹೋಗಲಿ ಅಂತಾ ಮಠದ ಬೂದಿ ಹಿಡಿದು ಚೆಲ್ಲಿದರು : ಅದೇನು, ಸಿದ್ಧಲಿಂಗನೇ ಇವರಲ್ಲಿ ಕುಳಿತು ನುಡಿಸಿದನೇನೋ ಮುಂದೆ ಕೆಲ ವರ್ಷಗಳಲ್ಲಿ ಅಮರಗೌಡನಿಗೆ ಕುಷ್ಠರೋಗ ಹತ್ತಿ ಕೈಕಾಲು ಬೆರಳುಗಳೇ ಉದರಿ ಹೋದವು. ಮಠದ ಜೀಪು ಅವನೇ ತರಿಸಿ ಮಠಕ್ಕೆ ಕೊಟ್ಟ. ಹೀಗೆ ಬೋಳ್ಯ ಬೋಳಿಸುತ್ತಲೇ ಇದ್ದ. ಬರುಬರುತ್ತ ಮಠಕ್ಕೆ ಬರುವ ಭಕ್ತರ ಸಂಖ್ಯೆ ಕಡಿಮೆ ಆಗತೊಡಗಿತು. ಮಠದ ಹೆಸರು ಕೆಟ್ಟಿತು. ಕಾಶಪ್ಪನ ಚಾಡಿ ಶಿವಕುಮಾರ ಸ್ವಾಮಿ ಜಗದ್ಗುರುಗಳಿಗೆ ಹಿಡಿಸಿತು. 'ಆ ಸಿದ್ಲಿಂಗಯ್ಯಗ ಮಠಕ್ಕೆ ಬರಬ್ಯಾಡ ಅಂತ ಹೇಳ್ರಿ'. ಜಗದ್ಗುರುಗಳ ಅಪ್ಪಣೆ.

ಅದನ್ನು ಮೀರುವ ಶಕ್ತಿ ಸಿದ್ಧಲಿಂಗಯ್ಯನವರಲ್ಲಿತ್ತು. ಕಾರಣ, ಮಠದ ಮೊಮ್ಮಗನೇ ಅವರು. ಸಿದ್ಧಲಿಂಗನ ಮೀಸಲುಭಕ್ತ, ಆದರೆ ಗುರುವಿನ ಆಜ್ಞೆನಾನೇ ಪಾಲಿಸದಿದ್ದರೆ ಮಠಕ್ಕೆ ಇನ್ನೇನು ಬೆಲೆಯೆಂದು ಮಠದ ದ್ವಾರಕ್ಕೆ ನಮಸ್ಕರಿಸಿ ಹೋಗುತ್ತಿದ್ದರೇ ಹೊರತು ಮಠದ ಒಳಗೆ ಕಾಲಿಡುತ್ತಿರಲಿಲ್ಲ. ಕ್ರಮೇಣ ಶಿವಕುಮಾರ ಜಗದ್ಗುರುಗಳ ಆರೋಗ್ಯ ಕೆಟ್ಟಿತು ಈ ಮಠದ ಈ ಹೀನಾಯ ಸ್ಥಿತಿ ಕಂಡು ಗದುಗಿನ ಭಕ್ತರು ಮತ್ತೆ ಸರಿಯಾದವರನ್ನು ಹುಡುಕಲಾರಂಭಿಸಿದರು. ಮುಂದೆ ಮಠದ ಕಮೀಟಿ ಹಾಗೂ ಸಿದ್ಧಲಿಂಗಯ್ಯನವರ ಸಲಹೆಯಂತೆ ಭಕ್ತರೆಲ್ಲಾ ಕೂಡಿ ಮುಂದಿನ ಜಗದ್ಗುರುಗಳನ್ನು ಆಯ್ಕೆ ಮಾಡಲು ಹುಬ್ಬಳ್ಳಿಯ ಮೂರು ಸಾವಿರಮಠಕ್ಕೆ ಹೋಗಿ ಆ ಮಠದಲ್ಲಿ ಯೋಗನಿಷ್ಠರು, ಕನ್ನಡ ಭಾಷಾ ಪ್ರತಿಭಾವಂತರು, ಎಂ.ಎ. ಪದವಿ ಪಡೆದ ಪಥವೀದರರು ಆದ ಶ್ರೀ ಸಿದ್ಧರಾಮ ಪೂಜ್ಯರನ್ನು ಆಯ್ಕೆ ಮಾಡಿದರು.

ಗದುಗಿನ ಮಠದ ಪೂರ್ತಿ ಇತಿಹಾಸ ಬಲ್ಲ ಒಬ್ಬೆ ಒಬ್ಬ ವ್ಯಕ್ತಿ ಸಿದ್ಧಲಿಂಗಯ್ಯನವರು. ಗದುಗಿನ ಗುರುಗಳ ಸಂದೇಶವನ್ನೆಲ್ಲ ಶಾಸ್ತ್ರೀಗಳೇ ಬರೆಯುತ್ತಿದ್ದರು. ಅಲ್ಲದೇ ಮಠದ ಇತಿಹಾಸವನ್ನೂ ಬರೆಯುವದರ ಮುಖಾಂತರ ದಾಖಲು ಮಾಡಿದ್ದಾರೆ. ಬಿ. ಶಿವಮೂರ್ತಿ ಶಾಸ್ತ್ರೀಗಳಂತವರಿಗೂ ಮಠದ ಇತಿಹಾಸವನ್ನು ಪರಿಚಯ ಮಾಡಿಕೊಟ್ಟಿದ್ದಾರೆ.

ಗದುಗಿನ ಜಗದ್ಗುರುಗಳವರ ಅಪ್ಪಣೆಯ ಮೇರೆಗೆ ಎಡೆಯೂರಿನ ಸಿದ್ಧಲಿಂಗೇಶ್ವರ ಸ್ವಾಮಿಯ ಗೋಪುರ ನಿರ್ಮಾಣ ಸಮಯದಲ್ಲಿ ಸಿದ್ಧಲಿಂಗಯ್ಯ ಶಾಸ್ತ್ರೀಗಳ ಮಾರ್ಗದರ್ಶನದಂತೆ ಗೋಪುರ ನಿರ್ಮಾಣವಾಯಿತು. ಗೋಪುರ ಮುಗಿಯವವರೆಗೂ ಶಾಸ್ತ್ರೀಗಳು ಅಲ್ಲಿಯೇ ಇದ್ದು ಸಲಹೆ ಸೂಚನೆ ಕೊಡುತ್ತಿದ್ದರು. ಇಂದು ಆ ಗೋಪುರದಲ್ಲಿ ಸಿದ್ಧಲಿಂಗೇಶ್ವರರ ನೇರ ಪರಂಪರೆಯ ಎಲ್ಲ ಜಗದ್ಗುರುಗಳ ಮೂರ್ತಿ ನಿರ್ಮಾಣವಾಗಿರುವದು ಶಾಸ್ತ್ರೀಗಳ ಸಲಹೆಯ ಮುಖಾಂತರವೇ.

ಅದ್ಯಾಕೋ ಸಿದ್ಧಲಿಂಗಶಾಸ್ತ್ರಿಗಳ ಮೇಲೆ ದೈವವೇ ಕಾಡಲು ಪ್ರಾರಂಭಿಸಿತು. ರಾಜವೈಭೋಗದಿಂದ ಸಿದ್ಧಲಿಂಗಯ್ಯನವರಿಗೆ ಬಡತನ ಎಂಬುದೇ ಗೊತ್ತಿಲ್ಲದ ಕಾಲ, ನವಯುಗ ಪತ್ರಿಕೆ ನಿಂತಿತು. ಬರಬೇಕಾದ ಬಾಕಿ ಬರಲೇ ಇಲ್ಲ, ಮಳೆಯಿಲ್ಲದೆ ಬೆಳೆಯಿಲ್ಲ, ಊರಲ್ಲಿ ೨೦ ಎಕರೆ ಜಮೀನಿದ್ದರೂ ಬರಗಾಲದಿಂದ ಬೆಳೆಯಿಲ್ಲ. ಮನೆ ನಡೆಸುವುದೇ ಕಷ್ಟ, ಮಕ್ಕಳ ವಿದ್ಯಾಭ್ಯಾಸಕ್ಕೂ ಗತಿ ಇಲ್ಲವಾಯ್ತು, ಹರಿಶ್ಚಂದ್ರನ ಬಡತನ ಸುಳ್ಳು ಸಿದ್ಧಲಿಂಗಯ್ಯನವರ ಬಡತನ ನಿಜ ಅಷ್ಟು ಕರುಣಾಜನಕವಾಗಿತ್ತು. ಉಪವಾಸವೆಂಬುದು ಅವರ ಮಕ್ಕಳಿಗೆ, ಅವರಿಗೆ, ನಿತ್ಯ ಶಿವರಾತ್ರಿಯಾಯ್ತು, ಇಂತ ಬಡತನದಲ್ಲೂ ಮಕ್ಕಳ ಓದಿಗೆ ತೊಂದರೆಯಾಗಬಾರದೆಂದು ಹೊಲ ಒತ್ತೆ ಹಾಕಿದರು, ಬಳಗಾನೂರ ಯಲ್ಲರೆಡ್ಡೆಪ್ಪನವರಿಗೆ ರೂ. ೫೦೦೦/– ಸಾಲ ಹರಿಯಲಾಗಲಿಲ್ಲ, ದಿನಂಪ್ರತಿ ಮನೆಗೆ ಬಂದು ಹೋಗುವುದು ತಪ್ಪಲಿಲ್ಲ. ಹೇಗೋ ಸಿದ್ಧಲಿಂಗ ನಡೆಸಿದ, ನಾನಂತೂ ಅಪ್ಪಾಜಿ ಕಷ್ಟ ನೋಡಿ ಸಾಕಷ್ಟು ಸಲ

ಅತ್ತಿದ್ದೇನೆ. ಅಣ್ಣ ಬುದ್ಧಿವಂತ ಹುಬ್ಬಳ್ಳಿ ಮುನಸಿಪಲ್ ಕಾರ್ಪೋರೇಷನ್ನಿನಲ್ಲಿ ನೌಕರಿ ಸೇರಿದ, ನೌಕರಿ ಮಾಡುತ್ತಲೇ ಎಂ.ಎ. ಓದಿ ನರಗುಂದ ಕಾಲೇಜಿನಲ್ಲಿ ಲೆಕ್ಚರ್ ಆದ. ಕೆ.ಎ.ಎಸ್. ಕುಳಿತ, ಅಪ್ಪಾಜಿ ಕರ್ನಾಟಕ ಬಂಧು ಪತ್ರಿಕೆ ಚನ್ನಬಸಯ್ಯ ಹಿರೇಮಠದಲ್ಲಿ ಉಪಸಂಪಾದಕರಾಗಿ ಸೇರಿದರು. ತರುಣ ಸಂಘದ ಸದಸ್ಯರಾದ ಚಂಬಣ್ಣ ಬಡಿಗಣ್ಣವರ, ಕರಬಸಪ್ಪ ಬಡಿಗಣ್ಣವರ, ಗಡಾದವರು ಚಳ್ಳಮರದ ರಾಚಪ್ಪ, ರಾಚಪ್ಪ ಬೇವಿನಮರದ, ಜಂಗಮನಿ ರಾಚಪ್ಪ, ಕೈಹಿಡಿದರು. ಹಿಂದೆ ಅವರಿಗೆ ಆಶ್ರಯ ನೀಡಿದ ಹಸ್ತ ಇಂದು ಆಸರೆಗೆ ನಿಂತವು.

ಇಂತಹ ಕಷ್ಟದಲ್ಲೂ ಅಪ್ಪಾಜಿ ಮಕ್ಕಳ ಬಗೆಗೆ ಕಾಳಜಿ ಬಿಡಲಿಲ್ಲ. ಅಂದಿನ ಶ್ರೇಷ್ಠ ಕಲಾವಿದರಾದ ಮುರಿಗೆಪ್ಪ ಚಟ್ಟಿಯವರಲ್ಲಿ ನನಗೆ, ಅಣ್ಣನಿಗೆ ಚಿತ್ರ ತೆಗೆಯುವ ಅಭ್ಯಾಸ ಕೊಡಿಸಿದರು, ಹೆಳವರಲ್ಲಿ ವಿನಂತಿಸಿ ಅವರಲ್ಲಿ ಟೈಪಿಂಗ್ ಕಲಿಸಿದರು, ವೀರೇಶ್ವರ ಆಶ್ರಮ ಪಂ॥ ಪುಟ್ಟರಾಜಗವಾಯಿಗಳಲ್ಲಿ ವಿನಂತಿಸಿ ಮಾಂತೇಶನಿಗೆ ೪ ವರ್ಷಗಳ ಕಾಲ ಸಂಗೀತ ಅಭ್ಯಾಸ ಮಾಡಿಸಿದರು. ಪಂಡಿತ ಪಂಡರಿನಾಥ ಗಲಿಗಲಿಯವರಲ್ಲಿ ವಿನಂತಿಸಿ ಪತ್ರಿಕೋದ್ಯಮ, ಲೇಖನಕಲೆ, ಸಂಸ್ಕೃತ ಅಭ್ಯಾಸ ಮಾಡಿಸಿದರು. ಇಂದು ಮಾಂತೇಶ ನಾಡಿದಾದ್ಯಂತ ಆಧ್ಯಾತ್ಮಿಕದಲ್ಲೂ ಕಾನೂನಿನಲ್ಲಿ ರಾಜಕಾರಣದಲ್ಲೂ ಶ್ರೇಷ್ಠ ವಾಗ್ಮಿಯಾಗಲೂ ನಮ್ಮ ತಂದೆಯೇ ಕಾರಣ ಎಂದು ಹೇಳುತ್ತಾರೆ. ಮಕ್ಕಳಿಗಾಗಿ ಅಂತಹ ಬಡತನದಲ್ಲೂ ಕಷ್ಟಪಟ್ಟು ಕಾಳಜಿ ವಹಿಸಿದ್ದು. ಬಡತನ ಅವರಿಗೆ ಏಕೋ ಕಾಡಲು ಬಂದ ಗಳಿಗೆಯಾಗಿತ್ತು, ಅವರ ಆಧ್ಯಾತ್ಮಿಕ ನಿಲುವು, ತಾಳ್ಮೆ, ಅವರನ್ನು ಕಾಯ್ದಿತ್ತು ಮತ್ತು ಅವರ ಮಕ್ಕಳನ್ನು ಹರಸಿತ್ತು. ಪಂಡಿತ ಪಂಡರಿನಾಥ ಗಲಿಗಲಿಯವರು ಪಂಡರಿನಾಥರಾಗಿ ನಿಲ್ಲಿಸಿದರು. ಆಗ ಹೊಂಬಳ ಪ್ರೆಸ್ಸಿನಲ್ಲಿ ಪಂಚಾಮೃತ ಪತ್ರಿಕೆ ಪ್ರಿಂಟಾಗುತ್ತಿತ್ತು. ಸಂಪಾದಕ, ಉಪಸಂಪಾದಕನಾದ. ಆಗ ನನ್ನ ವಯಸ್ಸು ೧೭ ಮಾತ್ರ, ಅವರೊಡನೆ ಸಂಸ್ಕೃತ ಪತ್ರಿಕೆ ಮುಗಳಿ ಡಾಕ್ಟರು ಹಾಗೂ ಶಾನಭಾಗ ಹೋಟೆಲ್ ಒಡೆಯರು ನೋಡಿಕೊಳ್ಳುತ್ತಿದ್ದರು ಎಂದು ಹೇಳುತ್ತಾರೆ.

ಒಮ್ಮೆ ಪಂಢರಿನಾಥ ಆಚಾರ್ಯರು ಉಡುಪಿಮಠಕ್ಕೆ ೧೫ ದಿನ ಕಾರ್ಯಕ್ರಮಕ್ಕೆ ಹೋಗಿಬಿಟ್ಟರು. ಅವರಿಗೆ ಆಕ್ಸಿಡೆಂಟ್ ಆಗಿ ಅವರ ಕಾರು ಬೆಟ್ಟದಿಂದ ಕೆಳಗುರುಳಿ ಬದುಕಿದ್ದೇ ದೊಡ್ಡದು, ೪ ಹೆಣ್ಣು ಮಕ್ಕಳು, ೨ ಗಂಡು ಮಕ್ಕಳು ಶ್ರೀದೇವಿ, ಮಾಯಾ, ಮಮತಾ, ಮಂಜರಿ, ವಾಸು, ವಿಷ್ಣು, ಧರ್ಮಪತ್ನಿ ಇಷ್ಟೊಂದು ದೊಡ್ಡ ಕುಟುಂಬ. ಮೇಲೆ ಪಂಚಾಮೃತ ಪತ್ರಿಕೆ ನಿರ್ವಹಣೆ ತಿಂಗಳವರೆಗೆ ನನ್ನ ಮೇಲೆ ಬಿತ್ತು. ಆಚಾರ್ಯರು ಇನ್ನೂ ತಿಂಗಳು ಬರುವುದಿಲ್ಲವೆಂದು ಉಡುಪಿಯಿಂದ ಸುದ್ದಿ ಬಂತು, ನಾನೂ ಚಿಕ್ಕಹುಡುಗ ಬರೀ ೧೬–೧೭ ವರ್ಷ ಅಷ್ಟೇ. ಆಗ ಪುರಂದರದಾಸರ ಜಯಂತಿಬಂತು ಪತ್ರಿಕೆಯ ಸಂಪಾದಕೀಯ ಲೇಖನ ಅವರೇ ಬರೆಯಬೇಕಿತ್ತು. ಬೇರೆ, ಬೇರೆ ವಿಷಯ ಕುರಿತು ಲೇಖನ ಅಚ್ಚಾಗಿತ್ತು, ಆಚಾರ್ಯರೇ ಬಂದು

ಬರೆಯುತ್ತಾರೆಂದು ಸಂಪಾದಕೀಯ ಲೇಖನಕ್ಕಾಗಿ ಕಾಯುತ್ತಿದ್ದೆ, ಆಚಾರ್ಯರು ಬರಲಿಲ್ಲ ಆಗಲೇ ದಿ. ೨೫. ಪತ್ರಿಕೆ ೧ ಕ್ಕೆ ಪ್ರಕಟವಾಗಬೇಕು. ಚಿಂತೆಯಲ್ಲಿ ಮನೆಗೆ ಬಂದೆ ನಿದ್ರೆ ಬರುತ್ತಿಲ್ಲ. ಅಪ್ಪಾಜಿ ಕೇಳಿದ್ರು, ನಿದ್ರೆ ಬರುತ್ತಿಲ್ಲಾ ಅಂದೆ. ಏಕೆ ಅಂದ್ರು. ವಿಷಯ ಹೇಳ್ದೆ. ನೀನೇ ಬರಿ ಅಂದ್ರು. ಅಪ್ಪಾಜಿ ನಾನು ವೀರಶೈವ ಆದರೂ, ಬ್ರಾಹ್ಮಣರು, ಪುರಂದರದಾಸರ ಬಗೆಗೆ ಬ್ರಾಹ್ಮಣ ಶೈಲಿಯಲ್ಲಿ ಬರೆಯದಿದ್ದರೆ ಉಡುಪಿಯಲ್ಲಿ ಅವರು ತೊಂದರೆ ಅನುಭವಿಸಬಹುದೆಂದು ನನ್ನ ಅಳಕು ಅಪ್ಪಾಜಿ ಮುಂದಿಟ್ಟೆ. ಅಪ್ಪಾಜಿಗೆ ಆಶ್ಚರ್ಯ ? ಏನು ೧೬–೧೭ ವರ್ಷದ ಹುಡುಗ ಎಷ್ಟು ಮುಂದಾಲೋಚನೆ, ಜವಾಬ್ದಾರಿ, ಅಂತಾ ಒಳಒಳಗೆ ಖುಷಿ, ಮಗ ಇಂತಹ ಚಿಂತನಕಾರನಾದ, ಪತ್ರಿಕೆಯ ಹೊಣೆ ಅರಿತ, ಸಂದರ್ಭ ಅರಿವು ಕಾಣಿಸಿದ್ದು ಅಪ್ಪಾಜಿಗೆ ಆಶ್ಚರ್ಯ, ರಾತ್ರಿ ೪ ಘಂಟೆ ಅಥವಾ ೪ ವರೆ ಆಗಿತ್ತು. ಮಹಾಂತೇಶ ಏಳು, ಮುಖತೊಳೆ ಎಂದರು. ಎದ್ದೆ, ಮುಖತೊಳೆದು ದೇವರ ಮನೆಗೆ ಹೋಗಿ ವಿಭೂತಿ ಧರಿಸಿ ಬಂದು ಕುಳಿತೆ. ಲೈಟು ಹಾಕಿ ನನ್ನೆದುರಿಗೆ ಕುಳಿತರು.

'ಈ ಧರ್ಮ, ಜಾತಿ, ನಾವು ಮಾಡಿಕೊಂಡಿವಪ್ಪಾ, ನಿಜವಾಗಿ ಅವು ಇಲ್ಲವೇ ಇಲ್ಲಾ. ಭಕ್ತಿಯೇ ಆತ್ಮನ ಒಲಿಸುವ ಪರಿ ಈ ದೇಹ ನಶ್ವರ, ಬಿದ್ದು ಹೋಗುತ್ತೇ, ಆತ್ಮನೊಬ್ಬನೇ ನಿರಂತರ. ಆ ಆತ್ಮಶೋಧನೆ ನಡೆಸಿ ಆತ್ಮನಲ್ಲಿ ಒಂದಾದಲ್ಲಿ ಅದೇ ಆನಂದ, ಚಿನ್ಮಯಾನಂದ, ಚೈತನ್ಯ ಪೂರ್ಣಾನಂದ, ಅದೇ ಐಕ್ಯ, ಅದೇ ಮೋಕ್ಷ. ನಾವೆಲ್ಲಾ ತಿಳಿಯಬೇಕಾದ್ದು ಆತ್ಮನನ್ನು ಅದನ್ನೇ ಅಲ್ಲಮಪ್ರಭು, ಬಸವಣ್ಣ, ಅಕ್ಕಮಹಾದೇವಿ ಹೇಳಿದ್ದು. ವೀರಶೈವರು ಹೇಳಿದ್ರಂತ ಜಾತಿ, ಕಟ್ಕೊಂಡ್ರು, ಮೀರಾ ಭಾಗವತರಿಗೆ ಕೃಷ್ಣ ಹೇಳಿದಂತ ಬ್ರಾಹ್ಮಣ ಕಟ್ಕೊಂಡ್ರು, ಶ್ರೀರಾಮ ರಾಮಯಾಣದಾಗ ಹೇಳಿದಾಂತ ಮಧ್ವರು ವೈಷ್ಣವರು ಜಾತಿ ಕಟ್ಟಿಕೊಂಡ್ರು.

ಮಾಂತೇಶ ನಾ ಹೇಳಿದ್ದು ತಿಳಿತೇನು. ಅವರು ಕಲ್ಲು ಕಟ್ಲಿ, ಗುಡಿನಾರಕಟ್ಲಿ, ಆತ್ಮಸುಳ್ಳೇನೂ ? ಅವನೆಲ್ಲೆಲ್ಲೂ ಇದ್ದಾನ, ಸರ್ವರಲ್ಲಿ ಅಣುರೇಣು ತೃಣಕಾಷ್ಠಗಳಲ್ಲಿ ಇದ್ದಾನೆ. ಅದಕ್ಕೆ 'ಸಕಲಜೀವಿಗಳಿಗೂ ಲೇಸನೇ ಬಯಸುವ' ಅಂತಾ ಬಸವಣ್ಣನವರು ಹೇಳಿದ್ದಾರೆ. ಬೇರೆಯವರಂತೆ 'ಮಾನವಕುಲಕ್ಕೆ ಜಯವಾಗಲಿ ಅನ್ನಲಿಲ್ಲ ಎಲ್ಲಾ ಜೀವಿ ಬದುಕಬೇಕು. ಯಾಕಂದ್ರ ಅಣುರೇಣುತೃಣಕಾಷ್ಠದಾಗ ಅವ ಅದಾನ, ಅವನೇ ಆತ್ಮ ಅವನ ಕಾಣಾಕ ಸತ್ಯ ನಿಷ್ಠೆ, ವೈರಾಗ್ಯ, ನೀತಿ, ನಿಯಮದಿಂದ ಇರಬೇಕು. ಇದನ್ನ ಉಪನಿಷತ್ ಹೇಳುತ್ತದೆ. ಇದನ್ನೇ ಬಸವಣ್ಣನ ಅಷ್ಟಾವರಣ ಪಂಚಾಚಾರ, ಷಟಸ್ಥಲ ಹೇಳ್ತಾವಪ್ಪ.

ದಾಸರು ಅರಸೊತ್ತಿಗೆ ಬಿಟ್ಟು ದಾಸರಾದರು, ದಾಸೋಹ ಅಂತೇವೆಲ್ಲ, ಅಂದ್ರ, ನಾವು ದೇವನಿಗೆ ದಾಸರಾಗಿರಬೇಕು. ಆಗ ಸೋಹಂ ಹೋಗಿ ದಾಸೋಹಂ ಅದ್ರೆ ಆತ್ಮ ಒಲಿತಾನ. ಸಮಾಜದಾಗ ಈ ಎತ್ತರದಾಗ ನಿಂತ ನೋಡಿದ್ರ ಜಾತಿ, ಪಂಥ, ಬ್ರಾಹ್ಮಣ, ಲಿಂಗಾಯಿತ, ವೀರಶೈವ, ಕುರುಬ, ಹರಿಜನ, ಯಾವದೂ ಇಲ್ಲ.

ಸತ್ತಾಗ ಏನೈತಿ. ಆ ಜೀವಾತ್ಮ ಪರಮಾತ್ಮ ಹತ್ತಿರ ಹೋಗುತ್ತೆ ಅದಕ್ಕೆ ಇರುದ್ರಾಗ 'ಇಲ್ಲಿಯೂ ಸಲ್ಲುವವರು ಅಲ್ಲಿಯೂ ಸಲ್ಲುವರು' ಅಂತಾ ಬಸವಣ್ಣ ಹೇಳಿದರು. ಇಲ್ಲಿ ಮೊದಲು ಸಲ್ಲುಹಂಗ ಬಾಳಬೇಕಽಽ ಅಂದ್ರೆ ತನ್‌ಂತಾನೆ ಅಲ್ಲಿ ಸಲ್ಲುತಾವ, ಅಂದ್ರ ಇಲ್ಲಿ ಒಳ್ಳೆಯವರಾಗಿ ದಾನ, ಧರ್ಮ, ಕರುಣೆ, ನೀತಿ, ನಿಯಮ, ನಡೆ, ನುಡಿ, ಚೆನ್ನಾಗಿರಬೇಕು. ನಡೆ ಚೆನ್ನ, ನುಡಿ ಚೆನ್ನ 'ಮಾತೆಂಬುದು ಜ್ಯೋತಿರ್ಲಿಂಗ ಅಂತಾರ' ಅದನ್ನ ದಾಸರೂ ಹೇಳ್ತಾರ, ಸಮಾಜದ ನಟನೆ ಖಂಡಸ್ತಾರ 'ನಗೆಯು ಬರುತ್ತಿದೆ ಅಂತಾ' 'ಎಲ್ಲರೂ ಮಾಡುವುದು ಹೊಟ್ಟೆಗಾಗಿ' 'ಆಚಾರವಿಲ್ಲದ ನಾಲಿಗೆ ನಿನ್ನ ನೀಚ ಬುದ್ಧಿಯ ಬಿಡು ನಾಲಿಗೆ' ಅಂತಾ ಹಿಂಗ ಕನಕದಾಸರು, ಪುರಂದರದಾಸರು, ಕಬೀರ ಎಲ್ಲರೂ ಹೇಳಿದ್ರು, ಈಗ ಹೇಳು ಎಲ್ಲೈತಿ ಜಾತಿ, ದಾಸರೂ ದೇವರ ಸಾನ್ನಿಧ್ಯಕ್ಕೆ ಹೋದ್ರೆ, ಬ್ರಾಹ್ಮಣರು ದೇವರ ಹತ್ರ ಹೋದರೆ ಅಲ್ಲೇನು ಬ್ಯಾರೆ ಬ್ಯಾರೆ ಸಾಲು ಮಾಡಿಲ್ಲ ಎಲ್ಲಾರಿಗೂ ಒಂದೇ ತರಹ ಒಂದೇ ದೀಪ, ಜ್ಞಾನ, ಇಷ್ಟೈತಿ. ನೀ ಧೈರ್ಯದಿಂದ ಬರೀ, ನಿನ್ನ ಆಚಾರ್ಯರು ಬಂದು ಸರಿಯಿಲ್ಲಂತ ಬೈದ್ರೆ ನಾಬಂದ ಹೇಳ್ತೀನಿ' ಅಂತಾ ಧೈರ್ಯ ತುಂಬಿದ್ರು.

ಬೆಳಿಗ್ಗೆ ಕಾಲೇಜಿಗೆ ಹೋಗೊದು ಬಿಟ್ಟೆ ಪಂಚಾಮೃತ ಆಫೀಸ್‌ನಾಗ ಕುಂತು ಎಲ್ಲ ತತ್ವಸಾರ ಆಧಾರವಿಟ್ಟು ಎರಡು ಪೇಜು ಸಂಪಾದಕೀಯ ಬರೆದು ಪುರಂದರದಾಸರ ಬ್ಲಾಕ್ ಪ್ರೆಸ್ಸಿಗೆ ಕೊಟ್ಟು ಬಂದೆ. ಪಂಚಾಮೃತ ಪ್ರಕಟವಾಯ್ತು. ೧ನೇ ತಾರೀಖಿಗೆ ಬಿಡುಗಡೆಯಾಯ್ತು. ಮುಂದೆ ಊರಿಂದ ಎಂಟು ದಿನಕ್ಕೆ ಶ್ರೀ ಪಂ॥ ಪಂಡರಿನಾಥಾಚಾರ್ಯರು ಬಂದ್ರು. ಅವರ ಮನಿ, ಪತ್ರಿಕೆ ಆಫೀಸ್ ಒಂದೇ ಕಡೆ, ಮಾಳಿಕೊಪ್ಪದವರ ಪಕ್ಕದ ಮನೆ, ಜಾಲಿಹಾಳದವರ ಕಂಪೌಂಡದಲ್ಲಿರುವ ಮನಿಗೋಗಿ ಸ್ನಾನ, ಪೂಜಾ ತೀರಿಸಿ ಬಂದ್ರು. ಆಫೀಸಿನಲ್ಲಿ ಕುಳಿತ್ರು. ನನಗೆ ಅವರ ಬಗೆಗೆ ಅತ್ಯಂತ ಗೌರವ, ಅವರ ಎದುರಿಗೆ ಕುಳಿತು ಕೊಳ್ಳುತ್ತಿರಲಿಲ್ಲ. ಪಕ್ಕದ ರೂಮಿಗೆ ಹೋದೆ. ''ಏ ಮಹಾಂತೇಶ ಬಾ ಇಲ್ಲಿ ಅಂದ್ರ'', ಕೈಕಾಲು ನಡುಗುತ್ತಿತ್ತು. ಅಮ್ಮಾರಿಗೆ ಗೊತ್ತಾತು, ಈ ಹುಡುಗನ್ನೆ ಬೈತಾರಂತಾ. ತಕ್ಷಣ ಅಮ್ಮ ಬಂದು ''ಯಾಕ್ರಿ ಊರಿಂದ ಬಂದು ತಾಸಾಗಲಿಲ್ಲ ಆ ಹುಡುಗನ್ನ ಶುರು ಮಾಡ್ದಿರಿ. ತಿಂಗಳತಂಕಾ ಆ ಹುಡ್ಗ ಉಂಡಿಲ್ಲ ತಿಂದಿಲ್ಲ. ಪತ್ರಿಕೆ ಬಿಡುಗಡೆ ನಿಂತ ಮಾಡ್ಯೈತಿ ಕೂಸು. ಇನ್ನೂ ೧೫-೧೬ ವರ್ಷದ ಹುಡ್ಗ ಅಮ್ಮಾರ ಟೇಪು ಕಂಟಿನ್ಯೂ ಆಗಿತ್ತು.''

''ಬಿಡ ಮಾರಾಯ್ತಿ, ಸ್ವಾತಿ ಮಳೆ ಹೊಡೆದಂಗ ಹೊಡೆತಿಯಲ್ಲ, ಅಲ್ಲ ನಾ ಇನ್ನೂ ಪೂರ್ತಿ ಹೇಳಿಲ್ಲ ಅಬ್ಬಬ್ಬಾ, ಅದೇನ ನಿನ್ನ ಮುಗ್ಧ ಮಗನ್ನ ಮುದ್ದು ಮಾಡ್ತಿಯೋ ನಾ ಬೇರೆ ಕಾಣೆ. ಅಲ್ಲಾಽಽ ಈ ಸಲ ಪತ್ರಿಕೇಲಿ ಪುರಂದರದಾಸ ಲೇಖನ ಯಾರು ಬರ್ದಿದ್ದುಂತಾ'' ?

ಅಮ್ಮ ನನ್ನ ಕಡೆ ನೋಡಿದಳು. ನಾನೇ ಅಂತ ಕೈಸೊನ್ನಿ ಮಾಡಿದಾಗ, ನನ್ನ ಕಣ್ಣಲ್ಲಿ ನೀರು ತುಂಬಿತ್ತು ''ಅವನೇ ಬರ್ದಾನಂತೆ. ಏನ ಮಾಡೋದು. ನೀವೂ ಊರಾಗಿಲ್ಲ. ಏನ ಹುಡುಗ ಬರ್ದಾ ಏನಾಯ್ತಿಗ್ತಾ''.

ಪಂಡಿತರು ಮೌನವಾಗಿ ಪತ್ರಿಕೆ ಲೆಕ್ಕ ತರಿಸಿ ನೋಡಿದ್ರು ಎಲ್ಲಾ ಸರಿಯಾಗಿ ಆಗಿತ್ತು. ಬಾಕಿ ಹಣ ಚಂದಾದಾರ್ರು ಎಜೆಂಟರಿಗೆ ಕಳಿಸಲು ಪತ್ರಾ ಹಾಕು ಅಂತಾ ಹೇಳಿ ಹೋದ್ರು. ನಾನು ಕೆಲಸ ಮುಗಿಸಿ ಮನೆಗೆ ಹೋದೆ.

ಸಾಯಂಕಾಲ ಆಚಾರ್ಯರು ಆಫೀಸಿಗೆ ಬರ್ಲಿಯಿಲ್ಲ. ಅಮ್ಮಾ ಮಾತ್ರ ಬಂದ್ರು. ನನ್ನಡೆ ನೋಡಿ ''ಏನು ಛೋಟಾಪಂಡಿತರೇ, ಆಚಾರ್ಯರು ತುಂಬಾ ಹೊಗಳ್ತಿದ್ದಾರೆ. ಬೆಳಿಗ್ಗೆ ಏನೋ ಬೈತಾರಂತಾ ಅಂದೆ. ಮಧ್ಯಾನ್ಹವೆಲ್ಲಾ ನಿಂದೆ ಹೊಗಳಿಕೆ. ಉಡುಪಿ ಪಂಡಿತರು ಪುರಂದರದಾಸರ ಲೇಖನಾ ಆಚಾರ್ಯರೇ ಬರೆದದ್ದು. ಉತ್ತಮ ಲೇಖನ ಅಂತ ಬಾಯ್ತುಂಬ ಹೊಗಳಿದರಂತೆ''.

ನನಗೆ ದುಃಖ ತುಂಬಾ ಬಂದಿತ್ತು. ಅಮ್ಮ ಬಂದು ತಲೆ ಸವರಿ, ಬೆಳಿ, ಬೆಳಿ ನೀನೂ ಆಚಾರ್ಯರಂತೆ ಸರ್ವವಿದ್ಯಾ ಪಂಡಿತ ಆಗು. ನಮಗೂ ಖುಷಿ, ನಿಮ್ಮನೇಲಿ ಖುಷಿ. ಈ ಘಟನೆ ನಡೆದು ೪೦ ವರ್ಷ ಆಯ್ತು. ಆದರೆ ನನಗೆ ಇನ್ನು ನಿನ್ನೆ ನಡೆದಂತಿದೆ, ಅಪ್ಪಾಜಿಯ ಸಲಹೆ ನನ್ನ ಲೇಖನದಲ್ಲಿ ಪ್ರವಹಿಸಿ ಉಡುಪಿ ಪಂಡಿತರೇ ಮೆಚ್ಚುವಂತಾಗಿತ್ತು. ಅವರ ಆಧ್ಯಾತ್ಮಿಕ ಹಿನ್ನೆಲೆಯ ಲೇಖನದ ಕಸವು ಮುಂದೆ ಗದಗ ಕರ್ನಾಟಕ ಬಂಧು ಪತ್ರಿಕೆಯಲ್ಲಿ ಲೇಖನ ಮುಂದುವರಿಸಿದೆ. ಅಲ್ಲಿ ಅಪ್ಪಾಜಿ ಉಪಸಂಪಾದಕರಾಗಿದ್ದರು. ಇದಕ್ಕೆ ಕಾರಣ ನಾನು ಚಿಕ್ಕವನಿದ್ದಾಗ ವೈ. ನಾಗೇಶಶಾಸ್ತ್ರಿಗಳ ಮೊಮ್ಮಗನಾಗಿ ನಾಗಭೂಷಣಶಾಸ್ತ್ರಿಗಳ ಪ್ರೇರಣೆಯ ಪ್ರೀತಿಯ ಕೂಸಾಗಿ ಬೆಳೆದಿದ್ದು. ಜ್ಯೂನಿಯರ್ ಫಂಢರಿನಾಥಾಚಾರ್ ಅಂತಾ ಪ್ರಭುದ್ಧ ವಿದ್ವಾಂಸರಿಂದಲೂ ಪ್ರಶಂಸೆಗೊಂಡಿದ್ದೆ.

## ಶಾಸ್ತ್ರಿತ್ರಯರು

ಬಳ್ಳಾರಿಯ ವೈ. ನಾಗೇಶಶಾಸ್ತ್ರಿ ಗದುಗಿನ ಸಿದ್ಧಲಿಂಗಶಾಸ್ತ್ರಿ ಮತ್ತು ಧಾರವಾಡ ನಾಗಭೂಷಣಶಾಸ್ತ್ರಿಗಳ ಸಂಬಂಧ ಅನ್ಯೋನ್ಯವಾಗಿತ್ತು. ಅದು ತಂದೆ ಮಕ್ಕಳ ಸಂಬಂಧ ಹಾಗೇ ಸಾಮಿಪ್ಯವೂ ಇತ್ತು. ಈ ತ್ರಿಮೂರ್ತಿಗಳಿಗೆ ಬಡತನವು ಅಷ್ಟೆಗಾಢವಾಗಿ ಅಪ್ಪಿಕೊಂಡಿತ್ತು.

ಪಾಂಡಿತ್ಯದಲ್ಲೂ ಅವರು ಅಷ್ಟೇ ಸಾಮ್ಯ, ಆತ್ಮಜ್ಞಾನ, ಸಲೀಲಾಕ್ಯ, ಬ್ರಹ್ಮವಿದ್ಯೆ, ಅವರ ತರ್ಕವಷ್ಟೆ ಅಲ್ಲ, ಸಾಹಿತ್ಯ ಕೃಷಿಯಲ್ಲೂ ಅಷ್ಟೆ ಎತ್ತರದ ಹಿಮಾಲಯ.

ವೈ. ನಾಗೇಶಶಾಸ್ತ್ರಿಗಳಿಗೆ ಕಾವ್ಯವೆಂದರೆ ಪಂಚಪ್ರಾಣ. ಕಾಳಿದಾಸ ಮಹಾಕವಿಯ ''ಕರ್ನಾಟಕದ ರಘುವಂಶ'', ''ಕರ್ನಾಟಕ ಕುಮಾರಸಂಭವಂ'' ಎಂಬ ಕೃತಿಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿದವರು. ವೈ. ನಾಗೇಶಶಾಸ್ತ್ರಿಗಳು ಕಾಳಿದಾಸನ ಕೃತಿಗಳನ್ನು ಕನ್ನಡಕ್ಕಿಳಿಸುವಾಗ ಕನ್ನಡ ಪ್ರತಿಭೆ, ಸೊಬಗನ್ನು ಬೀರಿದ್ದರು.

ಈ ಪ್ರೇರಣೆಯೇ ಶ್ರೀ ಸಿದ್ಧಲಿಂಗಶಾಸ್ತ್ರಿಗಳ ಮೇಲಾಯ್ತು, ಸಿದ್ಧಲಿಂಗಶಾಸ್ತ್ರಿಗಳ ಧರ್ಮಪತ್ನಿ ಸುಮಿತ್ರಮ್ಮ ಮಗ ಚಿ॥ ಮಹಾಂತೇಶನನ್ನು ವೈ. ನಾಗೇಶಶಾಸ್ತ್ರಿಗಳು ಆಗಾಗ್ಗೆ ಬಳ್ಳಾರಿಗೆ ಕರೆಸಿಕೊಂಡು ೧೦–೧೨ ದಿನ ಇರಿಸಿಕೊಳ್ಳುತ್ತಿದ್ದರು. ಆಗಲೂ ಅವರಿಬ್ಬರಲ್ಲಿ ವೀರಶೈವ ಧರ್ಮವಷ್ಟೇ ಅಲ್ಲ ಸರ್ವಧರ್ಮದ ಚರ್ಚೆ ನಡೆಯುತ್ತಿದ್ದವು. ಶ್ರೀ ಅ.ನ.ಕೃ. ಜೋಳದರಾಶಿ ದೊಡ್ಡನಗೌಡರಿಗೆ ಸ.ಸ. ಮಾಳವಾಡರಂತಹ ವಿದ್ವಾಂಸರನ್ನು ಸಿದ್ಧಲಿಂಗಶಾಸ್ತ್ರಿಗಳಿಗೆ ಪರಿಚಯಿಸಿದವರೇ ವೈ. ನಾಗೇಶಶಾಸ್ತ್ರಿಗಳು.

### ವೈ. ನಾಗೇಶ ಶಾಸ್ತ್ರಿಗಳೊಡನೆ ಶಾಸ್ತ್ರಿಗಳ ಒಡನಾಟ

ಗುರು–ಜಂಗಮಸ್ಥಾನದಲ್ಲಿ ನಿಲ್ಲಬಹುದು. ಆದರೆ ಭಕ್ತ ಅಥವಾ ಶಿಷ್ಯ ಪುತ್ರನಸ್ಥಾನದಲ್ಲಿ ನಿಲ್ಲಬಹುದೆಂಬುದಕ್ಕೆ ಶ್ರೀ ಸಿದ್ಧಲಿಂಗಶಾಸ್ತ್ರಿಗಳ ಹಾಗೂ ಬಳ್ಳಾರಿ ಪಂ॥ ವೈ. ನಾಗೇಶಶಾಸ್ತ್ರಿಗಳ ಬಾಂಧವ್ಯವೇ ಸಾಕ್ಷಿ.

ಮೊದಲೇ ವೈ. ನಾಗೇಶಶಾಸ್ತ್ರಿಗಳಿಗೆ ಮಕ್ಕಳಿರಲಿಲ್ಲ. ಬಡತನಕ್ಕೆ ಇನ್ನೊಂದು ಹೆಸರೇ ವೈ ನಾಗೇಶಶಾಸ್ತ್ರಿಗಳೆಂದರೆ ತಪ್ಪಾಗಲಾರದು. ಅವರನ್ನು ಜೋಳದರಾಶಿ ದೊಡ್ಡನಗೌಡರು (೧೯೫೭ರಲ್ಲಿ)

> 'ಕವಿಕುಲ ರಾಜ ರಾಜ ವರಕಾವ್ಯ ಸುಧಾಂಬುದಿ ಚಂದ್ರ ಚಂದ್ರನಾ
> ಭುವಿನುತ ಕಾಳಿದಾಸ ನವಕಾವ್ಯರಸೋಜ್ವಲು ತುಂಗಂಗೆಯಂ
> ಸುವಿಮಳ ಕಾವ್ಯ ಕನ್ನಡದ ಕ್ಷೇತ್ರಕೆ ತಂದ ಭಗೀರಥ ರಮಣಾ
> ಕವಿವರ ಕಾವ್ಯ ತೀರ್ಥ ನಾಗೇಶ ಕೃಪಾನ್ವಿತ ಭಾಗ್ಯ ಯುಕ್ತನುಂ ॥

ಈ ಹಾಡಿನ ಮೂಲಕ ಸನ್ಮಾನ ಸಮಾರಂಭದಲ್ಲಿ ಹೊಗಳಿದ್ದಾರೆ.

ಇಂತಹ ಮಹಾನ್ ಕವಿ ಅಂತಹ ಬಡತನದಲ್ಲೂ ಆಧ್ಯಾತ್ಮಿಕ ಚಿಂತನೆ ಚರ್ಚಿಸಲು ಸಿದ್ಧಲಿಂಗಯ್ಯನವರು ಬರುತ್ತಿದ್ದರು. ಬಡತನ ಇವರಿಗೆ ಅಪ್ಪಿದಂತೆ. ಇವರು ಆಧ್ಯಾತ್ಮವನ್ನು ಅಪ್ಪಿದ್ದರು. ಕಷ್ಟ ಕಾಲವಿದ್ದಷ್ಟು, ಭಕ್ತಿಯಿಂದ ಸಿದ್ಧಲಿಂಗನ, ಆತ್ಮಶಕ್ತಿಯ ಪಾದ ಹಿಡಿದು ಮೇಲೆದ್ದವರು. ಸಂಸಾರದ ಭಾರದಲ್ಲೂ ಶಿವಸ್ತುತಿಯಿಂದ ಗಾಳಿಯಂತೆ ಮೇಲೆ ಹಾರಿ ಕುಣಿದವರು. ಅಂತಹ ಬಡತನದಲ್ಲೂ ಸುಮಿತ್ರಮ್ಮ ನನ್ನ ಮಗಳಂತೆ ''ಸುಮಕ್ಕ ಬಾರವ್ವ, ಒಳಗೆ ಬಾ ಚಲೋ ಆಯ್ತುವ್ವ. ಹುಡುಗರೂ ಬಂದಾರೇನೂ? ಬೇಸ್ಯಾತ್ ಬಿಡಬೇ ನನಗೂ ಬ್ಯಾಸರಾಗಿತ್ಽಽ ಹುಡುಗರ ಜತಿ ನಾಲ್ಕುದಿನ ಆಡ್ಕೊಂಡಿರುತಿನಿ' ಅಂತಲೇ ಸ್ವಾಗತ ಮಾಡಿದರು. ಶಾಸ್ತ್ರಿಗಳಿಗೂ ಅಷ್ಟೇ 'ಸಿದ್ಧಲಿಂಗಯ್ಯ' ಬಾ ಬಾ ಮುಖತೋಳಿ, ಹುಡ್ಗುರಿಗೆ ತಿನ್ನಾಕ ಏನರ ಮಾಡ್ಽಽ ಮರೆಮ್ಮನಿಗೆ ಆಗಲೇ ಇಷ್ಟೊಂದು ಅಕ್ಕರೆ. ನಾನಿನ್ನು ೩–೪ ವರ್ಷದ ಹುಡುಗ ತುಂಬಾ ಮುದ್ದಾಗಿದ್ದೆ ಅಂತಾ ಎಲ್ಲರೂ ಹೇಳ್ತಾರ, ಮರೆಮ್ಮ ನನ್ನನ್ನು ಮೇಜಿನ ಮೇಲೆ ಕುಳ್ಳಿರಿಸಿಯೇ ಊಟಮಾಡಿಸ್ತಿದ್ದರಂತೆ, ಅಣ್ಣ ತೋಟಪ್ಪ,

ನಾನು, ಅಕ್ಕ ಅವರ ಮನೆ ಕಂಪೌಂಡು ತುಂಬಾ ಹಾರಾಡುತ್ತಿದ್ದೆವಂತೆ, ಬೆಳಿಗ್ಗೆ ಪತ್ರಿ, ಹೂವು, ಹಣ್ಣು, ನಾನು ತಂದು ಪೂಜೆಗೆ ಅವರ ಮನೇಲಿ ತಯಾರು ಮಾಡುವುದು ನೋಡಿ, ಸಿದ್ಲಿಂಗಪ್ಪ ಹುಡುಗರ್ಗೆ ಒಳ್ಳೆ ಸಂಸ್ಕಾರ ಹಾಕಿದಿ ನೋಡು ಅಂತಿದ್ರಂತೆ. ಅಪ್ಪಾಜಿ ತಮ್ಮ ಸಂದೇಹ ಬಿಡಿಸಿಕೊಳ್ಳಲು ಚರ್ಚೆ ಪ್ರಾರಂಭಿಸುತ್ತಿದ್ದರು. ಅದಕ್ಕೆ ವೈ. ನಾಗೇಶಶಾಸ್ತ್ರಿಗಳು.

''ಯೋಗ ಅಂದ್ರೆ ಜೀವಾತ್ಮ, ಪರಮಾತ್ಮನಲ್ಲಿ, ಅಂದ್ರು ಅದು ಹೆಂಗ ಕೂಡತ್ತ, ಅವರು ಕೂಡುತ್ತಂತ ಸೂಚನೆ ಹ್ಯಾಂಗ ಗೊತ್ತಾಗತ್ತ, ಸಿದ್ಧಲಿಂಗಯ್ಯನವರಿಗೆ ಆಗಿನ್ನು ೨೪–೨೫ ವಯಸ್ಸು ಅವರು ನಗುತ್ತಿದ್ದರಂತೆ ಅಪ್ಪಾಜಿ ಹೇಳುತ್ತಿದ್ದರು. 'ಸಿದ್ಲಿಂಗಪ್ಪ, ಅಲ್ಲಮಪ್ರಭು, ಬಸವಣ್ಣ, ಅಕ್ಕಮಹಾದೇವಿ ಮುಂತಾದ ಶರಣರು ಬರೆದ ವಚನಗಳನ್ನು ಅನುಭವಿಸಿದವರು. ಅವರೇನು ದಡ್ಡರೇನು ? ಅದು ಸಿದ್ಧಿಸಬೇಕಾದರೆ ಆ ನಿಟ್ಟಿನಲ್ಲಿ ನಡೀಬೇಕಪ್ಪಾ, ಬಸವಾದಿ ಪ್ರಮಥರು ಯೋಗ ಅನ್ನಲಿಲ್ಲ; ಕಾಯಕವೇ ಕೈಲಾಸ ಅಂದ್ರು. ಅದನ್ನೇ 'ಯೋಗ' ಕರ್ಮಸು ಕೌಶಲಂ' ಅಂತ ಗೀತೆ ಹೇಳುತ್ತದೆ. ಸಂಸಾರದವರಾಗಿದ್ದು ಶಿವ ಚಿಂತನೆ ಮಾಡು ಸಂಸಾರಯೋಗಿ, ಶಿಲ್ಪಕಲೆಯಲ್ಲಿ ತಲ್ಲೀನ ಆದ್ರೆ ಶಿಲ್ಪಯೋಗಿ, ನಾಟ್ಯದಲ್ಲಿ ತಲ್ಲೀನಾದ್ರೆ ನಾಟ್ಯಯೋಗಿ, ಇಷ್ಟು ತಲ್ಲೀನತೆ ಬೇಕು. ತಲ್ಲೀನತೆ ಅಂದರೆ ಗೊತ್ತಾಯ್ತಲ್ಲೋ ಅನುಗ್ರಹ ಅಂತಾರಲ್ಲ, ಅನಂಥ ಶಕ್ತಿ, ಎಲ್ಲಿಂದ ಬರ್‍ತೈತಿ ಸಿದ್ಧಲಿಂಗಯ್ಯನವರ ಪ್ರಶ್ನೆಗೆ ಉತ್ತರ.

ಸಿದ್ಲಿಂಗಪ್ಪ ನನಗ ಮೂಗಿನಲ್ಲಿ ರಕ್ತ ಬೀಳುತ್ತಿತ್ತು. ಅವ್ವ ಕೇಳ್ಸಿದ್ಲಂತೆ. ನಾಗರದೋಷ ಅಂದ್ರಂತೆ, ಆದರೆ ಡಾಕ್ಟರರು ನಕ್ಕರಂತ, ಡಾಕ್ಟ್ರಿಗೂ ಆಗ್ಲಿಲ್ಲ ನಿಲ್ಸೋದು. ಮೂಗಿನ ರಕ್ತ ಬಂದಾಗ ಹುತ್ತಕ್ಕೆ ಹಾಲು ಹಾಕಲು ಹೇಳಿದ್ರಂತ. ಹೆರಿಗೆ ಮಾಡಿದ್ರಂತ, ಅವ್ವ ಎಂಟು ಮಕ್ಕಳನ್ನ ಹಡದ್ಲು. ನಾಲ್ಕು ಗಂಡು ನಾಲ್ಕು ಹೆಣ್ಣು, ಏಳನೇಯವನೇ ನಾನು. ಒಬ್ಬ ಅಣ್ಣ, ಒಬ್ಬ ಅಕ್ಕ ಮಾತ್ರ ಉಳಿದ್ರು ಬಾಕಿಯವರು ತೀರಿಕೊಂಡುಬಿಟ್ಟರಂತೆ, ಅದಕ್ಕೆ ನನ್ನಾಡಿಸಲು ನಾಗಮ್ಮ ಅಂತಾ ಇದ್ಲಲ್ಲ ಅವ್ವ, ನನ್ನನ್ನ ಹುತ್ತಕ್ಕೆ ಕರಕೊಂಡು ಹೋಗಿ ಮೂಗಿನಲ್ಲಿ ಬರುವ ರಕ್ತ ಹಾಕತಿದ್ಲಂತೆ. ನಾ ಉಳಿದ್ನೆಂತಾ. ಅದಕ್ಕೇ ನನಗೆ ನಾಗೇಶ ಅಂತಾ ಹೆಸರಿಟ್ರಂತೆ. ಜನ್ಮಾಂತರದ ಸುಕೃತ ಇರತಪ್ಪ ಅದು ಯೋಗಶಕ್ತಿ, ತಪಸ್‌ಶಕ್ತಿ ಉಳ್ಳವರ ಅನುಗ್ರಹದಿಂದ ಸೃಷ್ಟಿಯ ಕ್ರಿಯೇನ ಬದಲಿಸುವ ಶಕ್ತಿ ಆ ತಪಸ್ವಿಗಿರತ್ತೆ. ಅವರ ಕೃಪೆಯೇ ಅನುಗ್ರಹ ಅದಕ್ಕ ನಂದ ಕಥೀನ ನಿಂಗೆ ಹೇಳತೀನಿ ಅಂತ ಶಾಸ್ತ್ರಿಗಳಿಗೆ ಹೇಳ್ತಿದ್ರಂತೆ.

''ಸಂಸಾರ ಸಂತತಿ ಸೌಭಾಗ್ಯ ಅಂತಾರ. ಆದರೆ ನೀವು ಇವರ ಮಕ್ಕಳ ಮೇಲೆ ಇಷ್ಟು ಪ್ರೀತಿ ತೋರ್‍ತೀರಿ, ನಿಮ್ಮ ಮಕ್ಕಳಾದ್ರ ಅದೆಷ್ಟು ತೋರ್‍ತಿದ್ರಿ''. ಮರೆಮ್ಮನವರ ಪ್ರಶ್ನೆಗೆ ''ಹುಚ್ಚಿ, ಇದನ್ನ ಇಕೀಗೆ (ಮರಮ್ಮಗೆ) ಆಗಾಗ ಹೇಳೀನಿ, ನಾ ಬರೆದ ಪುಸ್ತಕಾನ ಮಕ್ಕಳಿದ್ದಾಂಗ ಅನ್ನುತ್ತಿದ್ದರಂತೆ. ನೋಡಪ ಇಕೀ ನಂಗ

ಇನ್ನೊಂದು ಮದುವಿ ಮಾಡ್ಕೊ ಅಂತಾಳ. ಮಕ್ಕಳಿಗೋಸ್ಕರ ಅಲ್ಲ ಸಿದ್ಲಿಂಗಯ್ಯ, ಬೇರೆ ಅವರ ಮಕ್ಕಳು ನಮ್ಮವ ಅನ್ನು ಭಾವ ಬಂತೂ. ಬೇರೆಯವರು ನಮ್ಮ ಮನೆ ಹಂಗ ಅನ್ನು ಭಾವ ಬಂದ್ರ, ಈ ಲೋಕವೇ ನಮ್ಮ ಮನೆ. ಬಸವಣ್ಣನಿಗೆ ಮಕ್ಕಳಿಲ್ಲ ಅಂತ ಹಲುಬಿದರೇನು ?, ಲೋಕಾನ ಮಕ್ಕಳೆಂದ. ಶಾಸ್ತ್ರಿಯಾಗಿ ನಾನ ಅತ್ರ ಹ್ಯಾಂಗ ಆ ವರಿಷ್ಠ ಬ್ರಹ್ಮರ್ಷಿ ಆದ ನಿಜ. ವಿಶ್ವಾಮಿತ್ರ ಅವನ ಮಕ್ಕಳನ್ನ ಕೊಂದಾಗ, ಬ್ರಹ್ಮರ್ಷಿನೇ ಅತ್ತನಂತ. ಅದ್ಹೆಂಗ ಬ್ರಹ್ಮರ್ಷಿ ಆದನಪಾ. ಎಂತಹಾ ಹೃದಯ ವೈಶಾಲ್ಯ ವೈ. ನಾಗೇಶಶಾಸ್ತ್ರಿಗಳದು.

ಒಮ್ಮೊಮ್ಮೆ ಶಾಸ್ತ್ರಿಗಳು ಹೇಳುತ್ತಿದ್ದರು, ಈ ವೈ. ನಾಗೇಶಶಾಸ್ತ್ರಿಗಳನ್ನು ಕಂಡ್ರ ಗ್ರೀಕರ ಅರಿಸ್ಟಾಟಲ್, ಪ್ಲೇಟೋನ ಮತ್ತೆ ಭಾರತದಾಗ ಅದೂ ಒಬ್ಬರ‍್ಯಾಗಿ ಹುಟ್ಟಿಬಂದಾನೇನಂತ ಅನ್ನಿಸತ್ತೈತಿ, ಇದನ್ನು ಕೇಳಿದ ಶಾಸ್ತ್ರಿಗಳು "ಸಿದ್ಲಿಂಗಪಾ ಯಾಕಪಾ ಈ ಪರಿ ಹೋಲಿಸ್ತೀ, ನಾನೇನು ಅಂತಹ ಘನ ಕಾರ್ಯ ಮಾಡೇನಿ ಎಂತಹ ಎತ್ತರಕ್ಕೇರಿದರೂ ಅಷ್ಟೇ."

ಸಿದ್ಧಲಿಂಗಯ್ಯನವರು ೩–೪ ದಿನ ಅವರ ಮನೆಯಲ್ಲಿ ಇದ್ದು ಗದುಗಿಗೆ ಟ್ರೈನಿನಲ್ಲಿ ಬರುತ್ತಿದ್ರು. ಮಕ್ಕಳಿಗೆ ಟ್ರೈನ್ ಅಂದ್ರ ಇಷ್ಟಾಂತ ವೈ. ನಾಗೇಶಶಾಸ್ತ್ರಿಗಳು "ಮಕ್ಕಳಿಗೆ ಗಾಡ್ಯಾಗ ತಿನ್ನಾಕ ಕಟ್ಟಿಯಿಲ್ಲೋ, ಚಕ್ಕಲಿ, ವಗೈರೆ. ಮರೆಮ್ಮ ಅದನ್ನು ಹೇಳಿಸ್ಕೋಂತಿ ಏನು ?" ಈ ಅನ್ಯೋನ್ಯ ಭಾವ ವೈ. ನಾಗೇಶಶಾಸ್ತ್ರಿಗಳ ಸಿದ್ಲಿಂಗಶಾಸ್ತ್ರಿಗಳದಾಗಿತ್ತು.

ಅವರು ಗದುಗಿಗೆ ಬಂದಾಗ ನಮ್ಮ ಮನೆಯಲ್ಲೆ ಉಳಿಯೋದು. ಬಳ್ಳಾರಿಯಲ್ಲಿ ನಮಗೆ ಜೋಕಾಲಿ, ಗಾಲಿ ಆಟ ಆಡಿಸಿದ್ದ ತಾತನ, ಅಜ್ಜಿನ ಕಂಡ್ರ ನನಗೂ ಖುಷಿ. ನಾವಿನ್ನು ಸಣ್ಣವರುರಿದ್ದೀವಿ ಆಧ್ಯಾತ್ಮ ತಲಿಗೆ ಹೋಗ್ತಿದಿಲ್ಲ, ಆದ್ರ ಅಜ್ಜ ಕಥಿ ಹೇಳಿದ್ರಲ್ಲಾ ಒಳ್ಳೀ ಕಣ್ಣಿಟ್ಟುಕೊಂಡು ಅವರನ್ನೇ ನೋಡ್ತಾ ಕೇಳುತ್ತಿದ್ವಿ.

ಅವರಿಗೆ ಮೈಸೂರು ಆಸ್ಥಾನಪದವಿ, ಕಲಾಪ್ರಧಾನ ಸನ್ಮಾನ, ಸರ್ವದರ್ಶನ ತೀರ್ಥ ಸನ್ಮಾನ ಬಂದಿತೆಂದರೆ ಎಂತಹ ಎತ್ತರದ ದಾರ್ಶಿಕರಾಗಿದ್ದರೂ ಅವರ ಮೇಲೆ ಬರೆಯಲು ಇನ್ನೊಂದು ಪುಸ್ತಕವೇ ಬೇಕು, ನನ್ನ ಪ್ರೀತಿ ಅಜ್ಜ–ಅಜ್ಜಿ ವೈ. ನಾಗೇಶಶಾಸ್ತ್ರಿಗಳಿಗೆ ಅಜ್ಜಿ ಮರೆಮ್ಮನಿಗೆ ನನ್ನ ವಾತ್ಸಲ್ಯದ ನೆನಪೇ ಭಕ್ತಿಪೂರ್ವಕ ವಂದನೆ.

ಗದುಗಿನ ಹಡಗಲಿ ಮಠದಲ್ಲಿ ಶ್ರೀ ನಾಗಭೂಷಣಶಾಸ್ತ್ರಿಗಳನ್ನು ಹಾಳಕೆರೆ ಅನ್ನದಾನ ಶ್ರೀಗಳು ಪಂಡಿತರಿಗೆ ಆಶ್ರಯ ನೀಡಿದ್ದರು. ವೈ. ನಾಗೇಶಶಾಸ್ತ್ರಿಗಳು, ಪಂ|| ನಾಗಭೂಷಣಶಾಸ್ತ್ರಿಗಳು ಸಮತೂಕದ ಎರಡು ಸಾಹಿತ್ಯ, ಆಧ್ಯಾತ್ಮ ಲೋಕದ ವಿಂದ್ಯ ಪರ್ವತಗಳಿದ್ದಂತೆ, ಅವರಿರ್ವರ ಶಿಷ್ಯತ್ವ ಸಿದ್ಧಲಿಂಗಯ್ಯಗಳಿಗೆ ಲಭಿಸಿದ್ದರಿಂದಲೇ ಮುಂದೆ ಇವರೂ ಸಿದ್ಧಲಿಂಗಶಾಸ್ತ್ರಿಗಳೆಂದೇ ಪ್ರಸಿದ್ಧರಾದರು.

## ಪಂ|| ನಾಗಭೂಷಣಶಾಸ್ತ್ರಿಗಳೊಡನೆ

ಹಡಗಲಿ ಮಠದಲ್ಲಿ ನಾಗಭೂಷಣಶಾಸ್ತ್ರಿಗಳು ಅವರ ಧರ್ಮ ಪತ್ನಿ ನೀಲಗಂಗಮ್ಮ, ನಮ್ಮ ತಾಯಿ ಹೇಳುವಂತೆ ಸಿದ್ಧಲಿಂಗಶಾಸ್ತ್ರಿಗಳ ತಾಯಿ–ತಂದೆ ಇದ್ದಂತೆ. ಅವರ ಸಂಪೂರ್ಣ ಕೃಪೆ ಸಿದ್ಧಲಿಂಗ ಶಾಸ್ತ್ರಿಗಳು ಸರ್ವಶಾಸ್ತ್ರವನ್ನು ಎಡೆಯೂರ ಸಿದ್ಧಲಿಂಗೇಶ್ವರರು ಬೋಳ ಬಸವರಿಗೆ ಕೃಪೆಗೈದಂತೆ, ನಾಗಭೂಷಣಶಾಸ್ತ್ರಿಗಳು ಸಿದ್ಧಲಿಂಗಯ್ಯನವರಿಗೆ ಧಾರೆ ಎರೆದಿದ್ದರಂತೆ.

ನಾಗಭೂಷಣ ಶಾಸ್ತ್ರಿಗಳು ಸಿದ್ಧಲಿಂಗಶಾಸ್ತ್ರಿಗಳನ್ನು ಆಧ್ಯಾತ್ಮಿಕ ಕ್ಷೇತ್ರದಲ್ಲಿ ಪ್ರತಿಯೊಂದು ಪ್ರವಚನವು ದೇವರ ಸಾನ್ನಿಧ್ಯವೆಂದೇ ತಿಳಿದು ತಲ್ಲೀನರಾಗಿ ಪ್ರವಚನ ಮಾಡುವುದನ್ನು ಹೇಳಿಕೊಡುತ್ತಿದ್ದರು.

## ಪ್ರವಚನಕಾರರಾಗಿ ಶಾಸ್ತ್ರಿಗಳು

ಉತ್ತರ ಕರ್ನಾಟಕ ಕಂಡ ಅದ್ಭುತ ಪ್ರವಚನಕಾರರು ಸಿದ್ಧಲಿಂಗಯ್ಯ ಶಾಸ್ತ್ರಿಗಳು. ಎಲ್ಲ ಧರ್ಮಗಳು, ಶಾಸ್ತ್ರಗ್ರಂಥಗಳ ಅಧ್ಯಯನ ಮಾಡಿದ ಶಾಸ್ತ್ರಿಗಳು ಯಾವುದೇ ವಿಷಯದ ಬಗ್ಗೆ ಅಧಿಕೃತವಾಗಿ ಮತ್ತು ನಿರರ್ಗಳವಾಗಿ ಮಾತನಾಡು ತ್ತಿದ್ದರು. ಯೋಗವಾಶಿಷ್ಠ, ಭಗವದ್ಗೀತೆ, ರಾಮಾಯಣ, ಮಹಾಭಾರತ, ವಚನಸಾಹಿತ್ಯ ಹೀಗೆ ಪ್ರತಿಯೊಂದು ವಿಷಯ ಅವರಿಗೆ ಕಂಠಪಾಠ. ಅವರ ಪ್ರವಚನಕಾಲದಲ್ಲಿ ಕಾಲೇಜು ಉಪನ್ಯಾಸಕರೇ ಟಿಪ್ಪಣಿ ಮಾಡಿಕೊಳ್ಳುತ್ತಿದ್ದರು. ಎಡೆಯೂರು ಸಿದ್ಧಲಿಂಗೇಶ್ವರ ಪುರಾಣವನ್ನು ಕರ್ನಾಟಕದಲ್ಲಿ ಶಾಸ್ತ್ರಿಯವಾಗಿ ಹೇಳುವ ಇಬ್ಬರು ವ್ಯಕ್ತಿಗಳೆಂದರೆ : ಒಬ್ಬರು ಸಿದ್ಧಲಿಂಗಶಾಸ್ತ್ರಿಗಳು. ಇನ್ನೊಬ್ಬರು ಡಾ. ಪುಟ್ಟರಾಜಗವಾಯಿಗಳವರು. ಬೇರೆಯವರು ಹೇಳಿದರೆ ಪುರಾಣಕ್ಕೆ ಅಪಚಾರವಾಗುತ್ತದೆ ಎಂದು ಜನರಲ್ಲಿ ಪ್ರತೀತಿ ಇತ್ತು. ಅತಿಯಾದ ಹಾಸ್ಯವನ್ನು ಹೇಳದೇ ಎಲ್ಲೋ ಒಮ್ಮೆ ಹಾಸ್ಯದ ಪ್ರಸಂಗಗಳನ್ನು ಹೇಳುತ್ತಾ ಜನರಲ್ಲಿ ಆಧ್ಯಾತ್ಮದ ಒಲವನ್ನು ಬಿತ್ತುತ್ತಿದ್ದರು. ಇವರು ಉತ್ತಮ ಪ್ರವಚನಕಾರರಾಗಲು ವೈ. ನಾಗೇಶಶಾಸ್ತ್ರಿಗಳು ಮತ್ತು ನಾಗಭೂಷಣ ಶಾಸ್ತ್ರಿಗಳ ಪ್ರಭಾವವೂ ಪ್ರಮುಖ ಕಾರಣವಾಗಿದೆ.

ಶಾಸ್ತ್ರಿಗಳ ೭೫ ವರ್ಷಗಳ ತಮ್ಮ ಬದುಕಿನಲ್ಲಿ ಮೊದಲಿನ ಇಪ್ಪತ್ತೈದು ವರ್ಷಗಳನ್ನು ಹೊರತು ಪಡಿಸಿದರೆ ಉಳಿದ ಆಯುಷ್ಯವನ್ನೆಲ್ಲ ಪುರಾಣ ಪ್ರವಚನಕ್ಕೆ ತಮ್ಮ ಜೀವನವನ್ನು ಮುಡಿಪಾಗಿಟ್ಟವರು. ಎಂದೂ ಕೂಡಾ ಹಣವನ್ನು ಡಿಮ್ಯಾಂಡ ಮಾಡದೇ ಭಕ್ತರು ಕೊಟ್ಟಷ್ಟರಲ್ಲಿಯೇ. ತೃಪ್ತಿಪಡುತ್ತಿದ್ದರು. ಪುರಾಣದ ಮುಕ್ತಾಯದ ದಿನ ಇವರಿಗೆ ಸಂಭಾವನೆ ಕೊಟ್ಟರೇ ಆ ಕವರನ್ನು ತೆಗೆದು ಕೂಡಾ ನೋಡುತ್ತಿರಲ್ಲಿಲ್ಲ. ಅವರಲ್ಲಿ ಸ್ವಾಮಿಗಳೂ ಇದ್ದಾರೆ. ಭಕ್ತರೂ ಇದ್ದಾರೆ. ಈಗ ಅನ್ನಿಸುತ್ತದೆ ಇವರೇನಾದರೂ ಬ್ರಾಹ್ಮಣರಾಗಿ ಹುಟ್ಟಿದ್ದರೇ ಬನ್ನಂಜೇ ಗೋವಿಂದಾಚಾರ್ಯ,

ಮತ್ತೂರು ಕೃಷ್ಣಮೂರ್ತಿಯವರಂತೆ ಇಡೀ ಕರ್ನಾಟಕಕ್ಕೇ ಪ್ರಸಿದ್ಧರಾಗುತ್ತಿದ್ದರು. ನಾವು ಅವರನ್ನು ಸರಿಯಾಗಿ ಉಪಯೋಗಿಸಿಕೊಳ್ಳಲಿಲ್ಲ.

ಶಾಸ್ತ್ರಿಗಳು ಉತ್ತರ ಕರ್ನಾಟಕದ ಬಹುತೇಕ ಭಾಗಗಳಲ್ಲಿ ಪುರಾಣ ಪ್ರವಚನ ಹೇಳಿದ್ದಾರೆ. ಗದಗ, ಅಣ್ಣಿಗೇರಿ, ಮುಂಡರಗಿ, ಇಟಗಿ, ಕುಷ್ಟಗಿ, ಶಿರೋಳ, ಲಾಯದಗುಂದಿ, ಸೊಲ್ಲಾಪೂರ ಸಂಡೂರು ಮುಂತಾದಡೆ ಅವರು ಪ್ರವಚನ ಹೇಳಿದ್ದಾರೆ. ಒಮ್ಮೆ ಆ ಊರುಗಳಲ್ಲಿ ಪುರಾಣ ಹೇಳಿದರೆ ಮತ್ತೇ ಬೇರೆ ಪುರಾಣಿಕರು ಆ ಊರಿನವರಿಗೆ ಹಿಡಿಸುತ್ತಿರಲಿಲ್ಲ. ಹೀಗಾಗಿ ಒಂದೊಂದು ಊರಿನಲ್ಲಿ ಹದಿನೈದು–ಹದಿನಾರು ವರ್ಷಗಳವರೆಗೆ ಇವರೇ ಹೇಳಿದ ನಿದರ್ಶನ ಪುರಾಣಗಳಿವೆ. ಪುರಾಣದಲ್ಲಿ ಹಾಸ್ಯ ಪ್ರಸಂಗವನ್ನು ಹೇಳಲಾರದೇ ಜನಮೆಚ್ಚುಗೆಯನ್ನು ಗಳಿಸಿದ್ದು ಇವರ ವಿದ್ವತ್ತನ್ನ ತೋರಿಸುತ್ತದೆ.

ಶಾಸ್ತ್ರಿಗಳ ಆಧ್ಯಾತ್ಮಿಕ ನಿಲುವು : ಸಿದ್ಧಲಿಂಗಶಾಸ್ತ್ರಿಗಳು ಪುರಾಣ ಪ್ರಾರಂಭಿಸಿ ದೊಡನೆ ನೀರವತೆ ತುಂಬಿರುತ್ತಿತ್ತು. ಹೊರ ನೋಟಕ್ಕೆ ಶಾಸ್ತ್ರಿಗಳು ವೇದಿಕೆಯಲ್ಲಿ ಶಿವಸ್ವರೂಪಿ ಆಗಿಬಿಡುತ್ತಿದ್ದರು. ಒಬ್ಬ ಶಿವಯೋಗಿಯ ಸರ್ವಲಕ್ಷಣ ಅಲ್ಲಿ ನೆಲೆಗೊಳ್ಳುತ್ತಿತ್ತು. ದೇವತೆಗಳೇ ಶಿವಾನುಭವ ಕೇಳಲು ಬಂದಷ್ಟು ನೀರವತೆ, ಯಾರಾದರೂ ಒಬ್ಬರು ಶಬ್ದ ಮಾಡಿದರೆ ಸಾಕು ಆಗಲೇ ಹೊರಹಾಕಿಸಿಬಿಡುತ್ತಿದ್ದರು. ಕಾರಣ ಶಿವಾನುಭವ ಲಾಲಿಸುವವರೂ ಶಿವಪೂಜೆಯೆಂದೇ ಭಾವಿಸಿದ್ದರು. ಶಾಸ್ತ್ರಿಗಳ ಪ್ರವಚನ ಪ್ರಾರಂಭವಾಗುವದೇ ಶ್ರೀ ಸಿದ್ಧಲಿಂಗೇಶನ ಸ್ತುತಿಯಿಂದ...

> 'ಶ್ರೀ ವಿಮಲ ಮುಕ್ತಿದಾಯಕ, ಪಾವನಮಯ ಪರಮಚರಿತ
> ಷಟಸ್ಥಲನಾಯಕ ಭುವಿನುತ ಸಚ್ಚಿದಾತ್ಮಕ
> ಭವ ಭಯ ಹರ ಸಲಹು ಸಿದ್ಧಲಿಂಗ ಸುದೇಶಿಕ'

ಜಗದ್ಗುರು ಸಿದ್ಧಲಿಂಗಾಯ ನಮಃದಿಂದ ಪ್ರಾರಂಭಿಸಿ ಸಿದ್ಧಲಿಂಗ, ಸಿದ್ಧಲಿಂಗ, ಸಿದ್ಧಲಿಂಗ, ದೃಷ್ಟಾಂತ ನೀಡುತ್ತಾ ಸಾಗಿದ ಶಿವಾನುಭವ

> "ತನ್ನೊಳವಿನಾ ಭೂತದಿಂ ನಿತ್ಯಮದ ಶಕ್ತಿಯಿಂ
> ನಿಖಿಳ ಸೃಷ್ಠಿಯನೇ ಮಾಡಿಯದರೊಳಿರ್ದುಂ ನೋಡಲೀಶ ಸವಿಕಾರಿ ॥

ದೇಹದಲ್ಲಿಯ ಶಕ್ತಿ ದೇಹವನ್ನು ಬಿಟ್ಟು ಹೇಗೆ ಇರಲಾರದೋ, ಬೇರೆಯಾಗಿಯೂ ಇರಲಾರದು. ಬ್ರಹ್ಮ ಶಕ್ತಿ ನಿನ್ನೊಳಗೇ ನೆಲೆಯಾಗಿದೆ. ಅಗ್ನಿಯೊಳಗಿನ ದಾಹಕ ಶಕ್ತಿ ಯನ್ನ ಬಿಟ್ಟು ಬೇರೆ ಇರಲಾರದೋ, ಹಾಗೇ ನಿನ್ನ ನೆರಳಿನಂತೆ ನಿತ್ಯನಾಗಿ, ತನ್ನ ಮಹಾಶಕ್ತಿಯಿಂದ ಪ್ರಪಂಚರೂಪಿಸಿ ಜೀವರೂಪ ಪ್ರವೇಶಿಸಿ ಪ್ರೇರಕನಾದರೂ ಅವಿಕಾರಿಯಾಗಿರುತ್ತಾನೆ.

ಈ ಪಂಕ್ತಿ ಪ್ರಾರಂಭ ಮಾಡಿದರೆ ಅದಕ್ಕೆ ಭಗವದ್ಗೀತೆ, ಖುರಾನ, ನಿಜಗುಣಶಾಸ್ತ್ರ, ಸರ್ಪಭೂಷಣ ಶಿವಯೋಗಿಗಳ ತತ್ವದೆಡೆಗೆ ಸಾಗುತ್ತ

ಸಾಯಂಕಾಲ ೭ ರಿಂದ ೧೦ ರವರೆಗೆ ನಿರರ್ಗಳ ನಡೆಯುತ್ತದೆ. ಅನುಭವಸಾರದಲ್ಲಿ ಇದನ್ನೇ ಹೇಳ್ತಾರೆ ತಿಳಿತಾऽऽ ತಿಳಿತಾऽऽ ಅನ್ನುತ್ತಾ ಮುಂದೆ 'ತಿಳಿ ತನ್ನನರಿದೊಡಾಗಳೇ ಕೆಡುವುದದುಯಳಿದಲ್ಲಿ ಕನಿಸಿನೊಳು ಜನಿಸಿ ತೋರಿದ್ದು ಮಲವೆಲ್ಲ ನಷ್ಟ ವಹ ವಾಂಗು'' ನಿದ್ರೆ ಅಳಿದು ಜಾಗ್ರತೆಗೆ ಬಂದೊಡನೆ ಸ್ವಪ್ನ ಪ್ರಪಂಚವು ಏಕಕಾಲಕ್ಕೆ ಹೇಗೆ ಇಲ್ಲದಾಗುವದೋ ಹಾಗೇ ಈ ಸಂಚಿತ ಕರ್ಮವಾದರೂ ತನ್ನ ಸ್ವರೂಪ ಜ್ಞಾನವಾದೊಡನೆ ಎಲ್ಲವೂ ಏಕಕಾಲದಲ್ಲಿ ನಿವೃತ್ತಿಯನ್ನು ಹೊಂದುತ್ತದೆ. ತನ್ನ ತಾನರಿಯಲು ಸಂಚಿತ ಕರ್ಮವು ತಕ್ಷಣವೇ ನಾಶವಾಗುತ್ತದೆ. ಅದನ್ನೇ ನಿಜಗುಣರು ''ಆರು ನಾನೆಂದು ವಿಚಾರಿಸು ದುರಿತ ಕರ್ಮವನೆಲ್ಲದಿರು ಪುಣ್ಯವನೇ ಮಾಡು ಅಪ್ಪಣೆ ಕೊಡಿಸ್ಯಾರ ಹೌದಲ್ಲೋ ಇದನ್ನೇ ಅಕ್ಕಮಹಾದೇವಿಯು ಯೋಗಾಂಗ ತ್ರಿವಿಧಿಯಲ್ಲಿ

ಅಷ್ಟದಳ ಕಮಲದಾ । ಬಟ್ಟಬಯಲೊಳಗೊಂದು
ಮುಟ್ಟಬಾರದಾ । ಘನವುಂಟು ಅದರೊಳಗೆ
ದೃಷ್ಟಿ ಇಟ್ಟವನೇ ನಿಜಮುಕ್ತ

ಎಂಟು ದಳದ ಕಮಲವುಳ್ಳ ಹೃದಯ ಬಯಲಿನಲ್ಲಿ, ಜೀವನಿಂದ ಮುಟ್ಟುವುದಕ್ಕೆ ಆಗದಿರುವ ಮಹಾ (ಮಹತ್) ರೂಪದ ಲಿಂಗವುಂಟು. ಅದರಲ್ಲಿ ದೃಷ್ಟಿಯಿಟ್ಟವನೇ ನಿಜಮುಕ್ತ. ಹಾಗಾದರೆ ಆ ನಿರಾಕಾರನನ್ನು ಕಾಣಬೇಕಲ್ಲ. ವೀರಶೈವ ಧರ್ಮದ ಆ ಪರವಸ್ತು ಕಾಣುವುದಕ್ಕೆ ಯೋಗಾಂಗ ತ್ರಿವಿಧಿ ಮುಂದೆ ಹೀಗೆ ಹೇಳುತ್ತದೆ.

ನುಡಿಯಬಾರದ ಹಣ್ಣು । ಕಡೆಯೊಳಗೆ ಇಡಲಾಗಿ
ಮಡದಿಯೋರ್ವರು ಅದು ಕಂಡು ಗ್ರಹಿಸಲ್ಕೆ
ನುಡಿಯ ಒಳಗಾಗಿ ಮೆರೆಯಿತ್ತು

ಹೇಳಲಿಕ್ಕೆ ಬಾರದ ಪರಾತ್ಪರ ಬ್ರಹ್ಮ ಎಂಬ ಹಣ್ಣು ಅಣುಚಕ್ರದಲ್ಲಿ ಅಗಣಿತ ಜ್ಯೋತಿಲಿಂಗಕಾರವಾಗಿ ಇರಲು ಲಿಂಗಾಂಗ ಸಮರಸ ಮಾಡುವ ಶರಣನಲ್ಲಿ ಕೂಡಿದ ಭಕ್ತಿ ಎಂಬ ಕಾಂತೆಯು ಆ ಉ ಮ ಓಂ ಎಂಬ ಪಂಚಾಕ್ಷರ ಮಂತ್ರ ಸ್ವರೂಪವಾಗಿ, ಪರಾತ್ಪರ ಇಷ್ಟ ಲಿಂಗವಾಗಿ, ಸಾಕಾರ ರೂಪದಿಂದ ಶೋಭಿಸಿತು. ಬಯಸಿ ಬಂದುದು ಮಂತ್ರ ಸ್ವರೂಪವಾಗಿ, ಪರಾತ್ಪರ ಇಷ್ಟ ಲಿಂಗವಾಗಿ ಸಾಕಾರ ರೂಪದಿಂದ ಶೋಭಿಸಿತು. ಬಯಸಿ ಬಂದುದು ಅಂಗಭೋಗ, ಬಯಸದೇ ಬಂದದು ಲಿಂಗಭೋಗ. ಉಣ್ಣುವದು ತಿನ್ನುವುದು ಭೋಗವಲ್ಲ. ತಲೀಬಾಚಗೊಳ್ಳದು, ಹೂವು ಮುಡಿಯುವದು ಭೋಗವಲ್ಲ. ನಿತ್ಯಾನಂದ ಸ್ಥಿತಿಯಲ್ಲಿ ಆ ಪರಾತ್ಪರನನ್ನು ಕಂಡು ನಿಜ ಮುಕ್ತಿ ಸ್ಥಿತಿ ತಲುಪುವದನ್ನು ಕಾಣಬೇಕು. ಅದು ಲಿಂಗಾಂಗ ಭೋಗ, ಅದು ನಿತ್ಯ ಏಕೆ ? ಅದು ಸತ್ಯ. ಎಂದೆಂದೂ ಸತ್ಯ ತಿಳಿತಾऽऽ, ತಿಳಿತಾऽऽ ಎನ್ನುತ್ತ ಶಾಸ್ತ್ರಿಗಳು ತಮ್ಮನ್ನೇ ಮರೆತುಬಿಡುತ್ತಿದ್ದರು.

ಎಡೆಯೂರ ಸಿದ್ಧಲಿಂಗೇಶ್ವರ ೧೨ ವರ್ಷ ಹುತ್ತದಲ್ಲಿ ಈ ಲಿಂಗಾಂಗಭೋಗಿಯಾಗಿದ್ದ ಅಂತ ಹೇಳಿ ಆತ ಶಿವಯೋಗಿ ಆದ ''ಸಾಂಬಜಯ ನಮಃ ಪಾರ್ವತಿ ಪತಿ ಹರ ಹರ ಮಹಾದೇವ''. ಹೀಗೆ ಮುಕ್ತಾಯವಾಗುತ್ತಿತ್ತು ಶಾಸ್ತ್ರಿಗಳ ಪ್ರವಚನ. ಸಿದ್ಧಲಿಂಗಶಾಸ್ತ್ರಿಗಳ ಪುರಾಣ ಹೇಳುವ ಶೈಲಿ ವಿಶಿಷ್ಟ. ಕೇಳುಗರನ್ನು ಭಾವಾವೇಶದಲ್ಲಿ ಮುಳುಗಿಸಿಬಿಡುತ್ತಿದ್ದರು. ಅವರ ದೃಷ್ಟಾಂತಗಳೂ ಅಷ್ಟೇ ನೈಜವಾಗಿರುತ್ತಿದ್ದವು.

ಎಡೆಯೂರ ಸಿದ್ಧಲಿಂಗ, ಡಂಬಳದ ಅರ್ಧನಾರೀಶ್ವರ, ಹಾಳಕೆರೆ ಅನ್ನದಾನೀಶ, ಎಳಂದೂರ ಬಸವಲಿಂಗಮಹಾಸ್ವಾಮಿಗಳು, ಮುಳಗುಂದ ಮಹಾಂತ ಶಿವಯೋಗಿಗಳು, ಮುರಗೋಡ ಅಜ್ಜವರು ಶಿರಹಟ್ಟಿ ಪಕ್ಕೀರೇಶ, ಅಥಣಿ ಶಿವಯೋಗಿಗಳು ಇವರೆಲ್ಲಾ ಲಿಂಗಾಂಗ ಭೋಗಿಗಳು. ನಾವಽಽ ಒಂದು ಪುಟ್ಟಿ ಬುಂದೆ. ಮಾಡ್ಲಿ ಉಂಡು. ಯಾರದರ ಕಟ್ಟಿ ಮ್ಯಾಗೆ ನಿದ್ದಿ ಹೊಡಿತೇವಿ. ಎಂದರೆ ಮತ್ತ ಉಣ್ಣದಽ ಅವರಿವರನ ಬೈಕೊಂಡು ಕುಂದ್ರುದು ಇವಕ್ಕಲ್ಲ ನೀ ಬಂದಿದ್ದು. ಯಾಕ ಬಂದೀವಿ ಅಂತ ಶಿಶುನಾಳ ಶರೀಫರು ಹಿಂಗ ಹೇಳ್ತಾರ :

''ನಡಿಯೋ ದೇವರ ಚಾಕರಿಗೆ
ಮುಕ್ತಿವೊಡೆಯ ಖಾದರಲಿಂಗ ನೆಲೆಸಿರ್ಪ ಗಿರಿಗೆ''
''ಪದವನು ಬೇಗ ಕಲಿ ಶಿವಶರಣರ ಹೃದಯ ಕೀಲಿ''

ಇದು ಕಲಿಸಬೇಕಂದ್ರ ಗುರುಬೇಕು, ದೊರಕಿದ ಪರಮಾನಂದ ಭೋದಧರಿವಿನೊಳಗೆ ಬಂದು ದೊರಕಿದಾ ಗುರು ದೊರಕಿದಾ. ಮತ್ತ ಹೇಳ್ತಾರ

''ಹೋಗುತಿಹುದು ಕಾಯ ವ್ಯರ್ಥ
ಇದರಲಾಗವ ತಿಳಿದವ ಯೋಗಿ ಸಮರ್ಥ''

ಸಮರ್ಥ ಪದ, ಸಮರ್ಥ ಪದ, ನೀ ಈ ಶಾಸ್ತ್ರ ಕೇಳುವಷ್ಟೇ ಸಮರ್ಥನಲ್ಲ. ಹೇಳುವ ನಾನೂ ಅಷ್ಟೇ ಸಮರ್ಥನಾಗಿರಬೇಕು. ಅದಕ್ಕೆ ಕಚ್ಚಿ, ಕೈ, ಬಾಯಿನೂ ಸ್ವಚ್ಛವಿರಬೇಕು. ಸದಾ ಶಿವಧ್ಯಾನದಲ್ಲಿರಬೇಕು. ತತ್ವ ತಿಳಿದಿರಬೇಕು. ಕುಳಿತವರಲ್ಲಿ ಯಾರೋ ಒಬ್ಬರು ಪ್ರಶ್ನೆ ಕೇಳಿದರು. ಶಾಸ್ತ್ರಿಗಳು ಅರೆರೆಽಽ ಇದೇನ್ ಶಿವಾನುಭವ ಮಂಟಪ ಆಗ್ಯೆತಲ್ಲ. ಅಕ್ಕಮಹಾದೇವಿ ಸಹಿತ ಹಿಂಗ ಪ್ರಶ್ನೆ ಕೇಳ್ತಿದ್ರು ಅಲ್ಲಮಪ್ರಭುಗಳ, ತತ್ವ ಅಂದ್ರ ತತ್ವಜ್ಞಾನಿ ತತ್ವ ದೀಕ್ಷೆ, ಜಚನಿ ಹೇಳ್ತಾರ ''ಶಿವಾದ್ವೈತ ಸಿದ್ಧಾಂತದಲ್ಲಿ ತತ್ವ ಮೂವತ್ತಾರು. ಅವುಗಳ ಅರಿವನ್ನುಂಟು ಮಾಡುವದೇ ತತ್ವ ದೀಕ್ಷೆ. ಆ ಮೂವತ್ತಾರು ತತ್ವ ಅಂದ್ರ ಪಂಚಭೂತಗಳು, ಪಂಚ ತನ್ಮಾತ್ರೆಗಳು, ಪಂಚ ಕರ್ಮೇಂದ್ರಿಯಗಳು, ಮನ, ಕಾರುಣ್ಯ, ಇದು ತಿಳಿಬೇಕಾದ್ರ ಶಿವ ದೀಕ್ಷೆ ಹೊಂದಬೇಕು. ಅವು ಮೂರು ಬಗೆಯವು ಕ್ರಿಯಾದೀಕ್ಷೆ, ಮಂತ್ರ ದೀಕ್ಷೆ, ವೇದಾದೀಕ್ಷೆ ಇದರಿಂದ ಮೂರು ಮಲಗಳನ್ನು ತೊಳೆಯಬೇಕು. ಅವು ಕಾರ್ಮಿಕ ಮಲ, ಮಾಯಾ ಮಲ, ಅಣು ಮಲ, ಪ್ರತಿಯೊಬ್ಬರಿಗೂ ಸ್ಥೂಲ, ಸೂಕ್ಷ್ಮ, ಕಾರಣವೆಂಬ ಶರೀರವಿರುತ್ತದೆ. ಇವನ್ನೇ ತ್ಯಾಗಾಂಗ, ಭೋಗಾಂಗ, ಯೋಗಾಂಗ

ಅಂತಾರ. ಸ್ಥೂಲವಾದ ತ್ಯಾಗಾಂಗದಲ್ಲಿ ಅರಿದೋ ಅರಿಯದೆಯೋ ಮಾಡಿದ ಕಾರ್ಮಿಕ ಮಲವಿರುತ್ತದೆ. ಸೂಕ್ಷ್ಮವಾದ ಭೋಗಾಂಗದಲ್ಲಿ ವಿಷಯ ಸುಖವೇ ಸುಖವೆಂಬ ಅಜ್ಞಾನರೂಪ ಮಾಯಿಕಮಲ್ಲವಾಗುತ್ತದೆ. ಕಾರಣವಾದ ಯೋಗಾಂಗಗಳಲ್ಲಿ ತಾಯಿ ತಂದೆಗಳಿಂದ ಬಂದ ಅನುವಂಶಿಕ ದೋಷವಿರುತ್ತದೆ, ಅದರ ಅನುಭವಿರುತ್ತದೆ. ಇದನ್ನು ತೊಳಕೋಬೇಕಂದ್ರ ನಿಜಗುಣರು ಎಂದಿದ್ರು. ''ದುರಿತಕರ್ಮವನ್ನು ಒಲ್ಲದಿರು ಪುಣ್ಯವನೇ ಮಾಡು.''

ಆತ್ಮ ಜ್ಞಾನ ಸಾಧನೆಗೆ ಈ ಶರೀರವೇ ಮಾಧ್ಯಮ, ಬಸವಾದಿ ಪ್ರಮಥರೇ ಹೇಳುವಂತೆ ''ಕೂಡಲ ಸಂಗಮ ದೇವನ ಒಲಿಸಲು ಬಂದ ಪ್ರಸಾದ ಕಾಯವಿದು ಕೆಡಿಸಲು ಬೇಡ'' ಈ ತತ್ವದಲ್ಲಿ ಪರಾತ್ಪರ ಶಿವನನ್ನು ಕಾಣಬೇಕಾದರೆ ಸಾಧಕ ಸಮಷ್ಠಿ ಜೀವಿಯು ಆಗಬೇಕು, ದೃಷ್ಟಿ ಜೀವಿಯು ಆಗಬೇಕು. ಇಂತಹ ಸಂದರ್ಭದಲ್ಲಿ ಶರಣರು ಪೂರ್ಣ ದೃಷ್ಟಿ ಪೂರ್ಣ ಜೀವನದಿಂದ ಇಹ ಪರಗಳೆರಡನ್ನೂ ಸಮರಸಗೊಳಿಸಬಲ್ಲ ಮಾರ್ಗವನ್ನು ತೋರಿಸಿದರು. ಸುಳಿದು ಸೂತಕಿಯಲ್ಲದ ರೀತಿಯಲ್ಲಿ ಈ ಪ್ರಪಂಚದಲ್ಲಿ ಇದ್ದು, ಸುಳಿದು ಬಾಳುವ ರಹಸ್ಯವನ್ನು ಶರಣರ ಅನುಭಾವ ಮಾರ್ಗದಲ್ಲಿ ತೋರಿದ್ದಾರೆ. ಮುಂದುವರೆಯುತ್ತಾ ಸಿದ್ಧಲಿಂಗಶಾಸ್ತ್ರಿಗಳು ಅವರ ವಚನ

> ''ಆಳುವನಲ್ಲನೆಂದು ಅರಣ್ಯಕ್ಕೆ ಹೋಗುವುದು ದುರುಳುತನ''
> ಉರುಳಿದೊಡೆ ನರರ ಹಂಗು
> ಅರಣ್ಯದೊಳು ತರುಗಳ ಹಂಗು
> ಬಂದ ಪದಾರ್ಥವ ಲಿಂಗಾರ್ಪಿತವ ಮಾಡಿಗೊಂಬ
> ಶರಣನೇ ಜಾಣ ಸಕಳೇಶ್ವರ''

ಈ ಆಧ್ಯಾತ್ಮಿಕ ಮತ್ತು ಪ್ರಪಂಚ ಇವೆರಡರೊಳಗೆ ಸುಳಿದು ಗೆದ್ದು ಬರುವವನೇ ನಿಜ ಶರಣ. ೧೨ನೇ ಶತಮಾನದಲ್ಲಿ ನಮ್ಮ ಶರಣರೆಲ್ಲ ಎದ್ದು; ಅರಿವಿನಲ್ಲಿ ಒಂದಾಗಿ ಗೆದ್ದು ಬಂದವರು. ಇದನ್ನೆ ಚನ್ನಬಸವಣ್ಣ

> ''ಪುಣ್ಯದಂತೆ ಬಪ್ಪರು,
> ಜ್ಞಾನದಂತೆ ಇಪ್ಪರು''

ನಮ್ಮ ಶರಣರು ಉಪಮಾತೀತರು, ಉರಿಲಿಂಗ ಪೆದ್ದಿಯೂ ಇದನ್ನೇ ಹೇಳುತ್ತಾರೆ.

ಹಾಗಾದರೆ ಕಾಯದ ನಿಷ್ಠೆ, ಕಾಯದ ಮಹತ್ವ, ಕಾಯದ ಅವಶ್ಯಕತೆ, ಎಷ್ಟೆಂಬುದನ್ನು ಭಗವದ್ಗೀತೆಯು ಹೀಗೆ ಹೇಳುತ್ತದೆ. ''ಶರೀರ ಮಾದ್ಯಂ ಖಲುಧರ್ಮ ಸಾಧನಂ'' ಅನುಭಾವದಲ್ಲಿ ಕಾಯಕವೇ ದೇವಾಲಯ. ಅದಕ್ಕಾಗಿ ಬಸವಾದಿ ಪ್ರಮಥರು ''ಕಾಯಕವೇ ಕೈಲಾಸ''ವೆಂದಿದ್ದಾರೆ. ಅಲ್ಲಮ ಪ್ರಭುಗಳು ''ಭೂತ, ಭೂತವ ಕೂಡಿ ಅದ್ಭುತವಾಯಿತು'' ಎಂದು ಶರೀರ ರಚನೆಯ ಬಗ್ಗೆ ಉದ್ಗಾರ ತೆಗೆದಿದ್ದಾರೆ. ಬಾಳಿಗೆ ಲೌಕಿಕವೇ ಇರಲಿ, ಪಾರಮಾರ್ಥವೇ ಇರಲಿ, ದೇಹ

ಅತೀ ಅವಶ್ಯ ಸಂಪಾದನೆ. ಜಯ, ಶ್ರೇಯಸ್ಸು, ಏನಾದರೂ ಸರಿಯೇ ಎಲ್ಲದಕ್ಕೂ ದೇಹ ಅವಶ್ಯ. ಮಣ್ಣಿನಿಂದಾದರೂ ಮಣ್ಣಿನಂತಲ್ಲ. ದೇಹದಲ್ಲಿಯ ಕಣ್ಣು, ಕಿವಿ, ಹೃದಯ, ಪುಪ್ಪಸ, ಎಲ್ಲಾ ಅವಯವಗಳು ಪವಾಡ ಸಾದೃಶ ಕಾರ್ಯ ಮಾಡುತ್ತವೆ. ಆದ್ದರಿಂದ ಈ ದೈಹಿಕ ಕ್ರಿಯೆ ದೇವರು ನಮಗೆ ಕೊಟ್ಟ ದೈವೀ ಶಕ್ತಿ. ಈ ಕಾರಣದಿಂದಲೇ ಲೌಕಿಕ ಮತ್ತು ಪಾರಮಾರ್ಥವನ್ನು ಗಳಿಸಲು ಈ ಕಾಯವನ್ನು ಕೆಡಸಬೇಡವೆಂದು ಬಸವಾದಿ ಪ್ರಮಥರೇ ನಿರೂಪಿಸಿದ್ದಾರೆ. ದಾಸರು, ಸಂತರು ಸಹಿತ ಈ ದೇಹದ ಮೋಹ ಬೇಡವೆಂದರೂ ಆತ್ಮಸಾಧನೆಗೆ, ಪುರುಷಾರ್ಥಗಳಿಸಲು ಈ ಕಾಯಕವನ್ನೇ ಬಳಸಿಕೊಳ್ಳುತ್ತಾನೆ. ಈ ದೇಹಕ್ಕೆ ತನ್ನದೇ ಆದ ಆಸೆ, ಆಮಿಷಗಳಿವೆ. ಆ ಆಮಿಷಗಳು ಮೇಲೆ ಹೇಳಿದ ಮಲತ್ರಯಗಳಿಂದ ಪೂರ್ವಜನ್ಮದ ವಾಸನೆಯಿಂದ ಬರುತ್ತವೆ. ಈ ವಾಸನಾತೀತ ಬದುಕಿನಲ್ಲಿ ಈಜಿ ಬರಬೇಕಾದರೆ ಆತ್ಮ ಜ್ಞಾನವೆಂಬ ಶಕ್ತಿ ಬೇಕು. ಆ ಶಕ್ತಿಗಳಿಸಲು ನಾವು ಆ ವಾಸನಾ ಬಂಧಿತ ಇಂದ್ರಿಯಗಳ ನಿಗ್ರಹ ಮಾಡಬೇಕು. ಅದಕ್ಕೆ ಭಗವದ್ಗೀತೆಯಲ್ಲಿ ಗೀತೋಪದೇಶ ಮಾಡುವ ಕೃಷ್ಣ ಏಳು ಕುದುರೆಗಳ ರಥವನ್ನು ಲಗಾಮಿನಲ್ಲಿ ಬಂಧಿಸಿದ್ದು. ಅರ್ಜುನನಿಗೆ ಕುರುಕ್ಷೇತ್ರದಲ್ಲಿ 'ಅರ್ಜುನ ಈ ರಥವೇ ಜೀವನ. ಈ ಕುದುರೆಗಳೇ ವಾಸನಾ ಇಂದ್ರಿಯಗಳು. ಈ ಕುದುರೆಗಳನ್ನು ಹಿಡಿತದಲ್ಲಿಡಬೇಕಾದರೆ ಈ ಲಗಾಮುಗಳು ಹೇಗೆ ಅವಶ್ಯವೋ ಹಾಗೆ ಜ್ಞಾನಮಾರ್ಗವು, ಯೋಗಮಾರ್ಗವು ಲಗಾಮುಗಳಂತೆ ಪ್ರತಿಜೀವಿಗಳಲ್ಲಿರಬೇಕು. ಅದನ್ನೇ ಭಗವದ್ಗೀತೆ ಚಾತುರ್ಯೋಗವೆಂದು ಕರೆಯುತ್ತದೆ. ಈ ಸಾಧನೆಗೆ ಸಾಧಕನು ವರ್ಷಗಳೆಲ್ಲಾ ಯೋಗ ಸಿದ್ಧಿ ಮಾಡುವಾಗ ಮತ್ತು ವಾಸಾನಾ ಗಾಳಿಗೆ ಸಿಲುಕಿದರೆ ಕಷ್ಟಪಟ್ಟು ದೀಪ ಹಚ್ಚಿದಾಗ ಬಿರುಗಾಳಿ ಬಂದು ದೀಪವನ್ನು ಆರಿಸಿದಂತಾಗುತ್ತದೆ. ವಾಸನಾ ಪ್ರಪಂಚ ಅಂಟದಂಗ ನೋಡ್ಕೋಬೇಕು. ಸಾಕ್ರಟೀಸ್ ಗ್ರೀಕನ್ ಹಾಗೂ ಪ್ರಪಂಚಕ್ಕೂ ಅತಿದೊಡ್ಡ ತತ್ವಜ್ಞಾನಿ. ಅವನ ಶಾಂತ ಮನಸ್ಸು ಎಷ್ಟು ದೊಡ್ಡದಿತ್ತೆಂದರೆ ಅವನ ಬಡತನದ ಕಷ್ಟಗಳಲ್ಲಿ ನೊಂದ ಹೆಂಡತಿ ಒಮ್ಮೆ ಅವನಿಗೆ ಪಾತ್ರೆಯಲ್ಲಿಯ ಮುಸುರೆಯನ್ನು ಎರಚುತ್ತಾಳೆ. ಎಷ್ಟು ಕೆಟ್ಟದಾಗಿ ಬೈಯುತ್ತಾಳೆಂದರೆ ಅಕ್ಕ ಪಕ್ಕದ ಮನೆಯವರು ಅಂತಹ ಮಹಾಶ್ರೇಷ್ಠನಿಗೆ ಇಂತಹ ಹಂಡತಿಯೇ ಗಂಟುಬೀಳಬೇಕಾ ? ಎನ್ನುತ್ತಾರೆ. ಆದರೆ ಸಾಕ್ರಟೀಸ್ ಮಾತ್ರ ನಗುತ್ತಲೇ ಇರುತ್ತಾನೆ. ಜನ ಆಶ್ಚರ್ಯದಿಂದ ಕೇಳಿದರೆ ಸಾಕ್ರಟೀಸ ಕೊಡುವ ಉತ್ತರ ಎಷ್ಟೊಂದು ಮಾರ್ಮಿಕವಾಗಿತ್ತೆಂದರೆ ''ಇಂತಹ ಕಡುಬಡವನನ್ನು ಮದುವೆ ಮಾಡಿಕೊಂಡು ಇಷ್ಟುದಿನ ಕಷ್ಟ ಸಹಿಸಿ ಬಾಳಿದಳಲ್ಲ ಏನೊಂದೂ ಕೊಡಲು ಸಾಧ್ಯವಿಲ್ಲದ ಗಂಡನೊಡನೆ ಬದುಕು ಸಾಗಿಸಿ ಬಂದವಳು ಎರಡು ಶಬ್ದ ಬೈದರೆ ಏನು ತಪ್ಪು'' ಅನ್ನುತ್ತಾನೆ. ಆ ಹೃದಯ ವೈಶಾಲ್ಯಕ್ಕೆ ಆತನ ಹೆಂಡತಿಯೇ ಮಾರು ಹೋಗುತ್ತಾಳೆ. ಇಂತಹ ಈ ಸಾಕ್ರಟೀಸರಿಗೆ ಒಬ್ಬ ಪಂಡಿತ ಕೇಳುತ್ತಾನೆ ''ವಿರಾಗಿಗಳಾದ, ಅಲೌಕಿಕ ಚಿಂತನಪರರಾದ ನಿಮ್ಮ ಶಿಷ್ಯರನ್ನು ಅಲ್ಪ

ಸಮಯದೊಳಗೆ ಸಂಸಾರ ರಸಿಕರನ್ನಾಗಿ ಮಾಡಬಲ್ಲೆ''. ಸಾಕ್ರಟೀಸ ಹೇಳಿದ ''ಕೆಡಿಸಲು ನಿನ್ನಂತಹ ಪಂಡಿತನೇ ಏಕೆ ಬೇಕು ? ಗುಡ್ಡದ ತುದಿಯಿಂದ ಕಲ್ಲು ಕೆಳಗುರುಳಿಸಲು ಜಟ್ಟಿಯೇ ಬೇಕೇನು? ಒಬ್ಬ ಬಾಲಕ ಸ್ವಲ್ಪ ನೂಕಿದರೂ ಸಾಕು ಅದು ಕೆಳಗುರುಳಬಲ್ಲದು.'' ಇದು ಸಾಕ್ರಟೀಸ್ ಕಾಯದ ಬಗ್ಗೆ ಶರೀರದ ಬಗ್ಗೆ ನೀಡಿದ ಮಾತು. ಅದಕ್ಕಾಗಿ ಸಾಕ್ರಟೀಸನಿಗೆ ಪ್ಲೇಟೋ, ಅರಿಸ್ಟಾಟಲ್ ಅಂತಹ ಜಗತ್‌ಪ್ರಸಿದ್ಧ ತತ್ವಜ್ಞಾನಿಗಳು ಶಿಷ್ಯರಾಗಿದ್ದರು. ಸಿದ್ಧಲಿಂಗಶಾಸ್ತ್ರಿಗಳ ಪ್ರವಚನ ಗದುಗಿನ ಅನುಭಾವಿಗಳಿಂದ ಗ್ರೀಸ್‌ನ ತತ್ವಜ್ಞಾನಿಯವರೆಗೆ ಹಬ್ಬಿನಿಂತಿತ್ತು.

ಅಲೆಗ್ಸಾಂಡರ್ ಜಗತ್ತನ್ನೆ ಗೆದ್ದ ಏಕೈಕ ಮಹಾನ್ ಚಕ್ರವರ್ತಿ. ಅಂತಹ ಚಕ್ರವರ್ತಿಯು ಜಗತ್ತಿನ ಸಂಪತ್ತನ್ನು ತನ್ನ ಮಡಿಲಲ್ಲಿಟ್ಟುಕೊಂಡರೂ, ವೈರಾಗಿಯಾಗುತ್ತಾನೆ. ಅದಕ್ಕೆ ಆತ್ಮಧ್ಯಾನ ಪರಿಘದಲ್ಲಿ ನಿಂತು ಗುರು ಉಪದೇಶ ಪಡೆಯುತ್ತಾನೆ. ಅವನಿಗೆ ಈ ಆತ್ಮಧ್ಯಾನದ ಮುಂದೆ ಜಗತ್ತಿನ ಸಂಪತ್ತೆಲ್ಲಾ ತೃಣ ಸಮಾನವಾಗಿ ಕಾಣುತ್ತದೆ. ಈ ಜ್ಞಾನ ನೀಡಿದ ಗುರುವನ್ನು ನೆನೆಸುತ್ತಾನೆ. ಅಲೆಗ್ಸಾಂಡರ್ ಹೇಳುತ್ತಾನೆ ''ನನ್ನ ತಂದೆ ನನಗೆ ನಶ್ವರವಾದ ದೇಹವನ್ನು ಈ ಸ್ವರ್ಗದಿಂದ ಭೂಮಿಗೆ ಕರೆತಂದ. ಆದರೆ ನನ್ನ ಗುರು ಅರಿಸ್ಟಾಟಲ್ ನನ್ನನ್ನು ಭೂಮಿಯಿಂದ ಸ್ವರ್ಗಕ್ಕೆ ಕರೆದೊಯ್ದ'' ಎಂತಹ ಅದ್ಭುತ ವ್ಯಕ್ತಿಯನ್ನು ಅಲೆಗ್ಸಾಂಡರ್ ಜಗತ್ತಿಗೆ ನೀಡಿದ. ಈ ನಶ್ವರತೆಯ ಭಾವ ಎಂದು ವ್ಯಕ್ತಿಯಲ್ಲಿ ಉದ್ಭವವಾಗುತ್ತೋ ಅಂದೇ ಅವನು ಈಶ್ವರನಾಗುತ್ತಾನೆ. ಇದನ್ನೇ ನಿಜಗುಣ ಶಿವಯೋಗಿಗಳು ಕೈವಲ್ಯ ಪದ್ಧತಿಯಲ್ಲಿ, ''ಆರು ನಾನೆಂದು ವಿಚಾರಿಸು'' ಎಂದು ಹೇಳುತ್ತಾರೆ. ಇದನ್ನೇ ಅಕ್ಕ ಮಹಾದೇವಿ ''ಎನ್ನ ಕಾಯದ ಕತ್ತಲೆಯಾ ಕಳೆಯಯ್ಯಾ, ಎನ್ನ ಮಾಯದ ಮದವ ಮುರಿಯಯ್ಯಾ, ಚನ್ನಮಲ್ಲಿಕಾರ್ಜುನ ಎಂದು ಹೇಳುತ್ತಾಳೆ. ಈ ಕಾಯದಿಂದ ಗಳಿಸಿದ ಕಾಮು, ಅರ್ಥ, ಮೋಕ್ಷ, ಸಾಧನೆಗೆ ಅದು ಮೀಸಲಾಗಿರಬೇಕು ಮತ್ತು ಸತ್ಪಾತ್ರಕ್ಕೆ ಸಲ್ಲಬೇಕು ಆ ಮನಸ್ಸು''. ಈ ನಿಲುಮೆ ಸಿದ್ಧಲಿಂಗಶಾಸ್ತ್ರಿಗಳು ಪದೇ ಪದೇ ಭಕ್ತರಿಗೆ ಹೇಳಿದಂತೆ ಮಕ್ಕಳಿಗೂ ಹೇಳುತ್ತಿದ್ದರು. ಸಂಪತ್ತು ಸದುಪಯೋಗವಾಗದಿದ್ದಲ್ಲಿ ಬಸವಾದಿ ಪ್ರಮಥರು ಹೇಳುವಂತೆ ''ಪಾಪಿಯ ಧನ ಪ್ರಾಯಶ್ಚಿತ್ಯಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದು. ನಾಯಿಯ ಹಾಲು ನಾಯಿಕುನ್ನಿಗಲ್ಲದೆ ಪಂಚಾಮೃತಕ್ಕೆ ಸಲ್ಲದು ಎನ್ನುತ್ತಾರೆ'' ನಮ್ಮ ಬದುಕು ಹೀಗಾಗಿರಬೇಕೆಂಬುದು ಶ್ರೀ ಸಿದ್ಧಲಿಂಗಶಾಸ್ತ್ರಿಗಳ ನಿತ್ಯ ಬೋಧನೆ ಗದುಗಿನ ತೋಂಟದಾರ್ಯಮಠದ ಬೆಳಗಿನ ಶಿವಾನುಭವ ಗೋಷ್ಠಿಯಲ್ಲಿ ನಿತ್ಯವೂ ನಡೆಯುತ್ತಿತ್ತು. ಆದುದರಿಂದಲೇ ಆ ಶಿವಾನುಭವದಲ್ಲಿ ನಿತ್ಯ ಪಾಲ್ಗೊಳ್ಳುತ್ತಿದ್ದ ೧೨೫ ಶಿಷ್ಯರ ಬಳಗ ಶರಣ ಶರಣೆಯರಾಗಿ ಶಿವಾನುಭವಿಗಳು ಎಂಬ ''ಗ್ರಂಥಮಾಲೆ''ಯನ್ನೇ ಸಿದ್ಧಲಿಂಗಶಾಸ್ತ್ರಿಗಳು ಅಗಲಿದ ನಂತರ ಶ್ರೀಮಠದ ಶಿವಾನುಭವ ಸಮಾರಂಭದಲ್ಲಿ ೨೦೦೮ರಲ್ಲಿ ಪ್ರಾತಃಕಾಲ ಶಿವಾನುಭವ ಸಂಘ ಸ್ಥಾಪಿಸಿದ ಶ್ರೀ ಸಿದ್ಧಲಿಂಗಶಾಸ್ತ್ರಿಗಳಿಗೆ ಅರ್ಪಿಸಿದರು.

ಸಿದ್ಧಲಿಂಗಶಾಸ್ತ್ರಿಗಳಿಗೆ ಹಾಳಕೆರೆ ಅನ್ನದಾನ ಮಹಾಸ್ವಾಮಿಗಳೆಂದರೆ ಸಾಕ್ಷಾತ್ ಶಿವಸ್ವರೂಪಿಯಾಗಿ ಕಂಡವರು. ಅದೊಂದು ೧೨ನೇ ಶತಮಾನದ ಶರಣರ ಕಲ್ಯಾಣದ ಪ್ರಣತಿಯನ್ನು ೨೦ನೇ ಶತಕದಲ್ಲಿ ಬೆಳಗಿಸಿದ ಜ್ಯೋತಿ. ತ್ರಿವಿಧ ದಾಸೋಹಿ. ಅನುಷ್ಠಾನ ಶಕ್ತಿ ಪಡೆದವರು. ಅದರಿಂದ ಅವರಲ್ಲಿ ವಾಕ್‌ಸಿದ್ಧಿ, ದೃಷ್ಟಿಸಿದ್ಧಿ ಒಳಗೊಂಡಿತ್ತು. ಅಲ್ಲಿ ಒಂದು ಚಿಕ್ಕ ಘಟನೆ ನಡೆಯಿತು. ಹಾಲಕೆರೆ ಪವಿತ್ರ ಕ್ಷೇತ್ರವಾದರೂ ಜಗಳಗಂಟ ಊರು. ಅದಕ್ಕೆ ಪೂಜ್ಯರು ಭಕ್ತರನ್ನು ಕರೆದು ಈ ಊರಿಗೆ ಹಾಲಕೆರೆಯೆಂದೇ ಹೆಸರಿದ್ದಾಗ್ಯೂ ನಿಮ್ಮ ಊರಿನಲ್ಲಿ ನೀರು ಸಿಗುವುದಿಲ್ಲ ಅಂದರಂತೆ. ಅದಕ್ಕೆ ಬುದ್ಧಿ ಹೇಳಿ ನಿಮ್ಮಲ್ಲಿಂದು ಜಗಳ ಬಿಟ್ಟಿಲ್ಲ. ಬಸವಾದಿ ಪ್ರಮಥರು ಹೇಳಿದಂತೆ "ಇವನಾರವ ಇವನಾರವ ಎಂದೆನಿಸದೇ ಇವ ನಮ್ಮ ಇವ ನಮ್ಮವ ಎಂದೆನಿಸಯ್ಯಾ" ಕೂಡಿ ಬಾಳುವ ಮಾರ್ಗ ತೋರಿಸಿದರು. ಅದರಂತೆ ಹಾಳಕೇರಿಯವರು ಪಾಲಿಸಿದ್ದರಿಂದ ಕಲ್ಯಾಣದ ಮಹಾಮನೆಯಂತೆ ಇಂದಿಗೂ ದಾಸೋಹ ಊರಿನವರೇ ನಡೆಸಿಕೊಡುತ್ತಾರೆ. ಬೆಳ್ಳಿಯ ತೇರು ಮಠಕ್ಕೆ ನೀಡಿದ್ದಾರೆ. ಹೆಸರಿಗೆ ತಕ್ಕಂತೆ ಅನ್ನ ದಾಸೋಹ ಹಾಲಕೆರೆಯಲ್ಲಿ ಕೋಡಿಕೊಪ್ಪ ಹಾಗೂ ಗದುಗಿನ ಅನ್ನದಾನೀಶ್ವರರ ಆಶ್ರಮದಲ್ಲಿ ಇನ್ನೂ ಸಾಗಿ ಬರುತ್ತಿದೆ. ಬಡವಿದ್ಯಾರ್ಥಿಗಳ ತೌರಾಗಿದೆ. ಸಿದ್ಧಲಿಂಗಶಾಸ್ತ್ರಿಗಳ ಸಾಮಾಜಿಕ ಕಳಕಳಿ ಕಂಡ ಅವರ ಆಧ್ಯಾತ್ಮದ ಅನುಭವ ಕಂಡ ಶ್ರೀಗಳು ಈ ಮೂರು ಮಠದ ದಾಸೋಹಗಳ ಹೊಣೆಗಾರಿಕೆ ಕೆಲಕಾಲ ಸಿದ್ಧಲಿಂಗಶಾಸ್ತ್ರಿಗಳಿಗೆ ವಹಿಸಿದ್ದರು.

ಬಸವಾದಿ ಪ್ರಮಥರ ಪ್ರಭಾವಕ್ಕೊಳಗಾದ ಪಾಲ್ಕುರಿಕೆ ಸೋಮನಾಥ ಕವಿ ಅಸಾಮಾನ್ಯ ಪಂಡಿತ. ಆತನನ್ನು ಚತುರ್ವೇದ ಪಂಡಿತ ಎಂದೇ ಕರೆಯುತ್ತಿದ್ದರು. ಪಾಲ್ಕುರಿಕೆ ಸೋಮನಾಥರು ತೆಲುಗು ಭಾಷೆಯಲ್ಲಿ ಕ್ರಿ.ಶ. ೧೯೫೩ರಲ್ಲಿ ಬಸವ ಪುರಾಣ ರಚಿಸಿದ ಪಾಲ್ಕುರಿಕೆ ಸೋಮನಾಥ ಕವಿಯನ್ನು "ವರಸರ್ವಜ್ಞ ಶಿಖಾಮಣಿ" ಎಂದೇ ಪಾಪಯ್ಯ ಅಮಾತ್ಯರು ಸ್ಮೃತಿಸಿದ್ದಾರೆ. ಅವನ ಆಜ್ಞೆಯಂತೆ ಭೃಂಗಿಯೇ ಸೋಮನಾಥ ಕವಿಯಾಗಿ ಅವತರಿಸಿದ ಎಂತಲೂ ಹೇಳುತ್ತಾರೆ. ಶಂಕರಾಚಾರ್ಯರ ನಂತರ ಶಿವಸ್ತುತಿಯನ್ನು ವಿರೋಧಿಸಿದ ಬ್ರಾಹ್ಮಣರು ಸೋಮನಾಥ ಕವಿಯ ಚತುರ್ವೇದ ಪಾಂಡಿತ್ಯವನ್ನು ಮೆಚ್ಚಿ ಇಷ್ಟಲಿಂಗಧಾರಣೆಯನ್ನು ಒಪ್ಪುತ್ತಾರೆ. ಪಾಲ್ಕುರಿಕೆ ಸೋಮನಾಥರು ಸಂಸ್ಕೃತ ಹಾಗೂ ತೆಲುಗು ಭಾಷೆಯಲ್ಲಿ ಪ್ರಬುದ್ಧತೆ ಪಡೆದಿದ್ದು; ಶ್ರೀಶೈಲ ಮಲ್ಲಿಕಾರ್ಜುನನಲ್ಲಿ ಅನಂತ ಭಕ್ತನಾಗಿದ್ದರು. ಪಾಲ್ಕುರಿಕೆ ಸೋಮನಾಥರು ಬಸವಾದಿಗಳ ಸಮಕಾಲೀನರಾದ ಮಲ್ಲಿಕಾರ್ಜುನ ಪಂಡಿತರ ಕಾಲದಲ್ಲೂ ಇರಬಹುದೆಂದು ಸಂಶೋಧಕರ ಊಹೆ. ಪಾಲ್ಕುರಿಕೆ ಸೋಮನಾಥರ ಅಷ್ಟಾವರಣ, ಪಂಚಚಾರ, ಷಟಸ್ಥಲಗಳನ್ನು ವಿವರಿಸುವಾಗ "ಶಕ್ತಿವಿಶಿಷ್ಟಾದ್ವೈತ" ಮಹಾನ್ ತತ್ವವನ್ನು ನಿರೂಪಿಸುವ ರೀತಿಯನ್ನು ಶ್ರೀ ಸಿದ್ಧಲಿಂಗಶಾಸ್ತ್ರಿಗಳೂ ನೀಡುವ ಅನೇಕ ಉದಾಹರಣೆಗಳಿಂದ ಅಂದಿನ ಶಹಪೂರಪೇಟೆಯ ಯುವಕರು ಪ್ರಭಾವಿತರಾಗಿ ಕಲ್ಯಾಣದ ಶರಣರಂತಲೇ ಪರಿವರ್ತನೆಗೊಂಡರು.

ಬಸವಾದಿ ಪ್ರಮಥರಲ್ಲಿ ಬಸವಣ್ಣ ಬರೀ ವಚನಕಾರರಾಗಿರದೇ ಉತ್ತಮ ರಾಜಕಾರಣಿಯಾಗಿ, ದಂಡನಾಯಕರಾಗಿ, ಅರ್ಥಮಂತ್ರಿಗಳಾಗಿ, ನಿರ್ವಹಿಸಿದ ಪ್ರಾಮಾಣಿಕ ಕಾರ್ಯವೈಖರಿಗೆ ಬಿಜ್ಜಳನೇ ಬೆರಗಾಗಿದ್ದ. ಕಾಯಕವೇ ಕೈಲಾಸ ತತ್ವವನ್ನು ಬಸವಾದಿ ಪ್ರಮಥರು ೧೨ ನೇ ಶತಕದಲ್ಲೇ ಬೋಧಿಸಿದ್ದರು. ಸರ್ವರನ್ನು ಉದ್ಯೋಗವಂತರನ್ನಾಗಿಸಿದರು. ನಡೆನುಡಿ ಸಂಸ್ಕಾರ ನೀಡಿ ನೀತಿವಂತರನ್ನಾಗಿ ಬದಲಾಯಿಸಿದರು. ಜಾತಿ ಪದ್ಧತಿಯನ್ನು ತೆಗೆದು ಸಮಾನ ಹಕ್ಕು ನೀಡಿದರು. (Equality) ಸ್ತ್ರೀ ಸ್ವಾತಂತ್ರ್ಯ ನೀಡಿದ ಮೊದಲ ಕ್ರಾಂತಿಕಾರ. ಆತನ ಕಾಲದಲ್ಲಿ ಒಂದೇ ಒಂದು ಯುದ್ಧ ಕೂಡ ಜರುಗಲಿಲ್ಲವೆಂದರೆ ಬಸವಾದಿ ಪ್ರಮಥರ ರಾಜಕೀಯ ಚತುರತೆ, ರಾಜ್ಯ ರಕ್ಷಣೆ, ನೆರೆ ಹೊರೆಯ ರಾಜ್ಯಗಳೊಂದಿಗಿನ ಬಂಧುತ್ವ, ಇಂದಿನ ಆಡಳಿತಾಗರರಿಗೆ ಉದಾಹರಣೆಯಾಗುವಷ್ಟು ಎತ್ತರದ ನಿಲುವು, ಇಂದಿನ ಯುವಕರೇ ಮುಂದಿನ ಪ್ರಜೆಗಳೆಂಬ ಧೋರಣೆ, ಸಿದ್ಧಲಿಂಗಶಾಸ್ತ್ರಿಗಳು ತರುಣಸಂಘದ ಯುವಕರಲ್ಲಿ ಈ ಎಲ್ಲಾ ಉದಾಹರಣೆಗಳನ್ನು ನೀಡುತ್ತಾ ತರುಣ ಸಂಘದ ಪ್ರತಿಯೊಂದು ಸದಸ್ಯ ಸಮಾಜದ ಕಾರ್ಯಕರ್ತರಾಗಿ, ಧರ್ಮಬೀರುಗಳಾಗಿ ಇಂದಿಗೂ ಸಮಾಜ ಸುಧಾರಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆಂದರೆ ಅವರ ಪ್ರವಚನದಲ್ಲಿ ಎಂತಹ ಶಕ್ತಿ ಅಡಗಿತ್ತು ಎಂಬುದನ್ನು ಊಹಿಸಬಹುದಾಗಿದೆ. ಬಸವಾದಿ ಪ್ರಮಥರ ನಂತರ ಎರಡು ನೂರ ವರ್ಷಗಳ ಕಾಲ ವೀರಶೈವ ಧರ್ಮ ಮಸಕಾಗಿ ಹೋಗಿತ್ತು. ಅದನ್ನು ಮತ್ತೇ ಬೆಳಕಿಗೆ ತಂದು ವೀರಶೈವ ಧರ್ಮ, ಸಿದ್ಧಾಂತ ಹಾಗೂ ವಚನಶಾಸ್ತ್ರವನ್ನು ಪುನರ್ಜನ್ಮ ನೀಡಿದವರೇ ಎಡೆಯೂರು ಸಿದ್ಧಲಿಂಗೇಶ್ವರರು. ಅವರ ಪುರಾಣವೆಂದರೆ ಮತ್ತೇ ಹನ್ನೆರಡನೇ ಶತಕದ ಕಲ್ಯಾಣದ ಶರಣರ ಆಧ್ಯಾತ್ಮಕತೆಯನ್ನು ಕಂಡಂತೆ ಅದರಲ್ಲಿ ಮೇಳೈಸುವ ಅಷ್ಟಾವರಣ, ಪಂಚಚಾರ, ಷಟಸ್ಥಲ ಪ್ರತಿಯೊಂದು ಪದವು ನಿರಂಜನತ್ವ ಪದವನ್ನೇ ಸಾರುವ ಸತ್ವಯುತ ಸಿದ್ಧಾಂತಗಳು. ಈ ಸಿದ್ಧೇಶ್ವರ ಪುರಾಣವನ್ನು ವಿದ್ವತ್ತತೆಯಿಂದ ಭಕ್ತಿ ಭಾವಗಳನ್ನು ಮೇಳೈಸಿ ಕೇಳುಗರನ್ನು ಮಂತ್ರಮುಗ್ಧತೆಯಲ್ಲಿ ತೇಲಿಸಬಲ್ಲ ಪುರಾಣಿಕರೆಂದರೆ ಇಡೀ ಉತ್ತರಕರ್ನಾಟಕದಲ್ಲಿ ಇಬ್ಬರೇ. ಒಬ್ಬರು ಸಿದ್ಧಲಿಂಗಶಾಸ್ತ್ರಿಗಳು. ಇನ್ನೊಬ್ಬರು ಪಂಡಿತ ಪುಟ್ಟರಾಜ ಗವಾಯಿಗಳು.

### ಶಾಸ್ತ್ರಿಗಳಲ್ಲಿ ಇತಿಹಾಸದ ಪ್ರಜ್ಞೆ

ಸಿದ್ಧಲಿಂಗಶಾಸ್ತ್ರಿಗಳು ಆಧ್ಯಾತ್ಮದಷ್ಟೇ ಇತಿಹಾಸದ ಕಡೆಗೂ ಗಮನ ಹರಿಸಿದ್ದರು. ಕಾರಣ ಇತಿಹಾಸ ಭವಿಷ್ಯ ರಚನೆಗೆ ಬುನಾದಿ ಎಂಬುದು ಅವರ ನಿಲುವಾಗಿತ್ತು. ವಿಜಯನಗರದ ಚಕ್ರವರ್ತಿಯಾದ ಪ್ರೌಢದೇವರಾಯ ಸ್ವತಃ ಕವಿಯಾಗಿದ್ದ. ಹಾಗೂ ಪರಮತಗಳ ಸಹಿಷ್ಣುನಾಗಿದ್ದ. ಧೀರ

ಚಕ್ರವರ್ತಿಯಾಗಿದ್ದರೂ ಪಾಂಡಿತ್ಯದಲ್ಲಿ ಮೇರುಪರ್ವತವಾಗಿದ್ದ. ಭಕ್ತಿಯಲ್ಲಿ ಬಸವಣ್ಣನೇ ಆಗಿದ್ದ. ಆತನ ಸಾಮ್ರಾಜ್ಯದಲ್ಲಿ ಹರಿಹರ, ರಾಘವಾಂಕ, ಚಾಮರಸ, ಕುಮಾರವ್ಯಾಸ ಲಕ್ಕಣ್ಣದಂಡೇಶರಂತಹ ಮಹಾನ್ ಕವಿಪುಂಗವರಿಗೆ ಶಿವಯೋಗಿ ಶ್ರೇಷ್ಠರಿಗೆ ಆಶ್ರಯ ನೀಡಿದ್ದ. ಲಕ್ಕಣ್ಣದಂಡೇಶ ದಂಡನಾಯಕನಾಗಿದ್ದರೂ ಪ್ರಬುದ್ಧ ವೀರಶೈವ ಕವಿಯಾಗಿದ್ದ. ಹೀಗಾಗಿ ಸಿದ್ಧಲಿಂಗಶಾಸ್ತ್ರಿಗಳಿಗೆ ''ಹರಿಹರನ ರಗಳೆ'', ''ಪ್ರಭುಲಿಂಗಲೀಲೆ'', ''ಚನ್ನಬಸವ ಪುರಾಣ'', ''ಎಡೆಯೂರ ಸಿದ್ಧಲಿಂಗನ ಪುರಾಣ'' ಮನದಟ್ಟಾಗಿದ್ದವು. ವಿಜಯನಗರದ ಆಳರಸರ ಇತಿಹಾಸ ತಿಳಿದಿದ್ದ ಶಾಸ್ತ್ರಿಗಳಿಗೆ ಈ ಎಲ್ಲಾ ವಿಚಾರಗಳಿಂದ ಕೂಡಿದ ಅವರ ಪ್ರವಚನ ಎಲ್ಲರನ್ನು ಆಕರ್ಷಿಸುತ್ತಿತ್ತು; ಮಂತ್ರ ಮುಗ್ಧಗೊಳಿಸುತ್ತಿತ್ತು.

ಈ ಪ್ರೌಢದೇವರಾಯರ ಆಡಳಿತ ವೈಭವವನ್ನು ಪರ್ಶಿಯಾ ದೇಶದ ರಾಯಭಾರಿ ೧೪೪೩ರಲ್ಲಿ ವಿಜಯನಗರವನ್ನು ಕಂಡ ಅಬ್ದುಲ್ ರಜಾಕ ಹಾಗೂ ನಿಕಾಲೋ ಕೌಂಟಿ ಇವರು ವರ್ಣಿಸಿದ ವಿಜಯನಗರದ ಸಾಮ್ರಾಜ್ಯದ ವೈಭವವನ್ನು ಶ್ರೀ ಸಿದ್ಧಲಿಂಗಶಾಸ್ತ್ರಿಗಳಿಂದ ಕೇಳಬೇಕಿತ್ತು. ಕಳಚೂರಿ ಬಿಜ್ಜಳನ ಆಳ್ವಿಕೆ ಇರಬಹುದು. ಹೊಯ್ಸಳ, ಕದಂಬ, ಗಂಗರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು ಮುಂತಾದ ಅರಸರ ಇತಿಹಾಸ ಪ್ರಜ್ಞೆ ಶಾಸ್ತ್ರಿಗಳಲ್ಲಿ ಪರಿಪೂರ್ಣವಾಗಿತ್ತು. ಹಾಗೇ ಆಧುನಿಕಕ್ಕೆ ಬಂದಾಗ ಡಿ.ವಿ. ಗುಂಡಪ್ಪ, ಫ.ಗು. ಹಳಕಟ್ಟಿ, ಬೇಂದ್ರೆ, ಕುವೆಂಪು, ಅ.ನ.ಕೃ., ಮಾಸ್ತಿ, ತೀ.ನಂ.ಶ್ರೀ., ಪ್ರೊ॥ ನಂದೀಮಠ, ಎಸ್.ಎಸ್. ಬೂಸನೂರಮಠ, ಎಸ್.ಎಸ್. ಮಾಳವಾಡ್, ಆರ್.ಸಿ. ಹಿರೇಮಠ, ಚೆನ್ನಮಲ್ಲ ಮಾಸ್ತರ ಜೋಳದರಾಶಿ ದೊಡ್ಡನಗೌಡರು, ವೈ. ನಾಗೇಶಶಾಸ್ತ್ರಿಗಳು, ನಾಗಭೂಷಣಶಾಸ್ತ್ರಿಗಳು, ಡಾ. ಎಂ.ಎಂ. ಕಲಬುರ್ಗಿ, ವ್ಹಿ. ಶಿವಾನಂದ, ಡಾ. ವೀರಣ್ಣ ರಾಜೂರ ಇವರೆಲ್ಲರ ಸಾಹಿತ್ಯದ ಆಳ, ಎತ್ತರ ಅಧ್ಯಯನ ಮಾಡಿ ಪ್ರವಚನಗಳಲ್ಲಿ ಈ ಎಲ್ಲಾ ಮಹಾನ್ ಸಾಹಿತಿಗಳ ಕೃತಿಗಳಲ್ಲಿ ಬರುವ ಸಾರವನ್ನು ಕೇಳುಗರಿಗೆ ಮತ್ತೆ ಮತ್ತೆ ಕೇಳುವಂತೆ ಮನಮೋಹಕವಾಗಿ ನಿರೂಪಿಸುತ್ತಿದ್ದರು.

ಅಂದಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಬಿ. ಶಿವಮೂರ್ತಿಶಾಸ್ತ್ರಿಗಳ ಒಡನಾಟ ಅವರನ್ನು ಸಂಶೋಧನೆಯತ್ತ ಕರೆದೊಯ್ಯಿತು. ಡಾ॥ ಸಾ.ಸಿ. ಮರುಳಯ್ಯನವರು ಸಿದ್ಧಲಿಂಗ ಶಾಸ್ತ್ರಿಗಳನ್ನು ''ಅಣ್ಣ'' ಎಂದೇ ಕರೆಯುತ್ತಿದ್ದರು. ಸಿದ್ಧಲಿಂಗಶಾಸ್ತ್ರಿಗಳು ಬೆಂಗಳೂರಿಗೆ ಬಂದರೆ ಮಗಳು ಅನ್ನಪೂರ್ಣಳ ಮನೆಗೆ ಸಾಗಿ ಬರುತ್ತಿದ್ದರು. ಮರುಳಯ್ಯನವರು ಶಾಸ್ತ್ರಿಗಳನ್ನು ಊಟಕ್ಕೆ ಆಹ್ವಾನಿಸಿದರೆ ''ನಿನ್ನ ಮಾತು ಕಲ್ಲುಸಕ್ಕರೆಗಿಂತ ರುಚಿ. ನಿಮ್ಮ ಮನೆಯ ಪುಸ್ತಕಗಳೇ ಮೃಷ್ಟಾನ್ನಕ್ಕಿಂತ ಸಿಹಿ. ಅಲ್ಲಿ ಮನೆಗೆ ಬಂದು ಏನು ಊಟ ಮಾಡುವುದು ಮರುಳಯ್ಯ'' ಎನ್ನುತ್ತಿದ್ದರೆ ಇವರ ಮಾತು ಕೇಳಿ ಮರುಳಯ್ಯನವರೇ ಆಶ್ಚರ್ಯ ಪಡುತ್ತಿದ್ದರು. ಶಾಸ್ತ್ರಿಗಳು ಅಗಲಿದ

ನಂತರ ಮರುಳಯ್ಯನವರು ಸ್ವಂತ ಅಣ್ಣನನ್ನು ಕಳೆದುಕೊಂಡವರಂತೆ ಶೋಕತಪ್ತರಾಗಿದ್ದರು. ಶಾಸ್ತ್ರಿಗಳಿಗೆ ಆಧ್ಯಾತ್ಮ ಸಾಹಿತ್ಯದ ಅಧ್ಯಯನವೇ ತಪಸ್ಸಾಗಿತ್ತು. ಅವರ ಅಧ್ಯಯನ ಹಿಮಾಲಯದಷ್ಟು ಎತ್ತರವಾದರೆ ಸಾಮಾಜಿಕ ತುಮುಲ ಉಪಾದಿಯಾಗಿತ್ತು.

ಸಹೃದಯರ ಹೃದಯವನ್ನು ಮುಟ್ಟಿ ಇಂತಹ ರಸಸಮಾಧಿಯನ್ನು ನಿರ್ಮಿಸಬಲ್ಲ ಸಾಹಿತ್ಯವೇ ಮಹಾ ಸಾಹಿತ್ಯ, ಶಾಶ್ವತ ಸಾಹಿತ್ಯ. ಅದಕ್ಕೆ ದೇಶ ಭಾಷೆಯ ಹದ್ದು, ಜಾತಿ ಜನಾಂಗದ ಕಟ್ಟು ನಿಟ್ಟಿಲ್ಲವೆಂದು ಹೇಳುತ್ತಾ ಶಾಸ್ತ್ರಿಗಳು ಡಾಂಟೆ, ವರ್ಜಿಲ್, ಷೇಕ್ಸ್‌ಪೀಯರ್, ಮಿಲ್ಟನ್, ಮೊಪಿಸಾ, ಪಾಲರ್ಟೆ, ಟಾಲ್‌ಸ್ಟಾಯ್, ಮಾರ್ಕ್ಸ್, ವಾಲ್ಮೀಕಿ, ಕಾಳಿದಾಸ, ಪಂಪ, ಹರಿಹರ, ಕುವೆಂಪು, ಬೇಂದ್ರೆ ಇವರ ಜಾತಿ ಯಾವುದು? ಇವರ ದೇಶ ಇಂಗ್ಲೆಂಡ್, ಪ್ರಾನ್ಸ್, ಮೊದಲಾದುವೇ ? ಇವರ ಭಾಷೆ ಕನ್ನಡ, ಸಂಸ್ಕೃತ, ಇಂಗ್ಲೀಷ್, ಪ್ರೆಂಚ್, ಎನ್ನಬಹುದೇ ? ಅವರ ಮಹಾಕಾವ್ಯರಸಸಾಗರ ಮಾನವನ ಸಣ್ಣ ಮನಸ್ಸಿನ ಬಂಡೆಯನ್ನೆಲ್ಲಾ ಲೀಲಾಜಾಲವಾಗಿ ಕಿತ್ತೊಗೆದು ಮಾನವನ ಭಾವದ ಮುಚ್ಚಳವನ್ನು ತೆಗೆದು ಅಲ್ಲಿ ಮರೆಯಾಗಿರುವ ಪಾರಮಾರ್ಥಗಳಾದ ಕಾವ್ಯರಸದ ಮಹಾಸಾಗರವನ್ನು ಹುಟ್ಟಿಸಿ ಅವರೊಡನೆ ಸಮರಸವಾಗುವುದೇ ಮಹಾಕಾವ್ಯದ ಸದುದ್ದೇಶ. ಇವರೆಲ್ಲ ಹಿಂದಿನ ಸಾಹಿತ್ಯದ ಸತ್ವವನ್ನು ಹೀರಿ ಮತ್ತೊಂದು ಕೈಯಿಂದ ನಿತ್ಯ ನೂತನ ಸಾಹಿತ್ಯ ಹುಟ್ಟಿಸಿದವರು. ಇದು ಸಾಹಿತ್ಯ ಕ್ಷೇತ್ರದಲ್ಲಿಯೂ ಸಿದ್ಧಲಿಂಗಶಾಸ್ತ್ರಿಗಳ ಸಂಶೋಧನೆಯ ಆಳದ ನಿಲುವು ಎಷ್ಟೆಂದು ತೋರುತ್ತಿತ್ತು. ಅವರ ಅಗಾಧ ಅಧ್ಯಯನದ ಆಳ ಅವರನ್ನು ಅಗಲಿದ ನಂತರ ನಮ್ಮೆಲ್ಲರಿಗೂ ಅವರೊಬ್ಬ ಪ್ರಖಾಂಡ ಪಂಡಿತನೆಂಬುವ ಅರಿವು ಈಗ ಉಂಟಾಗುತ್ತಿದೆ. ಇವರನ್ನು ಉಪಯೋಗಿಸಿಕೊಳ್ಳಬೇಕಾಗಿದ್ದ ಅವಶ್ಯಕತೆ ಗದುಗಿನ ಮಠಕ್ಕೆ ಇತ್ತು. ಆದರೆ ಅಲ್ಲಿಯ ಕೆಲ ಸ್ವಾರ್ಥ ಹಿತಾಶಕ್ತಿಗಳ ರಾಜಕೀಯ, ಹಾಗೂ ಸ್ವತಃ ಮಠದ ಪದಾಧಿಕಾರಿಗಳ ನಿರ್ಲಕ್ಷ್ಯ, ಅವರನ್ನು ಸದುಪಯೋಗಪಡಿಸಿಕೊಳ್ಳಲೇ ಇಲ್ಲ. ಇದೇನು ನಮ್ಮ ಮನೆಗೆ ಹಾನಿಯಲ್ಲ. ಹಾನಿಯಾದದ್ದು ಗದುಗಿನ ತೋಂಟದಾರ್ಯ ಮಠಕ್ಕೆ. ಎಡೆಯೂರ ಸಿದ್ಧಲಿಂಗನ ಮಠಕ್ಕೆ. ಇಂದು ಈ ಮಠದ ಇತಿಹಾಸವನ್ನು ತರುವ ಶಕ್ತಿ ಸಿದ್ಧಲಿಂಗಶಾಸ್ತ್ರಿಗಳಿಗೆ ಮಾತ್ರ ಇತ್ತು. ಈ ಮಾತನ್ನು ಸ್ವತಃ ಗದುಗಿನ ಜಗದ್ಗುರುಗಳೇ ಒಪ್ಪುತ್ತಾರೆ.

### ಜನತೆಯ ಮೇಲೆ ಶಾಸ್ತ್ರಿಗಳ ಪ್ರಭಾವ

೧. ಒಮ್ಮೆ ಸಂಡೂರಿನಲ್ಲಿ ಸಿದ್ಧಲಿಂಗಶಾಸ್ತ್ರಿಗಳ ಪ್ರವಚನ ನಡೆದಾಗ ಆತ್ಮಧ್ಯಾನ ಕುರಿತು ಮೈಮರೆವಂತೆ ಶಾಸ್ತ್ರಿಗಳು ವಿವರಿಸುತ್ತಿದ್ದರು. ''ಯಾವುದು ನಾಮ, ರೂಪ, ಕ್ರಿಯೆ, ಅಲ್ಲವೋ; ಆದಿ, ಅನಾದಿ, ಇಲ್ಲದ ವಸ್ತು

ಪ್ರತಿಯೊಬ್ಬರಲ್ಲಿದೆ. ಈತನಿಲ್ಲದೇ ನಿನ್ನ ಯಾವ ಕ್ರಿಯ ನಡೆಯಲಾರದು. ದೇವರು ಅಣುರೇಣು ತೃಣಕಾಷ್ಟದಲ್ಲಿದ್ದಾನೆ. ನಿನ್ನ ನುಡಿ, ನಡೆ, ಉಸಿರು, ಹಸಿವು, ಬುದ್ಧಿ ಎಲ್ಲಾ ಕ್ರಿಯೆಗೂ ಆತನೇ ಕಾರಣ. ಈ ಶರೀರ ಆತ್ಮನಿರುವ ಗೂಡು. ಆತ್ಮ ಹೋದ ? ಶರೀರಕ್ಕೆ ಹೋಗುವ, ಶರೀರ ಮೋಹ ಬೇಡ, ಆತ್ಮನನ್ನು ತಿಳಿ, ಅಲ್ಲಮ, ಅಕ್ಕ, ಬಸವ, ಚನ್ನಬಸವ ಇದನ್ನೆ ಹೇಳಲು ಪ್ರಯತ್ನಿಸಿದರು. ಆ ಆತ್ಮ ಗಂಡೂ ಅಲ್ಲ ಹೆಣ್ಣು ಅಲ್ಲ. ಅಗೋಚರ, ಅಪ್ರಮಾಣವೆಂದು ಬಸವಾದಿಗಳೇ ಹೇಳಿದ್ದಾರೆ. ಹೀಗೆ ಪ್ರವಚನ ನಡೆದಿತ್ತು. ಮಧ್ಯದಲ್ಲಿ ಯಾವನೋ ''ಆತ್ಮ'' ಅಂದ್ರೆ, ಏನು ? ಎಂದು ಅನವಶ್ಯವಾಗಿ ವ್ಯಂಗ್ಯವಾಗಿ ಪ್ರಶ್ನೆ ಕೇಳಿದ. ಆಗ ಶಾಸ್ತ್ರಿಗಳ ಮುಖ ರೌದ್ರವಾಯ್ತು ''ಏ, ಪಾಪಿ ತಮಾಷೆಗೆ ಪ್ರಶ್ನೆ ಕೇಳಬೇಡ, ನಿಜವಾಗಿ ಅರಿಯಲೇ ಬೇಕಿದ್ದರೆ ಬೆಳಿಗ್ಗೆ ಪ್ರಾರ್ಥಕಾಲಃದ ಘಟನೆಯನ್ನು ತಿಳಿಸಿ ಹೇಳುತ್ತೇನೆ. ಆಧ್ಯಾತ್ಮಿಕ ವಿಷಯ ತಮಾಷೆ ವಸ್ತುವಲ್ಲ. ಗಂಭೀರ ಅದು.'' ಕೂಡಲ ಸಂಗನ ಶರಣರನ್ನ ಹೀಗಳೆದರೆ ಸುಡುವ ಸುಣ್ಣವನ್ನು ಮಡಿಲಲ್ಲಿ ಕಟ್ಟಿಕೊಂಡಂತೆ'' ಎಂದು ಹೇಳಿದಾಗ ಇಡೀ ಸಭೆ ತಣ್ಣಗಾಗಿ, ಗಾಂಭೀರ್ಯವಾಯಿತು. ಮಾರನೇ ದಿವಸ ಆ ವ್ಯಕ್ತಿ ನಾಪತ್ತೆ.

೨. ಶಾಸ್ತ್ರಿಗಳು ಸದಾ ಶಾಸ್ತ್ರ ಚಿಂತನೆಯಲ್ಲೇ ಇರುತ್ತಿದ್ದರು. ಓದಲು ಕುಳಿತರೆ ಪಕ್ಕದಲ್ಲಿ ಏನಾಗುತ್ತೆ ಗೊತ್ತಾಗುತ್ತಿರಲಿಲ್ಲ. ಒಮ್ಮೆ ಬೂದಿಹಾಳದಲ್ಲಿ ಅಂದಿನ್ನೂ ಬಾವಿ ಪಂಪ್ ಸೆಟ್ ಓಡುತ್ತಿತ್ತು. ನೀರು ತೋಟಕ್ಕೆ ಸಾಗಿಸಲು ಕಲ್ಲಿನ ಹಂಡೆ ಅಡ್ಡ ಕಟ್ಟಿದೆ. ಶಾಸ್ತ್ರಿಗಳ ಪಕ್ಕದ ಚಿಕ್ಕ ಗಿಡದ ಕೆಳಗೆ ಕುಳಿತು ಓದುತ್ತಿದ್ದರೆ, ಕರಿಬಸಯ್ಯನ ಮಗ ಪ್ರಶಾಂತ ಮೊಮ್ಮಗ ಆಟ ಆಡುತ್ತಾ ಆ ನೀರಿನ ಹಂಡೆಯಲ್ಲಿ ಬಿದ್ದಿದ್ದನಂತೆ. ಶಾಸ್ತ್ರಿಗಳಿಗೆ ಗೊತ್ತೇ ಇಲ್ಲ. ಜಕ್ಕಲಿ ದಾರಿಯಲ್ಲಿ ಹೋಗುವವರು ನೋಡಿ ಮಗುವನ್ನು ನೀರಲ್ಲಿ ಮುಳುಗುತ್ತಿದ್ದುದನ್ನು ನೋಡಿ ಎತ್ತಿ, ಆರೈಕೆ ಮಾಡುತ್ತಿದ್ದರು. ಸ್ವಲ್ಪ ಹೊತ್ತಾಗಿದ್ದರೆ ಪ್ರಾಣಾಂತಿಕವಾಗುತ್ತಿತ್ತು. ಆದರೂ ಶಾಸ್ತ್ರಿಗಳಿಗೆ ಗೊತ್ತಿರಲಿಲ್ಲ. ಅಷ್ಟು ಶಾಸ್ತ್ರಿಗಳು ಮಗ್ನತೆ ತಾತ್ವಿಕತೆ, ಓದಿನಲ್ಲಿ ತನ್ಮಯರಾಗುತ್ತಿದ್ದರು.

೩. ಎಡೆಯೂರೇಶನ ಪರಂಪರೆ ಕುರಿತು ಸಂಶೋಧನೆ ಮಾಡಲು ಅಂದಿನ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾದ ಬೆಂಗಳೂರಿನ ಪಂಡಿತ ಶಿವಮೂರ್ತಿ ಶಾಸ್ತ್ರಿಗಳು ಸಂಶೋಧಕರಾಗಿ ೧೯೫೦–೫೧ರಲ್ಲಿ ಬಂದಿದ್ದರು. ಅವರಿಗೆ ಡಂಬಳಕ್ಕೆ ಕರೆತಂದು ''ಅರ್ಧನಾರೀಶನ ಸಂಪೂರ್ಣ ಇತಿಹಾಸವನ್ನು ಆಯಾ ಗ್ರಂಥಗಳಲ್ಲಿ ಉಲ್ಲೇಖವಾಗಿರುವುದನ್ನ ಹೇಳಿದ್ದನ್ನು ಕೇಳಿದ ಶಿವಮೂರ್ತಿಶಾಸ್ತ್ರಿಗಳಿಗೆ ಸಿದ್ಧಲಿಂಗಯ್ಯನವರ ಪಾಂಡಿತ್ಯದ ಬಗೆಗೆ ಆಶ್ಚರ್ಯವಾಯಿತು. ಅವರ ಮಠದ ಬಗೆಗಿನ ಅಧ್ಯಯನ ನೋಡಿ ಸಂತೋಷಪಟ್ಟರು. ನಂತರ ಅರ್ಧನಾರೀಶ್ವರರ ಕುರಿತ ಸಂಶೋಧನೆಯಲ್ಲಿ ಸಿದ್ಧಲಿಂಗಯ್ಯಶಾಸ್ತ್ರಿಗಳು ಅನೇಕ ಸಲಹೆ ಸೂಚನೆಗಳನ್ನು ಸೂಚಿಸಿದರು.

೪. ಊಟ, ಬಟ್ಟೆ, ವಿಶ್ರಾಂತಿಗೆ ಒಂದು ದಿನವೂ ಬಯಸಲಿಲ್ಲ. ಮಕ್ಕಳು ದೊಡ್ಡ ದೊಡ್ಡ ಹುದ್ದೆಯಲ್ಲಿದ್ದರೂ ಐಷರಾಮಿ ಜೀವನ ಬಯಸದೇ ಸರಳವಾಗಿಯೇ ಬದುಕಿದರು. ಇವರು ಹೇಳುವದನ್ನು ಕೇಳುವವರು ಸಿಕ್ಕರೆ ಅದೇ ಅಮೂಲ್ಯ ಸಂಭಾವನೆ ಎಂದು ಭಾವಿಸಿದರು. ಒಂದು ಟ್ರಂಕ್, ಒಂದು ಕೈ ಚೀಲ ಅವರ ಸಂಗಾತಿ. ಟ್ರಂಕನಲ್ಲಿ ಮಡಿಬಟ್ಟೆ, ಕೈ ಚೀಲ ತುಂಬಾ ಬರೀ ಆಧ್ಯಾತ್ಮಿಕ ಪುಸ್ತಕಗಳು ಮಾತ್ರ ತುಂಬಿರುತ್ತಿದ್ದರು. ಗದುಗಿನ ಮಠದ ಗದ್ದುಗೆಯಲ್ಲೇ ವಾಸ. ಯಾರಾದರು ಇಲ್ಲಿ ಏಕೆ ಎಂದು ಕೇಳಿದರೆ ಸಿದ್ಧಲಿಂಗನ ವಾಸವೆಲ್ಲಿದೆಯೋ ಅಲ್ಲೇ ನನ್ನ ವಾಸವೆಂದು ಹೇಳುತ್ತಿದ್ದರು.

೫. ಗದುಗಿನಿಂದ ಬೂದಿಹಾಳಕ್ಕೆ ಆಗಾಗ ಬಂದರೆ, ಬೆಳಿಗ್ಗೆ ಜಕ್ಕಲಿಯ ಪಾಟೀಲ ಬಸವನಗೌಡರ ಮನೆಗೆ ಹೋಗಿ ಬರುತ್ತಿದ್ದರು. ಅಲ್ಲಿ ಹೊಸಮನಿ ಗುರುಗಳು ಮತ್ತು ಇತರರ ಜೊತೆ ಗೌಡರ ಮನೆಯಲ್ಲೇ ಆಧ್ಯಾತ್ಮಿಕ ಚರ್ಚೆ ಮಾಡುತ್ತಿದ್ದರು. ಶ್ರೀಮಂತ ಬಸನಗೌಡ್ರು ಶಾಸ್ತ್ರಿಗಳ ಪ್ರಭಾವಕ್ಕೆ ಒಳಗಾಗಿ ಸರಳ ಜೀವನದತ್ತ ಸಾಗಿ ಸಿದ್ಧಲಿಂಗನಲ್ಲಿ ಅನನ್ಯ ಭಕ್ತಿ ಮೆರೆದರು. ಬಸನಗೌಡ್ರು ಗದುಗಿನ ಜಗದ್ಗುರುಗಳನ್ನು ಜಕ್ಕಲಿಗೆ ಭಿನ್ನಿವಿಸಿ, ಶಿವಾನುಭವ ಕಾರ್ಯಕ್ರಮ ನಡೆಸಿದಾಗ ಶಾಸ್ತ್ರಿಗಳಿಗೆ ತೃಪ್ತಿಯೇ ತೃಪ್ತಿ. ಕಡಗದ ಮನೆತನ ಜಕ್ಕಲಿಯಲ್ಲಿ ಪ್ರಸಿದ್ಧ ಮನೆತನ. ಅಯ್ಯಪ್ಪ ಕಡಗದ ಅವರೂ ಸ್ವಾತಂತ್ರ್ಯಯೋಧರು. ಇವರು ದೊಡ್ಡಮೇಟಿಯವರ ಆತ್ಮೀಯ ಸ್ನೇಹಿತರು. ಈ ಇರ್ವರು ಜಕ್ಕಲಿಯ ಎರಡು ಕಣ್ಣುಗಳಿದ್ದಂತೆ. ಶಾಸ್ತ್ರಿಗಳ ಆಧ್ಯಾತ್ಮಿಕಕ್ಕೆ ಮಾರು ಹೋದವರು. ಮುಂದೆ ಅವರ ಮಕ್ಕಳು ತೋಟಪ್ಪ (ಕಾಟನ್ ಜಿನ್ ಮಾಲೀಕರು) ಅವರ ಸಹೋದರ ಗದಗ ಹಾಗೂ ಎಡೆಯೂರ ಮಠದ ದಾನಿಗಳಾಗಿ, ಸೇವಾಕರ್ತರಾಗಿ, ಭಕ್ತರಾಗುವಂತೆ ಪರಿವರ್ತಿಸುವಲ್ಲಿ ಸಿದ್ಧಲಿಂಗಶಾಸ್ತ್ರಿಗಳ ಪ್ರೇರಣೆಯೆಂದೇ ಈಗಲೂ ಭಕ್ತಿಪೂರ್ವಕ ಗೌರವ ಸಲ್ಲಿಸುತ್ತಿದ್ದಾರೆ. ಅವರೊಡನೆ ಡಾ|| ಆದಿ, ಹಿರೇಮಠದವರು ಅಣ್ಣಯ್ಯ-ತಮ್ಮಯ್ಯ ಶರಣರ ಮನೆತನ, ಹೀಗೆ ಶಾಸ್ತ್ರಿಗಳಿಂದ ಪ್ರೇರಿತರಾದವರ ಬಳಗ ಜಕ್ಕಲಿ ತುಂಬಾ ಇದ್ದಾರೆ.

೬. ಮಾರನಬಸರಿ ಸಿದ್ಧಯ್ಯನವರು ಮಹಾ ತಪಸ್ವಿಯೂ ಹೌದು. ಆರೂಢರೂ ಹೌದು. ಶಾಸ್ತ್ರಿಗಳೆಂದರೆ ಅಲ್ಲಮ-ಬಸವನ ಅನುರಾಗ, ಬೆಲ್ಲದ ಮನೆತನದವರೂ ಸಹ ಶಾಸ್ತ್ರಿಗಳೊಡನೆ ಒಳ್ಳೆಯ ಒಡನಾಟ ಮತ್ತು ಮುಸ್ಲಿಂನಾದರೂ ದರ್ಗಾಹುಸೇನನು ಶಾಸ್ತ್ರಿಗಳಲ್ಲಿ ನಿಜಗುಣರ ಶಾಸ್ತ್ರ, ಶರಣರ ವಚನಶಾಸ್ತ್ರ ಹೇಳಿಸಿಕೊಳ್ಳುತ್ತಿದ್ದರು. ಸಿದ್ಧಲಿಂಗಯ್ಯಶಾಸ್ತ್ರಿಗಳ ಸಮಾಧಿ ದಿನದಂದು ಶಾಸ್ತ್ರಿಗಳ ಹೆಸರಿನ ಟ್ರಸ್ಟ್ ಸ್ಥಾಪಿಸಿದಾಗ ಮಾರನಬಸರಿ ಭಕ್ತರೊಡನೆ ನೀಡಿದ ಮೊದಲ ದಾನಿ. ಜಾತಿ ಬೇರೆ ಆದರೂ ತತ್ವ ಅಧ್ಯಯನಕ್ಕೆ ಯಾರಾದರೇನು ? ಅವು ಮಾನವನಾಗಿ ಮಾಡಲು ರೂಪಿಸಿದ ಮೆಟ್ಟಿಲು ಹಿಂದೂ ಮುಸ್ಲಿಂ ಐಕ್ಯತೆ ಮೆರೆದ ಮಾರನಬಸರಿಯ ಭಕ್ತ.

೭. ನಾವಿನ್ನೂ ಚಿಕ್ಕವರು, ಶಹಪೂರಪೇಟ ಅಜ್ಜಿ ಪಾರ್ವತಮ್ಮನ ಮನೆಯಲ್ಲಿ ಬಾಡಿಗೆಯಿದ್ದೆವು. ನಮ್ಮ ದೊಡ್ಡಮ್ಮ ದಾವಣಗೆರೆ, ನೀಲಮ್ಮನಿಗೆ ಗಾಳಿಶಕ ಅಂದರೆ ಭೂತ ಹಿಡಿದುಕೊಂಡಿತ್ತು. ಅಮವಾಸ್ಯೆ ಬಂದಾಗ ಅವಳ ಚೀರಾಟ, ಓಡಾಟಗಳಿಂದ ೪-೫ ಜನ ಗಂಡಸರಿಗೂ ಹಿಡಿಯಲಾಗುತ್ತಿರಲಿಲ್ಲ. ಕೇಕೆ, ಅಳು, ನಗು, ಕುಣಿದಾಟ, ತಲೆ, ಸುತ್ತಿಕೊಳ್ಳುವುದು, ಜಡೆ ಕಿತ್ತುಕೊಳ್ಳುವುದು ಒಂದೇ, ಎರಡೇ ಇಡೀ ಓಣಿಯ ಜನ ಅಜ್ಜಿಮನೆ ಸೇರಿತ್ತು. ಆಗ ಅಳಿಯ ಸಿದ್ಧಲಿಂಗಯ್ಯನವರು ಮಠದಲ್ಲಿದ್ದರು. ದೊಡ್ಡಮ್ಮ ಈ ರೀತಿ ನಡೆದಿದ್ದು ಮೊದಲೇನಲ್ಲ. ಆದರೆ ಈ ಬಾರಿ ಮಾತ್ರ ಜಾಸ್ತಿಯಾಗಿತ್ತು. ಸಿದ್ಧಲಿಂಗಯ್ಯಶಾಸ್ತ್ರಿಗಳು ಬಂದವರೆ ಸ್ನಾನಮಾಡಿ, ಮನೆಯಲ್ಲಿ ಶ್ರೀ ಸಿದ್ಧಲಿಂಗನ ಪಾದುಕೆ (ಸಿದ್ಧೇಶ್ವರ ಜಗದ್ಗುರುಗಳೇ ಮೆಟ್ಟಿದವು) ಅವುಗಳನ್ನು ತೊಳೆದು ಭಸ್ಮ ಧರಿಸಿ, ಆ ಪಾದುಕಾ ಉದಕವನ್ನು ದೊಡ್ಡಮ್ಮನ ಮೇಲೆ ಸಿಂಪಡಿಸಿದರು. ತಕ್ಷಣವೇ ದೊಡ್ಡಮ್ಮ ''ಸಿದ್ಧಲಿಂಗ ಹೊಡಿಬ್ಯಾಡ, ಹೊಡಿಬ್ಯಾಡ ಹೋಗ್ತೇನೋ, ಹೋಗ್ತೇನೆ, ಗುರ್ತು ತಗೋ ಹುಣಸೆಮರದ ಕೊಂಬೆ ಬೀಳ್ತೈತೆ. ನಾ ಮತ್ತ ಬರುದಿಲ್ಲ ಅಂತ ಅಂದು ಹೋಗಿದ್ದು ಭೂತಮತ್ತೆ ಪಿಕ್ಲಾಟ ಬರಲಿಲ್ಲ. ಇದು ಶಾಸ್ತ್ರಿಗಳು ಶ್ರೀಮಠದ ಪೂಜ್ಯರಲ್ಲಿಟ್ಟ ನಿಷ್ಠೆ ಆಧ್ಯಾತ್ಮಿಕ ಶಕ್ತಿಗೆ ಉದಾಹರಣೆ.

೮. ಬಳಗಾನೂರಲ್ಲಿ ಯಲ್ಲಪ್ಪರೆಡ್ಡಿ ಕರಡ್ಡಿ ಅವರು ಶ್ರೀಮಂತರು. ೫-೬ ಹಗೆ ಜೋಳ, ೫-೬ ಹಗೆ ಗೋದಿ ತುಂಬಿರುತ್ತಿತ್ತು. ೧೯೬೦ರಲ್ಲೇ ೭-೮ ಲಕ್ಷ ಉತ್ಪನ್ನವಿದ್ದರು ತುಂಬಾ ಜಿಪುಣ. ನಮ್ಮೂರ ಕರಮಡಿ ಮನೆತನದ ಬೀಗರು ಬಸಮ್ಮನನ್ನು ಅವರ ಮಗ ಚನ್ನಬಸಪ್ಪನಿಗೆ ಕೊಟ್ಟಿತ್ತು. ಎರಡನೇ ಮಗ ಶಿವಲಿಂಗಪ್ಪ ಈತ ಒಂದು ಪೈಸೆ ಖರ್ಚು ಮಾಡುತ್ತಿದ್ದಿಲ್ಲ. ಮನೆಯಲ್ಲಿ ತರಕಾರಿ ತಂದರೆ ಖರ್ಚಾಗುತ್ತೆ ಅನ್ನುತ್ತಿದ್ದ. ಅಷ್ಟು ಜಿಪುಣ ಅವರ ಮನೆಯಲ್ಲಿ ಬಂಗಾರ ೮೦-೯೦ ತೊಲೆ ತೂಗುವಷ್ಟು ಒಡವೆಗಳಿದ್ದವು. ಅಂದಿನ ಕಾಲದಲ್ಲಿ ತಕ್ಷಣ ಬೇಕೆಂದರೆ ೮-೧೦ ಲಕ್ಷ ಕೊಡುವಷ್ಟು ಶ್ರೀಮಂತಿಕೆ ಇತ್ತು. ಅಣ್ಣನಿಗೆ ಓದಿಗೆ ತೊಂದರೆ ಆದಾಗ, ಅಪ್ಪಾಜಿ ನಮ್ಮ ಹೊಲ ಲಾವಣಿ ಹಾಕಿ ೫೦೦೦/- ರೂಪಾಯಿ ಸಾಲ ಪಡೆದಿದ್ದರು. ಆದರೆ ಅಪ್ಪಾಜಿ ಮೇಲೆ ಅವರದು ಜಂಗಮಪ್ರೇಮ. ಹೀಗಾಗಿ ಯಲ್ಲಪ್ಪರೆಡ್ಡಿ ಶಾಸ್ತ್ರಿಗಳ ಹೊಲದ ವಿಷಯಕ್ಕೆ ಬರಲಿಲ್ಲ. ಮುಂದೆ ಅಣ್ಣ ತಹಸೀಲ್ದಾರ್ ಆದರು. ಅವರಸಾಲ ತೀರಿಸಿ ಹೊಲ ಬಿಡಿಸಿಕೊಂಡರು. ಒಂದುದಿನ ಶಾಸ್ತ್ರಿಗಳು ಶಿವಲಿಂಗಪ್ಪನವರಿಗೆ ಮಾತನಾಡಿಸಲು ಹೋದಾಗ ''ಕೊಟ್ಟಿದ್ದು ತನಗೆ ಬಚ್ಚಿಟ್ಟಿದ್ದು ಪರರಿಗೆ'' ಅಂತಾ ಶರಣರೇ ಹೇಳಿದ್ದಾರೆ. ಇಷ್ಟೊಂದು ಲಕ್ಷ್ಮೀ ಕಾಲ ಮುರಕೊಂಡು ಬಿದ್ದಾಳ. ಊರಾಗ ಸಾಕ್ಷಾತ್ ಶಿವನೇ ಚಿಕ್ಕೇನಕೊಪ್ಪದ ಶರಣರು ಬಂದಾರ. ಮಠಕ್ಕೆ ದಾನ ಮಾಡ್ರಿ, ನಿಮಗೆ ಕೊಟ್ಟ ಆ ಶಿವನ ಋಣ ತೀರಿಸಿರಿ ಅಂದಿದ್ರು'', ಶಾಸ್ತ್ರಿಗಳು ಯಲ್ಲರೆಡ್ಡಪ್ಪನಿಗೆ ಮುಂದೆ ಕೆಲ ವರ್ಷ ಕಳೆದ ಮೇಲೆ ಅವರಿಗೆ ಗುದದ್ವಾರದಲ್ಲಿ ಗಂಟು ಎದ್ದಿತ್ತು. ಎಷ್ಟು ಖರ್ಚು ಮಾಡಿದರೂ ಉಲ್ಬಣಿಸುತ್ತಲೇ ಇತ್ತು. ಶಾಸ್ತ್ರಿಗಳು

ಹಿಂದೆ ಹೇಳಿದ ಮಾತು ನೆನಪಾಗಿ ಶಾಸ್ತ್ರಿಗಳನ್ನು ಕರೆಸಿಕೊಂಡು "ಅಜ್ಜಾರ (ನಮಗೆಲ್ಲಾ ಊರಲ್ಲಿ ಅಜ್ಜಾರು ಅಂತಲೇ ಜನ ಕರೆಯುವರು) ಚಿಕ್ಕೇನಕೊಪ್ಪದ ಶರಣರಿಗೆ ಊರು ಮುಂದಿನ ಹೊಲ ಮಠಕಟ್ಟಿಸಿ ಕೊಡ್ತೇನಿ. ೧ ಲಕ್ಷ ಖರ್ಚಿಗೆ ಕೊಡ್ತೇನಿ. ನಿಂತ್ಕೊಂಡು ಅಲ್ಲೇನ ಮಾಡ್ತಿರಿ ಮಾಡ್ರಿ ಅಂದ್ರು" ಚಿಕ್ಕೇನಕೊಪ್ಪದ ಶರಣರಿಗೆ ಈ ವಿಷಯ ತಿಳಿದಾಗ ಬೇಡವೆಂದರು. ಅದರ ಅವಶ್ಯಕತೆ ಇತ್ತು. ನಿಜ ಈಗ ಬಳಗಾನೂರ, ಕದಡಿ, ಹೊಂಬಳ ಸುತ್ತಲಿನ ಎಲ್ಲಾ ಹಳ್ಳಿಗಳ ಭಕ್ತರು ಭೂದಾನ ಮಾಡಿಕೊಂಡು ದೊಡ್ಡ ಮಠವನೇ ಕಟ್ಟಿ ದಾಸೋಹ, ಶಾಸ್ತ್ರ, ಪ್ರವಚನ ನಡೆಸುತ್ತಿದ್ದಾರೆ.

೯. ಅಣ್ಣಿಗೇರಿಯ ದೇಶಪಾಂಡೆ, ದೇಸಾಯಿಗೌಡರದು ಶ್ರೀಮಂತ ಮನೆತನಗಳು. ಒಣಮೆಣಸಿನಕಾಯಿ ಬೆಳೆಯುವಲ್ಲಿ ನಿಸ್ಸಿಮರು. ಆದರೆ ಇವರಿಗೆ ಆಧ್ಯಾತ್ಮಿಕದ ಗಂಧ ಗಾಳಿಯೇ ಗೊತ್ತಿಲ್ಲ. ಅಲ್ಲಿ ಸಿದ್ಧಲಿಂಗೇಶ್ವರರ ೧೦ ನೇ ಪೀಠಾಧಿಪತಿ ಉರಿತೋಂಟದಾರ್ಯರು. ಕುದಿಕುದಿ ನೀರನ್ನೇ ಸ್ನಾನ ಮಾಡುತ್ತಿದ್ದರಿಂದ ಯೋಗಶಕ್ತಿ ಬಲ್ಲವರಿದ್ದುದರಿಂದ ಅವರಿಗೆ ಉರಿ ತೋಂಟದಾರ್ಯರೆಂದೇ ಕರೆಯುತ್ತಿದ್ದರು. ಶ್ರೀ ಜಗದ್ಗುರುಗಳ ಮಠ ಹಾನಗಲ್ ಶ್ರೀಗಳ ಯೋಗಗುರುಗಳಾದ ಯಳಂದೂರ ಬಸವಲಿಂಗಸ್ವಾಮಿಗಳ ಗದ್ದುಗೆ ಎದುರಿಗೇ ಇದೆ. ಜಗದ್ಗುರುಗಳು ಭೇಟಿ ನೀಡಿದಾಗ; ಊರವರ ನಿಷ್ಟೆ ಕಂಡು ಅಲ್ಲಿ ಸಂಗಪ್ಪ ಹರ್ಲಾಪುರ, ಹಾಲಪ್ಪ ತುರ್ಕಾಣಿ, ಮುತ್ತು ಉಳ್ಳಾಗಡ್ಡಿ ವ್ಯಾಪಾರಸ್ಥರೆಲ್ಲಾರನ್ನು ಕರೆಸಿ ಸಿದ್ಧಲಿಂಗೇಶ್ವರ ಪುರಾಣ "ಬಸವಪುರಾಣ" ಶ್ರಾವಣ, ಕಾರ್ತೀಕದಲ್ಲಿ ಶಿವಾನುಭವ ಪ್ರಾರಂಭಿಸಿ ಭಕ್ತರಲ್ಲಿ ನೀತಿ, ಸತ್ಯ, ಧರ್ಮದಿಂದ ಇರುವಂತೆ ಶಾಸ್ತ್ರಿಗಳು ಮಾಡಿದ ಪ್ರಯತ್ನದ ಫಲವಾಗಿ ನಾವು ಇಂದು ಆರಾಮವಾಗಿರಲು ಸಾಧ್ಯವಾಯಿತು ಎಂದು ದೇಶಪಾಂಡೆಯವರೇ ಹೇಳುತ್ತಾರೆ. ಈ ದೇಶಪಾಂಡೆಯವರು ಜೈನರಾದರೂ ತೋಂಟದಾರ್ಯಮಠಕ್ಕೆ ತಮ್ಮ ಜೈನ ಬಸದಿಯನ್ನೇ ದಾನವಾಗಿ ಬಿಟ್ಟುಕೊಟ್ಟವರು. ಇದು ಸಿದ್ಧಲಿಂಗಶಾಸ್ತ್ರಿಗಳ ಪ್ರಭಾವವೆಂಬುದನ್ನು ಗಮನಿಸಬೇಕು.

೧೦. ಗದುಗಿನ ಶ್ರೀಮಠದಲ್ಲಿ ಯಾರೋ ಬಡ ವಿದ್ಯಾರ್ಥಿಗಳು ಬೋರ್ಡಿಂಗದಲ್ಲಿ ಉಂಡು, ಸಂಸ್ಕೃತ, ಹೈಸ್ಕೂಲ್, ಐ.ಟಿ.ಐ. ಓದಲು ಬಂದಲ್ಲಿ ಅವರನ್ನು ಅಕ್ಕರೆಯಿಂದ ಕರೆದು ಅವರ ಮನೆತನದ ಹಿನ್ನೆಲೆ ಕೇಳಿ, ಅವರ ತಂದೆ–ತಾಯಿಗಳನ್ನು ಕರೆಸಿ, ವಿಚಾರಿಸಿ, ನಂತರ ತಮಗೆ ಸಹಾಯ ಮಾಡಲು ಸಾಧ್ಯವಾದರೆ ಯಾರಿಗೂ ಗೊತ್ತಿಲ್ಲದಂತೆ ಮಕ್ಕಳಿಗೆ ಸಹಾಯ ಮಾಡುತ್ತಿದ್ದರು. ತಂದೆ ತಾಯಿ ಬಿಟ್ಟುಬಂದ ಮಕ್ಕಳಿಗೆ ಸಿದ್ಧಲಿಂಗಶಾಸ್ತ್ರಿಗಳ ಅಕ್ಕರೆ ನುಡಿ, ವಾತ್ಸಲ್ಯ ತುಂಬಿದ ಮಾತು ಕೇಳಿ ಇವರೇ ನಿಜವಾದ ತಂದೆಯೆಂದು ಭಾವಿಸಿ; ಅವರಿಂದ ಪಾಠಹೇಳಿಸಿಕೊಂಡು ಇಂದೂ ಸ್ವತಂತ್ರವಾಗಿ ಸಂಪಾದಿಸುವಷ್ಟು ಶಕ್ತಿವಂತ

ಸ್ಥಿತಿವಂತರಾದರೂ ಸಿದ್ಧಲಿಂಗಶಾಸ್ತ್ರಿಗಳನ್ನು ಮರೆತಿಲ್ಲ ಅವರಿಗೆ ಶಾಸ್ತ್ರಿಗಳು ನೆನೆಪಾದರೆ ಇಂದೂ ಕಣ್ಣೀರುಗರೆಯುತ್ತಾರೆ. ಅವರಲ್ಲಿ ಸಂಗೀತಗಾರರಾದ ರೇವಣಸಿದ್ಧಯ್ಯ, ಕೂಡ್ಲಿಗಿ ಮೃತ್ಯುಂಜಯ, ಅಣ್ಣಪ್ಪ, ಶಿವಸಂಗಯ್ಯ, ಶ್ರೀ ಮಠದ ಕಾರ್ಯದರ್ಶಿ ಶಿವನಗೌಡ್ರು, ಶ್ರೀಮಠದ ಮ್ಯಾನೇಜರ ಮಲ್ಲಿಕಾರ್ಜುನ ಅಂಗಡಿ, ಪೂಜ್ಯರ ಕಾರ್‌ಚಾಲಕ ಕರಬಸಯ್ಯ ಮಠದ, ಶ್ರೀಮಠದ ಆಡಳಿತಾಧಿಕಾರಿ ಎಸ್.ಎಸ್. ಪಟ್ಟಣಶೆಟ್ಟಿ, ಶ್ರೀ ವಾಲಿ, ಹಂಚಿನಾಳ ಇನ್ನೂ ನೂರಾರು ಜನ ಶಾಸ್ತ್ರಿಯವರೂ ಈಗಲೂ ಇದ್ದಾರೇನೋ ಅನ್ನಿಸುತ್ತದೆಂದು ಭಯಭಕ್ತಿಯಿಂದ ನೆನೆಯುತ್ತಾರೆ. ಅಲ್ಲಿ ವಯಸ್ಸು, ಅಧಿಕಾರ ಅಂತಸ್ತು, ಯಾವದೂ ಮುಖ್ಯವಲ್ಲ. ಎಲ್ಲರೂ ಕಲ್ಯಾಣದ ಶರಣರಂತೆ ಎಂದು ಹೇಳುತ್ತಿದ್ದರು. ಇದು ಶ್ರೀ ಶಾಸ್ತ್ರಿಗಳ ವಿಶಾಲಭಾವವೆಂದೇ ಹೇಳಬೇಕು.

೧೧. ಶಹಪುರಪೇಟೆ ತಡಸದ ಶಿವಗಂಗಮ್ಮ ಅವರು ಶಿರ್ಶಿಯವರಾದರಿಂದ ಶಿರ್ಶಿ ಗಂಗಮ್ಮ ಅಂತಲೇ ಕರೆಯುತ್ತಿದ್ದರು. ಪೂಜಾ ನಿಷ್ಠರು. ಬಸವಾದಿಪ್ರಮಥರೇ ಅರುಹಿದ ಜಂಗಮ ಪಾದೋದಕವಿಲ್ಲದೇ ಪ್ರಸಾದವಿಲ್ಲ. ವಕೀಲ ಮಾಂತೇಶರೇ ಅವರ ಮನೆಗೆ ಬಿನ್ನಾಯದ ಗುರು. ಚಿಕ್ಕವಯಸ್ಸಿನಿಂದ ಜಂಗಮ ಸೇವೆ ಮಾಡಿ, ಶರಣೆಯಾಗಿದ್ದ ಗಂಗಮ್ಮನವರಿಗೆ ೪ ಜನ ಗಂಡು, ಇಬ್ಬರು ಹೆಣ್ಣು ಮಕ್ಕಳು, ದೊಡ್ಡ ವ್ಯಾಪಾರ ಅದೇನೋ ಕಬಾಡಿಯವರಿಗೆ ಅವರಿಗೆ ವ್ಯವಹಾರದಲ್ಲಿ ಜಗಳಬಂದು ಕೋರ್ಟಿನಲ್ಲಿ ವ್ಯಾಜ್ಯ ನಡೆದಾಗ ಗಂಗಮ್ಮನವರ ಮನೆ ಲಿಲಾವವಾಯ್ತು. ಎಲ್ಲಾ ಪಾತ್ರೆ ಪಗಡ ಹೊರಗೆಸೆದಾಗ ಪಕ್ಕದ ಮನೆ ಸಂಶೀಮಠ ನಾಗಮ್ಮನವರು ಆಶ್ರಯ ನೀಡಿದರು. ಮುಂದೆ ಕೂಗುಮಾಸ್ತರ್ ತಮ್ಮ ಮನೆ ಬಾಡಿಗೆ ಕೊಟ್ಟು, ಗೌರವ ಕಾಪಾಡಿದರು. ಅವರ ಮಗ ಬಂಗಾರಪ್ಪ ತರುಣ ಸಂಘದ ಸದಸ್ಯರಾಗಿದ್ದರು. ಗಂಗಮ್ಮ ಅವರ ಪತಿ ಬಸಪ್ಪನವರು ಪ್ರಾತಃಕಾಲದ ಶಿವಾನುಭವ ಸದಸ್ಯರು ''ಕೆಳದಿ ಅರಸರ ಅರಸೊತ್ತಿಗೆ ಉಳಿಸಿದ ಸಿದ್ಧಲಿಂಗ, ಗಂಗಮ್ಮನಂತಹ ಶಿವಪೂಜಾನಿಷ್ಠರು ಶರಣೆಯನ್ನು ಕಾಯದೇ ಇರುತ್ತಾನೆಯೇ ಧೈರ್ಯವಾಗಿರಿ. ತಾಳ್ಮೆಯಿರಲಿ ಎಂದು ಸಮಾಧಾನ ಹೇಳಿದರು ಶಾಸ್ತ್ರಿಗಳು. ಹಾಗೂ ಹಾಗೆಯೇ ಸಿದ್ಧಲಿಂಗನಲ್ಲಿ ನಂಬಿಕೆ ನಿಷ್ಠೆ ಇರಲಿ ಎಂದು ಉಪದೇಶಿಸಿದರು. ಅಲ್ಲಿ ಗುಬ್ಬಿ ವೀರಣ್ಣ ಕಂಪನಿಯವರು ತಡಸದವರ ಇನ್ನೊಂದು ಮನೆಯಲ್ಲಿ ಬಾಡಿಗೆ ಇದ್ದರು. ಆದರೆ ಗುಬ್ಬಿಯವರು ಕಬಾಡಿಯವರ ಜೊತೆಗೆ ಕೋರ್ಟಿನಲ್ಲಿ ಹೋರಾಡಿ ಶಿರ್ಶಿ ಗಂಗಮ್ಮನವರ ಆಸ್ತಿ ಮರಳಿಸಿದ್ದರು.

೧೨. ಶಹಪುರಪೇಟೆ ಗಡಾದ ಮನೆತನ, ಕರ್ಜಗಿ ಮನೆತನಗಳು ಬಹಳ ಪ್ರಸಿದ್ಧಿ. ಇದಕ್ಕೆ ಕಾರಣ ಗಡಾದಮನೆತನದವರು ಅವಿಭಕ್ತ ಕುಟುಂಬ. ಎಲ್ಲರೂ ಭೀಮಕಾಯರು; ಕಾಯಕ ಉಳ್ಳವರು. ಹಿಂದಿನ ಜಗದ್ಗುರುಗಳಿಂದ ಶಾಪಕ್ಕೆ ಒಳಗಾದ ಮನೆತನ ಇದು. ಶಾಸ್ತ್ರಿಗಳು ಅವರಿಗೆ ನಿತ್ಯ ಜಂಗಮಸೇವೆ ಮಾಡಿರಿ. ಪಾದೋದಕ ಮನೆಯಲ್ಲಿ ಸಿಂಪಡಿಸಲು ಹೇಳುವುದು, ಎಡೆಯೂರೇಶನ ಶಾಪ,

ಎಡೆಯೂರೇಶನ ಪೂಜಾ ಭಕ್ತಿಯಿಂದಲೇ ಕಳೆಯುತ್ತದೆಂದು ನಂಬಿಕೆ ಇಡಲು ಹೇಳಿದಾಗ ಶಾಸ್ತ್ರಿಗಳಲ್ಲಿ ೨೦–೨೫ ವರ್ಷ ಸೇವೆ ನಡೆಸಿದ ಗಡಾದ್ ಮನೆತನಕ್ಕೆ ಬಂದ ಶಾಪ ವಿಮೋಚನೆಯಾಗಿ ಎಲ್ಲವೂ ಸುರಕ್ಷಿತವಾಯಿತು.

೧೩. ಚೆಳ್ಳಮರದ ಚಿಕ್ಕಪ್ಪ, ಹುಣಸಿಮರದ ಗುರುಸಿದ್ಧಪ್ಪನವರು. ಇಟಗಿ ಮಾಗುಂಡಪ್ಪ, ಬೇವಿನಮರದ ಹಲಕಟ್ಟಪ್ಪ, ಎಂಡಿಗೇರಿ ತಿಪ್ಪಣ್ಣ, ಬಡಿಗಣ್ಣವರ ತೋಟಪ್ಪ ಹೀಗೆ ಅಂದಿನ ಶಹಪುರ ಪೇಟೆಯ ಮುಖಂಡರು, ಚಿಕ್ಕಪ್ಪನವರು ದೊಡ್ಡ ಬಟ್ಟೆ ವ್ಯಾಪಾರಸ್ಥರು. ಅವರ ಮನೆತನಕ್ಕೆ ಸಿದ್ಧಲಿಂಗಶಾಸ್ತ್ರಿಗಳು ಹೆಣ್ಣುಮಕ್ಕಳಿಗೆ ಶಿವಾನುಭವದ ಭಕ್ತಿನೆಲೆಯಲ್ಲಿ ಸಾಗಿಸಿ ಪೂಜಾನಿಷ್ಠರನ್ನಾಗಿ ಮಾಡಿದ್ದರು. ಆ ಫಲವೇ ಚಳ್ಳಮರದ ರಾಚಪ್ಪ ಅವರ ಪುತ್ರ (ಚಿಕ್ಕಪ್ಪನವರ ತಮ್ಮನ ಮಗ) ದುಬೈನಲ್ಲಿ ಎಂಜಿನಿಯರಾಗಿದ್ದಾರೆ. ಇವರು ಇತ್ತಿಚಿಗೆ ಗದುಗಿನ ಜಗದ್ಗುರು ಡಾ|| ಸಿದ್ಧಲಿಂಗ ಪೂಜ್ಯರನ್ನು ದುಬೈಗೆ ಕರೆಸಿಕೊಂಡಿದ್ದು. ಇದೇ ಅಲ್ಲವೇ 'ಎತ್ತಣ ಮಾಮರ ಎತ್ತಣ ಕೋಗಿಲೆ' ಅನ್ನುವದು.

೧೪. ಶಹಪುರಪೇಟೆ ಚನ್ನಪ್ಪ ಕಾಡಪ್ಪನವರು ಫ್ಲೋರ್‌ಮಿಲ್ ಮಾಲೀಕರು. ಭಕ್ತಿವಂತ ಮನೆತನ. ಪ್ರತಿದಿನ ಗದುಗಿನ ತೋಂಟದಾರ್ಯ ಮಠದ ಗದ್ದುಗೆಗೆ ದರ್ಶನ ಮಾಡಿಯೇ ಮುಂದಿನ ಕಾರ್ಯ. ಗುಡ್ಡದ ದಾನಮ್ಮನಲ್ಲಿ; ಶಹಪುರಪೇಟೆ ವೀರಭದ್ರ ದೇವರ ಅನನ್ಯ ಭಕ್ತರು. ಇವರು ಶಾಸ್ತ್ರಿಗಳು ಅಂತ್ಯದವರೆಗಿದ್ದ ಗೆಳೆಯ. ಚನ್ನಪ್ಪ ಕಾಡಪ್ಪನವರ ಭಕ್ತಿವಂತ, ಮಕ್ಕಳೂ ಸೊಸೆಯರು ಶಾಸ್ತ್ರಿಗಳಲ್ಲಿ ಅನನ್ಯಭಕ್ತಿ ಶ್ರದ್ಧೆಯಿಟ್ಟವರು. ಎಡೆಯೂರೇಶನಲ್ಲಿ ನೀನೊಲಿದರೆ ಕೊರಡು ಕೊನರುವುದು ಬರಡು ಹಯನಹುದು'' ಎಂಬ ನಂಬಿಕೆ, ಒಮ್ಮೆ ಶಹಪುರಪೇಟೆಯಲ್ಲಿರುವ ಮಿಲ್ ಜಾಗ ಖಾಲಿ ಮಾಡಬೇಕಾದ ಪರಿಸ್ಥಿತಿ ಬಂದೊದಗಿತ್ತು. ಸಿದ್ಧಲಿಂಗನನ್ನೇ ನಂಬಿದ ಈ ಕಾಡಪ್ಪನವರ ಬಸವರಾಜ, ಶಾಸ್ತ್ರಿಗಳ ಮಗ ವಕೀಲರ ಸಲಹೆಯಂತೆ ನಡೆದಾಗ, ಮಸಾರಿ ಇಂಡಸ್ಟ್ರೀಯಲ್ ಸಬರ್ಬ್‌ದಲ್ಲಿ ಅತ್ಯಂತ ದೊಡ್ಡ ಮಿಲ್ ಹಾಗೂ ಜಾಗ ಬರೀ ೮–೯ ಲಕ್ಷಕ್ಕೆ ಸಿಕ್ಕಿತು. ಈಗ ಅಲ್ಲಿ ರವಾಮಿಲ್, ಹಿಟ್ಟಿನ ಮಿಲ್, ಬಹುಶಃ ೫೦–೬೦ ಲಕ್ಷದ ಆಸ್ತಿ ಆಯ್ತು. ಬೆಟ್ಟದಂತಹ ಕಷ್ಟ ಶಿವಭಕ್ತಿಯಿಂದ ಭತ್ತದಷ್ಟೇ ಹಗುರಾಗಿ, ಚಿನ್ನದ ಬೆಟ್ಟವೇ ಬೆಳೆದದ್ದು ಶಾಸ್ತ್ರಿಗಳ ಶಿವಾನುಭವದ ಪ್ರವಚನದಲ್ಲಿ ''ಕೊಲುವೆನೆಂಬುದು ದೇವ ಭಾಷೆಯಾದರೆ, ಗೆಲುವೆನೆಂಬುದು ಭಕ್ತನ ಭಾಷೆ'' ಇದು ನಂಬಿಕೆಯ ಫಲ ಕಾಡಪ್ಪನವರಿಗೆ ಒಲಿಯಿತು.

೧೫. ಇಂತಹದೇ ಇನ್ನೊಂದು ಪವಾಡ ಸಾದೃಶ ದೃಷ್ಟಾಂತ ತರುಣ ಸಂಘದ ಇನ್ನೊಬ್ಬ ಶಾಸ್ತ್ರಿಗಳ ಶಿಷ್ಯ ಸಂಬರಗಿಯವರದು. ಭಕ್ತಿ, ಶ್ರದ್ಧೆ, ನಂಬಿಕೆ, ತಾಳ್ಮೆಗೆ ಸಂಬರಗಿ ನಿದರ್ಶನ. ಬಹಳ ದಿನವಲ್ಲ ೧೦–೧೫ ವರ್ಷಗಳ ಹಿಂದಿನ ಸತ್ಯ ನಿದರ್ಶನ. ಬಡತನವೆಂದರೆ ಹೇಗಿರುತ್ತೆ ಎಂಬುದನ್ನು ಸಂಬರಗಿಯೇ ಉದಾಹರಣೆ. ಚಿಕ್ಕಮನೆ, ಮನೆತುಂಬಾ ಮಕ್ಕಳು. ಚಹಾಪುಡಿ ಮಾರಿ ಬಂದ ಹಣ ಬಂದರೆ ಊಟ.

ಇಲ್ಲವಾದಲ್ಲಿ ಉಪವಾಸವೇ ಪ್ರಸಾದ. ಹರಿದ ಬಟ್ಟೆ ಆದರೂ ಗದುಗಿನ ಮಠಕ್ಕೆ ಬೆಳಗಿನ ೬ ಘಂಟೆಗೆ ಸ್ವಾಮಿಯ ಗದ್ದುಗೆ ದರ್ಶನ ಮಾಡಿಯೇ ಮುಂದಿನ ಕಾರ್ಯ ಆರಂಭಮಾಡುತ್ತಿದ್ದರು. ಶಾಸ್ತ್ರಿಗಳು ನಿಧನರಾದಾಗ ಶಾಸ್ತ್ರಿಗಳ ಪತ್ನಿ ಈ ಶಿಷ್ಯನ ಬಡತನ ನೋಡಿ, ಬೂದಿಹಾಳ ಮನೆಯಲ್ಲಿದ್ದ ಜೋಳ, ಗೋದಿ, ಕಾಳು, ಧಾನ್ಯ ಹಾಕಿ ಕಳಿಸಿದ್ದರು. ಬಡತನ ಕಂಡು ಕರಳು ಕಿವುಚಿ ಅತ್ತಿದ್ದರು. ಈಗ ಸಿದ್ಧಲಿಂಗ ಸ್ವಾಮಿ ಕೃಪಕಟಾಕ್ಷ ಸಂಬರಗಿ ಮಕ್ಕಳು 'ಕಾಯಕವೇ ಕೈಲಾಸ' ಶ್ರಮದಿಂದ ಇಂದು ೩ ಮಹಡಿ ಮನೆ ಕಟ್ಟಿಸಿದ್ದಾರೆ. ಇಡೀ ಗದಗ ತಾಲ್ಲೂಕಿಗೆ ಹುಬ್ಬಳ್ಳಿಗೆ ಬ್ರೆಡ್ ಸಪ್ಲಾಯ್ ಮಾಡುತ್ತಿದ್ದಾರೆ. ಬ್ರೇಡ್‌ಸಹಾಯಕ್ಕೆ ವಾಹನ ಸೌಕರ್ಯಹೊಂದಿ, ಶಹಪುರಪೇಟೆಯ ಶ್ರೀಮಂತರ ಸಾಲಿಗೆ ಸೇರಿದ್ದಾರೆ. ಸಂಬರಗಿ ಎತ್ತರವಾಗಿ ಬೆಳೆದರೂ ಆ ಭಕ್ತಿ, ನಯ ವಿನಯ ಬಿಟ್ಟಿಲ್ಲ. ಬೇಕರಿ ಫ್ಯಾಕ್ಟರಿ ಪ್ರಾರಂಭೋತ್ಸವ ಕಾಲಕ್ಕೆ ಶ್ರೀ ಸಿದ್ಧಲಿಂಗಶಾಸ್ತ್ರಿಗಳಿದ್ದಿಲ್ಲ ಆದರೆ ಅವರ ಭಾವಚಿತ್ರ (ಫೋಟೋ) ಹಾಕಿ ಸಾಕ್ಷತ್ ಗುರುಗಳೇ ಇದ್ದಾರೆಂದು ಅದರ ಉದ್ಘಾಟನೆಗೆ ಅಪ್ಪಾಜಿ ಪರವಾಗಿ ಪಾದಾ ಬೆಳೆಸಿರೆಂದು ಕೇಳಿದ್ದೆ. ಅವರನ್ನು ಸಂಬರಗಿಯವರು ಫ್ಯಾಕ್ಟರಿಗೆ ಮಹಾಂತೇಶರನ್ನು ಕರೆದುಕೊಂಡು ಹೋಗಿ ಅವ್ವನಿಗೆ ಇಷ್ಟವಾದ ಬೇಕರಿ ಸಾಮಾನು ಕಟ್ಟಿ ಕಳಿಸಿದರು ಒಮ್ಮೆ ಸೋಮಕ್ಕರಿಗೆ ಬರಾಕ ಹೇಳ್ರಿ, ವಕೀಲರೇ, ಇದು ನಿಮ್ಮ ಮನಿ. ಶಾಸ್ತ್ರಿಗಳದೇ ಕೃಪೆ ತಮ್ಮ ಗುರುಗಳನ್ನು ಸ್ಮರಿಸಿದ್ದರು. ಎಂತಹ ನಿಷ್ಠೆ, ಬಸವಾದಿ ಪ್ರಮಥರ ಕಾಲದಲ್ಲಿ ನಡೆದ ಪವಾಡ, ತರುಣ ಸಂಘದ ಒಬ್ಬ ಶಿಷ್ಯನೂ ಶರಣತ್ವದಿಂದ ದೈವತ್ವ ಸಾಧಿಸಿದ, ಶ್ರೀಮಂತನಾಗಿ ಗುರು, ಲಿಂಗ, ಜಂಗಮ ಸೇವೆಯಿಂದ ಸಂಬರಗಿ ಸ್ಥಿತಿವಂತನಾದ ಉದಾಹರಣೆಯೇ ನಿದರ್ಶನ.

೧೬. ತಡಸದ ಬಸಣ್ಣ, ಶರಣಪ್ಪ, ಪಂಚಾಕ್ಷರಿ, ಹಾಲಪ್ಪನವರ ಚಿ॥ ಶಂಕರ ಸ್ಟೋರ್ಸ್ ನಡೆಸುತ್ತಿದ್ದಾರೆ. ಇಂದು ಅದರ ಹಲವಾರು ಶಾಖೆಗಳಾಗಿವೆ. ಮಕ್ಕಳು ಮೊಮ್ಮಕ್ಕಳು ಪ್ರಸಿದ್ಧ ವ್ಯಾಪಾರಿಗಳು. ಸಿದ್ಧಲಿಂಗನಲ್ಲಿ ಅನನ್ಯ ಭಕ್ತಿ, ಜಾತ್ರೆಯಂದು ಆ ಮನೆಯವರು ಮೆರವಣಿಗೆಗೆ ಬಂದವರಿಗೆ ಪಾನಕದ ಪ್ರಸಾದ ನೀಡುತ್ತಾರೆ. ಬಿಜಾಪುರ ಲೋಣಿ ಪಟಾಕಿ ವ್ಯಾಪಸಸ್ಥರೊಡನೆ ಬೀಗತನ ಮಾಡಿಕೊಂಡಿದ್ದಾರೆ. ಗುರುಜಂಗಮದಲ್ಲಿ ಹಾಲಪ್ಪನವರ ಸೊಸೆಯಂದಿರು, ಮಕ್ಕಳು, ಮೊಮ್ಮಕ್ಕಳು ಸಿದ್ಧಲಿಂಗನಲ್ಲಿ ಅನನ್ಯ ಭಾವ ತೋರಿದವರು. ಜಗದ್ಗುರುಗಳ ಪ್ರೀತಿಯ ಮಕ್ಕಳಿವರು. ತರುಣ ಸಂಘದ ಸರ್ವ ಕಾರ್ಯಕ್ಕೆ ಚೇತೋಹಾರಿಯಾದ ಶಿಷ್ಯರೇ ತಡಸದ ಮನೆತನ. ಈಗಲೂ ಅಗಲಿ ಹೋದ ಶಾಸ್ತ್ರಿಗಳು ಜೀವಂತವಿದ್ದಾರೆಂದೇ ಅವರ ಭಾವನೆಯಾಗಿದೆ. ಇಷ್ಟೊಂದು ಗುರುಶಿಷ್ಯ ಸಂಬಂಧ.

೧೭. ಎಚ್.ಎನ್. ಹೂಗಾರರದು* ಕನ್ನಡ ನಾಟಕ ಸಾಹಿತ್ಯಕ್ಷೇತ್ರದಲ್ಲಿ ದೊಡ್ಡ ಹೆಸರು. ಕರ್ನಾಟಕ ರಾಜ್ಯೋತ್ಸವ ಪುರಸ್ಕಾರ ಪಡೆದವರು. ಕಿತ್ತೂರರಾಣಿ ಚೆನ್ನಮ್ಮ'' ಬಿ. ಸರೋಜಾದೇವಿ ಡಾ॥ ರಾಜಕುಮಾರ ಪಾತ್ರವಹಿಸಿದ ಚಲನ ಚಿತ್ರಕ್ಕೆ

ಸಂಭಾಷಣೆ ರೂಪಿಸಿಕೊಟ್ಟವರು. ನೂರಾರು ನಾಟಕದ ಕರ್ತೃ. ಅವರಿಗೆ ಎಂತಹ ಬಡತನ ? ಚಿಕ್ಕಂದಿನಲ್ಲಿ ಬಿಲ್ವ ಪತ್ರೆ ಮಾರಿ ಬಂದದ್ದರಲ್ಲಿ ತಾಯಿ ಮಕ್ಕಳಿಗೆ ಸಾಕಿದವರು. ಇಂತಹ ಕಾಲದಲ್ಲಿ ಶಹಪುರಪೇಟೆ ತರುಣ ಸಂಘದ ಸದಸ್ಯರಾಗಿ ಶ್ರೀ ಸಿದ್ಧಲಿಂಗಶಾಸ್ತ್ರಿಗಳಲ್ಲಿ ಸಾಹಿತ್ಯ, ಕಲೆ, ನಾಟಕ, ಕಲಿತವರು. ನಾಟಕದಲ್ಲಿ ಪಾತ್ರ ಹೇಗಿರಬೇಕು. ಭಾಷೆಯಲ್ಲಿ ಗಂಭೀರತೆ ತಿಳಿಹಾಸ್ಯ ಹೇಗೆ ವ್ಯಕ್ತವಾಗಬೇಕು ಎಂದು ಕಲಿತ ಎಚ್.ಎನ್. ಹೂಗಾರ್ ಅವರು ನಂತರ ಊರಿಗೆ, ನಾಡಿಗೆ, ಕೀರ್ತಿ ತಂದವರು. ಇವರ ಕೀರ್ತಿಗೆ ಕಾರಣರಾದವರು ಶಾಸ್ತ್ರಿಗಳು ಎಂಬುದು ಅಷ್ಟೆ ಸತ್ಯ. ಸಿದ್ಧಲಿಂಗನಲ್ಲಿ ಅನನ್ಯ ಭಕ್ತಿ ಶಹಪುರಪೇಟೆಯವರಿಗೆ ವೀರಭದ್ರನೇ ಆರಾಧ್ಯದೈವ. ಶ್ರೀ ಹೂಗಾರರಿಗೂ ಹಾಗೆ ಅಗ್ನಿ ಹಾರುವುದು, ಜಾತ್ರೆಯ ಮರುದಿನ ಶಾಸ್ತ್ರಿಗಳು ಕೆಂಡ ಹಾರುದರಿಂದ ಪಾಪ ಹೋಗುವುದಿಲ್ಲ. ಅರಿಷಡ್ ವೈರಿ ತುಂಬಿದ ದೇಹ ನಿನ್ನ ಪಾದಕ್ಕೆ ಅರ್ಪಿತ ಎಂದು ಅಗ್ನಿ ಪ್ರವೇಶಿಸಿದಾಗ, ಆ ದೇಹ ನಿನ್ನಲ್ಲಿ ಶಿವನಾಗುತ್ತದೆ. ತಾಂಡವ ನೃತ್ಯ ಮಾಡಿದ ಶಿವನೇ ವೀರಭದ್ರನ ಪ್ರತೀಕ. ದೇಹಿ ಎಂದಲ್ಲಿ ಅಂದು ದೇವನಾಗುತ್ತಾನೆ. ಅದಕ್ಕೆ ಪಂಚಮಹಾಭೂತದಲ್ಲೊಂದಾದ ಅಗ್ನಿ ನಿನ್ನ ಕಾಲ ಸುಡಲಿಲ್ಲ; ಇದು ಭಕ್ತಿಯ ಪರಾಕಾಷ್ಠೆ ಎಂದು ವೀರಭದ್ರನಲ್ಲಿ ಶಿವಶಕ್ತಿ ತುಂಬಿ ಹೇಳಿದ್ದನ್ನು ನಾಟಕದ ಸನ್ನಿವೇಶಗಳಲ್ಲಿ ಶಾಸ್ತ್ರಿಗಳ ಹಿತನುಡಿ ಭಕ್ತಿರಸ ತುಂಬಿ ಬರೆದ ಎಚ್.ಎನ್. ಹೂಗಾರರವರ ನಾಟಕಗಳು ಬಹಳ ಪ್ರಸಿದ್ಧವಾದವು. ಹೂಗಾರರವರೇ ನನಗೆ ಹೇಳುತ್ತಿದ್ದರು. ಸಿದ್ಧಲಿಂಗನ ಭಕ್ತ ಈಗ ಬಹುದೊಡ್ಡ ಪ್ರಸಿದ್ಧ ನಾಟಕಕಾರರಾಗಿ ತರುಣ ಸಂಘಕ್ಕೆ ಕೀರ್ತಿ ತಂದವರು.

೧೮. ಬೇವಿನಮರದ ರಾಚಪ್ಪ ಅವರು ಸಿದ್ಧಲಿಂಗಶಾಸ್ತ್ರಿಗಳ ಸಾಕುಮಗನೆಂದೇ ಹೇಳಬೇಕು. ತಂದೆ ಮಗನ ಬಾಂಧವ್ಯ ಅವರದು. ಮದುವೆಗೆ ಹೆಣ್ಣು ಹುಡುಕುವ ಕಾಲಕ್ಕೆ ತಮ್ಮ ಅಪ್ಪನ ಮಾತು ಕೇಳಲಿಲ್ಲ. ಗುರುಗಳಾದ ಶಾಸ್ತ್ರಿಗಳೇ ಹೆಣ್ಣು ತೆಗೆಯಬೇಕೆಂದು ಹಠ ಹಿಡಿದಾಗ, ಜಂಗಮನಿ ರಾಚಪ್ಪನ ಸಹೋದರಿಯನ್ನು ತಂದು ಮದುವೆ ಮಾಡಿಸಿದರು. ಸಿದ್ಧಲಿಂಗಶಾಸ್ತ್ರಿಗಳು ''ಮನೆನೋಡ ಕಿರುದು, ಮನ ನೋಡ ಹಿರಿದಾಗಿ'' ಎಂಬಂತೆ ಸಂಸಾರವಿತ್ತು. ಪೇಪರ ಏಜೆನ್ಸಿ ಮಾಡುತ್ತಲೇ, ಇವರು ತರುಣ ಸಂಘದ ಅತೀ ಲವಲವಿಕೆ ಮುಂದೆ ಸದಸ್ಯರಾಗಿದ್ದರು. ಶಹಪುರಪೇಟೆಯಿಂದ ಮುನಸಿಪಾಲಿಟಿಗೆ ಚುನಾವಣೆಯಲ್ಲಿ ಹೆಚ್ಚಿನ ಮತ ಪಡೆದು ಆರಿಸಿ ಬಂದರು. ಮುಂದೆ ಮಾಳಗೊಂಡ, ಮುತ್ತಿನಪೆಂಡಿಯವರ ಬೆಂಬಲದಿಂದ ಮುನಸಿಪಲ್ ಅಧ್ಯಕ್ಷರಾಗಿ, ಜನಾನುರಾಗಿಯಾಗಿ, ಸಿದ್ಧಲಿಂಗೇಶ್ವರ ನಗರವೆಂದು ಒಂದು ಭಾಗಕ್ಕೆ ನಾಮಕರಣ ಮಾಡಿ, ಗಾಂಧೀ ಸರ್ಕಲ್‌ನಿಂದ ಬರುವ ದಾರಿಗೆ ಕುಬಸದ ಶಿವಪ್ಪನವರ ಹೆಸರಿಡಲು ಹೋರಾಡಿ, ಶಾಸ್ತ್ರಿಗಳಿಗೂ, ಶಹಪುರಪೇಟೆಗೆ, ಊರಿಗೂ ಹೆಸರು ತಂದ ಕೀರ್ತಿವಂತ, ಶಾಸ್ತ್ರಿಗಳ ಪರಮಭಕ್ತಶಿಷ್ಯ, ಸಿದ್ಧಲಿಂಗನ ಅತ್ಯಂತ ನಿಕಟ ಭಕ್ತ. ತಮ್ಮ ಸುಪ್ರಭಾ ದಿನಪತ್ರಿಕೆಯಲ್ಲಿ ಸಿದ್ಧಲಿಂಗಶಾಸ್ತ್ರಿಗಳ

ಪುರಾಣಪ್ರವಚನ ಪ್ರಕಟಗೊಳಿಸಿ, ಅವರ ಅಂತ್ಯದ ನಂತರ ೧೫ ದಿನ ಕಾಲ ಪ್ರತಿನಿತ್ಯ ಗುರುನಮನ ಸಲ್ಲಿಸಿದ ಸದ್ಭಕ್ತ ಶಿಷ್ಯರು ನಿಧನರಾಗಿದ್ದರೂ, ನಾಡಿನ ಜನತೆಯ ನಾಲಿಗೆಯಲ್ಲಿ ನೆಲೆಯೂರಿದ್ದಾರೆ. ಇದಕ್ಕೆ ಕಾರಣ ಅವರಿಗೆ ಗುರುವಾಗಿದ್ದವರು.

೧೯. ಪಂಚಾಕ್ಷರಿ ಸಂಶೀಮಠರ ತಾಯಿ ಸಾಧ್ವಿ, ಶರಣೆ, ಸಂಶೀಮಠದ ನಾಗಮ್ಮನವರು, ಸಹಾ ತ್ರಿಪುಂಡ ಭಸ್ಮ ನೊಸಲಿಗೆ, ರುದ್ರಾಕ್ಷಿ ಕೊರಳಲ್ಲಿ, ಶಿವ ಶಿವಾ, ಶಿವ ಶಿವಾ, ಎಂಬ ಮಂತ್ರ ಪಠಣ ಮಾಡುತ್ತ ಶಹಪುರಪೇಟದ ಎಲ್ಲಾ ಮಹಿಳೆಯರಲ್ಲಿ ಭಕ್ತಿ ಮಾರ್ಗ ಬೀರಿ ಸುಗ್ಗಲಾದೇವಿ ಹಾಗೂ ರವಿದೇವಿ ಅವರಿಂದ ಕಾಮನಕಟ್ಟೆಯಲ್ಲಿ ತಿಂಗಳವರೆಗೆ ಪುರಾಣ ಪ್ರವಚನ ಪ್ರಾರಂಭಿಸಿದರು. ಶಹಪುರಪೇಟೆ ಏಕೆ ಗದುಗಿನ ನೂರಾರು ಹೆಣ್ಣು ಮಕ್ಕಳನ್ನು ಭಕ್ತಿ ಮಾರ್ಗದತ್ತ ನಡೆಸಿದವರು. ಸಿದ್ಧಲಿಂಗಶಾಸ್ತ್ರಿಗಳು ಅವರನ್ನು ಅಕ್ಕ ಅಂತಲೇ ಸಂಬೋಧಿಸುತ್ತಿದ್ದರು. ಶಿವಾನುಭವ ಪರೀಕ್ಷೆಯಲ್ಲಿ ಸಂಶೀಮಠದ ನಾಗಮ್ಮನವರ ಪಾತ್ರ ಹಿರಿದಾಗಿತ್ತು. ಹೀಗಾಗಿ ಧಾರವಾಡ ಮೃತ್ಯುಂಜಯಪ್ಪ, ಗದುಗಿನ ವೈ. ನಾಗೇಶಶಾಸ್ತ್ರಿಗಳು, ನಾಗಭೂಷಣಶಾಸ್ತ್ರಿಗಳು, ಹಾಳಕೆರೆ ಅನ್ನದಾನ ಪೂಜ್ಯರಿಗೆ, ಪಂ॥ ಪುಟ್ಟರಾಜ ಗವಾಯಿಗಳು, ಹೀಗೆ ನಾಡಿನ ಎಲ್ಲಾ ಪೂಜ್ಯರಿಗೂ ಸಂಶೀಮಠ ನಾಗಮ್ಮನೆಂದರೆ ಬಹಳ ಅಕ್ಕರೆ. ಅವರು ಅಕ್ಕಮಹಾದೇವಿ ಮೂರ್ತಿ ಸ್ಥಾಪಿಸಿ ಅಕ್ಕಮಹಾದೇವಿಯ ಜಾತ್ರೆಯ ಆರಂಭಿಸಿ ಆ ಮೂಲಕ ಮೂಲಕ ಜನಜಾಗೃತಿ ಮಾಡಿದನ್ನು ಶಕ್ತಿ ಗುರುತಿಸಿದ ಸಿದ್ಧಲಿಂಗಶಾಸ್ತ್ರಿಗಳು ''ಅಕ್ಕ'' ನಿನ್ನದು ದೊಡ್ಡ ಸೈನ್ಯ ಐತಿ. ಸಿದ್ಧಲಿಂಗನಲ್ಲಿ ಅನನ್ಯ ಭಕ್ತಿ ಐತಿ. ಬಸವಾದಿ ಶರಣರ ಕ್ರಾಂತಿ ನಿನ್ನಿಂದ ನಡೀಬೇಕು. ಹಾಳಕೇರಿ ಅಜ್ಜಾರ ಅಪ್ಪಣೆ ತಗೋ, ಹಡಗಲಿ ಮಠದಲ್ಲಿ ನಾಗಮ್ಮನವರು ನಿತ್ಯ ಪೂಜೆ, ಶ್ರಾವಣ, ಕಾರ್ತಿಕ ಮಾಡುತ್ತಿದ್ದಾರೆ. ನಾಗಭೂಷಣಶಾಸ್ತ್ರಿ ಮತ್ತು ಸಿದ್ಧಲಿಂಗಶಾಸ್ತ್ರಿಗಳನ್ನು ಕರೆಸಿ ಪುರಾಣ ಪ್ರವಚನ ನಡೆಸಿದರು. ಶಾಸ್ತ್ರಿಗಳು ನಿಧನರಾದಾಗ ಅವರ ''ಪುಣ್ಯ ಸ್ಮರಣೆ'' ಕಾರ್ಯಕ್ರಮದಲ್ಲಿ ಆ ವಯೋವೃದ್ಧೆ ನನ್ನಲ್ಲಿ ಧೈರ್ಯ ತುಂಬಿ ಮಾತೃ ಸ್ವರೂಪಿಗಳು. ಸಿದ್ಧಲಿಂಗಶಾಸ್ತ್ರಿಗಳ ಪುಣ್ಯಸ್ಮರಣೆ ಕಾರ್ಯಕ್ರಮದಲ್ಲಿ ನಾಗಮ್ಮನವರಿಗೆ ಸನ್ಮಾನ ಮಾಡಿದಾಗ ಇಡೀ ಶಹಪುರಪೇಟೆಯಲ್ಲಿ ಓಡಾಡಿ ಬಾಯ್ತುಂಬ ಹೊಗಳಿದ ತಾಯಿ.

೨೦. ಕಾಡಪ್ಪನವರ ಈರಣ್ಣ ತರುಣ ಸಂಘದ ಸದಸ್ಯರಲ್ಲಿ ಅತ್ಯಂತ ಚಿಕ್ಕವಯಸ್ಸಿನ ಸದಸ್ಯ. ಬಡತನವೇ ಹಾಸಿ, ಬಡತನವೇ ಹೊತ್ತು ಬಂದವನು. ಕಷ್ಟಗಳಲ್ಲಿ ನಿತ್ಯ ಸ್ನಾನ. ತಾಯಿ ಜವಳದ ರೋಡಲ್ಲಿ ಸೋಮೇಶ್ವರ ಗುಡಿ ಎದುರು ಬಜ್ಜಿ ಕರಿಯಬೇಕು. ಆ ಹಣದಲ್ಲಿ ಉಳಿದಿದ್ದರಲ್ಲಿ ಮಕ್ಕಳಿಗೆ ಹಿಡಿಹಿಟ್ಟು ನೀಡಬೇಕು. ತಂದೆಯಿಲ್ಲದ ಅನಾಥ ಮುಖದಲ್ಲಿ ಮಾತ್ರ ಸದಾ ಮುಗುಳ್ನಗೆ. ಈ ಹುಡುಗ ತಾಯಿ ಹತ್ತಿರ ಕೂತು ಬಟ್ಟೆ, ಚೀಲ ಕಟ್ಟುತ್ತಿದ್ದ. ಆ ಬೀದಿಯಿಂದ ಒಮ್ಮೆ ಸಿದ್ಧಲಿಂಗಶಾಸ್ತ್ರಿಗಳು

ಮಾರ್ಕೆಟಿಗೆ ಹೊರಟಿದ್ದರು. ಆ ಮಗು ಯಾರದೆಂದು ಅವನ ತಾಯಿ ಕೇಳಿದರು. ಬೇರೆಯವರಿಂದ ಅವರ ಮನೆ ಕಷ್ಟ ಕಾರ್ಪಣ್ಯ ಕೇಳಿ ಅವನ ತಾಯಿಯನ್ನು ಕರೆಸಿ "ನಿಮ್ಮ ಹುಡುಗನ ಭವಿಷ್ಯ ಲಕ್ಷ್ಯದಲ್ಲಿಡಿ ಬಡತನ ಇದೆಯೆಂದು ಮಕ್ಕಳ ಭವಿಷ್ಯ ಅಲ್ಲೇ ನಿಲ್ಲಬಾರದು." ಆ ಮಗುವೇ ಮುಂದೆ ನಮ್ಮ ಮನೆಯಲ್ಲಿ ಎತ್ತಿ ಆಡಿಸಿದ ಆ ಪುಟಾಣಿ ಕೈಗಳು ಶಾಸ್ತ್ರಿಗಳ ಪೂಜಾವ್ಯವಸ್ಥೆ, ಪತ್ರಿಕೆ ಹಂಚಿಕೆ, ಮನೆ ಕೆಲಸಮಾಡಿ, ಶಾಲೆಯಲ್ಲಿ ಉತ್ತಮ ಅಂಕ ಪಡೆದು, ಗದುಗಿನ ಮಠಕ್ಕೆ ನಿತ್ಯ ದರ್ಶನ, ಕಷ್ಟ ಕಾರ್ಪಣ್ಯ ಕಳೆಯಲು ಭಕ್ತಿಯಿಂದ ಶಾಸ್ತ್ರಿಗಳ ಕಲಿಸಿದ ಮಂಗಲಗೀತೆ ಗದ್ದುಗೆಯಲ್ಲಿ ಹಾಡಿಯೇ ಬರುವುದು ರೂಢಿ ಮಾಡಿಕೊಂಡಿದ್ದ. ಮೂರು ಬೆರಳುಗಳ ನೊಸಲ ವಿಭೂತಿ ಸಂಜೆ ಆದರೂ ಅಳಿಸುತ್ತಿರಲಿಲ್ಲ; ಅಂತಹ ಮುಗ್ಧ. ಬಾಲಭಕ್ತಿ ಇದು ಸಿದ್ಧಲಿಂಗನಿಗೆ ಒಪ್ಪಿತ್ತು. ನಿತ್ಯ ತರುಣಸಂಘದಲ್ಲಿ ಕಸಗುಡಿಸಿ ದೀಪ ಹಚ್ಚಿ ಶಿವಾನುಭವ ರಾತ್ರಿ ೧೨ ಘಂಟೆ ನಡೆದರೂ ಚುರುಮುರಿ ಪ್ರಸಾದ ಹಂಚಿ ಅಲ್ಲೇ ಪವಡಿಸಿ ಬೆಳಗಿನ ಓದು ಮುಗಿಸಿ ಪತ್ರಿಕೆ ಹಂಚುತ್ತಿದ್ದ ಕಾಡಪ್ಪನವರ ಈರಣ್ಣ. ಮುಂದೆ ಓದಿ, ಹೊಸಪೇಟೆ ಪಿ.ಎಲ್.ಡಿ. ಬ್ಯಾಂಕ್ ಮ್ಯಾನೇಜರ್ ಆದ. ಆತನ ಮಗನೇ ಈಗ ಜರ್ಮನದಲ್ಲಿ ಭೂವಿಜ್ಞಾನಿ. ಸಮುದ್ರದಲ್ಲಿ ತೈಲ ಕಂಡುಹಿಡಿಯುವ ಸಂಶೋಧಕ. ತಿಂಗಳಿಗೆ ೨ ಲಕ್ಷ ಸಂಬಳ. ಇನ್ನೊಬ್ಬ ಮಗ ಚಾರ್ಟೆಡ್ ಅಕೌಂಟೆಂಟ್, ಈಗ ಬೆಂಗಳೂರಿನಲ್ಲಿ ಬಿ.ಟಿ.ಎಂ. ಲೇಔಟಿನಲ್ಲಿ ಒಂದು ಕೋಟಿ ರೂಪಾಯಿ ಮನೆ ಕಟ್ಟಿಸಿಕೊಂಡಿದ್ದಾನೆ. ತಂದೆಗೆ ಸುಖದ ಸುಪ್ಪತ್ತಿಗೆಯಲ್ಲಿಟ್ಟಿದ್ದಾನೆ. ತರುಣ ಸಂಘದಲ್ಲಿ ಪುಟವಿಟ್ಟ ಈ ಭಕ್ತಿ ಪವಾಡ ಸದೃಶವಾದುದೇ, ಸಿದ್ಧಲಿಂಗನ ಕಾರುಣ್ಯ. ಈ ತರುಣ ನಿಷ್ಕಪಟ ಭಕ್ತಿಗೆ ನಿತ್ಯ ನಿದರ್ಶನಗಳೇ ಈ ಸತ್ಯ ಚಿತ್ರಗಳು. ಶಾಸ್ತ್ರಿಗಳ ಫೋಟೋ ಒಮ್ಮೆ ಈರಣ್ಣನಿಗೆ ಸಿಗಲಿಲ್ಲ. ಅಪ್ಪಾಜಿ ಲಿಂಗೈಕ್ಯರಾಗಿದ್ದರು. ಬೆಂಗಳೂರಿನ ನಮ್ಮ ಆಫೀಸಿಗೆ ಬಂದು ನನ್ನೊಡನೆ ಜಗಳನಾಡಿ, ಹಠಮಾಡಿ ಅಪ್ಪಾಜಿ ಲ್ಯಾಮಿನೇಷನ ಮಾಡಿದ್ದ ಫೋಟೋ ನೀಡಿದ ನಂತರ ಅಷ್ಟೊಂದು ಖುಷಿ. ಈಗಲೂ ಊರಿಗೆ ಬಂದು ಅವ್ವನನ್ನು ತಾಯಿಯಂತೆ ಕಾಣುತ್ತಾನೆ. ಭಕ್ತಿ ನಿಷ್ಠೆಗೆ, ಗುರುಸೇವೆಗೆ ಸಿದ್ಧಲಿಂಗಶಾಸ್ತ್ರಿಗಳ ಶಿಷ್ಯನೇ ದೊಡ್ಡ ನಿದರ್ಶನ.

೨೧. ತಡಸದ ದಾನಪ್ಪ, ಗದುಗಿನ ತೋಂಟದಾರ್ಯಮಠದ ಪಾಠಶಾಲೆಗಳ ಅಧ್ಯಕ್ಷ, ಜಾತ್ರಾ ಕಮಿಟಿ ಅಧ್ಯಕ್ಷರು ಆಗಿದ್ದರು. ಅವರು ಶಹಪುರಪೇಟೆಯ ಪ್ರಸಿದ್ಧ ವ್ಯಾಪಾರಿಗಳು; ಪಂಚಮಸಾಲಿ ಸಂಘದ ಪದಾಧಿಕಾರಿಗಳು. ಮನೆತುಂಬ ಬೀಗರೆಲ್ಲಾ ವಿದೇಶದಲ್ಲಿದ್ದವರೇ. ಈ ದಾನಪ್ಪನವರು ತರುಣ ಸಂಘದ ಸದಸ್ಯರಾಗಿದ್ದರು. ಬಹುಶಃ ಶ್ರೀಮಂತಿಕೆಯಲ್ಲಿ ಅವರು ಒಪ್ಪುತ್ತಾರೋ ಇಲ್ಲವೋ ಗೊತ್ತಿಲ್ಲ, ಆದರೆ ಸಿದ್ಧಲಿಂಗಯ್ಯ ಬೆಳೆದುದನ್ನು ಅವರನ್ನು ಗುರುತಿಸಿದ್ದೇನೆ. ಸಂಶಿಮಠ ನಾಗಮ್ಮನವರ ಅಣ್ಣ ಗುರುಲಿಂಗಯ್ಯನವರು ಪ್ರಸಿದ್ಧ ಬಣ್ಣದ ವ್ಯಾಪಾರಿಗಳು. ಅವರಲ್ಲಿ ಕೆಲಸಕ್ಕೆ ಇದ್ದು ತಡಸದ ದಾನಪ್ಪ ಬಡತನದ ಬೇಗೆಯಲ್ಲಿ ಬೆಂದು ನಿಂತವರು. ಅವರ ಮನೆಗೆ

ಹುಣ್ಣಿಮೆ–ಅಮವಾಸ್ಯೆಗೆ ಹೋಗುವ ಐನಾರ ಮಹಾಂತೇಶನಿಗೆ ಸಿದ್ಧಲಿಂಗನಲ್ಲಿ ಅಚಲಭಕ್ತಿ, ಮಠಕ್ಕೆ ನಿತ್ಯ ದರ್ಶನ ಶಹಪುರಪೇಟೆ ವೀರಭದ್ರ, ಶಂಕರಲಿಂಗನಲ್ಲಿ ಅನನ್ಯಭಕ್ತಿ ಇಟ್ಟವರು. ಆದರೆ ಅವರಿಗೆ ಬಡತನ ಹಿಂಡಿಹಾಕಿತ್ತು. ಸೈಕಲ್ ಮೇಲೆ ಕೆಲವು ಕಾಲ ತಡಸದ ದಾನಪ್ಪ ಚಹಾಪೂಡಿ ಮಾರಲು ಸುತ್ತಹಳ್ಳಿಗೆ ಹೋಗುತ್ತಿದ್ದ. ಸಿದ್ಧಲಿಂಗಯ್ಯ ಅವರನ್ನು ಕಂಡು ತರುಣ ಸಂಘಕ್ಕೆ ಕರೆದು ನಿತ್ಯ ಶಿವಾನುಭವದಲ್ಲಿ ಭಾಗವಹಿಸಲು ಹೇಳಿ ಸತ್ಯ ನೀತಿ, ಧರ್ಮದತ್ತವಾಲುವಂತೆ ಮಾಡಿದರು. ಬಸವಾದಿ ಪ್ರಮಥರ, ವೀರಶೈವ ಧರ್ಮಕ್ಕೆ ಚ್ಯುತಿ ತಂದ ಅ.ನ.ಕೃ. ಬೇಂದ್ರೆ, ಮಾಸ್ತಿ, ಅವರನ್ನು ಖಂಡಿಸಿ, ಪ್ರತಿಭಟನೆ ನಡೆಸಿದ್ದು; ಗದಗ ತುಂಬಾ ತರುಣ ಸಂಘವೆಂದರೆ ನಾಡೇ ನಡುಗುತ್ತಿತ್ತು. ವೀರಶೈವ ಧರ್ಮ, ಬಸವಾದಿ ತತ್ವಗಳಿಗೆ ಚ್ಯುತಿ ಬಾರದಂತಹ ಅಸ್ತ್ರಗಳನ್ನು ಶಾಸ್ತ್ರಿಗಳು ಸಿದ್ಧಪಡಿಸಿದರು. ಸಿದ್ಧಲಿಂಗನ ಕೃಪಾಕಟಾಕ್ಷದಿಂದ ಬಡತನ ನೀಗಿ ಈ ತರುಣ ಸಂಘದ ಈ ತರುಣ ಈಗ ಶ್ರೀಮಂತ ವ್ಯಾಪಾರಿಯಾಗಿದ್ದಾರೆ. ಅವರ ಭಕ್ತಿಯ ಉತ್ಕಟತೆ ''ನೀ ನೊಲಿದರೆ ಸಕಲ ಪಡಿಪದಾರ್ಥಗಳು ಇದರಲ್ಲಿಪ್ಪವು'' ಎಂಬಂತೆ ಎತ್ತರವಾಗಿ ಬೆಳೆದ ದಾನಪ್ಪನವರಿಗೆ ಸಿದ್ಧಲಿಂಗನ ಕೃಪೆ, ಜಗದ್ಗುರುಗಳ ಪ್ರೀತಿಯ ಆಶೀರ್ವಾದದಿಂದ ಮಠಕ್ಕೆ ಸೇವೆಗೈದ ಕೈಂಕರ್ಯದ ಫಲವೆಂದು ಭಾವಿಸಬೇಕು.

೨೨. ಚಂಬಣ್ಣ ಬಡಿಗಣ್ಣವರ ಗದುಗಿನ ಭೂಮರೆಡ್ಡಿ ಮಿಲ್ಲಿನಲ್ಲಿ ಸಮಭಾಗಿ ವ್ಯಾಪಾರ ಶ್ರೀ ತೋಟಪ್ಪನವರ ಜೇಷ್ಠ ಪುತ್ರ ತುಂಬಾ ತಾತ್ವಿಕ ಸಿದ್ಧಲಿಂಗಶಾಸ್ತ್ರಿಗಳ ಮೀಸಲು ಶಿಷ್ಯ. ತರುಣ ಸಂಘದ ಚೇತೋಹಾರಿ ಕಾರ್ಯಕರ್ತ. ಪತ್ನಿ ನಿಲಮ್ಮನವರೂ ಪತಿಯಂತೆ ಶಿವಭಕ್ತೆ ಗುಣ ಸಂಪನ್ನೆ. ಅವರ ಮನೆಯಲ್ಲಿ (ಸೆಂಟ್ರಲ್ ಸ್ಕೂಲ್ ಪಕ್ಕದ ಅರಮನೆಯಂತಿರುವ ದೊಡ್ಡಮನೆ) ಮಧ್ಯಾನ್ಹ ಎಲ್ಲ ಅಣ್ಣ ತಮ್ಮಂದಿರು, ಮಕ್ಕಳು ಒಟ್ಟಾಗಿ ಊಟಕ್ಕೆ ಕುಳಿತರೆ ೪೫ ಜನ. ಹೆಣ್ಣುಮಕ್ಕಳೇ ೧೮ ಜನ. ಹೀಗೆ ೬೩ ಜನರಿಂದ ನಿತ್ಯ ದಾಸೋಹದ ಮನೆಯಾಗಿತ್ತು. ಶ್ರೀಮಂತರ ಮಡದಿಯರೂ, ಶರಣೆಯರೇ, ಸದಾ ೩ ಬೆರಳು ವಿಭೂತಿ ಹಚ್ಚಿಕೊಂಡು ಸಿಹಿನೀರಿಗಾಗಿ ವೀರಭದ್ರ ದೇವಸ್ಥಾನಕ್ಕೆ ಬಂದರೆ ಅವರ ಮನೆಯಿಂದ ೧೫ ಜನ ಶಿವಶರಣೆಯರೇ ತುಂಬುಗೊಡ ಹೊತ್ತು ತರುವ ವೈಖರಿ ನಿಂತು ನೋಡಬೇಕು. ಅವಿಭಕ್ತ ಕುಟುಂಬಕ್ಕೆ ಹೇಳಿಮಾಡಿಸಿದ ಮನೆ, ಅದಕ್ಕೆ ತೋಟಪ್ಪ ಮತ್ತು ಅವರ ಸಹೋದರರು, ಮಕ್ಕಳು ಮೊಮ್ಮಕ್ಕಳು, ಸೊಸೆಯಂದಿರದು ವಿಶಾಲ ಮನೋಭಾವ. ಇವರು ನಮ್ಮ ಮಕ್ಕಳು, ಅವರು ಅವರ ಮಕ್ಕಳೆಂಬ ಭೇದ ಭಾವವಿಲ್ಲದೇ ಎಲ್ಲರೂ ನಮ್ಮ ಮನೆಮಕ್ಕಳೆಂಬ ಭಾವ. ಅವರ ಪಕ್ಕದ ಮನೆಯೇ ಸಿದ್ಧಲಿಂಗಶಾಸ್ತ್ರಿಗಳ ಮನೆಯಾಗಿತ್ತು. ಅವರಿಗೂ ಶಾಸ್ತ್ರಿಗಳ ಮನೆತನಕ್ಕೆ ಅವಿನಾಭಾವ ಸಂಬಂಧ. ಜಂಗಮ ಪ್ರೀಯರಾದ ಬಡಿಗಣ್ಣವರ ಮನೆತನಕ್ಕೆ ಮಹಾಂತೇಶನೇ ಹೆಚ್ಚಿನ ಜಂಗಮ ಕಾರ್ಯ ನೆರವೇರಿಸಿದ್ದು. ಹಬ್ಬ ಹರಿದಿನವಿರಲಿ, ಮಕ್ಕಳ ನಾಮಕರಣ,

ಲಿಂಗಧಾರಣೆ ಇರಲಿ ಎಲ್ಲಕ್ಕೂ ಮಹಾಂತೇಶನೇ ಬೇಕು. ಚಂಬಣ್ಣನದು ಸಿದ್ಧಲಿಂಗೇಶ್ವರನಲ್ಲಿ ಅನನ್ಯ ಭಕ್ತಿ. ನಿತ್ಯ ತೋಂಟದಾರ್ಯ ಮಠಕ್ಕೆ ದರ್ಶನ ಪಡೆಯದೆ ಏನೂ ತೆಗೆದುಕೊಳ್ಳುತ್ತಿರುತಿರಲಿಲ್ಲ ಅಂತಹ ನಿಷ್ಠೆ. ಸಿದ್ಧಲಿಂಗಾಶಾಸ್ತ್ರಿಗಳಿಗೆ ಬರಸಿಡಲಂತೆ ಎರಗಿದ ಬಡತನ, ಅವರಿಗೆ ಹರಿದ ಬಟ್ಟೆ, ಪಂಚೆ ಗತಿ ಇಲ್ಲದಿದ್ದಾಗ ಯಾರಿಗೂ ಹೇಳದೇ ಖಾದಿಬಂಢಾರಕ್ಕೆ ಹೋಗಿ ಪ್ರತಿವರ್ಷ ಶಾಸ್ತ್ರಿಗಳಿಗೆ ೩ ಜುಬ್ಬಾ, ೩ ಧೋತರ, ೩ ಟೋಪಿ, ಟವೆಲ್ ಗೊತ್ತಿಲ್ಲದೇ ನೀಡುತ್ತಿದ್ದರು. ಗುಪ್ತ ಗುರುಭಕ್ತಿ ಮಾಡಿದ ಶರಣ ಅವರ ಮನೆಗೆ ಸಂತೆಯಿಲ್ಲವೆಂದಾಗ ಬೇಕೆಂದೇ ಶಾಸ್ತ್ರಿಗಳು ಮಕ್ಕಳನ್ನು ಮನೆಗೆ ಕರೆದು ೧೦–೨೦ ರೂ. ಕಾಣಿಕೆ ನೀಡಿ ಅಪರೋಕ್ಷವಾಗಿ ನೆರವಾಗುತ್ತಿದ್ದರು. ಚಂಬಣ್ಣ ತೀರಿದಾಗ ಮಗನಂತೆ ಅತ್ತಿದ್ದರು.

ಒಮ್ಮೆ ಅಣ್ಣಾ ತೋಟಪ್ಪನಿಗೆ ಕಾಲೇಜ್ ಫೀಜ್, ಪರೀಕ್ಷಾ ಶುಲ್ಕ ಕಟ್ಟಲು ಹಣವಿರಲಿಲ್ಲ. ತಮಗೆ ಬಂದೊದಗಿದ ಬಡತನಕ್ಕಾಗಿ ಶಾಸ್ತ್ರಿಗಳು ಬಿಕ್ಕಿ ಬಿಕ್ಕಿ ಅತ್ತು ಅತ್ತು ಸಾಕಾಗಿ, ಮಗನ ಶಿಕ್ಷಣ ಬಿಡಿಸಲು ನಿರ್ಧರಿಸಿದ್ದನ್ನು ಪತ್ನಿ ಮುಖಾಂತರ ತಿಳಿದ ಚಂಬಣ್ಣ ಬಡಿಗಣ್ಣವರ ಶಾಸ್ತ್ರಿಗಳಿಗೆ ಗೊತ್ತಿಲ್ಲದಂತೆ, ತೋಟಪ್ಪನಿಗೂ ತಿಳಿಯದಂತೆ ಜೆ.ಟಿ. ಕಾಲೇಜಿಗೆ ಪರೀಕ್ಷಾ ಶುಲ್ಕ ಕಟ್ಟಿ ಬಂದಿದ್ದರು. ಪ್ರಿನ್ಸಿಪಾಲರೇ ಕರೆದು ತೋಟಪ್ಪನಿಗೆ ಹೋಗಿ ಪರೀಕ್ಷೆಗೆ ಅನುಮತಿ ನೀಡಿದಾಗ ಈ ವ್ಯವಸ್ಥೆ ಯಾರು ಮಾಡಿದೆರೆಂದು ತಿಳಿದುಕೊಳ್ಳಲು ೨–೩ ತಿಂಗಳೇಬೇಕಾಯ್ತು. ''ಮಾಡಿದೆ ನೆನ್ನದಿರಾ ಲಿಂಗಕೆ, ಮಾಡಿದೆ ನೆನ್ನದಿರಾ ಜಂಗಮಕೆ'' ಶರಣರ ವಚನ ಅಕ್ಷರ ಸಹ ಪಾಲಿಸಿದ ಚಂಬಣ್ಣ ಬಡಿಗಣ್ಣನವರ ಇಂದು ನಮ್ಮೊಂದಿಗಿಲ್ಲವೆಂಬುದು ವಕೀಲರಿಗೆ ಅತೀ ನೋವಿನ ಸಂಗತಿ.

೨೩. ಬೇವಿನಮರದ ಮಾಸ್ತರರು ಬೇವಿನಮರದ ರಾಚಪ್ಪನವರ ಸಂಬಂಧಿಕರು. ಶಾಸ್ತ್ರಿಗಳು ಬಸವೇಶ್ವರ ಲೈಬ್ರರಿಯ ನಿರ್ವಹಣೆ ಅವರಿಗೆ ವಹಿಸಿದ್ದರು. ಪ್ರತಿದಿನ ಎಲ್ಲ ಪತ್ರಿಕೆ ತರಿಸುವುದು, ಪುಸ್ತಕಗಳು ಓದುಗರಿಗೆ ನೀಡುವುದು; ಅವರ ಕಾರ್ಯ. ತರುಣ ಸಂಘಕ್ಕೆ ಮಾರ್ಗದರ್ಶಕರಾಗಿ, ಶಾಸ್ತ್ರಿಗಳಿಗೆ ಅತ್ಯಂತ ಆತ್ಮೀಯ ಗೆಳೆಯರು ಆಗಿದ್ದರು. ತಮ್ಮ ಕಾಲಾವಧಿಯವರೆಗೆ ಶಹಪುರಪೇಟೆ ತರುಣ ಸಂಘಕ್ಕೆ ಮತ್ತು ಶಾಸ್ತ್ರಿಗಳ ಶಿಷ್ಯರಾಗಿ ಸೇವೆ ಸಲ್ಲಿಸಿದರು. ಶಾಸ್ತ್ರಿಗಳು ಅಗಲಿದ ನಂತರ ಬಹುಕಾಲ ನೊಂದ ಮನಸ್ಸಿನವರಾಗೇ ಇದ್ದರು. ಅಷ್ಟೊಂದು ಆಳವಾದ ಗೆಳೆತನದ ಬಾಂಧವ್ಯ ಅವರಲ್ಲಿತ್ತು.

೨೪. ಬಿಳೇ ಅಂಗಡಿ ದಾನಪ್ಪ ಈಗ ರಿಟೈರ್ಡ್ ಚೀಫ್ ಆಫೀಸರ್, ಬೆಂಗಳೂರಿಗೆ ಹತ್ತಿ ಇರುವ ಹೊಸಕೋಟೆಯಲ್ಲಿ ನೆಲೆಸಿದ್ದಾರೆ. ಅವರಲ್ಲಿ ಧಾರ್ಮಿಕತೆ ಎಷ್ಟತ್ತೆಂದರೆ ತಮ್ಮ ಮನೆಯಲ್ಲಿ ಯಾವುದಾದರೂ ಕಾರ್ಯಗಳು ಮಾಡಿದರೆ ಗದುಗಿನ ಜಗದ್ಗುರುಗಳ ಆಶೀರ್ವಾದ ಪಡೆದೇ ಕಾರ್ಯ ನಡೆಸುವುದು ಅವರ ವಾಡಿಕೆಯಾಗಿತ್ತು. ಒಮ್ಮೆ ಹೊಸಕೋಟೆಗೆ ಗದಗ ಜಗದ್ಗುರುಗಳನ್ನು ಕರೆಸಿ,

ಶಿವಾನುಭವ ಕಾರ್ಯಕ್ರಮ ನಡೆಸಿದಾಗ, ಆಗಿನ ಮಾಜಿ ಈಗಿನ ಹಾಲಿ ಮಂತ್ರಿ ಬಚ್ಚೆಗೌಡರು ಕಾರ್ಯಕ್ರಮದಲ್ಲಿ ಭಾಗವಹಿಸಿ ಶ್ರೀ ದಾನಪ್ಪ ಅಂಗಡಿಯವರ ಪ್ರಾಮಾಣಿಕತೆ ಬಗೆಗೆ ಭಾಷಣದಲ್ಲಿ ಸ್ತುತಿಗೈದರು. ಒಂದು ಕಾಲದಲ್ಲಿ ಪುಂಡಾಟದ ಹುಡುಗನಾಗಿದ್ದ. ಶಹಪೂರಪೇಟೆಯಲ್ಲಿ ಒಂದು ರಾತ್ರಿ ತರುಣ ಸಂಘದ ಶಿವಾನುಭವದಲ್ಲಿ ಬಂದು ಕುಳಿತು ರಾತ್ರಿ ೧೨ ರವರೆಗೆ ನಡೆದ ಶಿವಾನುಭವದ ಆತ್ಮ ಸಿದ್ಧಾಂತ ಕೇಳಿ ಇಷ್ಟು ದಿನ ಈ ಬದುಕು ವ್ಯರ್ಥವಾಗಿ ಕಳೆದೆನಲ್ಲವೆಂದು ಮರುಗಿ, ನಂತರ ತರುಣ ಸಂಘದ ನಿಷ್ಠಾವಂತ ಕಾರ್ಯಕರ್ತನಾಗಿ, ಶಿವಾನುಭವಿಯಾಗಿ "ಬಹದ್ದೂರ್ ಗಂಡು" ನಾಟಕದಲ್ಲಿ ಪಾತ್ರವಹಿಸಿದ್ದನ್ನು ಇನ್ನೂ ನೆನೆಯುತ್ತಾರೆ. ಶಾಸ್ತ್ರಿಗಳ ಅಗಲಿಕೆ ಇವರನ್ನು ಎಷ್ಟು ಕಾಡಿತ್ತು ಎಂದರೆ, ಅವರ ಪುಣ್ಯ ಸ್ಮರಣೆ ಕಾರ್ಯಕ್ರಮ ಸಂದರ್ಭದಲ್ಲಿ ಅವರ ಕುರಿತು ಲೇಖನ, ಕವಿತೆ ಬರೆದು ಕಂಬನಿಗರೆದರು. ಬಣಗಾರ ಸಂಘದ "ಶಬರ ಶಂಕರ" ಪತ್ರಿಕೆಯಲ್ಲಿ ಶ್ರೀ ಶಾಸ್ತ್ರಿಗಳ ಬಗೆಗೆ ಒಂದು ಲೇಖನ ಬರೆದು ಆ ಲೇಖನದಲ್ಲಿ ಅತ್ಯಂತ ಮುಕ್ತ ಕಂಠದಿಂದ ಹಾಡಿ ಗುರುಭಕ್ತಿ ಸಲ್ಲಿಸಿದರು ಬಿಳೇ ಅಂಗಡಿ ದಾನಪ್ಪನವರು.

ಮಿಣಜಗಿ, ಗಡಾದ, ಕರ್ಜಗಿ, ಖಾರದಕಟ್ಟಿ, ಹಿರೇಮಠ, ಮುಧೋಳ, ಕಾಳಗಿ, ಮೂರ್ಖಂಡಿ, ಎಲ್ಲಾ ಜಾತಿ, ಪಂಗಡಕ್ಕೆ ಶಾಸ್ತ್ರಿಗಳ ಮಾರ್ಗದರ್ಶಕ ರಾದದ್ದು ಆ ಶಿಷ್ಯ ಬಳಗಕ್ಕೂ ನೆನವುದು ಸಂದರ್ಭೋಚಿತವಾಗಿದೆ.

### ಪ್ರಸಿದ್ಧ ಚಿತ್ರಕಲಾವಿದರೊಂದಿಗೆ ಶಾಸ್ತ್ರಿಗಳ ಸಂಪರ್ಕ

ನಾಡಿನ ಸಂಸ್ಕೃತಿಯ ಜೀವಂತಿಕೆಯ ಹಿಂದೆ ಹಲವು ವ್ಯಕ್ತಿಗಳ ಕಾಯಕದ ಶಕ್ತಿ ಕಾಣಬರುತ್ತದೆ. ಬದುಕನ್ನೇ ಕಲೆ, ಸಂಸ್ಕೃತಿಗಾಗಿ ಮೀಸಲಿರಿಸಿದ ಹಲವಾರು ಜನ ಕಲಾವಿದರಲ್ಲಿ ಗದುಗಿನ ಶ್ರೀ ಮುರಿಗೆಪ್ಪ ಚಟ್ಟಿಯವರದು ಮೇರು ಹೆಸರು. ದೇಶದ ಅನೇಕ ಅರಮನೆ, ಗುರುಮನೆ, ಮಠ ಹಾಗೂ ಅಕಾಡೆಮಿಗಳಲ್ಲಿ ಶ್ರೀ ಚಟ್ಟಿಯವರ ಚಿತ್ರಕಲಾ ಪ್ರತಿಭೆಯಿಲ್ಲದೇ ಯಾವದೂ ಪರಿಪೂರ್ಣತೆ ಇಲ್ಲವೆನ್ನುವಷ್ಟು ಮಹಾನ್ ಕಲಾವಿದರು.

ಅವರ ಚಿತ್ರಕಲಾ ಕುಟೀರ ಶಹಪುರಪೇಟೆಯ ಮಹಡಿಯ ಅವರ ಮನೆಯ ಅಟ್ಟದ ಮೇಲೆ ಅದೊಂದು ಚಿತ್ರಕೂಟ ಎಂದರೂ ತಪ್ಪಲ್ಲ. ಎತ್ತ ನೋಡಿದರೂ ಪೂಜ್ಯ ಸ್ವಾಮಿಗಳ, ಅವರ ಪವಾಡಗಳ ಇಲ್ಲವೇ ಭಾರತದ ಹೆಮ್ಮೆಯ ಪುತ್ರರ, ನಿಸರ್ಗ, ರೇಖಾಚಿತ್ರ, ತೈಲವರ್ಣ ಜಲವರ್ಣದಲ್ಲಿ, ಸಾಂಸ್ಕೃತಿಕ ವೈವಿಧ್ಯಮಯ ಅಮೋಘ ಚಿತ್ರಕಲಾವಿದರು. ಗದುಗಿನ "ಕಲಾಮಂದಿರ" ಸಂಸ್ಕೃತಿಯನ್ನು ಬಿಂಬಿಸಿದ ಕಲಾಕ್ಷೇತ್ರ ಶ್ರೀ ತೋಂಟದಾರ್ಯ ಮಠದ ಪಕ್ಕದಲ್ಲಿ ನೆಲೆಸಿದೆ. ಅದರ ವ್ಯವಸ್ಥಾಪಕರು ಅಕ್ಕಿ ಚಟ್ಟಿಯವರ ಸಲಹೆ ಮೇರೆಗೆ ಚಿತ್ರಕಲಾ ವೈವಿಧ್ಯತೆಯನ್ನು ತಂದವರು.

ಇನ್ನೊಬ್ಬ ಕಲಾವಿದರು "ಕನ್ನಡ ಮಾತೆಯ" ಅತ್ಯಂತ ಸುಂದರ ಚಿತ್ರ ಬಿಡಿಸಿದವರು ಶ್ರೀ ಸಿ.ಎನ್. ಪಾಟೀಲರು. ಅವರ "ಬಸವೇಶ್ವರರ" ಆಳೆತ್ತರದ ಚಿತ್ರ ಸಿ.ಎನ್. ಪಾಟೀಲರನ್ನು ಪ್ರಸಿದ್ಧಿಗೆ ತಂದಿದ್ದು ಹಾಗೂ ಬಸವಜಯಂತಿಯಲ್ಲಿ ಆ ಚಿತ್ರದ ಮೆರವಣಿಗೆಯನ್ನು ನೋಡಿದ ಇಡೀ ಗದುಗಿನ ಜನ ಶಹಬ್ಬಾಸ್ ಎಂದು ಬೆನ್ನು ತಟ್ಟಿತು.

ಶ್ರೀ ಕಾಳೆಯವರಿಗೆ ನಾಡೋಜ ಪುರಸ್ಕಾರ, ಕನ್ನಡ ರಾಜ್ಯೋತ್ಸವ ಪುರಸ್ಕಾರ, ನೃಪತುಂಗ ಪ್ರಶಸ್ತಿಸಂದಿದ್ದು ಅವರ ಚಿತ್ರಕಲಾ ಪ್ರಪಂಚ ಕಾಯಕಕ್ಕೆ. ಇವರೆಲ್ಲ ಬರೀ ಕಲಾವಿದರಲ್ಲ. ಶರಣರ ಸಂತರ ಭಾವ ಚಿತ್ರಗಳಿಗೆ ಜೀವತುಂಬಿದವರು. ಬಾಂಬೆ, ದೆಹಲಿ ರಾಜಸ್ಥಾನ, ಗ್ವಾಲೀಯರ್ ಮುಂತಾದಡೆಯಲ್ಲಿ ಇವರ ಕಲಾ ಚಿತ್ರ ಪ್ರದರ್ಶನ ಕಂಡಿವೆ. ಗ್ವಾಲೀಯರ ಗ್ಯಾಲರಿಗಳಲ್ಲಿ ಚಟ್ಟಿಯವರ ಚಿತ್ರವಿಲ್ಲದೇ ಇಲ್ಲ. ಅನಕೃ ಅವರು ಚಿಟ್ಟಿಯವರ ಮನೆಗೆ ಬಂದು ಅವರ ಮಹಡಿ ಮೇಲೆ "ಚಿತ್ರಕೂಟ" ನೋಡಿ ಮುರಿಗೆಪ್ಪನವರೇ ನೀವೆ ಇನ್ನೊಬ್ಬ "ರವಿವರ್ಮ" ಎಂದು ಶ್ಲಾಘಿಸಿದ್ದರಂತೆ. ಅವರ ಗುರುಗಳಾದ ಗ್ಲಾಡಸನ್ ಸಲೋಮನ್ ಸಹ ಚಟ್ಟಿಯವರ ಕೈಚಳಕದಲ್ಲಿ ರೂಪಿತಗೊಂಡ ಪ್ರಕೃತಿನೋಟ ಕಂಡು ಮನತುಂಬಿ ಹರಿಸಿದ್ದರಂತೆ.

ಅವರಿಗೆ ಡೆಲ್ಲಿಯ ಆಲ್ ಇಂಡಿಯಾ ಸೊಸೈಯಿಟಿ ರಜತ ಪದಕವಿತ್ತಿದ್ದು, ಶ್ರವಣಬೆಳಗೊಳ ಚಾರುಕೀರ್ತಿ ಪೂಜ್ಯರು ಅವರಿಗೆ ಬಾಹುಬಲಿಯ ತೈಲಚಿತ್ರಗಳನ್ನು ತಯಾರಿಸಲು ಹೇಳಿ ಬರೆಸಿದ ಚಿತ್ರಗಳು ಅವರನ್ನು ಕುಂಚಬ್ರಹ್ಮವೆಂದು ಕರೆಯಲಾಯಿತು. ಅವರು ಸ್ವತಃ ಶರಣ ಸಂಸ್ಕೃತಿಯ ಧಾರ್ಮಿಕತೆ ಬದುಕಲ್ಲಿ ತಂದವರು. ಯುರೋಪಿಯನ್ ಡೈರೆಕ್ಟರ್ ಆಫ್ ಆರ್ಟ್‌ದಲ್ಲಿ ಮುರಿಗೆಪ್ಪ ಚಿಟ್ಟಿಯವರ ಚಿತ್ರಕಲಾ ಪ್ರತಿಭೆಯ ಬಗೆಗೆ ಯುರೋಪದವರೇ ಶ್ಲಾಘಿಸಿದ್ದರೆಂದರೆ ಮುರಿಗಪ್ಪೆ ಚಟ್ಟಿಯವರ ಕಲಾಪತ್ರಿಭೆ ಬಗ್ಗೆ ಬೇರೆ ಹೇಳಬೇಕಾಗಿಲ್ಲ. ತುಂಬಾ ಶಿಸ್ತು. ಬಿಳಿಯ ರುಮಾಲು, ಕಪ್ಪುಕೋಟ, ಬಿಳಿಧೋತಿ, ಪಾಲೀಶ ಶೂ, ಕೈಯಲ್ಲಿ ಅಲಂಕಾರ ಬೆತ್ತ ಅವರ ಪೋಷಾಕು.

ಅಂತಹ ಕಲಾವಿದರು ಧಾರ್ಮಿಕ ತೈಲ ಚಿತ್ರ ಬಿಡಿಸುವಾಗ ಅವರ ಕುಂಚ ಪ್ರತಿಭೆಗೆ ತಾಂತ್ರಿಕತೆ ಬರಲು ಸಿದ್ಧಲಿಂಗಯ್ಯ ಶಾಸ್ತ್ರಿಗಳ ಮಾರ್ಗದರ್ಶನದ ಅವಶ್ಯಕತೆ ಕಂಡು ಗದುಗಿನ ಶಹಪುರಪೇಟೆಯವರೇ ಆದ ಆತ್ಮೀಯ ಸ್ನೇಹಿತರಾದ ಪಂ. ಸಿದ್ಧಲಿಂಗಶಾಸ್ತ್ರಿಗಳನ್ನು ಬಿನ್ನವಿಸಿ ಅವರ ಚಿತ್ರಕಲೆಯಲ್ಲಿ ಧಾರ್ಮಿಕ ಭಾವನೆಗೆ ಚ್ಯುತಿ ಬರದಂತೆ ತಗೆಯಲು ಶಾಸ್ತ್ರಿಗಳನ್ನು ಆಯ್ದುಕೊಂಡರೆಂದರೆ ಶಾಸ್ತ್ರೀಗಳ ಮೇಲೆ ಅವರ ಭಕ್ತಿ ಎಷ್ಟು ಇತ್ತು ಎಂಬುದು ತಿಳಿಯುತ್ತದೆ. ಸಿದ್ಧಲಿಂಗ ಶಾಸ್ತ್ರೀಗಳು ಸ್ವತಃ ಚಿತ್ರ ಕಲಾವಿದರೂ ಆಗಿದ್ದರಿಂದ ಮುರಿಗೆಪ್ಪ ಚಟ್ಟಿಯವರ ಮನೆಯಲ್ಲಿ ಶ್ರೀ ಯಡೆಯೂರ ಸಿದ್ಧಲಿಂಗನ ಹುತ್ತದೊಳಗಿನ ಚಿತ್ರ, ಧಾರವಾಡ ಮೃತ್ಯುಂಜಯಪ್ಪಗಳ ಚಿತ್ರ, ಅಥಣಿ ಶಿವಯೋಗಿಗಳ ಚಿತ್ರ, ಸಿದ್ಧಲಿಂಗೇಶ್ವರ

ಪವಾಡಗಳ ಚಿತ್ರ, ಹುಬ್ಬಳ್ಳಿ ಮೂರುಸಾವಿರಮಠ, ಸಾವಳಗಿ ಜಗದ್ಗುರುಗಳು, ಮುಂಡರಗಿ ಅನ್ನದಾನ ಮಹಾಸ್ವಾಮಿಗಳು, ಜೇವರಗಿ ಷಣ್ಮುಖ ಶಿವಯೋಗಿಗಳು, ತೆಲಸಂಗ, ಸಾಂಗಲಿ, ಗೋಕಾಕ, ನಲತ್ವಾಡ ಅಮೀನಗಡ, ನಿಡಸೋಸಿ ಪೂಜ್ಯರು ಹೀಗೆ ಧಾರ್ಮಿಕ ಪುರುಷರ ಚಿತ್ರಬಿಡಿಸುವಾಗ ಭಸ್ಮ ಹೇಗೆ ಬರಬೇಕು, ರುದ್ರಾಕ್ಷಿ, ಜಪಮಾಲೆ, ಕೃಪಾದೃಷ್ಟಿಯ ಮುಖಭಾವ, ಮುಂತಾದವುಗಳ ಸಲಹೆ ಕೊಡುತ್ತಿದ್ದರು. ಒಂದು ವೇಳೆ ಶಾಸ್ತ್ರೀಗಳು ಬರಲು ತಡವಾದರೆ ತಾವೆ ಶಾಸ್ತ್ರಿಗಳ ಮನೆಗೆ ಹೋಗಿ ಕರೆದುಕೊಂಡು ಬಂದ ಪ್ರಸಂಗಗಳು ಅನೇಕ.

ಸಿದ್ಧಲಿಂಗಯ್ಯನವರ ಬಡತನ ಕಂಡು ಮುರಿಗೆಪ್ಪನವರು "ಸಿದ್ಧಲಿಂಗಯ್ಯನವರೇ ಈ ನಿಮ್ಮ ಸಹಕಾರಕ್ಕೆ ನಾನು ಚಿರಋಣಿ. ಅದಕ್ಕೆ ನಾನು ಭಕ್ತಿ ಕಾಣಿಕೆ ನೀಡಲೇ ಬೇಕು" ಆದರೆ ಆ ಕಾಣಿಕೆ ಚಿರಂತನವಾಗಿರಲಿ ಎಂದು ಅವರು ಭಕ್ತಿ ಕಾಣಿಕೆ ನೀಡಿದ್ದೇನು ಗೊತ್ತೆ? ಶಾಸ್ತ್ರಿಗಳ ಮಕ್ಕಳಾದ ತೋಂಟದಾರ್ಯ ಹಾಗೂ ಮಹಾಂತೇಶ (ಇಂದು ಹೈಕೋರ್ಟ ವಕೀಲರು) ಅವರಿಗೆ ತಮ್ಮ ಚಿತ್ರಕಲಾ ವಿದ್ಯೆಯನ್ನು ಉಚಿತವಾಗಿ ನಾಲ್ಕು ವರ್ಷ ಕಲಿಸಿದ್ದು. ಅಷ್ಟೇ ಅಲ್ಲ ಹಬ್ಬ ಹರಿದಿನಗಳಲ್ಲಿ ಮುರಿಗೆಪ್ಪ ಚೆಟ್ಟಿಯವರ ಪಾದಪೂಜೆಗೊಳ್ಳುವ ಜಂಗಮಯಾರು ಗೊತ್ತೆ ? ಶಾಸ್ತ್ರಿಗಳ ಪುತ್ರ ಮಹಾಂತೇಶ. ಚೆಟ್ಟಿಯವರ ಪತ್ನಿ ಸುಂದ್ರಮ್ಮ ಮತ್ತು ಶಾಸ್ತ್ರಿಗಳ ಪತ್ನಿ ಸುಮಿತ್ರಮ್ಮ ಕೊನೆಯವರೆಗೂ ಅಕ್ಕ–ತಂಗಿಯರಂತೆ ಬಾಳಿದವರು. ಶಾಸ್ತ್ರಿಗಳು ಅಗಲಿದಾಗ ಶ್ರೀ ಮುರಿಗೆಪ್ಪ ಚೆಟ್ಟಿಯವರ ಒಮ್ಮೆ ಮಹಾಂತೇಶರಿಗೆ ಹುಡುಕಿಕೊಂಡು ಮಠಕ್ಕೆ ಬಂದು ಸಾಂತ್ವನ ಹೇಳಿದರಂತೆ. ಪುಣ್ಯ ಸ್ಮರಣೆ ಕಾರ್ಯಕ್ರಮದಲ್ಲಿ ಚೆಟ್ಟಿಯವರನ್ನು ಶಾಸ್ತ್ರಿಗಳ ಟ್ರಸ್ಟ್ ವತಿಯಿಂದ ಸನ್ಮಾನಿಸಲಾಯಿತು.

### ಶ್ರೀ ಕಾಳೆ-ಅಕ್ಕಿ

ಮೊದಮೊದಲು ಗದುಗಿನ ಕಲಾಮಂದಿರ ಕಾರ್ಯ ಸಾಧನೆ ಅಷ್ಟೊಂದು ಅರ್ಥಪೂರ್ಣವಾಗಿರಲಿಲ್ಲ. ಒಮ್ಮೆ ಶಾಸ್ತ್ರಿಗಳು ಶ್ರೀ ಅಕ್ಕಿಯವರನ್ನು ಕರೆದು "ನೀವು ಬರೀ ಪ್ರಿನ್ಸಿಪಾಲ್ ಹುದ್ದೆ ಅಲಂಕರಿಸಲು ಬಂದಿದ್ದೀರೋ ? ಅಥವಾ ಕಲಾ ಪ್ರತಿಭೆಯ ಕುಡಿಗಳಿಗೆ ಮಾರ್ಗದರ್ಶನ ನೀಡಲು ಸಂಸ್ಥೆ ತೆಗೆದಿದ್ದೀರೋ ? ಎಂದು ನೇರವಾಗಿ ಕೇಳಿದಾಗ ಈ ಅಕ್ಕಿಯವರನ್ನು ನಡುಗಿಸಿತು. "ಅಕ್ಕಿ ಅವರೇ ಕಲೆ ಅಂದರೇ ಬರೀ ಬ್ರೆಷ್ ಹಿಡಿದು ಗೆರೆ ಎಳೆಯುವದಲ್ಲ. ಅದೊಂದು ವ್ಯಕ್ತಿತ್ವದ ಸಹಜ ರೂಪ ಹೊಮ್ಮಿಸುವ ವ್ಯಕ್ತಿಯ ಪ್ರತಿರೂಪ. ನಿಮ್ಮ ಸೇವೆ ಗದುಗಿಗೆ, ನಾಡಿಗೆ, ರಾಷ್ಟ್ರಕ್ಕೆ, ಚೇರಾಯುವಾಗಬೇಕು." ಶ್ರೀ ಸಿದ್ಧಲಿಂಗ ಶಾಸ್ತ್ರಿಗಳ ಪಾಂಡಿತ್ಯದ ಅರಿವಿದ್ದ ಅಕ್ಕಿಯವರಿಗೆ ಪ್ರತಿ ನುಡಿಯಲು ಧೈರ್ಯವಿರಲಿಲ್ಲ. ಮುಂದೆ ಕಲಾ ಮಂದಿರ ಚಿತ್ರಕಲೆ, ಶಿಲ್ಪಕಲೆ, ಪ್ಲಾಸ್ಟರ್ ಆಫ್ ಪ್ಯಾರೀಸ್, ನೃತ್ಯ, ಸಂಗೀತ ಎಲ್ಲವನ್ನೂ,

ಮೇಳೈಸಿಕೊಂಡು ಅರ್ಥ ಪೂರ್ಣ ಕಲಾಮಂದಿರವಾಗಿದೆ ಎಂದರೆ ಅದರ ಹಿಂದೆ ಸಿದ್ಧಲಿಂಗ ಶಾಸ್ತ್ರಿಗಳ ನಿರಂತರ ಸಲಹೆ ದೂರ ದೃಷ್ಟಿಯಿತ್ತು.

ಈ ವರ್ಷದ ತೋಂಟದಾರ್ಯ ಜಾತ್ರಾಮಹೋತ್ಸವ – ೨೦೧೦ರ ದಿನಾಂಕ : ೨–೪–೨೦೧೦ರಂದು ಸನ್ಮಾನದಲ್ಲಿ ತಮ್ಮ ಚಿತ್ರಕಲಾ ಪ್ರಪಂಚಕ್ಕೆ ತಮ್ಮ ಸಲಹೆಯ ಅಂತಃಕರಣದ ಸ್ಫೂರ್ತಿ ಶ್ರೀ ಸಿದ್ಧಲಿಂಗಯ್ಯ, ಶಾಸ್ತ್ರೀಗಳು ಎಂದು ಭಾವಪೂರ್ಣವಾಗಿ ಪ್ರೀತಿ, ವಾತ್ಸಲ್ಯ, ಅಭಿಮಾನದಿಂದ ಹೇಳಿದಾಗ ಇಡೀ ಸಭೆಯೇ ಕರತಾಡನ ನೀಡಿತ್ತು. ಈ ಮಾತು ಹೇಳಲು ಕಾರಣ ೧೯೫೭ರ ಸುಮಾರಿನಲ್ಲಿ ಕಾಳೆಯವರು ರಚಿಸಿದ 'ವೀರಶೈವ ವಂಶವೃಕ್ಷ' 'ಅನುಭವ ಮಂಟಪ' ಮುಂತಾದ ಪೇಂಟಿಂಗ್‌ಗಳಿಗೆ ಶಾಸ್ತ್ರಿಗಳೇ ಮಾರ್ಗದರ್ಶನ ಮಾಡಿದ್ದರು.

**ಶಾಸ್ತ್ರಿಗಳ ಸಾಧನೆಗೆ ಹೊಗಳಿಕೆಯ ಸುರಿಮಳೆ**

೨೬. ರಂಭಾಪುರಿ ಸ್ವಾಮಿಗಳು : ಈಗಿನ ರಂಭಾಪುರಿ (ಬಾಳೆಹೊನ್ನೂರ) ಪೀಠದ ಜಗದ್ಗುರುಗಳು ಹುಬ್ಬಳ್ಳಿ ಹತ್ತಿರದ ಹೆಬ್ಬಾಳದ ಕುಂದಗೋಳು ಪೂರ್ವಾಶ್ರಮದಲ್ಲಿ ಆಧ್ಯಾತ್ಮಿಕ ಅಧ್ಯಯನಕ್ಕೆ ಕಾತುರಗೊಂಡವರು. ಅದಕ್ಕಾಗಿ ಅವರು ಶಹಪುರಪೇಟೆ ಸಿದ್ಧಲಿಂಗಶಾಸ್ತ್ರಿಗಳ ಊರಾದ ಬೂದಿಹಾಳಕ್ಕೆ ಬಂದು, ಅವರಿಂದ ಅಭ್ಯಾಸ ಮಾಡಿಸಿಕೊಂಡು ಅವರೊಂದಿಗೆ ಓಡಾಡಿಕೊಂಡು, ಪುರಾಣ ಪ್ರವಚನ ಕಲಿತವರು. ವೀರಶೈವ ಸಿದ್ಧಾಂತ, ಬಸವ ತತ್ವ, ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳನ್ನು ಆಳವಾಗಿ ಅಧ್ಯಯನ ಮಾಡಿಕೊಂಡು ಸಿದ್ಧಲಿಂಗಶಾಸ್ತ್ರಿಗಳಲ್ಲಿ ತಮ್ಮ ಅನೇಕ ಸಂದೇಹಗಳಿಗೆ ಸಲಹೆ ಪಡೆದವರು. ನರೇಗಲ್ ಹುಚ್ಚೀರೇಶ್ವರ ಮಠದ ಕಾರ್ಯಕ್ರಮಕ್ಕೆ ಆಗಮಿಸಿದಾಗ ಪೂಜ್ಯರೇ ಸಿದ್ಧಲಿಂಗಶಾಸ್ತ್ರಿಗಳೊಡನೆ ತಮ್ಮ ಶಿಷ್ಯತ್ವದ ಒಡನಾಟ ಮುಕ್ತಕಂಠದಿಂದ ಘಂಟೆಕಾಲ ಹೊಗಳಿದರು. ಇಂತಹ ತಾತ್ವಿಕ ಶೈಲಿ ಸಿದ್ಧಲಿಂಗಶಾಸ್ತ್ರಿಗಳನ್ನು ಬಿಟ್ಟರೆ, ಕಾಯಾ, ವಾಚಾ, ಮನಸಾ, ಅನುಷ್ಠಾನದಲ್ಲಿ ತಂದು ಪರಿವರ್ತನೆಗೈಯುವ ನಿತ್ಯ ಶರಣರೇ ಸಿದ್ಧಲಿಂಗಶಾಸ್ತ್ರಿಗಳೆಂದರು, ಹೀಗಾಗಿ ಹುಚ್ಚೀರೇಶ್ವರ ಚರಿತ್ರೆ ಪುಸ್ತಕ, ಹಠಯೋಗಿಯ ಆಧ್ಯಾತ್ಮಿಕ ತತ್ವವೇ ಮೈದೋರುವಂತೆ ಅವರಿಗೆ ರಚಿಸಲು ಸಾಧ್ಯವಾಯಿತು. ಅಂಥವರ ಸೇವೆ ಸಮಾಜಕ್ಕೆ ಇನ್ನೂ ಬೇಕಾಗಿದೆ ಎಂದು ಶುಭಕೋರಿ ೧೯೬೩ರಲ್ಲಿ ಆಶೀರ್ವಚನ ನೀಡಿದರು.

೨೬. ಮಹಾಂತಪ್ಪಗಳು : ಧಾರವಾಡದ ಮುರುಘಾಮಠವೆಂದರೆ ಶಿವಯೋಗ ಮಂದಿರವೂ ಹೌದು, ಕಲ್ಯಾಣದ ಅನುಭವಮಂಟಪವೂ ಹೌದು, ಸಿದ್ಧಗಂಗಾ ದಾಸೋಹಮಠವೂ ಹೌದು, ಸಿದ್ಧಲಿಂಗೇಶನ ನೂರೆಂಟು ವಿರಕ್ತರ ಸಂಗಮವೂ ಹೌದು. ಅವರ ಪೀಠಾಧಿಕಾರಿ ಧಾರವಾಡ ಮೃತ್ಯುಂಜಯಪ್ಪ ಐಕ್ಯರಾದ ನಂತರ ಅವರ ಶಿಷ್ಯ ಪೂಜ್ಯ ಮಹಾಂತಪ್ಪಗಳೇ ಪೀಠಾಧಿಕಾರಿಯಾದರು. ಅಥಣಿ ಶಿವಯೋಗಿಗಳ ಶಿಷ್ಯರಾದ ಮೃತ್ಯುಂಜಯಪ್ಪರು ಬಾಲಲೀಲಾ ಶಿವಯೋಗಿಗಳ

ಸಂಗಮವೇ ಮಹಾಂತಪ್ಪಗಳು. ಗಂಭೀರಮೌನ, ಸದಾ ಅಂತರ್‌ಮುಖಿ, ನಿರಾಡಂಬರ, ಗುರುಭಕ್ತಿಗೆ, ಶಿಷ್ಯತ್ವ ಸೇವೆಗಳೆರಡಲ್ಲೂ ಮೇಳೈಸಿ ಬಂದವರೇ ಮಹಾಂತಪ್ಪಗಳು. ಸಿದ್ಧಲಿಂಗಶಾಸ್ತ್ರಿಗಳ ಆಧ್ಯಾತ್ಮಿಕ ಸೇವೆ ಕಂಡು ಹಿಗ್ಗಿದವರು; ಹರಸಿದವರು. ಪಂಡಿತ ನಾಗಭೂಷಣಶಾಸ್ತ್ರಿಗಳಿಗೆ ಆಶ್ರಯ ನೀಡಿದವರು. ಅವರಲ್ಲಿ ಸಿದ್ಧಲಿಂಗಶಾಸ್ತ್ರಿಗಳ ಬಗೆಗೆ ಅತ್ಯಂತ ಪ್ರೀತಿಯ ಭಾವನೆ ವ್ಯಕ್ತಪಡಿಸಿದರು. ಮಹಾಂತೇಶರನ್ನು ಶಾಸ್ತ್ರಿಗಳ ಮಗನೆಂದು ತಿಳಿದಾಕ್ಷಣ ಅವರಿಗೆ ಮಠದಲ್ಲಿ ಓದಿಗೆ ಆಶ್ರಯ ನೀಡಿದರು. ''ಮಾಂತೇಶನನ್ನು ಕರೆದು ನಿಮ್ಮಪ್ಪಾರಂಗ ಆಗಬೇಕಪ್ಪಾ, ಜನಸೇವಾ ಜನಾರ್ಧನ ಸೇವೆ ಅಂತ ಮಾಡಬೇಕಪಾ'' ಅಂತ ಹೇಳ್ತಿದ್ರು ಪ್ರಾರ್ಥನೆ ಕಾಲಕ್ಕೆ ಬೆಳಿಗ್ಗೆ ಸಾಯಂಕಾಲ, ಹಾಲ್‌ಗೆ ಬಂದು ಸಿದ್ಲಿಂಗಶಾಸ್ತ್ರಿಗಳ ಮಗ ಮಹಾಂತೇಶ ಎಲ್ಲಿ? ಎಂದು ಎದ್ದು ನಿಲ್ಲಿಸುತ್ತಾ ಹಾಡಪಽಽ ''ಜಯ ಮೃತ್ಯುಂಜಯ, ಜಯ ಮೃತ್ಯುಂಜಯ'' ಎಲ್ಲ ವಿದ್ಯಾರ್ಥಿಗಳೂ ಕೂಡಿ ಹಾಡುತ್ತಿದ್ದಾಗ ''ನೋಡಪ ಅಪ್ಪಾವರು ನಿನ್ನ ಹಾಡಂದ್ರ ಎಷ್ಟ ಖುಷಿ ಆಗಿ, ಬರ್ತಾರ, ಬೇರೆ ಯಾರಿಂದ ಕೇಳಿದ್ರು ನಂಗ ತೃಪ್ತಿಯಿಲ್ಲಾ ದಿನಾ ನೀನ ಹಾಡಬೇಕಪಾ'' ೨ ವರ್ಷ ಕಾಲ ಅಲ್ಲಿ ನನ್ನ ಸಂಗೀತ, ಸೇವೆ, ಭಕ್ತಿ ಸೇವೆ ಮಹಾಂತಪ್ಪಗಳ ಕೃಪಾ ಕಟಾಕ್ಷದಿಂದ ನೆರವೇರಿತು.

೨೭. ಇಳಕಲ್ ಮಹಾಂತಪ್ಪ ಪೂಜ್ಯರು : ಬಸವಾದಿ ತತ್ವಗಳ ಆಧುನಿಕ ಹರಿಕಾರರಾಗಿ, ಮಹಾನ್ ತಪಸ್ವಿಗಳಾದ ಪೂಜ್ಯ ಇಳಕಲ್ ಮಹಾಂತಶಿವಯೋಗಿ ಗಳ ಕೃಪಾ ಸಿದ್ಧಲಿಂಗಶಾಸ್ತ್ರಿಗಳವರಿಗೆ ಇತ್ತು. ಇಳಕಲದಲ್ಲಿ ಶಾಸ್ತ್ರಿಗಳಿಂದ ಪುರಾಣ ಪ್ರವಚನ ಕೇಳಿದ ಶ್ರೀಗಳು ಇವರ ವಿದ್ವತ್ ನೋಡಿ ''ಶಾಸ್ತ್ರಿಗಳು ಲಿಂಗಾಯತ ಧರ್ಮದ ಆಸ್ತಿಯೇ ಆಗಿದ್ದಾರೆ. ಇವರ ಪ್ರವಚನ ಅಗಾಧ. ಇದೊಂದು ಲೈಬ್ರರಿ. ಅನುಭವ ಮಂಟಪವೇ ಮೈದೂರಿದಂತೆ ಎಂದು ಕೊಂಡಾಡಿ, ಸುಮಿತ್ರಮ್ಮ, ಸಿದ್ಧಲಿಂಗ ದಂಪತಿಗಳನ್ನು ಹರಸಿದವರು.

೨೮. ಶಿರಹಟ್ಟಿ ಜಗದ್ಗುರು ಫಕೀರೇಶ್ವರ ಪೂಜ್ಯರು : ಬಿಜಾಪುರ ಆದಿಲ್‌ಶಾಹಿ ಆದಿಯಾಗಿ, ಡೆಲ್ಲಿಯ ಅಕ್ಬರವರೆಗೆ ತಮ್ಮ ಪವಾಡ ಬೀರಿದ ಏಕೈಕ ಮಹಾನ್ ತಪಸ್ವಿ ಶಿರಹಟ್ಟಿ ಫಕೀರೇಶ್ವರರು. ಜಾತ್ಯಾತೀತ ಶಿವಯೋಗಿಯಾಗಿ ಒಬ್ಬ ಮುಸ್ಲಿಂ ಚಕ್ರವರ್ತಿ ಬೆರಗಾಗಬೇಕಾದರೆ, ಆತನಲ್ಲಿ ಅನ್ಯಧರ್ಮ ಸಹಿಷ್ಣುತೆ ಉಳಿಯಬೇಕಾದಲ್ಲಿ ಅದಕ್ಕೆ ಶಿರಹಟ್ಟಿ ಪೂಜ್ಯರೇ ಸಾಕ್ಷಿ. ಸವಣೂರ ನವಾಬನು ಪರೀಕ್ಷಿಸಲು ಹೋಗಿ ಕೈಸುಟ್ಟುಕೊಂಡ, ಅಕಾಲದಲ್ಲಿ ಮಳೆ ಬರೆಸಿ, ಸತ್ತವರನ್ನು ಬದುಕಿಸಿದ ಮೃತ್ಯುಂಜಯಪ್ಪನಾಗಿ ಪವಿತ್ರ ಸದೃಶವಾಗಿ ಶಿರಹಟ್ಟಿ ಫಕೀರೇಶ್ವರರು ಸಮಾಧಿಸ್ತರಾಗಿದ್ದು ಸರ್ಪವಾಗಿ ಹುತ್ತದಲ್ಲಿ ಲೀನವಾದವರು. ಈ ಪರಂಪರೆಯ ಇಂದಿನ ಜಗದ್ಗುರುಗಳು, ಶ್ರೀ ಮಠದ ಕೃಪೆ ಸಿದ್ಧಲಿಂಗಶಾಸ್ತ್ರಿಗಳಲ್ಲಿ ಸದಾ ಇತ್ತು. ಇಂದಿಗೂ ಆ ಮಠದ ದಿವ್ಯ ಕೃಪೆ ಹೈಕೋರ್ಟ್ ವಕೀಲರಾದ ಶಾಸ್ತ್ರಿಗಳ ಚಿರಂಜೀವಿಯ ಮೇಲೆ ಸದಾ ನೆಲೆ ನಿಂತಿದೆ.

೨೯. ಸಿದ್ಧಾರೂಢ, ಗದಗದ ಮಡಿವಾಳೇಶ, ಶಿಶುವಿನಹಾಳ ಶರೀಫ, ನವಲಗುಂದ ನಾಗಲಿಂಗಪ್ಪ, ಬೂದಿಮಠದ ಪೂಜ್ಯರು, ನವಲಗುಂದದ ಹುರಕಡ್ಲಿ ಚನ್ನಪ್ಪ, ಹುಚ್ಚೀರೇಶ್ವರ, ಹುರಕಡ್ಲಿ ತಾತ ಚಿಕ್ಕೇನಕೊಪ್ಪ ಶರಣರು, ಶಾಸ್ತ್ರಿಗಳಲ್ಲಿ ಪ್ರಭಾವ ಬೀರಿದ ಆರೂಢರು, ಇಂದು ನಿಜಗುಣ ಶಿವಯೋಗಿಗಳ ತತ್ವಪ್ರಸಾರವಾಗಿದಲ್ಲಿ ಆ ಕಾರಣೀ ಪುರುಷ ಸಿದ್ಧಾರೂಢರಿಗೆ ಸಲ್ಲುತ್ತದೆಂದು ಸ್ವತಃ ಶಾಸ್ತ್ರಿಗಳೇ ತಮ್ಮ ಯಳಂದೂರು ಬಸವಲಿಂಗಸ್ವಾಮಿಗಳ ಪುಸ್ತಕದಲ್ಲಿ ಬರೆದಿದ್ದಾರೆ. ಸಾಕ್ಷಾತ್ ಶಿವಸ್ವರೂಪಿ ಲಿಂಗವೇ ತಾನಾದ ''ಬಾಲಲೀಲಾ ಶಿವಯೋಗಿಗಳ ಪವಾಡ ಸದೃಶ ಆರೂಢರು. ಗರಗದ ಮಡಿವಾಳೇಶ, ಕಿತ್ತೂರರಾಣಿ ಚನ್ನಮ್ಮನ ಸಾಕುಪುತ್ರ, ಕಲ್ಮಠದ ಅಧಿಕಾರ ವಹಿಸಿಕೊಳ್ಳಬೇಕಾದ ಕಾಲದಲ್ಲಿ ಶಿವಲಿಂಗಸರ್ಜನಿಂದ ಮೋಸವಾಗಿ ಶಾಪನೀಡಿದ ಶಾಪಾನುಗ್ರಸ್ತರು, ಬೆತ್ತಲೆಯಾಗಿ, ವೈರಾಗ್ಯಮೂರ್ತಿ ಯಾದ ಪವಾಡಪುರುಷ, ನವಲಗುಂದ ನಾಗಲಿಂಗಪ್ಪ ಭೂತ, ವರ್ತಮಾನ, ಭವಿಷ್ಯ ತಿಳಿದ ಆರೂಢ. ಅಂದಿನ ಕಾಲದಲ್ಲೇ ಬಸವಾದಿ ಪ್ರಮಥರಂತೆ ಅಸ್ಪಶ್ಯತೆ ತೊಳೆದ ಆರೂಢ, ಬರೆಯಲಿಲ್ಲ, ಓದಲಿಲ್ಲ, ಆದರೆ ಲಿಂಗಸ್ವರೂಪಿಗಳಾದವರು. ಜಗತ್ತಿನಲ್ಲಿ ಹುಚ್ಚರಂತಿದ್ದು ಜಗದ ಹುಚ್ಚು ಬಿಡಿಸಿದ ತಾತ್ವಿಕ ತತ್ವಜ್ಞಾನಿ ನವಲುಗುಂದದ ನಾಗಲಿಂಗರು. ಬೂದಿಸ್ವಾಮಿಗಳು ಏಳನೂರ ವರ್ಷ ಬಾಳಿದ, ಸ್ವತಃ ಚನ್ನಬಸವೇಶ್ವರರಿಂದ ವೀರಶೈವ ಧರ್ಮಕ್ರಾಂತಿಯಲ್ಲಿ ೧೨೪೦ರಲ್ಲಿ ಜೋಳಗಿ, ಬೆತ್ತ ಪಡೆದು ಧರ್ಮ ರಕ್ಷಣೆ, ಧರ್ಮ ಪ್ರಸಾರ ಕೈ ಕೊಂಡವರು. ಬೂದಿಮಠದ ಪೂಜ್ಯರು. ನಾಗಲಿಂಗಪ್ಪನವರೇ ಅವರಿಗೆ 'ಸಾಕು, ಅಂಗಿ ಕಳಚಿ ಹಾಕು' ಎಂದು ಹೇಳಿದಾಗ ದೇಹತ್ಯಾಗ ಮಾಡಿದವರು. ಹುರಕಡ್ಲಿ ತಾತ ಆರಾಧಕರಾಗಿ ದೈವೀಶಕ್ತಿ ಪಡೆದ ಶರಣರು, ನರೇಗಲ್ ಹುಚ್ಚೀರೇಶ್ವರ ಸಾಕ್ಷಾತ್ ಸ್ವಯಂ ಪ್ರಭು. ಆತನ ಯಾವುದು ಹೌದು ಅದು ಅಲ್ಲ, ಯಾವುದು ಅಲ್ಲ ಅದು ಹೌದು'' ವಾಕ್ಯವೇ ಸರ್ವಧರ್ಮಗಳ ಸಾರವಾಗಿ, ವೀರಶೈವಧರ್ಮದ ಓಂಕಾರವಾಗಿ ಆತ್ಮಜ್ಞಾನ, ಆತ್ಮಶಕ್ತಿ, ಆತ್ಮ ಆಧ್ಯಾತ್ಮಿಕ ತಿರುಳೇ ತಿಳಿಸಿದ ಆರೂಢ, ಇಂದು ಲಕ್ಷಾಂತರ ಜನ ಆತನ ಗದ್ದುಗೆಗೆ ನಡೆದುಕೊಳ್ಳುತ್ತಿದ್ದು ಅವರ ಚರಿತ್ರೆ ಅತ್ಯಂತ ಶ್ರೇಷ್ಟತೆಯಲ್ಲಿ ನಿರೂಪಿಸಿ ಬರೆದವರು ಸಿದ್ಧಲಿಂಗಶಾಸ್ತ್ರಿಗಳು. ಚಿಕೇನಕೊಪ್ಪದ ಶರಣರು ನಡೆದಾಡುವ ದೇವರಾಗಿದ್ದು, ಜಂಗಮರೂಪಿ ಸಾಕ್ಷಾತ್ ದೈವಲೀಲಾ ಪುರುಷರಾಗಿದ್ದ ಆರೂಢರು. ಬಳಗಾನೂರಿನಲ್ಲಿ ಅವರ ದೈವೀಶಕ್ತಿಗೆ ಸಾವಿರಾರು ಭಕ್ತರು ಸೇವೆಗೆ ಇಂದು ನಿಂತಿರುವುದೇ ಅವರ ಪವಾಡ ಸದೃಶ ಕೃಪೆಗೆ ಒಳಗಾದ ಭಕ್ತರು ಭವ್ಯ ಮಠವನ್ನೆ ಕಟ್ಟಿದ್ದಾರೆ. ಜನರ ಮನದ ಕೊಳೆ ತೊಳೆದವರು. ಈ ಎಲ್ಲಾ ಆರೂಢರ ಪ್ರಭಾವ ಶಾಸ್ತ್ರಿಗಳ ಮೇಲೆ ಬಹಳ ಪರಿಣಾಮ ಬೀರಿತ್ತು. ಅವರೆಲ್ಲರ ಶಾಸ್ತ್ರ ಚಿಂತನೆಗಳ ಪುಸ್ತಕ ಸಂಗ್ರಹ ಶಾಸ್ತ್ರಿಗಳ ಮನೆಯ ಲೈಬ್ರೆರಿಯಲ್ಲಿ ೨೫,೦೦೦ಕ್ಕೂ ಹೆಚ್ಚು ಪುಸ್ತಕಗಳು ಇವೆ. ಪುರಾಣಗಳು, ದಾರ್ಶನಿಕ ಚಿಂತನೆಗಳು, ವಿವಿಧ

ಧರ್ಮಸಾರದ ಅನೇಕ ಗ್ರಂಥಗಳು ಅನೇಕ ಸಾಹಿತಿಗಳ ಚಿಂತನೆಗಳು, ವೈವಿಧ್ಯಮಯ ಜೀವನದ ಮಾರ್ಗಗಳು ಅವುಗಳೆಲ್ಲಾ ತಿಳಿದ ಶಾಸ್ತ್ರಿಗಳು ತರುಣ ಸಂಘ ಹೇಳುವಂತೆ "ವೀರಶೈವ ಧರ್ಮದ ಕಂಪ್ಯೂಟರ್" ಎಂದೇ ಎಲ್ಲರೂ ಭಾವಿಸಿದ್ದರು. ಬಹುಶಃ ವೈ. ನಾಗೇಶಶಾಸ್ತ್ರಿಗಳ, ಪಂಡಿತ ನಾಗಭೂಷಣಶಾಸ್ತ್ರಿಗಳ ಎತ್ತರಕ್ಕೆ ಸಾಗಿ, ಅಹಂಭಾವವಿಲ್ಲದ ಶಿಷ್ಯನಾಗಿ ಶರಣ ಬಸವೇಶ್ವರರಂತೆ ಗುರುಶಿಷ್ಯ ಒಂದೇ ಅವತಾರವಾದವರು. "ಕಲಬುರ್ಗಿ ಶರಣ ಬಸವೇಶ್ವರ ಪುರಾಣ" ಹೇಳುವಾಗ ಹಾನಗಲ್ ಕುಮಾರಸ್ವಾಮಿಗಳು ಹೇಗೆ ಸಮಾಜದಲ್ಲಿ ಲಿಂಗವನ್ನು ಕಂಡರು ಎಂಬ ಉಕ್ತಿಗೆ ಜೀವಂತ ಉದಾಹರಣೆಯೇ "ಕಲಬುರ್ಗಿ ಶರಣರೆಂಬ" ಮಾತು ಸತ್ಯವಾಗಿತ್ತು. ಅಸ್ಪೃಶ್ಯರಾರೂ ಇಲ್ಲ. ಶಿವನೊಪ್ಪದ ರೀತಿ ಬದುಕುವವನೇ ಅಸ್ಪೃಶ್ಯ, ಒಪ್ಪುವವ ಅಸ್ಪೃಶ್ಯನಿದ್ದರೂ ಶರಣ, ಸಂಸ್ಕೃತಿ ಅವನು ಪೂಜೆಗೆ ಅರ್ಹ ಎಂಬ "ಎತ್ತರಕ್ಕೆ ಮಾನವೀಯ ಮೌಲ್ಯಂ ಎತ್ತಿ ಹಿಡಿದವರು ಸಿದ್ಧಲಿಂಗಶಾಸ್ತ್ರಿಗಳು. ಬಸವಾದಿ ಪ್ರಮಥರೇ ಹೇಳುವಂತೆ

> ಶಟ್ಟಿಯೆಂಬರೇ ಸಿರಿಯಾಳನ ಮಾದಯ್ಯನ
> ಡೋಹರನೆಂಬೆನೆ ಕಕ್ಕಯ್ಯನ ವಚನಸಾಗಿ
> ಹೊಲಸು ತಿನ್ನುವವನೇ ಹೊಲೆಯ"

ಉಕ್ತಿಯತ್ತಸಾಗಿದರು. ಪುರಾಣದಲ್ಲಿ ಪ್ರಸಂಗ ಬರುವಂತೆ, ಒಬ್ಬರು ಎಪ್ಪಾ "ತಿಪ್ಯಾಗ ಪತ್ರಿ ಗಿಡ ಹುಟ್ಟೈತಿ ಪೂಜಾಕ ಪತ್ರಿ ಅರ್ಹ ಆಗುತ್ತೇನು" ಅಂದ್ರಂತೆ. ಪತ್ರಿ ಶಿವನಿಗೆ ಪ್ರಿಯವಾದುದು. ಹಾಗಾದರೆ ತಿಪ್ಪೆಯಲ್ಲಿ ಬೆಳೆದರೂ ಅದು ಪವಿತ್ರವೇ ಎಂದ ಶರಣ ಬಸಪ್ಪನವರ ವಾಕ್ಯವನ್ನು ಹೇಳುತ್ತಾ ತಿಪ್ಪೆಯನ್ನೂ ಕ್ಷೇತ್ರ ಮಾಡಿದವರು. ಎಂದು ಅಸ್ಪೃಶ್ಯ ಹುಡುಗನನ್ನು ತೋರಿದಾಗ ಶರಣ ಬಸವೇಶ್ವರರು ಗುರುವಿನೆತ್ತರಕ್ಕೆ ಒಯ್ದು, ಅದಕ್ಕೆ ಶರಣ ಬಸವೇಶ್ವರರ ಫೋಟೋದಲ್ಲಿ ಒಂದೇ ದೇಹ; ತಲೆ ಎರಡು, ಇನ್ನೊಂದು ಶಿರಸ್ಸೆ ಶಿಷ್ಯ, ಅಸ್ಪೃಶ್ಯ ಮಡಿವಾಳಪ್ಪನವರದು. ಇಬ್ಬರು ನಿತ್ಯ ಪೂಜೆಗೊಳ್ಳುತ್ತಿದ್ದಾರೆ. ಕಲ್ಯಾಣದ ಅಸ್ಪೃಶ್ಯ ನಿವಾರಣೆ ನಂತರವೂ ಜಾತ್ಯಾತೀತತೆಯನ್ನು ಕಾರ್ಯರೂಪಕ್ಕೆ ತಂದು ಸಮಾಜವನ್ನು ತಿದ್ದಿದವರು ಕಲ್ಯಾಣದ "ಶರಣ ಬಸವೇಶ್ವರು" ಎಂದು ಮೈತುಂಬಿ ಶಾಸ್ತ್ರಿಗಳು ಹೇಳುತ್ತಿದ್ದರು. ಹೀಗೆ ಗದುಗಿನ ಮಠದಲ್ಲಿ ಈಗಿನ ಜಗದ್ಗುರುಗಳಾದ ಡಾ. ಸಿದ್ಧಲಿಂಗ ಶ್ರೀಗಳ ಪ್ರಸಾದ ನಿಲಯಕ್ಕೆ ಅಸ್ಪೃಶ್ಯ ವಿದ್ಯಾರ್ಥಿ, ಭಕ್ತರನ್ನು ಬರಮಾಡಿಕೊಂಡು ಏಕಪಂಕ್ತಿ ದಾಸೋಹ ನಡೆಸಿದಾಗ ಸ್ವಲ್ಪ ಕಾಲ ಮುಜಗರಗೊಂಡವರು. ಶಾಸ್ತ್ರಿಗಳು ಮುಂದೆ ತತ್ವಭ್ಯಾಸದಿಂದ ಸರ್ವವೂ ಶಿವಮಯಂ ಎಂದು ಸಿದ್ಧಲಿಂಗೇಶ್ವರರ ತತ್ವ ಒಪ್ಪಿ ಸಕಲಜೀವಿಗಳಿಗೆ ಲೇಸನ್ನೇ ಬಯಸಿದ ಬಸವಣ್ಣನ ತತ್ವವೇ ಸತ್ಯವೆಂದು; ಸಕಲ ಜಾತಿ ಪಂಗಡಗಳು ಒಂದೇ ಎಂಬ ತತ್ವಕ್ಕೆ ಒಪ್ಪಿಕೊಂಡವರು. ಮುಂದೆ ಗದುಗಿನ ಜಾತ್ರೋತ್ಸವ ಅಧ್ಯಕ್ಷಸ್ಥಾನವನ್ನು ಲಿಂಗಾಯಿತೇತರಿಗೆ ನೀಡಿದಾಗ "ಆ ಜನತೆ ಭಕ್ತಿ,

ನಿಷ್ಠೆ, ವೈಭವದಿಂದ ನಡೆಸಿದ ಸೇವೆ ಕಂಡು ಹೇಳುತ್ತಿದ್ದರು'' ಜಗದ್ಗುರುಗಳು ಅಸಾಮಾನ್ಯರು, ಬಸವಾದಿಗಳ ಕಲ್ಯಾಣದ ಕ್ರಾಂತಿ ಮತ್ತೆ ಗದುಗಿನಲ್ಲಿ ಜರಗಬೇಕಾದರೆ ವೀರಶೈವ ಧರ್ಮದಲ್ಲಿ ಜಗದ್ಗುರುಗಳಿಗಿದ್ದ ಕಳಕಳಿ ಇನ್ನೂ ಮಾಸಿಲ್ಲ.

ತುಂಬಿದ ಸಭೆಯಲ್ಲಿ ವಿದ್ವಾಂಸರಾದ ಗದಗ ಜಗದ್ಗುರುಗಳಿಗೂ ಸಿದ್ಧಲಿಂಗ ಶಾಸ್ತ್ರಿಗಳಿಗೆ ತತ್ವ ವಿಮರ್ಶೆಗಳಲ್ಲಿ ಸಂಘರ್ಷ ನಡೆದಾಗ ''ಸಿದ್ಧಲಿಂಗಪ್ಪ ನೋಡು ಮೋಳಿಗೆ ಮಾರಯ್ಯ ನಿನ್ನ ಪ್ರಶ್ನೆಗೆ ಉತ್ತರ ಹೇಳ್ತಾರ'' ''ಘನಲಿಂಗದೇವರ ಖಂಡತುಂಡ ಮಾತsss ನಿನ್ನ ವಿಚಾರಕ್ಕೆ ಉತ್ತರ ಸೈತಿ'' ಎಲ್ಲರಲ್ಲೂ ಒಂದೇ ರಕ್ತ, ಒಂದೇ ಕ್ರಿಯೆ ಐತಿ. ಅದಕ್ಕೆ ಎಲ್ಲರೂ ಮನುಷ್ಯರೇ, ಪ್ರಾಣಿಗಳಲ್ಲ. ಸಿದ್ಧಲಿಂಗಶಾಸ್ತ್ರಿಗಳೇ ತಮ್ಮ ಕ್ಷೇತ್ರ ದೊಡ್ಡದು, ನಾಡಿನಾದ್ಯಂತ ಸುತ್ತತೀರಿ, ಅಲ್ಲಿ ಬಸವತತ್ವದಲ್ಲಿ ದ್ವಂದ್ವ ಬೇಡ ''ವೀರಶೈವ ಧರ್ಮ'' ಹಿಂದೂ ಧರ್ಮವಲ್ಲ. ವೀರಶೈವವೇ ಒಂದು ಧರ್ಮ. ಇದರ ಮೊದಲ ಭಕ್ತರು. ನೀವು ಮನಗಾಣ್ರಿ. ಎಂದು ಹೇಳಿದಾಗ ಶಾಸ್ತ್ರಿಗಳು ತಲೆಬಾಗಿ ಒಪ್ಪಿ, ಆ ಮಾರ್ಗದಲ್ಲೇ ನಡೆದು ಪ್ರವಚನಕ್ಕೆ ಹೊಸ ತಿರುವು ನೀಡಿದರು.

''ಸಿದ್ಧಲಿಂಗಶಾಸ್ತ್ರಿಗಳು ಗದುಗಿನ ಮಠದ ಇತಿಹಾಸದ ''ಕೀಲಿಕೈ'' ಎಂಬತ್ತಿದ್ದರು ಅವರ ಅಗಲಿಕೆ ಸೋಮವ್ವಗಲ್ಲ, ಬೂದಿಹಾಳಕ್ಕಲ್ಲ, ಅವರ ಮನೆತನಕ್ಕಲ್ಲ, ಆ ಹಾನಿ ಶ್ರೀ ಗದುಗಿನ ಮಠಕ್ಕೆ ಆಗಿದೆ. ಮಠದ ಇತಿಹಾಸ ಬರೆಸಬೇಕು ಅವರಿಂದಲೇ ಅನ್ನುವಾಗಲೇ ಅಗಲಿಬಿಟ್ಟರು.

ಸಾಕೇ, ಒಬ್ಬ ಪಂಡಿತ್ತೋತ್ತಮ ದ್ವಿತೀಯ ಸಿದ್ಧಲಿಂಗ, ದ್ವಿತೀಯ ಬಸವಣ್ಣ, ಚನ್ನಬಸವಣ್ಣ, ಎನಿಸಿಕೊಂಡ ಗದುಗಿನ ಜಗದ್ಗುರುಗಳು ಡಾ. ಸಿದ್ಧಲಿಂಗಸ್ವಾಮಿಗಳು ಸಭೆಯಲ್ಲಿ ಹೇಳಿದ ಮಾತಿದು, ''ಇನ್ನಾದರೂ ಗದುಗಿನ ಮಠದ ವ್ಯವಸ್ಥಾಪಕ ಮಂಡಳಿ ತನ್ನಲ್ಲಿಯ ಅನರ್ಘ್ಯ ರತ್ನಗಳನ್ನು ಗುರುತಿಸುವತ್ತ ಪ್ರಯತ್ನಿಸಲೆಂದು ವಿನಂತಿಸುವ.

ಕಾರಣ ಶ್ರೀ ಮಠದ ಇತಿಹಾಸ ಯಾರಿಗೂ ಗೊತ್ತಿರದೇ ಇರುವ ವಿಷಯ, ಇತಿಹಾಸ ಗದುಗಿನ ಜಗದ್ಗುರುಗಳ ಅಪ್ಪಣೆಯಂತೆ ಶಾಸ್ತ್ರಿಗಳು ಬರೆದ ''ಸಿದ್ಧೇಶ್ವರ ಜಗದ್ಗುರುಗಳು'' ''ಯಳಂದೂರು ಬಸವಲಿಂಗ ಸ್ವಾಮಿಗಳು'' ಎರಡು ಗ್ರಂಥಗಳೇ ಸಾಕ್ಷಿ. ೯ನೇ ಪೀಠದ ಅರ್ಧನಾರೀಶ್ವರನಿಂದ ೧೯ನೇ ಪೀಠದವರೆಗೆ ಸಮಗ್ರ ಇತಿಹಾಸ ಮಾಹಿತಿ ಸಿದ್ಧಲಿಂಗಶಾಸ್ತ್ರಿಗಳಲ್ಲಿತ್ತೆಂಬುದಕ್ಕೆ ಉದಾಹರಣೆ.

''ಮೈಸೂರು ಭಾಗದ ಅರಮನೆಯ ದಿವಾನ ಪೂರ್ಣಯ್ಯನವರು ಮೈಸೂರು ಅರಸರಲ್ಲಿ, ಮುಸ್ಲಿಂ ಅರಸ ಹೈದರಾಲಿ, ಟಿಪ್ಪು ಸುಲ್ತಾನ ಆಸ್ಥಾನದಲ್ಲಿ ಅವರೇ ಪ್ರಮುಖ ಅಮಾತ್ಯರುರಾಗಿದ್ದರು. ಮುಂದೆ ಬ್ರಿಟೀಷರಿಗೆ ತಿಳಿಹೇಳಿ, ಮೈಸೂರ

ರಾಜ್ಯ ಮೈಸೂರ ಅರಸರಿಗೆ ವಾಪಸ್ಸು ಕೊಡಿಸಿದವರೇ ಪೂರ್ಣಯ್ಯನವರೇ. ಮುಳಗುಂದ ಬಾಲಲೀಲಾ ಮಹಾಸ್ವಾಮಿಗಳನ್ನು ಮೈಸೂರ ಅರಸರ ಅನಾರೋಗ್ಯ ಸ್ಥಿತಿಯಲ್ಲಿ ಕರೆಸಿ ಅವರ ಪಾದೋದಕದಿಂದ ಕಾಯಿಲೆ ವಾಸಿ ಮಾಡಿಸಿಕೊಂಡ ಸನ್ಮಾನಿಸಿದ ಅರಸು ಮನೆತನ. ಮೈಸೂರ ಅರಸರು ಬರೆದ ಜಹಾಗೀರೆ ''ಎಳಂದೂರು''. ಅಲ್ಲಿ ಬೆಳೆದು ಬಾಳಿದ ಮಹಾನ್ ತಪಸ್ವಿ ನಿಜಗುಣಶಾಸ್ತ್ರಿ. ತಲೆಮಲಕಕೊಂಡ ಪೂಜ್ಯ ಬಸವಲಿಂಗ ಸ್ವಾಮಿಗಳು ಡಂಬಳ ಮಠದಲ್ಲಿ ಬೆಳೆದವರೆಂಬ ಇತಿಹಾಸ ಮೈಸೂರರವರಿಗೂ ಗೊತ್ತಿಲ್ಲ. ಹಾನಗಲ್ ಕುಮಾರ ಶ್ರೀಗಳು ಅವರ ಶಿಷ್ಯರಾಗಿ ಯೋಗಶಾಸ್ತ್ರ, ನಿಜಗುಣಶಾಸ್ತ್ರ , ವೀರಶೈವ ಸಿದ್ಧಾಂತ ಕಲಿತ ಇತಿಹಾಸ ಸಿದ್ಧಲಿಂಗಶಾಸ್ತ್ರಿಗಳ ಅಧ್ಯಯನಶೀಲತೆ, ಸಂಶೋಧನೆ ನೋಡಿದರೆ ಇಂದಿನ ಎಂ.ಎ., ಪಿಎಚ್.ಡಿ. ಹಾಗೂ ೩೦ ವರ್ಷ ನಿರೂಪಣೆ ಮಾಡುವ ವಾಲಿಗುರುಗಳು, ಹರ್ಲಾಪುರ ತಲೆತಗ್ಗಿಸಬೇಕು. ಮಠದ ಹಿನ್ನೆಲೆ ಗೊತ್ತಿಲ್ಲದವರು ಸಹ ಮೈಕ್ ಮುಂದೆ ನಿಲ್ಲುವ ಈಗಿನ ಸ್ಥಿತಿ ಆಗಿದೆ. ಅಂತ ಮಹಾನ್ ತಪಸ್ವಿ ಐಕ್ಯಗೊಂಡಿದ್ದು. ಅಣ್ಣಿಗೇರಿ ತೋಂಟದಾರ್ಯಮಠದ ೧೧ನೇ ಜಗದ್ಗುರು ಉರಿತೋಂಟದಾರ್ಯ ಗದ್ದುಗೆ ಎದುರು ಗದ್ದಿಗಿಗೆ ಎಂದು ಸಾಕ್ಷಾಧಾರ ಸಹಿತ ನಿರೂಪಿಸಿದವರು ಸಿದ್ಧಲಿಂಗಶಾಸ್ತ್ರಿಗಳು. ಈ ಪುಸ್ತಕ ಬರೆಸಿದ ಕೀರ್ತಿ ಹಾಲಪ್ಪ ತುರ್ಕಾಣಿ ಅವರಿಗೆ ಸಲ್ಲುತ್ತೆ, ಶ್ರೀಮಠದ ಇತಿಹಾಸ ಜ್ಞಾಪಿಸಿದ ನಿಷ್ಠಾವಂತ ಭಕ್ತರಿವರು. ತುರ್ಕಾಣಿ ಹಾಲಪ್ಪ ಬಡತನದಲ್ಲಿದ್ದರೂ ಮಠದ ಇತಿಹಾಸದ ಬಗೆಗೆ ಇಂದಿಗೂ ಅಷ್ಟೇ ಕಾಳಜಿ. ಶಾಸ್ತ್ರಿಗಳ ಹೆಸರು ತೆಗೆದರೆ ಕೈಮುಗಿದು ಎದ್ದು ನಿಲ್ಲುತ್ತಾನೆ.

ಇನ್ನೂ ಸಿದ್ಧೇಶ್ವರ ಜಗದ್ಗುರುಗಳಲ್ಲಿ ಬರುವ ಶ್ರೀ ಮಠದ ಇತಿಹಾಸದ ತುಣುಕುಗಳು.

''ಸಿದ್ಧೇಶ್ವರ ಜಗದ್ಗುರುಗಳ ಕಾಲ ಶ್ರೀ ಮಠ ವಿಜಯನಗರದ ಅರಸರಂತೆ ವೈಭವ ಪೂರ್ಣ ಭಕ್ತಿ ನೆಲೆಯಾಗಿತ್ತು. ಶ್ರೀಮಠಕ್ಕೆ ಕೆಳದಿ ಅರಸರು ನೀಡಿದ ಪಚ್ಚೆರತ್ನ, ಬೆಳ್ಳಿ, ಬಂಗಾರ, ಕಳಸ, ಪಾದುಕೆ, ಛತ್ರಿ, ಛಾಮರ, ಮಠದ ಮೇವಿನಪೇಟೆ ಈಗ ಕಲ್ಯಾಣ ಕೇಂದ್ರವಿರುವ ಸುತ್ತಲಿನ ಭಾಗದಲ್ಲಿತುಂಬಿದ ಮರಗಳಿದ್ದವು. ಅದಕ್ಕೆ ಕಾರಣ ಮಠದ ಆನೆ, ಕುದುರೆ, ಒಂಟೆ, ಕಟ್ಟುವ ಮರಗಳು, ಮಠದ ದರ್ಬಾರು ಕಾಲದಲ್ಲಿ ಬಳಸುವಂತಹವು. ಪೂಜ್ಯರು ಲಿಂಗೈಕ್ಯರಾದಾಗ ೮೫ ವರ್ಷವಾಗಿದ್ದರೂ ಶಿವಸ್ವರೂಪ ಚೈತನ್ಯರಂತೆ, ಯುವಕರಂತೆ ಇದ್ದ ಕಾರಣ ಅವರಲ್ಲಿ ಕಾಯ್ದುಕೊಂಡ ಬಂದ ಬ್ರಹ್ಮಚರ್ಯ (ಶಾಸ್ತ್ರಿಗಳ ತಾತರವರು) ಎಂದೇ ಶಾಸ್ತ್ರಿಗಳು ಹೇಳುತ್ತಿದ್ದರು. ಗದುಗಿನ ಮಠದ ದರ್ಶನಕ್ಕೆ ಬಂದ ಅಂದಿನ ನಾಡಿನ ಮುಖಂಡರ ಇತಿಹಾಸ ಶಾಸ್ತ್ರಿಗಳೇ ಹೇಳಿದಂತೆ ಈ ಕೆಳಗಿನಂತಿದ್ದಾರೆ.

೧. ಹಾನಗಲ್ ಕುಮಾರ ಸ್ವಾಮಿಗಳು ಸಿದ್ಧೇಶ್ವರ ಜಗದ್ಗುರುಗಳ ಪ್ರೀತಿಯ ಶಿಷ್ಯರಾಗಿ ಹಾಗೂ ಗದುಗಿನ ತೋಂಟದಾರ್ಯ ಮಠದ ವಟುವಾಗಿ ಬೆಳದವರು.

೨. ವಾರದ ಮಲ್ಲಪ್ಪನವರು ಕುಟುಂಬ ಸಮೇತ ಬಂದ ಶ್ರೀ ಮಠದಲ್ಲಿ ೨ ದಿನವಿದ್ದು ದಾಸೋಹ ನೆರೆವೇರಿಸಿದ್ದು.

೩. ಶ್ರೀ ಅರಟಾಳ ರುದ್ರಗೌಡರ ಆಶೀರ್ವಾದ ವಿದ್ಯಾಸಂಸ್ಥೆ ಕಟ್ಟಲು ಪ್ರೋತ್ಸಾಹ.

೪. ಮೈಸೂರಿನ ಅರಮನೆ ದಿವಾನರಾದ ಪುಟ್ಟಣ್ಣಶೆಟ್ಟಿಯವರ ಭೇಟಿ.

೫. ಸಿರಸಂಗಿ ಲಿಂಗರಾಜರು ಜಗದ್ಗುರುಗಳ ದರ್ಶನ ಪಡೆದಿದ್ದು.

೬. ಡೆಲ್ಲಿ ಕಾಯ್ದೆ ಕೌನ್ಸಿಲ್ ಸದಸ್ಯರಾಗಿ ಬಹಳಷ್ಟು ಕೆಲಸ ಮಾಡಿದ ರಾಜಾ ಲಖಮನಗೌಡ ಸರದೇಸಾಯಿ ಒಂಟಮುರಿ ಅವರಿಂದ ಶ್ರೀಗಳ ದರ್ಶನ.

೭. ಡೆಪ್ಯೂಟಿ ಕಲೆಕ್ಟರ್ ಗುರುಸಿದ್ಧಪ್ಪನವರು ಸಮಾಜ ಸುಧಾರಣೆಗೆ ಜಗದ್ಗುರುಗಳಿಂದ ಸಲಹೆ ಪಡೆಯುತ್ತಿದ್ದರು ಇತಿಹಾಸದಲ್ಲಿಯ ದಾಖಲೆ.

೮. ಸಂಸ್ಕೃತ ಪಾಠಶಾಲೆ ಸ್ಥಾಪಿಸಲು ಶಾಂತವೀರಪ್ಪನವರು, ಮೆಣಸಿನಕಾಯಿ, ಅರಟಾಳ ವೀರಭದ್ರಪ್ಪನವರು ಆಗಾಗ್ಗೆ ಶ್ರೀಮಠಕ್ಕೆ ಭೇಟಿ ನೀಡುತ್ತಿದ್ದರು.

೯. ಹೈದರಾಬಾದ ನಿಜಾಮರ ಸಂಬಂಧಿಗಳೂ ಅಲ್ಲಿನ ಸರಕಾರದ ವರಿಷ್ಠರು ಆದ ಸಾಲಾರ್‌ಜಂಗ್ ಅವರು ಕೊಪ್ಪಳ ಸಂಗಪ್ಪನರೊಂದಿಗೆ ಶ್ರೀಗಳ ದರ್ಶನ ಪಡೆದುಕೊಂಡಿದ್ದು.

೧೦. ಬೀಳೂರು, ನೊಣವಿನಕೆರೆ, ತರೀಕೆರೆ, ನಂದಗಡ, ರಾಮಗಿರಿ, ಕನಕಗಿರಿ, ರೋಣ, ಗಂಗಾವತಿ, ಹಾವೇರಿ ಶ್ರೀಗಳು ಪೂಜ್ಯರ ದರ್ಶನ ಭಾಗ್ಯ ಪಡೆದವರು.

೧೧. ಗದುಗಿನ ತೋಂಟದಾರ್ಯಮಠದ ಶಾಖಾಮಠವಾದ ಶಿರೋಳದ ಸದಾ ಶಿವಚರಮೂರ್ತಿಗಳ ಪೂಜಾನುಷ್ಠಾನು ಶಕ್ತಿಯುಳ್ಳವರಾಗಿದ್ದರು.

ಶಿರೋಳ ಬ್ರಾಹ್ಮಣ ಶಾನುಭೋಗರಿಗೆ ತೊನ್ನು ಹಿಡಿದಿತ್ತು ತೋಂಟದಾರ್ಯ ಸಂಸ್ಥಾನಮಠ ಶಾಖೆ ಮುಂಡರಗಿ ಅನ್ನದಾನ ಮಹಾಸ್ವಾಮಿಗಳ ವಾಕ್‌ಸಿದ್ಧಿಯಿಂದ ತೊನ್ನು ತೊಲಗಿ ಅವರು ದಾನ ನೀಡಿದ ಊರ ಹತ್ತಿರ ಹೊಲದಲ್ಲೇ ಶಿರೋಳದ ಈಗಿನ ತೋಂಟದಾರ್ಯಮಠ ಕಟ್ಟಲಾಯ್ತು.

ಮಠ ಕಟ್ಟಲು ಭಿಕ್ಷೆಗೆ ಅನ್ನದಾನ ಮಹಾಸ್ವಾಮಿಗಳು ಮುಷ್ಟಿಗೇರಿಗೆ ಹೋದಾಗ ''ದ್ಯಾಮವ್ವನ ಗುಡಿ ಬಂತು'' ಎಂದು ತಕ್ಷಣ ನಿಂತ ಪೂಜ್ಯರು ''ದ್ಯಾಮವ್ವ ಭಿಕ್ಷೆ ಕೊಡ್ತೇನಂತಾಳ'' ಅಂದ್ರು, ಅವರ ಹಿಂದಿದ್ದ ಭಕ್ತರು ತಮಾಷೆ ಅಂತ ನಕ್ರು. ಆದರೆ ಗುಡಿಯಿಂದ ಬಟ್ಟೆ ಗಂಟು ಹೊರಗೆ ಬಿತ್ತು, ಬಟ್ಟೆ ನೋಡಿದರೆ ದ್ಯಾಮವ್ವನ ಒಡವೆ ಇತ್ತು. ಅದೇ ದುಡ್ಡಿನಿಂದ ಶಿರೋಳ ಮಠ ಕಟ್ಟಲಾಯ್ತು. ಈಗಲೂ ಜಾತ್ರೆಯಲ್ಲಿ ದ್ಯಾಮವ್ವನ ಗುಡಿಗೆ ಶೀರೆ, ಕುಬಸ ಶಿರೋಳದಲ್ಲಿರುವ ತೋಂಟದಾರ್ಯಮಠದಿಂದ ಕಳುಹಿಸುವ ಸಂಪ್ರದಾಯವಿದೆ. ಇದು ಸಿದ್ಧಲಿಂಗಶಾಸ್ತ್ರಿಗಳ ಸಂಶೋಧನೆಯಲ್ಲಿ ದೊರೆತ ನಿದರ್ಶನಗಳು. ಈ ಇತಿಹಾಸ ಗದಗ ಶ್ರೀಮಠದಲ್ಲಿ ಎಷ್ಟು ಜನಕ್ಕೆ ಗೊತ್ತು?

ಒಮ್ಮೆ ಸಿದ್ಧಲಿಂಗಶಾಸ್ತ್ರಿಗಳು ಪತ್ನಿ ಸಮೇತ ಗದಗ ಜಾತ್ರೆಗೆ ಬಂದಿದ್ದರು ೨೦–೨೫ ವಯಸ್ಸು ಶಾಸ್ತ್ರಿಗಳಿಗೆ, ಜಾತ್ರೆ ದಿನ ರಾತ್ರಿ ಬೂದಿಹಾಳದಿಂದ ಆಳುಬಂದು ''ಅಮ್ಮ ಬಸಲಿಂಗಮ್ಮ ತೀರಿಹೋದರು'' ಅಂತ ಆಳು ಹೇಳಿದ, ಅಂದೇ ಶಾಸ್ತ್ರಿಗಳ ಜೇಬು ಪಿಕ್‌ಪಾಕೇಟ್ ಆಗಿ ಕೈಯಲ್ಲಿ ಹಣವಿಲ್ಲದಂತಾಯ್ತು. ಮುಂಡರಗಿ ಅನ್ನದಾನ ಶ್ರೀಗಳಲ್ಲಿ ನಡೆದ ವಿಚಾರ ಶಾಸ್ತ್ರಿಗಳು ಭಿನ್ನವಿಸಿದರು ''ಏಽಽ ಮೂಳ ಅದೆಲ್ಲಿ ಸಾಯ್ತೈತಿ, ಎರಡು ದಿನ ಇದ್ದು ಜಾತ್ರೆ ಕಾರ್ಯ ಮುಗಿಸಿ ಹೋಗು ಅಪವಾದ ಬರುವುದಿಲ್ಲ. ಸಿದ್ಧಲಿಂಗೇಶನ ಸೇವೆ ಮಾಡವರ್‍ಗೆ ಅಪವಾದ ಎಂಥಾದ್ದು? ಅಂದ್ರಂತೆ'', ಶಾಸ್ತ್ರಿಗಳು ಮಾರನೇ ದಿನ ಬೂದಿಹಾಳಕ್ಕೆ ಬಂದಾಗ ಬಸವಲಿಂಗಮ್ಮ ಆರಾಮಾಗಿ ಊರ ಜನತೆ ಜತೆ ಮಾತನಾಡ್ತಾ ಕುಳಿತಿದ್ದು ಕೇಳಿ ಶಾಸ್ತ್ರಿಗಳು ದಂಗಾಗಿ ಕುಳಿತಿದ್ದರಂತೆ. ಈ ಘಟನೆ ಮುಖ್ಯವಲ್ಲ ಅವರು ಅನ್ನದಾನ ಶ್ರೀಗಳಲ್ಲಿ, ಶಿವಪೂಜಾನಿಷ್ಠೆಯಲ್ಲಿ ಸಿದ್ಧಲಿಂಗ ನಾಮ ಸ್ಮರಣೆ ಮಂತ್ರದಲ್ಲಿ ತುಂಬಿದ ವಾಕ್ ಶಕ್ತಿ, ವೈರಾಗ್ಯದ ಶಕ್ತಿತೋರಿಸುತ್ತದೆ.

ಭಾಷೆಯ ಬಗ್ಗೆ ಶಾಸ್ತ್ರಿಗಳಿಗೆ ಗಾಢವಾದ ಆಸಕ್ತಿ, ಸಂಸ್ಕೃತ ಪ್ರಾಚೀನವಾದ ಭಾಷೆ, ಜಗದ್ಗುರುಗಳು ಆ ನಿಟ್ಟಿನಲ್ಲಿ ಅರಟಾಳು ರುದ್ರಗೌಡರಿಗೆ ಸಂಸ್ಕೃತ ಪಾಠಶಾಲೆಯ ಅವಶ್ಯಕತೆ ತಿಳಿಸಿದಾಗ ಅಂದೇ ಮಠದ ಭಕ್ತರು ಗದುಗಿನ ಮಠದಲ್ಲಿ ಸಂಸ್ಕೃತ ಪಾಠಶಾಲೆ ಪ್ರಾರಂಭಿಸಲು ಕೆಳಕಂಡ ಮಹನೀಯರು ನೀಡಿದ ಕಾಣಿಕೆ ಈ ರೀತಿ ಇದೆ–

ಮಾನ್ವಿ ೪ ಸಹೋದರರು ತಲಾ ೨೦೦೦/– ಒಟ್ಟು ೮೦೦೦/–

ಮಡಿವಾಳಪ್ಪನವರ ತಮ್ಮ ತುಲಾಭಾರದಲ್ಲಿ ಬಂದ ೨೦೦೦/– ಒಟ್ಟು ೧೦,೦೦೦/–

ಗದಗ ಮಠದಲ್ಲಿ ಸಂಸ್ಕೃತ ಪಾಠಶಾಲಾ ಪ್ರಾರಂಭವಾಗಿದ್ದು, ಆ ಶಾಲೆಯಲ್ಲಿ ಕಲಿತ ಮಹಾನ್ ವ್ಯಕ್ತಿಗಳೆಂದರೆ :

೧. ಚಿತ್ರದುರ್ಗ ಬ್ರಹ್ಮನ್ಮಠದ ಜಯದೇವ ಮೂರ್ತಿಗಳು.

೨. ಶಲವಡಿ ಗುರುಶಾಂತಸ್ವಾಮಿಗಳು.

೩. ಧಾರವಾಡ ಮೃತ್ಯುಂಜಯ ಅಪ್ಪಗಳು.

೪. ಶ್ರೀಹೊಳಲ ಚಂದ್ರಶೇಖರಶಾಸ್ತ್ರಿಗಳು.

೫. ಪಂಡಿತ ಶಂಕರಶಾಸ್ತ್ರಿಗಳು.

೬. ಮೂಗನೂರ ಶಿವದೇವಶಾಸ್ತ್ರಿಗಳು.

೭. ಶ್ರೀ ಬಸವಲಿಂಗಶಾಸ್ತ್ರಿಗಳು.

೮. ಸುರಪುರಮಠ ಸೂಡಿ ಹಿರೇಮಠ ಬಸವರಾಜಶಾಸ್ತ್ರಿಗಳು.

೯. ರಾಜಶೇಖರಶಾಸ್ತ್ರಿಗಳು ಅಜ್ಜಂಪುರ.

೧೦. ಹೊಳಲು ಚನ್ನಬಸವಶಾಸ್ತ್ರಿಗಳು.

ಕರಿಬಸವ ಗವಾಯಿಗಳು ಸಂಗೀತ ಶಾಲೆಗೆ ಗ್ವಾಲಿಯರ್ ಆಸ್ಥಾನದ ಸಂಗೀತ ವಿದ್ವಾಂಸರಾದ (ಶಾಸ್ತ್ರಿಗಳ ತಂದೆ) ಅಣ್ಣಿಗೇರಿ ಮಠಕ್ಕೆ ಮುಸ್ಲಿಂ ಭಕ್ತರೇ ಭೂದಾನ ಮಾಡಿದ್ದು ಇವೆಲ್ಲಾ ಇತಿಹಾಸ ಸಿದ್ಧಲಿಂಗಶಾಸ್ತ್ರಿಗಳಲ್ಲಿ ಸಾಕಷ್ಟಿತ್ತು.

೨೧-೧೧-೧೯೧೭

ಪ್ರಾಥಃಕಾಲ ಸಿದ್ಧೇಶ್ವರ ಜಗದ್ಗುರುಗಳು ಯಡೆಯೂರ ಕ್ಷೇತ್ರಕ್ಕೆ ಹೊರಟಾಗ ಸನ್ನಿಧಿ ಜತೆಗೆ ಡಂಬಳ ಮಠದಿಂದ ಪ್ರಯಾಣಿಸಿದ ಹರಗುರು ಚರಮೂರ್ತಿಗಳ ವಿವರ.

೧. ಶ್ರೀ ಮ.ನಿ.ಪ್ರ. ಸಿದ್ಧೇಶ್ವರ ಜಗದ್ಗುರುಗಳು.

೨. ಶ್ರೀ ಹಾನಗಲ್ ಕುಮಾರಸ್ವಾಮಿಗಳು.

೩. ಶ್ರೀ ಮ.ನಿ.ಪ್ರ. ಶಿವಬಸವಸ್ವಾಮಿಗಳು, ಹಾವೇರಿ.

೪. ಶ್ರೀ ಮ.ನಿ.ಪ್ರ. ಶಿವಮೂರ್ತಿಸ್ವಾಮಿಗಳು ಚರಂತಿ ಮಠ ಬಾಗಲಕೋಟೆ.

೫. ಶ್ರೀ ಮ.ನಿ.ಪ್ರ. ಅಪ್ಪಯ್ಯಸ್ವಾಮಿಗಳು ಬಿದರಿ, ಸವದತ್ತಿ.

೬. ಶ್ರೀ ಮ.ನಿ.ಪ್ರ. ವ್ಯಾಕರಣ ಪಟ್ಟಾಧ್ಯಕ್ಷರು.

೭. ಶ್ರೀ ಮ.ನಿ.ಪ್ರ. ಗವಿಮಠದ ಬಸವಲಿಂಗಸ್ವಾಮಿಗಳು, ನವಲಗುಂದ

೮. ಶ್ರೀ ಮ.ನಿ.ಪ್ರ. ಇಳಕಲ್ಲದ ಮಹಾಂತಸ್ವಾಮಿಗಳು.

೯. ಶ್ರೀ ಮ.ನಿ.ಪ್ರ. ಬಸವಲಿಂಗಸ್ವಾಮಿಗಳು, ನಿರಡಗಂಬ

೧೦. ಶ್ರೀ ಮ.ನಿ.ಪ್ರ. ಶಿವಬಸವಸ್ವಾಮಿಗಳು ರುದ್ರಾಕ್ಷಿಮಠ, ನಾಗನೂರ.

೧೧. ಶ್ರೀ ಷ.ಬ್ರ. ಶಿರೂರ ಪಟ್ಟಾಧ್ಯಕ್ಷರು, ಬಾಗಲಕೋಟೆ.

೧೨. ಶ್ರೀ ಷ.ಬ್ರ. ಮಹೇಶ್ವರಸ್ವಾಮಿಗಳು, ಹಾನಗಲ್

೧೩. ಶ್ರೀ ಮ.ನಿ.ಪ್ರ. ಬಿದರಿ ಪಟ್ಟದೇವರು.

೧೪. ಶ್ರೀ ಮ.ನಿ.ಪ್ರ. ಚರಂತಪ್ಪನವರು, ಸಂಪಗಾಂವ್

೧೫. ಶ್ರೀ ಸೊನ್ನದ ಮರಿದೇವರು ಶ್ರೀ ರೇಣುಕದೇವರು ಹಾನಗಲ್

೧೬. ಶ್ರೀ ಷ.ಬ್ರ. ಕೆಂಚಬಸವ ಪಟ್ಟದ್ದೇವರು, ಗುಲ್ಬರ್ಗ

೧೭. ಶ್ರೀ ಮ.ನಿ.ಪ್ರ. ಓಲಿಮಠದ ಸ್ವಾಮಿಗಳು, ಜಮಖಂಡಿ.

೧೮. ಶ್ರೀ ಘನಲಿಂಗದೇವರು, ಶಿಶುಬರ.

೧೯. ಶ್ರೀ ಅನಂತಪುರದ ಶ್ರೀ ಸಚ್ಚಿದಾನಂದದೇವರು.

೨೦. ಶ್ರೀ ಆದಿನಾಥದೇವರು, ಕೋಳಗಿ

೨೧. ಶ್ರೀ ಸಿದ್ಧವೀರದೇವರು, ನವಲಗುಂದ.

೨೨. ಶ್ರೀ ಮ.ನಿ.ಪ್ರ. ರಾಮರೆಡ್ಡಿ ಸ್ವಾಮಿಗಳು, ಗುರುಲಿಂಗದೇವರು ಹಾರ್ನಹಳ್ಳಿ.

೨೩. ಶ್ರೀ ಚಿದ್ಘನಾರಾರ್ಯರು ಅನಂತಪುರ.

೨೪. ಶ್ರೀ ಷ.ಬ್ರ. ರೇವಣಸಿದ್ಧ ಪಟ್ಟದ್ದೇವರು, ಕೆಳದಿ.

೨೫. ಶ್ರೀ ಹಾರನಹಳ್ಳಿ ಮರಿದೇವರು.

೨೬. ಶ್ರೀ ಕೆಂಪಯ್ಯದೇವರು ಮರಡಿಮಠ, ಕೊಣ್ಣೂರು.

೨೭. ಶ್ರೀ ಷ.ಬ್ರ. ಸಖರಾಯಪಟ್ಟಣದೇವರು.

೨೮. ಶ್ರೀ ಮ.ನಿ.ಪ್ರ. ನೊಣವಿನಕೆರೆ ಶ್ರೀಗಳು.

೨೯. ಶ್ರೀ ಮ.ನಿ.ಪ್ರ. ತುರುವೆಕೆರೆ ಶ್ರೀಗಳು.

೩೦. ಶ್ರೀ ತರೀಕೆರೆ ಶ್ರೀಗಳು.

೩೧. ಶ್ರೀ ಮ.ನಿ.ಪ್ರ. ನಂದಗಡ ಶ್ರೀಗಳು

೩೨. ಶ್ರೀ ಮ.ನಿ.ಪ್ರ. ಗುರುಪಾದ ಶ್ರೀಗಳು, ಗುಲಗಂಜಿ ಮಠ

೩೩. ಶ್ರೀ ಷ.ಬ್ರ. ಸತ್ತಿಗೆರೆ ಪಟ್ಟದ ದೇವರು.

೩೪. ಶ್ರೀ ಸವಡಿ ಪಟ್ಟಾಧ್ಯಕ್ಷರು

೩೫. ಅಬ್ಬೀಗೇರಿ ಪಟ್ಟದೇವರು.

೩೬. ಮಂಗಳೂರು ಪಟ್ಟದೇವರು ಮುಂತಾದವರು.

### ಮೌನಸ್ವಾಮಿಗಳ ಅನುಗ್ರಹ

ಸಿದ್ಧಲಿಂಗಶಾಸ್ತ್ರಿಗಳ ಬಡತನ, ಮನೆಗೆ ಯಶವಂತನಗರದ ಪೂಜ್ಯ ಮೌನ ಸ್ವಾಮಿಗಳು ಆಗಮಿಸಿದ್ದರು. ಅವರ ಕಷ್ಟನೋಡಿ, ಅವರು ಮೌನಿಗಳಾಗಿದ್ದರಿಂದ ಪಾಟಿಯಲ್ಲಿ ಬರೆದು ಮನೆಯಲ್ಲಿ ಹಸು ಸಾಕಲು ಹೇಳಿದ್ದರು.

### ಬಡತನ ನಿವಾರಿಸಿದ ಕಾಮಧೇನುಗಳು

ಆಕಳ ಕಟ್ಟಿ, ಕಾಮಧೇನು ಬಂದ್ರ ಬಡತನ ಹೋಕ್ಕೈತಿ ಅಂತಾ ಇಪ್ಪತ್ತೈದು ರೂಪಾಯಿಗೆ ''ಶಾಂತಿ'' ಅನ್ನುವ ಹಸು ತಂದರು. ಆಗ ಸೋವಿಕಾಲ ಇರುವದರಿಂದ ಸ್ವಲ್ಪ ದಿನದ ನಂತರ ''ಮಹಾದೇವಿ'' ಎನ್ನುವ ಹಸು ಕೊಂಡರು. ಮುಂದೆ ೧೫–೧೬ ಹಸುಗಳಾದವು. ಹಸುಗಳ ಸಂಖ್ಯೆ ಬೆಳೆದಂತೆ ಬಡತನವೂ ಮಾಯವಾಗತೊಡಗಿತು. ಈ ಬಲವಾದ ನಂಬಿಕೆ, ಗುರುನಿಷ್ಠೆಗೆ ಕಾರಣವಾಗಿತ್ತು.

### ಸಂಬಂಧಗಳು

ಎಷ್ಟೇ ಕಷ್ಟ ಬರಲಿ, ಸಂಬಂಧಗಳನ್ನು ಕಾಯ್ದುಕೊಳ್ಳುವಲ್ಲಿ ಶಾಸ್ತ್ರಿಗಳು ಬಹಳ ಕಾಳಜಿ ವಹಿಸುತ್ತಿದ್ದರು. ಕೆಲಸವಾಯ್ತು ಅಂತಾ ಬಳಸಿಕೊಂಡವರಲ್ಲ. ಕಾರ್ಯವಿಲ್ಲದಿದ್ದರೂ ಎಲ್ಲಾ ಶಿಷ್ಯವರ್ಗದ ಕಷ್ಟ ಸುಖ ವಿಚಾರಿಸಲು ಹಾವೇರಿ, ಅಣ್ಣಿಗೇರಿ, ಮುಂಡರಗಿ, ಡಂಬಳ, ಕುಷ್ಟಗಿ, ಲಾಯದಗುಂದಿ, ತೊಂಡ್ಯಾಳ, ಬಂಡ್ಯಾಳ, ಅಬ್ಬಿಗೇರಿ, ಜಕ್ಕಲಿ, ಮಾರನಬಸರಿ, ರೋಣ, ಚಿಕ್ಕಪಡಸಲಗಿ, ಹುನಗುಂದ, ಇಳಕಲ್, ಎಲ್ಲಾ ಊರುಗಳಿಗೆ ಇದ್ದು ಒಂದೇ ಮನೆಯವರಂತೆ ಹೋಗಿರುತ್ತಿದ್ದರು. ಇಂದೂ ಅದೇ ಪರಂಪರೆ ಅವರ ಧರ್ಮ ಪತ್ನಿ ಸುಮಿತ್ರಮ್ಮ ನಡೆದುಕೊಳ್ಳುತ್ತಿದ್ದಾರೆ.

### ನನ್ನ ಮೇಲೆ ಅಪ್ಪಾಜಿ ಪ್ರಭಾವ ಹಾಗೂ ರಮಣ ಮಹರ್ಷಿಗಳಲ್ಲಿ ಶಾಸ್ತ್ರಿಗಳ ನಿಷ್ಠೆ

ಈಗ ೧೭ ವರ್ಷದ ಹಿಂದಿನ ಮಾತು. ಅಂದು ಬೆಂಗಳೂರಿನಿಂದ ಗದುಗಿಗೆ ಬಂದಿದ್ದೆ, ಗದಗನಲ್ಲಿ ತೋಂಟದಾರ್ಯ ಮಠದಲ್ಲಿ ಬೆಳಗಿನ ಶಿವಾನುಭವ ನಡೆದಿತ್ತು. ಶಾಸ್ತ್ರಿಗಳೇ ಪ್ರವಚನ ಮಾಡುತ್ತಿದ್ದರು. ನಾನೂ ಪ್ರಾಥಃಕಾಲದ ಶಿವಾನುಭವ ಹೇಗೆ ನಡೆಯುತ್ತೇ ಅಂತಾ ಕುಳಿತಿದ್ದೆ. ಅಂದು ಶಾಸ್ತ್ರಿಗಳಿಂದ ಇಂದ್ರಿಯನಿಗ್ರಹ, ಮನೋನಿಗ್ರಹದ ಕುರಿತ ಮಾತು ನಡೆದಿತ್ತು. ಹಾಗೆ ಭಾವಪರವಶರಾಗಿ ''ಇಂದ್ರಿಯ ನಿಗ್ರಹವೆಂದರೆ ರಮಣ ಮಹರ್ಷಿಗಳನ್ನು ನೆನೆಯಬೇಕು. ಅವರ ಕೈಗೆ ಹುಣ್ಣಾಗಿತ್ತು, ಡಾಕ್ಟರರು ಬಂದು ಹುಣ್ಣು ತುಂಬಾ ಪ್ರಸರಿಸಿದೆ ಆಪರೇಶನ್ ಆಗಬೇಕೆಂದು ಒತ್ತಾಯಿಸಿದರು. ಒಪ್ಪಿದ ರಮಣ ಮಹರ್ಷಿಗಳಿಗೆ ಡಾಕ್ಟರರು ಅನಸ್ತೇಸಿಯ ಕೊಡಲು ಬಂದಾಗ ''ಏನದು'' ? ಅಂದರು. ''ಅನಸ್ತೇಸಿಯ''

ಅದೇನು ಮಾಡುತ್ತೆ? ಆಪರೇಷನ್ ಆಗುವಾಗ ಆ ದೇಹದ ಭಾಗಕ್ಕೆ ಪ್ರಜ್ಞೆ ಇರುವುದಿಲ್ಲ; ನೋವಾಗಿದ್ದು ಗೊತ್ತಾಗುವುದಿಲ್ಲ. ಹಾಗೇನೂ ಅಂತಾ ತಗೋಳ್ಳಿ ಕೈ ಅದೇನ ಆಪರೇಷನ್ ಮಾಡಿ ಅಂದರು. ಡಾಕ್ಟರರು ನೋಡುತ್ತಾರೆ "ಕೈಯಲ್ಲಿ ನಾಡೀ ಬಡಿತವೇ ಇಲ್ಲ" ಅನಸ್ತೇಷಿಯ ಕೊಡುವದಕ್ಕಿಂತಲೂ ಮೌನವಾಗಿ ನರಗಳು ಮಲಗಿವೆ ಆಪರೇಷನ್ ಆಯ್ತು, ಒಂದು ಕ್ಷಣ ಸಹ ರಮಣಮಹರ್ಷಿಗಳು ನೋವು ಅನುಭವಿಸಲಿಲ್ಲ ಅಂತಾ ಮನೋನಿಗ್ರಹ. ಇಂದ್ರಿಯ ನಿಗ್ರಹವೇ ನಿಜವಾದ ನಿಗ್ರಹ. ಇದನ್ನು ಅಕ್ಕಮಹಾದೇವಿ, ಬಸವಣ್ಣ, ಚನ್ನಬಸವ, ಅಲ್ಲಮಪ್ರಭು, ಸಿದ್ಧರಾಮ, ಸಿದ್ಧಲಿಂಗೇಶ್ವರರು, ಅರ್ಧನಾರೀಶ್ವರು, ಯಳಂದೂರು ಬಸವಲಿಂಗಸ್ವಾಮಿಗಳು ಸಾಧಿಸಿದ್ದರೆಂದು ಹೇಳುವಾಗ ನಾನೇ ಉಸಿರು ಕಟ್ಟಿ ಕುಳಿತಿದ್ದೆ.

ಅಂದೇ ಯಾರೋ ಒಬ್ಬರು ಇಷ್ಟೆಲ್ಲ ಪಂಡಿತರಿದ್ದೀರಿ ಯಾಕೆ ಶಂಕರಾಚಾರ್ಯರಂತೆ ಎಲ್ಲಾ ಕಡೆಗೆ ಬೋಧಿಸಲಿಲ್ಲ. ಅವರಂತೆ ಪ್ರಸಿದ್ಧಿ ಪಡೆಯಲಿಲ್ಲಾಂತ ಶಿವಾನುಭವಿ ಒಬ್ಬ ಶಾಸ್ತ್ರಿಗಳಿಗೆ ಪ್ರಶ್ನೆ ಹಾಕಿದ. ಮೌನದಿಂದ ಶಾಸ್ತ್ರಿಗಳು "ಅಪಾ, ನೋಡು ಒಂದು ವಿದ್ವಾತ ಬೀಸಣಿಕೆ ಎಷ್ಟೇ ಬೇಡಿಕೊಂಡರು ಬೆಳಕುಕೊಡುವುದಿಲ್ಲ. ಒಂದು ವಿದ್ಯುತ್ ದೀಪ ಏಷ್ಟೇ ಬೇಡಿಕೊಂಡರು ಗಾಳಿ ಕೊಡುವುದಿಲ್ಲ. "ಕರ್ಮಕ್ಷೇತ್ರದಲ್ಲಿ ಪ್ರತಿಯೊಬ್ಬರೂ ತಮ್ಮ ಸ್ವಂತದ ಪೂರ್ವನಿಯಂತ್ರಿತ ವಿಧಿಗಳನುಸಾರವಾಗಿ ಕೆಲಸ ಮಾಡಬೇಕು" ಮೀರಬಾರದು. ಶಿವಾನುಭವ ಪ್ರಚಾರ, ಪ್ರಸಿದ್ಧಿಗಾಗಿ ಅಲ್ಲ? ಸ್ವಾನುಭವಕ್ಕೆ, ಆನಂದಕ್ಕೆ, ನಿನ್ನ ಆತ್ಮೋದ್ಧಾರಕ್ಕೆ ಮಾತ್ರ. ಅದಕ್ಕೆ ಲೋಕದ ಡೊಂಕ ನಿವೇಕೆ ತಿದ್ದುವಿರಿ, ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ ಅಂತಲೇ ಹೇಳಿದ್ದು. ಶಿವಾನುಭವದ ಅನುಭವ ನನಗೇ ಹೆಚ್ಚಾಗಿ ಗೊತ್ತಿಲ್ಲ. ಪ್ರಸಿದ್ಧಿ, ಕೀರ್ತಿ, ನನ್ನ ತಲೀ ಕೆಡಸಬಹುದಂತಹ, ನನ್ನ ಮನಸ್ಸು ಬಿಟ್ಟುಕೊಟ್ಟಿಲ್ಲ ಅಂತಾ ಹೇಳುತ್ತಾ ನಕ್ಕಿದ್ದೇ, ನಕ್ಕಿದ್ದು ಸಭಿಕರೆಲ್ಲಾ ತಲೆದೂಗಿದರು.

ನಾನು ಕೋರ್ಟ್ ಕೇಸಿನ ವಿಷಯಕ್ಕೆ ಬಂದಿದ್ದರಿಂದ ಒಂದು ದಿನ ಉಳಿಯಬೇಕಾಯ್ತು. ಹೇಗೂ ಬೆಳಿಗ್ಗೆ ೫ ಕ್ಕೆ ಎಚ್ಚರವಾಯ್ತು. ನಿನ್ನೆಯ ಶಿವಾನುಭವದ ಕಳೆ ಇನ್ನೂ ಬಿಟ್ಟಿರಲಿಲ್ಲ. ಸ್ನಾನ ಮುಗಿಸಿ ಬೇಗ ಹೋದೆ. ಆಗಲೇ ಬೆಳಗಿನ ಶಿವಾನುಭವ ಪ್ರಾರಂಭ ಅದ್ಯಾಕೋ ಅಪ್ಪಾಜಿ ನನ್ನತ್ತ ಆಗಾಗ್ಗೆ ನೋಡುತ್ತಿದ್ದರು. ಅವರ ಪ್ರವಚನ ಧಾಟಿ ಸಾಗಿತ್ತು.

"ತನಗಾಗಿ ಮಾಡುವ ಕೆಲಸಕ್ಕಿಂತ ಬೇರೆಯವರಿಗಾಗಿ ಮಾಡುವ ಕೆಲಸವೇ ಹೆಚ್ಚಿನದು. ಸಮಾಜಕ್ಕಾಗಿ ಮಾಡುವ ಕೆಲಸ ಅದಕ್ಕಿಂತಲೂ ಹೆಚ್ಚಿನದು ತಿಳಿತಾಽಽ, ತಿಳಿತಾಽಽ ಸಮಾಜದಲ್ಲಿ ಲಿಂಗ ಕಾಣಬೇಕು. ತನಗಾಗಿ, ತನ್ನ ಸ್ನೇಹಿತರಿಗಾಗಿ, ತನ್ನ ಹೆಂಡತಿ ಮಕ್ಕಳಿಗಾಗಿ ತನ್ನ ಬಂಧು ಬಳಗಕ್ಕಾಗಿ ಮಾಡುವ ಕೆಲಸ ಸ್ವಾರ್ಥವೆನಿಸುತ್ತೆ,

ಸೇವೆಯಾಗುವುದಿಲ್ಲ. ಕಾಯಕವಾಗುವುದಿಲ್ಲವೆಂದರು. ನನ್ನತ್ತ ನೋಡುತ್ತಾ ಮತ್ತೆ ತಿಳಿತಾಽಽ ತಿಳಿತಾಽಽ ನನ್ನ ಅನೇಕ ವಿಚಾರಗಳಿಗೆ ಅಂದು ತಪ್ಪಿನ ಅರಿವಾಗಿತ್ತು. ಸರಿ ಉತ್ತರ ಸಿಕ್ಕಿತ್ತು. ಧರ್ಮ ಸೇವೆ ಎಷ್ಟು ಸೂಕ್ಷ್ಮವೆಂದು ವಕೀಲನಾಗಿ ನಾನು ಮನಗೊಂಡಿದ್ದು ಹೈಕೋರ್ಟಿನಲ್ಲಿ ಒಂದು ಕಾರ್ಯಕ್ರಮದಲ್ಲಿ. ಈ ವಿಚಾರ ಸಭೆಗೆ ಹೇಳಿದಾಗ ಇಡೀ ಹೈಕೋರ್ಟ್ ವಕೀಲ ಬಳಗ ಮೆಚ್ಚುಗೆ ವ್ಯಕ್ತಪಡಿಸಿ ಕರತಾಡನ ಮಾಡಿತ್ತು. ಒಂದೆರಡು ಶಿವಾನುಭವ ನನ್ನನ್ನು ಎಚ್ಚರಗೊಳಿಸಿತ್ತು. ಇನ್ನು ನೂರಾರು, ಸಾವಿರಾರು ದಿನ ಶಿವಾನುಭವ ಕೇಳಿದ ಗದುಗಿನ ಭಕ್ತರು ಏನಾಗಬೇಕಿತ್ತು?

ಒಮ್ಮೆ ಅಪ್ಪಾಜಿಗೆ ಕೇಳಿದೆ ''ಅಪ್ಪಾ, ಜಗದ್ಗುರುಗಳು ಅಷ್ಟೆ ಹೇಳ್ತಾರ ಅಥವಾ ನೀನೇ ನಿತ್ಯ ಹೇಳ್ತಿದಿ. ಸಾವಿರಗಟ್ಟಲೇ ಶಿವಾನುಭವ ಆದ್ವು ಬೇರೆ ಅವರ್ನ ಬಿಡು. ನಿನ್ನ ಮಠದ ಕಮಿಟ್ಯಾಗ ಮೆಂಬರುಗಳು ವಿದ್ವಾಂಸರು ಅದಾರಲ್ಲ ಅವರ್ಯಾಕ ಬದಲಾಗಿಲ್ಲ? ೨೦–೨೫ ವರ್ಷ ಆಯ್ತು. ಅವರೇ ನಿರೂಪಣೆ, ಅವರ್ಗ ಹಾಡುಜನ ಬ್ಯಾಸರಾಗ್ಯೆತಿ ಬೇರೆಯವರಿಗೆ ಅವಕಾಶ ಇಲ್ಲ. ಅವರ್ದು ಸ್ವಾರ್ಥಾ ಅಲ್ಲೇನು ? ಅಂದೆ, ತಕ್ಷಣ ಶಾಸ್ತ್ರಿಗಳು ಒಂದೇ ಕಾಯಿಲೆಗೆ ಹಲವು ಆಸ್ಪತ್ರಿ ಇರ್ತಾವಪ, ಹಾರ್ಟ್‌ಗೆ ಬ್ಯಾರೆ, ಕಣ್ಣಿಗೆ ಬ್ಯಾರೆ, ಮೂಳೆಗೆ ಬ್ಯಾರೆ, ಕಿವಿ, ಮೂಗು, ಹೀಗೆ ಡಾಕ್ಟರರು ಎಲ್ಲಾರಿಗೂ ಔಷಧಿ ಕೊಡ್ತಾರ, ಯಾಕ? ಹುಷರಾಗ್ಲಿ ಅನ್ನೊದೇ ಡಾಕ್ಟರರ ಒಳ್ಳೆಯ ಉದ್ದೇಶ, ಆದರಽಽ ಬಾಳ ಜನ ಸಾಯ್ತಾರ, ಔಷಧಿ ಸಾಲಂಗಿಲ್ಲ, ಕೆಲವರು ಔಷಧಿ, ತಾತ್ಸಾರ ಮಾಡ್ತರ, ಕೆಲವರು ಪತ್ತೆ ಮಾಡ್ದ ಬಿಡುತ್ತಾರ, ಹಿಂಗೆ ಈ ಲೋಕ ಎನಿತು ''ಕಲ್ಲು ನೀರೊಳಗಿದ್ದರೇನು ಮೃದುವಾಗಬಲ್ಲದೇ'' ಅಂತಹ ದೊಡ್ಡವರೇ ಹೇಳ್ತಾರ ಅವರು ಬದಲಾಗಲಿಲ್ಲ ನಿನಗ್ಯಾಕ ಆ ಸುದ್ದಿ, ನೀನು ತಪ್ಪಾಗಿ ವಿಚಾರಿಸಿದಿದ್ರು ಸಾಕಪಾ, ''ನೆರಮನೆಯ ದುಃಖಕ್ಕೆ ಅಳುವವರ ಮೆಚ್ಚ ಕೂಡಲಸಂಗಮದೇವ'' ಎನ್ನಬೇಕೆ ?

### ಎಡೆಯೂರ ಜಾತ್ರೆ, ಸೊಸೆಗೆ ಸಂಸ್ಕಾರ

ಪ್ರತಿವರ್ಷ ಎಡೆಯೂರ ಜಾತ್ರೆಯಲ್ಲಿ ಶಾಸ್ತ್ರಿಗಳು ೫–೬ ದಿನ ಕ್ಯಾಂಪೆ ಎಡೆಯೂರಲ್ಲಿ, ಜಾತ್ರೆ ನಡೆವಾಗ ಮನೆಯ ಸಂಪ್ರದಾಯ ಜಾತ್ರೆಗೆ ಮನೆಯ ಒಬ್ಬರು ಇರಲೇಬೇಕು. ಅದು ಶಾಸ್ತ್ರಿಗಳ ಇಚ್ಛೆ ಈ ಪರಂಪರೆ ಮನೆಯಲ್ಲಿ ಹಾಕಲು ಸೊಸೆ ಜಯಮ್ಮನಿಗೆ ತಿಳಿ ಹೇಳಿದ್ದರು. ಜಯಮ್ಮ ಅಷ್ಟೇ ತಪ್ಪಿಸುತ್ತಿರಲಿಲ್ಲ. ಆದರೂ ಮುಖ್ಯ ರಸ್ತೆಗೆ ಹೋಗಿ ತಾಸುಗಟ್ಟಲೇ ಕಾಯ್ದು, ಸೊಸೆಯನ್ನು ಕರೆದುಕೊಂಡು ತೇರು ಸಾಗಿದಾಗ, ಗದ್ದುಗೆಗೆ ಹಣ್ಣು ಕಾಯಿ, ಪ್ರಸಾದ ಮುಗಿಸಿ ಕಳಿಸುತ್ತಿದ್ದರು. ಜಯವ್ವ ಇದು ಮುಂದುವರಿಬೇಕವ್ವಾ, ಈತ ನಮ್ಮನ್ನ ಬಾಳ ಕಾಪಾಡ್ತ್ಯಾನ ನಿನಗಂಡ ಡಿ.ಸಿ. ಆಗಿದ್ದ ಇವನಿಂದಾ ಅಂತಿದ್ರು. ಜಯಮ್ಮ ಮಗಳು ಕವಿತಾ, ಸೊಸೆ ಚಿನ್ಮಯಿ,

ಮಗ ಸೋಮಶೇಖರ, ಪ್ರಶಾಂತ, ಮೊಮ್ಮಕ್ಕಳೆಲ್ಲಾ ಇಂದಿಗೂ ಜಾತ್ರೆ ತಪ್ಪಿಸಿಲ್ಲ. ಸಾಕ್ಷಾತ್ ಸಿದ್ಧಲಿಂಗನೇ ತೇರಿನಲ್ಲಿ ಪೀಠ ಅಲಂಕರಿಸಿದ್ದಾನೆಂದು ಶಾಸ್ತ್ರಿಗಳ ನಂಬಿಕೆ. ಸ್ನಾನ ಪೂಜಾದಿಗಳನ್ನು ಸೊಸೆ, ಮಗಳು ಅನ್ನಪೂರ್ಣ, ಅಳಿಯ ಮಲ್ಲಿಕಾರ್ಜುನ ನಡೆಸಬೇಕೆಂಬಲ್ಲಿ ಒಮ್ಮೊಮ್ಮೆ ತತ್ವವನ್ನು ಪ್ರಾರಂಭಿಸಿಬಿಡುತ್ತಿದ್ದರು.

> "ಅವಯವಗಳು ನೀರಿನಿಂದಲೂ, ಮನಸ್ಸು ಸತ್ಯದಿಂದಲೂ
> ಜೀವನವು ವಿದ್ಯೆ ತಪಸ್ಸುಗಳಿಂದಲೂ,
> ಬುದ್ಧಿ ಜ್ಞಾನದಿಂದಲೂ ಶುದ್ಧವಾಗುತ್ತವೆ"

ಅದಕ್ಕೆ ಅಭ್ಯಂಜನ ಸ್ನಾನ, ಧ್ಯಾನ, ಜ್ಞಾನ, ನಿತ್ಯ ಕೆಲ ಕಾಲವಾದರೂ ಮಾಡಬೇಕೆಂದು ಮಕ್ಕಳಿಗೆ, ಸೊಸೆಯಂದಿರಿಗೆ ಬೋಧಿಸುತ್ತಿದ್ದರು.

ಶಾಸ್ತ್ರಿಗಳಿಗೆ ವೀರಶೈವ ಧರ್ಮ, ತಪಸ್ವಿಗಳು, ಸಮಾಜಕರ್ತರು, ವಚನಾಮೃತ, ಪುರಾಣ, ಎಲ್ಲದರ ಬಗೆಗೆ ಅಭಿಮಾನವಿತ್ತೇನೋ ನಿಜ. ಆದರೂ ಅನ್ಯ ಧರ್ಮಗಳ ಬಗೆಗೂ ಗೌರವವಿತ್ತು. ಅದು ಕ್ರೈಸ್ತ, ಮುಸಲ್ಮಾನ, ಬುದ್ಧ, ಜೈನ ಎಲ್ಲ ಧರ್ಮ ಅಭ್ಯಸಿಸಿದ್ದರು. ಎಲ್ಲರ ಹಿತೋಪದೇಶದ ಸಾರ ಅವರ ಪ್ರವಚನದಲ್ಲಿ ಸ್ಫುರಿಸುತ್ತಿತ್ತು. ಗೀತೆಯ ಸಾರ, ಉಪನಿಷತ್, ವೇದ, ಖುರಾನ, ಬೈಬಲ್ ಎಲ್ಲವೂ ವಚನದಷ್ಟೆ ಅವರಲ್ಲಿ ಮಹತ್ವ ವಿಚಾರಗಳಾಗಿದ್ದವು, ಅಂತ ಸರ್ವಜ್ಞ ಶಾಸ್ತ್ರಿಗಳಾಗಿದ್ದರು.

### ಪ್ರವಚನದಲ್ಲಿ ಶಾಸ್ತ್ರಿಗಳು ಬಳಸಿದ ಅನರ್ಘ್ಯ ರತ್ನ ಉಪಮೆಗಳ ಬಳಕೆ

ಸ್ತ್ರೀ ಎಂಬುದು ಅಸಹಾಯಕ ಶಕ್ತಿಯಲ್ಲ. ಈ ಲೋಕದ ಶಕ್ತಿಯಂತೆ ಅವಳು ಸಾವಿರ ಪುರುಷ ದೇವತೆಗಳು ಸಾಧಿಸಿದ್ದನ್ನು ತನ್ನ ತಪಸ್ಸಿನಿಂದ ಸಾಧಿಸಿದವಳೇ ಸ್ತ್ರೀ. ಅದಕ್ಕೆ ಅವಳನ್ನು ಜಗನ್ಮಾತೆ ಅನ್ನುವುದು. ಹೆತ್ತವಳು ತಾಯಿ ಆದರೆ ಸಲುಹುವವಳು ತಾಯಿ.

ಹಿಮಾಲಯದ ಅಡಿ, ನೇಪಾಳದ ಗಡಿಭಾಗದಲ್ಲಿ 'ಘಂಡಕಿ' ನದಿ ಹರಿಯುತ್ತೆ, ಅದಕ್ಕೇಕೆ ಈ ಹೆಸರು ಬಂತು ? ಅದೇಕೆ ಗಂಗೆಗಿಂತ ಪಾವನ ನದಿಯಾಯಿತ್ತು? ಉತ್ತರ ಕೇಳಿದರೆ ಇನ್ನೂ ಆಶ್ಚರ್ಯ, ಆ 'ಘಂಡಕಿ' ಹೆಸರು ಒಬ್ಬ ವೇಶ್ಯೆಯ ಹೆಸರು. ಆಕೆಗೆ ಪವಿತ್ರತೆ ಹ್ಯಾಗೆ ಬಂತು ? 'ಘಂಡಕಿ' ವೇಶ್ಯೆಯೇನೋ ನಿಜ. ಆದರೆ ಒಬ್ಬ ವ್ರತಸ್ಥ ವೇಶ್ಯೆ, ಪ್ರತಿದಿನ ಬಾಗಿಲ ತೆಗಿದೊಡನೆ ಬಾಗಿಲಲ್ಲಿ ತನಗಾಗಿ ಕಾಯುವ ಗಂಡಸೇ ಆ ದಿನ ಅವಳಿಗೆ ಪತಿ ಎಂಬ ವ್ರತ ಅವಳದು.

ಇಂದ್ರನ ಒಡ್ಡೋಲಗದಲ್ಲಿ ಒಂದು ದಿನ ದೇವಋಷಿಗಳ ಸಭೆನಡೆದಾಗ ಭೂಲೋಕದ 'ಪತಿವ್ರತೆ' ಯಾರು ಎಂಬ ಪ್ರಶ್ನೆ ಬಂದಾಗ ನಾರದ ಎದ್ದು 'ಘಂಡಕಿ' ಅಂದರು. ಸಭೆ ನಿಶ್ಶಬ್ಧ, ಗಂಭೀರತೆ ಪಡೆಯಿತು. ಒಬ್ಬ ವೇಶ್ಯೆ 'ಪಾತಿವ್ರತ್ಯ' ಎಂದರೇನು ? ನಾರದ ಹಠಬಿಡಲಿಲ್ಲ. ಇಂದ್ರನೇ ಪರೀಕ್ಷೆಗೆ ಭೂಲೋಕಕ್ಕೆ ಬಂದು

ಘಂಡಕಿ ಮನೆ ಮುಂದೆ 'ಕುಷ್ಟ ರೋಗಿ' ರೂಪದಲ್ಲಿ ನಿಂತ. ಘಂಡಕಿ ವ್ರತದಂತೆ ಪತಿ ಎಂದೇ ಭಾವಿಸಿ ಒಳಗೆ ಕರೆದು ಶುಶ್ರೂಷೆ ಮಾಡುತ್ತಾ,ಕೀವು, ರಕ್ತ, ಒರೆಸಿ ಔಷಧಿ ಲೇಪಿಸುತ್ತಿದ್ದಳು. ಮೊದಲೇ ಪರೀಕ್ಷೆಗೆ ಬಂದ ಇಂದ್ರ ಮಧ್ಯಾಹ್ನದವರೆಗೆ ಅತ್ಯಂತ ಕ್ಷೀಣಿಸಿದಂತವನಾಗಿ ಪ್ರಾಣಬಿಟ್ಟ. ಅಂದು ಸತಿ ಪದ್ಧತಿ ಜಾರಿಯಲ್ಲಿತ್ತು. ಗಂಡನ ಜತೆ ಸತಿ ಅಗ್ನಿಗಾಹುತಿ ಆಗಲೇಬೇಕೆಂದು ಘಂಡಕಿ ಆ ಕುಷ್ಠರೋಗಿಯ ದೇಹ ಬೆಂಕಿಯಲ್ಲಿಟ್ಟು ತಾನು ಹಾರುತ್ತಿರುವಾಗ ಇಂದ್ರ ಪ್ರತ್ಯಕ್ಷವಾಗಿ ವೃತ್ತಿಯಲ್ಲಿ ವೇಶ್ಯೆಯಾದರೂ 'ಭಾವದಲ್ಲಿ' ದೈವೀಶಕ್ತಿ ಪಡೆದ ನಿನ್ನ ಹೆಸರು ಅಜರಾಮರವಾಗಲೆಂದು ಆ ನದಿಗೆ 'ಘಂಡಕಿ' ಎಂಬ ಹೆಸರಿಟ್ಟ, ಇಂದಿಗೂ ಅದು ಪಾವನ ನದಿ 'ಭಾವನೆ' ಮುಖ್ಯ. ಇಂದು ನೇಪಾಳದಲ್ಲಿ ಹರಿಯುವ ನದಿಯೇ ಘಂಡಕಿ. ಈ ವಿಚಾರಗಳು ಉಪಮೆ ರೂಪದಲ್ಲಿ ಕಥೆ ಮಾಡಿ ಹೇಳುತ್ತಿದ್ದರು.

### ತುಳಸಿ

ಮಹಾ ಪ್ರತಾಪಶಾಲಿ ಸುರಥ ಘೋರ ತಪಸ್ಸು ಮಾಡಿದ. ಬ್ರಹ್ಮ ಪ್ರತ್ಯಕ್ಷನಾದಾಗ 'ಜಗತ್ತಿನ ಶಕ್ತಿ, ಬುದ್ಧಿ, ಶ್ರೀಮಂತಿಕೆ ತನ್ನ ರಾಜ್ಯಕ್ಕಿರಲಿ' ಎಂದು ಬೇಡಿದ. ಬ್ರಹ್ಮನನ್ನಲ್ಲಿ ಆ ವರ ನೀಡುವ ಶಕ್ತಿ ಇಲ್ಲ. ವಿಷ್ಣುನನ್ನು ಪ್ರಾರ್ಥಿಸು ಅಂದ. ವಿಷ್ಣು ಬಂದ ಅವನೂ ಹಾಗೇ ಹೇಳಿ ಮಹೇಶನನ್ನು ಪ್ರಾರ್ಥಿಸಲು ಹೇಳಿದ. ಶಿವ ಬಂದ ಅವನೂ ಒಪ್ಪಲಿಲ್ಲ, ಸುರಥ ಬೇಜಾರುಗೊಂಡ. ಒಬ್ಬ ಮಾನವನ ತಪಸ್ಸಿಗೆ ಬೆಲೆ ಇಲ್ಲ. ಕೊನೆಗೆ ಶಿವ ಹೇಳಿದ ನಿನಗೊಂದು ಮಗು ಹುಟ್ಟುತ್ತೆ ಅದರಲ್ಲಿ ಎಲ್ಲ ಗುಣ ಇರುತ್ತೆ; ಅವಳೇ ತುಳಸಿ, ಕೇವಲ ೧೪ ವರ್ಷಕ್ಕೆ ಆ ಮಗುವಿನ ಸಾವು, ಸುರಥ ಎಲ್ಲಾ ದೇವತೆಗಳನ್ನು ಪ್ರಾರ್ಥಿಸಿ ಕರೆದ ಶಿವನೂ ಬಂದ ಎಲ್ಲರಿಗೂ ತನ್ನದೇ ಆಗಬೇಕೆಂಬ ಇರುವ ಬಯಕೆ ಸ್ವಾರ್ಥದ್ದು. ನಾಶದ ಮೂಲವೇ ಸ್ವಾರ್ಥ. ಅದನ್ನು ಬೇಡದೆ ಮಗು ಅಲ್ಪಾಯುಷಿಯಾಗಿ ನಾಶವಾಯ್ತು. ಇರಲಿ ಆ ತುಳಸಿ ಗಿಡವಾಗಿ ಬೆಳೆಯುತ್ತೆ ಅದರಲ್ಲಿ ಬೆಳಗಿನಲ್ಲಿ ಲಕ್ಷ್ಮೀ, ಮಧ್ಯಾಹ್ನ ಸರಸ್ವತಿ, ಸಾಯಂಕಾಲ ಪಾರ್ವತಿ ನಿತ್ಯ ಕಾಣುತ್ತಾರೆ. ತುಳಸಿ ಲಕ್ಷಾಂತರ ವರ್ಷವಾದರೂ ಬದುಕಿದ್ದು, ನಿಸ್ವಾರ್ಥಕ್ಕೆ ನಿದರ್ಶನವಾಯಿತು ಹೀಗೆ ಶಾಸ್ತ್ರಿಗಳ ನಿರೂಪಣೆ. ಪ್ರವಚನದಲ್ಲಿ ಸಾಗುತ್ತಿತ್ತು.

### ರಾಷ್ಟ್ರ ಪ್ರೇಮ ದೇಶ ಭಕ್ತಿ

ಶಾಸ್ತ್ರಿಗಳು ಸ್ವತಃ ಸ್ವಾತಂತ್ರ್ಯ ಹೋರಾಟಗಾರರಾಗಿದ್ದವರೂ ಬೇರೆಯವರಂತೆ ಸರಕಾರದ ಸವಲತ್ತು, ಬೆಂಗಳೂರಿನಲ್ಲಿ ಸೈಟ್, ತಿಂಗಳ ಮಾಶಾಸನ, ಬಸ್, ಟ್ರೈನಿನಲ್ಲಿ ಫ್ರೀ ಟಿಕೆಟ್, ರಾಜಕೀಯದಲ್ಲಿ ಸ್ಥಾನ ಒಂದೂ ಬಯಸಲಿಲ್ಲ, ಅಷ್ಟೇ ಅಲ್ಲ ಹಿರಿಯಮಗ ಹಾಗೂ ಎರಡನೇ ಮಗ ಡಿ.ಸಿ. ಮತ್ತು ಹೈಕೋರ್ಟ್ ವಕೀಲರಾಗುವ ಪೂರ್ವದಲ್ಲಿಯೂ ಶಾಲೆಯಲ್ಲಾಗಲೀ, ಹೊರಗಡೆಯಾಗಲೀ ಸ್ವಾತಂತ್ರ್ಯ ಹೋರಾಟಗಾರರ ಮಕ್ಕಳೆಂದು ಎಲ್ಲಿಯೂ

ನಮೂದಿಸಿ, ಸರಕಾರದ ಸವಲತ್ತನ್ನು ಪಡೆಯದಿರಲು ಕಟ್ಟಪ್ಪಣೆ ಮಾಡಿದ್ದರು. ಅದು ದೇಶದ ಪ್ರಜೆಗಳ ಹಣ, ಸಾರ್ವಜನಿಕ ಸ್ವತ್ತು, ಸ್ವಾರ್ಥಕ್ಕೆ ಬಳಸಕೂಡದು. ಅದು ದೇಶದ ಸ್ವತ್ತು. ನಮ್ಮ ಹಿತಕ್ಕಾಗಿ ಸ್ವಾತಂತ್ರ್ಯಕ್ಕೆ ಹೋರಾಡಲಿಲ್ಲ. ನನ್ನ ತಾಯಿ ಪರಕೀಯರ ಬಂಧನದಲ್ಲಿ ಸಿಲುಕಿದ್ದಾಳೆ; ಅವಳನ್ನು ಬಿಡಸಲ ನಾನು ಸ್ವಾತಂತ್ರಕ್ಕೆ ಹೋರಾಡಿರುವೆ. ತಾಯಿಯ ಬಂಧನ ಬಿಡಿಸಲು ಕೂಲಿ ಕೇಳಬೇಕೆ ? ಹಾಗಾದರೆ ನಾವೆಂಥ ಮಕ್ಕಳು ? ಎಂತಹ ದೇಶಭಕ್ತಿ? ಎಂತಹ ನಿಸ್ವಾರ್ಥ ಸೇವೆ ? ಶಾಸ್ತ್ರಿಗಳಲ್ಲಿ ಧಮನಿ ಧಮನಿಗಳಲ್ಲಿ ದೇಶಪ್ರೇಮ ತುಂಬಿತ್ತು. ನೆಹರೂ, ಗಾಂಧೀ, ನಿಧನರಾದಾಗ ಮನೆಯಲ್ಲಿ ಪತ್ರಿಕೆ ತಂದು ಓದುತ್ತಲೇ ಭಾವ ಪರವಶರಾಗಿಬಿಡುತ್ತಿದ್ದರು.

ಪ್ರಧಾನಿ ಲಾಲ್‌ಬಹದ್ದೂರ್‌ಶಾಸ್ತ್ರಿಗಳು ತೀರಿದ ದಿನವಂತೂ ಊಟ ಮಾಡಲಿಲ್ಲ; ನಿದ್ರೆ ಮಾಡಲಿಲ್ಲ. ಪ್ರಾಮಾಣಿಕತೆ, ಸರಳ ಜೀವನಕ್ಕೆ ಇಂತಹ ಸಾವೇ ? ಎಂದು ಕಂಬನಿಗೆರೆಯುತ್ತಿದ್ದರು. ಅವರು ಗಣೇಶಸ್ತುತಿ ರಚಿಸಿ 'ಕಲ್ಯಾಣ ರಾಗದಲ್ಲಿ ರಾಗ ಸಂಯೋಜನೆ ಮಾಡಿದ್ದರ ಪಂಕ್ತಿ ನೋಡಿ.

'ಸುಗುಣಾ ಗಿರಿಜಾಕುಮಾರ ಸುಗುಣಾ
ಜಗವಂದಿತ ದುರಿತದೂರ ಗಜಮುಖ
ತವಚರಣ ಕಮಲ ಭಜಿಪ ಜನಕೆ ನೀಡು ಕರುಣಾ ॥ ಸುಗುಣಾ ॥

ಭರತ ಜನಕೆ ಯಶವನೀಡು, ದಾರಿದ್ರ್ಯವ ದೂರಮಾಡು,
ಪಾರತಂತ್ರ್ಯ ದೂರಮಾಡು, ದಾರಿದ್ರವ ನಾಶಮಾಡು ॥ ಸುಗುಣಾ ॥

ಹಿಂದ್ ಮಾತೆ ಪರರದಾಸ್ಯ ಬಂಧನದಿಂ ಬಳಲುತಿಹಳು
ಇಂಧುಧರನ ಸುತನೆ ಬಂದು ಬಿಡಿಸು ಬಂಧನವನು ಸುಗುಣಾ ಗಿರಿಜಾಕುಮಾರ ॥

(ಈ ಗಣೇಶ ಸ್ತುತಿಯನ್ನು ಪ್ರತಿವರ್ಷ ಹೈಕೋರ್ಟ್ ವಕೀಲರಿಂದ ಗಣೇಶೋತ್ಸವದಲ್ಲಿ ೩೦ ವರ್ಷದಿಂದ ಇಂದಿಗೂ ಹಾಡಿಸುತ್ತಿರುವೆ)

ಬೇರೆ ಯಾರಿಗಾದರೂ ಸ್ಕೂಲು, ಕಾಲೇಜಿನಲ್ಲಿ ಅವರ ಬಡತನ ಮುಂದಿಟ್ಟು ಸೀಟು ಕೊಡದಿದ್ದರೆ ಆಗಲೇ ಕಾಲೇಜ್ ಪ್ರಿನ್ಸಿಪಾಲರ ತಿಥಿ ಅಂದೇ ಎದುರಿಗೇ ಆಗಿಬಿಡುತಿತ್ತು. ಭಾರತ ಬಡವರ ದೇಶ, ಅವರು ಸುಶಕ್ಷಿತರಾಗಲೆಂದೇ ಸ್ವಾತಂತ್ರ್ಯ ಪಡೆದು ಶಿಕ್ಷಣದಿಂದ ವಂಚಿತ ಮಾಡಿದರೆ ನಾಳೆ ನಿಮ್ಮ ಶಾಲೆ ಕಾಲೇಜು ಮುಚ್ಚಿಬಿಡಲಾಗುತ್ತೆ. ಬಡವರಿಗೆ ಮೊದಲು ಪ್ರಾಧಾನ್ಯ ನೀಡಲು ಆಗ್ರಹ. ರೋಣ ತಾಲ್ಲೂಕದಲ್ಲಿ ಇದನ್ನು ಹಲವಾರು ಜನ ಇಂದಿಗೂ ನೆನೆಸುತ್ತಾರೆ. ನಮ್ಮದು ಚಿಕ್ಕ ಹಳ್ಳಿ, ಅವಿದ್ಯಾವಂತರ ಊರು. ಬೂದಿಹಾಳದಿಂದ ಬಡಹುಡುಗರನ್ನು ಹುಡುಕಿ ತಂದು ಕೆಲಕಾಲ ಗದುಗಿನ ತಮ್ಮ ಮನೆಯಲ್ಲಿ ಆಶ್ರಯ ನೀಡಿ ನಂತರ ಹಾಳಕೇರಿ ಮಠ ಬೋರ್ಡಿಂಗದಲ್ಲಿ ಸೇರಿಸಿ ಶಿಕ್ಷಣ ಕೊಡಿಸಿದರು. ಅವರೆಲ್ಲಾ ಉನ್ನತಾಧಿಕಾರಿಗಳಾಗಿದ್ದಾರೆ. ಡಿಸ್ಟ್ರಿಕ್ಟ್ ರಿಜಿಸ್ಟರ್ ಎಚ್.ಬಿ. ಚಿಗರಿ ಇಂತಹ ನೂರಾರು ಪ್ರಸಂಗಗಳು ಶಾಸ್ತ್ರಿಗಳಿಗಿದ್ದ ಸಮಾಜದ ಕಳಕಳಿ.

ಅಣ್ಣಾ ತೋಂಟದಾರ್ಯ ಪ್ರತಿಭಾವಂತ ವಿದ್ಯಾರ್ಥಿ, ಬಹಳ ಜಾಣ, ಅವನ ಪ್ರತಿಭೆ ಸ್ವತಃ ಅರ್ಥಶಾಸ್ತ್ರ ವಿಭಾಗದ ಹೆಡ ಆಫ ದಿ ಡಿಪಾರ್ಟ್ಮೆಂಟ ಇದ್ದವರೇ ಮೆಚ್ಚಿದ್ದರೆಂದ ಮೇಲೆ ಅವನ ಪ್ರತಿಭೆ ಬೇರೆ ಹೇಳಬೇಕಿಲ್ಲಾ. ತುಂಬಾ ದೂರದೃಷ್ಟಿ ಉಳ್ಳವನು. ನನ್ನನ್ನು ವಕೀಲನಾಗಿ ಮಾಡಲು ಅವನು ೩೦ ವರ್ಷಗಳ ಹಿಂದೆ ಯೋಚಿಸಿದ್ದನಂತೆ, ಹೊಳಲ್ಕೆರೆಯಲ್ಲಿ ತಹಸೀಲ್ದಾರನಾಗಿದ್ದ ಅವನ ಜನಸೇವೆ ಎಷ್ಟಿತ್ತೆಂದರೆ ಅವನ ಟ್ರಾನ್ಸಫರ ಆದಾಗ ಊರ ಜನ ಹಾರ ಹಾಕಿದ್ದು ಎಷ್ಟು ಗೊತ್ತಾ ಒಂದು ಟ್ರಾಕ್ಟರ ಅವನಿಗೆ ಹಾಕಿದ್ದ ಮಾಲೆಗಳಿಂದ ತುಂಬಿತ್ತು. ಧೈರ್ಯವಂತನು, ಉತ್ತಮ ಆಡಳಿತಾಧಿಕಾರಿ, ಅವನು ಕಾವೇರಿ ಪ್ರಾಜೆಕ್ಟ ಮೈಸೂರು, ಕೊಳ್ಳೆಗಾಲ ಟಿಬೇಟಿಯನ ರಿಹೆಬಿಲಿಟೇಷನ, ಅಡ್ಮಿನಿಸ್ಟ್ರೇಟರ, ಸವದತ್ತಿ ಎಲ್ಲಮ್ಮ ದೇವಸ್ಥಾನದ ಆಡಳಿತಾಧಿಕಾರಿಯಾದಾಗ ಉತ್ತಮ ಹೆಸರುಮಾಡಿದ ಅಧಿಕಾರ ನಂತರ ಶಾಸ್ತ್ರಿಗಳಿಗೆ ಮನೆಯ ಬಡತನ, ಭಾರ ಕಡಿಮೆ ಆಯ್ತು ಸೋಗಿಲದ ಪ್ರಭಯ್ಯನವರ ಮಗಳು ಜಯಮ್ಮಳೊಂದಿಗೆ ಮದುವೆ, ಸೋಮಶೇಖರ, ಕವಿತಾ ಮಕ್ಕಳು.

ಅನ್ನಪೂರ್ಣೆ ಸಿದ್ಧಲಿಂಗಯ್ಯನವರ ಮಗಳು ಕುಪ್ಪೂರ ಗದ್ದಿಗೆ ಚಂದ್ರಶೇಖರ ಶಿವಾಚಾರ್ಯ ಸಹೋದರ ರುದ್ರಯ್ಯನವರ ೩ನೇ ಪುತ್ರ ಮಲ್ಲಿಕಾರ್ಜುನನೊಡನೆ ಮದುವೆ; ಅಣ್ಣನೇ ಮಾಡಿಕೊಟ್ಟ. ಅವರು ಡಾ|| ಸಾ. ಸಿ. ಮರುಳಯ್ಯನವರ ಪತ್ನಿ ವೀಣಾರವರ ಸಹೋದರ ಅವರಿಗೂ ಜ್ಯೋತಿ, ಚೈತ್ರ ಅನೂಷ, ಚಿ||ಗಳು ಚೈತ್ರ ವಾಷಿಂಗಟನ ಡಿ. ಸಿ. ಯಾಗಿದ್ದಾಳೆ.

### ಎಡೆಯೂರ ಸಿದ್ಧಲಿಂಗನ ಮೀಸಲು ಭಕ್ತ

ಎಡೆಯೂರ ಸಿದ್ಧಲಿಂಗ ಎಂದು ಯಾರಾದರೂ ಕೂಗಿದರೆ ಸಾಕು ಹಾಗೇ ಎದ್ದುನಿಂತು ಕೈಮುಗಿದು ಕುಳಿತುಕೊಳ್ಳುತ್ತಿದ್ದರು ಸಿದ್ಧಲಿಂಗಯ್ಯನವರು. ಮಾನ್ವಿ, ಅಜ್ಜಣ್ಣನವರಿಗೂ ಸಿದ್ಧಲಿಂಗಯ್ಯನವರಿಗೆ ಅನನ್ಯ ಗೆಳೆತನ. ಇಬ್ಬರೂ ಮಠದ ಮೀಸಲು ಭಕ್ತರು. ಎಡೆಯೂರಲ್ಲಿ ಸಿದ್ಧಲಿಂಗಸ್ವಾಮಿಯ ಗೋಪುರ ಕಟ್ಟಡದ ಕಾರ್ಯ ಅಜ್ಜಣ್ಣ ತೊಡಗಿದರು ಮತ್ತು ಸಿದ್ಧಲಿಂಗಯ್ಯನವರು ಕೂಡಿಕೊಂಡು ರಾಜಗೋಪುರದ ರೂಪುರೇಷೆ ನಡೆಯಿತು. ಎಲ್ಲೆಲ್ಲಿ ಸಿದ್ಧಲಿಂಗನ ಪವಾಡವಿರಬೇಕು. ಸಿದ್ಧಲಿಂಗನ ಪರಂಪರೆಯ ಎಲ್ಲ ಜಗದ್ಗುರುಗಳನ್ನು ಹೇಗೆ ನಿರೂಪಿಸಬೇಕು, ಭಸ್ಮ ಹ್ಯಾಗಿರಬೇಕು, ರುದ್ರಾಕ್ಷಿ ಹೇಗಿರಬೇಕು, ಮುದ್ರೆ ಹ್ಯಾಗಿರಬೇಕೆಂದು ಅಜ್ಜಣ್ಣನವರಿಗೆ ತಿಳಿಸಿದರು. ಅಜ್ಜಣ್ಣನಿಗೂ ಹಿಡಿಸಿತು. ಈಗ ಮಕ್ಕಳೆಲ್ಲಾ ಉತ್ತಮ ಸ್ಥಿತಿಯಲ್ಲಿದ್ದಾರೆ. ಆತನ ಕೃಪೆಯಿಂದ ಎಲ್ಲ ಕಷ್ಟ ನಿವಾರಣೆ ಆಗಿವೆ. ಆತನ ಸೇವೆ ಮಾಡಿರುವೆ. ಎಂದು ಸಿದ್ಧಲಿಂಗಯ್ಯನವರು ಎಡೆಯೂರಿಗೆ ಪ್ರಯಾಣ ಬೆಳೆಸಿ ಆ ರಾಜಗೋಪುರ ನಿರ್ಮಾಣ ಸಂಪೂರ್ಣ ಆಗುವವರೆಗೆ ೬-೭ ತಿಂಗಳವರೆಗೆ ಎಡೆಯೂರಲ್ಲೇ ವಾಸ್ತವ್ಯ ಮಾಡಿದರು. ವಿ.ಎಲ್.ಅಂಗಡಿ ಎ.ಎಸ್.

ಬಸವಲಿಂಗಯ್ಯನವರು ಸದಾ ಈ ಮಾತು ನನಗೆ ನೆನಪಿಸುತ್ತಿದ್ದರು. ಜಾತ್ರೆಗಂತೂ ತಪ್ಪಿಸಲೇಯಿಲ್ಲ. ಸದಾ ನಿಂತೇ ಪಲ್ಲಕ್ಕಿ, ತೇರು ಎಳೆದ ನಂತರ ಪ್ರಸಾದ ಸ್ವೀಕರಿಸುತ್ತಿದ್ದರು. ಎಲ್ಲರೊಡನೆ ಪ್ರೀತಿಯಿಂದ ಅಕ್ಕರೆಯಿಂದ ನಡೆದುಕೊಳ್ಳುತ್ತಿದ್ದರು. ಎಡೆಯೂರಲ್ಲಿ ಅವರ ಹೆಸರಲ್ಲೇ ಚಿ॥ ತೋಂಟದಾರ್ಯ ಪ್ರಸಾದ ನಿಲಯ ನಿರ್ಮಿಸಿದ್ದು ಇಂದಿಗೂ ಪ್ರಸಾದ ನಿಲಯದಲ್ಲಿ ಅವರ ಫೋಟೋ ಹಾಗೂ ಹೆಸರಿದೆ. ತಂದೆಯ ಸ್ಮಾರಕ ನಿರ್ಮಿಸಿದ ಸ್ಪೇಷಲ್ ಡಿ. ಸಿ. ತೋಂಟದಾರ್ಯ, ಜಯಮ್ಮನವರಿಗೆ ಸಲ್ಲುತ್ತದೆ.

ಡಂಬಳದ ಅರ್ಧನಾರೀಶ್ವರನೂ ದ್ವಿತೀಯ ಸಿದ್ಧಲಿಂಗನೆಂದೇ ಆಳರಸರಿಂದ ಕರೆಸಿಕೊಂಡವನು. ಕೆಳದಿ ಅರಸರು ಪುತ್ರ ಸಂತಾನಗೊಂಡು ಅರ್ಧನಾರೀಶ್ವರನಿಗೆ ಡಂಬಳದಲ್ಲಿ ಮಠ ಕಟ್ಟಿಸಿಕೊಟ್ಟರು. ಚಿನ್ನದ ಪಾದುಕೆ, ಛತ್ರಿ ಚಾಮರ, ಆನೆ, ಒಂಟೆ, ಕುದುರೆ ಬೆಳ್ಳಿಯ ಪಾಲಿಕೆ ನೀಡಿದ್ದರು. ಈಗಲೂ ಅವು ನಮ್ಮ ಮಠದಲ್ಲಿವೆ.

ಸಿದ್ಧಲಿಂಗಯ್ಯನವರು ಹಿಂದೆ ಹಾಳಕೇರಿ ಶ್ರೀಗಳ ದರ್ಶನಕ್ಕೆ ಹೋದಾಗ ನೀನು ಶಾಸ್ತ್ರಿ ಆಗಲೇ ಅಂದಿದ್ದರಂತೆ. ಅಪ್ಪಾಜಿ ಧಾರವಾಡಕ್ಕೆ ಮುರಘಾಮಠದ ಶ್ರೀ ಮೃತ್ಯುಂಜಯಪ್ಪಗಳ ದರ್ಶನಕ್ಕೆ ಹೋದಾಗ ಅವರು ತಮ್ಮ ಕೋರಿಶೆಟ್ಟಿಗೆ ಕರೆದು ಅಲ್ಲಿ ಶಾಸ್ತ್ರಿಗಳಿದ್ದರೆ ಪ್ರಸಾದಕ್ಕೆ ಕರೆ ಅಂದಿದ್ದರಂತೆ. ವೈ ನಾಗೇಶಶಾಸ್ತ್ರಿಗಳೇ ಹೇಳಿದಂತೆ ತಪಸ್ವಿಗಳಾದ ಹಾಳಕೆರೆ ಅಂದಿನ ಶ್ರೀಗಳು ಇನ್ನು ಪ್ರವಚನ ಮಾಡಬೇಕ್ರಪ್ಪ ಅಲ್ಲಿ ಶಾಸ್ತ್ರಿಗಳ ಹತ್ತಿರ ಕಲಿಯಿರಿ ಅಂದರಂತೆ. ಮೃತ್ಯುಂಜಯಪ್ಪಗಳ ಈ ವಾಕ್‌ಸಿದ್ದಿ, ಅನುಗ್ರಹ ಬಲದಿಂದ ಅವರು ಸಿದ್ಧಲಿಂಗಶಾಸ್ತ್ರಿ ಹೊಸಮಠರೆಂದೇ ಜನಜನಿತರಾದರು. ಅವರ ಪ್ರವಚನ ವೈಖರಿ, ಪ್ರತಿಭೆ, ವಿದ್ವತ್ ಗುರುತಿಸಿದ ಊರುಗಳೆಂದರೆ ೧. ಸಂಡೂರು, ೨. ಶಿರೋಳ ೩. ಶಿರೂರು, ೪. ಕೊಂಡಿಕೊಪ್ಪ, ೫. ಕುರ್ತುಕೋಟೆ, ೬. ಗಜೇಂದ್ರಗಡ, ೭. ಕುಷ್ಟಗಿ, ೮. ಚಿಕ್ಕಪಡಸಲಗಿ, ೯. ಬಂಟ್ವಾಳ, ೧೦. ಇಟಗಿ, ೧೧. ಹಳ್ಯಾಳ, ೧೨. ಗದಗ, ೧೩. ಮುಂಡರಗಿ, ೧೪. ಸಿಂದಗಿ ೧೫. ಮೊರಟಗಿ, ೧೬. ಇಳಕಲ್, ೧೭. ಸೊಲ್ಲಾಪೂರ ಮುಂತಾದ ಭಾಗದಲ್ಲಿ ಇಂದಿಗೂ ಜನ ಶಾಸ್ತ್ರಿಗಳ ಪಾಂಡಿತ್ಯವನ್ನು ಕೊಂಡಾಡುತ್ತಾರೆ.

ಆಧ್ಯಾತ್ಮ ಶಿಖರದಲ್ಲಂತೂ ಸೊಂಡೂರಿನಲ್ಲಿ ಅನುಭವ ಮಂಥನವೇ ನಡೆಯುತ್ತದೆ. ಅಲ್ಲಿ ಅಲ್ಲಮಪ್ರಭುಗಳ, ಪ್ರಭುದೇವರ ವಿರಕ್ತ ಸಂಸ್ಥಾನಮಠದ ಪೀಠಾಧಿಕಾರಿಗಳು ಸಿದ್ಧಲಿಂಗಶಾಸ್ತ್ರಿಗಳಲ್ಲಿ ತತ್ವಜ್ಞಾನ ವ್ಯಾಸಂಗಮಾಡಿದವರು. ಪೂರ್ವಾಶ್ರಮದ ಮಲ್ಲಿಕಾರ್ಜುನದೇವರು ಅಧಿಕಾರ ವಹಿಸಿಕೊಂಡ ಸಮಾನರು. ಶಾಸ್ತ್ರಿಗಳು ಅಲ್ಲೇ ನಿಂತು ತಿಂಗಳವರೆಗೆ ಪ್ರಭುಸ್ವಾಮಿಗಳಿಗೆ ಅನುಷ್ಠಾನ ನಡೆಸಲು ಹೇಳಿ ತನು, ಮನದಿಂದ ಶಿವಾನುಭವ ನಡೆಸಿದರು. ಅಲ್ಲಿ ನಿಜಗುಣರ ತತ್ವ, ಸಿದ್ಧಲಿಂಗೇಶ್ವರರ ತಪೋಶಕ್ತಿ, ವೀರಶೈವ ಧರ್ಮದ ಪುನರುತ್ಥಾನದ ವಿಹಂಗಮತೆಯನ್ನು ಭಕ್ತರಿಗೆ ಬೆಳಿಗ್ಗೆ ಶಿವಾನುಭವ ಮತ್ತು ಸಾಯಂಕಾಲ ಪ್ರವಚನದ

ಸುಮಾರು ೪೦ ದಿನಗಳವರೆಗೆ ನೀಡಿದರು. ಸಂಡೂರ ಭಕ್ತರು ಬೇರೆ ಊರ ಭಕ್ತರಂತಲ್ಲ. ಅದೊಂದು ಕಲ್ಯಾಣದ ಅನುಭವ ಮಂಟಪವೇ. ಅಲ್ಲಿಯ ಶಿವ-ಶರಣ ಶರಣೆಯರ ತಾತ್ವಿಕ ತರ್ಕವೇಲ್ ನಡೆಯುತ್ತಿತ್ತು.

ಶ್ರೀ ಸಂಡೂರ ಶ್ರೀಗಳೇ ಹೇಳುವಂತೆ ಅವರ ನೆಚ್ಚಿನ ಸ್ಥಳಗಳಲ್ಲಿ ಸಂಡೂರು ಒಂದು. ಪ್ರವಚನದಲ್ಲಿ ವಿಷಯ ಗಂಭೀರತೆ ಹೆಚ್ಚು. ಹಾಸ್ಯಕ್ಕೆ ಅಲ್ಲಿ ಸ್ಥಾನ ಬಹಳ ಕಡಿಮೆ ಇದ್ದರೂ ತಿಳಿಹಾಸ್ಯ ಮಾತ್ರ. ಸಂಗೀತಕ್ಕೆ ತಕ್ಕಷ್ಟೆ ಸ್ಥಾನ. ಜ್ಞಾನ ದಾಸೋಹ ನಡೆದಾಗ ಎಲ್ಲವೂಗಳು ಇರಬೇಕು, ಮೌನವಿರಬೇಕೆಂದು ಅವರ ಇಚ್ಛೆ. ಅವರು ತರುಣಸಂಘದಲ್ಲಿ ಹೇಳುವಂತೆ ವೀರಶೈವ ತತ್ವ ಸಿದ್ಧಾಂತದ ''ಕಂಪ್ಯೂಟರ್'' ಗದಗದಿಂದ ಗ್ರೀಸಿನ್‌ವರೆಗೂ ಎಲ್ಲ ತತ್ವಜ್ಞಾನ ಅವರಿಗಿತ್ತು. ಸಾಕ್ರಟೀಸ್, ಪ್ಲೇಟೋ, ಅರಿಸ್ಟಾಟಲ್‌ನಿಂದ ಹಿಡಿದು ಕಲ್ಯಾಣದ ಶರಣ-ಶರಣೆಯರ ಒಳಗೊಡಿ, ನಡೆಯುವ ಕ್ಷೇತ್ರ ಸಿದ್ಧಲಿಂಗನ ಸಮಾಜ ಸುಧಾರಣೆ; ಗಜೇಶ್ವರರ ಬಗೆಗೆ ವಿವರ, ಹಾಳಕೆರೆ ಅನ್ನದಾನಮಹಾಸ್ವಾಮಿಗಳ ಪುರಾಣ, ಸಿದ್ಧಲಿಂಗೇಶ್ವರ ಪುರಾಣ, ಬಸವ ಪುರಾಣ, ಕೊಟ್ಟೂರೇಶ್ವರ ಪುರಾಣ, ಡಂಬಳದ ಅರ್ಧನಾರೀಶ್ವರ ಪುರಾಣ, ದೇವೀಪುರಾಣ, ಸಜ್ಜಲಗುಡ್ಡದ ದಾನಮ್ಮ ಪುರಾಣ, ಯಾವುದೇ ಪುರಾಣವಿರಲಿ (Authoritative) ಆಗಿ ಹೇಳಬಲ್ಲ ಪಾಂಡಿತ್ಯ ಅವರದು. ಅವರದೇ ಲೇಖನ ಇಲ್ಲಿ ಸೂಚಿಸುವುದು ಉಚಿತ,

'ಶ್ರೀಮಠಕ್ಕೆ ಬರುತ್ತಿದ್ದ ಹೆಣ್ಣುಮಕ್ಕಳ ಬಗೆಗೆ ಶಾಸ್ತ್ರಿಗಳಿಗೆ ಅಪಾರ ಗೌರವ ಇಟ್ಟುಕೊಂಡವರು. ಸ್ತ್ರೀಯರಿಗೆ ಸ್ತ್ರೀ ಧರ್ಮವನ್ನು ಹೇಳುತ್ತ ಹೆಣ್ಣುಮಕ್ಕಳಿಗೆ ನೀವು ಸಾಕ್ಷಾತ್ ಪಾರ್ವತಿದೇವಿಯ ಅವತಾರಿಗಳು. ಜಗತ್ತೆಂಬ ತೊಟ್ಟಿಲನ್ನು ತೂಗುವ ಮಾತೆಯರು ದೇಶ. ನಾಡು, ನುಡಿ, ಸುಧಾರಿಸಬೇಕಿದ್ದರೆ ಹೆಣ್ಣುಮಕ್ಕಳ ಪಾತ್ರ ಬಹಳ ಅಮೋಘವಾದುದು. ಕಾರಣ ನೀವು ಸುಸಂಸ್ಕೃತರಾಗಬೇಕೆಂದು ಹೇಳುತ್ತಾ ಸೀತೆ, ಸಾವಿತ್ರಿ ಹೇಮರಡ್ಡಿ ಮಲ್ಲಮ್ಮ, ಕಿತ್ತೂರ ರಾಣಿ, ಅಕ್ಕಮಹಾದೇವಿ, ಅನೇಕರ ಆದರ್ಶ ಚರಿತ್ರೆಯನ್ನು ಮನಮುಟ್ಟುವಂತೆ ಹೇಳುತ್ತಿದ್ದರು. ಸ್ವಾಮಿಗಳಿಗೆ ಕಾವಿಯ ಸಂಕೇತ, ಸಂಸಾರಿಗಳಿಗೆ ಕಲ್ಯಾಣದ ಶರಣ ಸಂಸ್ಕೃತಿ. ಸ್ವಾಮಿಗಳಿಗೆ ಸ್ವಾಮಿಯಾಗಿ, ಗುರುಗಳಿಗೆ ಗುರುಗಳಾಗಿ, ಅಶುದ್ಧವನ್ನು ಶುದ್ಧಮಾಡಿದವರು ಶಾಸ್ತ್ರಿಗಳೆಂದು ಮನತುಂಬಿ ಬರೆಯುತ್ತಾರೆ, ಅವರ ನಿಷ್ಠುರತೆಯೂ ಅಷ್ಟೇ ಯಾರೇ ತಪ್ಪು ಮಾಡಿರಲಿ ಶರಣಾಗುವವರೆಗಲ್ಲಿಗೆ ಹತ್ತಿ ನೋಡುತ್ತಿದ್ದರು. 'ಕೂಡಲ ಸಂಗನ ಶರಣನೊಡನೆ ಸರಸವಾಡಿದರೆ ಸುಣ್ಣದ ಕಲ್ಲು ಮಡಿಲಲ್ಲಿ ಕಟ್ಟಿಕೊಂಡು ಸರಸವಾಡಿದಂತೆ'. ಗುರು, ಲಿಂಗ, ಜಂಗಮರಲ್ಲಿ ಭಕ್ತಿ ಬಿತ್ತಿದವರು.

## ಎಡೆಯೂರ ಸಿದ್ಧಲಿಂಗನಲ್ಲಿ ಅನನ್ಯ ಭಕ್ತಿ

ಕಲ್ಯಾಣದ ಬಸವಕ್ರಾಂತಿ ನಂತರ ೨೦೦ ವರ್ಷ ಮುಚ್ಚಿ ಕತ್ತಲು ಸೇರಿತ್ತು ಅದಕ್ಕೆ ಪುನಃ ಚೇತನ ನೀಡಿದವರೇ ಎಡೆಯೂರ ಕ್ಷೇತ್ರದ ಜಗದ್ಗುರು

ಸಿದ್ಧಲಿಂಗೇಶ್ವರರು. ಅವರು ಕಗ್ಗೇರಿ ತೋಟದಲ್ಲಿ ಅನಿವಾರ್ಯ ಕಾರ್ಯಕ್ಕೆ ೧೨ ವರ್ಷ ತಪೋ ನಿಷ್ಠರಾಗಿದ್ದರಿಂದ 'ತೋಂಟದಾರ್ಯ'ರೆಂದೇ ಕರೆಯಲ್ಪಟ್ಟರು.

ದೇಶ ದೇಶಗಳನ್ನು ಸಂಚರಿಸಿ ವೀರಶೈವ ಧರ್ಮಶಾಸ್ತ್ರ ನೆಲೆನೆಟ್ಟು ೧೦೧ ವಿರಕ್ತರು ೭೦೦ ಶಿಷ್ಯರೊಡನೆ ಧರ್ಮ, ನ್ಯಾಯ, ನೀತಿ, ಬಸವತತ್ವ, ವಚನಸಾಹಿತ್ಯ, ಕನ್ನಡದ ಕೀರ್ತಿ, ಎತ್ತಿದ ಪವಾಡ ಸದೃಶರು. ಸಿದ್ಧಲಿಂಗಶಾಸ್ತ್ರಿಗಳಿಗೆ ಸಾಕ್ಷಾತ್ಕಾರ ಗೊಂಡವರು. ನಿಂತರೆ ಸಿದ್ಧಲಿಂಗ, ಕುಳಿತರೆ ಸಿದ್ಧಲಿಂಗ ಸ್ತುತಿ ಭಜಿಸುವವ ಸಿದ್ಧಲಿಂಗಶಾಸ್ತ್ರಿಗಳಿಗೆ ಆತನೇ ಆರಾಧ್ಯದೈವ.

ಎಡೆಯೂರು ಅಂದು ೫೦–೬೦ ವರ್ಷಗಳ ಹಿಂದೆ ಬರೀ ಕಾಡಲ್ಲಿದ್ದ ಗದ್ದುಗೆ ಅರ್ಚಕರ ಮನೆ ಬಿಟ್ಟ ಭಕ್ತರಿಗೆ ಯಾವ ಅನುಕೂಲತೆ ಇರಲಿಲ್ಲ. ಆಗ ಸಿದ್ಧಲಿಂಗಶಾಸ್ತ್ರಿಗಳು ಪ್ರಧಾನ ಅರ್ಚಕ ನಂಜುಂಡಪ್ಪನವರು ಹಾಗೂ ಗದುಗಿನ ಕಂಟ್ರಾಕ್ಟರ್ ವಿ.ಎಲ್.ಅಂಗಡಿ ಸೇರಿ ಮಾನ್ವಿ ಅಜ್ಜಣ್ಣನವರಲ್ಲಿ ಭಿನ್ನವಿಸಿ ಮಾನ್ವಿ ಅವರಿಂದ ಬಂದು ಹೋಗುವ ಭಕ್ತರಿಂದ ಅತಿಥಿ ಗೃಹ ಕಟ್ಟಿಸಿದರು. ಮಾನ್ವಿಯವರು ಸಿದ್ಧಲಿಂಗನ ಪ್ರಥಮ ಭಕ್ತರಾಗಲು ಪ್ರೇರೇಪಿಸಿ ೧ ಕ್ವಿಂಟಾಲ್ ಬೆಳ್ಳಿ ಪಲ್ಲಕ್ಕಿ ದಾನ ಮಾಡಲು ಪ್ರೇರೇಪಿಸಿದವರು. ಅನ್ನ ದಾಸೋಹ ಪ್ರಾರಂಭಿಸಿದರು. ಜಾತ್ರೆಯಲ್ಲಿ ಪರಸೆ ನಡೆಸಿದರು. ಅಧಿಕಾರಿಗಳನ್ನು ಕಂಡು ಅಲ್ಲಿ ಅಚ್ಚುಕಟ್ಟಾದ ತ್ರಿಕಾಲ ಅಭಿಷೇಕಕ್ಕೆ ವ್ಯವಸ್ಥೆ ಮಾಡಿದರು. ಅವರ ಸೇವೆ ವಿ. ಎಲ್. ಅಂಗಡಿ, ಮಾನ್ವಿ ಅಜ್ಜಣ್ಣ, ಅರ್ಚಕರು, ಅಲ್ಲಿಯ ಕಮೀಟಿ ಸದಸ್ಯರು ಇಂದೂ ನೆನೆಯುತ್ತಾರೆ. ರಾಜಗೋಪುರ ಕಟ್ಟಡದ ಕಾರ್ಯದಲ್ಲಿ ೬ ತಿಂಗಳ ಅಲ್ಲೇ ನೆಲೆನಿಂತು ಸಿದ್ಧಲಿಂಗೇಶ್ವರ ಇಂದಿನ ಪ್ರಗತಿಗೆ ಅವರ ಸೇವೆ ಅಷ್ಟಿಷ್ಟಲ್ಲ. ಅಣ್ಣಿಗೇರಿ ಸಿದ್ಧಲಿಂಗೇಶ್ವರನ ತಪೋಕ್ಷೇತ್ರ ಅಲ್ಲಿಯೂ ಅವರ ಚಿ|| ತೋಂಟದಾರ್ಯ ಡಿ. ಸಿ. ಆದಾಗ ಕಗ್ಗೇರಿಯಲ್ಲಿ ದಾಸೋಹ ಕಟ್ಟಡ ಕಟ್ಟಿಸಿ, ದಾಸೋಹ, ಜಾತ್ರೆ, ಪ್ರಾರಂಭಿಸಿದ ಕೀರ್ತಿ ಸಿದ್ಧಲಿಂಗಯ್ಯನವರ ಅಪರಿಮಿತ ಸೇವೆಗೆ ಸಾಕ್ಷಿ.

೯ನೇ ಪೀಠಾಧಿಪತಿ ಡಂಬಳದ ಅರ್ಧನಾರೀಶ್ವರನೆ ಸಾಕ್ಷಾತ್ ಸಿದ್ಧಲಿಂಗನ ಅಪರಾವತಾರವೆಂದು ಭಾವಿಸಿದ ಸಿದ್ಧಲಿಂಗಶಾಸ್ತ್ರಿಗಳು ತರುಣಸಂಘ ಸದಸ್ಯರಿಗೆ ಡಂಬಳಮಠಕ್ಕೆ ಸೇವೆಯಲ್ಲಿ ನಿರತರಾಗಿಸಿದರು. ಆತನ ಪುರಾಣ ಪ್ರಾರಂಭಿಸಿ ಡಂಬಳಮಠದ ಸೇವೆಗೈದರು. ಅಣ್ಣಿಗೇರಿಯಲ್ಲಿ ೧೧ನೇ ಪೀಠ ಮರಿತೋಂಟದಾರ್ಯ, ನಂದೀಶ್ವರ ಶ್ರೀಗಳು, ಯಳಂದೂರು ಬಸವಲಿಂಗ ಮಹಾಸ್ವಾಮಿಗಳ ಯೋಗನಿಷ್ಠೆ ಪ್ರಕಟಿಸಿದ ಮೊದಲಿಗರೇ ಸಿದ್ಧಲಿಂಗಶಾಸ್ತ್ರಿಗಳು.

ಭಗವದ್ಗೀತೆ, ರಾಮಾಯಣ, ನಿಜಗುಣರಶಾಸ್ತ್ರಗಳ ಕರತಲಾಮಲಕವಾಗಿದ್ದ ಶಾಸ್ತ್ರಿಗಳು ಬೌದ್ಧ, ಜೈನ, ಮುಸ್ಲಿಂ, ಶಿಖ್ ಧರ್ಮಶಾಸ್ತ್ರಗಳಲ್ಲೂ ಪಂಡಿತರೇ, ಜಗತ್ತಿನ ದಾರ್ಶನಿಕರಾದ ಡಾಲ್ಫಿನ್, ಸಾಕ್ರಟೀಸ್, ಪ್ಲೇಟೋ, ಅರಿಸ್ಟಾಟಲ್,

ಬಗೆಗೂ ಅಷ್ಟೆ ಪಾಂಡಿತ್ಯ, ಬ್ರಾಹ್ಮಣರಾಗಿದ್ದ ಗದುಗಿನ ವೆಟರ್ನರಿ ಡಾಕ್ಟರ್ ಸುಬ್ಬರಾವರವರು ಶಾಸ್ತ್ರಿಗಳಲ್ಲಿ ನಿಜಗುಣರ ತತ್ವಸಾರ ಹೇಳಿಸಿಕೊಳ್ಳಲು ನಿತ್ಯ ಶಹಪುರಪೇಟೆ ಮನೆಯಲ್ಲಿ ೩ ವರ್ಷಗಳ ಕಾಲ ತತ್ವಜ್ಞಾನ ಅಭ್ಯಸಿಸಿಕೊಂಡ ಬಳಿಕ ಇಂಥ ಪಂಡಿತರೇ ಮತ್ತೊಬ್ಬರಿಲ್ಲ ಎಂದು ದಶಕಗಳ ಹಿಂದೆಯೇ ಹೇಳಿದ್ದರು.

ಸಂಡೂರ, ಚಿಂಚಣಿ, ಮೊರಟಗಿ, ಗುಲ್ಬರ್ಗ, ರೋಜಾಮಟ ಎಲ್ಲಾ ಪೂಜ್ಯರು, ಗದುಗಿನ ಮಠದಲ್ಲಿ ಮರಿಗಳಾಗಿದ್ದಾಗ ಶಾಸ್ತ್ರಿಗಳಲ್ಲಿ ತತ್ವಜ್ಞಾನ ಪಡೆದವರು, ಹರ್ಲಾಪುರ ಸಂಗಪ್ಪ, ತುರ್ಕಾಣಿಹಾಲಪ್ಪ ಹುಬ್ಬಳ್ಳಿ ಮನೆತನದ ಶಿವರುದ್ರಪ್ಪನವರು ನಿಜಲಿಂಗಪ್ಪನವರು ಅಣ್ಣಿಗೇರಿಯ ಈ ಭಕ್ತರು ಶಾಸ್ತ್ರಿಗಳ ಶಿಷ್ಯರು.

ಶ್ರೀ ಮಠದ ಶಾಖಾಮಠಗಳಾದ ಸೊಲ್ಲಾಪುರ, ಲಾಯಗುಂದಿ, ಅಣ್ಣಿಗೇರಿ, ಶಿರೋಳ, ಇಟಗಿ, ಮುಂಡರಗಿ, ಕುಷ್ಟಗಿ, ತಂಬ್ರಳ್ಳಿ, ಕೊಂಡಿಕೊಪ್ಪ, ಚಿಕ್ಕಪಡಸಲಗಿ, ಗಂಗಾವತಿ, ಕನಕಗಿರಿ, ಸಂಡೂರ, ತೊಂಡ್ಯಾಳ, ನರೇಗಲ್, ನಿಡಗುಂದಿಕೊಪ್ಪ, ಹಾಳಕೇರಿ, ಗಜೇಂದ್ರಗಡ, ಮುಂತಾದ ಕಡೆಗೆ ಸಿದ್ಧಲಿಂಗಶಾಸ್ತ್ರಿಗಳ ತತ್ವಜ್ಞಾನ ವಿಮರ್ಶೆ, ಪ್ರವಚನ ಕೇಳಿದ ನೂರಾರು ಭಕ್ತರು, ಇಂದಿಗೂ ಅವರನ್ನು ನೆನೆಸುತ್ತಾ ಕಂಬನಿಗೆರೆಯುತ್ತಾರೆ.

ಸಂಡೂರಿನ ಸಕಲ ಭಕ್ತರೊಡನೆ, ಪೂಜ್ಯ ಪ್ರಭುದೇವರು ಜೊತೆಗೆ ನಾಡಿನ ಎಲ್ಲಾ ಪುಣ್ಯಕ್ಷೇತ್ರಕ್ಕೆ ಭೇಟಿ ನೀಡಿ ಗದುಗಿಗೆ ಬರುತ್ತಾರೆ, ಗದುಗಿನ ಮಠದಲ್ಲಿ ಶ್ರಾವಣದಲ್ಲಿ ಒಂದು ತಿಂಗಳು ಸಿದ್ಧಲಿಂಗೇಶ್ವರ ಪುರಾಣ ಹೇಳಿ ನಂತರ ಕೆಲದಿನಗಳಲ್ಲಿ ಆರೋಗ್ಯವಾಗಿದ್ದವರು ಒಮ್ಮೆಲೆ ೧೪–೯–೧೯೯೪ಳ ರಂದು ಹೃದಯಘಾತದಿಂದ ಸಿದ್ಧಲಿಂಗನ ಪಾದ ಸೇರಿದರು. ಉರಿಯುಂಡ ಕರ್ಪೂರವೇ ಆದರು.

## ಲಿಂ. ವೇ. ಪಂ. ಸಿದ್ಧಲಿಂಗಯ್ಯ ಹೊಸಮಠ ಟ್ರಸ್ಟ್ ಸ್ಥಾಪನೆ

ಬೂದಿಹಾಳದಲ್ಲಿ ಸಮಾಧಿಕಾರ್ಯ ನಡೆದಾಗ ನೆರೆದ ಭಕ್ತಮಂಡಳಿ ಚಿಂಚಣಿ ಪೂಜ್ಯರ ಸಾನ್ನಿಧ್ಯದಲ್ಲಿ ಅವರ ಅಪ್ಪಣೆ ಮೇರೆಗೆ ಲಿಂ. ವೇ. ಪಂ. ಸಿದ್ಧಲಿಂಗಶಾಸ್ತ್ರಿಗಳ ಪುಣ್ಯ ಸ್ಮರಣೆ ಟ್ರಸ್ಟ್ ರಚಿಸಿದರು. ಗದುಗಿನ ಜಗದ್ಗುರು ಡಾ. ಸಿದ್ಧಲಿಂಗಪೂಜ್ಯರು, ತೋಂಟದಾರ್ಯ ಮಠಕ್ಕೆ ಅವರೇ ಅಧ್ಯಕ್ಷರಾಗಿದ್ದು ಪ್ರತಿವರ್ಷ ಪುಣ್ಯ ಸ್ಮರಣೆಯಲ್ಲಿ ನಾಡಿನ ಅನೇಕ ಶಿವಶರಣರು, ಪೂಜ್ಯರು, ಸಮಾಜಸೇವಕರನ್ನು ಸನ್ಮಾನಿಸುವ ಕಾರ್ಯಕ್ರಮ ಹಮ್ಮಿಕೊಂಡರು. ಬೂದಿಹಾಳದ ಜ್ಯೋತಿ, ಸೂರ್ಯಪ್ರಭೆಯಾಗಿ ಜಗದ ಬೆಳಕಾಗಿ ಬೆಳಗಿನಲ್ಲಿ ಬೆಳಕಾಗಿ, ಸ್ಮರಣೀಯರಾದರು.

## ಲಿಂಗಾಯತ ತತ್ವ ಸಾರವೆಂದರೆ

ಬೀಜದಲ್ಲಿ ಗಿಡವಾಗುವ ಶಕ್ತಿ ಅಡಗಿರುವಂತೆ ಜೀವನದಲ್ಲಿ ದೇವರಾಗುವ ಶಕ್ತಿಯಡಗಿರುವುದು. ಬೀಜ ವೃಕ್ಷಗಳ ತಾದಾತ್ಮ್ಯ ಸಂಬಂಧವೇ ಜೀವ ದೇವರುಗಳಲ್ಲಿರುವುದು ಬೀಜವು ಮೊಳೆತು ಬೆಳೆದು ದೊಡ್ಡದಾಗುವುದಕ್ಕೆ ಸ್ಥಲ ಜಲಕಾದಿ ಸಾಧನವು ಅಂತೇ ಜೀವನು ವಿಕಾಸಹೊಂದಿ ದೇವರಾಗುವುದಕ್ಕೆ ಸಾಧನವಾದುದೇ ಮತತತ್ವವೆಂಬುದನ್ನು ಚೆನ್ನಾಗಿ ಪರಿಶೋಧಿಸಿದರು.

ವೈ. ನಾಗೇಶಶಾಸ್ತ್ರಿಗಳೂ ಹೇಳುತ್ತಿದ್ದರಂತೆ 'ನನಗೆ ಪೂಜೆಗೆ ಕುಳಿತಾಗ ಏಕಾಗ್ರತೆ ಬರುತ್ತಿಲ್ಲ. ಆದರೆ ಸಾಹಿತ್ಯಕೃಷಿ ಪುಸ್ತಕ ಓದುವಾಗ ನನ್ನನ್ನೇ ನಾನು ಮರೆತುಬಿಡುತ್ತೇನೆ. ಬಾಹ್ಯ ಜಗತ್ತನ್ನು ಮರೆಯುತ್ತೇನೆ. ಯೋಗದಿಂದಲೂ ಪಡೆಯಬೇಕಾದ್ದು ಇದೇ ಸಾರಸ್ವತಯೋಗ'. ಯೋಗಕ್ಕೆ ಸಾಧನೆ ಅಗತ್ಯ ನನಗೆ ಸಾಹಿತ್ಯದಲ್ಲಿ ದೊರೆತಿದೆ.

ಒಮ್ಮೆ ಧಾರವಾಡದ ಪಂಡಿತರೂ, ಸಾಹಿತಿಗಳು, ಆದ ಆರ್. ಸಿ .ಹಿರೇಮಠ ಇನ್ನೂ ವೈಸ್ ಚಾನ್ಸಲರ್ ಆಗಿರಲಿಲ್ಲ. ಆಗ ಶಾಸ್ತ್ರಿಗಳಿಗೂ ಅವರಿಗೂ ಪಂ. ನಾಗಭೂಷಣಶಾಸ್ತ್ರಿಗಳಿಂದ ನಂಟು ಕಾರಣ ಆರ್. ಸಿ. ಹಿರೇಮಠರು ಪಂ. ನಾಗಭೂಷಣಶಾಸ್ತ್ರಿಗಳ ಶಿಷ್ಯಂದಿರು. ಅಪ್ಪಾಜಿ ಹೋದಾಗ ಆರ್. ಸಿ. ಹಿರೇಮಠರು ಮನೆಯಲ್ಲಿರಲಿಲ್ಲ. ಗ್ರಂಥಗಳ ಚರ್ಚೆಗೆ ಹೋದಾಗ ಕಾಯುತ್ತಾ ಕುಳಿತಿದ್ದರು; ಪುಸ್ತಕ ಓದುತ್ತಿದ್ದರು. ಆರ್. ಸಿ. ಹಿರೇಮಠರು ಬಂದು ಮೈಮುಟ್ಟಿ 'ಅದೇನು ಮುಳುಗಿಬಿಟ್ಟೇರಿ ಪುಸ್ತಕದಾಗ ಅಂದಾಗಲೇ ಎಚ್ಚರ.' ಕ್ಷಮಿಸಿ ನೋಡಲಿಲ್ಲ ಚರ್ಚೆ ಮುಗಿಸಿ ಬಂದಾಗ ರಾತ್ರಿ ೯ ಘಂಟೆ.

ಈ ವಿಷಯ ಆರ್. ಸಿ. ಹಿರೇಮಠರ ಮಗಳು ಡಾಕ್ಟರಿಗೆ (ನಾನು ಬೆಂಗಳೂರ ವಕೀಲನಾದಾಗ) ಆರ್. ಸಿ. ಹಿರೇಮಠರೇ ಅಪ್ಪಾಜಿ ಪುಸ್ತಕದಲ್ಲಿ ಓದಿನ ಏಕಾಗ್ರತೆ ಹೇಳುತ್ತಿದ್ದರು. ಅವರ ಪುಸ್ತಕ ಸಂಗ್ರಹ ಬಹುಶಃ ೪೦ ಸಾವಿರಕ್ಕೂ ಹೆಚ್ಚು ಮನೆಯಲ್ಲಾ ಬರೀ ಪುಸ್ತಕವೆ ಪುಸ್ತಕ.

ನದಿ ಸಾಗರಗಾಮಿಯಾಗುವುದು ಪ್ರಕೃತಿಯ ಸಹಜತೆ ಆದರೆ ಸೆಲೆ, ತನ್ನ ಜಲಸಂಪತ್ತನ್ನು ಬಾಯ್ತೆರೆದು ನುಂಗಿ ಹಾಕುವ ಹಂತಕ ಶಕ್ತಿಗಳನ್ನು ಪ್ರಕೃತಿಯನ್ನು ಮೀರಿ ಸಮಷ್ಠಿ ಶಕ್ತಿಯನ್ನು ಪಡೆದು, ತನ್ನನ್ನು ತಾನು ವರ್ಧಿಸಿ ಕೇಳತ್ತಾ, ಎದುರಾದ ಕೊರಕಲುಗಳನ್ನು ದಾಟಿ, ಅಡ್ಡಗೋಡೆಗಳನ್ನು ಕೆಡವಿ, ಬೋರ್ಗರೆದು ಮುಂದೆ ಸಾಗಿದಾಗ ಮಾತ್ರ ಅದು ನದಿಯಾಗಿ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುತ್ತದೆ ಹೀಗೆ ಶಾಸ್ತ್ರಿಗಳ ತಾತ್ವಿಕ ಸೆಲೆ ಹಂತ ಹಂತವಾಗಿ ಬೆಳೆಯುತ್ತ ನಿಂತಂತೆ. ಅವರಿಗೆ ಮಾರ್ಗ ತೋರಿಸಿದವರು ಮನಾಲಿಯಲ್ಲಿದ್ದ ಹುಂಡೇಕಾರ ವಕೀಲರು. ಅವರೂ ತಾತ್ವಿಕತೆಯ ಹಂಬಲ ಅವರ ಎದುರುಗಡೆ ಮನೆ ಬ್ರಾಹ್ಮಣರಾದ ಜಾಲಿಹಾಳ ವಕೀಲರು

ಉಭಯತರಲ್ಲೂ ಧಾರ್ಮಿಕ, ತಾತ್ವಿಕತೆಯ ಬಗೆಗೆ ಚರ್ಚೆ, ಅಲ್ಲಿ ಪಂ. ಪಂಡಿತನಾಥಾಚಾರ್ಯರಂತ ಸಂಸ್ಕೃತ ಪಂಡಿತರು ಪತ್ರಿಕೆಯ ಉಪಸಂಪಾದಕ ಡಾ. ಮುಗಳಿಯವರು ಸಾಗರಕ್ಕೆ ತಲುಪುವಾಗ ಶಾಸ್ತ್ರಿಗಳ ತತ್ವಜ್ಞಾನ ಕಂಡ ಆ ಪಂಡಿತರೆಲ್ಲ ಆಗಾಗ್ಗೆ ಹುಂಡೇಕಾರ ವಕೀಲರ ಮನೆಯಲ್ಲಿ ಸೇರಿ ಪ್ರವಚನ ಕಾರ್ಯಕ್ರಮ ಹಮ್ಮಿಕೊಂಡಾಗ ಸಿದ್ಧಲಿಂಗಶಾಸ್ತ್ರಿಗಳ ತಾತ್ವಿಕ ನೆಲೆ, ಬಡತನ, ಮಾನಸಿಕ ಸ್ಥಾಪಿಸಿಕೊಂಡವರು.

ಬಳ್ಳಾರಿ ವೈ ನಾಗೇಶಶಾಸ್ತ್ರಿಗಳು ಗದುಗಿಗೆ ಬಂದಾಗಲೆಲ್ಲ ಅವರ ವಾಸ್ತವ ಅವರ ಪರಮ ಶಿಷ್ಯರಾದ ಶ್ರೀ ಸಿದ್ಧಲಿಂಗಶಾಸ್ತ್ರಿಗಳ ಗದಗ ಶಹಪುರಪೇಟೆ ಮನೆಯಲ್ಲಿ, ಶಾಸ್ತ್ರಿಗಳ ಮಕ್ಕಳಿಗೆ ಅಚ್ಚುಮೆಚ್ಚಿನ ತಾತ ಮಕ್ಕಳಿಲ್ಲದ ವೈ. ನಾಗೇಶಶಾಸ್ತ್ರಿಗಳ ಬಳ್ಳಾರಿಯಲ್ಲಿ ದತ್ತು ಮಗನನ್ನು ಪಡೆದು ಮದುವೆ ಮಾಡಿದಾಗ, ಸಿದ್ಧಲಿಂಗಶಾಸ್ತ್ರಿಗಳು ಸೋಮವ್ವ ಅವರೇ ನಿಂತು ವೈ. ನಾಗೇಶಶಾಸ್ತ್ರಿಗಳ ದತ್ತು ಮಗನ ಮದುವೆ ನೆರವೇರಿಸಿದರು. ಮರೆಮ್ಮ ನಾಗೇಶಶಾಸ್ತ್ರಿಗಳ ಪತ್ನಿಯಂತೂ ಸಿದ್ಧಲಿಂಗಶಾಸ್ತ್ರಿಗಳ ಮಕ್ಕಳೆಲ್ಲರನ್ನು ಖಾಸಾ ಮೊಮ್ಮಕ್ಕಳಂತೆ ಕಂಡವರು. ಅಷ್ಟು ಅನ್ಯೂನ್ಯತೆ ಸಿದ್ಧಲಿಂಗಶಾಸ್ತ್ರಿಗಳು ಮತ್ತು ವೈ. ನಾಗೇಶಶಾಸ್ತ್ರಿಗಳಲ್ಲಿ.

ಹಾಗೆ ಶಾಸ್ತ್ರಿಗಳು ಹಾಳಕೇರೆ ಹಿರಿಯ ಪೂಜ್ಯ ಅನ್ನದಾನ ಮಹಾಸ್ವಾಮಿಗಳ ಕೃಪಾದೃಷ್ಟಿಯಲ್ಲಿ ಬೆಳೆದಾಗ ಅನೇಕ ಬಡ ಮಕ್ಕಳನ್ನು ಹಾಳಕೇರಿ ಅನ್ನದಾನ ಮಠದ ಬೋರ್ಡಿಂಗಿಗೆ ಸೇರಿಸಿ ಅವರಿಗೆ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಸಿದರು. ಆ ಶಾಲೆ ಕಲಿತು ಬೆಳೆದವರು ಇಂಗ್ಲೀಷ್ ಲೆಕ್ಚರರ್, ಸ್ಟಾಟಿಸ್ಟಿಕ್ ಡೆಪ್ಯೂಟಿ ಡೈರೆಕ್ಟರ್ ಎಸ್. ಎಸ್. ಹರ್ಲಾಪುರ ಪಾಟೀಲ ಅಸಿಸ್ಟೆಂಟ್ ಕಮೀಷನರ್ ಮುಂತಾದವರು ಅವರಿಗೆ ಬರೀ ಡಿಗ್ರಿ ಕೊಡಿಸದೇ ಆಧ್ಯಾತ್ಮಿಕ, ನೈತಿಕ ನೆಲೆ ನೀಡಿದ್ದರಿಂದಲೇ ಅಂದಿನ ಬಡ ವಿದ್ಯಾರ್ಥಿಗಳು ಮುಂದಿನ ಅಧಿಕಾರ ಸ್ಥಾನದಲ್ಲಿ ಬಹುದೊಡ್ಡ ಹೆಸರು ಮಾಡಿದರು. ಇದು ಸಮಾಜಮುಖಿಯಾದ ಬೂದಿಹಾಳದ ಸಿದ್ಧಲಿಂಗಶಾಸ್ತ್ರಿಗಳಲ್ಲಿ ಬಡ ವಿದ್ಯಾರ್ಥಿಗಳ ಬಗೆಗಿದ್ದ ಕಳಕಳಿ.

ಸಿದ್ಧಲಿಂಗಶಾಸ್ತ್ರಿಗಳ ವಾಹನ ಸೈಕಲ್, ಅನ್ನದಾನ ಮಹಾಸ್ವಾಮಿಗಳು ವಿದ್ಯಾರ್ಥಿಗಳಿಗೆ ಬೋರ್ಡಿಂಗ್‌ನಲ್ಲಿ ಆಶ್ರಯ ನೀಡಿದ್ದಕ್ಕೆ ಶಾಸ್ತ್ರಿಗಳು ಅಲ್ಲಲ್ಲಿ ವ್ಯಾಪಾರಸ್ಥರಿಗೆ ತಿಳಿಹೇಳಿ ಆಶ್ರಮಕ್ಕೆ ಪ್ರತಿದಿನ ಕಾಯಿಪಲ್ಯೆ ಕಳಿಸುತ್ತಿದ್ದರು. ಅಂಗಡಿಯಲ್ಲಿ ಆಳು ಇಲ್ಲಾಂದ್ರೆ ತಾನೇ ಸೈಕಲ್ಲಿನಲ್ಲಿ ಒಯ್ದು ಆಶ್ರಮಕ್ಕೆ ಕೊಟ್ಟು ಬರುತ್ತಿದ್ದರು. ಆದರೆ ಈ ವಿಚಾರ ಪೂಜ್ಯರಿಗೆ ಗೊತ್ತೇಯಿರಲಿಲ್ಲ. ಅಷ್ಟೊಂದು ನಿಸ್ವಾರ್ಥ ಸೇವೆ ಗೊತ್ತಾದಾಗ ಪೂಜ್ಯರೇ ಈ ಕಾರ್ಯಕ್ಕೆ ಮಠದ ಹುಡುಗನನ್ನು ನೇಮಿಸಿದರು. ಹುಲುವಪ್ಪ ಎಂಬ ಮಾಸ್ತರರು ಆಶ್ರಮದ ಮ್ಯಾನೇಜರ್ ಆಗಿದ್ದರು. ತುಂಬಾ ಕಟ್ಟುನಿಟ್ಟು, ಆದರೆ ಶಾಸ್ತ್ರಿಗಳೆಂದರೆ ಅವರೂ ಕರಗಿಬಿಡುವಷ್ಟು ಪ್ರಭಾವ ಬೀರಿದ್ದರು ಶಾಸ್ತ್ರಿಗಳು. ಅವರ ಸರಳ ಸ್ವಭಾವ ಪೂಜ್ಯ ಅನ್ನದಾನೀಶರನ್ನು ತುಂಬಾ

ಹಿಡಿಸಿತ್ತು. ತಮ್ಮ ಅಂತರಂಗದ ವಿಷಯವೆಲ್ಲವನ್ನು ಪೂಜ್ಯರು ಹೇಳುತ್ತಿದ್ದುದು ಸಿದ್ದಲಿಂಗಶಾಸ್ತ್ರಿಗಳಿಗೇ ಅವರು ಲಿಂಗೈಕ್ಯರಾದಾಗ ಅವರ ಕ್ರಿಯಾ ಸಮಾಧಿ ಸಿದ್ಧಲಿಂಗಶಾಸ್ತ್ರಿಗಳ ನೇತೃತ್ವದಲ್ಲಿ ಆಶ್ರಮದ ಗವಿಯಲ್ಲಿ ನಡೆದಿತ್ತು. ಅಷ್ಟೊಂದು ಗುರು, ಶಿಷ್ಯರ ಅನ್ಯೂನ್ಯತೆ, ಹಾಳಕೇರಿ ಪ್ರತಿ ಜಾತ್ರೆಗೆ ಬೂದಿಹಾಳದಿಂದ ಶಾಸ್ತ್ರಿಗಳು ಕಾಲು ನಡಿಗೆಯಲ್ಲಿ ಪತ್ನಿ ಸಮೇತ ಕ್ಷೇತ್ರ ದರ್ಶನ ನೀಡಿ ಬರುತ್ತಿದರು. ಹಾಳಕೇರಿ ಅನ್ನದಾನ ಪುರಾಣ ಹೇಳುವಾಗ ತಮ್ಮ ಮತ್ತು ಪೂಜ್ಯರ ಅವಿನಾಭಾವ ಸಂಬಂಧ ಬಿಚ್ಚಿ ಹೇಳುತ್ತಿದ್ದರು. ಶಾಸ್ತ್ರಿಗಳಲ್ಲಿ 'ಶಾಸ್ತ್ರಿ'ತನವನ್ನು ಕಂಡ ಅಲೌಕಿಕ ಶಕ್ತಿ ಪೂಜ್ಯ ಅನ್ನದಾನಶ್ರೀಗಳಲ್ಲಿತ್ತು.

ಶಾಸ್ತ್ರಿಗಳಲ್ಲಿ ವೀರಶೈವ ಧರ್ಮದಲ್ಲಿ ಆಳ, ಅಭಿಮಾನವಿತ್ತು. ಒಡೆದು ಸಮಾಜ ಕೂಡಿಸುವ ಸಲುವಾಗಿ ಹಾಳಕೇರಿ ಶ್ರೀಗಳಲ್ಲಿ, ಗದುಗಿನ ವೀರೇಶ್ವರ ಪುಣ್ಯಾಶ್ರಮದ ಪಂ. ಪುಟ್ಟರಾಜಗವಾಯಿಗಳಲ್ಲಿ, ಪಂ. ನಾಗಭೂಷಣಶಾಸ್ತ್ರಿಗಳಲ್ಲಿ ಓಡಾಡಿ ಸಮಾಜದ ಒಗ್ಗಟ್ಟಿಗಾಗಿ ಶ್ರಮಿಸಿದವರು ಗದುಗಿನ ಇಂದಿನ ಶ್ರೀ ತೋಂಟದ ಸಿದ್ಧಲಿಂಗ ಜಗದ್ಗುರುಗಳಲ್ಲಿ ಅಪರೋಕ್ಷವಾಗಿ ಈ ನಿಟ್ಟಿನಲ್ಲಿ ಶ್ರಮಿಸಿದವರು.

ಮೂರು ಜನ ಶಾಸ್ತ್ರಿಗಳ ಅನನ್ಯ ಸಂಪರ್ಕ ಗದುಗಿನ ತೋಂಟದಾರ್ಯ ಮಠದ್ದು ಆದರೆ ಮೂರು ಜನರನ್ನು ತಾತ್ಸಾರಿದ್ದು ಅದೇ ಮಠ ಅಗಲಿದ ನಂತರವೇ ಅವರ ಬಗೆಗೆ ಕಣ್ತೇರೆದಿದ್ದು ತುಂಬಾ ನೋವಿನಿಂದ ಹೇಳಬೇಕಿದೆ.

ವೈ. ನಾಗೇಶಶಾಸ್ತ್ರಿಗಳು ಬಳ್ಳಾರಿ ಎಳೆಬೆಂಚಿಯಲ್ಲಿ ಬಡತನದಲ್ಲೇ ಹುಟ್ಟಿ ಬಡತನದಲ್ಲೇ ಕೈ ತೊಳೆದು ಕಾಳಿದಾಸನಾಗಿ, ಭೋಜರಾಜನ ಆಸ್ಥಾನ ಆಶ್ರಯದಿಂದ ಪ್ರತಿಭೆ ಬೆಳಗಿತು. ಆದರೆ ಆಶ್ರಯವಿಲ್ಲದ್ದಕ್ಕೆ ಅಷ್ಟೇ ಪ್ರತಿಭೆ ಪಡೆದ ಪ್ರಚಾಂಡ ಕಾಳೀ ವಿದ್ವಾಂಸರಾದ ಪಂ. ವೈ. ನಾಗೇಶಶಾಸ್ತ್ರಿಗಳು ಹಾಗೂ ಪಂ. ನಾಗಭೂಷಣಶಾಸ್ತ್ರಿಗಳು ಅವರಿಬ್ಬರ ಶಿಷ್ಯರಾಗಿ ಅಷ್ಟೇ ಪಾಂಡಿತ್ಯಹೊಂದಿದ ಶ್ರೀ ಸಿದ್ಧಲಿಂಗಶಾಸ್ತ್ರಿಗಳು ತಮ್ಮಿಬ್ಬರು ಗುರುಗಳಷ್ಟೇ ಜ್ಞಾನ ಪಾಂಡಿತ್ಯ ಪಡೆದಷ್ಟೇ ಬಡತನವನ್ನು ಪಡೆದು ಬಡತನದಲ್ಲಿ ಅಡ್ಡಬಂದ ತಡೆಗೋಡೆಗಳನ್ನು ದಾಟಿ ಮತ್ತೆ ಆಧ್ಯಾತ್ಮ ಯೋಗಿಯಾಗಿ ನಿಂತ ಶಿಷ್ಯರು ಕಾರಣ ಇವರ ಬಗೆಗೆ ವೈ. ನಾಗೇಶಶಾಸ್ತ್ರಿಗಳಿಗೂ ಹೆಮ್ಮೆ. ಹೀಗಾಗಿ ಪತ್ನಿ ಸೋಮವ್ವನಿಂದ ಕರೆ ಬಂದು ಬಳ್ಳಾರಿಗೆ ಆಗಾಗ್ಗೆ ಸಿದ್ಧಲಿಂಗಶಾಸ್ತ್ರಿಗಳು ಹೋಗುತ್ತಿದ್ದರು. ಬಡತನ ಅವರಿಬ್ಬರ ವಾತ್ಸಲ್ಯಕ್ಕೆ ಎಂದೂ ಅಡ್ಡಿಯಾಗಲಿಲ್ಲ. ಬದಲಾಗಿ ಬಾಂಧವ್ಯ ಬಿಗಿಯಾಗುತ್ತಲೇ ಸಾಗಿತು. ಈ ಮಾತು ಸ್ವತಃ ನಾಗಭೂಷಣಶಾಸ್ತ್ರಿಗಳು ಪಂ. ಸಿದ್ಧಲಿಂಗಶಾಸ್ತ್ರಿಗಳ ಪುಣ್ಯಸ್ಮರಣೆ ಕಾರ್ಯಕ್ರಮದಲ್ಲಿ ಗದುಗಿನ ಸಭೆಯಲ್ಲಿ ಹೇಳಿದ್ದರು.

ಗುರು ಮುಖವಿಲ್ಲದೇ ಬಳ್ಳಾರಿಯಲ್ಲಿ ಕಾಶಿಯಲ್ಲಿ ಕಠಿಣತಮರಾದ 'ಸರ್ವದರ್ಶನ ತೀರ್ಥ' ಪರೀಕ್ಷೆ ಪಾಸಾದ ಮೊದಲ ವಿದ್ಯಾರ್ಥಿ ವೈ. ನಾಗಭೂಷಣಶಾಸ್ತ್ರಿಗಳು. ಉಪನಿಷತ್, ಗೀತೆ, ಚಾರ್ವಾಕ, ಬೌದ್ಧ ಜೈನ, ನ್ಯಾಯವೈಶೇಷಿಕ, ಯೋಗ, ಸಂಖ್ಯಾಪೂರ್ವ ಮೀಮಾಂಸೆ, ಉತ್ತರ ಮೀಮಾಂಸೆಯ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಇಂಗ್ಲೀಷ್, ಹಿಂದಿ, ಮರಾಠಿ, ಬಂಗಾಳಿ, ಸಂಸ್ಕೃತ, ಕನ್ನಡ, ಭಾಷೆಯಲ್ಲಿ ಹಿಡಿತವಿದ್ದ ವೈ. ನಾಗೇಶಶಾಸ್ತ್ರಿಗಳು ಇವನ್ನೆಲ್ಲಾ ತಮ್ಮ ಶಿಷ್ಯ ಪಂ. ಸಿದ್ಧಲಿಂಗಶಾಸ್ತ್ರಿಗಳಿಗೆ ಧಾರೆ ಎರೆದಿದ್ದರು.

ಸ್ವತಃ ಎಸ್. ಎಸ್. ಮಾಳವಾಡ, ಜೋಳದರಾಶಿ ದೊಡ್ಡನಗೌಡ, ಶ್ರೀಗುರು ಭಾಸ್ಕಾರಚಾರ್ಯ ರಾಮಚಂದ್ರಸ್ವಾಮಿಗಳು, ಶ್ರೀ ವೈ. ನಾಗೇಶಶಾಸ್ತ್ರಿಗಳ ಆಳ, ಎತ್ತರದ ನಿಲುವು ಹೊಗಳಿ ಹಾಡಿದ್ದಾರೆ. ಅವರಿಗೆ ಅವಕಾಶ ಕಡಿಮೆ ಆಗಿದ್ದು ಸಮಾಜ ಅವರನ್ನು ತೀವ್ರ ಗುರುತಿಸಲಾರದ್ದು ಸಿದ್ಧಲಿಂಗಶಾಸ್ತ್ರಿಗಳಿಗೆ ತುಂಬಾ ನೋವು ತಂದಿತ್ತು ಅತ್ತ ಅವರ ಇನ್ನೊಬ್ಬ ಗುರುಗಳಾದ ಶ್ರೀ ನಾಗಭೂಷಣಶಾಸ್ತ್ರಿಗಳಿಗೂ ಅದೇ ಬಡತನ ಸಮಾಜದ ತಾತ್ಸಾರ ಅದರಂತೆ ತಾವೂ ಎಲೆಮರೆಕಾಯಿಯಾಗಿ, ಅದೇ ಬಡತನ ಉಂಡು ಹೊಟ್ಟೆ, ಹಾಸಿ ಮಲಗಿದವರು ಪಾಂಡಿತ್ಯಕ್ಕೆ ಕೊರತೆಯಿಲ್ಲ, ಇಂದಿನ ಸಮಾಜಕ್ಕೆ ಡಾಂಭೀಕತೆ ಬೇಕೇ ವಿನಃ ಸತ್ಯ ಸರಳ ಮಾರ್ಗವಲ್ಲ, ರಸಋಷಿಗಳಂತೆ ಬೆಳಗಿದ ಈ ವೀರಶೈವ ನಕ್ಷತ್ರರ ಪುಸ್ತಕಗಳು ಪ್ರಕಟಿಸಿದರೆ ಸಾಲದು. ಜೀವಂತವಿದ್ದಾಗ ಅವರನ್ನು ಯಾವರೀತಿ ಸಮಾಜ ಕಂಡಿತೆಂಬುದೇ ಮುಖ್ಯ.

### ಪುರಾಣ ಪ್ರವಚನಗಳಲ್ಲಿ ಸಿದ್ಧಲಿಂಗಶಾಸ್ತ್ರಿಗಳಿಗೆ ಕಂಡುಬಂದ ಪ್ರಸಂಗಗಳು

೧. ಆತ್ಮೀಯ ಗೆಳೆಯ ವಕೀಲರು ನಿಧನ ಹೊಂದಿದರು ಜೀವಿತಕಾಲದಲ್ಲಿ ನಿತ್ಯ ಪುರಾಣ ಧ್ಯಾನವನ್ನು ಮಾಡುತ್ತಿದ್ದರಂತೆ ಅವರು ಅಕಾಲ ಮೃತ್ಯವಾಗಿ ಭೂತವಾಗಿದ್ದರಂತೆ ಶಾಸ್ತ್ರಿಗಳು ಪುರಾಣ ಹೇಳುತ್ತಿದ್ದಾಗ ಒಬ್ಬ ಹೆಣ್ಣುಮಗಳು ದಿಟ್ಟಿಸಿ ಶಾಸ್ತ್ರಿಗಳನ್ನೇ ನೋಡುತ್ತಿದ್ದಳಂತೆ. ಇದು ಶಾಸ್ತ್ರಿಗಳಿಗೆ ಕಸಿವಿಸಿಯಾಯ್ತು ವ್ಯವಸ್ಥಾಪಕರನ್ನು ಕರೆದು ಈ ತಾಯಿ ಹೀಗೆ ನನ್ನನ್ನೇ ನೋಡುತ್ತಿದ್ದರೆ ನಾನು ಪುರಾಣ ಹೇಗೆ ಹೇಳಲಿ ? ಆಗ ಅಲ್ಲಿದ್ದ ವ್ಯವಸ್ಥಾಪಕರು ಅವಳನ್ನೇಕೆ ನೀವು ನೋಡುತ್ತಿದ್ದಿರಿ, ಬೇರೆಯವರನ್ನು ನೋಡುತ್ತಾ ಪುರಾಣ ಹೇಳಿರಿ.

ಆಯ್ತು, ಆ ದಿನ ಪುರಾಣ ಮುಕ್ತಾಯವಾಯ್ತು, ಆದರೆ ಎಲ್ಲಾ ಜನ ಎದ್ದು ಹೋದರೂ ಆ ಹೆಣ್ಣು ಮಗಳು ಹಾಗೇ ಕುಳಿತಿದ್ದಳು, ಶಾಸ್ತ್ರಿಗಳು ವ್ಯವಸ್ಥಾಪಕರನ್ನು ಕರೆದುಕೊಂಡು ಬಂದು ಆ ಹೆಣ್ಣುಮಗಳನ್ನು ಮಾತಾಡಿಸಿದರೆ, ಕನ್ನಡ ಓದಲೇ ಬಾರದಂತವಳು, ಇಂಗ್ಲೀಷಿನಲ್ಲಿ ತಡತಡ ಮಾತಾಡಲಾರಂಭಿಸಿದಾಗ ಜನಕ್ಕೆ ದಿಗಿಲು.

ಶಾಸ್ತ್ರಿಗಳೇ ಮಾತಾನಾಡಿಸಿದಾಗ, ಅವಳು ಇಂಗ್ಲೀಷಿನಲ್ಲಿ "Your my dearest friend, as I heared your Pravachan many years, where spirutialy strings rythamic in your lecture" ಅಂದಳಂತೆ. ಶಾಸ್ತ್ರಿಗಳ ಇಂಗ್ಲೀಷ ಸಹ ಕನ್ನಡದಷ್ಟೇ ಸ್ವಚ್ಛವಿತ್ತು "I know friend who are you, why are you in this lady" "I am so and so I was lawyer, but I did not wish, but for sudden death, I should and now I am devil, I don't know any place except my daughter in law's body"

ಶಾಸ್ತ್ರಿಗಳು ‘‘ನೋಡು ಈ ಸೊಸೆ ಜೀವ ಯಾಕೆ ಹಿಂಡ್ತಿ? ಎಡೆಯೂರ ಸಿದ್ಧಲಿಂಗನ ಸೇವೆ ಮಾಡಿ ರಾಕ್ಷಸರೇ ದೇವತೆಯಾಗಿದ್ದಾರೆ. ನೀನೂ ನನ್ನ ಇಷ್ಟದೇವತೆಗೆ ಪೂಜೆ ಮಾಡಿ ನಿನ್ನ ಪಾಪ ಕಳೆದುಕೋ, ಅಂದಿನಿಂದ ಆ ವಕೀಲ ದೆವ್ವ ಸೊಸೆಯ ಮೈ ಮೇಲೆ ಬರಲೇ ಇಲ್ಲವಂತೆ.

**ಸಂಡೂರು ಮಠ ಮತ್ತು ಸಿದ್ಧಲಿಂಗಯ್ಯಶಾಸ್ತ್ರಿಗಳು :**

ಸಂಡೂರು ಪ್ರಕೃತಿ ಸೌಂದರ್ಯಕ್ಕೆ ಹೆಸರಾದ ಊರು. ಸುತ್ತಲೂ ಗಿಡಮರಗಳು ಗುಡ್ಡ ಬೆಟ್ಟಗಳಿಂದ ಆವೃತ್ತವಾದ ಈ ಊರು ಬಳ್ಳಾರಿ ಜಿಲ್ಲೆಯ ಕಾಶ್ಮೀರವೆಂದು ಕರೆಯಿಸಿಕೊಂಡಿದೆ. ಕೃತಯುಗದಲ್ಲಿ ದೇವಗಿರಿ, ತ್ರೇತಾಯುಗದಲ್ಲಿ ಸುವರ್ಣಗಿರಿ, ದ್ವಾಪಾರ ಯುಗದಲ್ಲಿ ದಿವ್ಯಾಚಲ, ಕಲಿಯುಗದಲ್ಲಿ ಲೋಹಗಿರಿ ಎಂದು ಕರೆಸಿಕೊಂಡ ಸಂಡೂರು ರಾಮಾಯಣದಲ್ಲಿ ಇದರ ಉಲ್ಲೇಖ ಬರುತ್ತದೆ. ಈ ಊರಿನಲ್ಲಿ ಕುಮಾರಸ್ವಾಮಿ ಪ್ರಸಿದ್ಧ ದೇವಸ್ಥಾನವಿರುವದರಿಂದ ಪೌರಾಣಿಕ ಹಿನ್ನೆಲೆಯಿದೆ. ಗಾಂಧೀಜಿಯವರು ಇಲ್ಲಿಗೆ ಬಂದಿದ್ದರಿಂದ ಐತಿಹಾಸಿಕ ಮಹತ್ವವಿದೆ. ಹಾಗೂ ಸಂಡೂರು ಭೂಹೋರಾಟದಿಂದ ಕೂಡಾ ಗಮನಸೆಳೆದಿದೆ. ಘೋರ್ಪಡೆಯವರ ರಾಜಮನೆತನದಿಂದ ಸಂಡೂರು ಸಂಸ್ಥಾನ ಎಂದು ಕರೆಸಿಕೊಂಡಿದೆ. ಇಂತಹ ಹಿನ್ನೆಲೆಯ ಈ ಊರಿನಲ್ಲಿ ಬಸವತತ್ತ್ವವನ್ನು ಆಚರಣೆಯನ್ನು ತರುತ್ತಿರುವ ಅಲ್ಲಮ ಪ್ರಭುಸಂಪ್ರದಾಯದ ಒಂದು ಮಠವಿದೆ. ಅದೇ ಶ್ರೀ ಪ್ರಭುದೇವರ ಸಂಸ್ಥಾನಮಠ.

ತೋಂಟದ ಸಿದ್ಧಲಿಂಗೇಶ್ವರ ಪರಂಪರೆಯಲ್ಲಿ ಬರುವ ಒಂಭತ್ತನೇ ಪಿಠಾಧೀಪತಿಗಳಾದ ಡಂಬಳ ಅರ್ಧನಾರೀಶ್ವರರಿಂದ ಶಿವಾನುಭವ ಚರಂತಿಕೆಯನ್ನು ಪಡೆದುಕೊಂಡ ಸ್ವಾಮಿಗಳಲ್ಲಿ ಒಬ್ಬರು ಸಂಡೂರು, ಒಬ್ಬರು ಮೈಸೂರು, ಒಬ್ಬರು ಉರುಕೊಂಡಗಳಲ್ಲಿ ಮಠಸ್ಥಾಪಿಸಿದರೆಂದು ನಿರಂಜನ ಜಂಗಮವಂಶ ದರ್ಪಣದಿಂದ ತಿಳಿಯುತ್ತದೆ. ಇದನ್ನೇ ಡಾ. ಆರ್. ಸಿ. ಹಿರೇಮಠರು ಷಟಸ್ಥಲ ಜ್ಞಾನ್ ಸಾರಾಮೃತದ ಮುನ್ನುಡಿಯಲ್ಲಿ ಬರೆದಿರುವರು. ಹೀಗಾಗಿ ಈ ಮಠಕ್ಕೆ ಮೂರುನೂರು ವರ್ಷಗಳ ಸ್ಪಷ್ಟ ಇತಿಹಾಸವಿದೆ.

ಈ ಮಠದ ಪ್ರಭುಸ್ವಾಮಿಗಳು ಶಾಸ್ತ್ರೀಗಳ ಪ್ರವಚನ ಕೇಳಿಯೇ ಬೆಳೆದವರು. ಶಾಸ್ತ್ರಿಗಳ ಬಗ್ಗೆ ವಿಶೇಷ ಪ್ರೀತಿ ಗೌರವ. ಆದರೆ ಅಣ್ಣಿಗೇರಿ, ಇಟಗಿ, ಮುಂಡರಗಿ ಪುರಾಣಗಳಲ್ಲಿ ಶಾಸ್ತ್ರಿಗಳ ಜೊತೆಗೆ ಇರುತ್ತಿದ್ದರು. ಪ್ರತಿವರ್ಷ ತಂಬ್ರಳ್ಳಿಯ ಕೌದಿಮಹಾಂತೇಶ್ವರ ಜಾತ್ರೆಗೆ ಸುಮಾರು ಹದಿನೈದು ವರ್ಷ ಜೊತೆಯಾಗಿಯೇ ಹೋಗುತ್ತಿದ್ದರು.

ಹೀಗಾಗಿ ಪ್ರತಿವರ್ಷ ಶಾಸ್ತ್ರಿಗಳು ಸಂಡೂರಿಗೆ ಪ್ರವಚನ ಮಾಡಲು ಹೋಗುತ್ತಿದ್ದರು. ಇಲ್ಲಿ ಶಾಸ್ತ್ರಿಗಳ ದೊಡ್ಡ ಅಭಿಮಾನಿ ಬಳಗವೇ ಇದೆ. ಮಾಜಿ ಸಂಸದರಾದ ಶ್ರೀ ಕೆ. ಎಸ್. ವೀರಭದ್ರಪ್ಪನವರಂತೂ ಶಾಸ್ತ್ರಿಗಳ ಬಗ್ಗೆ ಬಹಳ ಗೌರವ. ಶ್ರೀ ಪ್ರಭುಸ್ವಾಮಿಗಳ ಪಟ್ಟಾಧಿಕಾರ ಮಹೋತ್ಸವದ ಸಂದರ್ಭದಲ್ಲಿ ಸುಮಾರು ನಲವತ್ತು ದಿನಗಳವರೆಗೆ ಬೆಳಿಗ್ಗೆ ಶಿವಾನುಭವ ಮತ್ತು ಸಾಯಂಕಾಲ ಪ್ರವಚನ ಕಾರ್ಯಕ್ರಮವನ್ನು ಶಾಸ್ತ್ರಿಗಳು ನಡೆಸಿಕೊಟ್ಟರು. ಸಾಯಂಕಾಲದ ಪ್ರವಚನಕ್ಕೆ ಮುಪ್ಪಿನ ಷಡಕ್ಷರಿಗಳ ಕೈವಲ್ಯ ಸಾಹಿತ್ಯವನ್ನು ಹಚ್ಚಿತ್ತು. ಶಾಸ್ತ್ರಿಗಳಂತೂ ಬಹಳ ಭಾವಪರವಶರಾಗಿ ಪ್ರವಚನ ಮಾಡುತ್ತಿದ್ದರು. ಮುಪ್ಪಿನ ಷಡಕ್ಷರಿಗಳ ''ಭವಕಾಟ ಕಾಡದಲೆ'' ಎನ್ನುವ ಪದ್ಯದ ಮೊದಲ ಸಾಲನ್ನೆ ಮೂರು ದಿನಗಳವರೆಗೆ ಪ್ರವಚನ ಮಾಡಿ ಜನರು ದಂಗಾಗುವಂತೆ ಮಾಡಿದ್ದರು.

ಇಲ್ಲಿ ಶಾಸ್ತ್ರಿಗಳ ಪ್ರವಚನದಿಂದ ಪ್ರಭಾವಿತರಾದವರು ಬಹಳಷ್ಟು ಜನ. ಅವರಲ್ಲಿ ಪ್ರಮುಖವೆಂದರೆ ಅಂಕಮನಾಳ ಶಿವಪ್ರಸಾದ, ಅಂಕಮನಾಳ ದ್ರಾಕ್ಷಾಯಣಮ್ಮ ಹಗರಿ ಕುಮಾರಪ್ಪ, ಅಳ್ಳಿಕುಮಾರಸ್ವಾಮಿ, ಅಂಕಮನಾಳ ಶಾಂತಮ್ಮ ಜ್ಯೋತಿ ಗೌರಮ್ಮ ಮುಂತಾದವರು. ಈಗಲೂ ಸಂದರ್ಭ ಬಂದಾಗಲೆಲ್ಲ ಶಾಸ್ತ್ರಿಗಳ ಪುರಾಣ ಶೈಲಿಯ ಬಗ್ಗೆ ನೆನಪಿಸಿಕೊಳ್ಳುತ್ತಿರುತ್ತಾರೆ.

ಸಂಡೂರಿನ ಮಠದ ಇತಿಹಾಸದ ಬಗ್ಗೆ ಬೆಳಕು ಚೆಲ್ಲಿದವರೇ ಶಾಸ್ತ್ರಿಗಳು. ಸಂಡೂರು ಹಾಗೂ ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಜಮೀನು ಹಾಗೂ ಶಾಖಾಮಠಗಳಿರುವದು ಗೊತ್ತಿತ್ತು. ಆದರೇ ಈ ಮಠದ ಪರಂಪರೆ ಮತ್ತು ಇತಿಹಾಸದ ಬಗ್ಗೆ ಯಾರಿಗೂ ಗೊತ್ತಿರಲಿಲ್ಲ. ಜನ ಹಿಂದಿನ ಮೂರು ನಾಲ್ಕು ತಲೆಮಾರಿನ ಸ್ವಾಮಿಗಳ ಬಗ್ಗೆ ಮಾತನಾಡಿಕೊಳ್ಳುತ್ತಿದ್ದರಷ್ಟೆ. ಸಿದ್ಧಲಿಂಗಶಾಸ್ತ್ರಿಗಳು ''ನಿರಂಜನ ಜಂಗಮವಂಶ ದರ್ಪಣ'' ಮತ್ತು ತೋಂಟದ ಸಿದ್ಧಲಿಂಗಯತಿಗಳ ''ಷಟಸ್ಥಲ ಜ್ಞಾನಸಾರಾಮೃತ'' ಇವುಗಳನ್ನು ತೋರಿಸಿ ಸಂಡೂರು ಮಠಕ್ಕೆ ೩೦೦ ವರ್ಷಗಳ ಸ್ಪಷ್ಟ ಇತಿಹಾಸ ವಿರುವದನ್ನು ತಿಳಿಸಿಕೊಟ್ಟರು.

ಶಾಸ್ತ್ರಿಗಳು ಸಂಡೂರಿನ ಮಠದ ಬಗ್ಗೆ ಇಟ್ಟ ಪ್ರೀತಿಯ ದ್ಯೋತಕವಾಗಿ ಶ್ರೀ ಪ್ರಭುಸ್ವಾಮಿಗಳವರು ಶಾಸ್ತ್ರಿಗಳ ನೆನಪಿಗೆ ''ಪಂಡಿತ ಸಿದ್ಧಲಿಂಗಶಾಸ್ತ್ರಿ ಸ್ಮಾರಕ ಗ್ರಂಥಾಲಯ''ವನ್ನು ೧೬-೧೧-೧೯೯೭ರಲ್ಲಿ ಸ್ಥಾಪಿಸಿರುವರು. ಗದುಗಿನ

ಜಗದ್ಗುರುಗಳವರ ಸಾನ್ನಿಧ್ಯದಲ್ಲಿ ನಡೆದ ಈ ಕಾರ್ಯಕ್ರಮವನ್ನು ಮಾನ್ಯಶ್ರೀ ಕಾರ್ತಿಕ್ ಘೋರ್ಪಡೆಯವರು ಉದ್ಘಾಟಿಸಿದರು. ಶಿವಮೊಗ್ಗ ಸುಬ್ಬಣ್ಣ ಇವರ ಸಂಗೀತ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಅಂದು ಒಂದು ಸಾವಿರ ಪುಸ್ತಕಗಳನ್ನು ಹೊಂದಿದ ಗ್ರಂಥಾಲಯ ಇಂದು ಸುಮಾರು ಇಪ್ಪತ್ನಾಲ್ಕು ಸಾವಿರ ಪುಸ್ತಕಗಳನ್ನು ಹೊಂದಿದ ಬೃಹತ್ ಗ್ರಂಥಾಲಯವಾಗಿ ರೂಪುಗೊಂಡಿದೆ. ಕನ್ನಡ ಭಾಷೆಯಲ್ಲದೆ ಇಂಗ್ಲೀಷ್, ಹಿಂದಿ, ಉರ್ದು, ತೆಲಗು, ತಮಿಳು ಪುಸ್ತಕಗಳು ಇವೆ. ಕರ್ನಾಟಕದ ಪ್ರಮುಖ ಮ್ಯಾಗಜಿನ್‌ಗಳನ್ನು ತರಿಸಲಾಗುತ್ತಿದೆ. ಇತ್ತೀಚೆಗೆ ಮಾನ್ಯ ಶ್ರೀ ಕೆ. ಎಸ್. ವೀರಭದ್ರಪ್ಪನವರ ಪುತ್ರರಾದ ಶ್ರೀ ಕೆ. ಎಸ್. ನಾಗರಾಜ್ ಇವರು ಸುಂದರ ಗ್ರಂಥಾಲಯ ಕಟ್ಟಡ ಕಟ್ಟಿಸಿಕೊಟ್ಟಿರುವರು.

### ಪುರಾಣದಲ್ಲಿ ಪ್ರಾಸಂಗಿಕವಾಗಿ

೧. ಸಂಡೂರಿನ ಮಠದಲ್ಲಿ ಪುರಾಣ ಹೇಳಲು ಒಂದು ವರ್ಷ ಶಾಸ್ತ್ರಿಗಳಿಗೆ ಅನಾನುಕೂಲವಾಗಿ ಬರಲಿಕ್ಕೆ ಆಗಿರಲಿಲ್ಲ. ಶಿವಮೊಗ್ಗದ ಅಜ್ಜವಾಡಿ ಶಾಸ್ತ್ರಿಗಳನ್ನು ಕಳಿಸಿದ್ದರು. ಹಾಳಕೇರಿ ಅನ್ನದಾನೇಶ್ವರ ಪುರಾಣ ನಡೆದಿತ್ತು. ಆ ಪುರಾಣದಲ್ಲಿ ಒಂದು ಪ್ರಸಂಗಬರುವದು. ಮುಪ್ಪಿನ ಬಸವಲಿಂಗಸ್ವಾಮಿಗಳಿಗೆ ಮಾರಿ ಬೇನೆ ಬರುತ್ತದೆ. ಆಗ ಮುಪ್ಪಿನಬಸವಲಿಂಗ ಸ್ವಾಮಿಗಳು ಭಕ್ತರನ್ನು ಕರೆದು ನಾನು ಶಿವಯೋಗಿ. ನನಗೇಕೆ ಈ ಬೇನೆ ಬಂತು ? ನಾನು ಶಿವನನ್ನೇ ಕೇಳಿಕೊಂಡು ಬರುವೆ. ಅಲ್ಲಿಯವರೆಗೆ ಈ ದೇಹವನ್ನು ನೀವು ಕಾಯಬೇಕು ಎಂದು ಹೇಳಿ ಕೈಲಾಸಕ್ಕೆ ಹೋಗುವರು. ಈ ಪ್ರಸಂಗ ಕುರಿತು ಅಜ್ಜವಾಡಿ ಶಾಸ್ತ್ರಿಗಳು ಪ್ರವಚನ ಮಾಡುತ್ತಿದ್ದರು. ಆಗ ಒಬ್ಬ ಹೆಣ್ಣು ಮಗಳು ಅಜ್ಜವಾಡಿ ಶಾಸ್ತ್ರಿಗಳಿಗೆ ಒಂದು ಚೀಟಿ ಬರೆದು ಕಳಿಸಿದಳು. ಆ ಚೀಟಿಯಲ್ಲಿ ಆ ಹೆಣ್ಣುಮಗಳು ಈ ರೀತಿ ಬರೆದಿದ್ದಳು. ಶಿವನು ಆತ್ಮಲಿಂಗವನ್ನು ರಾವಣ ತೆಗೆದುಕೊಂಡು ಹೋದಾಗ ಶಿವನಲ್ಲಿ ಯಾವಶಕ್ತಿ ಇತ್ತು? ಅದೇ ರೀತಿ ಮುಪ್ಪಿನ ಬಸವಲಿಂಗಸ್ವಾಮಿಗಳ ಆತ್ಮವೇ ಕೈಲಾಸಕ್ಕೆ ಹೋದಾಗ ಶರೀರ ಕೆಡದಂತೆ ಇರಲು ಆ ಶರೀರದಲ್ಲಿ ಯಾವಶಕ್ತಿ ಇತ್ತು? ಈ ಪ್ರಶ್ನೆಯನ್ನು ನೋಡಿ ಗದಿಗಯ್ಯ ಶಾಸ್ತ್ರಿಗಳು ಬೆವತುಬಿಟ್ಟರು. ಇದು ವೇದಾಂತದ ವಿಷಯ ಇದರಬಗ್ಗೆ ನಾಳೆ ಹೇಳುವೆ ಎಂದು ಪುರಾಣ ಮುಗಿಸಿದರು. ಅಂದು ರಾತ್ರಿಯೇ ಗದುಗಿಗೆ ಹೋಗಿ ಸಿದ್ಧಲಿಂಗ ಶಾಸ್ತ್ರಿಗಳಿಂದ ಉತ್ತರ ಪಡೆದು ಮರುದಿನ ಪುರಾಣದಲ್ಲಿ ಉತ್ತರ ಕೊಟ್ಟರು. ಅದಾದ ನಂತರ ಸಿದ್ಧಲಿಂಗಶಾಸ್ತ್ರಿಗಳು ಶಾಸ್ತ್ರಿಗಳಾದವರು ಜಾನಪದ ಹಾಡಿ ನಗಿಸಿಹೋದರೆ ಪುರಾಣ ಹೇಳಲಿಕ್ಕೆ ಬರುತ್ತದೆಯೇ ? ಶಾಸ್ತ್ರಗ್ರಂಥಗಳ ಅಧ್ಯಯನ ಮಾಡಬೇಕು ಅಂದರೆ ಪುರಾಣ ಹೇಳಲು ಬರುತ್ತದೆ ಎಂದು ತಮಾಷೆ ಮಾಡುತ್ತಿದ್ದರು.

೨. ಸಂಡೂರಿನಲ್ಲಿ ಶಾಸ್ತ್ರಿಗಳ ಪುರಾಣ ಜನತೆಯಲ್ಲಿ ಎಷ್ಟು ಪ್ರಭಾವ ಮಾಡಿತ್ತೆಂದರೆ, ಮುಂದೆ ಬಂದ ಯಾವ ಪುರಾಣಿಕರನ್ನು ಜನ ಒಪ್ಪುತ್ತಿರಲಿಲ್ಲ. ಅಷ್ಟು

ಪರಿಣಾಮ ಜನರ ಪ್ರಭಾವ ಬೀರಿತ್ತು ವಿದ್ವಾಂಸರಾದಿಯಾಗಿ ಎಲ್ಲ ಧರ್ಮಗಳ ಜನ ಇವರ ಪ್ರವಚನಕ್ಕೆ ಸೇರುತ್ತಿದ್ದರು. ಆ ಸಂದರ್ಭದಲ್ಲಿ ಅಥಣಿ ಶಿವಯೋಗಿಗಳು ಲಿಂಗದಲ್ಲಿಸಮಾಜವನ್ನು ಕಂಡಂಥವರು. ಧಾರವಾಡದ ಮೃತ್ಯುಂಜಯ ಸ್ವಾಮಿಗಳು ಸಮಾಜದಲ್ಲಿಯೇ ಲಿಂಗಪೂಜೆಯನ್ನು ಕಂಡಂಥವರು ಎಂದು ಹೇಳಿದರು. ಆ ಕ್ಷಣವೇ ಒಬ್ಬರು ಎದ್ದುನಿಂತು ಯಾರ ಮಾರ್ಗ ಶ್ರೇಷ್ಠ ಎಂದು ಕೇಳಿದರು. ಆಗ ಶಾಸ್ತ್ರಿಗಳೂ ಇಬ್ಬರೂ ಶ್ರೇಷ್ಠರೇ. ಆದರೆ ಲಿಂಗವಂತ ಧರ್ಮ ಸಮಾಜದಲ್ಲಿಯೇ ಲಿಂಗವನ್ನು ಕಾಣುವ ಗುಣವನ್ನು ಒಪ್ಪುತ್ತದೆ. ಸಮಾಜ ಸೇವೆಯೇ ನಿಜವಾದ ಲಿಂಗಪೂಜೆ. ಕಾರಣ ಧಾರವಾಡ ಮೃತ್ಯುಂಜಯ ಸ್ವಾಮಿಗಳ ಮಾರ್ಗವೇ ಉತ್ತಮ ಎಂದು ಹೇಳಿದರು.

೩. ಹುನಗುಂದದ ಹತ್ತಿರ 'ಹನುಮಸಾಗರದಲ್ಲಿ ಪುರಾಣ, ಅಲ್ಲಿ ಪುರಾಣ ಮುಗಿಸಿ ಶಾಸ್ತ್ರಿಗಳು ಪ್ರಸಾದಕ್ಕೆ ಹೊರಟಿದರಂತೆ, ರಾತ್ರಿ ೧೦ ಘಂಟೆ ಒಬ್ಬ ಹುಡಗ ಓಡುತ್ತಾ ಬಂದು ಮನೆಯಲ್ಲಿ ಕರೀತಾರೆ ಬೇಗ ಬರಬೇಕಂತೆ ಯಾಕೆ ? ಸಣ್ಣ ಹುಡುಗ ಗೊತ್ತಿಲ್ಲ, ಶಾಸ್ತ್ರಿಗಳು ಹುಡುಗನನ್ನು ಹಿಂಬಾಲಿಸಿ ಹೋದರೆ ಮನೆಯಲ್ಲಿ 'ಒಂದು ಹುಡಿಗಿಯನ್ನು ತೋರಿಸಿ ಈಕೀಗೆ ದೆವ್ವ ಬಡಿದೈತಿ ಬಿಡಿಸ್ರಿ ಎಪ್ಪಾ ಅಂದರಂತೆ. ಶಾಸ್ತ್ರಿಗಳಿಗೆ ದಿಕ್ಕೇ ತೋಚಲಿಲ್ಲ. 'ಅಲ್ಲವ್ವಾ ನಾನು ದೆವ್ವ ಬಿಡಿಸುವವನಲ್ಲ, ಕೆಟ್ಟಗುಣ ಬಿಡಿಸುವವ; ದೆವ್ವಾ ಬಿಡಿಸಂದ್ರೆ ಹ್ಯಾಂಗ ಬಿಡಿಸ್ಲಿ'. ನನ್ಗೆ ಈ ವಿದ್ಯೆ ಗೊತ್ತಿಲ್ಲ ಅಂದ್ರಂತೆ. ಆಗ ದೆವ್ವ ಬಂದ ಹುಡುಗಿ 'ಸಂಸ್ಕೃತದಲ್ಲಿ ಶಾಸ್ತ್ರಪ್ರಾರಂಭಿಸಿದ್ದು ಕೇಳಿ ಮನೆಯವರ್ರಿಗೆಲ್ಲಾ ಆಶ್ಚರ್ಯ, ಆಗ ಕುಳಿತುಕೊಳ್ಳಿ ಪಂಡಿತ ಸಿದ್ಧಲಿಂಗಶಾಸ್ತ್ರಿಗಳೇ 'ಅತಿಥಿ ಮೊದಲು ಸತ್ಕಾರಗೊಳ್ಳುವುದು ಸಂಸ್ಕಾರ' ಇವರಿಗೆ ಕರೆಸಿ ಅಂದಳಂತೆ. ಆ ದೆವ್ವ ಬಂದ ಹೆಣ್ಣು ಮಗಳು ಆಗ ಶಾಸ್ತ್ರಿಗಳು ನೀನ್ಯಾರು ಅಂದ್ರಂತೆ. ನಾನು ರಾಮ ಜೋಯ್ಸ ಪಂಡಿತ ಬಾಗಲಕೋಟ, ಹುನಗುಂದದಲ್ಲಿ ಸಂಸ್ಕೃತ ಪಂಡಿತ ಅಂತಲೇ ಕರೀತಿದ್ರು. ನಾನು ಸತ್ತೇ ೨೦ ವರ್ಷ ಆಯ್ತು. ಆದರೆ ಸಂಸ್ಕೃತ ಪಂಡಿತನೆಂಬ ಅಹಂಕಾರವಿತ್ತಲ್ಲ ಅದಕ್ಕ ಪಿಶಾಚಿಯಾದೆ. ಈಗ ಮೊಮ್ಮಗಳ ದೇಹ ಪ್ರವೇಶಿಸಿದ್ದೇನೆ. ಶಾಸ್ತ್ರಿಗಳು ಪಂಡಿತರಾಗಿಯೂ ಪಿಶಾಚಿಯಾಗಬೇಕಾದರೆ ನಿಮ್ಮಲ್ಲಿ ಆಸೆ ಬಿಟ್ಟಿರಲಿಲ್ಲ ಅಂತ ಕಾಣುತ್ತೆ, ಹೌದು ದಿನಾ ನಿಮ್ಮ ಪುರಾಣ ಕೇಳುತ್ತಿರುವೆ ಎಂಥ ಅಸ್ಖಲಿತವಾಣಿ ನಿಮ್ಮದು. ಬ್ರಾಹ್ಮಣರಿಗೂ ಗೊತ್ತಿಲ್ಲದ ಭಗವದ್ಗೀತೆ ಸಾರ ನಿಮ್ಮಲ್ಲಿ ತುಂಬಿ ತುಳುಕುತಿದೆ. ನಿಜವಾಗಿ ನೀವು ಮಹಾನ್ ಪಂಡಿತರು. ಈ ಜನವೂ ಪುಣ್ಯವಂತರು ನಿಮ್ಮಂತಹ ಶಾಸ್ತ್ರಿಗಳಿಂದ ಪುರಾಣ ಆಯ್ತು. ಶಾಸ್ತ್ರಿಗಳಿಗೇ ಈ ಪಿಶಾಚಿ ಜನ್ಮ ಕಳೆಯುವುದು ಹೇಗೆ? ದೆವ್ವ ಹಿಡಿದ ಹುಡುಗಿ ಬಾಯಿಂದ ನೋಡಿ, ನೀವೇ ಸಂಸ್ಕೃತ ಪಂಡಿತರು ಪೈಶಾಚಿಕ ಬಿಟ್ಟು ದೈವವನ್ನು ಧ್ಯಾನಿಸಿದರೆ ಕರ್ಮಫಲ ಕಳೆದರೆ ನಿಮಗೆ ಮುಕ್ತಿ ಸಿಗುವುದಾಗಿ ಭಗವದ್ಗೀತೆಯೇ ಹೇಳಿದೆ ಹಾಗೆ ಮಾಡಿ, ಆಗ ಹುಡುಗಿ ಶಾಸ್ತ್ರಿಗಳ ಪಾದಕ್ಕೆ ನಮಿಸಿ 'ಬರ್ತೀನಿಶಾಸ್ತ್ರಿಗಳೇ, ಇನ್ನೆಂದೂ ಇವರನ್ನು

ಕಾಡುವುದಿಲ್ಲ, ನಮ್ಮ ಮನೆಗೆ ಬರ್ತಾಯಿರಿ ಪಂಡಿತರೇ' ಅನ್ನುತ್ತಾ ಹೋದ ಪಿಶಾಚಿ ಮತ್ತೆ ಬರಲಿಲ್ಲವಂತೆ.

೫. ಒಮ್ಮೆ ಶಾಸ್ತ್ರಿಗಳು ಜ್ವರದಿಂದ ಬಳಲಿದರಂತೆ. ಚಿಂಚಣಿ, ಶಿರೋಳ ಸೊಂಡೂರ, ಸಿಂಧನೂರು ಗುಲ್ಬರ್ಗಾ ರೋಜಾಮಠ ಶ್ರೀಗಳೆಲ್ಲ ಗದುಗಿನ ಮಠದಲ್ಲಿ ಶ್ರೀಮಠದ ವಿದ್ಯಾರ್ಥಿಗಳು ಶಾಸ್ತ್ರಿಗಳೊಡನೆ ಸಲಿಗೆಯಿಂದ, ಪ್ರೀತಿಯಿಂದ ಇದ್ದು ಒಮ್ಮೆ ಪ್ಯಾಂಟ್ ಶರಟು ಹಾಕಿಸಿದ್ದರಂತೆ, ಜ್ವರ ಬಂದಾಗ ಚಿಂಚಣಿಯವರು 'ಎಲ್ಲಿ ಜ್ವರಾ ಅವ್ರಿಗೆ, ಮಠದ ಮುಂದಿನ ಮಿರ್ಚಿ, ಬಜಿ ತರಸ್ರಿ.ss ಜ್ವರ ಮಾಯ. ಹೊಗ್ತದ ಜ್ವರ ಅಂದ್ರಂತೆ. ಮಠದ ಹುಡುಗ್ರು ತಂದು ತಿನ್ನಿಸಲು ಮರುದಿವಸವೇ ಜ್ವರ ಇಲ್ಲ ಅದನ್ನು ಶಾಸ್ತ್ರಿಗಳು ಅರ್ಥೈಸಿದ ಶೈಲಿ ನೋಡಿ 'ಈ ಚಿಂಚಣಿಶ್ರೀಗಳಿಗೂ ಅನುಷ್ಠಾನ ಶಕ್ತಿಯಿಂದ ಮಂತ್ರ ಶಕ್ತಿ, ವಾಕಸಿದ್ಧಿ ಬಂದಿರುತ್ತೇ ಆ ಮಾತು ಮಂತ್ರಮಯವಾಗುತ್ತೆ ಅದು ಮಿರ್ಚಿ, ತಿಂದ್ರು ಗುರು ಕರುಣೆಯ ಮಹಾಪ್ರಸಾದವಾಯ್ತು. ಗುರುವಾಕ್ ಪ್ರಸಾದ ಔಷಧಿಯಾಯ್ತು, ಜ್ವರ ಹೋಯ್ತು ಚಿಂಚಣಿ ಶ್ರೀಗಳಿಗೇ ಈ ನುಡಿ ಕೇಳಿ, ಅನುಷ್ಠಾನ ಪ್ರಾರಂಭಿಸಿದರಂತೆ.

೬. ಅವ್ವ ಸುಮಿತ್ರಮ್ಮ ಪುರಾಣ ನಡೆದಾಗ ಇರುತ್ತಿರಲಿಲ್ಲ ಪುರಾಣ ಮುಕ್ತಾಯ ಆಗುವ ಸಂದರ್ಭದಲ್ಲಿ ಮಾತ್ರ ಹಾಜರ. ಶಾಸ್ತ್ರಿಗಳೇ ಹೇಳುವಂತೆ ನಿಮಗೆಲ್ಲರಿಗೆ. ತತ್ವ ಬೇಕು ರೊಕ್ಕ ನಮಗೇಕೆ ಬೇಕು. ಬಂದಾಳ ನೋಡ್ರಿ ಬಾಕಿ ವಸೂಲಿಗೆ ಎಂದು ಪುರಾಣದಲ್ಲೇ ತಮಾಷೆ ಆದರೆ ಅವ್ವನನ್ನು ಬಿಟ್ಟಿರಲು ಒಂದು ದಿನವೂ ಶಾಸ್ತ್ರಿಗಳು ತಯಾರಿಲ್ಲ. ಕೊನೆಗೂ ಅವ್ವನ ತೊಡೆಯ ಮೇಲೆ ಉಸಿರುಬಿಟ್ಟರು ಅಂಥ ದಾಂಪತ್ಯಜೀವನ.

೭. ಮುಂಡರಗಿಯಲ್ಲಿ ಪುರಾಣವಿತ್ತು. ತಿಂಗಳಿಂದ ಶಾಸ್ತ್ರಿಗಳು ಅಲ್ಲೇ ಬಿಡಾರ, ಪಕ್ಕದ ಹಳ್ಳಿ ಗೌಡನು ದಿನಾ ಪುರಾಣಕ್ಕೆ ಬರುತ್ತಿದ್ದ ಆದರೆ ಶಾಸ್ತ್ರಿಗಳಿಗೆ ಆ ಗೌಡನ ಅಹಂಕಾರ ಹಿಡಿಸುತ್ತಿರಲಿಲ್ಲ. ಮೇಲಾಗಿ ಜನಕ್ಕೆ ಅವನ ಕಿರಿಕಿರಿಯು ಆಗಿತ್ತು ಊರಿಗೆ ಊರೇ ಆ ಗೌಡನೆಂದರೆ ಭಯಪಡುತ್ತಿದ್ದರು. ಒಂದು ದಿನ ಆ ಗೌಡ 'ಶಾಸ್ತ್ರಿಗಳೇ ನಾಳೆ ನಮ್ಮ ಮನೆಯಲ್ಲಿ ಪೂಜಾ ಐತ್ರಿ. ಊಟಕ್ಕೆ 'ಬರಬೇಕು.' ಅಂದನಂತೆ. ಯಾರಿಗೆ ಲಿಂಗಪ್ರೇಮ ಇಲ್ಲವೂ ಅಲ್ಲಿ ಪ್ರಸಾದ ಇಲ್ಲದೆಂಬ ಶಾಸ್ತ್ರಿಗಳ ಅನಿಸಿಕೆ. ಮಾರನೇ ದಿನ ಗೌಡನ ಊರಿಗೆ ಹೋಗಲಿಲ್ಲ ಗೌಡನಿಗೆ ಸಿಟ್ಟು ನೆತ್ತಿಗೇರಿತ್ತು ಮಾರನೇ ದಿನ ಪುರಾಣಕ್ಕೆ ಬಂದಾಗ 'ಏನು ಶಾಸ್ತ್ರಿಗಳೇ ಊಟಕ್ಕೆ ಬರ್ಲೇ ಇಲ್ಲಾ? ಅಹಂನಿಂದ ಕೇಳಿದನಂತೆ ಸಿಟ್ಟನಿಂದ ಶಾಸ್ತ್ರಿಗಳು 'ಏ ಗೌಡ, ನಾನಿಲ್ಲಿಗೆ ಪುರಾಣ, ತತ್ವ, ಶಾಸ್ತ್ರ ಹೇಳಾಕೆ ಬಂದೀನಿ ಊಟಕ್ಕಲ್ಲ. ನನ್ನ ಮಗ ಡಿ. ಸಿ. ಅದಾನ, ಹೈಕೋರ್ಟ್ ವಕೀಲಿದಾನ ಊಟಾ ಮಾಡಬೇಕಂದ್ರೆ ದಿನಾ ತುಪ್ಪದಾಗ ಕೈತೊಳಿತೀನಿ, ತಿಳೀತಿಲ್ಲೋ ಊರಗೌಡಂತ ನನ್ನತ್ರ ಜಂಭ ತೋರಿಸಬ್ಯಾಡ. ಇವತ್ತ ಈ ಊರ, ನಾಳೆ ಇನ್ನೊಂದೂರು, ನೀ ಯಾವತ್ತ ಸುಧಾರಿಸಿದಿ ಅಂತಾ ಕೇಳ್ತೇನಿ.

ಅವತ್ತ ನಾನss ನಿನ್ನ ಮನೆಗೆ ಬಂದು ಉಣ್ತೇನಿ.' ತಿಳಿತಿಲ್ಲೋ ಆಗ ಊರಗೌಡ ಸುಸ್ತು.

೮. ಹುಲಕೋಟಿ ಹತ್ತಿರ ಇರುವ ಕುರ್ತಕೋಟಿ ಊರ ಹೆಸರ ಕೇಳಿದ್ರ ಜನ ಹೆದರುತ್ತಿತ್ತು. ಅಂಥಾ ಊರಲ್ಲಿ ಶಾಸ್ತ್ರಿಗಳ ಪುರಾಣ ನಡೆದಿತ್ತು. ಅಲ್ಲಿ ಕುರ್ತಕೋಟಿ ಅಮರಪ್ಪನೆಂಬವರು ಹಲವಾರು ಕೇಸಲ್ಲಿ ಸಿಕ್ಕಿಕೊಂಡವರು. ರಾಜಕಾರಣಿಗಳೆಲ್ಲಾ ಅವರನ್ನು ಕ್ರಿಮಿನಲ್ ಕೆಲಸಕ್ಕೆ ಬಳಸಿಕೊಂಡಿದ್ದರು. ಆ ಅಮರಪ್ಪನವರು ಪ್ರತಿದಿನ ಶಾಸ್ತ್ರಿಗಳ ಪುರಾಣ ಕೇಳುತ್ತಾ ಕೇಳುತ್ತಾ ಒಮ್ಮೆ ಮಧ್ಯಾನ್ಹ ಶಾಸ್ತ್ರಿಗಳು ಒಬ್ಬರೇ ಇದ್ದಾಗ ಬಂದು, ಸಿದ್ಧಲಿಂಗಯ್ಯನವರೇ ''ನಿಮ್ಮ ಪುರಾಣ ಕೇಳ್ತಾ, ಕೇಳ್ತಾ ನನಗೂ ಈ ಎಲ್ಲಾ ನನ್ನ ದುಶ್ಚಟ ಬಿಟ್ಟು ಸ್ವಾಮಿ ಆಗಬೇಕೆನಿಸ್ಯೆತ್ರಿ. ಆದರೆ ಹಳೇ ಜಾಡು ನಾ ಬಿಟ್ಟೆನೇಂದ್ರು ಜನ ಬಿಡವಲ್ಲ್ರಿ ಹ್ಯಾಂಗ ಪಾರಾಗಬೇಕ್ರಿ'' ಅಂದರಂತೆ. ಆಗ ಶಾಸ್ತ್ರಿಗಳು ನಿಮ್ಮ ಹೆಸರೇ ಅದಕ್ಕೆ ಉತ್ತರ ಹೇಳ್ಯೆತಿ ಅಮರಪ್ಪ, ಅಮರತನಕ್ಕೆ ಅಪ್ಪನಾಗು ಶಕ್ತಿ, ಬರೀ ಹೊಡೆದಾಟ, ಬಡಿದಾಟಕ್ಕೆ, ಮೀಸಲಿಟ್ರಿ ಅಷ್ಟೇ ದೇವರ ಧ್ಯಾನದ ಕಡೆ ಲಕ್ಷವಿಟ್ಟಿದ್ದರೆ ಇಷ್ಟೊತ್ತಿಗೆ ನಿಜವಾಗಿ ಸ್ವಾಮಿ ಆಗ್ತೀದ್ರಿ. ಅಲ್ಲ ಅಂಗುಲೀ ಮಾಲಾ, ಶ್ರೀಶೈಲ ಅಘೋರ ಧರೋಡಿಕೋರನಷ್ಟು ಕೆಟ್ಟ ನೀನಲ್ಲ. ಅಂಥವರು ದುಶ್ಚಟ ಬಿಟ್ಟು ಸ್ವಾಮಿ ಆದ್ರು ನಿಮಗ್ಯಾಕ ಆಗುದಿಲ್ಲ? ಅಮರಪ್ಪ. ಸ್ವಾಮಿ ಅಂದ್ರ, ಬರೀ ಖಾವಿ ಬಟ್ಟೆ ಹಾಕುದಲ್ಲ ವೈರಾಗ್ಯ ತಾಳಬೇಕು; ಬೆಂಕಿ ಅದು ಎಂದು ಹೇಳಿದ ಕೆಲವೇ ದಿನದಲ್ಲಿ ಅಮರಪ್ಪ ದೈವಿ ಭಕ್ತರಾದರು.

೯. ಗದುಗಿನ ಶ್ರೀಮಠದಲ್ಲಿ ಶ್ರೀಶಿವಕುಮಾರ ಜಗದ್ಗುರುಗಳಾಗಿದ್ದಾಗ ವ್ಯವಸ್ಥಾಪಕರಾಗಿ ಒಬ್ಬ ಗೌಡರನ್ನು ನೇಮಿಸಿತ್ತು, ಅವರು ವ್ಯವಸ್ಥಾಕರಾಗದೇ ಮಠದ ಅಧಿಕಾರಿಯಂತೆ ವರ್ತಿಸುತ್ತಿದ್ದರು. ಜಗದ್ಗುರುಗಳಿಗೂ ಬೆಲೆಯಿಲ್ಲ; ಮಠದ ಭಕ್ತರ ಬಗೆಗೂ ಗೌರವವಿಟ್ಟಿರಲಿಲ್ಲ, ಎಲ್ಲಾ ವಾಹನಗಳೂ ಅವರ ಸ್ವಂತ ಬಳಕೆಗಾಗಿ ಮೀಸಲಿಟ್ಟಂತಾಗಿತ್ತು, ಶಾಸ್ತ್ರಿಗಳು ಮಠದ ಹೊರಾಂಗಣದಲ್ಲಿಯೇ ನಿಂತು ಗದ್ದುಗೆಗೆ ದೀರ್ಘ ದಂಡನಮಸ್ಕಾರ ಮಾಡುತ್ತಿದ್ದರು. ಸಾಕ್ಷಾತ್ ಸಿದ್ಧಲಿಂಗ ಸಂಚಾರದಲ್ಲಿದ್ದಾನೆಂದೆ ನಂಬಿಕೆ ಅವರದು. ಒಮ್ಮೆ ಮಠದ ಮುಂದೆ ಶ್ರೀ ಮಠದ ಜೀಪು ನಿಂತಿತ್ತು, ಜಗದ್ಗುರುಗಳು ಎಲ್ಲಿಗೋ ಪ್ರಯಾಣ ಮಾಡಬಹುದೆಂದು ಶಾಸ್ತ್ರಿಗಳು ಗ್ರಹಿಕೆ ಆಗ ನೋಡಿದರೆ ಮಠದ ವ್ಯವಸ್ಥಾಪಕರು ಜಗದ್ಗುರುಗಳು ಕುಳಿತುಕೊಳ್ಳುವ ಆಸನದಲ್ಲಿ ಕೂತು ಹೊರಟಿದ್ದರು. ಇದನ್ನು ಗಮನಿಸಿದ ಶಾಸ್ತ್ರಿಗಳಿಗೆ ಕೋಪ ನೆತ್ತಿಗೆ ಏರಿತ್ತು, ಜಗದ್ಗುರುಗಳು ಸಿದ್ಧಲಿಂಗನ ಸ್ಥಾನದಲ್ಲಿರುವವರು. ಅವರು ಆಸೀನರಾಗುವ ಜಾಗದಲ್ಲಿ ಈ ಗೌಡ ಕುಳಿತಿದ್ದು ಕಂಡು 'ಜೀಪಿನತ್ತ ಓಡುತ್ತಾ ಬಂದು ಏ ಗೌಡ· ಜೀಪಿನಲಿ, ಜಗದ್ಗುರುಗಳು ಕುಳಿತುಕೊಳ್ಳುವ ಜಾಗದಲ್ಲಿ ಕುಳಿತುಕೊಳ್ಳುವಷ್ಟು ಸೊಕ್ಕು ಬಂದ್ಯೆತ್ಯಾ ನಿನಗೆ' ಅಂದ್ರು. ಗೌಡನಲ್ಲಿ ಅಧಿಕಾರ, ರಾವಣನ ಅಹಂಕಾರ ತುಂಬಿತ್ತು. 'ಏ ಸಿದ್ಧಲಿಂಗಯ್ಯ, ಜೀಪು ನಂದು ಮಠ ನಂದು;

ಮಠದ ವ್ಯಸವಸ್ಥಾಪಕ ನಾನು. ಬೇಕಾದ್ದ ಮಾಡ್ತೇನಿ ಅಂದ.' ಲೇ ಜಗದ್ಗುರು ಪೀಠ ಮಹಾಶಕ್ತಿಅದು ಸಾಕ್ಷಾತ್ ಸಿದ್ಧಲಿಂಗನ ಪೀಠ ಸಿದ್ಧಲಿಂಗ ಪಾದ ಇಡುವ ಜಾಗದಾಗ ನೀನು ಕಾಲು, ಕೈ ಇಡ್ತಿಯಲ್ಲಾ ನಿಂಗ ಹಿರೇಬ್ಯಾನಿ ಬಂದು ಉದರ್ತಾವ ಹೋಗ್ಲೆ' ಅಂದ್ರು. ಮುಂದೆ ಹಾಗೆ ಆಯ್ತು ೫-೬ ವರ್ಷಗಳಲ್ಲಿ ಗೌಡ ಹಿರೇಬ್ಯಾನಿ ಹತ್ತಿ ಕೈಕಾಲಿನ ಬೆರಳು ಉದುರಿ ಸತ್ತ.

೧೦. ೨೦-೨೧ ವರ್ಷಗಳ ಹಿಂದೆ ಜಕ್ಕಲಿಯಲ್ಲಿ ಮಾತಾ ಮಹಾದೇವಿಯವರ ಪ್ರವಚನ ನಡೆದಿತ್ತು. ಆ ಮಾತಾ ಅವರು ಜನರಿಗೆ ಪ್ರಶ್ನೆ ಹಾಕುವುದೇ ಒಂದು ವಿಶೇಷವಾಗಿತ್ತು ಜಕ್ಕಲಿಯ ಜನ ತುಂಬಾ ಸ್ವಾಭಿಮಾನಿಗಳು. ಮೊದಲೇ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ ದೊಡ್ಡಮೇಟಿ ಅಂದಾನಪ್ಪನ ಊರದು. ಮಾತಾ ಅವರು ಆತ್ಮಜ್ಞಾನ ಅಂದ್ರೇನೆ ಬಸವಾದಿ ಪ್ರಮಥರು. ಆ ವೇದಾಂತ ಆತ್ಮಜ್ಞಾನ ಹ್ಯಾಗೆ ನಡೆಸಿಕೊಂಡು ಬಂದ್ರು? 'ಮುಮುಕ್ಷು' ಅಂದರೇನು ? ಹೀಗೆಲ್ಲಾ ಪ್ರಶ್ನೆ ಹಾಕಿದಾಗ ಯಾರೊಬ್ಬರು ಉತ್ತರಿಸಲಿಲ್ಲ. ವ್ಯವಸ್ಥಾಪಕರು ಮೈಕ್ ಹಿಡಿದು 'ಮಾತಾ ತಾಯಿ' ಒಂದು ಅವಕಾಶ ಕೊಡಿ. ನಮ್ಮ ಪಕ್ಕದ ಊರು ಬೂದಿಹಾಳ. ಅಲ್ಲಿ ಶ್ರೀ ಹೊಸಮಠ ಸಿದ್ಧಲಿಂಗಶಾಸ್ತ್ರಿಗಳು ಶಾಸ್ತ್ರ ಬಲ್ಲವರಿದ್ದಾರೆ. ಅವರು ಜಕ್ಕಲಿ ಮೇಲೆ ಬಹಳ ಪ್ರೀತಿ. ಅವರಿಂದ ಉತ್ತರ ಸಿಕ್ಕಬಹುದು ಅಂದ್ರು. ಮಾತಾ ಅವರಿಗೆ ಇನ್ನೂ ಚಿಕ್ಕವಯಸ್ಸು ಇತ್ತು. ಈ ಪ್ರಶ್ನೆಗೆ ಉತ್ತರಿಸುವ ಶಕ್ತಿ ಇದೇಯೇ ನೋಡೋಣ ಅಂದ್ರು. ಊರವರು ಬೂದಿಹಾಳಕ್ಕೆ ಹೋದರೆ ಅಲ್ಲಿ ಶಾಸ್ತ್ರಿಗಳಿಲ್ಲ. ಅವರು ಗದಗ ಮಠದಲ್ಲಿ ಇದ್ರು. ಜಕ್ಕಲಿ ವಿಷಯ ತಿಳಿದು ಜಕ್ಕಲಿಗೆ ಬಂದು ಮತ್ತೆ ನಿನ್ನೆಯ ಪ್ರಶ್ನೆಗಳು ಮಾತಾ ಅವರಿಂದ ಬಂತು. ಉತ್ತರ ಪ್ರಾರಂಭವಾಯ್ತು ಶಾಸ್ತ್ರಿಗಳ ಅಸ್ಖಲಿತ ಉತ್ತರಕ್ಕೆ ಎಲ್ಲರ ಮೈ ಬೆಚ್ಚಗಾಯ್ತು ಕೂದಲುಗಳೇ ನಿಮಿರಿ ನಿಂತವು.*

'ವ್ಯಾಸ, ಪರಾಶರ, ಯಜ್ಞವಲ್ಕರಿಂದ, ವೇದ, ಉಪನಿಷತ್, ಆತ್ಮ ಜ್ಞಾನದ ವಿಶ್ಲೇಷಣೆ, ಗಾರ್ಗಿ ಮೈತ್ರೆ, ಕಾತ್ಯಾಯಿನಿಯಿಂದ ಪ್ರಾರಂಭವಾಗಿ ವಶಿಷ್ಠ, ದುರ್ವಾಸರಾದಿಯಾಗಿ ಗೌತಮ ನಾರದರ ಉಕ್ತಿಯಲ್ಲಿ ಹಾಯ್ದು; ಆತ್ಮ ಜ್ಞಾನದ ಗಂಗೆ ಕೈಲಾಸ ಪರ್ವತದಿಂದ ಧುಮುಕುವಂತೆ ಧುಮುಕುತ್ತಿತು. ಮೈಮರೆತು ಉತ್ತರಿಸುವ ನಡುನಡುವೆ ಸಂಸ್ಕೃತ ಶ್ಲೋಕ, ಭಗವದ್ಗೀತೆ, ನಿಜಗುಣರ ಕೈವಲ್ಯ, ಸರ್ಪಭೂಷಣರ ಉಕ್ತಿ, ಮುಳಗುಂದ ಬಾಲಲೀಲಾ ಶಿವಯೋಗಿಗಳ, ಸಿದ್ಧಲಿಂಗ, ಅರ್ಧನಾರೀಶ, ಆದಿಯಾಗಿ, ಬಸವನ ಅಷ್ಟಾವರಣ, ಪಂಚಚಾರ, ಷಟ್‌ಸ್ಥಲಗಳ ಕುರಿತು ಒಂದು ಗಂಟೆಯವರೆಗೆ ಮಿಂಚಿನಂತೆ ಆತ್ಮಜ್ಞಾನದ ಮಳೇಯೇ ಮುಗಿಲಿಂದ ಧರೆಗೆ ಬೀಳುವಂತೆ ಉತ್ತರ ಹೇಳಿದಾಗ, ಮಾತಾ ಮಹಾದೇವಿ ಎದ್ದು ಶಾಸ್ತ್ರಿಗಳನ್ನು ಆಶೀರ್ವದಿಸಿ ಭಲೇ, ಭಲೇ ಸಿದ್ಧಲಿಂಗಶಾಸ್ತ್ರಿಗಳೇ ಪಂಡಿತರೆಂದರೆ ನೀವೇ.

* ಜಕ್ಕಲಿಯ ಹಿರಿಯರಿಂದ ತಿಳಿದ ಸಂಗತಿ.

ಬೂದಿಹಾಳ, ಜಕ್ಕಲಿ ಧನ್ಯವಾಯ್ತೆಂದು, ನಾವೇ ನಿಮ್ಮೂರಿಗೆ ಬರುತ್ತೇವೆಂದು ಬೂದಿಹಾಳ ಮನೆಗೆ ಬಂದು ಶಾಸ್ತ್ರಿಗಳನ್ನು ಸನ್ಮಾನಿಸಿದರಂತೆ. ಮತ್ತೆ ಆ ಭಾಗದ ಯಾವುದೇ ಸಭೆಗೆ ಹೋಗಲಿ ಮಾತಾ ಮಹಾದೇವಿಯವರು ಜಕ್ಕಲಿಯಲ್ಲಿ ನಡೆದ ಪ್ರಸಂಗ, ಸಿದ್ಧಲಿಂಗಶಾಸ್ತ್ರಿಗಳ ಪಾಂಡಿತ್ಯವನ್ನು ನೆನೆಯುತ್ತಿದ್ದರಂತೆ.

೧೧. ನರೇಗಲ್ ಹುಚ್ಚೀರಪ್ಪಜ್ಜನ ಜಾತ್ರೆ ಸಂದರ್ಭದಲ್ಲಿ ಸಿದ್ಧಲಿಂಗಶಾಸ್ತ್ರಿಗಳ ಪ್ರವಚನ ನಡೆದಿತ್ತು. ಊರಿಂದ ದೂರ ಇರುವ ಮಠದ ಪ್ರವಚನಕ್ಕೆ ಕೆಲವೇ ಜನ ಸೇರುತ್ತಿದ್ದರು, ಜನ ಕಡಿಮೆ ಅಂತಾ ಶಾಸ್ತ್ರಿಗಳು ಶಾಸ್ತ್ರವಿವರ ಕಡಿಮೆ ಮಾಡುತ್ತಿರಲಿಲ್ಲ. ನಿವೇಷ್ಟೆ ಜನ ಇದ್ದರೇನು ಇಲ್ಲಿ ಹುಚ್ಚೀರಪ್ಪಜ್ಜ ಕುಳಿತ ಕೇಳ್ತಾ ಇರ್ತಾನ. ನಾಳೆ ಏನಾऽऽ ನಿನ್ನ ಶಾಸ್ತ್ರ ಅಂದಾನೂ. ಅಷ್ಟೊಂದು ಆತ್ಮದ ಆಳ ಶಾಸ್ತ್ರಿಗಳಲ್ಲಿತ್ತು, ಒಂದು ದಿನ ಶ್ರೀ ರಂಭಾಪುರಿ ಶ್ರೀಗಳು ಹುಚ್ಚೀರಪ್ಪನ ದರ್ಶನಕ್ಕೆ ಬರಲು ವ್ಯವಸ್ಥಾಪಕರಾದ ಶ್ರೀ ಮಲ್ಲಿಕಾರ್ಜುನ ಚಪ್ಪನ್ ಮಠದವರು ಬಿನ್ನಹ ಹಾಕಿದ್ದರು. ಆದರೆ ಜಗದ್ಗುರುಗಳು ಮಾರನೇ ದಿನ ಬಂದರು. ಕಾರಣ ಡೈರಿಯಲ್ಲಿ ದಿನಾಂಕ ತಪ್ಪಾಗಿ ಬರೆದುಕೊಂಡಿದ್ದರಂತೆ. ಇದು ಸಿದ್ಧಲಿಂಗಶಾಸ್ತ್ರಿಗಳಿಗೆ ಕಸಿವಿಸಿ ಉಂಟು ಮಾಡಿತ್ತು. ಕಾರಣ ರಂಭಾಪುರಿ ಶ್ರೀಗಳು ಪೂರ್ವಾಶ್ರಮದಲ್ಲಿ ಸಿದ್ಧಲಿಂಗಶಾಸ್ತ್ರಿಗಳಲ್ಲಿ ಶಾಸ್ತ್ರಾಭ್ಯಾಸ ಮಾಡಿದ ಶಿಷ್ಯರು. ಪ್ರಸ್ತಾವಿಕ ಭಾಷಣ ಶಾಸ್ತ್ರಿಗಳಿಂದ ಶುರು ಆಯ್ತು. ಮೊದಲು ಭಕ್ತಿ ಪ್ರಣಾಮ ಸಲ್ಲಿಸಿದ ಶಾಸ್ತ್ರಿಗಳು 'ಗುರು, ಜಂಗಮ' ವೀರಶೈವನಲ್ಲಿ ಎಷ್ಟು ಶ್ರೇಷ್ಠನೋ; ಹ್ಯಾಗೆ ಅವನು ಅಲ್ಲಿ ಸಾಕ್ಷಾತ್ ಶಿವಸ್ವರೂಪನೆಂದು ಭಾವಿಸುವಿರೋ, ಅಷ್ಟೇ ಭಕ್ತನೂ ಶ್ರೇಷ್ಠ. ಅವನೂ ಶಿವನ ಕಳೆಯ ಸ್ವರೂಪ, ಗುರುಗಳನ್ನು ಕಾಯಿಸುವುದು ಶಿಷ್ಯನಿಗೆ ಎಷ್ಟು ಸರಿಯಿಲ್ಲವೋ, ಭಕ್ತನನ್ನು ಕಾಯಿಸುವುದು ಗುರುವಿಗೂ ಯೋಗ್ಯವಲ್ಲ ನಿನ್ನೆ ನಿಮ್ಮ ತಪ್ಪಿನಿಂದ ಭಕ್ತರನ್ನು ಕಾಯುವಂತೆ ಮಾಡಿದ್ದು ತಪ್ಪು'; ಎಂದು ನೇರವಾಗಿಯೇ ಹೇಳಿಬಿಟ್ಟರು. ಎಷ್ಟಾದರೂ ಪೂರ್ವಾಶ್ರಮದ ಗುರು ಶಿಷ್ಯ ಸಂಬಂಧ ಅಲ್ಲವೇ. ಈಗಿನ ಪೂಜ್ಯ ರಂಭಾಪುರಿ ಶ್ರೀಗಳು ನಗುತ್ತಲೇ ಸ್ವೀಕರಿಸಿ, ಪೂರ್ವಾಶ್ರಮದ ಗುರುವಿನ ಎಚ್ಚರಿಕೆ ಸದಾ ಮನದಲ್ಲಿರುವುದಾಗಿ, ಇನ್ನೆಂದಿಗೂ ಭಕ್ತನನ್ನು ಕಾಯಿಸುವುದಿಲ್ಲ ಎಂದು ತುಂಬಿದ ಸಭೆಗೆ ಆಶೀರ್ವಚನದಲ್ಲಿ ಅಭಯವಿಟ್ಟರು. ಎಷ್ಟು ಸೌಮ್ಯರೋ ಶಾಸ್ತ್ರ, ನಿಯಮ, ತಾತ್ವಿಕ ಆಚರಣೆಗೆ ಧಕ್ಕೆ ಬಂದರೆ ಶಾಸ್ತ್ರಿಗಳು ಅಷ್ಟೇ ನಿಷ್ಠೂರಿಯಾಗಿದ್ದರು.

೧೨. ಬಳ್ಳಾರಿ ಜಿಲ್ಲೆಯ ತಂಬ್ರಳ್ಳಿಗೆ ಸಂಡೂರಿನ ಪ್ರಭುಸ್ವಾಮಿಗಳನ್ನು ಶಾಸ್ತ್ರಿಗಳು ಸುಮಾರು ಹದಿನೈದು ವರ್ಷಗಳವರೆಗೆ ತಪ್ಪದೆ ಶಿವರಾತ್ರಿ ಕಾರ್ಯಕ್ರಮಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಇದಕ್ಕೆ ಕಾರಣ ತೋಂಟದ ಸಿದ್ಧಲಿಂಗಯತಿಗಳ ಪರಂಪರೆಯ ಎಂಟನೇ ಪೀಠಾದಿಪತಿಗಳಾದ ಕೌದಿಮಹಾಂತ ಸ್ವಾಮಿಗಳ ಗದ್ದುಗೆ ಇರುವದು ತಂಬ್ರಳ್ಳಿಯ ಸಮೀಪದಲ್ಲಿಯೇ. ಅವರ ಜಾತ್ರೆ

ಶಿವರಾತ್ರಿ ಅಮವಾಸ್ಯೆಯ ದಿನ ನಡೆಯುತ್ತದೆ. ಅಲ್ಲದೆ ಮುಂಡರಗಿಯಲ್ಲಿ ಇರುವ ತೋಂಟದಾರ್ಯಮಠದ ಹಿಂದಿನ ಪ್ರಭಾವಿ ಸ್ವಾಮಿಗಳಾದ ಮೃತ್ಯುಂಜಯ ಸ್ವಾಮಿಗಳ ಹುಟ್ಟಿದೂರು ತಂಬ್ರಳ್ಳಿ. ಹೀಗಾಗಿ ಅವರೂ ಪ್ರತಿವರ್ಷ ತಂಬ್ರಳ್ಳಿಗೆ ತಪ್ಪದೆ ಹೋಗುತ್ತಿದ್ದರು. ಶಿವರಾತ್ರಿಯ ದಿನ ರಾತ್ರಿಯಲ್ಲಾ ಪ್ರವಚನ ಮಾಡುತ್ತಿದ್ದರು. ಮಾರನೇ ದಿನ ಕೌದಿಮಹಾಂತಸ್ವಾಮಿಗಳ ಜಾತ್ರೆ ಮುಗಿಸಿಕೊಂಡು ಕೊಟ್ಟೂರು ಉಜ್ಜನಿ ನೋಡಿಕೊಂಡು ಸಂಡೂರಿನಲ್ಲಿ ಪ್ರಭುಸ್ವಾಮಿಗಳನ್ನು ಬಿಟ್ಟು ಗದುಗಿಗೆ ಹೋಗುತ್ತಿದ್ದರು. ಶಾಸ್ತ್ರಿಗಳ ವಾಸ್ತವ್ಯಕ್ಕೆ ತಂಬ್ರಳ್ಳಿಯ ಹೆಚ್. ಬಿ. ನಾಗನಗೌಡರು ಹಾಗೂ ಅವರ ಕುಟುಂಬದವರು ಬಹಳ ಪ್ರೀತಿ ಆದರದಿಂದ ನೋಡಿಕೊಳ್ಳುತ್ತಿದ್ದರು. ಶಾಸ್ತ್ರಿಗಳ ದೊಡ್ಡ ಅಭಿಮಾನಿ ಬಳಗವೇ ಅಲ್ಲಿದೆ. ಅಲ್ಲಿಯ ಶಾನಭೋಗರು ಬ್ರಾಹ್ಮಣರಾದರೂ ಜಾತ್ರೆಯ ಎಲ್ಲ ವ್ಯವಸ್ಥೆ ಅವರ ಮುಂದಾಳುತನದಲ್ಲಿಯೇ ನಡೆಯುತ್ತಿದ್ದುದು ಬಹಳ ವಿಶೇಷವಾಗಿತ್ತು. ಶಾಸ್ತ್ರಿಗಳ ಬಗ್ಗೆಯಂತೂ ಅವರು ಬಹಳ ಗೌರವ ಭಾವನೆ ಹೊಂದಿದ್ದರು.

೧೩. ಹರಪನಹಳ್ಳಿ ತಾಲೂಕಿನ ಅರಸಿಕೇರಿ ದೊಡ್ಡ ಊರು. ಹಿಂದೆ ಬಳ್ಳಾರಿ ಜಿಲ್ಲೆಗೆ ಸೇರಿದ ಈ ಊರು ಜಿಲ್ಲಾ ವಿಂಗಡಣೆಯಾದ ನಂತರ ದಾವಣಗೆರೆ ಜಿಲ್ಲೆಗೆ ಸೇರಿದೆ. ಅಲ್ಲಿ ಕೋಲಶಾಂತೇಶ್ವರ ವಿರಕ್ತಮಠವಿದೆ. ಪಂಚಗಣಾಧೀಶ್ವರರಲ್ಲಿ ಒಬ್ಬರು. ಇನ್ನುಳಿದ ನಾಲ್ಕುಜನರೆಂದರೆ ಕೊಟ್ಟೂರು ಬಸವೇಶ್ವರ ಹರಪನಹಳ್ಳಿ ಕೆಂಪಯ್ಯಸ್ವಾಮಿ, ಕೂಲಹಳ್ಳಿ ಮದ್ದಾನೇಶ್ವರ, ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿಗಳು. ಈಗಿನ ಪೀಠಾಧಿಪತಿಗಳಾದ ಶ್ರೀ ಮ.ನಿ.ಪ್ರ. ಶಾಂತಲಿಂಗ ದೇಶಿಕೇಂದ್ರ ಮಹಾಸ್ವಾಮಿಗಳು ಸಿದ್ಧಲಿಂಗಶಾಸ್ತ್ರಿಗಳ ಪ್ರವಚನಕೇಳಿಯೇ ಬೆಳೆದವರು ಸ್ವಾಮಿಗಳಾದವರು. ಆಗಾಗ ಶಾಸ್ತ್ರಿಗಳಿಗೆ ಸ್ವಾಮಿಗಳು ನಿಮ್ಮ ಪ್ರವಚನಕೇಳಿಯೇ ನಾವು ಸ್ವಾಮಿಗಳಾಗಿದ್ದು ಎಂದು ಹೇಳುತ್ತಿದ್ದರು. ಅವರ ಪಟ್ಟಾಧಿಕಾರ ಸಮಯದಲ್ಲಿ ಬೆಳಗಿನ ಶಿವಾನುಭವ ಶಾಸ್ತ್ರಿಗಳದೇ. ಇಂದಿರಾಗಾಂಧಿಯವರು ಹತರಾದ ಸಂದರ್ಭದಲ್ಲಿಯೇ ಇವರ ಪಟ್ಟಾಧಿಕಾರ ಕಾರ್ಯಕ್ರಮವಿತ್ತು. ಎಲ್ಲ ಕಡೆಯೂ ಕರ್ಫ್ಯೂ. ಇಂತಹ ಸಂದರ್ಭದಲ್ಲಿ ಊರಿನ ಜನರ ಸಾಹಸದಿಂದ ಪಟ್ಟಾಧಿಕಾರ ನಿರ್ವಿಘ್ನವಾಗಿ ನೆರವೇರಿತು. ಶಾಂತಲಿಂಗಸ್ವಾಮಿಗಳು ಅನುಷ್ಠಾನ ಮುಗಿಯುವವರೆಗೂ ಶಾಸ್ತ್ರಿಗಳು ಬೆಳಗಿನ ಶಿವಾನುಭವದ ಮೂಲಕ ಜನರಲ್ಲಿ ಭಕ್ತಿ ಶ್ರದ್ಧೆಯನ್ನು ಮೂಡಿಸುವದರ ಜೊತೆಗೆ ಆ ಎಲ್ಲ ಕಾರ್ಯಕ್ರಮಕ್ಕೆ ಒಂದು ಭಕ್ತಿಯ ವಾತಾವರಣ ಮೂಡಿಸಿದವರು.

೧೪. ಸಿದ್ಧಲಿಂಗಶಾಸ್ತ್ರಿಗಳ ಬಾಲ್ಯದಿಂದಲೇ ಜಗದ್ಗುರುಗಳ ಮೊಮ್ಮಗನೂ ಆಗಿದ್ದರಿಂದ, ತಾಯಿಯನ್ನು ಚಿಕ್ಕವಯಸ್ಸಿನಲ್ಲೇ ಕಳೆದುಕೊಂಡಿದ್ದರಿಂದ, ತಂದೆ ಸಂಗೀತ ಕಛೇರಿಗಳಿಗಾಗಿ ಆಗಾಗ ಗ್ವಾಲಿಯರ್ ಡೆಲ್ಲಿ, ಬರೋಡ ಅರಮನೆಗಳಿಗೆ ಹೋಗುತ್ತಿದ್ದುದರಿಂದ ಮಠದಲ್ಲಿ ಹರಚರ ಮೂರ್ತಿಗಳೊಂದಿಗೆ ಬೆಳೆದವರು.

ಮಠದ ಪ್ರತಿ ಘಟನೆಗಳೂ ಅವರಿಗೆ ಗೊತ್ತಿತ್ತು, ಹೀಗಾಗಿ ಮಠದ ಬಗೆಗೆ ಅಪಾರ ಭಕ್ತಿ, ಅಭಿಮಾನ. ಒಮ್ಮೆ ಮಠದ ಮುಂದೆ ಬೇರೆ ಸ್ವಾಮಿಗಳ ಮೆರವಣಿಗೆ ಬರುತ್ತದೆಂಬದಕ್ಕೆ ತರುಣ ಸಂಘದವರೊಡನೆ ಮೆರವಣಿಗೆ ನಿಲ್ಲಿಸಿದ್ದರು. ಧಾರವಾಡ ಆಕಾಶವಾಣಿ ಬಸವಣ್ಣನವರ ವಚನ ಪ್ರಸಾರ ಮಾಡುತ್ತಿರಲಿಲ್ಲ ಆ ಕಾರಣ ಪ್ರತಿಭಟಿಸಿ ಆಕಾಶವಾಣಿಯಲ್ಲಿ ಬಸವ ವಚನ ಪ್ರಸಾರಮಾಡಿಸಿದರು. ಪೂಜ್ಯ ಶಿವಕುಮಾರಶ್ರೀಗಳು ಜಗದ್ಗುರುಗಳಾದ ನಂತರ ಮಠದಲ್ಲಿ ಬೋಳ್ಯ ಕಾಶಪ್ಪನವರ ಆಡಳಿತ ದುರಾಡಳಿತವಾಯ್ತು ಮಠದ ಆಸ್ತಿ, ಬೇರೆಯವರ ಪಾಲಾಗಹತ್ತಿತ್ತು. ಭಕ್ತರನ್ನು ಕಡೆಗಣಿಸಿದರು. ಇದನ್ನು ಕಂಡ ಶಾಸ್ತ್ರಿಗಳು ಆ ವ್ಯವಸ್ಥಾಪಕನನ್ನು ತರಾಟೆಗೆ ತೆಗೆದುಕೊಂಡರು. ಅವರು ಶ್ರೀ ಶಿವಕುಮಾರ ಜಗದ್ಗುರುಗಳಲ್ಲಿ ಶಾಸ್ತ್ರಿಗಳ ಮೇಲೆ ಚಾಡಿ ಹೇಳಿ ನಿಮ್ಮ ಹೆಸರು ಕೆಡಿಸುತ್ತಿದ್ದಾರೆಂದು ಆಪಾದಿಸಿದ್ದರು. ಶ್ರೀ ಶಿವಕುಮಾರ ಸ್ವಾಮಿಗಳಿಗೆ ಹಿತ್ತಾಳೆ ಕಿವಿ ಎಂದು ಹೇಳಿದಾಗ ಶಾಸ್ತ್ರಿಗಳ ನೋವು ಹೇಳತೀರದು. ಸಾಕ್ಷಾತ್ ಸಿದ್ಧಲಿಂಗನ ದರ್ಶನವಿಲ್ಲವೆಂದರೆ ಹೇಗೆ? ಈಚೆ ಜಗದ್ಗುರುಗಳ ಆಜ್ಞೆ ಮೀರುವಂತಿಲ್ಲ ೮–೧೦ ವರ್ಷ ಮಠ ಪ್ರವೇಶಿಸಲಿಲ್ಲ, ದ್ವಾರಭಾಗಿಲಲ್ಲೇ ನಿಂತು ದರ್ಶನ ಮಾಡಿ ಬರುತ್ತಿದ್ದರು. ಮುಂದೆ ಇಂದಿನ ಡಾ. ಸಿದ್ಧಲಿಂಗಶ್ರೀಗಳು ಜಗದ್ಗುರುಗಳಾದ ಮೇಲೆ ವಿಷಯ ತಿಳಿದು ಮಠಕ್ಕೆ ಶಾಸ್ತ್ರಿಗಳ ಸೇವೆ ಸದಾ ಮೀಸಲಿರಬೇಕೆಂದು ಆಶೀರ್ವಾದ ಮಾಡಿದ ಮೇಲೆ ಅಂತ್ಯದವರೆಗೂ ಸೇವೆಗೈದರು, ಅತ್ಯಂತ ಉದ್ಗ್ರಂಥಗಳನ್ನು ರಚಿಸಿದರು. ಅಲ್ಲದೇ ಚಿಕ್ಕ ವಯಸ್ಸಿನಲ್ಲಿ ಡಾ. ಸಿದ್ಧಲಿಂಗ ಶ್ರೀ ಜಗದ್ಗುರುಗಳಾಗಿ ಬಂದ ಬಳಿಕ ಜನಸ್ತೋಮಕ್ಕ ಹಿಂದಿನ ಭಕ್ತರನ್ನು ಕಳೆದುಕೊಂಡಾಗ ಮಠದ ಸ್ಥಿತಿ ಏನಾಯ್ತು ಎಂಬುದಕ್ಕೆ ಬಹುದೊಡ್ಡ ಉದಾಹರಣೆ ತಮ್ಮುಂದೆಯೇ ಇದೆ. ಈ ಭಕ್ತರನ್ನು ಕಳಕೊಂಡರೆ ಈ ಮಠಕ್ಕೆ ಭವಿಷ್ಯವೇ ಇಲ್ಲವೆಂದು ನಿಷ್ಠೂರವಾಗಿ ವಿನಂತಿ ಮಂಡಿಸಿದ್ದರು. ಅಷ್ಟೇ ಈಗಿನ ಜಗದ್ಗುರುಗಳು ಭಕ್ತರನ್ನು ಹೊಂದಿದಾಗ, ಪ್ರಶಸ್ತಿ ಪಡೆದಾಗ ಸ್ವತಃ ಶಾಸ್ತ್ರಿಗಳೇ ಮಠದ ಗದ್ದುಗೆಯಲ್ಲಿ ನಿಂತು ಗದ್ಗದ ಕಠದಿಂದ ಅಪ್ಪಾऽऽ ತಂದೆऽऽ ಸಿದ್ಧಲಿಂಗ, ಎಡೆಯೂರ ಸಿದ್ಧಲಿಂಗ ಮತ್ತು ಈ ಜಗದ್ಗುರುಗಳಾಗಿ ಅವತರಿಸಿ ಅಂದಿನ ವೈಭವ ಮತ್ತೆತಂದೆಯಾ ತಂದೆ, ಎಂದೆಂದೂ ಈ ಮಠ ಹೀಗೇ ಇರಲಿ ತಂದೆ ಎಂದು ಮಠದ ಪುಸ್ತಕಗಳ ಬಿಡುಗಡೆ, ಪಂಡಿತರಿಗೆ ಸಲ್ಲುವ ಗೌರವ, ಪ್ರತಿ ಸೋಮವಾರ ನಡೆಯುವ ಶಿವಾನುಭವ, ತುಂಬಿದ ನಮ್ಮೂರ ಜಾತ್ರೆ ಕಾರ್ಯಕ್ರಮಗಳಲ್ಲಿ ವಯೋವೃದ್ಧ ರಾದರೂ ಯುವಕರಂತೆ ಓಡಾಡಿಕೊಂಡಿರುತ್ತಿದ್ದರು. ಒಂದು ದಿನವೂ ಮನೆ, ಮಠ, ಮಕ್ಕಳು, ಅನ್ನಲಿಲ್ಲ, ಗದುಗಿನ ತೋಂಟದಾರ್ಯ ಮಠವೇ ಅವರ ಸ್ಥಿತಿ, ಆಸ್ತಿಯಾಗಿತು.

ಬುದ್ಧ, ಅಶೋಕ, ಭತೃಹರಿ, ಬಾಹುಬಲಿ, ಮಹಮದ್ ಫೈಗಂಬರ್, ನಿಜಗುಣ ಶಿವಯೋಗಿ, ೬೩ ಪುರಾತನರು, ೧೦೧ ವಿರಕ್ತರ ವಿಚಾರಧಾರೆ ಅವರ

ಮಾತಿನಲ್ಲಿ ನಿರರ್ಗಳವಾಗಿ ಬರಬೇಕಾದರೆ ಅಷ್ಟೇ ಆಳವಾದ ಅಧ್ಯಯನ ಅವರದಾಗಿತ್ತು

ಡಾ. ರಂ. ಶಿ. ಮುಗಳಿಯವರು ಹೇಳುವಂತೆ ನಿಜಗುಣ ಶಿವಯೋಗಿಗಳು ಜ್ಞಾನದ ಉನ್ನತಕ್ಕೇರಿ ಕೆಳಗಿಳಿದು ಜನಕ್ಕೆ ಅರಿವಿನ ಜ್ಞಾನ ಬೋಧಿಸಿದಂತೆ ಸಿದ್ಧಲಿಂಗಶಾಸ್ತ್ರಿಗಳೂ ಜ್ಞಾನದ ಉನ್ನತಕ್ಕೇರಿ ಸಾಮಾನ್ಯನಂತೆ ಕೆಳಗಿಳಿದು ಜನಮನದಲ್ಲಿ ಒಂದಾಗಿ ಜನತೆಯಲ್ಲಿ ಆತ್ಮ ವಿದ್ಯೆ-ಆತ್ಮದರ್ಶನ, ಸಚ್ಚಿದಾನಂದ ಸ್ಥಿತಿ-ಅನುಭೂತಿ, ಮೋಕ್ಷ, ಅರಿವು, ಮೂಢಿಸುವಲ್ಲಿ ಅವರು ಮೊದಲು ಹೇಳುತ್ತಿದ್ದುದೇ ನಿಜಗುಣರ ''ನಿನ್ನ ನೀನರಿ' ಈ ಒಂದು ಶಬ್ದದ ಮೇಲೆ ಇಡೀ ಒಂದ ದಿವಸ ಭಾಷಣ ಮಾಡುವ ಅಧ್ಯಯನ ಅವರದ್ದಾಗಿತ್ತು. ಸಿದ್ಧಲಿಂಗಶಾಸ್ತ್ರಿಗಳ ಕೃತಿಗಳು ಕಿರುಗಾಲುವೆ ಆಗದೇ ತುಂಬಿದ ಸಾಗರದಂತೆ ಸಾಗಿ ಬಂದಂತವು ನಿರಂತರ ತೆರೆ ಅಲೆಗಳನ್ನು ಎಬ್ಬಿಸಿ ಇಂದಿನ ಜನತೆಗೆ ಸಾಧನೆಯ ಮೆಟ್ಟಿಲುಗಳಾದವು. ಸಿದ್ಧಲಿಂಗಶಾಸ್ತ್ರಿಗಳು ಸುಪ್ರಸಿದ್ಧ ಸಾಹಿತಿಯಲ್ಲದೇ ಆಧ್ಯಾತ್ಮಿಕದ ಸೀಮಾಪುರುಷರಾಗಿ ಬೆಳೆದು ನಿಂತವರು.

ಆರವತ್ಮೂರು ಪುರಾತನರ ತ್ರಿವಿಧಿ, ಅನುಭವಸಾರ, ಪರಮಾನುಭವ ಬೋಧೆ ಪರಮಾರ್ಥಗೀತೆ, ಕೈವಲ ಪದ್ಧತಿ, ಪಾರಮಾರ್ಥ ಪ್ರಕಾಶಿಕೆ, ವಿವೇಕ ಚಿಂತಾಮಣಿ, ಸಿದ್ಧಲಿಂಗಶಾಸ್ತ್ರಿಗಳ ನಿತ್ಯ ಅಧ್ಯಯನದ ಗ್ರಂಥಗಳಾಗಿದ್ದವು.

ಸಿದ್ಧಲಿಂಗಶಾಸ್ತ್ರಿಗಳು ಕನ್ನಡ ತಾಯಿಯನ್ನು ತಮ್ಮ ಕೃತಿಗಳಿಂದ ಹುಡಿ ತುಂಬಿದವರು. ಹಾಗೂ ವೀರಶೈವ ಧರ್ಮ ತತ್ವದ ಪ್ರಖಾಂಡ ಪಂಡಿತರಾಗಿದ್ದರು.

ಈ ಅಧ್ಯಯನ ಬರೀ ತಪಸ್ಸಾಗಿರಲಿಲ್ಲ, ಅದರ ಜೊತೆಗೆ ಕಡುಬಡತನವು ಅಷ್ಟೇ ಅವರನ್ನು ಪಕ್ವವಾಗಿಸಿತ್ತು ಅವ್ವ ಸುಮಿತ್ರಮ್ಮ ಸಿದ್ಧಲಿಂಗಶಾಸ್ತ್ರಿಗಳ ಧರ್ಮಪತ್ನಿಯಾಗಿ ಅಂದು ಗಾಂಧೀತತ್ವದ ಅಂಬರಚರಕ ತಿರುಗಿಸಿದಷ್ಟೇ ಬಡತನವೂ ಚಕ್ರದಂತೆ ತಿರುಗುತ್ತಿತ್ತು, ಆದರೂ ಅಪ್ಪಾಜಿಯ ಅಧ್ಯಯನಕ್ಕೆ ಎಂದು ಬಡತನ ಅಂಟದಂತೆ ಅವ್ವ ಅಂಬರಚರಕ ನೂಲುತ್ತಿದ್ದರೆ, ಅದನ್ನು ನೋಡಿದ ಇಡೀ ಶಹಪುರಪೇಟೆ ಓಣಿಯವರೇ ಎಲ್ಲರ ಮನೆಯಲ್ಲಿ ಅಂಬರಚರಕ ನೇಯಲು ಪ್ರಾರಂಭಿಸಿದ್ದರು. ಗಾಂಧೀಯ ತತ್ವ ಮನೆತನದ ಬಡತನವನ್ನು ಓಡಿಸಿಬಿಟ್ಟಿತ್ತು, ಬೆಳಿಗ್ಗೆ ಎದ್ದು ಹತ್ತಿಕಟ್ಟಿಗೆ ತರುವುದು, ಹಸುಗಳಿಗೆ ಮೇಯಿಸುವುದು, ಹಾಲನ್ನು ಕರೆಯುವುದು ಹಾಗೆ ಜಮೀನು ನೋಡಿಕೊಳ್ಳುವುದು, ಮನೆಗೆ ಬಂದ ಅತಿಥಿಗಳನ್ನು ನೋಡುವುದು, ಊರಲ್ಲಿ ಬಡಮಕ್ಕಳನ್ನು ತಂದು ಸಾಕಿ ಸಲುಹಿ ಶಿಕ್ಷಣ ಕೊಡಿಸುವುದು ಇವೆಲ್ಲಾ ಸೋಮವ್ವನವರ ದಿನಚರಿಯಾಗಿತ್ತು ಶಾಸ್ತ್ರಿಗಳ ಜ್ಞಾನದ ಎತ್ತರ ಸೋಮವ್ವನವರಲ್ಲಿರದಿದ್ದರೂ ಭಾವನೆಯಲ್ಲಿ ಯಾವ ಶರಣೆಗೂ ಕಡಿಮೆ ಇಲ್ಲದಷ್ಟು ದೇವರಲ್ಲಿ ಭಕ್ತಿವುಳ್ಳವರಾಗಿದ್ದರು. ಮನೆಗೆ ದಯಮಾಡಿಸಿದ

ಯಶವಂತಪುರದ ಶಿವಯೋಗಿಗಳ ಸೇವೆ ಶಿವಕುಮಾರ ಜಗದ್ಗುರುಗಳ ಸೇವೆ, ಗುರುಬಸವ ಜಗದ್ಗುರುಗಳ ಸೇವೆ, ಮುಂಡರಗಿ ಅಂದಾನ ಮಹಾಸ್ವಾಮಿಗಳ ಸೇವೆ, ಮಾರನಬಸರಿ ಸಿದ್ಧಯ್ಯನವರ ಸೇವೆ, ನವಲಗುಂದ ಹುರಕಡ್ಲೆ ಚನ್ನಪ್ಪನವರ ಸೇವೆ, ಬಳಗಾನೂರ ಚಿಕ್ಕೆನಕೊಪ್ಪದ ಶರಣರ ಸೇವೆ, ಕೊಪ್ಪಳದ ಗವಿಮಠದ ಪೂಜ್ಯರ ಸೇವೆ ಮಾಡಿದ ಪುಣ್ಯವತಿ. ಈಗ ಅವ್ವನಿಗೆ ೮೫ ವರ್ಷಗಳಾದರೂ ಈಗಲೂ ಮನೆಗೆ ಬಂದ ಶಿವಯೋಗಿಗಳಿಗೆ ಮಡಿಯಿಂದ ಅಡಿಗೆ ಮಾಡಿ ಪ್ರಸಾದ ಮಾಡಿಸುವುದೇ ಅವಳಿಗೆ ತೃಪ್ತಿ. ಈ ಹಿಂದೆ ೫೦–೬೦ ವರ್ಷಗಳ ಹಿಂದಿನ ಕಾಲ ಆಗಿನ್ನೂ ಬಸ್ಸು ವಾಹನಗಳ ಸೌಕರ್ಯ ಅಷ್ಟಿರಲಿಲ್ಲ. ಬೂದಿಹಾಳಕ್ಕೆ ಉಳವಿ ಚನ್ನಬಸವೇಶ್ವರರ ಕ್ಷೇತ್ರ ೧೮೦ ಮೈಲಿ ದೂರ ಆದರೂ ಅವ್ವ ಅಕ್ಕಪಕ್ಕದ ಮನೆಯ ಹೆಣ್ಣುಮಕ್ಕಳೆಲ್ಲಾ ಸೇರಿ ಹುಬ್ಬಳ್ಳಿಯವರೆಗೆ ಬಸ್ಸಿನಲ್ಲಿ ಬಂದು ಹುಬ್ಬಳ್ಳಿಯಿಂದ ೮೦ ಮೈಲು ಕಾಲುದಾರಿ ನಡೆದು ಉಳವಿ ಕ್ಷೇತ್ರದ ದರ್ಶನ ಪಡೆಯುತ್ತಿದ್ದರಂತೆ. ಹೀಗೆ ಹತ್ತು ವರ್ಷಗಳ ಕಾಲ ಉಳವಿ ಕ್ಷೇತ್ರದ ದರ್ಶನ ಮಾಡುತ್ತಿದ್ದಳೆಂದರೆ ಅವರಲ್ಲಿ ಬಸವಾದಿ ಪ್ರಮಥರ ತತ್ವ ಎಷ್ಟು ಆಳವಾಗಿತ್ತು ಹಾಗೂ ಶಾಸ್ತ್ರಿಗಳ ಸಾರ್ವಜನಿಕ ಸಾಹಿತ್ಯ ಕ್ಷೇತ್ರಕ್ಕೆ ಸುಮಿತ್ರತಮ್ಮನವರ ಸಹಕಾರ ಅಷ್ಟೇ ಬೆನ್ನೆಲುಬಾಗಿತ್ತು.

ಶಾಸ್ತ್ರಿಗಳಿಗೆ ಮತ್ತು ಸುಮಿತ್ರಮ್ಮನವರಿಗೆ ಬಡತನವೇ ಮೈವೆತ್ತಿದ್ದರೂ ಬೇರೆ ಬಡವರ ಮಕ್ಕಳನ್ನು ತಂದು ಸಾಕುವುದು ಅತ್ಯಂತ ಸಂತಸದ ಭಾವವಾಗಿತ್ತು, ಬೆಳಗಾವಿ ಸಬ್ ರಿಜಿಸ್ಟರಾಗಿದ್ದ ಹನುಮಪ್ಪ ಚಿಗರಿ, ಅಣ್ಣಿಗೇರಿಯ ಸಾಹಿತಿಗಳು, ಹಾಗೂ ಹೂಗಾರ ಹೈಸ್ಕೂಲಿನ ಆಡಳಿತಗಾರರೂ ಆದ ಸಂಗಪ್ಪನವರು, ಹೊಸಪೇಟೆ ಪಿ.ಎಲ್.ಡಿ. ಬ್ಯಾಂಕಿನ ಮ್ಯಾನೇಜರ್ ಆಗಿದ್ದ ವೀರಣ್ಣ ಕಾಡಪ್ಪನವರ ಹೊಸಕೋಟೆ ಮುನಿಸಿಫಲ್ ಚೀಫ್‌ಆಫೀಸರ್ ದಾನಪ್ಪ ಬಿಳೀಅಂಗಡಿ, ದಿ. ಶಿವರಾಜ ಗವಾಯಿಗಳು, (ಕನ್ನಡನಾಡು ಪ್ರಶಸ್ತಿ ಪಡೆದ) ಸೋಮನಾಥ ಮರಡು ಮುಂತಾದವರೆಲ್ಲಾ ಅವ್ವ ಸುಮಿತ್ರಮ್ಮನ ಆಶ್ರಯದಲ್ಲಿ ಬೆಳೆದವರು. ಹಾಗೇ ಸುಮಿತ್ರಮ್ಮನವರಿಗೆ ಅಕ್ಕ ಪಕ್ಕದ ಮನೆಯ ಮಕ್ಕಳು ತಮ್ಮ ಮನೆಯ ಮಕ್ಕಳಂತೆ. ಬಡಿಗಣ್ಣವರ ಸಿದ್ಧಲಿಂಗಪ್ಪನವರ ಮಗಳು ಈಗ ಅಳ್ನಾವರದ ಕುಬಸದ ಫಾರೆಸ್ಟ್ ಕಂಟ್ರಾಕ್ಟರ್ ಅವರ ಸೊಸೆ. ಆದರೆ ಅದು ೧ ವರ್ಷದ ಹಸುಗೂಸಿನಿಂದ ೧೦ ವರ್ಷ ಆಗುವವರೆಗೆ ಬೆಳೆದಿದ್ದು ಸುಮಿತ್ರಮ್ಮನವರ ಮಗಳಂತೆಯೇ. ಹಾಗೆ ಹಿರೇಮಠದ ಗಿರೀಜಾ ಸಹ ಸುಮಿತ್ರಮ್ಮನವರ ಸಾಕು ಮಗಳು.

ಪಕ್ಕದ ಮನೆಯ ಬಡಿಗಣ್ಣ ಕಾಶಪ್ಪನವರ ಮಗಳು ಕಮಲಕ್ಕ, ಬಡತನವೇ ತುಂಬಿ ನಿಂತ ಮನೆ, ಹುಡುಗಿ ಹೋಗಿದ್ದರು ಗದ್ದುಗೆಯಲ್ಲಿ ೪–೫ ಜನ ಹೆಣ್ಣುಮಕ್ಕಳು ಒಂದಿಬ್ಬರು ಗಂಡುಮಕ್ಕಳು ಕುಳಿತು ಗದುಗಿನಲ್ಲಿ ಕನ್ಯಾವಿಷಯ ಮಾತಾಡುತ್ತಿದ್ದರು. ಸುಮಿತ್ರಮ್ಮನವರು ಆ ಹೆಣ್ಣುಮಕ್ಕಳನ್ನು ಯಾವ ಊರು ಎಂದು ವಿಚಾರಿಸಿ; ಬಂದ ಕಾರಣ ಕೇಳಿದರು. ಬಂದವರು ಬೆಳಗಾವ ಜಿಲ್ಲೆ ರಾಯಭಾಗದವರು. ಆಗರ್ಭ

ಶ್ರೀಮಂತರು. ಅವರು ನಮಗೆ ಹುಡುಕುವ ಕನ್ಯಾ ಶ್ರೀಮಂತರೇ ಆಗಬೇಕೆಂದಿಲ್ಲ ರೂಪ ಹಾಗೂ ಗುಣವಿದ್ದರೆ ಸಾಕು ಅಂದರಂತೆ. ಆಗ ಸುಮಿತ್ರಮ್ಮ ಪಕ್ಕದ ಮನೆ ಬಡಿಗಣ್ಣವರ ಕಮಲಕ್ಕನ ಬಗ್ಗೆ ಪ್ರಸ್ತಾಪ ಮಾಡಿದರಂತೆ. ಆದರೆ ಒಂದು ಕರಾರು ಹಾಕಿದರಂತೆ. ಕನ್ಯಾದ ಮನೆತನದವರು ಬಡವರಿದ್ದಾರೆ. ಕನ್ಯಾ ನಮ್ಮ ಮನೆಯಲ್ಲಿಯೇ ತೋರಿಸುತ್ತೇವೆ ಅಂದರಂತೆ. ಆಗ ರಾಯಭಾಗದವರೂ ಒಪ್ಪಿದರಂತೆ. ಅವರೂ ಬಂದದ್ದು ಆಯಿತು, ಸುಮಿತ್ರಮ್ಮನ ಮನೆಯಲ್ಲಿ ಕನ್ಯಾ ನೋಡಿದ್ದಾಯಿತು, ಅವರಿಗೆ ಉಪ್ಪಿಟ್ಟು, ಚಹಾ ಅಲ್ಲಿಯೇ ಆಯಿತು. ಆಶ್ಚರ್ಯವೆಂದರೆ ಸುಮಿತ್ರಮ್ಮನವರ ಆ ಆಧಾರಾತೀತ್ಯ ಸಿದ್ಧಲಿಂಗಶಾಸ್ತ್ರಿಗಳ ಗುಣವಂತಿಕೆ, ಆಚಾರ, ವಿಚಾರ, ಕೇಳಿದ ರಾಯಭಾಗದವರೂ ನಿಮ್ಮ ಮನೆಯಲ್ಲಿ ಬೆಳೆದ ಹುಡುಗಿ ಅಂದ ಮೇಲೆ ಈ ಎಲ್ಲಾ ಸಂಸ್ಕಾರ ಅವಳಲ್ಲಿರಲೇಬೇಕು. ಅಂದೇ ಕಮಲಕ್ಕನನ್ನು ಒಪ್ಪಿ ಮುಂದೆ ಒಂದೇ ತಿಂಗಳಿನಲ್ಲಿ ರಾಯಭಾಗದಲ್ಲಿ ಮದುವೆ ಆಯಿತು. ಮುಂದೆ ಅನೇಕ ವರ್ಷಗಳವರೆಗೆ ಬಡಿಗಣ್ಣವರ ಬೀಗರು ಗದುಗಿಗೆ ಬಂದರೆ ಅವರ ವಾಸ್ತವ್ಯ ಮಾತ್ರ ಸಿದ್ಧಲಿಂಗಶಾಸ್ತ್ರಿಗಳ ಮನೆಯಲ್ಲಿಯೇ ಅಂಥ ವಿಶಾಲಗುಣ ಸುಮಿತ್ರಮ್ಮ ಮತ್ತು ಶಾಸ್ತ್ರಿಗಳದ್ದಾಗಿತ್ತು, ಇಂಥವುಗಳು ಹಲವಾರು.

ಶಾಸ್ತ್ರಿಗಳ ಹಿರಿಯ ಮಗ ತೋಂಟದಾರ್ಯ Rtd. ಡಿ. ಸಿ. ಹಿಂದೆ ಅವನು ಹೈಸ್ಕೂಲ್ ಓದುವಾಗ ಆತನ ಸ್ನೇಹಿತ ಹೂಗಾರ ಚನ್ನಪ್ಪ ಪಕ್ಕದ ಹಳ್ಳಿಯ ಕಡುಬಡವ. ಪ್ರತಿ ಭಾರಿ ಅವರ ತಾಯಿ ಮನೆ ನಡೆಸುತ್ತಿದ್ದನು, ಅಷ್ಟು ಬಡತನ, ಹೊಲ ಇಲ್ಲ, ಇರಲಿಕ್ಕೆ ಸ್ವಂತ ಮನೆ ಇಲ್ಲ. ಈ ವಿಷಯ ತಿಳಿದ ಸಿದ್ಧಲಿಂಗಶಾಸ್ತ್ರಿಗಳು ಹೂಗಾರ ಚನ್ನಪ್ಪನನ್ನು ಮನೆಯಲ್ಲಿಟ್ಟುಕೊಂಡು ಬಿ. ಎ. ವರೆಗೆ ಓದಿಸಿದರು ಹಾಗೆ ತಮ್ಮ ಗೆಳೆಯ ರಾಚಪ್ಪ ಹೂಗಾರರವರ ಮಗಳನ್ನೇ ಆತನಿಗೆ ತಮ್ಮ ಮನೆಯಲ್ಲಿಯೆ ಮದುವೆ ಮಾಡಿಸಿದರು. ಈಗ ಆ ಚನ್ನಪ್ಪ ಹೂಗಾರ ಕರ್ನಾಟಕ ಸರಕಾರದ ಅಂಕಿ ಅಂಶ ವಿಭಾಗದಲ್ಲಿ (Statistic Department) ಡೆಪ್ಯೂಟಿ ಡೈರೆಕ್ಟರ್ ಆಗಿದ್ದಾರೆ. ಆತನ ಮಗ ಇಂಗ್ಲೆಂಡಿನಲ್ಲಿ ಇಂಜಿನಿಯರ್ ಆ ವಿಷಯ ಪ್ರಸ್ತಾಪಿಸುವ ಅವಶ್ಯಕತೆಯೆಂದರೆ, ಒಬ್ಬ ಬಡವನ ಬಾಳನ್ನು ಎಂತಹ ಮಟ್ಟಕ್ಕೆ ತರಲು ಸಾಧ್ಯವಿದೆಯೆಂದು ಸಿದ್ಧಲಿಂಗಶಾಸ್ತ್ರಿಗಳ ನೆರವಿನ ಈ ಎರಡು ಘಟನೆಗಳೇ ಸಾಕ್ಷಿ. ಶಾಸ್ತ್ರಿಗಳು ಕಟ್ಟಿದ ಸಂಸ್ಥೆಯನ್ನು ಶ್ಲಾಘಿಸಿದವರೆಂದರೆ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಬಿ. ಶಿವಮೂರ್ತಿಶಾಸ್ತ್ರಿಗಳು, ಆಗಿನ ಎಂ. ಪಿ. ಆಗಿದ್ದ ಶಿವಮೂರ್ತಿಸ್ವಾಮಿಯವರು, ಶ್ರೀ ವಿಶ್ವೇಶ್ವರ ತೀರ್ಥ ಪೇಜಾವರ ಮಠದ ಶ್ರೀಗಳು, ನಾಗಭೂಷಣ ಶಾಸ್ತ್ರಿಗಳು, ಬಳ್ಳಾರಿಯ ವೈ. ನಾಗೇಶಶಾಸ್ತ್ರಿಗಳು, ಸಮಾಜವಿಜ್ಞಾನಿ ಹಿರೇಮಲ್ಲೂರ್ ಈಶ್ವರನ್, ಬಸವರಾಜಶಾಸ್ತ್ರಿಗಳು ಪಗಡಿದಿನ್ನಿ, ದೊಡ್ಡಮೇಟಿ ಅಂದಾನಪ್ಪನವರು, ಅಯ್ಯಪ್ಪ ಶಾಸ್ತ್ರಿಗಳು, ಕರ್ನಾಟಕ ಕಿನ್ನರ ಬಿರುದು ಪಡೆದ ಧಾರವಾಡದ ಪ್ರಸಿದ್ಧ ಕಲಾವಿದರಾದ ರಾಚಪ್ಪ ಹೂಗಾರ,

ಮಲ್ಲಬಾದಿ ವೀರಭದ್ರಪ್ಪ, ಸ್ವತಃ ಬೇಂದ್ರೆಯವರೇ ಈ ತರುಣ ಸಂಘವನ್ನು ಹೊಗಳಿ ಹಾಡಿದ್ದರು.

### ಅರಳುಮಲ್ಲಿಗೆ ಸಂಪಾದಕತ್ವ

೧೯೫೫ಳ ಸಿದ್ಧಲಿಂಗಶಾಸ್ತ್ರಿಗಳ ಸಂಪಾದಕತ್ವದಲ್ಲಿ 'ಅರಳುಮಲ್ಲಿಗೆ' ಎಂಬ ಮಾಸ ಪತ್ರಿಕೆ ಗದಗ ತರುಣ ಸಂಘದವತಿಯಿಂದ ಪ್ರಕಟವಾಗುತಿತ್ತು, ಈ ಪತ್ರಿಕೆ ಲೇಖನಗಳು ತರುಣ ಸಂಘದ ಸದಸ್ಯರೇ ಬರೆದ ಪ್ರಬಂಧ ಚಿಕ್ಕಕತೆ, ಭಾವಗೀತೆ, ಲಘುಹರಟೆ, ಶ್ರೀ ಸಿದ್ಧೇಶ್ವರರ ವಚನಗಳು, ಪ್ರಕಟವಾಗತ್ತಿದ್ದವು. ಗದುಗಿನ ಪ್ರಸಿದ್ಧ ಶಂಕರ್ ಸ್ಟೋರ್ಸ್ ಮಾಲಕರಾಗಿದ್ದ ಹಾಲಪ್ಪ ತಡಸದವರ ಸಹೋದರ ಶ್ರೀ ಶಂಕರ್ ತಡಸ ದೊಡ್ಡ ಸಾಹಿತಿಯಾಗಲೂ ಸಿದ್ಧಲಿಂಗಶಾಸ್ತ್ರಿಗಳೇ ಹಾಕಿಕೊಟ್ಟ ಬುನಾದಿಯಾಗಿದ್ದವು.

ಧಾರವಾಡದ ಆರ್. ಸಿ. ಹೂಗಾರ ಅವರನ್ನು ಕರೆಸಿ ತಮ್ಮ ಮನೆಯಲ್ಲಿಟ್ಟು ಕೊಂಡು ತರುಣಸಂಘದ ಸದಸ್ಯರಿಂದ ಬಸವಜಯಂತಿಯಲ್ಲಿ ''ಕ್ರಾಂತಿ ದೀಪ'' ''ಮಗಳ ಮದುವೆ'' ''ಹಾಳು ತೋಟ'' ಹಾಸ್ಯಪ್ರಧಾನ ನಾಟಕಗಳನ್ನು ಪ್ರತಿವರ್ಷ ಆಡಿಸುತ್ತಿದ್ದರು. ಪ್ರಸಿದ್ಧ ನಾಟಕಕಾರರಾಗಿದ್ದ ಪರ್ವತವಾಣಿಯವರನ್ನು ಕರೆಸಿ ಅವರ ನಿರ್ದೇಶನದಲ್ಲಿ ''ಬಹದ್ದೂರ್ ಗಂಡು'' ನಾಟಕವನ್ನು ಪ್ರಯೋಗಿಸಿದ್ದರು.

ಸಿದ್ಧಲಿಂಗಶಾಸ್ತ್ರಿಗಳು ತರುಣಸಂಘದ ಸದಸ್ಯರೊಡಗೂಡಿ ಬಸವಜಯಂತಿ ಆಚರಿಸುವುದನ್ನು ನೋಡಬೇಕಿತ್ತು, ಆನೆ ಎತ್ತರದ ಬಸವ (ಎತ್ತು) ಬಸವನಿಗೆ ಒಂದು ಬಂಡಿ ಕಟ್ಟಿ ಅದರ ಮೇಲೆ ಬೃಹದಾಕಾರವಾದ ಫೋಟೋ ಇಟ್ಟು ಅದರ ಮುಂದೆ ವಾದ್ಯಗೋಷ್ಠಿ ಹಿಂದೆ ಹಿಂದೆ ತರುಣಸಂಘದ ಸದಸ್ಯರು ಬಂಡಿಯ ಹಿಂದೆ ಕುಂಭ ಹೊತ್ತ ಮಹಿಳೆಯರ ಸಾಲು ನೋಡಲು ಬಲು ಸೊಗಸಾಗಿತ್ತು.

ಮುಂದೆ ಸಿದ್ಧಲಿಂಗಶಾಸ್ತ್ರಿಗಳ ಬಸವಜಯಂತಿ ಮಾದರಿ ಧಾರವಾಡ ಜಿಲ್ಲೆ ತುಂಬಾ ಹರಡಿ ಜಿಲ್ಲೆಯ ಪ್ರತಿಯೊಂದು ಊರಲ್ಲಿ ಬಸವಜಯಂತಿ ಮೆರವಣಿಗೆ ನಾಟಕ, ಪ್ರವಚನ, ಇಡೀ ಜಿಲ್ಲೆಯ ತುಂಬಾ ವಿಜೃಂಭಿಸುತ್ತಿತ್ತು

ಶಾಸ್ತ್ರಿಗಳ ನಂಟು ನೇಸ್ವಿ, ಎಸ್. ಆರ್. ಕಂಠಿಯವರ ಸಹೋದರ ಸಂಪರ್ಕದಿಂದ ಹಿಡಿದು ಬೆಂಗಳೂರಿನ ಜಸ್ಟೀಸ್ ಮಹಾದೇವಯ್ಯನವರೆಗೂ ಇತ್ತು, ಈ ಎಲ್ಲಾ ಮಹಾನ್ ಮೇಧಾವಿಗಳು ಸಿದ್ಧಲಿಂಗಶಾಸ್ತ್ರಿಗಳನ್ನು ಮೆಚ್ಚಬೇಕಾದಲ್ಲಿ ಅವರ ಕಾರ್ಯನಿಷ್ಠೆ ಅತ್ಯಂತ ಸರಳತನ, ಪ್ರಾಮಾಣಿಕತೆ, ಆಧ್ಯಾತ್ಮಿಕ ಮನೋಭಾವ, ಸತ್ಯಶೀಲತೆ, ನಯವಿನಯ, ದಾಸೋಹಂಭಾವ, ಹಾಗೂ ಎಡೆಯೂರ ಸಿದ್ಧಲಿಂಗನ ಮೇಲಿಟ್ಟ ಭಕ್ತಿ ಬಡವರ ಮೇಲಿದ್ದ ಕಳಕಳಿ, ನಿಜಲಿಂಗಪ್ಪನರಂತೂ ಶಾಸ್ತ್ರಿಗಳನ್ನು ಕಂಡರೆ ಭಾರೀ ಅಭಿಮಾನ, ವಿರೇಂದ್ರ ಪಾಟೀಲರು ಗಂಗಾವತಿಗೆ ಎಂದಾದರೂ ಬಂದರೆಸಿದ್ಧಲಿಂಗಶಾಸ್ತ್ರಿಗಳ ಬೀಗರಾದ ಅಂದಿನ ಎಂ. ಎಲ್. ಸಿ. ವಿಶ್ವನಾಥಸ್ವಾಮಿ

ಯವರ ಮನೆಯಲ್ಲೇ ವಾಸ್ತವ್ಯಯ ಆಗಿ ಸಿದ್ಧಲಿಂಗಶಾಸ್ತ್ರಿಗಳನ್ನು ಕರೆಸಿ ಮಾತನಾಡಿಸಿದಾಗಲೇ ಸಮಾಧಾನ. ಹಾಗೇ ಶಾಸ್ತ್ರಿಗಳಿಗೆ ದೊಡ್ಡಮೇಟಿಯವರಿಂದ ಅನೇಕ ರಾಜಕಾರಣಿಗಳ ಪರಿಚಯವಿದ್ದರು ಒಂದು ದಿನ ಅಧಿಕಾರಕ್ಕಾಗಿ ಆಸೆ ಪಡಲಿಲ್ಲ. ಮನಸ್ಸು ಮಾಡಿದ್ದರೆ ಶಾಸ್ತ್ರಿಗಳು ಈ ನಾಡಿನ ಮುಖ್ಯ ರಾಜಕಾರಣಿಯಾಗಿರಬಹುದಾಗಿತ್ತು ಆದರೆ ಅದನ್ನು ಬಯಸದೇ ಎಡೆಯೂರ ಸಿದ್ಧಲಿಂಗನ ಭಕ್ತಿಯನ್ನೇ ತಮ್ಮ ಆಸ್ತಿಯಾಗಿ ಮಾಡಿಕೊಂಡಿದ್ದರು. ಅಷ್ಟೊಂದು ತ್ಯಾಗ ಮನೋಭಾವನೆ ಸಿದ್ಧಲಿಂಗಶಾಸ್ತ್ರಿಗಳದ್ದಾಗಿತ್ತು

### ಕೃತಪುರ ಮಹಾತ್ಮೆ

ಶಾಸ್ತ್ರಿಗಳು ಬ್ರಹ್ಮನ ಮಾನಸಪುತ್ರರಲ್ಲಿ ಆರನೇಯವರಾದ ಕೃತು ಮಹರ್ಷಿ ತಪಸ್ಸನ್ನು ಆಚರಿಸಲು ಕುಬೇರಾಕ್ಷವನಕ್ಕೆ (ಗದಗ) ಬಂದು ತಪಗೈಯುತ್ತಿದ್ದನಂತೆ. ಅವನಿಗೆ ತ್ರಿಪುರಾಸುರ ರಾಕ್ಷಸ ಕಾಡುತ್ತಿದ್ದನಂತೆ. ಅವನನ್ನು ಸಂಹರಿಸಲು ಸ್ವತಃ ವಿಷ್ಣುವೇ ವೀರ ನಾರಾಯಣನಾಗಿ ಅವತರಿಸಿ ಸಂಹರಿಸಿದನಂತೆ. ಅದೇ ಈಗ ವೀರನಾರಾಯಣ ದೇವಾಲಯ. ಆ ಕೃತು ತಪಸ್ಸು ಮಾಡಿದ್ದರಿಂದಲೇ ಇದಕ್ಕೆ ಕೃತಪುರ ಎಂದು ಹೆಸರು. ಹಾಗೆಯೇ ಬ್ರಹ್ಮ ವಿಷ್ಣು ಮಹೇಶ್ವರ ಮಿಲನದಿಂದ ತ್ರಿಕುಟೇಶ್ವರ ದೇವಾಲಯವು ಬಂತು. ಕೃತಪುರ ನಾಮ ಉಲ್ಲೇಖ ಇರುವ ಶಿಲಾಶಾಸನವೂ ಗದಗಿನಲ್ಲಿದೆ. ಇದಕ್ಕೆ ಪೂರಕವಾಗಿ ವೀರನಾರಾಯಣನ ಸ್ತುತಿಯಲ್ಲಿ ಕೃತಪುರ ಮಹಾತ್ಮೆಯ ವರ್ಣನೆ ಬರುತ್ತದೆ. ಅದರಲ್ಲಿ ಅಣ್ಣಿಗೇರಿ, ಮುಳಗುಂದ, ನವಲಗುಂದ, ನಾಗಗಿರಿ ಹಾಗೆ ಪ್ರಸ್ತಾಪ ಇದೆ. ಈ ಸಂಶೋಧನೆ ಮಾಡುವ ಶಾಸ್ತ್ರಿಗಳು ಬೆಳ್ವೊಲ ದೇಶದ ಅಗ್ರಹಾರವಾದ ಕೃತಪುರ (ಗದಗ) ಪಾಂಡುಕಲ ತಿಲಕವಾದ ಜನಮೇಜಯ ಮಹಾರಾಜನು ಸರ್ಪಯಾಗಮಾಡಿ ತಪೋನಿಷ್ಟರಾದ ೭೨ಜನ ಬ್ರಾಹ್ಮಣರಿಗೆ ದಾನಗಳನ್ನುಕೊಟ್ಟನು ಎಂಬ ಸಾರಾಂಶ ಕೃತಪುರ ಗ್ರಂಥದಲ್ಲಿ (ಅಪ್ರಕಟಿತ ಗ್ರಂಥ) ಬರುತ್ತದೆ.

ಗದಗ ಹಿಂದೆ ಸಂಸ್ಕೃತ ವಿದ್ಯೆಯ ಕೇಂದ್ರವಾಗಿತ್ತು ಇದರ ಬಗ್ಗೆ ಡಾ|| ಪಿ. ಬಿ. ದೇಸಾಯಿಯವರು ಸಹ ಸಂಶೋಧನೆ ಮಾಡಿದ್ದಾರೆ, ಗದಗವನ್ನು ರಾಷ್ಟ್ರಕೂಟರು, ಚಾಲುಕ್ಯರು, ಕಲಚೂರ್ಯರು, ಈ ಬಗ್ಗೆ ೪೦–೫೦ ಶಾಸನಗಳೇ ಗದಗವನ್ನು ಗಳ್ದುಗ– ಗರ್ದುಂಗ–ಗದುಗ–ಗದಗ ಹೀಗೆ ಪರಿವರ್ತನೆಗೊಂಡಿತು, ಕ್ರಿ.ಶ. ೯೭೦ರ ರಾಷ್ಟ್ರಕೂಟ ಕೊಟ್ಟಿಗನ ಶಾಸನ ರೋಣಾ ತಾಲೂಕು ಸವಡಿಯಲ್ಲಿದೆ ಅದರಲ್ಲಿ ''ಗಬ್ಬುಗಯ್ಯ'' ಎಂಬ ಧರ್ಮಿಷ್ಟನು ಈ ಭಾಗದ ದಂಡನಾಯಕನಾಗಿ ಆಳುತ್ತಿದ್ದನೆಂದು ಹೇಳಿದರು. ಅವನ ಸ್ಮಾರಕ ಹೆಸರೇ ಗದುಗಿಗೆ ಬಂದಿರಬಹುದು.

ಸಿದ್ಧಲಿಂಗಶಾಸ್ತ್ರಿಗಳ ಅಧ್ಯಯನ ಮುಂದೆ ಸಾಗುತ್ತಾ, ''ಹುಲಿಗೆರೆ ಮೂರುನೂರ'' ಎಂಬ ದೇಶಕ್ಕೊಡೆಯನಾದ ಲಕ್ಷ್ಮಣ ಅರಸನಿಂದ ಈ ಲಕ್ಷ್ಮೇಶ್ವರ

ಸ್ಥಾಪನೆಯಾಗಿದೆಯಂತೆ. ಕ್ರಿ.ಶ. ೧೧೯೬ ರ ಅಮೃತಾಪುರ ಶಾಸನದಲ್ಲಿ 'ಗಬ್ದುಗ' ಎಂದು ತಿಳಿಸುತ್ತದೆ. ಕ್ರಿ. ಶ. ೧೨೨೫ರ ಕದಂಬ ಮಲ್ಲಿದೇವರಸನ ಶಾಸನದಲ್ಲಿ ಗದುಗ ಪದವೇ ದೊರೆಯುತ್ತದೆ. ಕ್ರಿ. ಶ. ೧೨೬೦ ರಲ್ಲಿ ಕೇಶಿರಾಜನು ಬರೆದ ''ಶಬ್ಧಮಣಿ ದರ್ಪಣ''ದಲ್ಲಿ ಗದ್ದುಗು ಪದ ಪ್ರಯೋಗವಾಗಿದೆ ೧೪೩೦–೧೫೦೦ ಅವಧಿಯಲ್ಲಿ ಮಹಾಕವಿ ಕುಮಾರವ್ಯಾಸ ಭಾರತದಲ್ಲಿ ಗದುಗಿನ ನಾಮೋಗ್ಗಡಣೆ ಕೇಳಿಬರುತ್ತೆ ಶಂಕರ ಕವಿಗಳು, ಮಹಾಕವಿ ಚಾಮರಸನ ಹುಟ್ಟೂರನ್ನು ''ನೀಪುಟ್ಟುದೊಡೆ ಗದುಗ'' ಎಂದು ಕರೆದಿದ್ದಾರೆ, ಕಿಟಲ ಕೋಶದಲ್ಲಿ ಗದುಗ ಆಗಿತ್ತು, ಬಹುಶಃ ಈಗಲೂ ಕಾಣುವ ನೇಕಾರರ ಕಾರಣದಿಂದ ಬಟ್ಟೆಗೇರೆ ಹೋಗಿ ಬೆಟಗೇರಿ ಆಗಿರಬಹುದು, ತ್ರಿಕುಟೇಶ್ವರ ದೇವಸ್ಥಾನದ ದೇವಾಲಯದಲ್ಲಿ ಕಾಣುವ ಶಾಸನ ಕವಿಗಳಲ್ಲಿ ಅಗ್ನಿಶರ್ಮನ ಹೆಸರು ಪ್ರಸಿದ್ಧ ಕ್ರಿ. ಶ. ೧೧೯೨ ರಲ್ಲಿ ಹೊಯ್ಸಳ ವೀರ ಬಲ್ಲಾಳನ ಆದೇಶದ ಮೇರೆಗೆ ಶಾಸನ ಬರೆದಿದ್ದಾಗಿ ಹೇಳಿಕೊಂಡಿದ್ದಾನೆ, ಬೆಳ್ವಲದ ಹೊಂಬಳನ್ನು ತ್ರಿಕುಟೇಶ್ವರರಿಗೆ ದತ್ತಿಯಾಗಿ ಬಿಟ್ಟ ವಿಷಯ ಬರುತ್ತದೆ. ಗದುಗ ಹೆಚ್ಚಾಗಿ ಅಂದಿನ ಕಾಲದಲ್ಲಿಯೂ ಶೈವ ಸಂಸ್ಕೃತಿಯನ್ನು ಪಡೆದಿತ್ತು, ಕ್ರಿ.ಶ. ೧೨೨೫ ರ ಶಾಸನ ಗದುಗ ಮಹಾ ಮಂಡಳೇಶ್ವರ, ಕದಂಬ, ಪುಳಕಮಳ, ಮಾರ್ತಾಂಡ, ಬನವಾಸಿ, ಪುರಾದೀಶ್ವರ, ಮುದುಕೇಶ್ವರ ದೇವಲಬ್ಧ ವರಪ್ರಸಾದ, ಮಲ್ಲಿದೇವರ ಮಂತ್ರಿಯ ಪುತ್ರಿ ಚಂಡಲ್ಯೆ ತ್ರಿಕುಟೇಶ್ವರನಿಗೆಂದು ಎರಡು ಸುವರ್ಣ ಧ್ವಜಗಳನ್ನು ನೀಡಿದ ಉಲ್ಲೇಖವಿದೆ. ಕ್ರಿ.ಶ.೧೩೭೮ ರ ವಿಜಯನಗರದ ೨ ನೇ ಹರಿಹರನ ಕಾಲಕ್ಕೆ ಗದುಗಿನ ೬೬ ಗ್ರಾಮುಗಳ ಆಳ್ವಿಕೆ ಮಾಡುತ್ತಿದ್ದ ಸಂಪಣಾಚಾರ್ಯ ಸೇನುಭೋವನು ಗದುಗಿನ ತ್ರಿಕುಟ್ಟೇಶ್ವರ ಮತ್ತು ವೀರನಾರಾಯಣನಿಗೆ ೨೯ ಗ್ರಾಮುಗಳನ್ನು ಉಂಬಳಿಯಾಗಿ ಕೊಟ್ಟಿದ್ದು ಇದೆ.

## ಭೀಷ್ಮ ಕೆರೆ

ಪಾಂಡವರ ಒಂದು ವರ್ಷದ ಅಜ್ಞಾತ ಕಾಲದಲ್ಲಿ ಮತ್ತೆ ಅವರನ್ನು ಕಾಡಿಗೆ ಕಳಿಸಲು ದುರ್ಯೋಧನ ತನ್ನೆಲ್ಲಾ ಸೈನ್ಯವನ್ನು ಇಲ್ಲೆ ಕಳಿಸಿದ್ದನಂತೆ ದ್ರೋಣಾಚಾರ್ಯರು ಪಾಂಡವರನ್ನು ಹುಡುಕುವ ಊರು ರೋಣಾವ್ಹಾಯಿತು, ಭೀಷ್ಮ ಗದುಗಿನಲ್ಲಿ ಬಂದು ಹುಡುಕಲು ಆತನು ತಂಗಿದ್ದ ಭಾಗವೇ ''ಭೀಷ್ಮ ಕೆರೆ'' ಆಗಿತ್ತೆಂದು ಪುರಾಣ ಹೇಳುತ್ತದೆ. ಬಹುಶಃ ಬಿಸಿಯಿಂದ ನೊಂದ ಜನಕ್ಕೆ ಕುಡಿಯುವ ನೀರು ಕಲ್ಪಿಸಿದ್ದರಿಂದ ಇದನ್ನು ''ಬಿಸಿಕೆರೆ'' ಎಂದು ಕರೆಯುತ್ತಾರೆ. ಕ್ರಿ.ಶ. ೧೧೯೬ ರಲ್ಲಿಯೇ ಅಮೃತಾಪುರ ಶಾಪನ ಪ್ರಕಾರ ಈ ಭೀಷ್ಮ ಕೆರೆಯನ್ನು ಪಂಪಾದಿ ಕನ್ನಡ ಮಹಾಕವಿಗಳೇ ಈ ಭೀಷ್ಮ ಕೆರೆಯ ಅಪೂರ್ವ ಸುಂದರ ವರ್ಣನೆ ಮಾಡುತ್ತಾ ಇದನ್ನು ವೈಶಾಂಪಾಯನ ಸರೋವರ ಎಂದು ವರ್ಣಿಸಿದ್ದಾರೆ ಅಷ್ಟು ಸುಂದರ ಕೆರೆಯಾಗಿತ್ತು ಒಂದು ಕಾಲಕ್ಕೆ.

ಸಿದ್ಧಲಿಂಗಶಾಸ್ತ್ರಿಗಳು ಆಯಾಕಾಲದ ಕವಿಗಳು, ಹಾಗೂ ಶಾಸನಗಳ ಬಗ್ಗೆ ಈ ಕೆಳಕಂಡಂತೆ ಸಂಗ್ರಹಿಸಿದ್ದಾರೆ.

| ಕವಿಗಳ ಹೆಸರು | ಕಾಲ | ಶಾಸನ ದೊರಕುವ ಊರು |
|---|---|---|
| ಸಾಮಿಯಣ್ಣ | ಕ್ರಿ.ಶ. ೯೬೯ | ನಾಗಾವಿ |
| ನಯಸೇನ | ಕ್ರಿ.ಶ. ೧೦೫೩ | ಮುಳಗುಂದ |
| ಬಸವಣ್ಣಯ್ಯ | ಕ್ರಿ.ಶ. ೧೦೬೨ | ಮುಳಗುಂದ |
| ಕನ್ನಪಯ್ಯ | ಕ್ರಿ.ಶ. ೧೦೭೨ | ಸೊರಟೂರ |
| ನಾಗದೇವ | ಕ್ರಿ.ಶ. ೧೦೮೨ | ಕುರ್ತಕೋಟಿ |
| ಮಾಧವಭಟ್ಟ | ಕ್ರಿ.ಶ. ೧೦೯೧ | ಸೊರಟೂರ |
| ಚಂದ್ರಭಟ್ಟ | ಕ್ರಿ.ಶ. ೧೦೯೯ | ಕೋಟುಮಚಗಿ |
| ಚಟ್ಟಪಾರ್ಯ | ಕ್ರಿ.ಶ. ೧೧೧೬ | ಹೊಂಬಳ |
| ಮಲ್ಲ | ಕ್ರಿ.ಶ. ೧೦೯೯ | ಚಿಕ್ಕ ಹಂದಿಗೋಳ |
| ಹಿಟ್ಟಿನ ಸೇನಬೋನ | ಕ್ರಿ.ಶ. ೧೧೭೦ | ಚಿಕ್ಕ ಹಂದಿಗೋಳ |

**ಗದುಗಿನ ಮಹಾಕಾವ್ಯಗಳು ಹಾಗೂ ಕವಿಗಳು :**

ಕುಮಾರವ್ಯಾಸ, ಚಾಮರಸ ಕವಿಸಾರ್ವಭೌಮರೇ ಆದ ವೀರನಾರಾಯಣನ ಆರಾಧ್ಯದೈವವಾಗಿ ಕೊಂಡಾಡುತ್ತಾರೆ, ಅವನು ರಚಿಸಿದ ಭಾರತ ಆತನ ಸಂಬಂಧಿಯೇ ಆದ ಚಾಮರಸ ಗದುಗಿನ ಪಕ್ಕದ ನಾರಾಯಣಪುರದವರು, ಕೋಳಿವಾಡದಿಂದ ಕುಮಾರವ್ಯಾಸ ಗದುಗಿಗೆ ಬಂದರೆ, ಚಾಮರಸ ನಾಯಾಯಣಪುರದಿಂದ ಗದುಗಿಗೆ ಬಂದು ವಿಜಯನಗರದ ಅರಸರಲ್ಲಿ ಆಶ್ರಯಪಡೆದ ಆತನ 'ಪ್ರಭುಲಿಂಗಲೀಲೆ' ಮಹಾನ್ ಕಾವ್ಯ.

ಇಲ್ಲಿ ಕಾಲಾವಕಾಶವಿಲ್ಲದ್ದರಿಂದ ಅವರ ಸಂಕ್ಷಿಪ್ತ ಪರಿಚಯ ಮಾತ್ರ ನೀಡಲಾಗಿದೆ, ಗುರುರಾಜ ಚಾರಿತ್ರ್ಯದಲ್ಲಿ ಚಾಮರಸನನ್ನು ಗದುಗಿನವನೆಂದೇ ನಿರೂಪಿಸಲಾಗಿದೆ.

ಗದಗ ಮತ್ತು ಬೆಟಗೇರಿ ಅವಳಿ ಅಕ್ಕ ತಂಗಿಯರಿದ್ದಂತೆ. ಕ್ರಿ. ಶ. ೧೬, ೧೭ನೇ ಶತಮಾನಗಳಲ್ಲಿ ಬೆಟಗೇರಿಯು ಕವಿಗಳಿಂದಲೇ ತುಂಬಿತ್ತು, ಕ್ರಿ.ಶ. ೧೫೫೦ ರಲ್ಲಿ ದಾನಪ್ಪಾರ್ಯ ಕವಿ. ''ಶಿವ ಸಂಪಾದನಿ '' ಎಂಬ ಕಾವ್ಯ ರಚಿಸಿದರು. ಇದು ತ್ರಿಪುರಾಂಬಿಕೆ, ಲಲಿತೆ, ಕೇಶನಿ, ಮಹಾಮಂಗಳೆ, ಸುಮಿತ್ರ, ಚಂಡಿ ಚಾಮುಂಡಿ, ಅಂಕಿತ ತಾಯಿಯು ಶಾಸ್ತ್ರಿಗಳ ಪುರಾಣ ಕೇಳಲೇ ಬರುತ್ತಾಳೆನೋ ಎನ್ನುವಷ್ಟು ಅಷ್ಟು ಪರವಶರಾಗಿರುತ್ತಿದ್ದರು ಶಾಸ್ತ್ರಿಗಳು.

ಶಹಪುರಪೇಟೆ ಮಾರುತಿ ದೇವಸ್ಥಾನ ಬಸವ ವಾಚನಾಲಯ ಪಕ್ಕದಲ್ಲಿ ತರುಣಸಂಘದವರೂ ಅಲ್ಲಿ ದರ್ಶನಕ್ಕೆ ಹೋಗುವವರನ್ನು ಕಂಡ ಶಾಸ್ತ್ರಿಗಳು ಬಸವಾದಿ ಪ್ರಮಥರ ತತ್ವದಂತೆ ಕೂಡಲ ಸಂಗನಿಲ್ಲದೇ ಅನ್ಯದೈವಕ್ಕೆ ಕೈಮುಗಿವಂತಿಲ್ಲವೆಂಬ ರೋಷ ಭಾವದಿಂದ ಕೋಪ ವ್ಯಕ್ತಪಡಿಸಿದ್ದರು. ಅವರು ರಾಮಭಕ್ತ, ಬ್ರಾಹ್ಮಣರ ದೇವರೆಂಬ ಅಭಿಪ್ರಾಯ. ಮುಂದೆ ಪರಿಪಕ್ವವಾದ ತತ್ವಾಭ್ಯಾಸದಲ್ಲಿ ಮಾರುತಿ (ಆಂಜನೇಯ) ವೀರಭದ್ರನಿಂದ ಶಿವದೀಕ್ಷೆ ಪಡೆದನೆಂದು ತಿಳಿದಾಗ ಸ್ವತಃ ತಾನೇ ಆಂಜನೇಯನ ದರ್ಶನ ಪಡೆದು ಕ್ಷಮೆ ಕೇಳಿದರು.*

ಸಿದ್ಧಲಿಂಗಶಾಸ್ತ್ರಿಗಳು ತಮ್ಮ ಆಧ್ಯಾತ್ಮಿಕ ನಿಲುವನ್ನು ಹೇಳುತ್ತಾ ಅಲ್ಲಮಪ್ರಭು, ಅಕ್ಕಮಹಾದೇವಿಯ ವೈರಾಗ್ಯ ಕುರಿತು ಹೇಳುವಾಗ, ಅಥಣಿ ಶಿವಯೋಗಿಗಳು, ಸಿದ್ಧಾರೂಢರು, ಹಾನಗಲ್ ಕುಮಾರಸ್ವಾಮಿಗಳು, ಮುಳಗುಂದದ ಬಾಲಲೀಲ ಮಹಾಂತ ಶಿವಯೋಗಿಗಳು, ನಿಜಗುಣ ಶಿವಯೋಗಿಗಳು, ಮಹದೇಶ್ವರ ಬೆಟ್ಟದ ರಮಣ ಮಹರ್ಷಿ, ಅರವಿಂದರ ಉದಾಹರಣೆ ಹಾಗೂ ವೈರಾಗ್ಯಗಳ ಅವಶ್ಯಕತೆಯನ್ನು ಹೇಳುತ್ತಿರುವಾಗ ಬರೀ ವೈರಾಗ್ಯದಿಂದ ಮಾತ್ರ ಆತ್ಮವಿದ್ಯೆಯಲ್ಲಿ ಈ ಸಮಾಜದಲ್ಲಿ ಪ್ರಾಪಂಚಿಕ ಜೀವನದಲ್ಲೂ ಈ ಆಧ್ಯಾತ್ಮ ವಿಧ್ಯೆ, ಆತ್ಮಜ್ಞಾನ, ಪಡೆಯುವುದೇ ಮೇಲ್ಮೆ ಎಂದು ಹೇಳುತ್ತಾ ''ಸತಿಪತಿಗಳೊಂದಾದ ಭಕ್ತಿ ಶಿವಗೆ ಒಪ್ಪುದು'' ಈ ಯುಕ್ತಿಯಲ್ಲಿ ಪ್ರಾಪಂಚಿಕ ಜೀವನದಲ್ಲಿ ಈ ಆತ್ಮವಿದ್ಯೆ ಸಾಧ್ಯ ಎಂಬುದನ್ನು ಹೇಳುತ್ತಾ ದಾಸರ ಯುಕ್ತಿಯನ್ನು ಪ್ರತಿಪಾದಿಸುತ್ತಾರೆ.

''ಈಸಬೇಕು ಇದ್ದು ಜಯಿಸಬೇಕು''. ಈ ಪ್ರಾಪಂಚಿಕ ಜೀವನ ಜಯಿಸುವುದು ಅರಿಷಡ್ವೈರಿಗಳನ್ನು ಮೀರಿ ಆತ್ಮಜ್ಞಾನ, ಮುಕ್ತಿ, ಮೋಕ್ಷ ಗಳಿಸಬೇಕು ಆದ್ದರಿಂದ ೧೨ ನೇ ಶತಕದ ಬಹುಪಾಲು ಶರಣರು ಪ್ರಾಪಂಚಿಕ ಜೀವನದಲ್ಲಿದ್ದು ಮೋಕ್ಷ ಸಾಧಕರಾಗಿ ಸಮಾಜದಲ್ಲೂ ಸುಧಾರಣೆ ನಿರ್ಮಿಸಿ ಜಯಿಸಿದವರು. ಸ್ವತಃ ಬಸವಣ್ಣ ಇಬ್ಬರು ಹೆಂಡಿರನ್ನು ಪಡೆದರೂ ಲಿಂಗಪೂಜೆಯಲಿ ಸತಿಪತ ಕಂಡಿದ್ದ ಇಷ್ಟಲಿಂಗದಲ್ಲಿ ಸತಿಪತಿಗಳು ಒಂದಾಗಿದ್ದರು. ಐದಕ್ಕಿ ಮಾರಯ್ಯ, ಹಡಪದ ಅಪ್ಪಣ್ಣ, ಹರಳಯ್ಯ, ಮಧುವಯ್ಯ ಇವರೆಲ್ಲಾ ಪ್ರಾಪಂಚಿಕರೇ. ಸ್ವತಃ ತುಳಸಿದಾಸರು ಪ್ರಾಪಂಚಿಕರು. ಪರಮಹಂಸರು ಪ್ರಾಪಂಚಿಕ. ಸ್ವತಃ ಶಿವ ಪಾರ್ವತಿಯ ಪತಿ, ಬ್ರಹ್ಮ ಸರಸ್ವತಿ ಪತಿ,ವಿಷ್ಣು ಲಕ್ಷ್ಮೀ ಪತಿ, ಈ ಭಾವನೆಗಳನ್ನು ತೋರಿಸಿದ ಪುರಾಣಗಳಲ್ಲಿ ಹೇಳಿದರೂ ಸತ್ಯವಾಗಿ ನಡೆದ ಶರಣರು ಅದಕ್ಕೆ ಉದಾಹರಣೆ ''ವೀರಶೈವ'' ಅಂದರೆ ಕಾಮಾದಿ ವಾಸನೆಗಳನ್ನು ಗೆದ್ದು ಬಂದ ವೀರ ಶೈವಾಸ್ಥಿತಿಯೇ ವೀರಶೈವ ಎಂದಾಯಿತು.ಅದಕ್ಕೆ ವೀರಶೈವ ತತ್ವ ''ಶಕ್ತಿವಿಶಿಷ್ಟಾದ್ವೈತ'' ಎಂದು ಕರೆಯಲ್ಪಟ್ಟಿದೆ. ನಿಜಗುಣರು ಹೇಳುವಂತೆ ''ವಿಷಮ ಸಂಸಾರವಿದು ಕನಸೆಂದರಿ'' ಅಂದರೆ ನಿಜಗುಣ ಶಿವಯೋಗಿಗಳು ಮೊದಲು ''ಜಾಣನು ಲೌಕಿಕ, ಪಾರಮಾರ್ಥಗಳೆರಡನ್ನೂ ಕೂಡಿ

ನಡೆಸುವ ಮಹಾನ್ ಅಂಬಿಗನಾಗಬೇಕೆಂಬುದೇ ಇದರ ಯುಕ್ತಿ, ಕಾರಣ ನಮ್ಮ ಹಿಂದೆ ಹೆಂಡಿರು ಮಕ್ಕಳು, ಅಂತಸ್ತು, ಆಸ್ತಿ, ದ್ರವ್ಯ, ಇವು ಯಾವೂ ಬರುವುದಿಲ್ಲ, ಬರುವುದು ಸಚ್ಚಿದಾನಂದ ಸ್ಥಿತಿಯ ಆನಂದಮಯ ಅದನ್ನೇ ಶರಣರು ''ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು'' ಎಂದು ನಿರೂಪಿಸದ್ದಾರೆ, ಅಂದರೆ ಪ್ರಾಪಂಚಿಕ ಜೀವನದಲ್ಲಿಯೂ ನಾವು ಶಿವಮಯವಾಗಿಬೇಕು. ಅದಕ್ಕೆ ನಿಮ್ಮ ಪರಮಾತ್ಮನ ನಾಮಸ್ಮರಣೆ ದೈವಭಕ್ತಿ, ದೈವಭಯ, ಅಂತಃಕರಣ, ಇಂದ್ರಿಯ ನಿಗ್ರಹ ಸಾಧನೆ ಬೇಕು, ನಿತ್ಯ ಶಿವನಾಮ ಪಠಣವಿರಬೇಕು, ನಾಮಸ್ಮರಣೆಯೇ ಮಂತ್ರಮಯ ವಾಗುವುದು, ಅದನ್ನೇ ಶಂಕರಾಚಾರ್ಯರು ''ಭಜಗೋವಿಂದಂ ಭಜಗೋವಿಂದಂ, ಮೂಢಮತೆ ನಹೀ ನಹೀ ರಕ್ಷತಿ, ಡುಕುರಂಕರಣೆ! ಭಗವದ್ಭಕ್ತಿಯನ್ನು ಕೊಂಡಾಡಿದ್ದಾರೆ.

ವಶಿಷ್ಟ ಆರುಂದತಿಯರ ದಾಂಪತ್ಯ ಆತ್ಮವಿದ್ಯೆಗೆ ಅಡ್ಡಿಯಾಗಲಿಲ್ಲ. ಆದರೆ ತ್ರಿಶಂಕು ನಿರ್ಮಿಸಿದ ವಿಶ್ವಾಮಿತ್ರ ಒಂದು ಕ್ಷಣಕ್ಕಾಗಿ ಮೇನಕೆಯ ಮೋಹಕ್ಕೆ ಒಳಗಾಗಿ ಶಾಕುಂತಲೆಯ ಹುಟ್ಟು ದುಶ್ಯಂತನ ಅಗಲಿಕೆ ಭರತನ ಹುಟ್ಟು, ಇವುಗಳನ್ನು ಹೇಳುವಾಗ ಮಹಾನ್ ಕವಿ ಕಾಳಿದಾಸನ ಹಿಂದೆ ಈ ವಾಸನಾ ಎಂಬ ಆಸೆ ಎಷ್ಟು ಪ್ರಾಪಂಚಿಕದಲ್ಲಿ ಸಿಲುಕಿಸುತ್ತದೆ ಎಂಬುದನ್ನು ವ್ಯಕ್ತಪಡಿಸುತ್ತಾನೆ. ಹಾಗಾದರೆ ಪ್ರಾಪಂಚಿಕದಲ್ಲೂ ಶೋಧನೆ ಅದನ್ನು ಯಾಜ್ಞವಲ್ಕರು, ವ್ಯಾಸರು, ತಮ್ಮ ವೇದ ಉಪನಿಷತ್ತಿನಲ್ಲಿ ಸ್ಪಷ್ಟವಾಗಿ ನಿರೂಪಿಸಿದ್ದಾರೆ.

''ಒಂದು ದುಂಬಿ ನಿತ್ಯ ಹೂವನ್ನು ಹುಡುಕುವಂತೆ ನಾವು ಆ ಶಿವನನ್ನು ಹುಡುಕಬೇಕು. ಹೂ ಅಲ್ಲದೆ ದುಂಬಿಗೆ ಬೇರೆ ಬೇಕಿಲ್ಲ ಹಾಗೆ ಶಿವನಿಂದ ಬಂದ ನಿನಗೆ ಶಿವನನ್ನು ಬಿಟ್ಟು ಬೇರೆ ವಸ್ತುವಿಲ್ಲ, ಆದರಲ್ಲಿ ವಾಸನೆ, ಅಥವಾ ಓಲೈಕೆ ಮತ್ತೊಬ್ಬರ ಆಶ್ರಯ ಸಲ್ಲದು, ನೀನು ನೀನೇ ಆಗಬೇಕು.''

''ಒಬ್ಬ ರಾಜ ಒಬ್ಬ ಶಿಲ್ಪಿಗೆ ಮೂರ್ತಿಗಳನ್ನು ಕೆತ್ತಲು ವಿನಂತಿಸಿದ. ಅತ್ಯಂತ ಸುಂದರ ಶಿಲ್ಪ ಕೆತ್ತಲು ಶಿಲ್ಪಿಗೆ ೨೫ ವರ್ಷ ಹಿಡಿಯಿತು. ಅಮೋಘ ಶಿಲ್ಪ ಜೀವಂತವಾಗಿ ನಿಂತ ಹಾಗಿತ್ತು ಆತನ ಕೆತ್ತನೆ, ಈ ದೇವರ ಮೂರ್ತಿ ಕೆತ್ತಿದ ಶಿಲ್ಪಿಗೆ ರಾಜ ಸನ್ಮಾನಿಸಲು ಬರಹೇಳಿದ. ಆ ಶಿಲ್ಪಿ ಹೇಳಿದ್ದೇನು ಗೊತ್ತೆ ''ದೇವರಮೂರ್ತಿ ಕೆತ್ತಿದ ಬಳಿಕ ನನ್ನ ಕೆಲಸ ಮುಗಿಯಿತು. ಎಂದು ಶಿಲ್ಪಿ ರಾಜಾಜ್ಞೆಯನ್ನು ತಿರಸ್ಕರಿಸಿದ. ರಾಜ ತನ್ನ ತಪ್ಪನ್ನು ಅರಿತುಕೊಂಡ ಕಾರಣ ಶಿಲ್ಪಿ ಕಳಿಸಿದ ನಿವೇದನೆ ಹೀಗಿತ್ತು ''ಹೃದಯವೇ ನನ್ನ ರಾಜ, ಹೃದಯದ ಆಜ್ಞೆ, ನನ್ನ ಹೃದಯವು ಇನ್ನೊಂದು ಕಲ್ಲಿನಲ್ಲಿ ಜೀವಕಳೆ ತುಂಬು ಎನ್ನುತ್ತಿದೆ, ಈ ಕಾರ್ಯ ಬಿಟ್ಟು ನಾನು ಬರಲಾರೆ'' ಎಂದು ಹೇಳಿದಾಗ ಎಂಥ ಉದಾತ್ತ ನಿಲುವು ಆ ಶಿಲ್ಪಿಯದು. ಈ ಸಮಾಜವೇ ಒಂದು ಶಿಲ್ಪ ಅದರಲ್ಲಿ ಆ ಸಮಾಜವನ್ನು ದೈವ ಮೂರ್ತಿಯನ್ನಾಗಿ ಕೆತ್ತುವುದು ಸಮಾಜದ ಪ್ರಜೆಯಾದ ಪ್ರತಿವ್ಯಕ್ತಿಯು ಒಬ್ಬ ಶಿಲ್ಪಿ ಹಾಗಾದರೆ ನಿನ್ನ ಕರ್ತವ್ಯವೇನು? ನಿಮ್ಮ

ಹೃದಯ ರಾಜನಾಗಬೇಕು, ಆ ಹೃದಯದಲ್ಲಿ ಸಮಾಜದಲ್ಲಿರುವ ಪ್ರತಿಯೊಂದು ವ್ಯಕ್ತಿಯ ಮನದಲ್ಲಿ ಕಲ್ಲಿನಲ್ಲಿ ದೈವತ್ವದ ಜೀವಕಳೆ ತುಂಬಬೇಕು ಹಾಗೂ ವೀರಶೈವ ತತ್ವದ ಸಾಮಾಜಿಕ ಜೀವನದಲ್ಲಿ ಪ್ರಾಪಂಚಿಕನಿದ್ದು; ಒಂದು ದೀಪ ಮತ್ತೊಂದು ದೀಪವನ್ನು ಉರಿಸುವಂತೆ ಸಮಾಜದ ಬೆಳವಣಿಗೆಯಲ್ಲಿಯೇ ಶಿವನನ್ನು ಕಾಣಬೇಕು. ಇದನ್ನೇ ಕ್ರೈಸ್ತ, ಮಹಮದ್ ಪೈಗಂಬರರು, ಗುರುನಾನಕರು, ಮಹಾವೀರ ಮೊದಲಾದವರು ಮಾಡಿದರು. ಹಾಗಾದರೆ ಎಲ್ಲಾ ಧರ್ಮ ಒಂದೇ. ಎಲ್ಲವೂ ಸಮಾಜಮುಖಿಯಾಗಿರುವಂತವು ಪ್ರತಿ ಮಾನವನ ಹೃದಯ ಅರಳಿಸುವ ಶಿಲ್ಪಿಯಂತೆ ಪ್ರತಿಕಲ್ಲಿನಲ್ಲೂ ಜೀವಕಳೆ ತುಂಬವ ಕಳಕಳಿಯೇ ಈ ಪ್ರಾಪಂಚಿಕ ಧರ್ಮ. ಅದಕ್ಕೆ ವೈರಾಗ್ಯದಷ್ಟೇ ಪ್ರಾಪಂಚಿಕವೂ ಇದನ್ನು ಸಾಧಿಸಬಲ್ಲುದು ಎಂದು ಹೇಳುವಾಗ ಪ್ರೇಕ್ಷಕ ವೃಂದವೇ ಅವರ ಪ್ರವಚನ ಕೇಳಿ ಮೈ ರೋಮುಗಳು ನಿಂತು ಆಲಿಸುವಷ್ಟು ಆಧ್ಯಾತ್ಮಿಕ ಸ್ಥಿತಿಯನ್ನು ಆಳವಾಗಿ ಬೇರೂರವಂತೆ ಸರಳ ಶೈಲಿಯಲ್ಲಿ ಆಧ್ಯಾತ್ಮಿಕ ಉನ್ನತ ತತ್ವವನ್ನು ನಿರೂಪಿಸುತ್ತಿದ್ದರು.

ಗದುಗಿನ ತೋಂಟದಾರ್ಯ ಮಠದ ಹಿಂದಿನ ಜಗದ್ಗುರುಗಳಾದ ಶಿವಕುಮಾರ ಜಗದ್ಗುರುಗಳು ಇಟಗಿಯವರು ಅವರ ಮನೆತನದವರೇ ಆದ ಕಲ್ಲಯ್ಯ ಹಿರೇಮಠರು ಮೊನ್ನೆ ಪೋನಿನಲ್ಲಿ ಮಾತನಾಡುತ್ತಾ ಶಾಸ್ತ್ರಿಗಳ ಬಗೆಗೆ ಹೇಳುತ್ತಾ ಅವರು ಕಂಡ ಘಟನೆಗಳನ್ನು ನೆನೆಪಿಸಿದರು. ಡಂಬಳ, ಹಾಗೂ ಮುಂಡರಗಿಯಲ್ಲಿ ಶಾಸ್ತ್ರಿಗಳು ಎಂದೂ ತತ್ವದ ವಿರೋಧ ಸಹಿಸುತ್ತಿರಲಿಲ್ಲ. ಅಂದು ತಾಳ್ಮೆಯ ಪ್ರತಿರೂಪವೇ ಆಗಿದ್ದರು ತತ್ವ ವಿರೋಧಕರಲ್ಲಿ ನಿಷ್ಠುರ, ಕಠೋರ ಖಂಡನೆ ಅವರದಾಗಿತ್ತು. ಮನಸ್ಚಾಂಚಲ್ಯ ಸಹಿಸುತ್ತಿರಲಿಲ್ಲ. ಎಂದೂ ಶ್ರೀಮಂತರಿಗೆ ಸೊಪ್ಪು ಹಾಕಲಿಲ್ಲ. ತಮಗೆ ಹಣ ನೀಡ ಬಂದವನು. ಚಾರಿತ್ರ್ಯ ಹೀನನಾಗಿದ್ದರೆ ಅವನನ್ನು ಅವನ ಹಣವನ್ನು ಮೈಲಿ ದೂರ ಇಡುತ್ತಿದ್ದರಂತೆ. ಆಚಾರ ವಿಚಾರಗಳಲ್ಲಿ ಸ್ವಾಮಿಗಳಿಗೂ ಮೀರಿ ಮಡಿ ಹುಡಿ ಆಚರಿಸುತ್ತಿದ್ದರಂತೆ. ಪ್ರತಿನಿಮಿಷ ಸಿದ್ಧಲಿಂಗನೆಂದೇ ಉವಾಚ ಮಾಡುತ್ತಿದ್ದರು ಎಡೆಯೂರಲ್ಲಿ ಸಿದ್ಧಲಿಂಗನು ನಿತ್ಯ ಸಂಚರಿಸುತ್ತಾನೆ. ರಾತ್ರಿ ಆತನ ಹಾವುಗೆಯ ಶಬ್ದ ಕೇಳುತ್ತಿದೆ ಎನ್ನುತ್ತಿದ್ದರಂತೆ. ಒಮ್ಮೆ ಎಡೆಯೂರ ಮಠ ಸೇವಕ ಮಠದ ಪೌಳಿಯಲ್ಲಿ ಮಲಗಿದ್ದನಂತೆ. ಬೆಳಗಿನ ಜಾವದಲ್ಲಿ ಆತನ ಕನಸಿನಲ್ಲಿ ಸಿದ್ಧಲಿಂಗನ ದರ್ಶನ ಆಯಿತಂತೆ. ಆತನಿಗೆ ಸಿದ್ಧಲಿಂಗನೇ ದುಂಬಿಯ ಹೂವನ್ನು ನೀಡಿ ತಮ್ಮ ದರ್ಶನ ಆಗಿದ್ದನ್ನು ಯಾರಿಗೂ ಹೇಳಬಾರದೆಂದು. ಅಪಘಾತ ಹೇಳಿದರೆ ಆತ ಮೂಕನಾಗುವನೆಂದು ಹೇಳಿದ್ದರಂತೆ.ಬೆಳಗಾದಾಗ ಆತ ಬೇಗ ಹೇಳಲಾರದಾದಾಗ ಆತನನ್ನು ಎಬ್ಬಿಸಲು ಬಂದ ಗೆಳೆಯರು ಹಾಗೂ ಅರ್ಚಕರಿಗೆ ತಡೆಯಲಾರದೇ ತನಗೆ ಸಿದ್ಧಲಿಂಗನ ದರ್ಶನ ಆಗಿದ್ದಾಗಿ ಹೇಳಿದನಂತೆ ಕೈಬಿಚ್ಚಿ ನೋಡಿದಾಗ ಎಡೆಯೂರ ಸಿದ್ಧಲಿಂಗ ಆಶೀರ್ವದಿಸಿದ ತುಂಬಿ ಹೂ ಆತನ ಹಸ್ತದಲ್ಲೇ ಇದ್ದವಂತೆ. ಮುಂದೆ ೧೦ ವರ್ಷ ಆತ ಮೂಕನಾಗಿದ್ದ ಆತನನ್ನು ಸ್ವತಃ

ನಾನೇ ಕಂಡಿದ್ದೇನೆ, ಅಂದರೆ ಎಡೆಯೂರ ಮಠದಲ್ಲಿ ಬರೀ ಗದ್ದಿಗೆಯಿಲ್ಲ ಸಾಕ್ಷಾತ್ ಸಿದ್ದಲಿಂಗನೇ ಇದ್ದಾನೆಂದು ಶಾಸ್ತ್ರಿಗಳ ನಂಬಿಕೆ.

ಶ್ರೀ ಕಲ್ಲಯ್ಯನವರು ಹೇಳುವಂತೆ ಪುನರ್ಜನ್ಮದಲ್ಲಿ ಸಿದ್ಧಲಿಂಗಶಾಸ್ತ್ರಿಗಳಿಗೆ ನಂಬಿಕೆ ಬಹಳವಿತ್ತಂತೆ ಹರ್ಲಾಪುರದ ಗೌಡ ಆಗರ್ಭ ಶ್ರೀಮಂತ ಆಸ್ತಿ ಬಿಟ್ಟು ಸಾಯಲು ಮನಸ್ಸಿಲ್ಲ ಆದರೆ ಜಾತಸ್ಯ ಮರಣಂ ದ್ರುವಂ, ಸಾವು ಕಟ್ಟಿಟ್ಟ ಬುತ್ತಿ ಎಂಬಂತೆ ಗೌಡ ಅಸುನೀಗಿದ. ಮುಂದೆ ಆ ಮನೆಯಲ್ಲಿಯೇ ನಾಯಿಯಾಗಿ ಹುಟ್ಟಿದ. ಒಮ್ಮೆ ಆತನ ಮನೆಗೆ ಕಳ್ಳರು ಯಜಮಾನಿ ಮನೆಯ ಆವರಣದಲ್ಲಿ ಮಲಗಿದ್ದನ್ನು ಕಂಡ ನಾಯಿ ಎಚ್ಚರಿಸಿದಾಗ ಗೌಡತಿ ಕೂಗಾಡಿ ಊರಿನ ಜನರಿಗೆ ಎಬ್ಬಿಸಿದಳಂತೆ ಮನೆಯ ಕನ್ನ ಹಾಕಿದ ಕಳ್ಳರು ಸೇರಿದ ಜನಕ್ಕೆ ಅಂಜಿ ಸಿಕ್ಕಿಹಾಕಿಕೊಂಡಂತೆ. ಮನೆಯ ಒಂದು ಅಗಳು ಕಳುವಾಗಲಿಲ್ಲ, ಮುಂದೆ ಆ ನಾಯಿ ಆಕೆಯ ಕನಸಿನಲ್ಲಿ ಹೋಗಿ ಸತ್ತ ಅವಳ ಗಂಡ ನಾನೇ ಎಂದು ಹೇಳಿತಂತೆ. ಹೀಗೆ ಇಂಥ ಅನೇಕ ಘಟನೆಗಳು ಶಾಸ್ತ್ರಿಗಳದು.

ಸಿದ್ಧಲಿಂಗಶಾಸ್ತ್ರಿಗಳು ಲಿಂಗೈಕ್ಯರಾದ ಮೊದಲನೇ ವರ್ಷದ ಪುಣ್ಯತಿಥಿ ೧೯೯೫ ರಲ್ಲಿ ಪುಣ್ಯಸ್ಮರಣೆ ಹಮ್ಮಿಕೊಂಡಿತ್ತು ಅವರ ಸಾವಿರಾರು ಶಿಷ್ಯಂದಿರು ನೆರೆದಿದ್ದರು, ದಿನಾಂಕ: ೩೦–೧೦–೯೫ ರ ಗದುಗಿನಲ್ಲಿ ಸಿದ್ದಲಿಂಗಶಾಸ್ತ್ರಿಗಳ ಪುಣ್ಯಸ್ಮರಣೆ ಸಂದರ್ಭದಲ್ಲಿ ಈಗಿನ ಜಗುದ್ಗುರುಗಳಾದ ಡಾ|| ಸಿದ್ದಲಿಂಗಮಹಾಸ್ವಾಮಿಗಳು ''ಮರೆಯದ ಗುರು ಸಾರ್ವಭೌಮ'' ಪುಸ್ತಕ ಬಿಡುಗಡೆ ಮಾಡಿದರು.

ಮೊನ್ನೆ ಕನ್ನಡ ರಾಜ್ಯೋತ್ಸವ ಪ್ರಶಸ್ತಿ ಹಾಗೂ ಹಂಪಿ ಕನ್ನಡ ನಾಡೋಜ ಪ್ರಶಸ್ತಿ ಪಡೆದ ವಿ.ಟಿ. ಕಾಳೇ ಕರ್ನಾಟಕದ ಪ್ರಸಿದ್ಧ ಚಿತ್ರಕಲಾ ಕಲಾವಿದರು. ತಮ್ಮ ಭಾಷಣದಲ್ಲಿ ತಮ್ಮ ಚಿತ್ರಕಲಾ ಕುಂಚದ, ಬಣ್ಣದ ಕಲಾನಿಪುಣತೆಗೆ ಹಾಗೂ ಕಲೆಯಲ್ಲಿ ಭಾವ ಪ್ರಧಾನವಾಗುವ ಮಾರ್ಮಿಕ ಬದಲಾವಣೆ ಪ್ರತಿ ಚಿತ್ರಗಳ ಹಿಂಬದಿಯಲ್ಲಿಯೂ ಸಹ ಮೂಲ ಚಿತ್ರದ ಭಾವನೆಗೆ ತಕ್ಕಂತೆ ಕಲ್ಪನೆಯ ನಿರೂಪಣೆ ಮಾಡಿ ತಿದ್ದಿ ತೀಡಿದ ಗುರುಗಳೇ ಸಿದ್ದಲಿಂಗಶಾಸ್ತ್ರಿಗಳು ಎಂದು ಮನತುಂಬಿ ದಿನಾಂಕ ೨–೧೦–೨೦೧೦ ರಂದು ಹೊಗಳಿದರು. ಅವರು ಗುರುಗಳಾಗಿ ಹಾಗೂ ತಂದೆಯಾಗಿ ಸಲಹೆಗಾರರಾಗಿ ನಿಂತುದಕ್ಕೆ ಶ್ರೀ ವಿ.ಟಿ. ಕಾಳೇ ಅವರು ಈ ನಾಡೋಜ ಪ್ರಶಸ್ತಿ ಪಡೆಯುವುದಕ್ಕೆ ಕಾರಣವಾಯಿತು. ಆ ಸಭೆಯಲ್ಲಿ ನಾನೂ ಇದ್ದೆ ಅಂದರು ಚಿತ್ರಕಲೆಗಳಲ್ಲಿಯೂ ಸಿದ್ಧಲಿಂಗಶಾಸ್ತ್ರಿಗಳಿಗೆ ಎಷ್ಟು ಆಳವಾದ ಅಧ್ಯಯನವಿತ್ತು ಎಂಬುದುಕ್ಕೆ ಮನವರಿಕೆ.

ಬೆಳಗಿನಲ್ಲಿ ಬೆಳಗಾಗಿ ಅನುಭವ ಮಂಟಪದ ಪ್ರಖಾಂಡ ಸ್ಥಿತಿ ಏರಿ, ಪ್ರಭುದೇವರ ಅಪ್ಪಣೆಯಂತೆ, ಶೂನ್ಯ ಸಂಪಾದನೆ ಗೆದ್ದು ಬಂದ ಧೀಮಂತ ಶರಣ ಬಸವಾದಿಗಳ, ಎಡೆಯೂರ ಸಿದ್ಧಲಿಂಗನ ಸೇವೆಗೈಯುತ್ತಾ ಪುಣ್ಯದಂತೆ ಬಂದ

ಜ್ಞಾನದಂತೆ ಇದ್ದು ಉಪಮಾತೀತರಾಗಿ ಉರಿಲಿಂಗಪೆದ್ದಿ ವಚನದಂತೆ ತಮ್ಮ ಸರ್ವಸ್ವವನ್ನು ಎಡೆಯೂರ ಗದ್ದಿಗೆಗಳ ಸಿದ್ಧಲಿಂಗನ ಪಾದಕ್ಕೆ ಮುಡಿಪಿಟ್ಟು ಗದುಗಿನ ತೋಟದಾರ್ಯ ಮಠದ ಮೊಮ್ಮಗನಾಗಿ ತನ್ನ ಜ್ಞಾನ ಸಾಗರದಿಂದ ಸಾವಿರಾರು ಶಿಷ್ಯಂದಿರನ್ನು ಸೃಷ್ಟಿಸಿ ೭೦೧ ವಿರಕ್ತರಂತೆ ಶಿವಾನುಭವ ಸಾರವನ್ನು ಸಾರಲು ಪ್ರೇರೇಪಿಸಿದ ಚೇತನ ಆ ಸಿದ್ದಲಿಂಗನ ಪಾದದಲ್ಲಿ ಅಸ್ತಂಗತನಾದ. ಆದರೆ ಆತನು ಬೆಳಗನ ಬೆಳಕು ನಿತ್ಯ ಚೇತನವಾಯಿತು, ಗದುಗಿನ ಮಠದ ಮೀಸಲು ಭಕ್ತರಾಗೇ ಬೆಳೆದ ಸಿದ್ಧಲಿಂಗಶಾಸ್ತ್ರಿಗಳು ಇಲ್ಲಿಯೂ ಸಲ್ಲಿದ್ದರು, ಅಲ್ಲಿಯೂ ಸಲ್ಲಿದರು. ಶರಣು ಶರಣಾರ್ಥಿ.

- ಶುಭಂ -

♦♦♦♦♦

# ನಮ್ಮ ಮಠ

ಲೇಖಕರು :
ಸಿದ್ಧಲಿಂಗಯ್ಯ ಹೊಸಮಠ

ಪ್ರಕಾಶಕರು
ವೀರಶೈವ ಪ್ರಗತಿಶೀಲ ಸಂಘ, ಗದಗ
ಶ್ರೀ ಜಗದ್ಗುರು ತೋಂಟದಾರ್ಯಮಠ, ಡಂಬಳ-ಗದಗ

ನಮ್ಮ ಮಠ : ಲೇಖಕರು : ಸಿದ್ಧಲಿಂಗಯ್ಯ ಹೊಸಮಠ ಪ್ರಕಾಶಕರು : ವೀರಶೈವ ಪ್ರಗತಿಶೀಲ ಸಂಘ, ಗದಗ ಶ್ರೀ ಜಗದ್ಗುರು ತೋಂಟದಾರ್ಯಮಠ, ಡಂಬಳ–ಗದಗ

ಮೊದಲನೇ ಮುದ್ರಣ : ೧೯೭೨

ಪುಟಗಳು : iii + ೩೧ = ೩೪

ಬೆಲೆ : ರೂ. ೧.೫೦ ಪೈಸೆ

ಮುದ್ರಕರು :

ಪ್ರಭು ಗ್ರಾಫಿಕ್ಸ್, ಗದಗ

*

## ದಾತೃಗಳ ಸಂಕ್ಷಿಪ್ತ ಪರಿಚಯ

**ಶಂಕರಯ್ಯ ಗುರುಸಿದ್ಧಯ್ಯಾ ಬಾಗೇವಾಡಿಮಠ :**

ಗದುಗಿನ ಧಾನ್ಯದ ಗಣ್ಯ ವರ್ತಕರಲ್ಲಿ ಪ್ರಸಿದ್ಧಿ ಪಡೆದ ಶ್ರೀ ಶಂಕರಯ್ಯ ಬಾಗೇವಾಡಿಮಠ ಅವರು ಒಬ್ಬರಾಗಿದ್ದಾರೆ. ತ್ಯಾಗದಲ್ಲಿ ಆನಂದ ಪಡುವ, ಬಡತನದ ಅನುಭವದೊಡನೆ ಬಾಳಿಬೆಳಗಿದ ಚಿಕ್ಕವಯಸ್ಸಿನ ಚೊಕ್ಕಟ ವ್ಯಕ್ತಿಗಳಾದ ಇವರು ವಿಜಾಪೂರ ಜಿಲ್ಲೆಯ ಬಾಗೇವಾಡಿಯಲ್ಲಿ ಜನಿಸಿದರು. ಬಡತನದಲ್ಲಿ ಜನಿಸಿದ ಇವರ ತಂದೆಯವರು ಜಂಗಮ ಕಾಯಕದಿಂದ ಜೀವನ ಸಾಗಿಸಿದವರು. ಹೆಚ್ಚು ವಿದ್ಯಾಭ್ಯಾಸ ಮಾಡಬೇಕೆಂದು ಮನಸ್ಸು ಹಾತೊರೆಯುತ್ತಿದ್ದರೂ ಆರನೆಯ ಇಯತ್ತೆ ಕಲಿಯುತ್ತಿರುವಾಗ ಬಡತನದ ಪರಿಸ್ಥಿತಿ ಹೆಚ್ಚಾಗಿ ಹದಿನಾಲ್ಕನೆಯ ವಯಸ್ಸಿಗೆ ಅಭ್ಯಾಸವನ್ನು ನಿಲ್ಲಿಸಿ ಅಂಗಡಿಯಲ್ಲಿ ನೌಕರಿಗೆ ಸೇರಬೇಕಾಯಿತು. ವಾರಕ್ಕೆ ಎರಡು ರೂಪಾಯಿಗಳ ಸಂಪಾದನೆಯನ್ನು ಅವಲಂಬಿಸಿ ಪ್ರಾಮಾಣಿಕತೆಯಿಂದ ದುಡಿದು ವ್ಯಾಪಾರಿಗಳ ಪ್ರೀತಿ–ವಿಶ್ವಾಸಗಳಿಗೆ ಪಾತ್ರರಾಗಿ ವಿಶ್ವಾಸದ ಭಂಡವಲದೊಂದಿಗೆ ಕಳೆದ ನಾಲ್ಕು ವರ್ಷಗಳಿಂದ ಪಾಲಿನಿಂದ ಧಾನ್ಯದ ವ್ಯವಹಾರವನ್ನಾರಂಭಿಸಿದರು. ಪ್ರಾಮಾಣಿಕ ವ್ಯವಹಾರ, ಮುದ್ದಾದ ಮುಖ ಮುದ್ರೆ, ಆತ್ಮೀಯವಾದ ಮಾತುಗಾರಿಕೆ, ನ್ಯಾಯನಿಷ್ಠುರವಾದ ಸಹಜೀವನಗಳಿಂದಾಗಿ ಆ ದಯಾಘನನು ಇವರ ವ್ಯಾಪಾರದಲ್ಲಿ ಸಿರಿವಂತಿಕೆಯನ್ನು ದಯಪಾಲಿಸಿದ್ದಾನೆ.

ಮೂವತ್ತಾರು ವಯಸ್ಸಿನ ಶ್ರೀ ಶಂಕ್ರಯ್ಯನವರದು ದಾನ, ಧರ್ಮ ಕೊಡುವದರಲ್ಲಿ ಮೇಲುಗೈ. ಧಾರ್ಮಿಕ ಕಾರ್ಯದಲ್ಲಿ ಅವರು ದಾನ, ಧರ್ಮ ಮಾಡದೆ ಇಲ್ಲದಿಲ್ಲ. ಅನೇಕ ಪ್ರಸಂಗಗಳಲ್ಲಿ ಕೈಲಾದಷ್ಟು ಸಹಾಯ ಮಾಡಿ ಗುರುಕೃಪೆಗೆ ಪಾತ್ರರಾಗಿದ್ದಾರೆ. ಇವರಿಗೆ ಒಬ್ಬನೇ ಸೋದರನಿದ್ದು ಅವನೂ ಸಹ ಕಾರ್ಯದಲ್ಲಿ ಸಮಭಾಗಿಯಾಗಿದ್ದು, ಅಣ್ಣನ ಆದೇಶದಂತೆ ನಡೆಯುವ ಅನುಭಕ್ತನಾಗಿದ್ದಾನೆ.

ವೀರಶೈವ ಪ್ರಗತಿಶೀಲ ಯುವಕಸಂಘದ ಸದಸ್ಯರಾದ ಇವರು ಸಂಘದ ಕಾರ್ಯಕ್ರಮಗಳಲ್ಲಿ ಆಸ್ಥೆಯಿಂದ ಭಾಗವಹಿಸಿ ಅನೇಕ ರೀತಿಯಿಂದ ಧನಸಹಾಯ ಮಾಡಿದ್ದಾರೆ. ಸಂಘದ ಆಶ್ರಯದಲ್ಲಿ ಶಿವಾನುಭವ ಕಾರ್ಯಕ್ರಮವನ್ನು ಆರಂಭಿಸಿದ ಮೇಲೆ ಪ್ರಥಮ ಪುಷ್ಪವಾದ ''ನಮ್ಮ ಮಠ'' ಈ ಪುಸ್ತಕ ಪ್ರಕಾಶನದ ಸಂಪೂರ್ಣ ವೆಚ್ಚವನ್ನು ವಹಿಸಿಕೊಂಡಿದ್ದಾರೆ. ಧರ್ಮಿಷ್ಟರೂ ಪ್ರಾಮಾಣಿಕ ವ್ಯಾಪಾರಿಗಳೂ ಆದ ಶ್ರೀಯುತರಿಗೆ ಎಡೆಯೂರ ಶ್ರೀ ಸಿದ್ಧಲಿಂಗೇಶ್ವರರು ಪುತ್ರಸಂತಾನವನ್ನು ದಯಪಾಲಿಸಿ ಜೀವನ ಕೃತಾರ್ಥಗೊಳಿಸಲೆಂದು ಹಾರೈಸಿ ದಾತೃಗಳಿಗೆ ಕೃತಜ್ಞತೆಗಳನ್ನು ಅರ್ಪಿಸುವೆವು.

■■

*

# ನಮ್ಮ ಮಠ

**ಶ್ರೀ ನಿರಂಜನ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಗದಗ ಮತ್ತು ಡಂಬಳ :**

ಗದುಗಿನ ಮಧ್ಯದಲ್ಲಿ ಹೃದಯ ಸ್ಥಾನದಂತೆ ಕಂಗೊಳಿಸುವ ಶ್ರೀ ನಿರಂಜನ ಜಗದ್ಗುರು ತೋಂಟದಾರ್ಯಮಠವು ಎಲ್ಲ ಭಕ್ತರಿಂದ ''ನಮ್ಮ ಮಠ'' ಎಂದು ಕರೆಯಲ್ಪಡುತ್ತಿರುವದು, ಮಠದ ವಿಷಯದಲ್ಲಿರುವ ಅವರ ಭಕ್ತಿ, ಗೌರವಗಳ ಸಂಕೇತವಾಗಿದೆ.

ಅಷ್ಟಾವರಣಾಂತರ್ಗತ ''ಜಂಗಮ'' ತತ್ತ್ವಕ್ಕೆ ಅಧಿಷ್ಠಾನನಾಗಿ ತನ್ನ ಅವತಾರ ಕಾಲದಿಂದ ಇಂದಿನವರೆಗೆ ಅನೇಕ ಮಹಾಕವಿಗಳಿಂದ ''ನಿರಂಜನ ಲಿಂಗದ ಅಪರಾವತಾರ'', ''ನಿರಂಜನ ಜಗದ್ಗುರು'', ''ಚರಕುಲ ಸಾರ್ವಭೌಮ'', ''ಷಟ್‌ಸ್ಥಲ ಘನ ಚಕ್ರವರ್ತಿ'' ಎಂದು ಮುಂತಾಗಿ ಕೀರ್ತಿ ಪಡೆದ ಶ್ರೀ ತೋಂಟದ ಸಿದ್ಧಲಿಂಗೇಶ್ವರನ ದಿವ್ಯಪೀಠವೇ ಈ ''ನಮ್ಮ ಮಠ''.

**ಪ್ರಾಚೀನ ಪರಂಪರೆ :**

ಮಾನವನಲ್ಲಿ ಶಾಂತಿ ನೆಮ್ಮದಿಗಳು ಉಂಟಾಗಲು ಅವನು ಆಚರಿಸುವ 'ಧರ್ಮವೇ' ಕಾರಣವಾಗಿದೆ. ಧರ್ಮಕ್ಕೆ ಗ್ಲಾನಿಯಾದಾಗಲೆಲ್ಲ, ಕಾರಣಿಕ ಪುರುಷರೊಬ್ಬರು ಉದಯವಾಗಿ ಧರ್ಮದ ಪುನರುತ್ಥಾನ ಮಾಡುವದುಂಟು. ಕ್ರಿ.ಶ. ಹನ್ನೆರಡನೆಯ ಶತಮಾನದಲ್ಲಿ ಇಂತಹ ಒಂದು ಮಹಾಕಾರ್ಯ ಬಸವಾದಿ ಪ್ರಮಥರಿಂದ ನಡೆದುದುಂಟು.

ಕ್ರಾಂತಿಯಲ್ಲಿ ಕೊನೆಗೊಂಡ ಈ ಕಾರ್ಯ ಶತಮಾನಗಳ ಕಾಲದವರೆಗೆ ಸ್ಥಗಿತಗೊಂಡಾಗ ಅದನ್ನು ಪುನಶ್ಚೇತನಗೊಳಿಸಲು ಮತ್ತೊಬ್ಬ ಮಹಾನುಭಾವಿಯ ಅವತಾರವಾಯಿತು. ಆತನೇ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರ.

ಹರದನಹಳ್ಳಿಯ ಗೋಸಲ ಚನ್ನಬಸವ ಮಹಾಸ್ವಾಮಿಗಳವರ ತರುವಾಯ ಅವರ ನಿರಂಜನ ಜಗದ್ಗುರು ಪೀಠವನ್ನೇರಿದ ಶ್ರೀ ಸಿದ್ಧಲಿಂಗೇಶ ತನ್ನ ಅನುಚರರಾದ ಏಳುನೂರು ವಿರತರೊಡನೆ ಆಸೇತು ಹಿಮಾಚಲ ಪರ್ಯಂತ ಸಂಚರಿಸಿ ತನ್ನ ಪ್ರಖರವಾದ ತಪಃಪ್ರಭಾವ ಹಾಗೂ ಪ್ರಕಾಂಡ ಪಾಂಡಿತ್ಯಗಳಿಂದ, ಆಗ ಕಳಾಹೀನವಾಗಿದ್ದ ಶಿವಧರ್ಮವನ್ನು ಪುನಃ ಉಜ್ವಲಗೊಳಿಸಿ ದ್ವಿತೀಯ ಅಲ್ಲಮಪ್ರಭುವೆಂದು ಪ್ರಖ್ಯಾತನಾದ.

ಭಕ್ತ ನಂಬಿಯಣ್ಣನ ಭಕ್ತಿಗೆ ಮೆಚ್ಚಿ ತುಮಕೂರು ಜಿಲ್ಲೆಯ ನಾಗಿಣೀತೀರದ ''ಕಗ್ಗೆರೆ ಕ್ಷೇತ್ರದ ಹೂದೋಟದ''ಲ್ಲಿ ಬಹುಕಾಲ ಲಿಂಗಾಂಗಯೋಗದೊಳಗೆ ಮೈಮರೆತು ಹುತ್ತಿನ ಪವಾಡ ಮೆರೆಯುದುದರ ಮೂಲಕ ಶ್ರೀಸಿದ್ಧಲಿಂಗೇಶನಿಗೆ ಅಂದಿನಿಂದ ''ತೋಂಟದಾರ್ಯ''ನೆಂಬ ಅಭಿದಾನ ಪ್ರಾಪ್ತವಾಯಿತು. ಮುಂದೆ ಈ ನಿರಂಜನ ಜಗದ್ಗುರು ಪೀಠವನ್ನಲಂಕರಿಸಿದ ಎಲ್ಲ ಶ್ರೀಗಳಿಗೂ ''ತೋಂಟದಾರ್ಯ'' ರೆಂಬ ಅಭಿದಾನವೇ ಮುಂದುವರಿಯುತ್ತ ಬಂದಿತು.

ಅವತಾರ ಸಮಾಪ್ತಿಯ ಕಾಲಕ್ಕೆ ಎಡೆಯೂರಿಗೆ ಆಗಮಿಸಿದ ಶ್ರೀ ಸಿದ್ಧಲಿಂಗೇಶ ''ಷಟ್‌ಸ್ಥಲಜ್ಞಾನ ಸಾರಾಮೃತ''ವೆಂಬ ವಚನಶಾಸ್ತ್ರ ಗ್ರಂಥವನ್ನು ರಚಿಸಿ, ಬೋಳಬಸವ ಮುಂತಾದ ತನ್ನ ಅಸಂಖ್ಯಾತ ಶಿಷ್ಯರಿಗೆ ಷಟ್‌ಸ್ಥಲೋಪದೇಶಗೈದು ತಮ್ಮ ಪಾದಪದ್ಮಾರಾಧಕರಾದ ಚನ್ನವೀರಪ್ಪ ಒಡೆಯರಿಂದ ಕಟ್ಟಿಸಲಾದ ಶ್ರೀ ಮಠದಲ್ಲಿ ಶಿವಯೋಗ ಸಮಾಧಿಯನ್ನು ಹೊಂದಿದರು. ಶಿವಯೋಗಿಯ ಸನ್ನಿಧಾನದಿಂದ ''ಎಡೆಯೂರು'' ಜಾಗೃತ ಕ್ಷೇತ್ರವಾಯಿತಲ್ಲದೆ ಆಶ್ರಿತ ಭಕ್ತರಿಗೆ ಸುರಧೇನುವಾಗಿ ಪರಿಣಮಿಸಿತು.

ಶ್ರೀ ಸಿದ್ಧಲಿಂಗೇಶನ ತರುವಾಯ ಪೀಠವನ್ನಲಂಕರಿಸಿದ ಶ್ರೀ ಬೋಳಬಸವ ಮಹಾಸ್ವಾಮಿಗಳು ಅನೇಕ ರೀತಿಯಲ್ಲಿ ಭಕ್ತೋದ್ಧಾರಗೈದು 'ಮದ್ದೂರ' (ಮದ್ದಗಿರಿ)ಲ್ಲಿ ಸಮಾಧಿಸ್ಥರಾದರು. ಶ್ರೀ ಬೋಳಬಸವ ಮಹಾಸ್ವಾಮಿಗಳ ತರುವಾಯ 'ಗೂಳೂರ ಸಿದ್ಧ ವೀರೇಶ್ವರ ಮಹಾಸ್ವಾಮಿಗಳು ಗುರುಗಳಿಂದ ಪಡೆದ ಉಪದೇಶದ ಫಲವಾಗಿ ''ಶೂನ್ಯ ಸಂಪಾದನೆ''ಯಂತಹ ಪ್ರಖ್ಯಾತ ಗ್ರಂಥವನ್ನು ರಚಿಸಿ 'ಗೂಳೂರ' ಗ್ರಾಮದಲ್ಲಿ ಸಮಾಧಿಸ್ಥರಾದರು.

ಗೂಳೂರ ಶ್ರೀಸಿದ್ಧವೀರೇಶ್ವರ ಮಹಾಸ್ವಾಮಿಗಳವರ ತರುವಾಯ ಪೀಠವನ್ನಲಂಕರಿಸಿದ ಶ್ರೀ ಉದ್ಧನಾರ್ಯ ಮಹಾಸ್ವಾಮಿಗಳು ಕನ್ನಡ ನಾಡಿನಲ್ಲಿ ಅಷ್ಟೇ ಅಲ್ಲದೆ, ತಮಿಳು ದೇಶದ ತಿರುವಣ್ಣಾಮಲೆಯವರೆಗೂ ಶಿಷ್ಯರೊಡನೆ ಸಂಚರಿಸಿ ಸ್ವಮತ ಸಿದ್ಧಾಂತವನ್ನು ಪ್ರಚುರಗೊಳಿಸಿ, ಭದ್ರರಾಜಪುರದಲ್ಲಿ ಸಮಾಧಿಸ್ಥರಾದರು.

ಶ್ರೀ ಉದ್ಧನಾರ್ಯ ಮಹಾಸ್ವಾಮಿಗಳವರ ತರುವಾಯ ಪೀಠವನ್ನಲಂಕರಿಸಿದ ಹಿರೇಹಡಗಲಿಯ ಶ್ರೀ ಹರಿಹರ ಮಹಾಸ್ವಾಮಿಗಳು ಪರಾಜಂಗಮ ಮೂರ್ತಿಯೆಂದು ಪ್ರಖ್ಯಾತರಾಗಿ ಹಿರೇಹಡಗಲಿಯಲ್ಲಿಯೇ ಸಮಾಧಿಸ್ಥರಾದರು.

ಶ್ರೀ ಹರಿಹರ ಮಹಾಸ್ವಾಮಿಗಳವರ ತರುವಾಯ ಪೀಠವನ್ನಲಂಕರಿಸಿದ ಶ್ರೀ ಭಿಕ್ಷುಕದ ಬಸವಲಿಂಗ ಮಹಾಸ್ವಾಮಿಗಳು ಅಪ್ರತಿಮ ವೈರಾಗ್ಯಶೀಲರಾಗಿ ಶಿಷ್ಯೋದ್ಧಾರ ಕಾರ್ಯಗೈದು ರುದ್ದೂರಲ್ಲಿ ಸಮಾಧಿಸ್ಥರಾದರು.

ಶ್ರೀ ಭಿಕ್ಷುಕದ ಬಸವಲಿಂಗ ಮಹಾಸ್ವಾಮಿಗಳ ಬಳಿಕ ಪೀಠವನ್ನಲಂಕರಿಸಿದ ಶ್ರೀಕಟ್ಟಿಗೆಹಳ್ಳಿ ರಾಚೋಟಿಮಹಾಸ್ವಾಮಿಗಳು ಅತ್ಯಂತ ಶಾಪಾನುಗ್ರಹ ಸಮರ್ಥರಿದ್ದುದರಿಂದ, ಅನೇಕ ಸಂಸ್ಥಾನಿಕರು ಶ್ರೀಗಳಿಗೆ ದಾನದತ್ತಿಗಳನ್ನು ಸಮರ್ಪಿಸಿ ಧನ್ಯಾತ್ಮರಾದರು. ಆ ವಿಷಯವಾಗಿ ಕಾಗದ ಪತ್ರಗಳು ಈಗಲೂ ಗದಗ ಸಂಸ್ಥಾನ ಮಠದ ವಶದಲ್ಲಿವೆ.

**ನಮ್ಮ ಮಠದ ಘನತೆ ಗೌರವ :**

ತಮ್ಮ ಹಿಂದಿನ ಗುರು ಪರಂಪರೆಯಲ್ಲಿ ಶಿವಾನುಭವ ಚರಮೂರ್ತಿಗಳಾಗಿ, ಅಪಾರ ಶಿವಯೋಗ ಸಾಮರ್ಥ್ಯವನ್ನು ಹೊಂದಿದ್ದ ಶ್ರೀ ಕರಿಬಸವ ಶಿವಯೋಗಿಗಳವರ ಗದ್ದುಗೆ ಗದುಗಿನಲ್ಲಿಯೇ ಇದ್ದುದರಿಂದ, ಆ ಗದ್ದುಗೆಯ ಪ್ರಭಾವದಿಂದ ಅಲ್ಲಿ ವಿಶಾಲವಾದ ಶಿಲಾಮಂಟಪವು ಬಹುಕಾಲದ ಹಿಂದೆಯೇ ನಿರ್ಮಾಣವಾಗಿರುವದೆಂದೂ ಸಹ ತಿಳಿದು ಬಂದದ್ದರಿಂದ, ಆ ತಮ್ಮ ಮಠವನ್ನು ಮತ್ತು ಅಲ್ಲಿಯ ತಮ್ಮ ಮಠದ ಭಕ್ತರನ್ನು ನೋಡಿ ಬಂದರಾಯಿತೆಂದು ಕಟ್ಟಿಗೆಹಳ್ಳಿ ಜಗದ್ಗುರು ರಾಚೋಟಿ ಮಹಾಸ್ವಾಮಿಗಳು ಗದುಗಿಗೂ ಬಂದು ಹೋದರು. ಆಗ ಅಲ್ಲಿಯ ಮಠದ ನಿಷ್ಠಾವಂತ ಭಕ್ತರಾದ ಶ್ರೀ ಮಾನ್ವಿಯವರೇ ಮುಂತಾದವರು ಅನೇಕ ದಾನ ದತ್ತಿಗಳನ್ನು ಕೊಟ್ಟು ಕೃತಾರ್ಥರಾದರು.

ನಿರಂಜನ ಜಗದ್ಗುರು ತೋಂಟದಾರ್ಯ ಪೀಠದ ಶಿವಾನುಭವ ಚರವರ್ಯರಾದ ಶ್ರೀ ಕರಿಬಸವ ಶಿವಯೋಗಿಗಳು ತಮ್ಮ ಜೀವಿತ ಕಾಲದಲ್ಲಿ ಹಿಮಾಲಯದ ಗುಹೆಗಳಲ್ಲಿ ಬಹುಕಾಲ ಅನುಷ್ಠಾನ ಗೈದು ಕಾಶೀಮಾರ್ಗವಾಗಿ ಗದುಗಿಗೆ ಬಂದ ಕಾರಣ, ಅವರಿಗೆ ಕಾಶೀ ಕರಿಬಸವ ಮಹಾಸ್ವಾಮಿಗಳೆಂತಲೂ ಕರೆಸಿಕೊಂಡರೆಂಬ ಪ್ರತೀತಿಯಿದೆ.

ಶ್ರೀ ಕರಿಬಸವ ಶಿವಯೋಗಿಗಳು ಶಿವಾಧೀನರಾದ ನಂತರ, ಆಗಿನ ಗದುಗಿನ ದೊರೆಯು ಕಳೆದು ಹೋದ ತಮ್ಮ ಕಣ್ಣುಗಳ ಪ್ರಾಪ್ತಿಗಾಗಿ ಶಿವಯೋಗಿಗಳ ಗದ್ದುಗೆಗೆ ಶರಣಾಗತನಾದನು. ಗದ್ದುಗೆಯ ಪ್ರಭಾವದಿಂದ ಗದುಗಿನ ದೊರೆಗೆ ಪುನಃ ನೇತ್ರಗಳು ಪ್ರಾಪ್ತವಾದ ಮೂಲಕ ಅವನು ತನ್ನ ಕಣ್ಣಿನ ದೃಷ್ಠಿ ಹರಿಯುವ ವರೆಗಿನ ಭೂಮಿಯನ್ನು ಮಠಕ್ಕೆ ಭಕ್ತಿಯ ಕಾಣಿಕೆ ಸಲ್ಲಿಸಿದನು. ಈ ಭೂಮಿಯು ಈಗಲೂ ಮಠದ ವಶದಲ್ಲಿದೆ. ಇಷ್ಟೇ ಅಲ್ಲದೆ ಕೃತಪುರವು ''ಗದುಗು'' ಎಂಬ ಹೆಸರು ಪಡೆಯಲು ಗದ್ದುಗೆಯ ಪ್ರಭಾವವೇ ಕಾರಣವೆಂಬ ಆಖ್ಯಾಯಿಕೆಯೂ ಇದೆ.

**ಪೀಠದ ಪರಂಪರೆ :**

ಮುಂದೆ ಶ್ರೀ ಕಟ್ಟಿಗೆಹಳ್ಳಿ ರಾಚೋಟಿ ಸ್ವಾಮಿಗಳವರು ವೈರಾಗ್ಯಶಾಲಿಯಾಗಿ ತಮ್ಮ ಶಿಷ್ಯ ಮಹಾಂತಸ್ವಾಮಿಗಳಿಗೆ ಅಧಿಕಾರ ವಹಿಸಿಕೊಟ್ಟು ತಿಳವಳ್ಳಿಯಲ್ಲಿ ಸಮಾಧಿಸ್ಥರಾದರು.

ಉಗ್ರ ವೈರಾಗ್ಯಶಾಲಿಯಾದ ಮಹಾಂತಸ್ವಾಮಿಗಳವರು ಒಂದೆಡೆ ನಿಲ್ಲದೆ, ಸಂಚಾರದಲ್ಲಿರುವಾಗ ಬಾಚಿಗೊಂಡನಹಳ್ಳಿಯ ಹತ್ತಿರ ಹರಿದ ಹಗರಿಹಳ್ಳದ ತೀರಕ್ಕೆ ಬಂದರು. ಹಳ್ಳದ ಹತ್ತಿರ ಬೆಳೆದ ಗಿಡಗಂಟಿಗಳ ಮಧ್ಯದಲ್ಲಿ ಹಾಯ್ದು ಹೋಗುವಾಗ ಅಲ್ಲಿಯೇ ಇದ್ದ ಗುಡಿಸಲಿನಿಂದ ಒಬ್ಬ ಭಕ್ತ ಹೊರಗೆ ಬಂದು ಶ್ರೀಗಳಿಗೆ ಪ್ರಣಾಮ ಮಾಡಿದ. ಶ್ರೀಗಳು ಅವನ ಬಗೆಗೆ ವಿಚಾರಿಸಿದಾಗ ಕುಷ್ಠರೋಗದ ಮೂಲಕ ತನ್ನನ್ನು ಆ ಗುಡಿಸಲಿನಲ್ಲಿ ಇಟ್ಟಿದ್ದರಿಂದಲೂ ತಮ್ಮ ದರ್ಶನ ಪಡೆಯುತ್ತಲೇ ತನ್ನ ಕುಷ್ಠವಾಸಿಯಾಯಿತೆಂದೂ ಇನ್ನು ಮೇಲೆ ತನ್ನ ಕೈ ಬಿಡದೆ ಅಲ್ಲಿಯೇ ವಾಸಿಸಿ ತನ್ನ ಸೇವೆ ಸ್ವೀಕರಿಸುತ್ತ ಉದ್ಧಾರ ಮಾಡಬೇಕೆಂದು ಬಹಳ ಪ್ರಾರ್ಥಿಸಿಕೊಂಡ. ಇದು ಶಿವ ಸಂಕಲ್ಪವೆಂದು ಭಾವಿಸಿ ಶ್ರೀಗಳು ಅಲ್ಲಿಯೇ ಕಟ್ಟಿಸಿದ ಶಿವಯೋಗಮಂಟಪದಲ್ಲಿ ನೆಲೆಸಿದರು.

**ಡಂಬಳ ಮಠ :**

ಒಂದು ದಿನ ಶ್ರೀ ಮಹಾಂತ ಶಿವಯೋಗಿಗಳು ಬಹಿರ್ದೆಸೆಗೆ ಹೋಗಿ ಬಂದು, ಹಳ್ಳದಲ್ಲಿ ಹಸ್ತ ತೊಳೆಯುತ್ತಿರುವಾಗ, ಅಲ್ಲಿಗೆ ಬಟ್ಟೆ ಒಗೆಯಲು ಬಂದ ಮಹಿಳೆಯರು ಶ್ರೀಗಳನ್ನು ಕುರಿತು ತಮ್ಮ ತಮ್ಮೊಳಗೆ ಮೋಹಕ ನುಡಿಗಳನ್ನಾಡಹತ್ತಿದರು. ಇದನ್ನಾಲಿಸಿದ ಶ್ರೀಗಳು 'ಶಿವಯೋಗಿ ದರ್ಶನದಿಂದ ಭಕ್ತಿ ಜಾಗ್ರತವಾಗದೆ ಮೋಹವೇಕೆ ಅಂಕುರಿಸಿತು ? ಎಂದು ವ್ಯಾಕುಲಗೊಂಡು ಪಕ್ಕದಲ್ಲಿರುವ ಸ್ಮಶಾನಕ್ಕೆ ಹೋಗಿ ತನ್ನ ಬಟ್ಟೆಗಳನ್ನು ಕಳಚಿ, ಒಗೆದು, ಚಿತಾಭಸ್ಮ ಲೇಪಿಸಿಕೊಂಡು ಅಲ್ಲಿಯೇ ಇದ್ದ ಒಂದು ಕೌದಿಯನ್ನು ಧರಿಸಿ ಪುನಃ ಹೆಣ್ಣು ಮಕ್ಕಳಿದ್ದ ಸ್ಥಾನಕ್ಕೆ ಬಂದು ನಿಂತರು. ಇದರಿಂದ ಹೇಯಗೊಂಡ ಹೆಂಗಳೆಯರು ಶ್ರೀಗಳನ್ನು ಹೀಯಾಳಿಸಲು, ಶ್ರೀಗಳು ಕಾಮ ವಿಜಯದಿಂದ ಉನ್ಮಾದ ಹೊಂದಿ ತಮ್ಮ ಮಠಕ್ಕೆ ಮರಳಿದರು. ಅಂದಿನಿಂದ ಕೌದಿಯೇ ಅವರ ನಿತ್ಯದ ವೇಷವಾಗಿ ಅವರು ಕೌದೀ ಮಹಾಂತಸ್ವಾಮಿಗಳೆಂದು ಪ್ರಸಿದ್ಧರಾದರು. ಕ್ರಮೇಣ ನಾಡಿನಾದ್ಯಂತ ಕೌದೀ ಮಹಾಂತ ಶಿವಯೋಗಿಗಳವರ ಅತುಲ ಕೀರ್ತಿ ಬೆಳೆಯುತ್ತ ಹೋದಂತೆ, ಶ್ರೀಗಳವರ ದರ್ಶನಾರ್ಥವಾಗಿ ಬರಹೋಗುವ ಭಕ್ತರ ಸಂಖ್ಯೆಯೂ ಬೆಳೆಯಿತು.

ಗದುಗಿನ ಮಾನ್ವಿ ಲಿಂಗಮ್ಮನವರು ಗುರುದರ್ಶನಾರ್ಥ ಸಿಂಗಟಾಲೂರು ಮಾರ್ಗದಿಂದ ಪಾದಚಾರಿಯಾಗಿಯೇ ತನ್ನ ಚಿಕ್ಕ ಮಗುವಿನೊಡನೆ ಹೊರಟರು.

ಅತ್ಯಂತ ಆಚಾರಸ್ಥಳಾದ ಲಿಂಗಮ್ಮನು ತನ್ನೊಡನೆ ಅಡಿಗೆ ಪದಾರ್ಥಗಳನ್ನು ತಾರದ್ದರಿಂದ ತುಂಗಾತೀರದಲ್ಲಿ ಪ್ರಸಾದ ವಿನಿಯೋಗಕ್ಕಾಗಿ ಗುಗ್ಗರಿಗಾಗಿ ಕಾಳು ಕುದಿಸಹತ್ತಿದಳು.

ಪಕ್ಕದಲ್ಲಿ ಬೀಡಾರ ಬಿಟ್ಟ ಪಾಂಥಸ್ಥರು ಕರ್ಚಿಕಾಯಿಗಳನ್ನು ತಿನ್ನುವದನ್ನು ನೋಡಿದ ಮಾನ್ವಿ ಲಿಂಗಮ್ಮನವರ ಮಗುವು ತನಗೂ ಕರ್ಚಿಕಾಯಿ ಬೇಕೆಂದು

ಹಟಮಾಡಹತ್ತಿತು. ಇದರಿಂದ ರೋಸಿ ಹೋದ ಲಿಂಗಮ್ಮನು ಮಗುವನ್ನು ಗದರಿಸುತ್ತಿರುವಾಗ ಅಲ್ಲಿಗೋರ್ವ ಜಂಗಮ ಮೂರ್ತಿಗಳು ಬಂದು ''ಏಕೆ ತಾಯಿ, ಮಗುವಿಗೇಕೆ ಸಿಟ್ಟು ಮಾಡುವೆ ?'' ಎಂದು ಕೇಳಿದರು. ಅದಕ್ಕೆ ಕರ್ಚಿಕಾಯಿ ಬೇಕಂತೆ ಎಂದು ಲಿಂಗಮ್ಮ ಹೇಳಿದಳು. ''ಒಲೆಯ ಮೇಲೆ ಏನು ಇಟ್ಟಿರುವೆ ?'' ಎಂದು ಕೇಳಿದರು. ''ಅವು ಗುಗ್ಗರಿ'' ಎಂದು ಲಿಂಗಮ್ಮ ಹೇಳಿದಳು. ''ಸರಿ ! ಅದನ್ನೇ ಕೊಡಬಾರದೇನಮ್ಮ'' ಎಂದರು. ಆಗ ಲಿಂಗಮ್ಮ ''ಜಂಗಮಾರ್ಪಿತವಾಗದೆ ಹೇಗೆ ಕೊಡಲಿಕ್ಕೆ ಬರುವದು?'' ಎಂದಳು. ಸಂತುಷ್ಟರಾದ ಜಂಗಮರು ''ಆಗಲಿ, ಮೊದಲು ನನಗೆ ಅರ್ಪಿಸು, ತರುವಾಯ ಮಗುವಿಗೆ ಕೊಡು'' ಎಂದು ಹೇಳಿ ಗುಗ್ಗರಿ ನೀಡಿಸಿಕೊಂಡರು. ಲಿಂಗಮ್ಮ ಜಂಗಮಕ್ಕೆ ನೀಡಿದ ನಂತರ ಮಗುವಿಗೆ ಕೊಡಲು ಒಲೆಯ ಮೇಲಿನ ಗಡಿಗೆಯಲ್ಲಿ ಕೈ ಹಾಕಲು ಅದರಲ್ಲಿ ಕರ್ಚಿಕಾಯಿಗಳೇ ಇದ್ದವು. ಲಿಂಗಮ್ಮನಿಗೆ ಎಲ್ಲಿಲ್ಲದ ಆಶ್ಚರ್ಯ! ಅಲ್ಲಿಂದ ಪಯಣ ಮಾಡಿ ಬಾಚಿಗೊಂಡನ ಹಳ್ಳಿಗೆ ಬಂದು ನೋಡುತ್ತಾಳೆ. ತನಗೆ ತುಂಗಾತೀರದಲ್ಲಿ ದರ್ಶನವಿತ್ತ ಜಂಗಮ ಮೂರ್ತಿಗಳೇ ಸಮ್ಮುಖದಲ್ಲಿ ನಿಂತ ತನ್ನ ಗುರುಗಳೆಂದು ತಿಳಿದು ಭಕ್ತಿಪರವಶಳಾದಳು.

ಓರ್ವ ಜಂಗಮ ದಂಪತಿಗಳಿಗೆ ಬಹುಕಾಲ ಮಕ್ಕಳಿರಲಿಲ್ಲ. ಶ್ರೀ ಕೌದೀ ಮಹಾಂತ ಸ್ವಾಮಿಗಳವರ ಅನುಗ್ರಹದಿಂದ ಅವರಿಗೆ ಪುತ್ರೋತ್ಸವವಾಗಿ, ಹರಕೆ ಹೊತ್ತಂತೆ ಆ ಮಗುವನ್ನು ಮಠಕ್ಕೆ ತಂದು ಒಪ್ಪಿಸಿದರು.

ಶಿವಲಕ್ಷಣಾನ್ವಿತವಾದ ಆ ಮಗುವನ್ನು ನೋಡಿದ ಶ್ರೀಗಳು ಮಗುವನ್ನು ತಮ್ಮ ವಟುವಾಗಿ ಸ್ವೀಕರಿಸಿ, ಅದಕ್ಕೆ ಅರ್ಧನಾರೀಶ್ವರನೆಂಬ ನಾಮಕರಣ ಮಾಡಿದರು.

ಒಮ್ಮೆ ಶ್ರೀಗಳಲ್ಲಿಗೆ ಕೋರಿಶೆಟ್ಟಿ ಎಂಬ ವ್ಯಾಪಾರಸ್ಥನು ದರ್ಶನಕ್ಕೆ ಬಂದನು. ಕೋರಿಶೆಟ್ಟಿ ಎಂದರೆ ತನ್ನ ವ್ಯಾಪಾರದ ಕಾಯಕದಲ್ಲಿ ಗುರುವಿಗೆ ಅರ್ಧಪಾಲು ಎಂಬ ನಿಯಮ ಇಟ್ಟುಕೊಂಡವನು. ಈ ಕೋರಿಶೆಟ್ಟಿಯು ಶ್ರೀಗಳಲ್ಲಿಗೆ ಬಂದು ತಮ್ಮ ಸಮಯಾಚಾರಕ್ಕೆ ಒಬ್ಬ ಕ್ರಿಯಾಮೂರ್ತಿ ಬಾಲಕನನ್ನು ಅನುಗ್ರಹಿಸಬೇಕೆಂದು ಬೇಡಿಕೊಂಡನು. ಆಗ ಶ್ರೀಗಳು ಇದು ಶಿವೇಚ್ಛೆಯೆಂದೇ ಭಾವಿಸಿ ತಮ್ಮ ಉತ್ತರಾಧಿಕಾರಿಯಾದ ಮಗು ಅರ್ಧನಾರೀಶ್ವರನನ್ನೇ ಆತನೊಡನೆ ಕಳುಹಿಸಿಕೊಟ್ಟರು.

ಕೋರಿಶೆಟ್ಟಿಯು ತನ್ನ ಪುಟ್ಟಗುರುವನ್ನು ಹೆಗಲ ಮೇಲೆ ಕೂಡ್ರಿಸಿಕೊಂಡು ಸಂಚರಿಸುತ್ತ ಹೆತ್ತ ತಾಯಿಯೋಪಾದಿಯಲ್ಲಿ ಬಾಲಕ ಅರ್ಧನಾರೀಶ್ವರರ ಯೋಗಕ್ಷೇಮ ನೋಡಿಕೊಂಡನು.

**ಡಂಬಳ ಮಠ :**

ಕೋರಿಶೆಟ್ಟಿಯು ಹಾಗೆಯೇ ಸಂಚರಿಸುತ್ತ ಡಂಬಳಕ್ಕೆ ಬಂದ. ಗ್ರಾಮದ ಹೊರಗೆ ಇರುವ ಹಳ್ಳದ ತೀರದ ದೊಡ್ಡಬಸವೇಶ್ವರ ಗುಡಿಯ ಹತ್ತಿರ ವಾಸ್ತವ್ಯ ಮಾಡಿದನು.

ಡಂಬಳ ಸಂಸ್ಥಾನದ ಒಡೆಯನಾದ ಶೀನಪ್ಪನಾಯಕನು ರಾಜಕ್ಷಯರೋಗ ಪೀಡಿತನಾಗಿ ಅವನು ತನ್ನ ಜೀವಿತದಾಸೆಯನ್ನೇ ಬಿಟ್ಟು ಕಾಶೀಕ್ಷೇತ್ರದಲ್ಲಿ ತನ್ನ ಅಂತಿಮ ಶ್ವಾಸವೆಳೆಯಬೇಕೆಂಬ ನಿರ್ಣಯ ಮಾಡಿಕೊಂಡಿದ್ದನು.

ಒಂದು ದಿನ ಬೆಳಗಿನ ಜಾವದಲ್ಲಿ ಅವನ ಮನೆದೇವರಾದ ಆಂಜನೇಯನು ಅರಸನ ಸ್ವಪ್ನದಲ್ಲಿ ಪ್ರಕಟವಾಗಿ ''ಕಾಶೀವಿಶ್ವನಾಥ ದೊಡ್ಡಬಸವೇಶ್ವರ ಗುಡಿಯಲ್ಲಿದ್ದಾನೆ. ಆತನ ದರ್ಶನ ತೆಗೆದುಕೊಳ್ಳಬೇಕು'' ಎಂದು ಅಪ್ಪಣೆ ಮಾಡಿದನು. ಅದೇ ಮೇರೆಗೆ ಅರಸನು ತನ್ನ ಪರಿವಾರಸಹಿತ ಹೋಗಿ ನೋಡುತ್ತಾನೆ. ಸಾಕ್ಷಾತ್ ಶಿವನೋಪಾದಿಯಲ್ಲಿ ಅರ್ಧನಾರೀಶ್ವರರ ದರ್ಶನವಾಯಿತು. ಶ್ರೀಗಳ ದರ್ಶನವಾಗುತ್ತಲೇ ಅರಸನ ರೋಗವೇ ಮಾಯವಾಗಿತ್ತು! ಆಗ ಗುರುಗಳಿಂದ ಪ್ರಭಾವಿತನಾದ ಅರಸನು ಶ್ರೀಗಳಿಗೆ ಅಲ್ಲಿಯೇ ನೆಲೆಸಿ ತನ್ನ ಭಕ್ತಿಯ ಸೇವೆ ಸ್ವೀಕರಿಸಿ ಕೃತಾರ್ಥನನ್ನಾಗಿ ಮಾಡಬೇಕೆಂದು ಬೇಡಿಕೊಂಡನು. ಅಲ್ಲದೆ ಅರಮನೆಗೆ ಮರಳಿ ಅದರಲ್ಲಿಯ ಕೆಲ ಭಾಗವನ್ನು ಕೆಡವಿಸಿ ಅದರಿಂದ ತನ್ನ ಅರಮನೆಯ ಪಕ್ಕದಲ್ಲಿ ಶ್ರೀಗಳವರಿಗೆ ಇಂದು ನಾವು ನೋಡುತ್ತಿರುವ ಒಂದು ವಿಶಾಲ ಮಠವನ್ನು ಕಟ್ಟಿಸಿ ಪೂಜಾವಿನಿಯೋಗಕ್ಕಾಗಿ ಅನೇಕ ದಾನದತ್ತಿಗಳನ್ನು ದಯಪಾಲಿಸಿ ತನ್ನ ಜನ್ಮಸಾರ್ಥಕ ಮಾಡಿಕೊಂಡನು.

ಶ್ರೀ ಅರ್ಧನಾರೀಶ್ವರರ ಅನುಪಮ ಕೀರ್ತಿಯಿಂದ ಆಕರ್ಷಿತರಾದ ಮಾನಪ್ಪ ಪಂಡಿತ, ಮರಿತೋಂಟದಾರ್ಯ ಮುಂತಾದ ಘನವಿದ್ವಾಂಸರು ಡಂಬಳಕ್ಕೆ ಬಂದು ಸನ್ನಿಧಿಯ ಸೇವೆಯಲ್ಲಿ ನಿಂತರು. 'ವೀರಶೈವಾನಂದ ಚಂದ್ರಿಕೆ' ಮುಂತಾದ ಮಹತ್ವದ ಗ್ರಂಥಗಳು ಈ ಕಾಲದಲ್ಲಿಯೇ ರಚಿತವಾದವು.

ಕೆಳದಿ, ಇಕ್ಕೇರಿ, ಹರಪನಹಳ್ಳಿ ಮುಂತಾದ ಅವನಿಪಾಲಕರು ಡಂಬಳಕ್ಕೆ ಆಗಮಿಸಿ ಶ್ರೀಗಳವರ ದಾಸಾನುದಾಸರಾಗಿ ಅನೇಕ ಉಂಬಳಿಗಳನ್ನು ಹಾಕಿ ಕೊಟ್ಟರು.

ಕೆಳದಿ ಭೂಪಾಲಕನಿಗೆ ಸಂತಾನವೇ ಇರಲಿಲ್ಲ. ಮುಂದೆ ಗುರುಗಳಾದ ಶ್ರೀ ಅರ್ಧನಾರೀಶ್ವರರು ಅನುಗ್ರಹಿಸಿಕೊಟ್ಟ ಭಸ್ಮದಿಂದ ಸಂತಾನ ಪ್ರಾಪ್ತಿಯಾದ ಪ್ರಯುಕ್ತ ಆತನು ಬೂದಿಬಸಪ್ಪನಾಯಕನೆಂದು ಪ್ರಸಿದ್ಧನಾಗಿದ್ದಾನೆ.

ಶ್ರೀ ಅರ್ಧನಾರೀಶ್ವರರ ಪ್ರಭಾವದಿಂದಲೇ ಮೈಸೂರು, ಸೊಂಡೂರು, ಉರುವಕೊಂಡ ಮುಂತಾದ ಅನೇಕ ಸ್ಥಳಗಳಲ್ಲಿ ತೋಂಟದಾರ್ಯಮಠಗಳು ನಿರ್ಮಾಣವಾದವು. ಶ್ರೀ ಅರ್ಧನಾರೀಶ್ವರರ ಶಿವಯೋಗ ಸಮಾಧಿ ಡಂಬಳದಲ್ಲಿದ್ದು, ಅತ್ಯಂತ ಜಾಗ್ರತವಾಗಿದ್ದು ಎರಡನೆಯ ಎಡೆಯೂರೆನಿಸಿದೆ.

ಶ್ರೀ ಅರ್ಧನಾರೀಶ್ವರರ ತರುವಾಯ ಪೀಠವನ್ನಲಂಕರಿಸಿದ ಶ್ರೀ ನಂದೀಶ್ವರ ಸ್ವಾಮಿಗಳು ಮಹಾತಪಸ್ವಿಗಳು ಮತ್ತು ಅಷ್ಟೇ ವೈರಾಗ್ಯಶೀಲರು. ತಮ್ಮ

ಸಂಚಾರಕಾಲದಲ್ಲಿ ಅಣ್ಣಿಗೇರಿಯ ದೇಸಾಯಿಯವರ ಭಕ್ತಿಗೆ ಮೆಚ್ಚಿ ಅಲ್ಲಿಯೇ ನೆಲೆಸಿದರು.

ಒಮ್ಮೆ ಅಣ್ಣಿಗೇರಿಯ ದೇಸಾಯರ ಮನೆಗೆ ಅವರ ಗುರುಸ್ವಾಮಿಯವರು ದಯಮಾಡಿಸಿದ್ದರು. ದೇಸಾಯರಿಗೆ ಪ್ರತಿ ನಿತ್ಯವೂ ಸಾಯಂಕಾಲ ಮಠಕ್ಕೆ ಹೋಗಿ ಶ್ರೀಗಳವರ ದರ್ಶನ ತೆಗೆದುಕೊಂಡು ಬರುವದು ರೂಢಿ. ಆ ರೀತಿ ಶ್ರೀಗಳವರ ದರ್ಶನಕ್ಕೆ ಹೊರಟರು. ಅವರೊಡನೆ ಅವರ ಗುರುಸ್ವಾಮಿಯವರೂ ಸಂಗಡ ಹೋದರು.

ದೇಸಾಯರ ಸಂಗಡ ಬಂದ ಗುರುಸ್ವಾಮಿಯವರು ನಂದೀಶ್ವರ ಸ್ವಾಮಿಗಳವರನ್ನು ಕಾಣುತ್ತಲೇ ಶ್ರೀಗಳವರ ನಿರಾಡಂಬರ ಸ್ಥಿತಿಯನ್ನು ನೋಡಿ ನಮಸ್ಕರಿಸಲೇ ಇಲ್ಲ. ಕೆಲ ಹೊತ್ತಿನ ಮೇಲೆ ಗುರುಸ್ವಾಮಿಯವರು ದೇಸಾಯರೊಡನೆ ಮನೆಗೆ ಮರಳಿದರು.

ಮನೆಗೆ ಬಂದ ಗುರುಸ್ವಾಮಿಯವರು ಸ್ನಾನ ತೀರಿಸಿ ಪೂಜೆಗಾಗಿ ಲಿಂಗದ ಕರಡಿಗೆ ತೆಗೆದು ನೋಡುತ್ತಾನೆ. ಲಿಂಗವೇ ಇರಲಿಲ್ಲ. ಗಾಬರಿಗೊಂಡ ಗುರುಸ್ವಾಮಿಯವರು ದೇಸಾಯರಿಗೆ ತಿಳಿಸಿದರು. ದೇಸಾಯಿಯವರು ''ನೀವು ಜಗದ್ಗುರು ಸನ್ನಿಧಿಯಲ್ಲಿ ನಡೆದುಕೊಂಡ ರೀತಿಯ ಕಹಿಫಲ''ವೆಂದು ಹೇಳಿ, ಅವರನ್ನು ಕರೆದುಕೊಂಡು ಮಠಕ್ಕೆ ಬಂದು ಶ್ರೀಗಳ ದರ್ಶನ ತೆಗೆದುಕೊಂಡರು. ''ಶ್ರೀಗಳು ದೇಸಾಯರಿಗೆ ಮತ್ತೇಕೆ ಬಂದೆ'' ಎಂದು ಕೇಳಿದರು. ದೇಸಾಯಿಯವರು ''ಗುರುಸ್ವಾಮಿಯವರ ಲಿಂಗವೇ ಹೋಗಿದೆ'' ಎಂದು ಹೇಳಿದರು. ಅದಕ್ಕೆ ಶ್ರೀಗಳವರು ''ಹೌದು! ಅವನಲ್ಲಿರಲು ಒಲ್ಲೆನೆಂದು ಹೇಳಿ ಲಿಂಗಯ್ಯ ಇಲ್ಲಿಗೆ ಬಂದಿದ್ದಾನೆ'' ಎಂದು ಆಸನದ ಬುಡದಲ್ಲಿದ್ದ ಲಿಂಗವನ್ನು ತೋರಿಸಿ, ಅದನ್ನು ಮಂದಸ್ಮಿತರಾಗಿ ಗುರುಸ್ವಾಮಿಯವರಿಗೆ ಕೊಟ್ಟರು.

ಹೀಗೆ ಅನಂತ ಪವಾಡ ಮೆರೆದು ಲೋಕೋದ್ಧಾರ ಮಾಡಿದ ಶ್ರೀ ನಂದೀಶ್ವರ ಮಹಾಸ್ವಾಮಿಗಳವರು ಅಣ್ಣಿಗೇರಿಯಲ್ಲಿ ಸಮಾಧಿಸ್ಥರಾದರು.

ಅವರ ತರುವಾಯ ಪೀಠವನ್ನಲಂಕರಿಸಿದ ಶ್ರೀ ಉಗ್ಗದ ತೋಂಟದಾರ್ಯರು ಪರಮ ವೈರಾಗ್ಯಶಾಲಿಗಳಾದ ಪ್ರಯುಕ್ತ ವಿಶೇಷ ಸಂಚಾರಗೈಯಲಿಲ್ಲ. ಪ್ರತಿನಿತ್ಯ ಎಸರಿನಂತೆ ಕಾಯ್ದ ಕೊಪ್ಪರಿಗೆ, ಬಿಸಿನೀರನ್ನು ಉಗ್ಗ ಹಚ್ಚಿಸಿ ಮಸ್ತಕದ ಮೇಲೆ ಹಾಕಿಸಿಕೊಳ್ಳುತ್ತಿದ್ದರು. ಇದರಿಂದ ಅವರು ಉಗ್ಗದ ತೋಂಟದಾರ್ಯರೆಂದೇ ಪ್ರಸಿದ್ಧರಾದರು. ವಿಶೇಷವೆಂದರೆ ಇವರ ಸ್ನಾನದ ನೀರನ್ನು ಧರಿಸಿದ ಪ್ರತಿಯೊಬ್ಬ ರೋಗಿಯೂ ರೋಗಮುಕ್ತನಾಗುತ್ತಿದ್ದನು. ಇವರೂ ಅಣ್ಣಿಗೇರಿಯಲ್ಲಿಯೇ ಸಮಾಧಿಸ್ಥರಾದರು.

ಶ್ರೀ ಉಗ್ಗದ ತೋಂಟದಾರ್ಯರ ತರುವಾಯ ಪೀಠವನ್ನಲಂಕರಿಸಿದ ಶ್ರೀ ಸದಾಶಿವಸ್ವಾಮಿಗಳು ತಮ್ಮ ಗುರುಗಳ ಶಿಷ್ಯೋದ್ಧಾರದ ಕಾರ್ಯವನ್ನೇ ಮುಂದುವರಿಸಿ ಕಾರ್ಯಾರ್ಥವಾಗಿ ಕೊಪ್ಪಳಕ್ಕೆ ದಯಮಾಡಿಸಿದಾಗ ಅಲ್ಲಿಯೇ ಶಿವಸಮಾಧಿ ಹೊಂದಿದರು.

ಶ್ರೀ ಸದಾಶಿವಸ್ವಾಮಿಗಳವರ ತರುವಾಯ ಪೀಠವನ್ನಲಂಕರಿಸಿದ ಶ್ರೀ ಮಹಾಂತಸ್ವಾಮಿಗಳು ಪಾಲ್ಕುರಿಕೆಯ ಸೋಮನಾರಾಧ್ಯರಂತೆ ಅರವತ್ತನಾಲ್ಕು ಶೀಲಗಳನ್ನು ಆಚರಿಸುತ್ತಿರುವಾಗ ಶ್ರೀಗಳವರ ದರ್ಶನಕ್ಕೆ ಹರಪನಹಳ್ಳಿಯ ಅರಸನು ಬರಲು ಅವನಿಗೆ ಶ್ರೀಗಳವರ ದರ್ಶನ ಲಭ್ಯವಾಗಲಿಲ್ಲ. ಆಗ ಅರಸನು ಬಲವಂತದಿಂದ ಮಠದಲ್ಲಿ ನುಗ್ಗಲು ಪ್ರಯತ್ನಿಸಿದಾಗ, ಶ್ರೀಗಳವರ ಶಿಷ್ಯರು ಮಹಾದ್ವಾರವನ್ನಿಕ್ಕಿದರು. ಕ್ರುದ್ಧನಾದ ಅರಸು ಆನೆಯ ಮೂಲಕ ಮಹಾದ್ವಾರ ಮುರಿಯಲೆತ್ನಿಸಿದಾಗ, ಹೊಳೆಗೆ ಶ್ರೀಗಳವರ ಬಟ್ಟೆ ಮಡಿಮಾಡಲು ಹೋದ ಜಟ್ಟಿ ಪರ್ವತ ಮರಿದೇವರು ಅದೇ ಸಮಯಕ್ಕೆ ಮಠಕ್ಕೆ ಬಂದು ನೋಡುತ್ತಾರೆ. ಬ್ರಹ್ಮ ತೇಜಸ್ವಿನೊಡನೆ ಜ್ಞಾತ್ರ ಸಮರ ಹೂಡಿ ನಿಂತಿದೆ. ಪರಶುರಾಮನಂತೆ ರೋಷಗೊಂಡ ಮರಿದೇವರು ಆನೆ ಕಾಲಾಳುಗಳೆಲ್ಲವನ್ನೂ ಏಕಾಂಗಿಯಾಗಿ ಹೊಡೆದೋಡಿಸಿ ದಕ್ಷಯಾಗವನ್ನು ವಿಧ್ವಂಸಗೊಳಿಸಿದ ವೀರಭದ್ರನಂತೆ ಕೋಲಾಹಲ ಮಾಡಿದರು.

ಶಿವನಿಗೆ ನಂದೀಶ್ವರನಂತೆ ಜಟ್ಟಿ ಪರ್ವತಮರಿದೇವರು ಮಹಾಂತಸ್ವಾಮಿ ಗಳವರ ಸೇವೆ ಗೈದರು. ಶ್ರೀಗಳು ಸಂಚಾರ ಹೊರಟರೆ ಜಟ್ಟಿ ಪರ್ವತ ಮರಿದೇವರು ಗುರುಗಳನ್ನು ತಮ್ಮ ಹೆಗಲ ಗದ್ದುಗೆ ಮೇಲೆ ಮೂರ್ತಗೊಳಿಸಿಕೊಂಡು ಹೋಗುತ್ತಿದ್ದರು.

ಶಿವನಲ್ಲಿ ಬೆರೆಯುವ ಕಾಲ ಸಮೀಪಿಸಲು ಮಹಾಂತಸ್ವಾಮಿಗಳು ಯಲಬುರ್ಗಿ ಶೆಟ್ಟರ ಶರಭಣ್ಣನವರಲ್ಲಿ ಶಿವಾನುಭವ ವ್ಯಾಸಂಗ ಮಾಡಿಬಂದ ತಮ್ಮ ವಟು ತೋಂಟದಾರ್ಯ ದೇಶಿಕಮೂರ್ತಿಗಳಿಗೆ ಅಧಿಕಾರ ಪ್ರದಾನ ಮಾಡಿ ಹಂಪಸಾಗರದಲ್ಲಿ ಶಿವಸಮಾಧಿ ಹೊಂದಿದರು.

ನಮ್ಮ ಮಠದಲ್ಲಿ ಸಮಾಧಿಸ್ಥರಾದ ಜಗದ್ಗುರುಗಳು :

ಗದುಗಿನಲ್ಲಿ ನಿರಂಜನ ಜಗದ್ಗುರು ಪಟ್ಟವೇರಿದ ತೋಂಟದಾರ್ಯರು ಶಿವಯೋಗದಲ್ಲಿ ಮಹಾಬಲ್ಲಿದರು, ತ್ರಿಕಾಲಜ್ಞಾನಿಗಳು. ಅವರಿಗೆ ವೃದ್ಧ ತೋಂಟದಾರ್ಯ ಮಹಾಸ್ವಾಮಿಗಳೆಂದೂ ಕರೆಯುತ್ತಿದ್ದರು.

ಮಾನ್ವಿ ಮನೆತನಕ್ಕೆ ಗಂಡು ಸಂತಾನವಿರಲಿಲ್ಲ. ಅವರಿಗೆ ತಮ್ಮ ಹಸ್ತದಲ್ಲಿಯ ದಂಡವನ್ನು ಶ್ರೀಗಳು ಅನುಗ್ರಹಿಸಲು ಅದರ ಉಪಾಸನಾಬಲದಿಂದ ಸಂತಾನ ಪ್ರಾಪ್ತಿಯಾಯಿತು. ಹುಟ್ಟಿದ ಮಗುವಿಗೆ ದಂಡಪ್ಪನೆಂಬ ನಾಮಕರಣವಾಯಿತು.

ಒಮ್ಮೆ ಕೋಟಿ ವೀರಪ್ಪನವರು ನಿತ್ಯದಂತೆ ಮಠಕ್ಕೆ ಬಂದಿರಲಿಲ್ಲ. ಶ್ರೀಗಳು ಅವರನ್ನು ಕರೆಯಿಸಿಕೊಳ್ಳಲು ತಮ್ಮ ತಾಯಿ ಅಂತ್ಯಾವಸ್ಥೆಯಲ್ಲಿರುವಳೆಂದು ಹೇಳಿದರು. ''ಆ ಮುದುಕಿ ನಾವು ಶಿವಸಮಾಧಿ ಹೊಂದಿದ ಮೇಲೆ ಶಿವನಲ್ಲಿ ಬೆರೆಯುವಳು'' ಎಂದು ಅಪ್ಪಣೆ ಗೈದರು. ಅದರಂತೆ ವೀರಪ್ಪನವರ ತಾಯಿ ತೋಂಟಮ್ಮನವರು ಶ್ರೀಗಳಿರುವವರೆಗೂ ಜೀವಿಸಿ, ಶ್ರೀಗಳು ಅಪ್ಪಣೆ ಕೊಡಿಸಿದಂತೆ ಶ್ರೀಗಳವರು ಸಮಾಧಿಸ್ಥರಾದ ಎರಡು ವರುಷಗಳ ಮೇಲೆಯೇ ಲಿಂಗೈಕ್ಯಳಾದಳು.

ಹುಯಿಲಗೋಳದ ಶಾನಭೋಗರು ಕೋಟಿಯವರ ಪರಮ ಸ್ನೇಹಿತರು. ಅವರು ಕೋಟಿ ವೀರಪ್ಪನವರ ಮೂಲಕ ಶ್ರೀಗಳಿಗೆ ಬಿನ್ನಹಮಾಡಿ ತಮ್ಮೂರಿಗೆ ಕರೆದೊಯ್ದು ಉತ್ಸವ ಮಾಡಿದರು. ಉತ್ಸವದಲ್ಲಿ ಶೆಗಣೆಯ ಉಂಡಿ ಪಾಲ್ಕಿಯ ಹತ್ತಿರ ಹಾಯ್ದು ಹೋಯಿತು. ಸ್ವತಃ ಶ್ರೀಗಳಿಗೆ ಶಾನಭೋಗರೇ ಇದನ್ನು ಹೇಳಿದಾಗ ಶ್ರೀಗಳು ''ಹಾಗೆ ಅಪರಾಧ ಗೈದವರ ಕೈಯಲ್ಲಿ ಹುಳುಗಳು ಬೀಳುವವು'' ಎಂದು ಅಪ್ಪಣೆ ಮಾಡಿ ಗದುಗಿಗೆ ಮರಳಿದರು.

ಮುಂದೆ ಒಂದೆರಡು ದಿನಗಳಲ್ಲಿ ಶಾನಭೋಗರ ಕೈಗೆ ಹುಣ್ಣಾಗಿ ಹುಳಗಳು ಬಿದ್ದವು. ಗಾಬರಿಯಾದ ಶಾನಭೋಗ ಕೋಟಿ ವೀರಪ್ಪನವರಲ್ಲಿ ಬಂದು ತಮಗಾದ ಸ್ಥಿತಿಯನ್ನು ತಿಳಿಸಿ ವೀರಪ್ಪನವರೊಡನೆ ಶ್ರೀಗಳಲ್ಲಿಗೆ ಬಂದು, ಶ್ರೀಗಳಿಗೆ ವೀರಪ್ಪನವರು ಬಿನ್ನವಿಸಿದಾಗ ಶ್ರೀಗಳು ''ಅಪರಾಧ ಗೈದವನು ಇವನೇ. ಅಂತೆಯೇ ಇವನ ಕೈಗಳಲ್ಲಿ ಹುಳುಗಳು ಬಿದ್ದಿವೆ'' ಎಂದು ಅಪ್ಪಣೆ ಕೊಡಿಸಿದರು. ಶಾನಭೋಗ ತನ್ನ ಕೃತಾಪರಾಧಕ್ಕಾಗಿ ಕ್ಷಮಾಪಣೆ ಕೇಳಿದಾಗ ಶ್ರೀಗಳು ''ಶಾಪಕೊಟ್ಟ ತೋಂಟದಾರ್ಯನೇ ಬೇರೆ, ತಾವೇ ಬೇರೆ'' ಎಂದು ಹೇಳಿದರು. ಶಾನಭೋಗ ನಿರುಪಾಯನಾಗಿ ತನ್ನ ದುರ್ಬುದ್ಧಿಯನ್ನು ಹಳಿಯುತ್ತ ಊರಿಗೆ ಹಿಂತಿರುಗಿದ.

ಹೀಗೆ ಶಾಪಾನುಗ್ರಹ ಸಾಮರ್ಥ್ಯದಿಂದ ಬಹುಕಾಲ ಪೀಠಭಕ್ತರನ್ನು ರಕ್ಷಿಸಿ ಮೃತ್ಯುಂಜಯ ಮಹಾಸ್ವಾಮಿಗಳಿಗೆ ಅಧಿಕಾರಕೊಟ್ಟು ಶಿವನಲ್ಲಿ ಬೆರೆದರು. ಅವರ ಗದ್ದುಗೆಯು ನಮ್ಮ ಶ್ರೀಮಠದಲ್ಲಿದೆ. ಮಠದ ಮುಂಭಾಗದಲ್ಲಿರುವ ಗದ್ದುಗೆಯೇ ಚರಮೂರ್ತಿಗಳಾದ ಕಾಶೀ ಕರಿಬಸವಸ್ವಾಮಿಗಳವರ ಗದ್ದುಗೆ. ಹಿಂಬದಿಯಲ್ಲಿರುವ ಗದ್ದುಗೆಗಳಲ್ಲಿ ನಿರಂಜನ ಪೀಠವನ್ನಲಂಕರಿಸಿದ ಶ್ರೀ ತೋಂಟದಾರ್ಯರ ಗದ್ದುಗೆಯು ಜಾಗ್ರತಸ್ಥಾನವಾಗಿದ್ದು ಭಕ್ತರನ್ನು ಬರಮಾಡಿಕೊಳ್ಳುತ್ತಿದೆ.

ಶ್ರೀಮನ್ನಿರಂಜನ ಜಗದ್ಗುರು ವೃದ್ಧ ತೋಂಟದಾರ್ಯ ಮಹಾಸ್ವಾಮಿಗಳು ಶೂನ್ಯ ಸಿಂಹಾಸನಾಧಿಪತಿಗಳಾದ ಶ್ರೀ ಅಲ್ಲಮಪ್ರಭುದೇವರಿಂದ ಮೂವತ್ತೆರಡನೆಯವರಾಗಿಯೂ ಸಿದ್ಧಲಿಂಗೇಶನಿಂದ ಹದಿನಾಲ್ಕನೆಯವರಾಗಿದ್ದು, ಗದುಗಿನಲ್ಲಿ ಅವರ ಗದ್ದುಗೆಯು ನಮ್ಮ ಶ್ರೀಮಠದಲ್ಲಿದೆ.

**ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳು :**

ಶ್ರೀ ವೃದ್ಧ ತೋಂಟದಾರ್ಯ ಮಹಾಸ್ವಾಮಿಗಳ ತರುವಾಯ ಪೀಠವನ್ನಲಂಕರಿಸಿದವರು ಮೃತ್ಯುಂಜಯ ಮಹಾಸ್ವಾಮಿಗಳು. ಮೃತ್ಯುಂಜಯ ಮಹಾಸ್ವಾಮಿಗಳು ಬಹುಕಾಲ ಬಾಳದೆ ಮೂರೇ ವರ್ಷಗಳಲ್ಲಿ ಶಿವಾಧೀನರಾದರು, ಅವರ ಸಮಾಧಿಯೂ ಗದ್ದುಗೆಯೂ ಶ್ರೀಮಠದಲ್ಲಿದೆ. ಇವರು ಸಿದ್ಧಲಿಂಗೇಶನಿಂದ ಹದಿನೈದನೆಯವರಾಗಿದ್ದಾರೆ.

**ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳು :**

ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳ ತರುವಾಯ ಪೀಠವನ್ನಲಂಕರಿಸಿ ದವರು ಸಿದ್ಧೇಶ್ವರ ಮಹಾಸ್ವಾಮಿಗಳು. ಇವರು ಸಿದ್ಧಲಿಂಗೇಶನಿಂದ ಹದಿನಾರನೆಯ ಪಟ್ಟದವರು. ಷೋಡಶ ಕಲಾಯುಕ್ತ ಚಂದ್ರನಂತೆ ಸಮಸ್ತ ವೈಭವದಿಂದ ಬಾಳಿ ಬೆಳಗಿದರು. ಇಪ್ಪತ್ತನೆಯ ಶತಮಾನದ ಬಸವಣ್ಣನವರೆಂದು ಖ್ಯಾತರಾದ ಲಿಂಗೈಕ್ಯ ಹಾನಗಲ್ಲ ಕುಮಾರ ಮಹಾಸ್ವಾಮಿಗಳೂ ತಪೋಧನರಾದ ಹಾವೇರಿ ಶಿವಬಸವ ಮಹಾಸ್ವಾಮಿಗಳೂ ಶ್ರೀಗಳವರಲ್ಲಿ ಅತ್ಯಂತ ಕಿಂಕರ ಭಾವದಿಂದ ವರ್ತಿಸುತ್ತಿದ್ದರು.

ಶ್ರೀಗಳು ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿದರು. ವಿದ್ಯಾರ್ಥಿಗಳಿಗೆ ಪ್ರಸಾದ ನಿಲಯವನ್ನು ಪ್ರಾರಂಭಿಸಿದರು. ಇವರು ಹಾನಗಲ್ಲ ಶ್ರೀಗಳವರ ಸರ್ವ ವಟುಗಳೊಡನೆ ಹಾಗೂ ಪೀಠದ ಭಕ್ತರೊಡನೆ ತಮ್ಮ ಮೂಲಸ್ಥಾನವಾದ ಎಡೆಯೂರಿಗೆ ಹೋಗಿ ಬಂದರು. ಇವರ ಸಮಾಧಿ ಗದುಗಿನಲ್ಲಿ ಆಗಿದ್ದು, ಇವರ ಗದ್ದುಗೆಯು ಶ್ರೀ ಮಠದಲ್ಲಿದೆ.

**ಶ್ರೀ ಗುರುಬಸವ ಮಹಾಸ್ವಾಮಿಗಳು :**

ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳ ತರುವಾಯ ಪೀಠವನ್ನಲಂಕರಿಸಿದವರು ಶ್ರೀಗುರುಬಸವ ಮಹಾಸ್ವಾಮಿಗಳು. ಇವರ ಕಾಲದಲ್ಲಿ ಶ್ರೀಗಳ ಸಂಸ್ಥಾನಮಠದ ನೆರವು ಪಡೆದು ಕೆ.ಎಲ್.ಇ. ಸೊಸಾಯಿಟಿಯ ಕಾಲೇಜು ಶ್ರೀ ಜಗದ್ಗುರು ತೋಂಟದಾರ್ಯ ಸಾಯಿನ್ಸ ಹಾಗೂ ಆರ್ಟ್ಸ ಕಾಲೇಜು ಎಂದು ನಾಮಕರಣ ಪಡೆಯಿತು. ಶ್ರೀ ಸಿದ್ಧೇಶ್ವರ ಮಹಾಪುರಾಣ ಮುದ್ರಣವಾಯಿತು. ಇವರ ಸಮಾಧಿಯೂ ಗದುಗಿನಲ್ಲಿಯೇ ಆಗಿದ್ದು, ಇವರ ಗದ್ದುಗೆಯು ಶ್ರೀ ಮಠದಲ್ಲಿದೆ.

## ಸದ್ಯ ಪೀಠವನ್ನಲಂಕರಿಸಿದ ನಮ್ಮ ಮಠದ ಜಗದ್ಗುರುಗಳು

**ಶ್ರೀ ಶಿವಕುಮಾರ ಮಹಾಸ್ವಾಮಿಗಳು :**

ಶ್ರೀ ಗುರುಬಸವ ಮಹಾಸ್ವಾಮಿಗಳವರ ತರುವಾಯ ಪೀಠವನ್ನಲಂಕರಿಸಿ ದವರು ಸದ್ಯದ ಮಠದ ಮಹಾಸ್ವಾಮಿಗಳವರಾದ ಶ್ರೀ ಶಿವಕುಮಾರ

ಮಹಾಸ್ವಾಮಿಗಳು. ತಮ್ಮ ಪೀಠದ ಚರಿತ್ರೆ ಗ್ರಂಥವಾದ ಅರ್ಧನಾರೀಶ್ವರ ಪುರಾಣ ಮುದ್ರಣಗೊಳಿಸಿ ಭಕ್ತೋದ್ಧಾರ ಕಾರ್ಯವನ್ನು ಮುಂದುವರಿಸಿದುದು ಸಂತೋಷಪ್ರದ. ಶ್ರೀಮಠದ ಆಶ್ರಯದಲ್ಲಿ ಶ್ರೀಮನ್ನಿರಂಜನ ಜಗದ್ಗುರು ಎಡೆಯೂರ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರ ಐದನೆಯ ಶತಮಾನೋತ್ಸವವನ್ನು ಭಕ್ತವೃಂದವು ಬಹು ವೈಭವದೊಡನೆ ಸಾವಿರದ ಒಂಭತ್ತನೂರ ಎಪ್ಪತ್ತನೆಯ ಇಸ್ವಿ ಅಕ್ಟೋಬರ ತಿಂಗಳ ಮೂರು, ನಾಲ್ಕು ಹಾಗೂ ಐದನೆಯ ದಿನಾಂಕಗಳಂದು ಐದನೆಯ ಶತಮಾನೋತ್ಸವ ಸಮಿತಿಯವರು ಆಚರಿಸಿದರು. ಶ್ರೀಮಠದಲ್ಲಿ ಈಗ ಲಿಂಗಾಯತ ಪ್ರಗತಿಶೀಲ ಯುವಕ ಸಂಘದ ಪರವಾಗಿ ಪ್ರತಿ ಸೋಮವಾರ ಶಿವಾನುಭವ ಪ್ರವಚನವು ವಿದ್ವಜ್ಜನರಿಂದ ನೆರವೇರುತ್ತಿರುವದು. ಶ್ರಾವಣ ಮಾಸದಲ್ಲಿ ಪುರಾಣ ಪ್ರವಚನ ಕಾರ್ಯಕ್ರಮಗಳಲ್ಲದೆ ಅನ್ನದಾಸೋಹವು ಸಾಂಗವಾಗಿ ನಡೆಯುತ್ತಿದೆ.

ನಮ್ಮ ಶ್ರೀ ಮಠದ ರಥೋತ್ಸವವು ಪ್ರತಿವರ್ಷ ಚೈತ್ರ ಶುದ್ಧ ಹುಣ್ಣಿವೆಯ ದಿನ ಅತ್ಯಂತ ವಿಜೃಂಭಣೆಯಿಂದ ಸಾಂಗವಾಗಿ ಜರುಗುತ್ತಿದೆ.

ಶ್ರೀ ಸಿದ್ಧಲಿಂಗೇಶ್ವರೋ ವಿಜಯತೇ

ಶ್ರೀ ಸಿದ್ಧೇಶ್ವರ ಮಹಾಪುರಾಣದಿಂದ ಭಕ್ತಾದಿಗಳ ನಿತ್ಯ ಪಾರಾಯಣಕ್ಕಾಗಿ ಮಹಾಸ್ವಾಮಿಗಳವರ ಕೃಪೆಯಿಂದ ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

ಶ್ರೀ ಜಗದ್ಗುರು ಸಿದ್ಧಲಿಂಗಾಯ ನಮಃ

ಪ್ರಾಯಾಚ್ಛ್ರೀಮದನಾದಿ ಭಕ್ತ ಬಸವ ಸ್ವಾಂತಾಂಬುಜಾಂತೇ ಸ್ಫುರ ।
ದ್ಧಂಸೋ ಯೋಗಿಮನೋ ನಿಶಾಂತವಿಮಲಜ್ಞಾನ ಪ್ರದೀಪೋ ವಿಭುಃ ॥
ಭಕ್ತಾದಿಸ್ಥಲಷಟ್ಕನಿರ್ಣಯಪಥಂ ಸಂಸ್ಥಾಪಯನ್ ಭೂತಲೇ ।
ಸಿದ್ಧೇಶಃ ಕರುಣಾಮಯಃ ಪರತರ ಶ್ರೀ ತೋಂಟದಾರ್ಯಾಹ್ವಯಃ ॥ ೧ ॥

ಶ್ರೀ ಜಗದ್ಗುರು ತೋಂಟದ ಬೋಳಬಸವಾಯ ನಮಃ

ಜ್ಞಾನಾಬ್ಧಿಂ ಗುರುಸಿದ್ಧಲಿಂಗ ವಿಭುಸದ್ಬೋಧೇಂದುಸಂವರ್ಧಿತಂ ।
ಆಮ್ನಾಯಾಂತಮಹೇಶ್ವರಾಗಮಚಃ ಪೀಯೂಷಜನ್ಮಸ್ಥಲಂ ॥
ಯೋಗೀಂದ್ರಾಮಲಹೃತ್ ಸರೋಜಲಸಿತಂ ಸದ್ಭಕ್ತಿ ಮುಕ್ತೋದಯಂ ।
ತಂ ವಂದೇ ಚರವರ್ಯ ಬೋಳ ಬಸವಂ ವಿಚ್ಛಿತ್ತಯೇ ಸಂಸೃತೇಃ ॥ ೨ ॥

ಶ್ರೀ ಜಗದ್ಗುರು ತೋಂಟದ ಸಿದ್ಧವೀರೇಶ್ವರಾಯ ನಮಃ

ದುರ್ವಾದಾಂಬುಧಿಬಾಡಬಂ ಶಿವಮತಾಕೂಪಾರಜೈವಾತೃಕಂ ।
ಖೇಲಂತಂ ಗುರುವರ್ಯ ಬೋಳುಬಸವಾನುಕ್ರೋಶಪದ್ಮಾಕರೇ ॥
ಹಂಸಂ ಶ್ರೀಗುರು ಸಿದ್ಧಲಿಂಗ ಚರರಾಡ್ವಂಶಾಂಬುಧೌ ಚಂದಿರಂ ॥
ಶುದ್ಧಂ ಸದ್ಗುರು ಸಿದ್ಧ ವೀರಯಮಿನಂ ವಂದೇ ಸದಾ ಮುಕ್ತಿದಂ ॥ ೩ ॥

ಶ್ರೀ ಜಗದ್ಗುರು ಉದ್ಧಾನಾರ್ಯಾಯ ನಮಃ

ಉದ್ಧಾನಾರ್ಯಮನಾರ್ಯಗರ್ವಕಮಲಪ್ರೋಚ್ಚಾಟನಾನೇಕಷಂ ।
ಪಂಚೇಷುದ್ವಿರದೇಂದ್ರ ಕುಂಭದಲನಪ್ರೋಚ್ಚಂಡಪಂಚಾನನಂ ॥
ಗೂಳೂರುಸ್ಥಿತ ಸಿದ್ಧ ವೀರಚರರಾಟ್ ತತ್ಪೋಪದೇಶೋದಿತ ।
ಜ್ಞಾನಂ ಜ್ಞಾನಮಯಂ ನಮಾಮಿ ಪರಮಾನಂದಾಂಬುಧಿಂ ಸದ್ಗುರು ॥ ೪ ॥

ಶ್ರೀ ಜಗದ್ಗುರು ತೋಂಟದ ಹರಿಹರ ಸ್ವಾಮಿಭ್ಯೋ ನಮಃ

ಹರಿಹರಚರವರ್ಯಂ ದುರ್ಮತಧ್ವಾಂತಸೂರ್ಯಂ ।
ಶಿವಮತವನಚೈತ್ರಂ ಷಟ್‌ಸ್ಥಲಾರ್ಥಾಬ್ಜಮಿತ್ರಂ ॥
ಯತಿತಿವಿನುತೋದ್ಧಾನಾರ್ಯತತ್ತ್ವೋಪದೇಶಾಂ ।
ಭುಜಮಧುಕರಮೀಡೇ ಭಕ್ತಿಸಂಪತ್ ಸಮೃದ್ಧ್ಯೈ ॥ ೫ ॥

ಶ್ರೀ ಜಗದ್ಗುರು ತೋಂಟದ ಭಿಕ್ಷುಕದ ಬಸವಲಿಂಗಾರ್ಯಾಯ ನಮಃ

ಹರಿಹರೇಶಕರಾಬ್ಜ ಸಮುದ್ಭವಂ ।
ಕರಣವಾರನಗೌಘಪರಶ್ವ ಧಂ ॥
ಬಸವಲಿಂಗಮ ಸಂಗಮನಾಮಯಂ ।
ಹೃದಿ ಭಜಾಮಿ ನಿರಂಜನಜಂಗಮ । ॥ ೬ ॥

ಶ್ರೀ ಜಗದ್ಗುರು ತೋಂಟದ ರಾಚೋಟಿ ಸ್ವಾಮಿಭ್ಯೋ ನಮಃ

ರಾಚೋಟೇಶ ಚರೇಶ್ವರಂ ಬಸವಲಿಂಗೇಶಾನುಕಂಪಾಸುಧಾ –
ಕೂಪಾರೋದ್ಭವ ಮೀಶಭಕ್ತವಿತತೇಶ್ಚಿಂತಾಮಣಿಂ ಭಾಸುರಂ ॥
ಕಾಸಾರಂ ನಿಜಮಾನಸಾಲಿಶಲಿತಾಮ್ನಾ ಯಾಗಮಾಬ್ಜಾಂಚಿತಂ ।
ಲಿಂಗಾಂಗಸ್ಥಲತತ್ತ್ವ ಬೋಧವಿಬುಧದ್ರು ಸ್ವರ್ಗಮಿಡೇಸ್ವಃ ॥ ೭ ॥

ಶ್ರೀ ಜಗದ್ಗುರು ತೋಂಟದ ಕೌದೀ ಮಹಾಂತಸ್ವಾಮಿಭ್ಯೋ ನಮಃ

ಶಾಂತಂ ಕಾಂತಂ ವಿಭಾಂತಂ ಯಮಿಜನವಿತತೇರಂತರಂಗೇ ಮಹಾಂತಾ ।
ಭಿಖ್ಯಂ ಕಂಥಾಂ ವಸಾನಂ ತ್ರಿಯುಗರಿಪುಮದಾರಣ್ಯದಾವಪ್ರಭಾವಂ ॥
ಚಕ್ರೇಷ್ವಾಧಾರಮುಖ್ಯೇಷ್ವವಿರತಮಮಲಂ ಲಿಂಗಮಾಲೋಕಯಂತಂ ।
ರಾಚೋಟೇಶೋಪದೇಶಾಮೃತಶರಧಿಭವಂ ಪೂರ್ಣಚಂದ್ರಂ ನಮಾಮಿ
॥ ೮ ॥

### ಶ್ರೀ ಜಗದ್ಗುರು ತೋಂಟದ ಅರ್ಧನಾರೀಶ್ವರಾಯ ನಮಃ

ಭೀತಿಂ ದುರ್ಮತವಾದಿ ಘೋಕವಿತತೇರುತ್ಪಾದಯಂತಂ ವಿಹಾ ।
ಯೋರತ್ನಂ ವರವೀರಶೈವಜನತಾಚಕೌರಘಮೋದಾಸ್ಪದಂ ॥
ಕಂಥಾಧಾರಿ ಮಹಾಂತದೇವಯಮಿರಾಟ್ಪೂರ್ವಾದ್ರಿಲಭ್ಯೋದಯಂ ।
ರಾಜಂತಂ ಪ್ರಣಮಾಮಿ ಯೋಗಿಹೃದಯಾಕಾಶೇರ್ಧನಾರೀಶ್ವರಂ ॥ ೯ ॥

### ಶ್ರೀ ಜಗದ್ಗುರು ತೋಂಟದ ನಂದೀಶ್ವರಾಯ ನಮಃ

ಸ್ವಾಮೀ ನಂದೀಶ ನಾಮಾ ಜಯತಿ ಚರವರಃ ಪ್ರಾಪ್ತವಾನರ್ಧನಾರೇ ।
ರ್ಯೋಗೀಂದ್ರಾತ್ಕಾಮಿಕಾದ್ಯೇ ಶಿವಗದಿತನಯೇ ವೇದಸಾರೇ ಪ್ರಬೋಧಂ ॥
ಸ್ಪರ್ಧೇ ಸೂರ್ಯಸ್ಯ ಕೀರ್ತಿರ್ಜಗತಿ ಸುಜನತಾ ಯಾಯಭೀಷ್ಟಂ ಪ್ರದುಗ್ಧೇ ।
ತೇಜೋ ಯಸ್ಯೋಷ್ಣರೋಚಿಃ ಪರಿಹರತಿ ತಮೋ ಮೋಹರೂಪಂ ನರಾಣಾಂ
॥ ೧೦ ॥

### ಶ್ರೀ ಜಗದ್ಗುರು ಉಗ್ಗದ ತೋಂಟದ ಸಿದ್ಧಲಿಂಗಾಯ ನಮಃ

ನಂದೀಶಸ್ವಾಮಿವಕ್ತ್ರಾಂಭುಜ ಮಧುರ ಮಧುಕ್ಷೀರ ವಾರಾಶಿಜನ್ಮಾ ।
ಸೋಮದ್ವಿಟ್ಪಾಸ್ತ್ರ ಪಾಥೋರುಹನಿಕರಪರಿಮ್ಲಾನಿದೋ ಯಾಮಿನೀಶಃ ॥
ವೃದ್ಧಿಂ ಶೈವಾಗಮಾಮ್ನಾಯಕುಮುದಮಕರಂದಾಂಬುಧೇರಾದಧಾನಃ ।
ಶ್ರೀ ಮಾನುಗ್ಗೋಪನಾಮಾ ವಿತರತು ಭೌಕಂ ಸರ್ವದಾ ತೋಂಟದಾರ್ಯಃ
॥ ೧೧ ॥

### ಶ್ರೀ ಜಗದ್ಗುರು ತೋಂಟದ ಸದಾಶಿವಸ್ವಾಮಿಭ್ಯೋ ನಮಃ

ಸದಾಶಿವಾದುಗ್ಗದ ತೋಂಟದಾರ್ಯಕಾ ।
ದ್ಗತಂಚರೇಶಾಚ್ಛರಸಾರ್ವಭೌಮತಾಂ ॥
ಸದಾಶಿವೇ ಭಕ್ತಿಮತಾಂ ಸದಾ ಶಿವಂ ।
ದದಾನಮೀಡೇ ಯಮಿನಂ ಸದಾಶಿವಂ ॥ ೧೨ ॥

### ಶ್ರೀ ಜಗದ್ಗುರು ತೋಂಟದ ಮಹಾಸ್ವಾಮಿಭ್ಯೋ ನಮಃ

ನಿತ್ಯಂ ಭಾಂತಮುಮೇಶಭಕ್ತವಿಮಲಸ್ವಾಂತೇ ಮಹಾಂತಾಹ್ವಯಂ ।
ಸಂತೋಷಂ ತನುಮಂತಮಂತಕಭಯಭ್ರಾಂತ್ಯಂಧಕಾರಾರುಣಂ ॥
ಪಂಪಾಭೋನಿಧಿಪತ್ತನೇಶಭಜಕಸ್ತೋಮಾಮರಾನೋಕಹಂ ।
ವಂದೇಹಂ ಯಮಿನಂ ಸದಾಶಿವಸುಧಾವಾರಾನ್ನಿಧೇರ್ನಿರ್ಗತಂ ॥ ೧೩ ॥

ಶ್ರೀ ಜಗದ್ಗುರು ತೋಂಟದ ವೃದ್ಧ ತೋಂಟದಾರ್ಯಾಯ ನಮಃ

ವಾತೋऽ ನಿಶಂ ವಹತು ಭಕ್ತಮನೋಭಿರಾಮಃ ।
ರಾಮೇಶನ್ಯೆರವಿರಲಂ ಯತಿ ತೋಂಟದಾರ್ಯ ॥
ವೃದ್ಧೋ ಮಹಾಂತಯಮಿರುಣ್ಮಲಯಾಚಲೋಥ್ಥೋ ।
ದಿವ್ಯಾಗಮಾಮ್ರುಸುಮವೃಂದಮರಂದವಾಹಿ ॥ ೧೪ ॥

ಶ್ರೀ ಜಗದ್ಗುರು ತೋಂಟದ ಮೃತ್ಯುಂಜಯಾಯ ನಮಃ

ಮೃತ್ಯುಂಜಯಂ ಮೃತ್ಯುಹರಂ ನಮಾಮಿ ।
ಸತಾಂ ಜಗತ್ಯಾಂ ಯತಿತೋಂಟದಾರ್ಯಾತ್ ॥
ವೃದ್ಧಾಚ್ಛರೇಶತ್ವಮುಪಾತ್ತವಂತಂ ।
ಸತ್ಯಾಭಿಸಂಧಂ ತಪಸಾಂ ನಿಧಾನಂ ॥ ೧೫ ॥

ಶ್ರೀ ಜಗದ್ಗುರು ತೋಂಟದ ಸಿದ್ಧೇಶ್ವರಾಯ ನಮಃ

ಮೃತ್ಯುಂಜಯೋ ಯಮಿವರಃ ಸ್ಥಲಷಟ್ಕತತ್ತ್ವ ।
ಭೋಧಾಧಿಕಾರ ಪದವೀಂ ಜಗತಾಂ ಹಿತಾಯ ॥
ಯಸ್ಮೈದದ ಜಗತಿ ಶಾಂತಿಮತಾಂ ವರಾ ।
ಸಿದ್ಧೇಶ್ವರಃ ಶಮಧನಃ ಸ ಪುನಾತು ವಿಶ್ವಂ ॥ ೧೬ ॥

ಶ್ರೀ ಜಗದ್ಗುರು ತೋಂಟದ ಗುರುಬಸವ ಸ್ವಾಮಿನೇ ನಮಃ

ಶ್ರೀ ಸಿದ್ಧೇಂದ್ರ ಗುರೂಪದೇಶಮನುಸೃತ್ಯಾಂಗೇಷ್ಟ ಲಿಂಗೇಷ್ಟಯೋ ।
ರೇಕತ್ವಂ ಪ್ರಸಮೀಕ್ಷ್ಯ ಸಂಸ್ಸ್ರಿಮಹಾವೃಕ್ಷಸ್ಯ ಬೀಜೋಪಮಾ ॥
ಹಂಕಾರಂ ನಿಜಬೋಧವಹ್ನಿದಹನಂ ಕೃತ್ವಾಶ್ರೀತಾಂಸ್ತೋಷಯನ್ ।
ಯಃ ಸ್ವಾಮೀ ಗುರುಪೂರ್ವಕೋ ಬಸವರಾಟ್ಟುಯಾರ್ತ್ಸದಾ ಮಂಗಲಂ
ಶ್ರೀ ತೋಂಟದ ಅನಾದಿ ಸಿದ್ಧಲಿಂಗಾರ್ಪಣಮಸ್ತು ॥ ೧೭ ॥

ಶ್ರೀ ಗುರು ಸಿದ್ಧಲಿಂಗಾಯ ನಮಃ

ಕಲ್ಯಾಣವೆಂಬ ಪ್ರಣತಿಯಲ್ಲಿ ಭಕ್ತಿರಸವೆಂಬ ತೈಲವನೆರೆದು !
ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿ ಮುಟ್ಟಿಸಲು !!
ತೊಳಗಿ ಬೆಳಗುತಿರ್ದಿತಯ್ಯಾ ಶಿವನ ಪ್ರಕಾಶ ? !!!

—ಶ್ರೀಮದಲ್ಲಮ ಪ್ರಭುಗಳು

## ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಪೀಠದ ದಿವ್ಯ ಪರಂಪರೆ

ಹನ್ನೆರಡನೇ ಶತಮಾನದ ಉತ್ತರಾರ್ಧದಲ್ಲಿ ಕ್ರಿ.ಶ. ೧೧೬೬ರಲ್ಲಿ ಶಿವಶರಣ ಹಾಗೂ ಶರಣೆಯರ ಸಂಕುಳದ ಮುಂದಾಳುಗಳಾದ ಜಗಜ್ಯೋತಿ ಶ್ರೀ ಬಸವಣ್ಣನವರು ಕಲ್ಯಾಣದಲ್ಲಿ ಶೂನ್ಯಸಿಂಹಾಸನ ಪೀಠವನ್ನು ಸ್ಥಾಪಿಸಿ ಜಗದ್ಗುರು ಶ್ರೀ ಅಲ್ಲಮ ಪ್ರಭುದೇವರನ್ನು ಮೂರ್ತಗೊಳಿಸಿದರು. ಅಂದಿನಿಂದ ೧೫ನೇ ಶತಮಾನದವರೆಗೆ ಎಡೆಯೂರ ಶ್ರೀ ತೋಂಟದ ಸಿದ್ಧಲಿಂಗಮಹಾಸ್ವಾಮಿಗಳವರು ೧೯ನೆಯವರಾಗಿರುವರು. ಮೂಲದಿಂದ ಇಲ್ಲಿಯವರೆಗೆ ೩೬ನೆಯ ಪೀಠಾಧಿಕಾರಿಗಳಾದ ಗದುಗಿನ ನಿರಂಜನ ಜಗದ್ಗುರು ತೋಂಟದ ಶಿವಕುಮಾರ ಮಹಾಸ್ವಾಮಿಗಳವರೆಗೂ ಯಾರು ಯಾರು ಪೀಠಾಧಿಕಾರಿಗಳಾಗಿರುವರು ಎಂಬುದನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಅವರವರ (ಪೀಠಾರೋಹಣ ಕಾಲ)ವನ್ನು ಹೆಸರಿನ ಮುಂದೆ ಕಂಸಿನಲ್ಲಿ ಕೊಟ್ಟಿದೆ.

| ಶ್ರೀ ಮ.ನಿ.ಪ್ರ.ಜ. | ಶೂನ್ಯ ಸಿಂಹಾಸನಾಧಿಪತಿಗಳು | ಗದ್ದಿಗೆ ಸ್ಥಳ |
|---|---|---|
| ,, | ಶ್ರೀ ಅಲ್ಲಮ ಪ್ರಭುದೇವರು | ಶ್ರೀಶೈಲ ಕದಳಿಬನ |
| ,, | ಶ್ರೀ ಚನ್ನಬಸವದೇವರು (೨೪) | ಉಳವಿ |
| ,, | ಶ್ರೀ ಸಿದ್ಧರಾಮದೇವರು | ಸೊಲ್ಲಾಪೂರ |
| ,, | ಶ್ರೀ ಅನಾದಿ ಗಣನಾಥ ಸ್ವಾಮಿಗಳು | ಗುಹೆ |
| ,, | ಶ್ರೀ ಆದಿಗಣೇಶ್ವರ ಸ್ವಾಮಿಗಳು | ಕಾವೇರಿ ಹತ್ತಿರ ಪ್ರಭುಸ್ವಾಮಿ ಬೆಟ್ಟ |
| ,, | ಶ್ರೀ ನಿರ್ಮಾಯ ಗಣೇಶ್ವರ ಸ್ವಾಮಿಗಳು | ಮಲೆಯಾಳಿಗೆ ಸೇರಲ್ಪಟ್ಟ ಮಹೇಶ್ವರ ಬೆಟ್ಟ |
| ,, | ಶ್ರೀ ನಿರಂಜನ ಸ್ವಾಮಿಗಳು | ಕಲ್ಯಾಣದ ತ್ರಿಪುರಾಂತಕ ಕೆರೆ ದಂಡೆಗೆ |
| ,, | ಶ್ರೀ ಜ್ಞಾನಾನಂದ ಸ್ವಾಮಿಗಳು | ಶ್ರೀಶೈಲದಲ್ಲಿ |
| ,, | ಶ್ರೀ ಆತ್ಮಗಣವರ ಸ್ವಾಮಿಗಳು | ಶ್ರೀಶೈಲ ಕದಳಿಬನದಲ್ಲಿ |
| ,, | ಶ್ರೀ ಅಧ್ಯಾತ್ಮ ಗಣನಾಥ ಸ್ವಾಮಿಗಳು | ತಿರುವಣ್ಣಾಮಲೈ |
| ,, | ಶ್ರೀ ರುದ್ರಮುನಿ ಸ್ವಾಮಿಗಳು | ನಾಯಕನಹಟ್ಟಿ |
| ,, | ಶ್ರೀ ಬಸವಪ್ರಭು ಸ್ವಾಮಿಗಳು | ತೇರದಾಳ |
| ,, | ಶ್ರೀ ಆದಿಲಿಂಗ ಸ್ವಾಮಿಗಳು | ಕಲ್ಲೂರ |
| ,, | ಶ್ರೀ ಚನ್ನವೀರ ಸ್ವಾಮಿಗಳು | ತೊಗಲ್ಲಿಗೆ ಸೇರಿದ ಮುನಿಪಲ್ಲಿ |

'' ಶ್ರೀ ಗೋಸಲ ಸಿದ್ಧೇಶ್ವರ ಸ್ವಾಮಿಗಳು ಸಿದ್ಧಗಂಗಾ

'' ಶ್ರೀ ಶಂಕರಾಚಾರ್ಯ ಸ್ವಾಮಿಗಳು
ಕೊರಟಗೆರೆ ಹತ್ತಿರ ಸಿದ್ಧರ ಬೆಟ್ಟ

'' ಶ್ರೀ ದಿವ್ಯಲಿಂಗೇಶ್ವರ ಸ್ವಾಮಿಗಳು
ಹರದನಹಳ್ಳಿಯ ವಾಣಿಜ್ಯಪುರ

'' ಶ್ರೀ ಚನ್ನಬಸವರಾಜೇಂದ್ರ ಸ್ವಾಮಿಗಳು ಗುಬ್ಬಿ

ಶ್ರೀ ಮ.ನಿ.ಜ ತೋಂಟದ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಎಡೆಯೂರ

'' ಶ್ರೀ ಬೋಳಬಸವಸ್ವಾಮಿಗಳು ಪೀಠಾರೋಹಣಕಾಲ ೧೪೫೬–೬೮

'' ಶ್ರೀ ಸಿದ್ಧವೀರೇಶ್ವರ ಸ್ವಾಮಿಗಳು ೧೪೬೮–೧೪೮೪

'' ಶ್ರೀ ಉದ್ಧನಾರ್ಯ ಸ್ವಾಮಿಗಳು ೧೪೮೪–೧೫೦೪

'' ಶ್ರೀ ಹರಿಹರ ಸ್ವಾಮಿಗಳು ೧೫೦೪–೧೫೨೭

'' ಶ್ರೀ ಭಿಕ್ಷುಕದ ಬಸವಲಿಂಗ ಸ್ವಾಮಿಗಳು ೧೫೨೭–೧೫೫೭

'' ಶ್ರೀ ಕಟಗಿಹಳ್ಳಿ ರಾಚೋಟಿ ಸ್ವಾಮಿಗಳು ೧೧೫೭–೧೬೦೭

'' ಶ್ರೀ ಕೌದಿ ಮಹಾಂತ ಸ್ವಾಮಿಗಳು ೧೬೦೭–೧೬೭೨

'' ಶ್ರೀ ಅರ್ಧನಾರೀಶ್ವರ ಸ್ವಾಮಿಗಳು ೧೬೭೨–೧೭೨೨

'' ಶ್ರೀ ನಂದೀಶ್ವರ ಸ್ವಾಮಿಗಳು ೧೭೨೨–೧೭೬೭

'' ಶ್ರೀ ಉಗ್ಗದ ತೋಂಟದಾರ್ಯ ಸ್ವಾಮಿಗಳು ೧೭೬೭–೧೭೭೩

'' ಶ್ರೀ ಸದಾಶಿವ ಸ್ವಾಮಿಗಳು ೧೭೭೩–೧೮೦೮

'' ಶ್ರೀ ಮಹಾಂತ ಸ್ವಾಮಿಗಳು ೧೮೦೮–೧೮೩೮

'' ಶ್ರೀ ವೃದ್ಧ ತೋಂಟದಾರ್ಯ ಸ್ವಾಮಿಗಳು ೧೮೩೮–೧೮೭೮

'' ಶ್ರೀ ಮೃತ್ಯುಂಜಯ ಸ್ವಾಮಿಗಳು ೧೮೭೮–೧೮೮೧

'' ಶ್ರೀ ಸಿದ್ಧೇಶ್ವರ ಸ್ವಾಮಿಗಳು ೧೮೮೧–೧೯೨೪

'' ಶ್ರೀ ಗುರುಬಸವ ಸ್ವಾಮಿಗಳು ೧೯೨೪–೧೯೬೦

'' ಶ್ರೀ ಶಿವಕುಮಾರ ಸ್ವಾಮಿಗಳು ೧೯೬೦–೧೯೭೪

ಸದ್ಯದ '' ಶ್ರೀ ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ೧೯೭೪–

■■

ಗ್ರಂಥ ತರಂಗ - ಒಂದು

# ಲಿಂ. ಎಳಂದೂರು ಬಸವಲಿಂಗ ಮಹಾಸ್ವಾಮಿಗಳು

❋

ಲೇಖಕರು :
ಸಿದ್ಧಲಿಂಗಯ್ಯ ಹೊಸಮಠ

❋

ಶ್ರೀ ಜಗದ್ಗುರು ತೋಂಟದಾರ್ಯ ಸೇವಾ ಸಮಿತಿ,
ಅಣ್ಣಿಗೇರಿ, ಜಿ. ಧಾರವಾಡ

ಪ್ರಕಾಶಕರು :
ಶ್ರೀ ಜಗದ್ಗುರು ತೋಂಟದಾರ್ಯ
ಸೇವಾ ಸಮಿತಿ ಅಣ್ಣಿಗೇರಿ,
ಜಿ. ಧಾರವಾಡ

ಗ್ರಂಥದಾನ :
ಲಿಂ. ಮಹದೇವಪ್ಪನವರು ಶಿವಪ್ಪನವರು ಹುಬ್ಬಳ್ಳಿ,
ಸಾ|| ಅಣ್ಣಿಗೇರಿ.
ಇವರ ಸ್ಮರಣಾರ್ಥ
ಶ್ರೀ ಹುಬ್ಬಳ್ಳಿ ಸಹೋದರರು, ಅಣ್ಣಿಗೇರಿ.

ಬೆಲೆ : ೨–೦೦ ರೂ.

ಪ್ರತಿಗಳು : ೨೦೦೦

೧೯೮೦

ಮುದ್ರಕರು :
ತ್ವರಿತ ಮುದ್ರಣ (ಪುಸ್ತಕ ವಿಭಾಗ)
ಹೊಂಬಳ ರೋಡ, ಗದಗ.

ಅನಾದಿ ನಿರಂಜನ ಜಗದ್ಗುರು
ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳವರಿಗೆ
ಅರ್ಪಿತ

॥ ಶ್ರೀ ಗುರುಬಸವಲಿಂಗಾಯ ನಮಃ ॥

ಶ್ರೀ ಮನ್ನಿರಂಜನ ಜಗದ್ಗುರು
ತೋಂಟದ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು
ಶ್ರೀ ತೋಂಟದಾರ್ಯ ಸಂಸ್ಥಾನಮಠ ಡಂಬಳ-ಗದಗ ಅವರ



## ಆಶೀರ್ವಚನ

ಪ್ರಾತಃಸ್ಮರಣೀಯರಾದ ಲಿಂ. ಹಾನಗಲ್ಲ ಕುಮಾರ ಶಿವಯೋಗಿಗಳು ಇಪ್ಪತ್ತನೆಯ ಶತಮಾನದ ಅಗ್ರಮಾನ್ಯ ಸಮಾಜ ಸುಧಾರಕರು. ಅವರ ತ್ಯಾಗ ಪರಿಶ್ರಮದ ಫಲವಾಗಿ ಶವದಂತೆ ಬಿದ್ದಿದ್ದ ಸಮಾಜ ಸಚೇತನಗೊಂಡಿತು. ಇಂಥಹದೇ ಕಾರ್ಯವನ್ನು ಹಿಂದೂ ಸಮಾಜದಲ್ಲಿ ಸ್ವಾಮಿ ವಿವೇಕಾನಂದರು ೧೯ನೇ ಶತಮಾನದ ಉತ್ತರಾರ್ಧದಲ್ಲಿ ಗೈದುದು ಸರ್ವವಿದಿತ. ಈ ದಿಸೆಯಲ್ಲಿ ಲಿಂ. ಹಾನಗಲ್ಲ ಕುಮಾರಸ್ವಾಮಿಗಳಿಗೂ ಸ್ವಾಮಿ ವಿವೇಕಾನಂದರ ಜೀವನಕ್ಕೂ ಬಹಳಷ್ಟು ಸಾಮ್ಯಾಂಶಗಳಿವೆ.

ಕಲ್ಕತ್ತೆಯ ನಾಸ್ತಿಕ ನರೇಂದ್ರನನ್ನು ಅಸೀಮ ಸ್ಫೂರ್ತಿ, ನಿರಂತರ ಕಾರ್ಯೋತ್ಸಾಹದ ಅಕ್ಷಯನಿಧಿ ದೇವಮಾನವ ಸ್ವಾಮಿ ವಿವೇಕಾನಂದರನ್ನಾಗಿ ಪರಿವರ್ತಿಸಿದವರು ಶ್ರೀ ರಾಮಕೃಷ್ಣ ಪರಮಹಂಸರು. ಅದ್ವೈತ ವೇದಾಂತದ ಪ್ರಭಾವಕ್ಕೊಳಗಾಗಿ ಶಿವಾದ್ವೈತದ ದ್ವಂದ್ವದ ದಂದುಗದಲ್ಲಿ ತೊಳಲಾಡುತ್ತಿದ್ದ ಜೋಯಿಸರ ಹರಳಹಳ್ಳಿಯ ಸಾಧಕ ಹಾಲಯ್ಯನನ್ನು ಕಾರಣಿಕ, ಯುಗಪುರುಷ ಶ್ರೀ ಹಾನಗಲ್ಲಕುಮಾರ ಸ್ವಾಮಿಗಳನ್ನಾಗಿ ಮಾಡಿದವರು ಶ್ರೀ ಎಳಂದೂರು ಬಸವಲಿಂಗ ಮಹಾಸ್ವಾಮಿಗಳು. ಶ್ರೀ ಎಳಂದೂರು ಬಸವಲಿಂಗಸ್ವಾಮಿಗಳ ಚರಿತ್ರೆ ಬಿಡಿಬಿಡಿಯಾಗಿ ಅಲ್ಲಲ್ಲಿ ಕೇಳಿಬರುತ್ತಿತ್ತು. ಅದನ್ನು ಇಡಿಯಾಗಿ ಹೊಂದಿಸಿ ಬರೆದವರು ಶ್ರೀ ಸಿದ್ಧಲಿಂಗಯ್ಯ ಹೊಸಮಠ.

ಅಣ್ಣಿಗೇರಿಯ ಸುಪ್ರಸಿದ್ಧ ಹುಬ್ಬಳ್ಳಿ ಬಂಧುಗಳು ಈ ಗ್ರಂಥ ಪ್ರಕಾಶನಕ್ಕೆ ಈ ಮನೆತನದ ಹಿರಿಯರಾದ ಲಿಂ. ಶ್ರೀ ಮಹಾದೇವಪ್ಪನವರ ಸ್ಮರಣಾರ್ಥ–ಭಕ್ತಿಸೇವೆ ಸಲ್ಲಿಸಿದ್ದಾರೆ.

ಶ್ರೀ ಮಹದೇವಪ್ಪನವರು ಪುರುಷಪ್ರಯತ್ನದಿಂದ ತಮ್ಮ ಸಹೋದರ ಶ್ರೀ ವೀರಪ್ಪ ಹಾಗೂ ನಿಜಲಿಂಗಪ್ಪನವರೊಂದಿಗೆ ಅವಿರತ ಪರಿಶ್ರಮಿಸಿ ಆಗರ್ಭ ಶ್ರೀಮಂತರಾದುದು ರೋಮಾಂಚಕ ಘಟನೆಗಳ ಕಥೆಯಾಗಿದೆ. ಅವರು ತೋರಿದ ಸತ್‌ಪಥದಲ್ಲಿ ಅವರ ಮಕ್ಕಳು ಮುನ್ನಡೆದಿದ್ದಾರೆ. ಅವರಿಗೂ, ಲೇಖಕರಿಗೂ ಎಳಂದೂರು ಶ್ರೀ ಮ.ನಿ.ಪ್ರ. ಬಸವಲಿಂಗ ಮಹಾಸ್ವಾಮಿಗಳ ಸಮಾಧಿಯ ಸುಂದರ ಬಂಧುರ ಕಟ್ಟಡ ನಿರ್ಮಾಣ ಗೈದ ಶ್ರೀ ಜ. ತೋಂಟದಾರ್ಯ ಸೇವಾ ಸಮಿತಿಯವರಿಗೂ ಶ್ರೀ ಸ್ವಾಮಿ ಎಡೆಯೂರು ಸಿದ್ಧಲಿಂಗೇಶ ಉತ್ತರೋತ್ತರ ಶ್ರೇಯೋಭಿವೃದ್ಧಿಯನ್ನುಂಟು ಮಾಡಲೆಂದು ಹಾರೈಸಿದ್ದೇವೆ.

ಇತ್ಯಾಶಿಷಃ

ಪರಮಪೂಜ್ಯ

ಶ್ರೀ ಮ.ನಿ.ಪ್ರ. ಸದಾಶಿವ ಮಹಾಸ್ವಾಮಿಗಳು

ವಿರಕ್ತಮಠ, ಹಾನಗಲ್ ಅವರ

## ಶುಭ ಸಂದೇಶ

ಶಿವಯೋಗದಲ್ಲಿ ಪರಾಕಾಷ್ಠತೆಯನ್ನು ಪಡೆದಿರುವ ಪೂಜ್ಯ ಎಳಂದೂರು ಶ್ರೀ ಬಸವಲಿಂಗ ಮಹಾಸ್ವಾಮಿಗಳವರು ಲಿಂಗೈಕ್ಯರಾಗಿ ಬಹುದಿವಸಗಳಾದರೂ ಅವರ ಜೀವನಚರಿತ್ರೆಯು ಪ್ರಕಟವಾಗಿದ್ದಿಲ್ಲ. ಈಗಿನ ಪೂಜ್ಯ ಗದುಗಿನ ಶ್ರೀ ಜಗದ್ಗುರುಗಳವರು ಪ್ರಕಟ ಮಾಡಿದ್ದು ಸ್ತುತ್ಯವಿದೆ. ಹಠಯೋಗವನ್ನು ಸಾಧನವನ್ನಾಗಿ ಮಾಡಿಕೊಂಡು ಶಿವಯೋಗ ಸಿದ್ಧಿಯನ್ನು ಸಾಧಿಸಿದವರು ಶ್ರೀ ಬಸವಲಿಂಗ ಮಹಾಸ್ವಾಮಿಗಳು. ಅವರ ವ್ಯಕ್ತಿತ್ವವು ಉನ್ನತವಾಗಿತ್ತು. ಪೂಜ್ಯರು ಎಲ್ಲಿ ಜನಿಸಿದರು ? ಅವರ ಬಾಲ್ಯಾವಸ್ಥೆಯ ವಿದ್ಯಾರ್ಜನೆಯು ಎಲ್ಲಿ ಜರುಗಿತು ? ಸಾದ್ಯಂತವಾಗಿ ಇವರ ಜೀವನ ಚರಿತ್ರೆಯು ಉಪಲಬ್ಧವಿರುವದಿಲ್ಲವೆಂದು ತಿಳಿದುಬರುತ್ತದೆ.

ಶ್ರೀಗಳವರು ಗದುಗಿನ ತೋಂಟದಾರ್ಯಮಠಕ್ಕೆ ಪ್ರವೇಶ ಮಾಡಿದ ಮೇಲೆ ಅವರ ಚರಿತ್ರೆಯು ಪ್ರಾರಂಭವಾಗುತ್ತದೆ. ಗ್ರಂಥಕರ್ತರಾದ ಶ್ರೀ ಸಿದ್ಧಲಿಂಗಯ್ಯನವರು ಆಪ್ತರಿಂದ ಶ್ರೀ ಬಸವಲಿಂಗ ಶಿವಯೋಗಿಗಳ ವಿಷಯವನ್ನು ತಿಳಿದುಕೊಂಡು ಮತ್ತು ಕೇಳಿಕೆಯಿಂದಲೂ ಪೂಜ್ಯ ಶ್ರೀಗಳ ಜೀವನಚರಿತ್ರೆಯನ್ನು ಹೃದಯಂಗಮವಾಗಿ ಚಿತ್ರಿಸಿರುವರು.

ಪೂಜ್ಯರು ಹುಬ್ಬಳ್ಳಿಯಲ್ಲಿರುವ ಶ್ರೀ ಆರೂಢರ ಮಠಕ್ಕೆ ಹೋಗಿ ಅದ್ವೈತ ಮತವನ್ನು ಖಂಡಿಸಿ, ವೀರಶೈವರಿಗೆ ಜ್ಞಾನದೊಡನೆ ಅಂತ್ಯದವರೆಗೂ ಲಿಂಗಪೂಜೆಯು ಅತ್ಯವಶ್ಯವಾಗಿಬೇಕೆಂದು ಪ್ರಮಾಣದೊಡನೆ ಸಿದ್ಧಪಡಿಸಿ, ಅದಕ್ಕೆ ಶ್ರೀ ಆರೂಢರು ಒಪ್ಪುವಂತೆ ಮಾಡಿದ್ದು ಅತ್ಯಂತ ಮಹತ್ವದ ವಿಷಯವು. ಆ ಕಾಲಕ್ಕೆ ಅಲ್ಲಿದ್ದ ಹಾಲಯ್ಯನವರು (ಹಾನಗಲ್ಲ ಕುಮಾರ ಮಹಾಸ್ವಾಮಿಗಳು) ಶ್ರೀಗಳವರಲ್ಲಿರುವ ಪ್ರಗಾಢ ಪಾಂಡಿತ್ಯವನ್ನು ಹಾಗೂ ಮಹಾತೇಜಸ್ಸನ್ನೂ ಗುರುತಿಸಿ ಅವರಿಗೆ ಪ್ರಶಿಷ್ಯರಾದರು. ಅವರ ಕೂಡ ಎಳಂದೂರಿಗೆ ಹೋಗಿ ವೀರಶೈವ ತತ್ತ್ವಗಳನ್ನೂ ಶಿವಯೋಗದ ಸಾಮರ್ಥ್ಯವನ್ನೂ ಅರಿತುಕೊಂಡು ಅವರಿಂದ ಅನುಗ್ರಹಿತರಾದರು. ನಂತರ ಶಂಭುಲಿಂಗನ ಬೆಟ್ಟದಲ್ಲಿ ಗುರುಗಳೊಡನೆ ಶಿವಯೋಗ ಸಿದ್ಧಿಯನ್ನು ಪಡೆದರು. ಮುಂದೆ ಪೂಜ್ಯ ಶ್ರೀ ಹಾನಗಲ್ಲ ಕುಮಾರಮಹಾಸ್ವಾಮಿಗಳವರು ಶಿವಯೋಗ ಮಂದಿರವನ್ನು ಸ್ಥಾಪಿಸಿ, ಸಮಾಜವನ್ನು ಉದ್ಧಾರ ಮಾಡುವ ದಿವ್ಯಶಕ್ತಿಯನ್ನು ಕೊಟ್ಟವರೇ ಶ್ರೀ ಬಸವಲಿಂಗ ಮಹಾಸ್ವಾಮಿಗಳು. ಈ ಪವಿತ್ರವಾದ ಪೂಜ್ಯರ ಜೀವನ ಚರಿತ್ರೆಯನ್ನು ಸರ್ವರೂ ಓದಿ ಪಾವನರಾಗಬೇಕೆಂದು ಹಾರೈಸುತ್ತೇವೆ.

ಸತ್ಯಂ ಶಿವಂ ಸುಂದರಂ

*

# ಮೊದಲ ಮಾತು

ಮನೋಸಂಘರ್ಷಕ್ಕೆ ಬೀಜವಾಗುತ್ತಿರುವ, ನಗರೀಕರಣ, ಆಧುನಿಕತೆ, ಕ್ರಮಕ್ರಮವಾಗಿ ಮಾನವೀಯ ಮೌಲ್ಯಗಳನ್ನು ಮೆಟ್ಟಿನಿಲ್ಲುತ್ತಿವೆ. ವ್ಯಕ್ತಿ ವ್ಯಕ್ತಿಗಳ ನಡುವಿನ ಪ್ರಾಥಮಿಕ ಸಂಬಂಧಗಳು ಮುರಿದು ಹೋಗಿ ಆಳವಾಗಿ ಕಾಡುತ್ತಿರುವ ಪರಕೀಯತೆ, ಊಳಿಡುವ ಒಂಟಿತನ, ತಪ್ತಗೊಳಿಸುವ ಅನಾಥ ಭಾವದಿಂದಾಗಿ ಬದುಕೆಲ್ಲ ಅಸ್ತವ್ಯಸ್ತ.

ಇಂಥದೊಂದು ನಿರಾಸೆಯ ವಾತಾವರಣದಲ್ಲಿ ಅಣ್ಣಿಗೇರಿಯ 'ತೋಂಟದಾರ್ಯ ಸೇವಾ ಸಮಿತಿ' ಉದಾತ್ತ ಧ್ಯೇಯಗಳ ಪುನಃ ಪ್ರತಿಷ್ಠಾಪನೆಗಾಗಿ ದುಡಿಯುತ್ತಿರುವದು ನಿಜಕ್ಕೂ ಸ್ತುತ್ಯ. ಈ ಸಮಿತಿ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಮೌಲ್ಯಗಳ ಅರ್ಥ ವ್ಯಾಪ್ತಿಯನ್ನು ವಿಶಾಲಗೊಳಿಸಲು ಪರಿಶ್ರಮಿಸುತ್ತದೆ. ಧರ್ಮದ ಸುತ್ತ ಹಬ್ಬಿಕೊಂಡಿರುವ ಮೂಢನಂಬಿಕೆ, ಅಂಧಾನುಕರಣೆ ಇತ್ಯಾದಿ ಅಸಂಗತಗಳ ಆವರಣವನ್ನು ಸರಿಸಿ ಧರ್ಮ, ಸಮಾಜ, ಸಂಸ್ಕೃತಿಯ ವಾಸ್ತವಿಕ ತಿಳಿವಳಿಕೆಯನ್ನೊದಗಿಸಲು ಅವಿರತವಾಗಿ ಕಾರ್ಯನಿರತವಾಗಿದೆ.

'ಶಿಷ್ಯರ ಸೇವೆಯೇ ಶಿವಪೂಜೆ' ಎಂಬ ಮಹಾಗುರು ತೋಂಟದಾರ್ಯರ ಸಂದೇಶದಂತೆ ಅನವರತ ಸೇವಾಪೂಜೆಯಲ್ಲಿ ತೊಡಗಿದ ಗದುಗಿನ ಜಗದ್ಗುರು ಶ್ರೀ ತೋಂಟದಾರ್ಯ ಮಠದ ಒಂದು ಅಂಗವಾಗಿರುವ ಈ ಸಮಿತಿ ಅನೇಕ ಸೃಷ್ಟ್ಯಾತ್ಮಕ ಚಟುವಟಿಕೆಗಳಿಂದ ಮಾನವೀಯ ಮೌಲ್ಯಗಳ ಬೆಳಗನ್ನು ಹೆಚ್ಚಿಸುತ್ತಿದೆ. ವ್ಯಷ್ಠಿ, ಸಮಷ್ಠಿ ಕಲ್ಯಾಣಕ್ಕಾಗಿ ಮೌನವಾಗಿ ದುಡಿಯುತ್ತಿದೆ.

ಇದೆಲ್ಲದರ ಸಾಧನೆಗೆ ಜನರಲ್ಲಿ ಅರಿವು ಅಂಕುರಿಸಬೇಕು. ಹಾಗಾಗಲು ಅದಕ್ಕೊಂದು ಮಾಧ್ಯಮ ಅವಶ್ಯ. ಈ ಅರಿವಿನ ಕ್ಷೇತ್ರ ವ್ಯಾಪ್ತಿಯನ್ನು ಹೆಚ್ಚಿಸಲೆಂದೇ ಶ್ರೀ ತೋಂಟದಾರ್ಯ ಸೇವಾಸಮಿತಿ, ಧರ್ಮ, ಸಾಹಿತ್ಯ, ಸಮಾಜ, ಸಂಸ್ಕೃತಿ, ಕೃಷಿ, ಯೋಗಗಳ ಬಗೆಗೆ ಉಪನ್ಯಾಸ, ಪುರಾಣ, ಕೀರ್ತನ ಪ್ರಸಂಗ, ಸಂಗೀತ, ಚಲನಚಿತ್ರ ಇತ್ಯಾದಿ ಮಾಧ್ಯಮಗಳ ಮುಖಾಂತರ ದೇಶ, ಧರ್ಮಗಳ ಕಲ್ಪನೆ, ಸಮಾಜ ಸಂಸ್ಕೃತಿಯ ಅರಿವು, ಸಹಕಾರ ಸಂಘಟನೆಯ ಮಹತ್ವ, ಕೃಷಿ ವಿಜ್ಞಾನದ ಉಪಯೋಗ ಹೀಗೆ ಬದುಕು ಸುಂದರವಾಗಲು ಸದೃಢವಾಗಲು ನೆರವಾಗುವ ಸಕಲ ವಿಷಯಗಳನ್ನೂ ಅವಶ್ಯವಿದ್ದಾಗ ಪ್ರಾತ್ಯಕ್ಷಿಕೆಗಳೊಂದಿಗೆ ಬೋಧಿಸುವ ವ್ಯವಸ್ಥೆಯನ್ನು ಒದಗಿಸುತ್ತದೆ.

ಸೇವಾಸಮಿತಿಯ ಈ ಬಹುಮುಖದ ಚಟುವಟಿಕೆಗಳಲ್ಲಿ ಪುಸ್ತಕ ಪ್ರಕಟನೆಯೂ ಒಂದು. ಆ ದಿಸೆಯಲ್ಲಿ ''ಲಿಂ. ಎಳಂದೂರು ಬಸವಲಿಂಗ ಸ್ವಾಮಿಗಳು'' ಎಂಬ ಕೃತಿಯು ಈ ಕೃತಿ ಸಮಿತಿಯಿಂದ ಅರಳುತ್ತಿರುವ ಪ್ರಥಮ ಪುಷ್ಪ.

ಲಿಂ. ಎಳಂದೂರು ಬಸವಲಿಂಗ ಮಹಾಸ್ವಾಮಿಗಳು ವೀರಶೈವ ಧರ್ಮ, ಸಮಾಜ ಅವನತಿಯ ದಾರಿಯಲ್ಲಿ ಸಾಗುತ್ತಿದ್ದಾಗ ಏಕಾಂಗಿಯಾಗಿ ನಾಡಿನಲ್ಲೆಲ್ಲ ಸಂಚರಿಸಿ, ಜನತೆಯ ಮೌಢ್ಯದ ಕತ್ತಲೆಯನ್ನು ತಮ್ಮ ಜ್ಞಾನದ ಬೆಳಕಿನಿಂದ ನಿವಾರಿಸಿದ ಜೀವಂತ ಜ್ಯೋತಿಗಳು. ಧರ್ಮ ಪ್ರಸಾರ, ಸಮಾಜ ಕಲ್ಯಾಣ ಇವುಗಳ ಸಾಧನೆಯಲ್ಲಿ ತಮ್ಮ ಇಡೀ ಬದುಕನ್ನೇ ಬತ್ತಿಯಾಗಿ ಉರಿಸಿದವರು. ವೀರಶೈವ ಸಮಾಜದ ಪುನರುಜ್ಜೀವಕರಾದ ಲಿಂ. ಹಾನಗಲ್ಲ ಕುಮಾರಶಿವಯೋಗಿಗಳಂತಹ ದಿವ್ಯತೇಜೋಮೂರ್ತಿಯ ನಿರ್ಮಾಪಕರು.

ತೋಂಟದಾರ್ಯ ಸೇವಾ ಸಮಿತಿ ವತಿಯಿಂದ ಈ ಮಹಾಚೇತನರ ಕುರಿತ ಈ ಕೃತಿಯನ್ನು ಪ್ರಕಟಿಸಲು ನಮಗೆ ತುಂಬಾ ಸಂತೋಷವೆನಿಸುತ್ತದೆ. ಈ ಗ್ರಂಥದಲ್ಲಿಯ ಚರಿತ್ರಾಂಶಗಳನ್ನು ಮಾನ್ಯ ಲೇಖಕರೇ ಸಂಗ್ರಹಿಸಿರುವರು. ಈ ಗ್ರಂಥ ಪ್ರಕಟನೆಗೆ ಉದಾರಾಶ್ರಯವನ್ನಿತ್ತ ಅಣ್ಣಿಗೇರಿಯ ಶ್ರೀ ಹುಬ್ಬಳ್ಳಿ ಬಂಧುಗಳ ಸೇವೆ ಸದಾ ಸ್ಮರಣೀಯ. ಕೆಲವೇ ದಿನಗಳಲ್ಲಿ ಈ ಕೃತಿಯನ್ನು ಕಷ್ಟಪಟ್ಟು ಬರೆದುಕೊಟ್ಟ ಶ್ರೀ ಸಿದ್ಧಲಿಂಗಯ್ಯ ಹೊಸಮಠ ಅವರಿಗೂ ಹಸ್ತಪ್ರತಿಯನ್ನು ಸಿದ್ಧಗೊಳಿಸುವಲ್ಲಿ ಸಂಪೂರ್ಣ ನೆರವಾದ ಶ್ರೀ ಶಿವಾನಂದ ಪಟ್ಟಣಶೆಟ್ಟಿಯವರಿಗೂ ಹಾಗೂ ಅಲ್ಪಾವಧಿಯಲ್ಲಿ ಸೊಗಸಾದ ಮುದ್ರಣವನ್ನು ಮಾಡಿಕೊಟ್ಟ ಶ್ರೀ ಭಾಂಡಗೆಯವರಿಗೂ ಎಡೆಯೂರು ಮಹಾಶಿವಯೋಗಿ ಸನ್ಮಂಗಲವನ್ನುಂಟು ಮಾಡಲೆಂದು ಹಾರೈಸುತ್ತೇವೆ.

-ಪ್ರಕಾಶಕರು

*

## ಲೇಖಕರ ನಿವೇದನೆ

ಕ್ರಿ.ಶ. ೧೯೪೩. ಆಗ ನಾನು ಬೂದಿಹಾಳ ಗ್ರಾಮದಲ್ಲಿದ್ದೆ. ಜಕ್ಕಲಿ ಕೇವಲ ಎರಡು–ಮೂರು ಕಿ.ಮೀ. ಗಳಷ್ಟು ದೂರ. ಅಲ್ಲಿರುವ ಹಾಲಕೇರಿ ಅನ್ನದಾನ ಮಹಾಸ್ವಾಮಿಗಳವರ ಮಠದಲ್ಲಿ ಪ್ರತಿವರ್ಷದಂತೆ ಆ ಸಲವೂ ಅಲ್ಲಿ ಪುರಾಣ ಪ್ರಾರಂಭವಾಗಿತ್ತು. ಪ್ರವಚನಕ್ಕೆ ಒಳ್ಳೆಯ ಅನುಭಾವಿಗಳಾದ ಶ್ರೀ ಜಗಳೂರು ಲಿಂಗಪ್ಪ ಮಾಸ್ತರರು ಆಗಮಿಸಿದ್ದರು. ಅವರ ಪ್ರವಚನ ನನಗೆ ತುಂಬಾ ಹಿಡಿಸಿತು. ಬೆಳಿಗ್ಗೆ ನಮ್ಮ ಊರಿನಿಂದ ಊಟೋಪಚಾರ ತೀರಿಸಿಕೊಂಡು ಅಲ್ಲಿಗೆ ಹೋದವನು ಪುರಾಣ ಮುಗಿಸಿಕೊಂಡೇ ಊರಿಗೆ ಮರಳುತ್ತಿದ್ದೆ.

ನನಗಿರುವ ಈ ಜ್ಞಾನಪಿಪಾಸೆಯನ್ನು ಕಂಡು ಶ್ರೀ ಲಿಂಗಪ್ಪ ಮಾಸ್ತರರು ನನಗೆ ''ನೀನು ಶ್ರೀ ನಿಜಗುಣರ ಶಾಸ್ತ್ರಗಳನ್ನು ಎಲ್ಲಿಯವರೆಗೆ ತಿಳಿದುಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಈ ನಿನ್ನ ಜ್ಞಾನದಾಹ ಕಡಿಮೆಯಾಗುವುದಿಲ್ಲ'' ಎಂದು ಹೇಳಿದರು.

ಅದಕ್ಕೆ ನಾನು ''ಅದರಲ್ಲೇನಿದೆ ? ಅದು ಕೇವಲ ವೇದಾಂತ. ಅದನ್ನು ಕೇಳಿದವರು ತಮ್ಮ ಲಿಂಗ ತ್ಯಜಿಸಹತ್ತಿದ್ದಾರೆ'' ಎಂದು ಹೇಳಿದೆ. ಅದಕ್ಕೆ ಅವರು ''ಈ ದೋಷ ನಿಜಗುಣರ ಶಾಸ್ತ್ರಗಳದ್ದಲ್ಲ. ಅದನ್ನು ತಪ್ಪಾಗಿ ಗ್ರಹಿಸಿದವರದು. ಲಿಂ. ಹಾನಗಲ್ಲ ಶ್ರೀಗಳು ಚಿಕ್ಕವರಿದ್ದಾಗ, ಶ್ರೀ ಸಿದ್ಧಾರೂಢರಲ್ಲಿದ್ದರು. ಆಗ ಅವರೂ ಹೀಗೆಯೇ ಭಾವಿಸಿದ್ದರು. ಮುಂದೆ ಅವರು ಶ್ರೀ ಎಳಂದೂರ ಬಸವಲಿಂಗ ಶ್ರೀಗಳವರಲ್ಲಿಗೆ ಹೋಗಿ ನಿಜಗುಣರ ಶಾಸ್ತ್ರಾಭ್ಯಾಸ ಮಾಡಿದ ನಂತರ ಅವರ ಮೊದಲಿನ ತಪ್ಪು ಗ್ರಹಿಕೆ ದೂರಾಯಿತು'' ಎಂದು ಹೇಳಿ ಈ ಗ್ರಂಥದಲ್ಲಿ ನಾನು ವಿವರಿಸಿದಂತೆ ಶ್ರೀ ಎಳಂದೂರು ಬಸವಲಿಂಗ ಶ್ರೀಗಳವರ ಚರಿತ್ರೆಯನ್ನು ಅವರು ನನಗೆ ತಿಳಿಸಿದರು.

ನಿವೃತ್ತ ಶಿಕ್ಷಕರಾದ ಶ್ರೀ ಜಿಗಳೂರು ಲಿಂಗಪ್ಪ ಮಾಸ್ತರರು ವಯೋವೃದ್ಧ ರಾಗಿದ್ದಂತೆ ಜ್ಞಾನವೃದ್ಧರೂ ಆಗಿದ್ದರು. ಆ ಕಾಲದಲ್ಲಿ ಅವರು ಒಳ್ಳೆಯ ವಾಗ್ಮಿಗಳೆಂದು, ಉತ್ತಮ ಪೌರಾಣಿಕರೆಂದು ಮತ್ತು ಶ್ರೇಷ್ಠ ಮಟ್ಟದ ಕವಿಗಳೆಂದು ಪ್ರಸಿದ್ಧರಾಗಿದ್ದರು.

ಹಾಲಕೇರಿ ಅನ್ನದಾನಮಹಾಸ್ವಾಮಿಗಳ ಮತ್ತು ಕೋಡಿಕೊಪ್ಪದ ಹುಚ್ಚೀರಪ್ಪಜ್ಜನವರ ಪುರಾಣಗಳು ಅವರಿಂದಲೇ ರಚಿತವಾದವುಗಳು. ಅದರಂತೆ ಮಹಿಳೆಯರಿಗಾಗಿ ''ಲಲನಾಚಾರ ದರ್ಪಣ'' ಎಂಬ ಪದ್ಯ ಗ್ರಂಥವನ್ನು ಅವರೇ ಬರೆದಿರುವರು. ಇದಲ್ಲದೆ ''ಶ್ರೀ ಸಿದ್ಧಲಿಂಗೇಶ್ವರ ಅಷ್ಟೋತ್ತರ ನಾಮಾವಳಿ'' ಎಂಬ

ಚಿಕ್ಕ ಪುಸ್ತಕ ಅವರಿಂದಲೇ ರಚಿತವಾಗಿದ್ದು, ಅದು ನಿತ್ಯ ಪಾರಾಯಣಕ್ಕಾಗಿ ತುಂಬಾ ಜನಪ್ರಿಯವಾಗಿರುತ್ತದೆ.

ಪೂಜ್ಯ ಶ್ರೀ ಹಾನಗಲ್ಲ ಶ್ರೀಗಳವರಲ್ಲಿ ಅಸಾಧಾರಣ ಗುಣಗ್ರಾಹಕ ದೃಷ್ಟಿ ಇತ್ತು. ಅಂತೆಯೇ ಅವರು ಶ್ರೀ ಜಿಗಳೂರು ಲಿಂಗಪ್ಪ ಮಾಸ್ತರರಲ್ಲಿಯ ಪ್ರತಿಭೆಯನ್ನು ಕಂಡು ಅವರನ್ನು ತಮ್ಮ ಸಮಾಜ ಸೇವಾ ಕಾರ್ಯಕ್ಕೆ ಉಪಯೋಗಿಸಿಕೊಂಡರು.

ಕಾಲ ಗರ್ಭದಲ್ಲಿ ಹೂತು ಹೋಗಬಹುದಾದ ಶ್ರೀ ಎಳಂದೂರು ಬಸವಲಿಂಗ ಶ್ರೀಗಳವರಂತಹ ವಿಭೂತಿ ಪುರುಷರ ಚರಿತ್ರೆ ಗದುಗಿನ ಪರಮಪೂಜ್ಯ ಶ್ರೀ ಜಗದ್ಗುರುಗಳವರ ಕೃಪೆಯಿಂದಾಗಿ ಈಗ ಅದು ಬೆಳಕು ಕಾಣುವಂತಾಯಿತು. ಈ ಬಗ್ಗೆ ಸಮಾಜ ಅವರಿಗೆ ತುಂಬ ಉಪಕೃತವಾಗಿದೆ. ಈ ಗ್ರಂಥ ಪ್ರಕಟನೆಯನ್ನು ನೆರವೇರಿಸಿದ ಅಣ್ಣಿಗೇರಿ ಶ್ರೀ ಜ. ತೋಂಟದಾರ್ಯ ಸೇವಾಸಮಿತಿಯವರಿಗೆ ಉಪಕೃತನಾಗಿದ್ದೇನೆ.

೨೫-೭-೧೯೮೦ ಸಿದ್ಧಲಿಂಗಯ್ಯ ಹೊಸಮಠ, ಗದಗ

## ಯೋಗದ ಹಂಬಲ

ಪ್ರಾತಃಕಾಲ ಸಮಯ. ಪೂರ್ವದಿಗಂತದಲ್ಲಿ ಬಂಗಾರದ ತಳಿಗೆಯಂತೆ ಹೊಳೆಯುತ್ತ ಬಂದ ಅರುಣ–ಕಿರಣಗಳು ಡಂಬಳದ ತೋಂಟದ ಶ್ರೀಮದರ್ಧನಾರೀಶ್ವರರ ಗೋಪುರದ ಮೇಲಿನ ಹೊಂಗಳಸಗಳ ಮೇಲೆ ಪ್ರತಿಫಲಿಸಿ ಲಾಸ್ಯವಾಡುತ್ತಿವೆ.

ಕೆಳದಿಯ ಭೂಪಾಲಕರಾದ ಸೋಮಶೇಖರನಾಯಕ ಮತ್ತು ಅವನ ತಮ್ಮ ವೀರಭದ್ರನಾಯಕ ಇವರು ಶ್ರೀ ಡಂಬಳ ಮಠಕ್ಕೆ ಸಲ್ಲಿಸಿದ ಅನೇಕ ಭಕ್ತಿಕಾಣಿಕೆಗಳಲ್ಲಿ ಬಂಗಾರದ ಒಪ್ಪ ಹಾಕಿ ಮಾಡಿಸಿದ ಪಂಚಕಲಶಗಳೇ ಇವು.

ಗ್ರಾಮದ ಪಶ್ಚಿಮ ದಿಕ್ಕಿಗೆ ಒಂದು ವಿಶಾಲವಾದ ಕೆರೆ. ಜೀವನಾಡಿಯಂತಿರುವ ಅದರ ಕಾಲುವೆಗಳ ನೀರನ್ನು ಹೊತ್ತು ತಂದು ಸುತ್ತಲಿನ ತೋಟದ ಪೈರುಗಳಿಗೆ ಉಣಿಸಿ ಸೃಷ್ಟಿಯ ಸೊಬಗನ್ನು ಹೆಚ್ಚಿಸಿವೆ.

ಇಂತಹ ಸಮಯದಲ್ಲಿ 'ಕಾಷಾಯ ವಸ್ತ್ರ ಪರಿಧಾನ' ಮಾಡಿದ ಓರ್ವ ಯುವಕ ಒಂದು ಕಾಲುವೆಯ ಹತ್ತಿರ ಬಂದು ನಿಂತು ತನ್ನ ಹಸ್ತ ತೊಳೆದುಕೊಂಡು ತಂಬಿಗೆಯನ್ನು ಬೆಳಗಿ ಇನ್ನೇನು ಏಳುವುದರಲ್ಲಿ ಇದ್ದನು. ಆಗ ಅವನಿಗೆ ಕಾಲುವೆಯ ನೀರಿನ ಮೇಲ್ಭಾಗದಲ್ಲಿ ಕಟ್ಟಿದ ಜಡೆಯ ದೃಶ್ಯ ಕಾಣಿಸಿತು. ಅಷ್ಟರಲ್ಲಿ ಸೂರ್ಯ ಇನ್ನೂ ಮೇಲಕ್ಕೆ ಏರದ್ದರಿಂದ ಮೊದಲು ಅಸ್ಪಷ್ಟವಾಗಿ ಕಾಣುತ್ತಿದ್ದ ಆ ಜಡೆ ಈಗ ಹೆಚ್ಚು ನಿಚ್ಚಳವಾಗಿ ಗೋಚರಿಸಹತ್ತಿತ್ತು.

ಯುವಕ ಕುತೂಹಲಗೊಂಡು ಇನ್ನಷ್ಟು ಸಮೀಪಕ್ಕೆ ಹೋಗಿ ನೋಡಿದ. ಜಟಾಧಾರಿಗಳೊಬ್ಬರು ಧ್ಯಾನಾಸಕ್ತರಾಗಿ ಕುಳಿತಿರುವದು ಕಂಡಿತು. ಯುವಕ ಆಶ್ಚರ್ಯಚಕಿತನಾದ.

''ಮೇಲೆ ನೀರು ಹರಿಯುತ್ತಿದ್ದರೂ ಅದರ ಪರಿವೆಯಿಲ್ಲದೆ ಧ್ಯಾನಾಸಕ್ತರಾಗಿರುವ ಇವರ ಸಾಧನೆ ಎಂತಹದು ? ಇದು ಬಹುಶಃ ಯೋಗಸಮಾಧಿಯೇ ಆಗಿರಬೇಕು'' ಹೀಗೆ ಆಲೋಚಿಸುತ್ತ ಆ ಯುವಕ ಅಲ್ಲಿ ಕೆಲಕಾಲ ನಿಂತ. ಆದರೆ ಆ ಯೋಗ ಸಮಾಧಿಸ್ಥರಾದವರು ಬೇಗ ಏಳುವ ಲಕ್ಷಣ ಕಾಣಲಿಲ್ಲ. ಆಮೇಲೆ ಆ ಯುವಕ ಉಪಾಯವಿಲ್ಲದೆ ಮಠದ ಕಡೆಗೆ ಮೆಲ್ಲನೆ ಹೆಜ್ಜೆ ಹಾಕುತ್ತ ಸಾಗಿದ.

ಆ ಯುವಕನೇ ಡಂಬಳದ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ಅನೇಕ ಚರಮೂರ್ತಿಗಳಲ್ಲಿ ಒಬ್ಬರಾದ ಶ್ರೀ ಎಳಂದೂರು ಬಸವಲಿಂಗ ಚರಮೂರ್ತಿಗಳು.

ಶ್ರೀ ಬಸವಲಿಂಗ ಚರಮೂರ್ತಿಗಳ ಮನಸ್ಸೆಲ್ಲ ಕಾಲುವೆಯಲ್ಲಿ ಕಣ್ಣಿಗೆ ಬಿದ್ದ ಅಜ್ಞಾತಯೋಗಿಯಲ್ಲಿಯೇ ಮಗ್ನವಾದ್ದರಿಂದ ಅಂದಿನ ಅವರ ಸ್ನಾನ, ಪೂಜೆ, ಪ್ರಸಾದ ವಿನಿಯೋಗಗಳೆಲ್ಲ ಕೇವಲ ಯಾಂತ್ರಿಕವಾಗಿ ಜರುಗಿದವು.

ಮನಸ್ಸಿನ ತವಕ ಹೆಚ್ಚಾಗಿ ಅವರು ಅಂದು ಮಧ್ಯಾಹ್ನ ಉರಿಬಿಸಿಲಿನಲ್ಲಿಯೇ ಪುನಃ ಕಾಲುವೆಯ ಕಡೆಗೆ ಹೋಗಿ ಆ ಯೋಗಿಯನ್ನು ನೋಡಿದರು. ಆದರೆ ಅಲ್ಲಿ ಆತ ಇರಲಿಲ್ಲ. ಸಮೀಪದಲ್ಲೇನಾದರೂ ಇರಬಹುದೇ ಎಂದು ದೊಡ್ಡ ಬಸವೇಶ್ವರ ಗುಡಿ, ಸೋಮೇಶ್ವರ ಗುಡಿ, ಸಿದ್ಧೇಶ್ವರ ಗುಡಿ, ಜಪದಭಾವಿ* ಮತ್ತು ವರ್ತಿಭಾವಿ ಹೀಗೆ ಎಲ್ಲ ಕಡೆಗೂ ಹುಡುಕಿದರು. ಆದರೆ ಆ ಯೋಗಿ ಮಾತ್ರ ಎಲ್ಲಿಯೂ ದೊರೆಯಲಿಲ್ಲ. ಕೊನೆಗೆ ಅವರು ನಿರಾಶರಾಗಿ ಹಾಗೆಯೇ ಸಾಯಂಕಾಲ ಮಠಕ್ಕೆ ಹಿಂದಿರುಗಿದರು.

ರಾತ್ರಿಯ ಸಮಯ. ಚರಮೂರ್ತಿಗಳು ಅದೇ ಸ್ನಾನ, ಪೂಜೆ ತೀರಿಸಿಕೊಂಡು ಹಾಸಿಗೆಯಲ್ಲಿ ಮಲಗಿದ್ದಾರೆ. ತಲೆಯಲ್ಲಿ ಅನೇಕ ವಿಚಾರಗಳು ಸುಳಿಯಹತ್ತಿವೆ. ಹೀಗಾಗಿ ಅವರಿಗೆ ನಿದ್ರೆಯೇ ಹತ್ತಲಿಲ್ಲ. "ಜಂಗಮನು ಶಿವಯೋಗಿಯೆಂದೇ ಕರೆಯಲ್ಪಡುವನು; ಆದರೆ ನನಗೆ ಮಾತ್ರ ಯೋಗದ ಗಂಧವೇ ಇಲ್ಲ. ಇದು ಆತ್ಮವಂಚನೆ. ತಾನು ಉದ್ಧಾರ ಹೊಂದಿದರೆ ಮಾತ್ರ ಇನ್ನೊಬ್ಬರನ್ನು ಉದ್ಧರಿಸಬಲ್ಲ. ಹಾಗಾದರೆ ಇಂತಹ ಯೋಗಸಿದ್ಧಿಯನ್ನು ಪಡೆಯುವ ಬಗೆ ಹೇಗೆ ? ನಾನಂತೂ ನಿರಕ್ಷರಿ. ಅಂದಮೇಲೆ ಯೋಗಾಭ್ಯಾಸ ಮಾಡುವದೆಂತು ? ಆಗಲಿ ಶಿವನಿದ್ದಾನೆ. ಯಾವ ಶಿವನು ಈ ಪ್ರೇರಣೆಯನ್ನು ನನಗೆ ನೀಡಿದನೋ ಅವನೇ ನನಗೆ ಹಾದಿ ತೋರಿಸುವನು. ಲೋಕ ಕಲ್ಯಾಣಕ್ಕಾಗಿ ಜಂಗಮನು ಸಂಚರಿಸುವದು ತಪ್ಪೇನಲ್ಲ. ಪೂರ್ವದ ಅನೇಕ ಮಹನೀಯರು ಹೀಗೆಯೇ ಹೋದ ಅನೇಕ ಉದಾಹರಣೆಗಳಿವೆ".

ಹೀಗೆಲ್ಲ ಅವರು ವಿಚಾರಿಸುತ್ತ ಮಲಗಿರುವಂತೆ ಮಧ್ಯರಾತ್ರಿಯಾಯಿತು. ಅವರಿಗೆ ಮನಸ್ಸಿನ ಉದ್ವೇಗ ತಡೆಯಲಾಗಲಿಲ್ಲ. ಹಾಗೆಯೇ ಎದ್ದು ತಮ್ಮ ಶಿವಪೂಜೆಯ ಗಂಟನ್ನು ಕಟ್ಟಿದರು. ಪ್ರವಾಸಕ್ಕೆ ಅಗತ್ಯವಿದ್ದ ಸಾಮಾನುಗಳನ್ನು ತೆಗೆದುಕೊಂಡು ಸಮೀಪದಲ್ಲಿ ಮಲಗಿದ್ದ ತಮ್ಮ ಸ್ನೇಹಿತ ಚರಮೂರ್ತಿಗಳೊಬ್ಬರನ್ನು ಎಬ್ಬಿಸಿ "ನಾನೀಗ ಮಠ ಬಿಟ್ಟು ಹೋಗುತ್ತಿರುವೆ. ಹೀಗೆ ಹೋಗುತ್ತಿರುವದು ಕೇವಲ ಯೋಗಾಭ್ಯಾಸಕ್ಕಾಗಿ. ಜಗದ್ಗುರು ಸನ್ನಿಧಿಯವರನ್ನು ಕೇಳಬೇಕೆಂದರೆ ಅವರು ಗದುಗಿನಲ್ಲಿರುವರು. ನನಗಾದರೋ ಯೋಗದ ಸೆಳೆತದಿಂದಾಗಿ ಮಠದಲ್ಲಿ ಕಾಲುಗಳು ನಿಲ್ಲದಾಗಿವೆ. ಕಾರಣ ನೀನು ನನ್ನ ಪರವಾಗಿ ಈ ವಿಷಯವನ್ನು ಸನ್ನಿಧಿಯಲ್ಲಿ ಅರಿಕೆ ಮಾಡಿಕೊಳ್ಳಬೇಕು" ಎಂದು ಹೇಳಿ ಹೊರಗೆ ಬಂದು ತೋಂಟದ

* ಜಪದ ಭಾವಿಯಲ್ಲಿ ಬೌದ್ಧ ಸನ್ಯಾಸಿಗಳು ಜಪ ಮಾಡಿದ ಕಾರಣಕ್ಕಾಗಿ ಇದಕ್ಕೆ ಜಪದ ಭಾವಿ ಎಂದು ಹೆಸರು ಬಂದಿದೆ.

ಶ್ರೀಮದರ್ಧನಾರೀಶ್ವರರ ಗದ್ದುಗೆಯ ಎದುರು ಕೈ ಜೋಡಿಸಿ ನಿಂತುಕೊಂಡು, ''ಪರಮ ಗುರುವೆ ಅರ್ಧನಾರೀಶ ! ತೋಂಟದಾರ್ಯ !! ನನ್ನನ್ನು ಕ್ಷಮಿಸು; ಬಾಲ್ಯದಿಂದ ಇಲ್ಲಿಯವರೆಗೆ ನಿನ್ನ ಸೇವೆಯಲ್ಲಿಯೇ ಇದ್ದೆ. ಈಗ ಮಾತ್ರ ನಿನ್ನಿಂದ ಅಗಲಿ ಹೋಗುತ್ತಿದ್ದೇನೆ. ತಿಳಿದು ನೋಡಿದರೆ ನನ್ನ ನಿನ್ನಲ್ಲಿ ಅಗಲಿಕೆ ಎನ್ನುವದು ಎಲ್ಲಿದೆ ? ಶಿವಸ್ವರೂಪನಾದ ನೀನು ಎಲ್ಲ ಕಡೆಗೂ ತುಂಬಿಕೊಂಡಿರುವೆ. ಇಂದು ಮುಂಜಾನೆ ಆ ದೃಶ್ಯವನ್ನು ನನ್ನ ಕಣ್ಣಿಗೆ ಹಾಕಿ ನನಗೆ ಈ ಮಾರ್ಗ ತೋರಿಸಿದ ಮಹಾನುಭಾವನೂ ನೀನೇ ಆಗಿರುವಿ. ಈ ನನ್ನ ಕಾರ್ಯದಲ್ಲಿ ಯಶ ದೊರೆಯುವಂತೆ ಅನುಗ್ರಹಿಸಿ ಕಾಪಾಡು'' ಎಂದು ಶ್ರೀ ಅರ್ಧನಾರೀಶ್ವರನನ್ನು ಅನನ್ಯವಾಗಿ ಪ್ರಾರ್ಥಿಸಿ ಅಲ್ಲಿಂದ ಮುಂದಕ್ಕೆ ಪ್ರಯಾಣ ಬೆಳೆಸಿದರು.

### ಅನ್ವೇಷಣೆಗೆ ಆರಂಭ

ಶ್ರೀ ಬಸವಲಿಂಗ ಚರಮೂರ್ತಿಗಳು ಯೋಗಸಿದ್ಧರಿಗಾಗಿ ಅನೇಕ ಕಡೆಗೆ ಅಲೆದಾಡಿದರು. ಆದರೆ ಬಹಳ ಕಡೆಗೆ ಅವರಿಗೆ ನಿರಾಸೆಯೇ ಕಾದಿದ್ದಿತು.

ಎಲ್ಲಿ ನೋಡಿದರೂ ಹೊರಗೆ ವೇಷದ ಸೊಂಪು. ಒಳಗೆ ವಿಷಯದ ಕೊಂಪೆ. ನುಡಿಯಲ್ಲಿ ಪುರಾತನರು; ನಡೆಯಲ್ಲಿ ಶುದ್ಧ ಕಿರಾತಕರು. ಮಾತಿನಂತೆ ಮನವಿಲ್ಲದ ಈ ಜಾತಿ ಡೊಂಬರ ನೋಡಿ ಶ್ರೀ ಚರಮೂರ್ತಿಗಳ ಮನಸ್ಸು ರೋಸಿಹೋಯಿತು. ''ಏಕಾದರೂ ಮಠ ಬಿಟ್ಟು ಬಂದೆ'' ಎಂಬ ಪಶ್ಚಾತಾಪ ಅವರಿಗೆ ಆಗದಿರಲಿಲ್ಲ. ಆದರೂ ಶಿವನಿದ್ದಾನೆ ಎಂಬ ಭರವಸೆಯಿಂದ ಅವರು ಮತ್ತೆ ಧೈರ್ಯ ತಂದುಕೊಂಡು ಯೋಗಿಗಳ ಅನ್ವೇಷಣೆಯನ್ನು ಮತ್ತೆ ಪ್ರಾರಂಭ ಮಾಡಿದರು.

ಒಮ್ಮೆ ಶ್ರೀ ಬಸವಲಿಂಗ ಚರಮೂರ್ತಿಗಳು ಒಬ್ಬ ಯೋಗಿಯ ಪ್ರಭಾವವನ್ನು ಕರ್ಣಾಕರ್ಣಿಕೆಯಿಂದ ಕೇಳಿ ಅಲ್ಲಿಗೆ ಹೋದರು. ಆದರೆ ಅವರು ಅಂಧರು. ಆದರೂ ಅವರು ಪೂರ್ವಪರಿಚಯವಿದ್ದವರಂತೆ ಇವರೊಡನೆ ಮಾತನಾಡಿದರು. ಇದರಿಂದ ಚರಮೂರ್ತಿಗಳಿಗೆ ತುಂಬಾ ಆಶ್ಚರ್ಯವಾಯಿತು. ''ನಿಮಗೆ ಕಣ್ಣಿಲ್ಲ, ನಾನು ಹೊಸಬ, ಆದರೂ ನನ್ನ ವಿಚಾರ ನಿಮಗೆ ಹೇಗೆ ತಿಳಿಯಿತು'' ಎಂದು ಕೇಳಿದರು.

ಅದಕ್ಕೆ ಅವರು ''ಇದು ದೂರ ಶ್ರವಣ, ದೂರದರ್ಶನ ಮತ್ತು ಮನೋವೇಗ ಇಂತಹ ಯೋಗಸಿದ್ಧಿಗಳ ಪರಿಣಾಮವೇ ಹೊರತು ಮತ್ತೇನಲ್ಲ. ಇಂತಹ ಸಿದ್ಧಿಗಳಿಂದ ದೂರದ ವಸ್ತುಗಳನ್ನು ಸಮೀಪದಲ್ಲಿಯೇ ನೋಡಬಹುದು. ದೂರದ ಶಬ್ದಗಳನ್ನು ಸಮೀಪದಲ್ಲಿಯೇ ಕೇಳಬಹುದು. ಮತ್ತು ವ್ಯಕ್ತಿಯ ಮನಸ್ಸಿನಲ್ಲಿರುವದನ್ನು ಸಂಪೂರ್ಣವಾಗಿ ತಿಳಿದುಕೊಳ್ಳಬಹುದು. ಆದರೆ ಈ ಎಲ್ಲ ಸಿದ್ಧಿಗಳಿಂದ ಆತ್ಮೋದ್ಧಾರ ಮಾತ್ರ ಆಗಲಾರದು. ಒಂದು ರೀತಿಯಲ್ಲಿ ಇವು ಯೋಗಪ್ರತಿಬಂಧಕಗಳೇ ಆಗಿವೆ. ಯೋಗಿ ಇಂಥವುಗಳ ಬೆನ್ನು ಹತ್ತಿದರೆ ಅವನಿಗೆ ಈ ಗೀಳು ಕೊನೆಯವರೆಗೆ ಹೋಗುವದಿಲ್ಲ. ಇಷ್ಟೇ ಅಲ್ಲ. ಅವನ ಯೋಗ ಶಕ್ತಿಯೆಲ್ಲ ಇದರಲ್ಲಿಯೇ ವ್ಯಯವಾಗಿ ಅವನ ಯೋಗ ಸಾಧನೆ ವಿಫಲವಾಗುವುದು.''

ಶಾಕ್ತ ತಂತ್ರಗಳಲ್ಲಿ ಯೋಗವು ಕುಂಡಲಿನೀಯೋಗವೆಂದು ಹೇಳಲ್ಪಟ್ಟಿದೆ. ಶರೀರದಲ್ಲಿ ಕುಂಡಲಿನಿಯನ್ನು ಜಾಗೃತಗೊಳಿಸುವದೇ ಕುಂಡಲಿನಿಯೋಗವಾಗಿದೆ. ಕುಂಡಲಿನಿಯು ಮೂಲಾಧಾರ ಚಕ್ರದಲ್ಲಿ ಸುಪ್ತವಾಗಿರುತ್ತದೆ. ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ ಮತ್ತು ಆಜ್ಞಾ ಈ ಆರು ಚಕ್ರಗಳನ್ನು ಕುಂಡಲಿನಿಯ ಮೂಲಕ ಬೇಧಿಸಿಕೊಂಡು ಸಹಸ್ರಾರವನ್ನು ಸೇರುವುದೇ ಈ ಯೋಗದ ಮೂಲ ಉದ್ದೇಶವಾಗಿದೆ. ಈ ಸಹಸ್ರಾರ ಪರಶಿವನ ಆವಾಸಸ್ಥಾನ. ಇಲ್ಲಿ ಜೀವನು ಶಿವನಲ್ಲಿ ಐಕ್ಯ ಹೊಂದುವನು. ಈ ತೆರನಾದ ಯೋಗಗಳಿಂದ ಹಲವು ಬಗೆಯ ಸಿದ್ಧಿಗಳು ಉಂಟಾಗುವವು. ಅವುಗಳಲ್ಲಿ ಸಾತ್ವಿಕ, ರಾಜಸ, ತಾಮಸ ಹೀಗೆ ಮೂರು ಬಗೆ ಉಂಟು.

ಸಾತ್ವಿಕ ಯೋಗ ಸಿದ್ಧಿಗಳು ಎಂಟು. ಅವುಗಳಿಗೆ ಯೋಗೈಶ್ವರ್ಯಗಳೆನ್ನುವರು. ಅವು ಕ್ರಮವಾಗಿ ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ ಹೀಗೆ ಇವೆ. ಇನ್ನು ರಾಜಸಯೋಗ ಸಿದ್ಧಿಗಳು ಹತ್ತು, ಅನುರ್ಮಿ, ದೂರಶ್ರವಣ, ದೂರದರ್ಶನ, ಮನೋವೇಗ, ಕಾಮರೂಪ, ಪರಕಾಯ ಪ್ರವೇಶ, ಸ್ವೇಚ್ಛಾಮರಣ, ಕ್ರೀಡೆ, ಕಳೆ, ಆಜ್ಞ ಈ ರೀತಿ ಇರುತ್ತವೆ. ಅದರಂತೆ ತಾಮಸ ಸಿದ್ಧಿಗಳು ಐದು. ಕಾಲ ಜ್ಞಾನ, ಅಬಾಧಕ, ಚಿತ್ತಾಭಿಜ್ಞತೆ, ಸ್ತಂಭ, ವಿಜಯ ಈ ಮೇರೆಗೆ ಇರುತ್ತವೆ.

ಯೋಗಸಾಧಕನು ಚಿತ್ತೈಕಾಗ್ರತೆಯನ್ನು ಯೋಗ ಬಲದಿಂದ ಸಾಧಿಸಿ ತನ್ನ ಆತ್ಮ ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಯೋಗವೆಂದರೆ ''ಚಿತ್ತವೃತ್ತಿ ನಿರೋಧವೇ ಆಗಿದೆ. ಶ್ರೀ ಪಾತಂಜಲ ಋಷಿಗಳು ತಮ್ಮ ಯೋಗಸೂತ್ರದಲ್ಲಿ ಇದನ್ನೇ ಹೇಳಿರುವರು.'' ಅಂಥಯೋಗಿಗಳ ಈ ಸುದೀರ್ಘ ಯೋಗದ ಅನುಭವವನ್ನು ಕೇಳಿ ಚರಮೂರ್ತಿಗಳು ಅಲ್ಲಿಂದ ಮುಂದಕ್ಕೆ ಪ್ರಯಾಣ ಬೆಳೆಸಿದರು.

ಶ್ರೀ ಎಳಂದೂರು ಬಸವಲಿಂಗ ಚರಮೂರ್ತಿಗಳು ತಾವು ನಿರಕ್ಷರಿಗಳಾಗಿದ್ದರೂ ಅವರಲ್ಲಿ ಸ್ವಯಂಪ್ರಜ್ಞೆ ಇತ್ತು. ಇದರಿಂದ ಅವರು ಯೋಗಸಿದ್ಧಿಗಳನ್ನು ಹೇಗಾದರೂ ಮಾಡಿ ಪಡೆಯಬೇಕೆಂದು ಏಕಾಂತ ಸ್ಥಾನಕ್ಕೆ ಹೋಗಿ ತಮಗೆ ತಿಳಿದುಬಂದ ರೀತಿಯಲ್ಲಿ ಸಾಧನೆಗಳನ್ನು ಮಾಡಿದರು. ಈ ಅಪಾರ ಪರಿಶ್ರಮದ ಫಲವಾಗಿ ಆ ಎಲ್ಲ ಯೋಗಸಿದ್ಧಿಗಳು ಶ್ರೀ ಚರಮೂರ್ತಿಗಳಲ್ಲಿ ಸಿದ್ಧಿಸಿದವು. ಆಗ ಇವರಿಗೆ ಯೋಗಸಿದ್ಧಿಗಳೆಂದರೆ ಏನು ? ಎಂಬುದು ಮನವರಿಕೆಯಾಯಿತು. ಆದರೆ ಇದರಿಂದ ಅವರ ಆತ್ಮಕ್ಕೆ ಎಷ್ಟೂ ಶಾಂತಿ ಇಲ್ಲದಾಯಿತು. ಈ ಹಿಂದೆ ತಮಗೆ ಅಂಥ ಯೋಗಿಗಳು, ಯೋಗಸಿದ್ಧಿಯ ಕುರಿತು ಹೇಳಿದ ಅನುಭವೋಕ್ತಿಗಳು ಸತ್ಯವೆನಿಸಿದವು.

ಈ ಸಿದ್ಧಿಗಳಿಂದ ಮಾನಸಿಕ ಅಶಾಂತಿ ಹೆಚ್ಚುವದೇ ಹೊರತು ಕಡಿಮೆಯಾಗುವುದಿಲ್ಲ. ಇನ್ನು ಯೋಗರಹಸ್ಯವನ್ನು ತಿಳಿದುಕೊಳ್ಳಲು ಪತಂಜಲರ ಯೋಗಸೂತ್ರ

ಗಳನ್ನು ನೋಡಬೇಕೆಂದರೆ ನಾವು ಸಂಸ್ಕೃತ ಪಂಡಿತರಲ್ಲ. ಇನ್ನು ಕನ್ನಡದಲ್ಲಿ ನಿಜಗುಣರು ಯೋಗಗಳ ವಿಚಾರವಾಗಿ ತಮ್ಮ ಶಾಸ್ತ್ರಗಳಲ್ಲಿ ಹೇಳಿರುವರು. ಆದರೆ ಅವನ್ನು ತಿಳಿದುಕೊಳ್ಳಲಿಕ್ಕೂ ನಮಗೆ ಕನ್ನಡ ಓದು ಬರಹ ಬರುವಂತಿಲ್ಲ. ಹಾಗೆ ಬಂದಿದ್ದರೂ ನಿಜಗುಣರ ಶಾಸ್ತ್ರ ತಿಳಿದುಕೊಳ್ಳುವದು ತುಂಬಾ ಕಠಿಣ.

ಶ್ರೀ ನಿಜಗುಣರು ಮಂತ್ರ, ಲಯ, ಹಠ, ರಾಜಯೋಗಗಳನ್ನು ಹೇಳಿ ಕೊನೆಯದಾಗಿ ಶಿವಯೋಗವನ್ನು ಹೇಳಿದ್ದಾರೆ. ಇದರಿಂದ ಅವು ಒಂದಕ್ಕಿಂತ ಒಂದು ಉತ್ತರೋತ್ತರವಾಗಿರಬೇಕು.

ಶಿವಯೋಗದಲ್ಲಿ ಲಿಂಗಧಾರಣೆ ಮುಖ್ಯ. ಇದು ವೀರಶೈವರಿಗಷ್ಟೇ ಪ್ರಯೋಜನ. ತನ್ನಲ್ಲಿಯೇ ಶಿವನನ್ನು ಕಂಡು ಶಿವನೇ ತಾನಾಗುವದು ವೀರಶೈವ ಸಿದ್ಧಾಂತ. ಅದಕ್ಕಾಗಿ ಲಿಂಗವು ಗುರುವಿನ ಮೂಲಕ ಅರುಹಿನ ಕುರುಹಾಗಿ ಶಿಷ್ಯನ ಹಸ್ತಕ್ಕೆ ಬಂದಿದೆ. ಇನ್ನು ಶ್ರೀ ನಿಜಗುಣರ ಶಿವಯೋಗದ ವಿಚಾರವಾಗಿ ತಿಳಿದುಕೊಳ್ಳುವ ಬಗೆ ಹೇಗೆ ?

ತಕ್ಷಣವೇ ಅವರ ತಲೆಯಲ್ಲಿ ಒಂದು ವಿಚಾರ ಮಿಂಚಿನಂತೆ ಹೊಳೆಯಿತು.

''ಭಗವತ್ ಕೃಪೆಗೆ ಅನನ್ಯ ಶರಣಾಗತಿಯೇ ಮುಖ್ಯ. ಶಿವಯೋಗದಿಂದ ಮಾನವನೇ ಶಿವನಾಗುವನೆಂದು ಬಲ್ಲವರು ಹೇಳುತ್ತಾರೆ. ಅಂದಮೇಲೆ ಶ್ರೀ ನಿಜಗುಣರು ಸ್ವತಃ ಶಿವ ಸ್ವರೂಪರು. ಶಿವನೇ ತಾನಾದ ಶಿವಯೋಗಿಗೆ ಮರಣವೆಲ್ಲಿ? ಆತನು ಮರಣವ ಗೆದ್ದ ಮಹಾಂತ. ಈ ಕಾರಣದಿಂದ ಶ್ರೀ ನಿಜಗುಣರು ಈಗಲೂ ಅವ್ಯಕ್ತರಾಗಿ ಇರುವರೆಂಬುದು ನಿಶ್ಚಯ. ಆದ್ದರಿಂದ ಅವರನ್ನೇ ನಂಬಿ ಅವರನ್ನೇ ಕುರಿತು ತಪಗೈದು ಅವರ ಶಾಸ್ತ್ರಗಳ ಜ್ಞಾನ ಪಡೆಯಬೇಕು.''

**ತಪಃ ಸಿದ್ಧಿ**

ಈ ನಿರ್ಧಾರ ಕೈಕೊಳ್ಳುತ್ತಲೆ ಶ್ರೀ ಬಸವಲಿಂಗ ಚರಮೂರ್ತಿಗಳು ಶ್ರೀ ನಿಜಗುಣರು ತಪಸ್ಸನ್ನಾಚರಿಸಿದ ಶಂಭುಲಿಂಗನ ಬೆಟ್ಟಕ್ಕೆ ಪ್ರಯಾಣ ಮಾಡಿದರು.

ಶಂಭುಲಿಂಗನ ಬೆಟ್ಟ ಅನತಿದೂರದಲ್ಲಿ ಕಾಣುತ್ತಿರುವಂತೆ ಶ್ರೀ ಬಸವಲಿಂಗ ಚರಮೂರ್ತಿಗಳು ಭಾವಪರವಶರಾದರು. ಶ್ರೀ ನಿಜಗುಣರೇ ಎದ್ದು ನಿಂತು ಕೈ ಮಾಡಿ ಕರೆಯುತ್ತಿರುವಂತೆ ಅವರಿಗೆ ಭಾಸವಾಯಿತು. ಸಣ್ಣ ಮಕ್ಕಳಂತೆ ಅವರು ಅಲ್ಲಿಗೆ ಓಡಿ ಹೋದರು.

ಶಂಭುಲಿಂಗನ ಬೆಟ್ಟ ಅಂತಹ ಉನ್ನತವಾದುದೇನಲ್ಲ. ''ಸಾಧಕನಿಗೆ ಯಾವುದೂ ದೊಡ್ಡದಲ್ಲ'' ಎಂಬುದನ್ನು ತೋರಿಸುವಂತೆ ಅದು ಚಿಕ್ಕದಾಗಿಯೇ ಇತ್ತು. ಪ್ರಕೃತಿ ದೇವಿಯ ಮಡಿಲಲ್ಲಿ ಪ್ರಶಾಂತವಾಗಿ ಎದ್ದು ನಿಂತಿದೆ ಆ ಬೆಟ್ಟ.

ಸಂಸಾರ ತಪ್ತರಾಗಿ ಬಂದ ನೊಂದ ಜೀವಿಗಳನ್ನು ಸಾಂತ್ವನಗೊಳಿಸುವ ಕಲ್ಪವೃಕ್ಷವೇ ಅದು. ಬೆಟ್ಟದಡಿಯಲ್ಲಿ ಭಕ್ತವರದನಾದ ಶಂಭುಲಿಂಗನ ದೇವಾಲಯವಿದೆ. ಬೆಟ್ಟದ ಮೇಲೆ ಎರಡು ಗವಿಗಳು ಜತೆಯಾಗಿ ಇವೆ. ಅದರಲ್ಲಿ ಒಂದು ಗವಿಯನ್ನು ಶ್ರೀ ಚರಮೂರ್ತಿಗಳು ಅದು ನಿಜಗುಣರದೇ ಇರಬೇಕೆಂಬ ಭಾವನೆಯಿಂದ ಅದನ್ನು ತಮ್ಮ ತಪಸ್ಸಿಗಾಗಿ ಆಯ್ಕೆ ಮಾಡಿಕೊಂಡರು.

ಗವಿಯನ್ನು ಪ್ರವೇಶಿಸುತ್ತಿರುವಂತೆ ಶ್ರೀಗಳವರಿಗೆ ಏನೋ ವಿದ್ಯುತ್ ಸಂಚಾರವಾದಂತಾಯಿತು. ಗವಿಯ ಮಣ್ಣಿನ ಪ್ರತಿ ಕಣವೂ ಶ್ರೀ ನಿಜಗುಣರ ಯೋಗಶಕ್ತಿಯಿಂದ ಕೂಡಿಕೊಂಡಿದೆ ಎಂದು ಭಾವಿಸಿ ಆ ಮಣ್ಣನ್ನು ಹಣೆಗೊತ್ತಿ ಕೊಂಡರು. ಆಮೇಲೆ ಗವಿಯನ್ನು ಸ್ವಚ್ಛಗೊಳಿಸಿ ತಮ್ಮ ತಪಸ್ಸಿಗೆ ಅನುಕೂಲ ಮಾಡಿಕೊಂಡರು.

ಇದಾದ ನಂತರ ಮುಂದೆ ತಪಸ್ಸನ್ನಾಚರಿಸುವ ಬಗೆ ಹೇಗೆ ? ಎಂಬ ವಿಚಾರ ಅವರನ್ನು ಕಾಡಹತ್ತಿತು. ಏಕೆಂದರೆ ಅವರು ಸಾಕ್ಷಾತ್ಕರಿಸಿಕೊಳ್ಳಬೇಕಾದದ್ದು ಶ್ರೀ ನಿಜಗುಣ ಶಿವಯೋಗಿಗಳನ್ನು. ಶ್ರೀ ಚರಮೂರ್ತಿಗಳು ಎಷ್ಟೂ ಧೃತಿಗೆಡದೆ ''ನಿಜಗುಣ'' ಎಂಬ ಪವಿತ್ರ ನಾಮಸ್ಮರಣೆಯೇ ತಮ್ಮ ತಪೋವಿಧಾನವೆಂದು ಭಾವಿಸಿ ಅದರಲ್ಲಿ ತಲ್ಲೀನರಾದರು.

ಈ ಚರಾಚರ ಪ್ರಪಂಚವೇ ನಾಮರೂಪಾತ್ಮಕವಾಗಿದೆ; ನಾಮರೂಪಗಳಿಂದ ಕೂಡಿದೆ. ವಿಷಯಗಳೇ ಜೀವನಿಗೆ ಬಂಧನಕಾರಿಯಾಗಿವೆ. ಭೂಮಿಯಲ್ಲಿ ಬಿದ್ದವನಿಗೆ ಭೂಮಿಯೇ ಆಶ್ರಯವಾಗುವಂತೆ, ಪುನಃ ನಾಮರೂಪಗಳ ಅವಲಂಬನೆಯಿಂದಲೇ ಜೀವನು ಪ್ರಾಪಂಚಿಕ ಬಂಧನದಿಂದ ಬಿಡುಗಡೆಯಾಗಲೇಬೇಕಾಗುತ್ತದೆ.

ಹೇಗೆಂದರೆ ಪರಶಿವನಲ್ಲಿ ಇಚ್ಛಾಶಕ್ತಿಯ ಮೂಲಕ ಈ ನಾಮರೂಪಾತ್ಮಕ ಜಗತ್ತು ಉಂಟಾಯಿತು. ಇದನ್ನು ಶೃತಿಗಳು ಘಂಟಾಘೋಷವಾಗಿ ಸಾರುತ್ತಿವೆ. ಹೀಗೆ ಯಾವ ಕ್ರಮದಿಂದ ಈ ನಾಮರೂಪಾತ್ಮಕ ಸೃಷ್ಠಿಯಾಯಿತೋ ಅದರ ವಿಪರೀತ ಕ್ರಮದಿಂದ ಅದು ಲಯವಾಗುವದು.

ಅದರಂತೆ ಪರಶಿವನ ನಾಮರೂಪಗಳ ಆಶ್ರಯ ಮಾಡಿಕೊಂಡು ಆತನಲ್ಲಿ ಚಿತ್‌ವೃತ್ತಿ ವಿಲಯನ ಮಾಡುವದರಿಂದ ಮುಕ್ತಿ ಕರತಲಾಮಲಕವಾಗುವದು.

ಹೀಗೆ ಶ್ರೀ ಬಸವಲಿಂಗ ಚರಮೂರ್ತಿಗಳವರಿಂದ ಶ್ರೀ ನಿಜಗುಣರ ಪವಿತ್ರವಾದ ನಾಮದ ಜಪ ಅವ್ಯಾಹತವಾಗಿ ಸಾಗಹತ್ತಿತು. ಹೀಗೆ ಸಾಗಿದ ಈ ಮಹಾಸಾಧನೆಯಿಂದ ಅವರ ಮನೋಭಾವನೆಯಲ್ಲಿ ಶ್ರೀ ನಿಜಗುಣರೇ ವ್ಯಾಪಕರಾದರು. ಈ ಸಾಧನೆ ಬಹುಕಾಲ ಮುಂದುವರೆಯಿತು.

ಒಂದು ರಾತ್ರಿ ಆಕಾಶದಲ್ಲಿ ಅದೆ ಬೆಳ್ಳಿ ಚುಕ್ಕಿ ಮೂಡಿದೆ. ಅದಕ್ಕೆ ಬ್ರಾಹ್ಮೀ ಮೂಹೂರ್ತವೆಂದು ಹೇಳುವದುಂಟು. ಇತ್ತ ಗವಿಯಲ್ಲಿ ಶ್ರೀ ನಿಜಗುಣರ

ಧ್ಯಾನದಲ್ಲಿದ್ದ ಶ್ರೀ ಬಸವಲಿಂಗ ಚರಮೂರ್ತಿಗಳವರಿಗೆ ಬಾಹ್ಯ ಪ್ರಜ್ಞೆಯೇ ತಪ್ಪಿಹೋಗಿ ಶಿಲೆಯಂತೆ ಅವರು ಅಚಲರಾಗಿ ಕುಳಿತಿದ್ದಾರೆ. ಬಹುಶಃ ಅದು ಸಮಾಧಿಸ್ಥಿತಿಯೇ ಆಗಿರಬೇಕು.

ಆಗ ಪ್ರಣವನಾದದಿಂದ ಕೂಡಿದ ಅಶರೀರ ವಾಣಿಯೊಂದು ಶ್ರೀ ಬಸವಲಿಂಗ ಚರಮೂರ್ತಿಗಳವರ ಕರ್ಣದಲ್ಲಿ ಪ್ರವೇಶಿಸಿತು. ಇದರಿಂದಾಗಿ ಶ್ರೀಗಳವರು ತಮ್ಮ ಸಮಾಧಿಯಿಂದ ಬಹಿರ್ಮುಖರಾದರು.

ಸುತ್ತಲೂ ದೃಷ್ಟಿ ಬೀರಿ ನೋಡಿದರು, ಯಾರೂ ಇರಲಿಲ್ಲ. .ಧ್ವನಿ ಇನ್ನೂ ಸ್ಪಷ್ಟವಾಗಿ ಕೇಳಹತ್ತಿತ್ತು.

''ನನ್ನ ಶಾಸ್ತ್ರಗಳನ್ನು ನೋಡು ! ಅವೆಲ್ಲ ನಿನಗೆ ತಾವೇ ಅವಗತವಾಗುವವು''

ಈ ಅಶರೀರ ವಾಣಿಯನ್ನು ಆಲಿಸಿದ ಶ್ರೀಗಳು ಭಾವಪುಳಕಿತರಾದರು. ಅವರ ಕಣ್ಣುಗಳಿಂದ ಆನಂದಾಶ್ರುಗಳು ಉದುರಹತ್ತಿದವು. ಮನವು ತನ್ನಿಂದ ತಾನೇ ನಿಸ್ತರಂಗ ಸಮುದ್ರದಂತೆ ಪ್ರಶಾಂತವಾಯಿತು. ಆಗ ಅವರ ಮುಖದಿಂದ ಅವರಿಗರಿಯದಂತೆ

''ಶಿವನೇ ನಿಜಗುಣ ! ಇಂದು ನನಗೆ ದಯದೋರಿದೆಯಾ ? ನಾನು ಧನ್ಯನಾದೆ ! ನನ್ನ ತಪಸ್ಸು ಸಾರ್ಥಕವಾಯಿತು''

ಎಂದು ತಮ್ಮಷ್ಟಕ್ಕೆ ತಾವೇ ಹೇಳಿಕೊಂಡು ಹೊರಗೆ ಬಂದು ನೋಡಿದರು. ಆಕಾಶದಲ್ಲಿದ್ದ ತೇಜೋಮಯ ನಕ್ಷತ್ರ ಶ್ರೀ ಚರಮೂರ್ತಿಗಳ ಯಶಸ್ಸಿಗೆ ಅಭಿನಂದಿಸುವಂತೆ ತುಂಬಾ ಪ್ರಕಾಶಮಾನವಾಗಿ ಹೊಳೆಯುತ್ತಲೇ ಇತ್ತು. ಆ ಬಳಿಕ ಅವರು ತಮ್ಮ ತಪಸ್ಸನ್ನು ಪೂರ್ತಿಗೊಳಿಸಿ, ಸೂರ್ಯೋದಯದ ನಂತರ ಬೆಟ್ಟದಿಂದ ಕೆಳಗಿಳಿದು ಬಂದು ಸಮೀಪದಲ್ಲಿದ್ದ ಗ್ರಾಮಕ್ಕೆ ಹೋದರು.

ಅಲ್ಲಿ ಹೋಗಿ ಒಬ್ಬ ಗೃಹಸ್ಥರಲ್ಲಿ ''ನಿಮ್ಮಲ್ಲಿ ನಿಜಗುಣರಶಾಸ್ತ್ರ ಗ್ರಂಥ ಗಳೇನಾದರೂ ಇವೆಯೇ ?'' ಎಂದು ಕೇಳಿದರು. ಆ ಗೃಹಸ್ಥ ಅವರನ್ನು ಕುಳಿತುಕೊಳ್ಳಲು ತಿಳಿಸಿ, ಒಳಗೆ ಹೋಗಿ ಕೋರಿ ಕಾಗದದ ಕಟ್ಟುಗಳ ಒಂದು ಗಂಟನ್ನೇ ತಂದು ಕೊಟ್ಟ. ಅದರಲ್ಲಿಯ ಒಂದು ಗ್ರಂಥವನ್ನು ತೆಗೆದುಕೊಂಡು ಶ್ರೀಗಳವರೇ ನೋಡಿದರು. ಅಕ್ಷರಗಳು ಅರ್ಥದೊಡನೆ ತಿಳಿಯಹತ್ತಿದವು. ಅವರ ಆನಂದಕ್ಕೆ ಪಾರವೇ ಇಲ್ಲದಾಯಿತು.

''ನಿಜಗುಣ ! ನೀನೆಂತಹ ಕರುಣಾಳು ! ನಿಜವಾಗಿಯೂ ನೀನು ಶಿವನು'' ಎಂಬ ಆನಂದೋದ್ಗಾರ ಅವರಿಂದ ಹೊರಬಿದ್ದಿತು. ಇದನ್ನು ಕಂಡ ಪಕ್ಕದಲ್ಲಿಯೇ ನಿಂತ ಗೃಹಸ್ಥ ಮೂಕವಿಸ್ಮಿತನಾದ.

ಆ ಬಳಿಕ ಶ್ರೀಗಳು ಕಟ್ಟುಗಳನ್ನೆಲ್ಲ ಬಿಡಿ ಬಿಡಿಯಾಗಿ ಬಿಚ್ಚಿ ನೋಡಿದರು. ಅವು ಕ್ರಮವಾಗಿ ಕೈವಲ್ಯಪದ್ಧತಿ, ವಿವೇಕಚಿಂತಾಮಣಿ, ಪರಮಾನುಭವಬೋಧೆ,

ಅನುಭವಸಾರ, ಪರಮಾರ್ಥ ಗೀತೆ, ಪಾರಮಾರ್ಥ ಪ್ರಕಾಶಿಕೆ ಹೀಗೆ ಎಲ್ಲ ಶಾಸ್ತ್ರಗಳೂ ಇದ್ದವು.

ಶ್ರೀ ಚರಮೂರ್ತಿಗಳು ಗೃಹಸ್ಥನನ್ನು ''ಅಪ್ಪಾ ! ಇವುಗಳನ್ನು ನಮಗೆ ಕೊಡುವಿಯಾ ?'' ಎಂದು ಕೇಳಿದರು. ಅದಕ್ಕೆ ಅವನು ಸಂತೋಷದಿಂದ ''ಆಗಲಿ ಸ್ವಾಮಿ !'' ಎಂದು ಹೇಳಿ ಅವರ ಪಾದಕ್ಕೆ ನಮಸ್ಕರಿಸಿದ.

**ಶಿಷ್ಯಲಾಭ**

ಉತ್ತರ ಕರ್ನಾಟಕದಲ್ಲಿ ಔದ್ಯಮಿಕ ಕೇಂದ್ರವೆಂದು ಹುಬ್ಬಳ್ಳಿ ನಗರಕ್ಕೆ ಒಂದು ದೊಡ್ಡ ಹೆಸರು ಬಂದಿದೆ. ಅದು ಶ್ರೀ ಸಿದ್ಧಾರೂಢರ ಆವಾಸಸ್ಥಾನವೆಂಬ ಕಾರಣದಿಂದ ಪಾರಮಾರ್ಥಿಕವಾಗಿಯೂ ಅದಕ್ಕೆ ಶ್ರೀ 'ಸಿದ್ಧಾರೂಢರ ಹುಬ್ಬಳ್ಳಿ' ಎಂಬ ಹೆಸರು ಪ್ರಾಪ್ತವಾಗಿದೆ. ಏಕೆಂದರೆ ಶ್ರೀ ನಿಜಗುಣರ ಷಟ್‌ಶಾಸ್ತ್ರಗಳು ನಾಲ್ದೆಶೆಯಲ್ಲಿ ಜಯಭೇರಿ ಹೊಡೆಯುವಂತೆ ಮಾಡಿದ ಕೀರ್ತಿ ಶ್ರೀ ಸಿದ್ಧಾರೂಢರದು.

ಶ್ರೀ ಸಿದ್ಧಾರೂಢರ ಮಠದಲ್ಲಿ ವೇದಾಂತ ಪ್ರವಚನ ಬೆಳಿಗ್ಗೆ ಹಾಗೂ ಸಾಯಂಕಾಲ ಹೀಗೆ ಎರಡು ಹೊತ್ತು ನಡೆಯುವದು ವಾಡಿಕೆ. ಆಗ ಪ್ರವಚನಕ್ಕೆ ಶ್ರೀ ನಿಜಗುಣರ ಶಾಸ್ತ್ರವನ್ನೇ ಇಟ್ಟುಕೊಳ್ಳಲಾಗುತ್ತಿತ್ತು.

ಒಂದು ದಿನ ಯಥಾಪ್ರಕಾರವಾಗಿ ಪ್ರವಚನ ಸಾಗಿದೆ. ಆಗ ಶುಭ್ರ ಜಟಾಧಾರಿಗಳಾದ ತೇಜಸ್ವಿ ವ್ಯಕ್ತಿಯೊಬ್ಬರು ಕಾಷಾಯವಸ್ತ್ರ ಪರಿಧಾನ ಮಾಡಿಕೊಂಡು, ಆಳೆತ್ತರದ ನಾಗಬೆತ್ತವನ್ನು ಕೈಯಲ್ಲಿ ಹಿಡಿದು, ಭಸ್ಮರುದ್ರಾಕ್ಷಿಗಳಿಂದ ಅಲಂಕೃತರಾಗಿ, ಪಾದಗಳಲ್ಲಿ ಆವುಗೆಗಳನ್ನು ಮೆಟ್ಟಿ, ಪ್ರವಚನ ಮಂಟಪವನ್ನು ಪ್ರವೇಶಿಸಿದರು.

ಹೀಗೆ ಆಗಮಿಸಿದವರನ್ನು ಶ್ರೀ ಸಿದ್ಧಾರೂಢರು ಆದರದಿಂದ ಬರಮಾಡಿಕೊಂಡು ಉಚಿತಾಸನವನ್ನು ನೀಡಿ, ಬಂದ ಕಾರಣವನ್ನು ವಿಚಾರಿಸಿದರು. ಅದಕ್ಕೆ ಆಗಮಿಸಿದ ಮಹನೀಯರು ''ಶ್ರೀ ನಿಜಗುಣರ ಶಾಸ್ತ್ರ ನಿಮ್ಮಲ್ಲಿ ಪ್ರತಿನಿತ್ಯ ನಡೆಯುತ್ತಿದೆ. ಆದರೆ ನಿಮ್ಮ ಶಿಷ್ಯರು ಮಾತ್ರ ಲಿಂಗ ತ್ಯಜಿಸಹತ್ತಿದ್ದಾರೆ. ಹಾಗೆ ಅದರಲ್ಲಿ ಎಲ್ಲೂ ಹೇಳಿಲ್ಲ. ಮಂತ್ರ, ಲಯ, ಹಠ, ರಾಜಯೋಗ ಇವುಗಳೊಡನೆ ಶಿವಯೋಗವನ್ನು ಅವರು ಹೇಳಿದ್ದಾರೆ. ಅವರ ಪಾರಮಾರ್ಥ ಪ್ರಕಾಶಿಕೆಯಂತೂ ಶಿವಯೋಗಕ್ಕೆ ಮೀಸಲಾದ ಗ್ರಂಥ. ಶಿವಯೋಗದಲ್ಲಿ ಇಷ್ಟಲಿಂಗ ಪೂಜೆಗೆ ಪ್ರಾಧಾನ್ಯತೆ. ಆದ್ದರಿಂದ ಶಿವಯೋಗವನ್ನು ಇಷ್ಟಲಿಂಗೋಪಾಸನೆ ಎಂದೇ ಕರೆಯಲಾಗಿದೆ. ''ಆವ ಪುಣ್ಯದ ಫಲವು ಲಿಂಗಪೂಜಾವಿಧಿಯು'' ಎಂದೂ ಮತ್ತು ''ನಿನಗಾಗಿ ಕರಕಂಜದೊಳು ಕಾಣಿಸಿತು ಯೋಗಿಯಜಿಸು'' ಎಂದು ಶಿವಯೋಗಕ್ಕೆ ಇರುವ ಇಷ್ಟಲಿಂಗದ ಅವಶ್ಯಕತೆಯನ್ನು ಒತ್ತಿಹೇಳಿದ್ದಾರೆ. ಹೀಗಿದ್ದರೂ ನಿಮ್ಮ ಶಿಷ್ಯರು ಇಷ್ಟಲಿಂಗವನ್ನೇಕೆ ತ್ಯಜಿಸುತ್ತಿರುವರು ?'' ಎಂದರು. ಅದಕ್ಕೆ ಸಿದ್ಧಾರೂಢರು ''ನಾನು ಲಿಂಗ ತ್ಯಜಿಸಲು ಯಾರಿಗೂ ಹೇಳಿಲ್ಲ, ಅದು ಅವರವರ ಸ್ವಂತದ ಅಭಿಪ್ರಾಯ''

ಎಂದು ಹೇಳಿ ಸುಮ್ಮನಾದರು. ಆದರೆ ಅಲ್ಲಿ ನೆರೆದಿದ್ದ ಶಿಷ್ಯರು ತಮ ತಮಗೆ ತಿಳಿದಂತೆ ಬಂದವರೊಡನೆ ಭಾವಾವೇಶದಿಂದ ಪ್ರಶ್ನೆ ಮಾಡಹತ್ತಿದರು. ಆದರೆ ಅಲ್ಲಿದ್ದ ಒಬ್ಬ ಯುವಕ ಮಾತ್ರ ಅತ್ಯಂತ ಸಂಯಮದಿಂದ ಪ್ರಶ್ನೆ ಮಾಡಿದನೇ ಹೊರತು ಅವನಲ್ಲಿ ಭಾವೋದ್ರೇಕವಿರಲಿಲ್ಲ.

ಪ್ರಶ್ನೆಗಳಿಗೆ ಉತ್ತರ ಕೊಡಬೇಕಾದದ್ದು ಸ್ವಾಭಾವಿಕವಾಗಿದ್ದರೂ ಎಂತಹ ಪ್ರಶ್ನೆಗಳಿಗೆ ಉತ್ತರ ಕೊಡಬೇಕೆಂಬ ಬಗ್ಗೆ ಒಂದು ನಿಯಮವಿದೆ. ಇದರಿಂದಾಗಿ ಅಲ್ಲಿಗೆ ಆಗಮಿಸಿದ ವಯೋವೃದ್ಧರು ಯಾರಿಗೂ ಉತ್ತರ ಕೊಡದೆ ಅಲ್ಲಿಂದ ಎದ್ದು ಹೊರಗೆ ಹೋದರು.

ಹೀಗೆ ಅವರು ಹೊರಬರುತ್ತಿರುವಂತೆ ಅವರ ಬೆನ್ನ ಹಿಂದೆ ಯಾರೋ ಬರುತ್ತಿರುವದನ್ನು ಅವರು ಗಮನಿಸಿದರು. ಅವರು ಹೊರಳಿ ನೋಡಿದಾಗ ತಮ್ಮ ಬೆನ್ನ ಹಿಂದೆ ಬಂದವನು ಸಂಯಮದಿಂದ ಪ್ರಶ್ನೆ ಮಾಡಿದ ಯುವಕನೇ ಆಗಿದ್ದ. ಈ ಮೊದಲು ಆ ಯುವಕನ ಬಗ್ಗೆ ವೃದ್ಧರಲ್ಲಿ ಸಹಾನುಭೂತಿಯೂ ಉಂಟಾಗಿತ್ತು. ಆ ಯುವಕನನ್ನು ಉದ್ದೇಶಿಸಿ.

''ನೀನಾರು ?''

''ನಾನು ಒಬ್ಬ ಸಾಧಕ''

''ಕೊರಳಲ್ಲಿ ಲಿಂಗವಿದೆಯೋ ?''

''ಇದೆ'' ಎಂದು ಲಿಂಗದ ಕರಡಗಿಯನ್ನು ತೋರಿಸಿದ.

''ಹಾಗಾದರೆ ಒಂದು ದೊಡ್ಡ ತಂಬಿಗೆಯಲ್ಲಿ ನೀರು ತೆಗೆದುಕೊಂಡು ಬಾ, ಊರ ಹೊರಗೆ ಸಂಚಾರಕ್ಕೆ ಹೋಗಬೇಕಾಗಿದೆ.''

ಆ ಮೇಲೆ ಆ ಯುವಕ ಮಠದೊಳಗೆ ಹೋಗಿ ಒಂದು ದೊಡ್ಡ ತಂಬಿಗೆಯಲ್ಲಿ ನೀರನ್ನು ತೆಗೆದುಕೊಂಡು ಬಂದು ಆ ವೃದ್ಧರನ್ನು ಹಿಂಬಾಲಿಸಿದ. ಉಭಯತರು ಸ್ವಲ್ಪ ದೂರ ಹೋಗಿರಬಹುದು. ವೃದ್ಧರೇ ಯುವಕನೊಡನೆ ಮಾತಿಗೆ ಪ್ರಾರಂಭಿಸಿದರು.

''ನಿನ್ನ ಹೆಸರೇನು ? ಊರಾವುದು ? ಇಲ್ಲಿಗೇಕೆ ಬಂದೆ ? ಇಲ್ಲಿದ್ದರೂ ಲಿಂಗವನ್ನೇಕೆ ಬಿಡಲಿಲ್ಲ?'' ಎಂದು ಮೇಲಿಂದ ಮೇಲೆ ಪ್ರಶ್ನಿಸಿದರು.

ಆಗ ಆ ಯುವಕ ಅತ್ಯಂತ ಸಮಾಧಾನದಿಂದ ತನ್ನ ಪೂರ್ವದ ವೃತ್ತಾಂತವನ್ನೆಲ್ಲ ವಿವರವಾಗಿ ಹೇಳಲು ಪ್ರಾರಂಭಿಸಿದ. ನನ್ನ ಜನ್ಮಸ್ಥಳ 'ಜೋಯಿಸರ ಹರಳಳ್ಳಿ'. ನಮ್ಮದು ಬಡ ಜಂಗಮರ ಮನೆತನ; ನನ್ನ ಅಜ್ಜನ ಹೆಸರು ಕೊಟ್ರಪ್ಪಯ್ಯ, ಅವರ ಮಗ ಬಸಪ್ಪಯ್ಯ. ಅವರ ಮಗನೇ ನಾನು. ನನ್ನ ಹೆಸರು ಹಾಲಯ್ಯ. ನಮಗೆ ಸಾಲಿಮಠದವರೆಂದು ಕರೆಯುವರು. ನಾನಿನ್ನೂ ಚಿಕ್ಕವನಿದ್ದೆ. ಆಗ ನನ್ನ ತಂದೆ ಗತಿಸಿದರು. ಮನೆಯಲ್ಲಿದ್ದ ಆಕಳಿಗೆ ಸಹ ನೂರೈದು ವರ್ಷ. ನಮ್ಮ ಅಜ್ಜನೇ ಹುಲ್ಲನ್ನು

ತಂದು ಹಾಕುತ್ತಿದ್ದ. ಮನೆ ಸಾಗುವದೇ ಕಠಿಣವಾಯಿತು. ನಿರ್ವಾಹವಿಲ್ಲದೆ ನಮ್ಮ ಅಣ್ಣನೇ ಊರಲ್ಲಿ ಭಿಕ್ಷೆಗೆ ಹೋಗಹತ್ತಿದ. ಕೆಲವು ದಿನಗಳ ನಂತರ ನನಗೂ ಭಿಕ್ಷೆಯ ಸರತಿ ಬಂದಿತು. ಅಣ್ಣ ಇದ್ದ ಊರಲ್ಲಿ ಭಿಕ್ಷೆ ಮಾಡುತ್ತಿದ್ದುದರಿಂದ ನಾನು ಪಕ್ಕದ ಊರಿಗೆ ಹೋಗಹತ್ತಿದೆ.

ಹೀಗೆಯೇ ಒಂದು ದಿನ ಭಿಕ್ಷೆಗೆ ಹೋಗಿದ್ದೆ. ಆಗ ಒಂದು ಮನೆಯಲ್ಲಿ ಒಬ್ಬ ಮುದುಕ ನನ್ನನ್ನು ನೋಡಿ ''ಎ, ಅಯ್ಯಪ್ಪ ! ಈ ಚಿಕ್ಕ ವಯಸ್ಸಿನಲ್ಲಿ ಶಾಲೆ ಕಲಿಯುವುದನ್ನು ಬಿಟ್ಟು ಭಿಕ್ಷೆ ಬೇಡಲಿಕ್ಕೆ ಬಂದಿರುವಿ; ನಿನಗೆ ಏನೂ ಅನಿಸುವದಿಲ್ಲವೆ ? ಓದಬೇಕಪ್ಪಾ'' ಎಂದು ಹೀಯಾಳಿಸಿ ಮಾತನಾಡಿದ.

ನನಗೆ ಮುದುಕನ ಮಾತಿನಿಂದ ಸಿಟ್ಟು ಬರಲಿಲ್ಲ. ಏಕೆಂದರೆ ಅವನ ಮಾತಿನಲ್ಲಿ ನಿಜಾಂಶವಿತ್ತು.

ಮುಂದೆ ನಾನು ಭಿಕ್ಷೆಗೆ ಹೋಗಲಿಲ್ಲ. ಹಾಗೆಯೇ ಮನೆಗೆ ಹಿಂದಿರುಗಿದೆ. ಕಡಿಮೆ ಭಿಕ್ಷೆ ತಂದಿದ್ದಕ್ಕೆ ಮನೆಯಲ್ಲಿ ಎಲ್ಲರೂ ನನಗೆ ರೇಗಾಡಿದರು. ನಾನು ಅದನ್ನು ಗಮನಕ್ಕೆ ತಂದುಕೊಳ್ಳಲಿಲ್ಲ. ಅಂದೇ ಮನೆಯವರು ನನ್ನನ್ನು ಬಟ್ಟೆ ಒಗೆಯಲು ಕಳಿಸಿಕೊಟ್ಟರು. ಬಟ್ಟೆ ಮಡಿ ಮಾಡಿದ ನಂತರ ಅವೆಲ್ಲವನ್ನು ಒಬ್ಬರ ಕೂಡ ಮನೆಗೆ ಕಳಿಸಿಕೊಟ್ಟು ನಾನು ಊರು ಬಿಟ್ಟೆ.

ಕಜ್ಜರಿ ಗ್ರಾಮದಲ್ಲಿ ಮಹದೇವ ಜೋಗಳೇಕರ ಎಂಬ ಶಿಕ್ಷಕರ ಬಗ್ಗೆ ಮೊದಲೇ ಕೇಳಿದ್ದೆ. ಅವರು ಒಳ್ಳೇ ನುರಿತ ಶಿಕ್ಷಕರು. ಪ್ರತಿವರ್ಷ ಅವರಿಂದ ತಯಾರಾದ ಮುಲ್ಕೀ ಪರೀಕ್ಷೆಯ ವಿದ್ಯಾರ್ಥಿಗಳು ಹೆಚ್ಚು ಸಂಖ್ಯೆಯಲ್ಲಿ ಉತ್ತೀರ್ಣರಾಗುತ್ತಿದ್ದರು.

ಹೇಗೋ ಕಷ್ಟಪಟ್ಟು ಅಲ್ಲಿಗೆ ಹೋದೆ. ಅದು ನನಗೆ ಪರಿಚಯವಿಲ್ಲದ ಗ್ರಾಮ. ಅಲ್ಲಿಗೆ ಹೋದ ನಂತರ ನಾನು ಏನು ಮಾಡಬೇಕೆಂಬುದೇ ತಿಳಿಯಲಿಲ್ಲ. ಊರ ಮುಂದೆ ಒಂದು ಬೇವಿನಕಟ್ಟೆ, ಅದರ ನೆರಳಲ್ಲಿ ಕುಳಿತೆ. ಹೊಟ್ಟೆ ಹಸಿದು ಕಂಗಾಲಾದೆ. 'ಊರು ಬಿಟ್ಟು ಬಂದದ್ದು ತಪ್ಪಾಯಿತು'. ಎಂದು ಅನಿಸಿತು. ಕಣ್ಣಲ್ಲಿ ನೀರು ಬಂದವು.

ಆ ಸಮಯಕ್ಕೆ ರಾಚಯ್ಯನವರೆಂಬ ಸದ್‌ಗೃಹಸ್ಥರು ನಾನಿದ್ದಲ್ಲಿಗೆ ಬಂದು ನನ್ನ ಯೋಗಕ್ಷೇಮ ವಿಚಾರಿಸಿ, ತಮ್ಮ ಮನೆಗೆ ಕರೆದೊಯ್ದು, ಊಟ ಮಾಡಿಸಿ ನಂತರ ಶ್ರೀ ಜೋಗಳೇಕರ ಶಿಕ್ಷಕರಲ್ಲಿ ಕರೆದೊಯ್ದು ಶಿಕ್ಷಣಕ್ಕೆ ಅನುಕೂಲ ಮಾಡಿಕೊಟ್ಟರು.

ಕಷ್ಟಪಟ್ಟು ಅಭ್ಯಾಸ ಮಾಡಿದೆ. ಶಿಕ್ಷಕರೂ ಒಳ್ಳೆಯ ಆಸಕ್ತಿಯಿಂದ ಕಲಿಸಿದರು. ಆಗ ಮುಲ್ಕೀ ಪರೀಕ್ಷೆ ಧಾರವಾಡದಲ್ಲಿ ನಡೆಯುತ್ತಿತ್ತು. ಅಲ್ಲಿಗೆ ಪಾದಚಾರಿಯಾಗಿ ಹೋಗಿ ಪರೀಕ್ಷೆ ಕೊಟ್ಟು ಬಂದದ್ದೂ ಆಯಿತು. ಆದರೆ ಪರೀಕ್ಷೆಯಲ್ಲಿ ಮಾತ್ರ ನನಗೆ ಯಶ ದೊರೆಯಲಿಲ್ಲ. ಮುಂದೆ ಕಜ್ಜರಿ ಗ್ರಾಮದಲ್ಲಿರಲು ಮನಸ್ಸಾಗದೆ ತಾಯಿಯ ತವರಾದ ಲಿಂಗದಹಳ್ಳಿಗೆ ಹೋದೆ.

ನಾನು ಅಲ್ಲಿರುವದನ್ನು ಕೇಳಿ ತಾಯಿ ಕರೆಯಲಿಕ್ಕೆ ಬಂದಳು. ಆದರೆ ನಾನು ಆಕೆಯೊಡನೆ ಹೋಗಲಿಲ್ಲ. ಲಿಂಗದಹಳ್ಳಿಯಲ್ಲಿಯೇ ಇದ್ದು ಅಲ್ಲಿ ಗಾವಟಿ ಶಾಲಾ ಹಾಕಿದೆ.

ಹೀಗೆ ಶಿಕ್ಷಕ ವೃತ್ತಿಯಲ್ಲಿ ನಾನಿರುವಾಗ ಏನೋ ನನ್ನ ಭಾಗ್ಯ ! ಆ ಊರ ಸಮಾಳದ ಬಸವಯ್ಯನವರು ನಿಜಗುಣರ ಕೈವಲ್ಯವನ್ನು ತೆಗೆದುಕೊಂಡು ನನ್ನ ಕಡೆಗೆ ಬರಹತ್ತಿದರು. ಏಕೆಂದರೆ ವೃದ್ಧಾಪ್ಯದ ಮೂಲಕ ಅವರ ದೃಷ್ಟಿ ಮಂದವಾಗಿದ್ದರಿಂದ ನನ್ನೆಡೆಗೆ ಬಂದು ನನ್ನ ವಿರಾಮ ಕಾಲದಲ್ಲಿ ನನ್ನಿಂದ ಅದನ್ನು ಓದಿಸಿ ಕೇಳುತ್ತಿದ್ದರು. ಹಿಂದಿನಿಂದ ಅದರರ್ಥವನ್ನೂ ಅವರೇ ನನಗೆ ಹೇಳುತ್ತಿದ್ದರು. ಹೀಗೆ ಕೆಲವು ಕಾಲ ನಡೆಯಿತು. ಇದರಿಂದಾಗಿ ನನಗೆ ನಿಜಗುಣರ ಶಾಸ್ತ್ರಗಳಲ್ಲಿ ತುಂಬಾ ಆಸಕ್ತಿ ಉಂಟಾಯಿತು.

ಒಮ್ಮೆ ನನ್ನ ತಾಯಿ ನನ್ನಲ್ಲಿಗೆ ಬಂದಳು. ನನಗೆ ಕನ್ಯೆ ನೋಡಿರುವದಾಗಿ ಹೇಳಿದಳು. ಆದರೆ ನಿಜಗುಣರ ಶಾಸ್ತ್ರ ಶ್ರವಣದಿಂದ ನನಗೆ ವೈರಾಗ್ಯ ಉಂಟಾಗಿದ್ದರಿಂದ ಸಂಸಾರದಲ್ಲಿ ಎಷ್ಟೂ ಆಸಕ್ತಿ ಇರಲಿಲ್ಲ. ತಾಯಿಯ ಮಾತು ನನಗೆ ಅಪಥ್ಯ ಎನಿಸಿತು. ಆಕೆಯನ್ನು ಏಕಾಂತದಲ್ಲಿ ಕರೆದುಕೊಂಡು ಹೋಗಿ ಆಕೆಯ ಉಡಿಯಲ್ಲಿ ನಾನು ಶಿಕ್ಷಕ ವೃತ್ತಿಯಿಂದ ಗಳಿಸಿದ ೩೦೦ ರೂಪಾಯಿಗಳನ್ನು ಸುರುವಿ, ಆಕೆಯ ಪಾದಕ್ಕೆ ನಮಸ್ಕರಿಸಿ, ''ಅವ್ವಾ ! ನೀನು ನನಗೆ ಲಗ್ನ ಮಾಡುವದು ಏತಕ್ಕೆ ?''

''ಮಗನೇ ! ನೀನು ಸುಖವಾಗಿರಲೆಂದು'',

''ಈ ಲಗ್ನದಿಂದ ನನಗೆ ದುಃಖವಾಗುವದಾದರೆ ಹೇಗೆ ?''

''ನಿನಗೆ ದುಃಖವಾಗಬಾರದೆಂಬುದೇ ನನ್ನ ಇಚ್ಛೆ ! ಏಕೆ, ಲಗ್ನವೇಕೆ ಬೇಡ ?''

''ಅವ್ವಾ ! ಅದು ನನ್ನ ಸ್ವಂತದ ಇಚ್ಛೆ ! ನಾನು ದುಃಖ ಪಡಬಾರದೆಂಬ ಇಚ್ಛೆ. ನಿನಗೆ ನನ್ನ ಇಚ್ಛೆ ಇದ್ದರೆ ನನ್ನ ಲಗ್ನಕ್ಕಾಗಿ ನೀನು ಒತ್ತಾಯ ಮಾಡಬೇಡ ; ನನ್ನನ್ನು ನನ್ನ ಪಾಲಿಗೆ ಬಿಟ್ಟು ಬಿಡು. ಈ ಹಣದಿಂದ ಅಣ್ಣನ ಲಗ್ನ ಮಾಡು'' ಎಂದು ಖಡಾ ಖಂಡಿತವಾಗಿ ಹೇಳಿದೆ. ಆ ಮೇಲೆ ನನ್ನ ತಾಯಿ ಉಪಾಯಗಾಣದೆ ಮರಳಿ ತನ್ನ ಊರಿಗೆ ಹೋದಳು.

ತಾಯಿ ಹೋದ ನಂತರ ನನ್ನ ಎದೆಭಾರ ಕಡಿಮೆಯಾದಂತಾಗಿ ನಾನೂ ಆ ಊರನ್ನು ತ್ಯಜಿಸಿ ಈ ಹುಬ್ಬಳ್ಳಿಗೆ ಬಂದೆ. ಏಕೆಂದರೆ ಇಲ್ಲಿಯ ಸಿದ್ಧಾರೂಢರ ಮಠದಲ್ಲಿ ನಿಜಗುಣರ ಶಾಸ್ತ್ರ ನಡೆಯುತ್ತಿದೆ ಎಂದು ಮೊದಲೇ ಕೇಳಿದ್ದೆ.

ಶ್ರೀ ಸಿದ್ಧಾರೂಢರ ಮಠದಲ್ಲಿ ಶ್ರೀ ನಿಜಗುಣರ ಶಾಸ್ತ್ರಾಧ್ಯಯನವೇನೋ ನಡೆಯಿತು. ಆದರೆ ಅಲ್ಲಿ ಕೆಲವರು ಲಿಂಗ ತ್ಯಜಿಸುತ್ತಿರುವದು ಮಾತ್ರ ನನಗೆ ಹಿಡಿಸಲಿಲ್ಲ. ಏಕೆಂದರೆ ನನ್ನ ಮನೆಯ ಹಿರಿಯರೆಲ್ಲ ಲಿಂಗಪೂಜಾನಿಷ್ಠರೂ,

ಆಚಾರಶೀಲರೂ ಆಗಿದ್ದರು. ನಾನು ಅದೇ ವಾತಾವರಣದಲ್ಲಿ ಬೆಳೆದವನಾದ್ದರಿಂದ ನನಗೆ ಅಲ್ಲಿಯ ವಾತಾವರಣ ಹಿಡಿಸಲಿಲ್ಲ. ಹುಬ್ಬಳ್ಳಿಯ ಎರಡೆತ್ತಿನಮಠದ ಶ್ರೀಗಳು ಒಳ್ಳೆಯ ಶಿವಾನುಭವಿಗಳೆಂದು ಕೇಳಿದ್ದೆ. ಕೊನೆಗೆ ಅಲ್ಲಿಗೆ ಹೋಗಿ ನನ್ನ ಶಂಕೆಗೆ ಸಮಾಧಾನ ಕೇಳಿದೆ. ಅದಕ್ಕೆ ಅವರು ನನಗೆ ''ಎಮ್ಮಿಗನೂರಲ್ಲಿ ಒಬ್ಬ ಜಡೆಸಿದ್ಧರೆಂಬ ಅವಧೂತರಿದ್ದಾರೆ. ಅವರು ಯಾವಾಗಲೂ ಅಂತರ್ಮುಖಿಗಳು. ಅವರು ತುರೀಯಾವಸ್ಥೆಯಲ್ಲಿ ವಿಶೇಷವಾಗಿರುವದರಿಂದ ಲೌಕಿಕವಾಗಿ ಏನೂ ಮಾತನಾಡುವದಿಲ್ಲ. ಭಕ್ತರ ಮನೋಗತವನ್ನು ದಿವ್ಯ ದೃಷ್ಟಿಯಿಂದ ತಿಳಿದುಕೊಂಡು ಸಂಜ್ಞೆಗಳ ಮೂಲಕ ಅವರಿಗೆ ಸೂಚನೆಗಳನ್ನು ಕೊಡುವರು. ಆದ್ದರಿಂದ ನೀನು ಅಲ್ಲಿಗೆ ಹೋಗು. ನಿನ್ನ ಮನೋಗತವನ್ನು ತಿಳಿದ ಅವರು ತಾವೇ ಸಂಕೇತಗಳ ಮೂಲಕ ನಿನಗೆ ನಿರ್ದಿಷ್ಟ ತಿಳುವಳಿಕೆಯನ್ನು ಮಾಡಿಕೊಡುವರು. ಆ ಮೇಲೆ ನಿನ್ನ ಇಷ್ಟದಂತೆ ನೀನು ನಡೆದುಕೊ'' ಎಂದು ಹೇಳಿದರು.

ನನಗೂ ಅವರು ಹೇಳಿದ್ದು ಸರಿ ಎನಿಸಿತು. ಮುಂದೆ ಒಂದು ದಿನ ಒಬ್ಬ ಸಂಗಡಿಗರೊಡನೆ ಎಮ್ಮಿಗನೂರಿಗೆ ಪಾದಚಾರಿಯಾಗಿ ಹೋದೆ. ನಾನು ಅಲ್ಲಿಗೆ ಹೋಗಿ ಮಠವನ್ನು ಪ್ರವೇಶಿಸುತ್ತಿರುವಂತೆ ಶ್ರೀ ತಾತನವರನ್ನು ಸುತ್ತುವರೆದ ಭಕ್ತ ಸಮೂಹ ನನ್ನನ್ನೇ ದಿಟ್ಟಿಸಿ ನೋಡಹತ್ತಿತು.

ನಾನು ತಾತನವರಿಗೆ ನಮಿಸಿ ಮುಖವೆತ್ತಿ ಮೇಲೆ ನೋಡಿದಾಗ, ಅವರ ಕೊರಳಲ್ಲಿ ಒಂದು ವಸ್ತ್ರದೊಳಗೆ ಲಿಂಗವಿದ್ದಂತೆ ಕಂಡಿತು. ಅದರ ಬಗ್ಗೆ ಭಕ್ತರನ್ನು ಕೇಳಿದಾಗ ಅದಕ್ಕೆ ಅವರು ''ಅದರಲ್ಲಿ ಲಿಂಗವಿಲ್ಲ. ಒಬ್ಬ ಶಿವಯೋಗಿ ಬರುತ್ತಾನೆಂದು ಅವರೇ ಹೇಳಿ ನಮ್ಮ ಹೆಗಲ ಮೇಲಿದ್ದ ವಸ್ತ್ರವನ್ನು ಸೆಳೆದು ಅದಕ್ಕೆ ನಡುವೆ ಗಂಟು ಹಾಕಿ ತಮ್ಮ ಕೊರಳಲ್ಲಿ ಕಟ್ಟಿಕೊಂಡರು.'' ಇದನ್ನು ಕೇಳಿದ ನನಗೆ ಲಿಂಗಾಧಾರಣೆಯ ಬಗೆಗಿದ್ದ ಸಂದೇಹ ತೊಲಗಿತು. ದೇಹದೊಡನೆ ವ್ಯವಹಾರ ಇರುವಷ್ಟು ಕಾಲ ದೇಹಕ್ಕೆ ಲಿಂಗ ಬೇಕೇ ಬೇಕು ಎಂದು ನಿಶ್ಚಯಿಸಿದೆ.

ಇದಾದ ಮೇಲೆ ನಾನು ಅಲ್ಲಿಂದ ಹೊರಡುವ ಮುನ್ನ ತಾತನವರಿಗೆ ನಮಸ್ಕರಿಸಿದೆ. ಎಲ್ಲಿಗೆ ಹೋಗಬೇಕೆಂಬ ಸಂಶಯದ ಗೊಂದಲದಲ್ಲಿ ಬಿದ್ದಿದ್ದೆ. ಅದಕ್ಕೆ ನನ್ನ ಮನೋಗತವನ್ನು ತಿಳಿದು ತಾತನವರು ''ಎಲ್ಲಿಂದ ಬಂದಿ, ಅಲ್ಲಿಗೆ ಹೋಗು'' ಎಂದು ಮೇಲಿಂದ ಮೇಲೆ ಮೂರು ಸಲ ಹೇಳಿದರು. ಆ ನಂತರ ಉಪಾಯವಿಲ್ಲದೆ ಪುನಃ ನಾನು ಹುಬ್ಬಳ್ಳಿಗೆ ಬರಬೇಕಾಯಿತು.

ಮನಸ್ಸಿಲ್ಲದ ಮನಸ್ಸಿನಿಂದ ಇಲ್ಲಿ ಇರುವಾಗ ನನ್ನ ದೈವವೇ ತೆರೆದಂತೆ ತಮ್ಮ ಆಗಮನವಾಯಿತು. ಬಹುಶಃ ಎಮ್ಮಿಗನೂರು ತಾತನವರು ತಾವು ಇಲ್ಲಿಗೆ ಆಗಮಿಸಲಿರುವ ಸೂಚನೆಯನ್ನು ಅಂದೇ ನನಗೆ ಕೊಟ್ಟಿರಬೇಕು. ನಿರ್ವಂಚನೆಯಿಂದ ನನ್ನ ವಿಷಯವನ್ನೆಲ್ಲ ಅರಿಕೆ ಮಾಡಿಕೊಂಡಿದ್ದೇನೆ. ದಯವಿಟ್ಟು ನನ್ನನ್ನು ತಮ್ಮ

ಶಿಷ್ಯನನ್ನಾಗಿ ಪರಿಗ್ರಹಿಸಿ ಉದ್ಧರಿಸಬೇಕು'' ಎಂದು ಆ ಯುವಕ ನಮ್ರತೆಯಿಂದ ಆ ವೃದ್ಧರಲ್ಲಿ ಬೇಡಿಕೊಂಡ.

ಆ ಯುವಕನ ಸುದೀರ್ಘ ಜೀವನ ವೃತ್ತಾಂತ ಕೇಳಿ ವಯೋವೃದ್ಧರು ಬಹಳ ಸಂತೋಷಪಟ್ಟು ಅವನಿಗೆ ಹೇಳಿದರು. ''ತಮ್ಮಾ! ನೀನು ನಿಜವಾಗಿಯೂ ಜಿಜ್ಞಾಸು. ನಿನ್ನಂಥವರು ದೊರೆಯುವದೇ ವಿರಳ. ನೀನು ಲೌಕಿಕನೇ ಅಲ್ಲ. ನೀನು ಒಬ್ಬ ಅಲೌಕಿಕ''.

''ನಿನ್ನನ್ನು ನಾವು ಶಿಷ್ಯನನ್ನಾಗಿ ಪರಿಗ್ರಹಿಸಬಹುದಾಗಿತ್ತು. ಆದರೆ ನಮ್ಮದು ಕಠಿಣ ಆಚಾರ, ಅದು ನಿನಗೆ ಒಗ್ಗಲಿಕ್ಕಿಲ್ಲ. ಆಚಾರಗಳು ಆತ್ಮನಿಗ್ರಹಕ್ಕಾಗಿ ಹೇಳಲ್ಪಟ್ಟಿವೆ. ಅವುಗಳನ್ನು ನಾವು ಪ್ರಾಣದಂತೆ ರಕ್ಷಿಸಬೇಕಾಗುತ್ತದೆ. ವಿಚಾರ ಮಾಡು ದುಡುಕಬೇಡ, ಹಿಂದಿನಿಂದ ಪಶ್ಚಾತ್ತಾಪವಾದೀತು'' ಎಂದು ಹೇಳಿದರು. ಅದಕ್ಕೆ ಆ ಯುವಕ.

''ಬುದ್ದಿ! ಇಲ್ಲಿ ವಿಚಾರ ಮಾಡಬೇಕಾದ ಪ್ರಶ್ನೆಯೇ ಇಲ್ಲ. ಇಷ್ಟು ದಿನ ಅಲ್ಲಿ ಶಾಸ್ತ್ರವ್ಯಾಸಂಗಕ್ಕಾಗಿ ಇದ್ದೆನೇ ಹೊರತು ನನ್ನ ಲಿಂಗ ಪೂಜೆ ಹಾಗೂ ಪ್ರಸಾದ ವ್ಯವಸ್ಥೆಯನ್ನು ಊರಲ್ಲಿಯ ರುದ್ರಾಕ್ಷಿಮಠ ಹಾಗೂ ಎರಡೆತ್ತಿನ ಮಠಗಳಲ್ಲಿ ಮಾಡಿಕೊಳ್ಳುತ್ತಿದ್ದೆ. ಈವರೆಗೂ ನಮ್ಮ ಹಿರಿಯರು ಪಾಲಿಸಿಕೊಂಡು ಬಂದ ಯಾವ ಆಚಾರ ವಿಚಾರಗಳನ್ನೂ ನಾನು ಬಿಟ್ಟುಕೊಟ್ಟಿಲ್ಲ. ತಮ್ಮ ಆಚಾರ ಎಷ್ಟೇ ಕಠಿಣವಿದ್ದರೂ ಅದನ್ನು ನಾನು ಪ್ರಾಣದಂತೆ ಕಾಪಾಡಿಕೊಂಡು ಬರುವೆ'' ಎಂದು ನಮ್ರತೆಯಿಂದ ವಿಜ್ಞಾಪನೆ ಮಾಡಿಕೊಂಡು ಆ ಯುವಕ ವಯೋವೃದ್ಧರಿಗೆ ಸಾಷ್ಟಾಂಗ ಪ್ರಣಾಮ ಮಾಡಿದ. ಇದರಿಂದ ವೃದ್ಧರ ಮನಸ್ಸು ಕರಗಿತು. ಆ ಯುವಕನನ್ನು ಅವರು ಕೃಪಾದೃಷ್ಟಿಯಿಂದ ಅವಲೋಕಿಸುತ್ತ, ''ಆಗಲಿ, ನಿನ್ನ ಇಷ್ಟದಂತೆಯೇ ನಮ್ಮಲ್ಲಿ ಇರು. ನಾವು ನಾಳೆ ಬೆಳಿಗ್ಗೆ ಹೊರಡುತ್ತೇವೆ. ನಮ್ಮದು 'ಎಳಂದೂರು'. ಅಲ್ಲಿಯೇ ಆಶ್ರಮವಿದೆ''.

### ಶಿಷ್ಯನ ಜ್ಞಾನದಾಹ

ಪ್ರಾತಃಕಾಲವಾಗಿದೆ. ಹುಬ್ಬಳ್ಳಿಯಿಂದ ಇಬ್ಬರು ತೇಜಸ್ವಿ ಪಥಿಕರು ಪೂರ್ವಾಭಿಮುಖವಾಗಿ ಸಾಗಿದ್ದಾರೆ. ಮುತ್ತೈದೆಯೋರ್ವಳು ಹಣೆಯಲ್ಲಿ ಕುಂಕುಮ ತಿಲಕವನ್ನಿಟ್ಟುಕೊಂಡು ಹೊನ್ನಿನಾರತಿಯನ್ನು ಆ ಉಭಯತರಿಗೆ ಎತ್ತುತ್ತಿರುವಳೋ ಏನೋ ಎಂಬಂತೆ ಪೂರ್ವ ದಿಗಂತದಲ್ಲಿ ಅದೇ ಕೆಂಪು ಹರಿದು ಸೂರ್ಯ ಮೇಲೆದ್ದು ಬರುತ್ತಿದ್ದಾನೆ.

ಆ ಪಯಣಿಗರಲ್ಲಿ ಒಬ್ಬರು ಇಳಿವಯಸ್ಸಿನವರು ಅಸ್ತಮಿಸುವ ಸೂರ್ಯನಂತೆ ಪ್ರಶಾಂತವಾಗಿದ್ದಾರೆ. ಇನ್ನೊಬ್ಬರು ಏರಿಕೆಯ ವಯಸ್ಸಿನವರು, ಮಧ್ಯಾಹ್ನದ

ಸೂರ್ಯನಂತೆ ಒಳ್ಳೇ ತೇಜಸ್ವಿಯಾಗಿದ್ದಾರೆ. ಇಬ್ಬರಲ್ಲೂ ಒಂದೇ ವಿಧವಾದ ಸಂತೃಪ್ತಿ. ಸಮರ್ಥ ಗುರು ಸಿಕ್ಕನೆಂದು ಶಿಷ್ಯನಿಗೆ ಸಂತೋಷ. ಯೋಗ್ಯಶಿಷ್ಯ ಸಿಕ್ಕನೆಂದು ಗುರುವಿಗೆ ಸಮಾಧಾನ. ಇವರೇ ಜೋಯಿಸರ ಹರಳ ಹಳ್ಳಿಯ ಹಾಲಯ್ಯ ಹಾಗೂ ಶ್ರೀ ಎಳಂದೂರು ಬಸವಲಿಂಗ ಸ್ವಾಮಿಗಳು.

ಜ್ಞಾನದಾಹದಿಂದ ಬಳಲುವ ಶಿಷ್ಯನಿಗೆ ಗುರುಗಳಿಂದ ಕೇಳಿ ತಿಳಿದುಕೊಳ್ಳಬೇಕೆಂಬ ಕಾತರ ಹೆಜ್ಜೆ ಹೆಜ್ಜೆಗೆ ಹೆಚ್ಚಾಯಿತು. ಧೈರ್ಯ ತಂದುಕೊಂಡು ಅವರನ್ನು ಕೇಳಿಯೂ ಬಿಟ್ಟ. ''ಗುರುಗಳೇ ! ನಿಜಗುಣರು ತಮ್ಮ ಗ್ರಂಥಕ್ಕೆ ಕೈವಲ್ಯಪದ್ಧತಿ ಎಂದು ಏಕೆ ಹೆಸರಿಟ್ಟರು ?''

ಗುರುಗಳಿಗೆ ಶಿಷ್ಯನಲ್ಲಿರುವ ಜ್ಞಾನದಾಹ ನೋಡಿ ತುಂಬಾ ಸಂತೋಷ ವಾಯಿತು. ದಾರಿಯೂ ಸವೆಯಬೇಕಾಗಿತ್ತು. ಆದ್ದರಿಂದ ಶಿಷ್ಯನ ಪ್ರಶ್ನೆಗೆ ಉತ್ತರಿಸಲು ಪ್ರಾರಂಭಿಸಿದರು.

''ಕೈವಲ್ಯವೆಂದರೆ, 'ಕೇವಲಸ್ಯ ಭಾವಂ ಕೈವಲ್ಯಂ' ಎಂದಾಗುತ್ತದೆ. ಈ ಕೇವಲವೇ ಶಿವಸ್ಥಿತಿ. ಅದಕ್ಕಾಗಿಯೇ 'ಶಿವಃ ಕೇವಲಂ' ಎಂದು ಹೇಳಲಾಗಿದೆ.''

ಜೀವಭಾವ ನಷ್ಟವಾಗಿ ಶಿವಭಾವ ಉಂಟಾಗುವದೇ ಕೈವಲ್ಯ. ಇದನ್ನು ಸಾಧಿಸುವ ರೀತಿಯೇ ಪದ್ಧತಿ. ಅದಕ್ಕಾಗಿ ಶ್ರೀ ನಿಜಗುಣರು ತಮ್ಮ ಗ್ರಂಥಕ್ಕೆ ಕೈವಲ್ಯ ಪದ್ಧತಿ ಎಂದು ಹೆಸರಿಟ್ಟಿದ್ದಾರೆ. ಈ ಕೈವಲ್ಯ ಪದ್ಧತಿಯಲ್ಲಿ ಐದು ಸ್ಥಲಗಳಿವೆ. ಅವು ಮೋಕ್ಷ ಮಂದಿರಕ್ಕಿರುವ ಐದು ಸೋಪಾನಗಳು. ಆರಂಭದ ಪದ್ಯದಲ್ಲಿ ಬರುವ ಐದು ನುಡಿಗಳು ಒಂದೊಂದು ಸ್ಥಲಕಟ್ಟುಗಳಿಗೆ ಅನುಗುಣವಾಗಿಯೇ ಇವೆ.

### ಶಿವಕಾರುಣ್ಯ ಸ್ಥಲ

ಈ ಸ್ಥಲದಲ್ಲಿ ಶಿವಾನುಗ್ರಹ ಪ್ರಾಪ್ತಿಯನ್ನೇ ಕುರಿತು ಹೇಳಲಾಗಿದೆ. ಏಕೆಂದರೆ ಮಾನವನ ಸಮಸ್ತ ಅಭ್ಯುದಯ ಹಾಗೂ ನಿಃಶ್ರೇಯಸ್ಸುಗಳಿಗೆ ಈಶ್ವರಾನುಗ್ರಹವೇ ಮುಖ್ಯ. 'ಶಿವ', ಎಂಬ ಪವಿತ್ರನಾಮವೇ ಜಗತ್ತಿಗೆ ಆಧಾರಭೂತವಾಗಿದೆ. 'ಕಾಯವಿಡಿದಾತ್ಮರಾಶಿಗೆ ಪರತರ ಮುಕ್ತಿಗುಪಾಯವಿದು ನಿಜ ಶಿವ ಮಂತ್ರವಣ್ಣಾ' ಎಂದು ನಿಜಗುಣರು ಇದೇ ಸ್ಥಲದಲ್ಲಿ ಹೇಳಿರುವರು.

### ಜೀವ ಸಂಬೋಧನಾ ಸ್ಥಲ

'ಜೀವನು' ಅಂದರೆ ಯಾರು ? 'ದುಃಖಕ್ಕೆ ಕಾರಣವೇನು ?' ಅದರ ನಿವೃತ್ತಿಯ ಉಪಾಯ ಯಾವುದು ? ಹೀಗೆ ಇವೆಲ್ಲ ವಿಚಾರಗಳು ಈ ಸ್ಥಲದಲ್ಲಿ ಪ್ರತಿಪಾದಿಸಲ್ಪಟ್ಟಿವೆ.

ಜೀವನು ಶಿವಾಂಶಿಕನೇ ಆಗಿದ್ದರೂ ಆತ್ಮವಿಸ್ಮೃತಿಯಿಂದ ದುಃಖಭಾಜನನಾಗಿ ರುವನು. ಅದಕ್ಕಾಗಿ ಜೀವನಿಗೆ ಇಲ್ಲಿ ''ನೆನೆವುದನುದಿನ ಉದಯ

ಕಾಲದೆಚ್ಚರಿಕೆಯೊಳು । ವಿನೂತ ಗುರುಮೂರ್ತಿಯನುಮೇಶನಂಘ್ರಿಯನು ನೀನು ಬಳಿಕೆ ಸುವಿಚಾರದಿಂದ ನೇಮಕವಾಗಿ ! ಮನುಜ ನಿನಗಹುದು ಮುಕ್ತಿ॥'' ಎಂದು ಹೇಳಲಾಗಿದೆ.

## ನೀತಿ ಕ್ರಿಯಾಚರ್ಯಸ್ಥಲ

ಇದರಲ್ಲಿ ತ್ರಿಕರಣ ಶುದ್ಧಿ ಹೇಳಲ್ಪಟ್ಟಿದೆ. ಹಿಂದೆ 'ಜೀವ ಸಂಬೋಧನೆ ಸ್ಥಲ'ದಲ್ಲಿ ಉಂಟಾದ ಅರಿವು ಸ್ಥಿರವಾಗಿ ಉಳಿಯಬೇಕಾದರೆ ಜೀವನದಲ್ಲಿ ನೀತಿ ಮುಖ್ಯ. ಈ ವಿಷಯವನ್ನು ನಿಜಗುಣರು ''ಎಂತೊಲಿವನೋ ಎನಗಿನ್ನೆಂತೊಲಿವನೊ ಕಂತು ಕಾಲ ಪುರವೈರಿ ಗುರುಶಂಭುಲಿಂಗ ಕರಣತ್ರಯದ ದೋಷವಿರೆ'' ಎಂದು ಒಳ್ಳೇ ಮಾರ್ಮಿಕವಾಗಿ ಹೇಳಿರುವನು.

## ಯೋಗ ಪ್ರತಿಪಾದನಾ ಸ್ಥಲ

ಶಿವಾಂಶಿಕನಾದ ಜೀವನಿಗೆ ಶಿವನ ವಿಯೋಗವೇ ದುಃಖವೆನಿಸಿದೆ. ಪುನಃ ಅವರೀರ್ವರಲ್ಲಿ ಐಕ್ಯಸಾಧಿಸುವದೇ ಯೋಗವೆಂದು ಕರೆಯಲ್ಪಡುವದು. ಯೋಗ ಪ್ರಭೇದಗಳು ಅನೇಕವಾಗಿದ್ದರೂ ಶ್ರೀ ನಿಜಗುಣರು ಅವುಗಳಲ್ಲಿ ಮುಖ್ಯವಾಗಿ ಮಂತ್ರ, ಲಯ, ಹಠ, ರಾಜಯೋಗ ಮತ್ತು ಶಿವಯೋಗ ಇವುಗಳನ್ನು ಮಾತ್ರ ಹೇಳಿರುವರು.

ಮೊದಲಿನದು 'ಮಂತ್ರಯೋಗ'. ಈ ಮಂತ್ರ ಏಕಾಕ್ಷರ, ದ್ವಯಕ್ಷರ, ಷಡಕ್ಷರ ಮತ್ತು ಅಷ್ಟಾಕ್ಷರ ಹೀಗೆ ಇವೆ. 'ಓಂ' ಇದು ಏಕಾಕ್ಷರ. ಹಂಸಃ ಅಥವಾ ಸೋಹಂ ಇವು ದ್ವಯಾಕ್ಷರ. 'ಓಂ ನಮಃ ಶಿವಾಯ' ಇದು ಷಡಕ್ಷರ. 'ಓಂ ಹ್ರಾಂ–ಹ್ರೀಂ ನಮಃ ಶಿವಾಯ' ಇದು ಅಷ್ಟಾಕ್ಷರ. ಈ ಮಂತ್ರ ಜಪವನ್ನು ಕ್ರಮಾನುಸಾರವಾಗಿ ಮಂತ್ರಾಧಿದೇವತೆಯ ಧ್ಯಾನದೊಡನೆ ನ್ಯಾಸಪೂರ್ವಕವಾಗಿ ಮಾಡಬೇಕು. ಇದರಿಂದ ಮೋಕ್ಷ ಸಿದ್ಧಿಯಾಗುವದು. ಇದೇ 'ಮಂತ್ರಯೋಗ' ಎನಿಸಿದೆ.

ಇನ್ನು ಎರಡನೆಯದು 'ಲಯಯೋಗ'. ಮನವು ತನ್ನ ಧ್ಯೇಯ ವಸ್ತುವಿನಲ್ಲಿ ಇಲ್ಲವೆ ಪ್ರಾಣಾಯಾಮದಿಂದ ಅಭಿವ್ಯಕ್ತವಾದ ನಾದದಲ್ಲಿ ವಾಯು ಸಹಿತ ಲಯವನ್ನು ಹೊಂದುವದು. ಅದೇ (ಲಯಯೋಗ) ಎನಿಸುವದು.

ಇದಾದ ಮೇಲೆ ಮೂರನೆಯದು 'ಹಠಯೋಗ'. ಅಷ್ಟಾಂಗಯೋಗ ಮತ್ತು ಯೋಗಮುದ್ರೆ ಹಾಗೂ ರೇಚಕ ಪೂರಕಗಳಲ್ಲದ ಕೇವಲ ಕುಂಭಕ ಇವುಗಳ ದ್ವಾರಾ ಪ್ರಾಣಾಯಾಮದಿಂದ ವಾಯುವನ್ನು ವಶಪಡಿಸಿಕೊಳ್ಳುವದೇ 'ಹಠಯೋಗ'ವೆನಿಸಿದೆ.

ಅನಂತರ ನಾಲ್ಕನೆಯದು 'ರಾಜಯೋಗ'. ಅಂತರ್ಬಾಹ್ಯ ಮಧ್ಯಮ ಎಂಬ ಮೂರು ಬಗೆಯ ಲಕ್ಷ್ಯಾನುಸಂಧಾನದಿಂದ ಆತ್ಮಸಾಕ್ಷಾತ್ಕಾರ ಮಾಡಿಕೊಂಡು ಮನೋವ್ಯಾಪಾರ ಇಲ್ಲದೆ ನಿಂತುದಾದರೆ ಅದು ''ರಾಜಯೋಗ''ವೆನಿಸುವದು.

ಇನ್ನು ಕೊನೆಯದೇ 'ಶಿವಯೋಗ'. ಶಿವಾಗಮ ರೀತ್ಯ ಶಿವಭಕ್ತಿಯ ಆಧಾರಭೂತ ಮಹಾಕುಂಡಲಿನೀಜನ್ಯ ತಾರಕತ್ರಯದ ಸಾಕ್ಷಾತ್ಕಾರದಿಂದ ಆ ಶಕ್ತಿಯಲ್ಲಿ ವೃತ್ತಿಜ್ಞಾನವು ಲಯವನ್ನು ಹೊಂದಿ ಸರ್ವತೋಮುಖಿ ವ್ಯಾಪ್ತವಾದ ಶಿವತ್ವಾಭಿವ್ಯಕ್ತಿಗೆ (ಶಿವಯೋಗ)ವೆಂದು ಕರೆಯಲಾಗುತ್ತಿದೆ.

ಇದು ಶಿವಜ್ಞಾನ, ಶಿವಧ್ಯಾನ, ಶಿವಭಕ್ತಿ, ಶಿವವ್ರತ ಮತ್ತು ಶಿವಾರ್ಚನೆ ಹೀಗೆ ಐದು ಅಂಗಗಳಿಂದ ಕೂಡಿಕೊಂಡಿದೆ. ಇದರಲ್ಲಿ ಬರುವ ಶಿವಾರ್ಚನೆಯಲ್ಲಿ ಉಳಿದ ನಾಲ್ಕು ಅಂಗಗಳು ಅಂತರ್ಭಾವವಾಗುವದರಿಂದ ಶಿವಾರ್ಚನೆಯೇ (ಶಿವಯೋಗ) ಎಂದು ಹೇಳಲಾಗುವದು.

ಶ್ರೀ ಶಿವಪೂಜೆ ಅಂತರಂಗ ಹಾಗೂ ಬಹಿರಂಗ ಹೀಗೆ ಎರಡು ವಿಧವಾಗಿ ನಡೆಯಬೇಕಾಗುವದು. ಈ ಎರಡರಲ್ಲಿ ಅಂತಃಪೂಜೆ ಶ್ರೇಷ್ಠ. ಆದರೆ ಬಾಹ್ಯಪೂಜೆ ಇಲ್ಲದೆ ಅಂತಃಪೂಜೆ ಸಿದ್ಧಿಸುವದಿಲ್ಲ. ಬಹಿಃಪೂಜೆಗೆ ಪತ್ರಿ, ಪುಷ್ಪ, ಗಂಧ, ಅಕ್ಷತೆಗಳು ಇರುವಂತೆ ಅಂತಃಪೂಜೆಗೆ ಶಾಂತಿಯೇ ಅಭಿಷೇಕ, ಅಹಿಂಸೆಯೇ ಪುಷ್ಪ, ಸ್ವರೂಪಜ್ಞಾನವೇ ಗಂಧ, ದಯವೇ ಅಕ್ಷತೆ ಇವೇ ಮೊದಲಾದವುಗಳು ಅಭ್ಯಂತರ ಪೂಜೆಯ ಉಪಚಾರಗಳಾಗಿವೆ.

ಭಕ್ತ, ಮಹೇಶಾದಿ ಷಟ್‌ಸ್ಥಲಗಳಲ್ಲಿ ಅಷ್ಟಾಂಗ ಯೋಗ ಸಮಾವೇಶ ವಾಗುತ್ತದೆ. ಹೇಗೆಂದರೆ ಯಮ ಭಕ್ತಸ್ಥಲದಲ್ಲಿ, ನಿಯಮ ಮಹೇಶ ಸ್ತಲದಲ್ಲಿ, ಆಸನ ಪ್ರಸಾದಿ ಸ್ಥಲದಲ್ಲಿ, ಪ್ರಾಣಾಯಾಮ ಮತ್ತು ಪ್ರತ್ಯಾಹಾರ ಪ್ರಾಣಲಿಂಗ ಸ್ಥಲದಲ್ಲಿ, ಧಾರಣ ಧ್ಯಾನ, ಶರಣ ಸ್ಥಲದಲ್ಲಿ, ಸಮಾಧಿ ಐಕ್ಯಸ್ಥಲದಲ್ಲಿ, ಹೀಗೆ ಸಮಾವೇಶಗೊಳ್ಳುತ್ತವೆ. ಇದರಿಂದ ಭೃಂಗಕೀಟನ್ಯಾಯದಂತೆ ಮಾನವ ಶಿವಯೋಗದ ಅನುಸಂಧಾನದಿಂದ ಶಿವನೇ ತಾನಾಗುವನು.

ಕೊನೆಯದಾಗಿ ಹೇಳಿರುವದೇ 'ಜ್ಞಾನಪ್ರತಿಪಾದನ ಸ್ಥಲ'. ಇದನ್ನು ಉದ್ದೇಶ ಪೂರ್ವಕವಾಗಿ ಯೋಗ ಪ್ರತಿಪಾದನಾ ಸ್ಥಲದ ನಂತರ ಹೇಳಲಾಗಿದೆ. ಕಾರಣವಿಷ್ಟೆ! ಯೋಗಸಾಧನೆಯಿಂದ ಬಂದ ಜ್ಞಾನವನ್ನು ಸ್ಥಿರವಾಗಿ ಇಟ್ಟುಕೊಂಡು ವ್ಯವಹರಿಸುವದೇ ಈ ಸ್ಥಲದ ಉದ್ದೇಶವಾಗಿದೆ.

''ಅಲೌಕಿಕ ! ಈಗ ನಾನು ಕೈವಲ್ಯಪದ್ಧತಿ ಕುರಿತು ಹೇಳಿದ್ದು ಕೇವಲ ಸ್ಥೂಲ ವಿವೇಚನೆ ಮಾತ್ರ'' ಎಂದು ಹೇಳಿ ಮುಂದೆ ಸಾಗಿದರು. ಆದರೆ ಶಿಷ್ಯನಿಗೆ ಇನ್ನೂ ನಿಜಗುಣರ ಇತರ ಗ್ರಂಥಗಳನ್ನು ತಿಳಿಯುವ ಕುತೂಹಲ. ಆತನು ಮತ್ತೆ ಗುರುಗಳನ್ನು ಪ್ರಶ್ನಿಸಿದರು. ''ಪರಮಾನುಭವಬೋಧೆ ವಿಚಾರವಾಗಿ ಸ್ಥೂಲವಾಗಿಯಾದರೂ ಕೆಲಮಟ್ಟಿಗೆ ತಿಳಿಸಬೇಕು'' ಎಂದು ಪ್ರಶ್ನಿಸಿದ. ಜಿಜ್ಞಾಸುವಾದ ಶಿಷ್ಯನ ಶ್ರವಣಾಭಿಲಾಷೆಯನ್ನು ಕಂಡು ಗುರುಗಳು ಮತ್ತೆ ಹೇಳತೊಡಗಿದರು.

### ಪರಮಾನುಭವ ಬೋಧೆ

'ಪರಮ' ಎಂದರೆ ಶ್ರೇಷ್ಠವೆಂದು ಆಗುತ್ತಿದ್ದರೂ ಅದು ಶಿವನನ್ನೇ ಅನುಲಕ್ಷಿಸಿ ಹೇಳಲ್ಪಟ್ಟಿದೆ. ಪರಶಿವ ಅಥವಾ ಪರಬ್ರಹ್ಮ ಇದರ ಅನುಭವ ಪಡೆಯುವದೇ 'ಪರಮಾನುಭವ'ವಾಗಿದೆ. 'ಪರಮ' ಎಂದರೆ ಹೆಚ್ಚಿನದು ಎಂದು ಮೇಲೆ ಹೇಳಲಾಗಿದೆ. ಅಂದರೆ ಯಾವುದು ಹೆಚ್ಚಿನದೋ ಅದು 'ಭೂಮ'. ಈ ಭೂಮಾನಂದ ಪ್ರಾಪ್ತಿಯೇ ಜೀವನದ ಪರಮ ಗುರಿ.

ಪರಮಾನುಭವ ಬೋಧೆಯಲ್ಲಿ ಶ್ರೀ ಯಜ್ಞವಲ್ಕ್ಯರು ತಮ್ಮ ಧರ್ಮಪತ್ನಿ ಮೈತ್ರೇಯಿಗೆ ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಿದುದನ್ನೇ ಶ್ರೀ ನಿಜಗುಣರು ಕನ್ನಡ ಜಿಜ್ಞಾಸುಗಳಿಗಾಗಿ ಮಾತೃಭಾಷೆಯಲ್ಲಿ ಅನುವಾದಿಸಿದ್ದಾರೆ. ಈ ಗ್ರಂಥದ ಹಿರಿಮೆಯನ್ನು ಶ್ರೀ ನಿಜಗುಣರೆ ಹೀಗೆ ಹೇಳಿದ್ದಾರೆ. ''ಪರಮ ವಿರಕ್ತಗೆ ಪರತರ ಶಿಷ್ಯಂಗೆ । ಪರಮಾರ್ಥವರಿವ ಆತ್ಮತನುಜಂಗೆ ॥ ಪರಮ ರಹಸ್ಯದೊಳೊರೆವುದು ಕರ್ಮತ । ತ್ಪರರಿಗರುಹಲಾಗದಿದನೊಮ್ಮೆ ॥'

ಕಲ್ಪಿತ ಪುರುಷನು ಅಲ್ಪಸುಖಕ್ಕೆ ಎಳಸುತ್ತಿರುವನು. ಏಕೆಂದರೆ ದೃಶ್ಯ ಜಗತ್ತೇ ಅವನ ಅನುಭವಕ್ಕೆ ಬರುತ್ತಿರುವದು. ಅವನಿಗೆ ಯತಾರ್ಥ ಜ್ಞಾನವಾಗುತ್ತಲೇ ಮೊದಲಿನ ಮಿಥ್ಯಜ್ಞಾನವೆಲ್ಲ ಅಳಿದು ಹೋಗಿ ಸತ್ಯವಾದುದು ಮಾತ್ರ ಅವನ ಅನುಭವಕ್ಕೆ ಬರುತ್ತದೆ.

''ಸ್ವಗತಾದಿ ಭೇದ ಪರಬ್ರಹ್ಮದೊ । ಳೊಗೆದಿಂತು ತೋರ್ಪ ನೀ ನಾನೆಂಬ ॥ ಬಗೆಯನೆ ತೋರಿ ತೊಡೆಯೆ ಕಲ್ಪಿತನನಿಲ್ಲಿ! ನೆಗಲಿಪೇಳಿದೆನೆಸೆ ಪೆರತುಂಟೆ'' ಹೀಗೆ ಮೇಲ್ಕಂಡ ರೀತಿಯಲ್ಲಿ ಒಳ್ಳೆಯ ಮನಂಬುಗುವ ಹಾಗೆ ಶ್ರೀ ನಿಜಗುಣರು ವಿವರಿಸಿದ್ದಾರೆ.

ಇದೇ ರೀತಿ ಸೃಷ್ಟಿಯ ಕ್ರಮ, ಪ್ರವರ್ತಕ ಕರ್ಮ, ನಿವೃತ್ತಕ ಕರ್ಮ, ಭ್ರಾಂತಿ ನಿರಾಕರಣ, ನಿರ್ಗುಣಯೋಗ, ಸುಗುಣಯೋಗ ಇವೇ ಮೊದಲಾದವು ವಿಧಿವತ್ತಾಗಿ ನಿರೂಪಿಸಲ್ಪಟ್ಟಿವೆ.

### ಅನುಭಾವಸಾರ

ಇದು ಉಪನಿಷತ್ತುಗಳ ಸಾರಸಂಗ್ರಹ, ಕನ್ನಡಿಗರಿಗಾಗಿ ಶ್ರೀ ನಿಜಗುಣರು ಕೊಟ್ಟ ಬಹುದೊಡ್ಡ ವೇದಾಂತ ಕೊಡುಗೆ. ಇದರ ಹಿರಿಮೆ ಗರಿಮೆಗಳನ್ನು ಕುರಿತು ಶ್ರೀ ನಿಜಗುಣರು ''ಇದು ವೇದಶಿರದರ್ಥವಿದು ಸಕಲ ಶಾಸ್ತ್ರೋಕ್ತವಿದು. ಇದು ಪುರಾತನರ ಮತವಿದು ಗುರೂಕ್ತಿ । ತತ್ತ್ವವಿದರ ನಿಜಮಾರ್ಗ ॥'' ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಎಂದಿನಿಂದಲೂ ಉಪನಿಷತ್ತುಗಳಿಗೆ ಪ್ರಥಮ ಪ್ರಾಶಸ್ತ್ಯ. ಅಂತೆಯೇ ಅವುಗಳನ್ನು ಪ್ರಸ್ಥಾನತ್ರಯಗಳಲ್ಲಿ ಸೇರ್ಪಡಿಸಲಾಗಿದೆ.

ತಾಯಿ ತಾನುಂಡ ಆಹಾರವನ್ನೇ ತನ್ನ ಎದೆಹಾಲಿನ ಮೂಲಕ ಮಗುವಿಗೆ ಕೊಡುವಂತೆ, ಶ್ರೀ ನಿಜಗುಣರು ಉಪನಿಷತ್ತುಗಳ ಸಾರಸರ್ವಸ್ವವನ್ನೇ ತೆಗೆದು ಈ ತಮ್ಮ ಗ್ರಂಥದಲ್ಲಿ ಅಳವಡಿಸಿ ಅನುಭವಸಾರ ಎಂಬ ಅನ್ವರ್ಥಕನಾಮವನ್ನಿಟ್ಟಿದ್ದಾರೆ.

ನಾನಾ ವಿಧವಾಗಿ ಕಾಣುವ ಅನೇಕತ್ವದಲ್ಲಿ ಏಕತ್ವವೇ ಅಡಗಿದೆ ಎಂಬುದು ಈ ಗ್ರಂಥದುದ್ದಕ್ಕೂ ಪ್ರತಿಪಾದಿಸಲ್ಪಟ್ಟಿದೆ. ಜೀವನು ಹೊಂದುವ ಸುಖ–ದುಃಖಗಳಿಗೆ ಕರ್ಮತ್ರಯಗಳೇ ಕಾರಣವೆಂದು ಇಲ್ಲಿ ಕರ್ಮಸಿದ್ಧಾಂತ ಬಹುಸ್ವಾರಸ್ಯವಾಗಿ ನಿರೂಪಿತವಾಗಿದೆ.

ಕರ್ಮಕ್ಷಯವಾಗದೇ ಮೋಕ್ಷವಿಲ್ಲ. ಬದುಕಿರುವಾಗಲೇ ಹೊಂದುವ ಮೋಕ್ಷಾನಂದ ಜೀವನ್ಮುಕ್ತಿ ಎಂದು ಕರೆಯಲ್ಪಡುವದು. ಅದೇ ಮೇರೆಗೆ ದೇಹವಳಿದ ಮೇಲೆ ಆಗುವದು ವಿದೇಹಮುಕ್ತಿ ಈ ಎಲ್ಲ ವಿಚಾರಗಳು ಒಳ್ಳೇ ಮನನೀಯವಾಗಿ ವಿವರಿಸಲ್ಪಟ್ಟಿವೆ.

### ಪರಮಾರ್ಥಗೀತೆ

ಇದು ಯೋಗ ವಾಶಿಷ್ಟ್ಯದ ತಾತ್ಪರ್ಯವನ್ನೇ ಹೇಳುವ ಉದ್ಬೋಧಕ ಕನ್ನಡ ಗ್ರಂಥ. ಶ್ರೀ ಗುರುವಿಗೆ ಶಿಷ್ಯನು ಪೊಡಮೊಟ್ಟು । ರಾಗಂ ಮಿಗೆ ಭಕ್ತಿಯಳವಟ್ಟು । ತನ್ನ ನಿಜಸ್ಥಿತಿ ತಾನೇನೆಂದು । ಮುನ್ನಿನ ಮುನ್ನಿನ ಪರಿಭವವೆಂತಾಯ್ತೆಂದು । ಇನ್ನಿದು ಪರಿವುದುಪಾಯಮಿದೆಂದು । ನನ್ನಿಯನೆನಗೀಗಳೆ ಪೇಳೆಂದು ॥ ಬಿನ್ನವಿಸಿದೊಡೆ ಗುರೂತ್ತಮನಂದು । ಮನ್ನಿಸಿದನು ಶಿಷ್ಯನೊಳಿಂತೆಂದು ।

ಹೀಗೆ ಮೇಲೆ ತಿಳಿಸಿದಂತೆ ಈ ಗ್ರಂಥ ಆರಂಭವಾಗುತ್ತದೆ. ಈ ಪ್ರಶ್ನೆ ಇಂದು ನಿನ್ನೆಯದಲ್ಲ. ಬಹುಕಾಲದಿಂದೂ ಗುರುಗಳಿಗೆ ಶಿಷ್ಯರು ಕೇಳುತ್ತ ಬಂದ ಪುರಾತನ ಪ್ರಶ್ನೆ ಇದು. ಈ ಪ್ರಶ್ನೆಗೆ ಗುರುಗಳು–

ಸುಜನ ಶಿರೋಮಣಿ ಶಿಷ್ಯನೇ ನಿನ್ನ । ನಿಜ ಊಹಿಸಬಾರದು ಸಂಪನ್ನ । ಅದು ವಚನಕಗೋಚರವಲ್ಲೆಂದು ಅದು ಮನಕೆ ವಿಷಯವಲ್ಲೆಂದು ॥ ಪೇಳುತ್ತಂ ಮತ್ತಂದನುವಿಂದ । ಕೇಳುಪದೇಶಿಸಬೇಕದರಿಂದ ॥ ಸತ್ಯಂ ಜ್ಞಾನ ಸುಖಾತ್ಮಕನೆಂದು ॥ ದೃಶ್ಯ ವಿಲಕ್ಷಣದಿಂ ಕುರುಹಿಟ್ಟು । ವಶ್ಯಮಿದೆಂದೆನೆ ಲಕ್ಷಿಸಿಕೊಟ್ಟು । ಮನಸಿಗೆ ಗೋಚರಮೆಂದೆನಿಸುತ್ತ । ಜಾನಿಸಿ ಪೇಳಿತು ಶ್ರುತಿಗಳ ಮೊತ್ತ ।

ಎಂದು ಶಿಷ್ಯನಿಗೆ ತಿಳಿಸುತ್ತ, ಅವನ ನಿಜದರಿವು ಅವಾಙ್ಮನ ಸಗೋಚರವೂ, ಪಂಚ ಲಕ್ಷಣ ಲಕ್ಷಿತವೂ ಆದ ಪರವಸ್ತುವೇ ಆಗಿದೆ ಎಂಬುದು ಈ ಗ್ರಂಥದಲ್ಲಿ ವಿವರಿಸಲ್ಪಟ್ಟಿದೆ.

ಇಷ್ಟೇ ಅಲ್ಲ ತತ್ವಮಸಿ ಮಹಾವಾಕ್ಯ, ಪಂಚೀಕರಣ, ಪಿಂಡೋತ್ಪತ್ತಿ, ತ್ರಿಗುಣಗಳ ಪ್ರಭಾವ ಮುಂತಾದ ಅನೇಕ ವಿಷಯಗಳು ಉದ್ಬೋಧಕವಾಗಿ ಬಂದಿವೆ.

## ವಿವೇಕ ಚಿಂತಾಮಣಿ

ಈ ಗ್ರಂಥದ ಆರಂಭದಲ್ಲಿ ಶ್ರೀ ನಿಜಗುಣರು ಮಾಡಿದ ಸ್ತೋತ್ರ ವಿಚಾರಾರ್ಹವಾಗಿದೆ. ಏಕೆಂದರೆ ಬಹುಜನರು ಶ್ರೀ ನಿಜಗುಣರನ್ನು ಕೇವಲ ಅದ್ವೈತಿಗಳೇ ಎಂದು ಭಾವಿಸಿರುವರು.

''ಶ್ರೀಮದನೇಕ ಭುವನ ಭವನಾರಂಭ ಮೂಲಸ್ತಂಭರೂಪ ಶಂಭುಲಿಂಗ ವಾದಿಯಾಗಿ ನಿರಾಭಾರಿ ದೇಶಿಕೋತ್ತಮ ಪರ್ಯಂತ ಮಹಾಗುರು ಪರಂಪರೆಗೆ ಮನೋವಾಕ್ಕಾಯಗಳಿಂ ಅಭಿವಂದಿಸಿ ॥'' ಎಂದು ಹೇಳಿರುವದರಿಂದ ಅವರು ನಿಜವಾಗಿಯೂ ವೀರಶೈವರೆಂಬುದು ತಾನೇ ಸ್ಪಷ್ಟವಾಗುತ್ತದೆ. ಏಕೆಂದರೆ ''ನಿರಾಭಾರಿ ದೇಶಿಕೋತ್ತಮ'' ಎಂಬ ಪದಪ್ರಯೋಗ ವೀರಶೈವರಲ್ಲಿ ಮಾತ್ರ ಬಳಕೆಯಲ್ಲಿದೆ. ಇದರಿಂದ ಶ್ರೀ ನಿಜಗುಣರು ವೀರಶೈವರೆಂಬುದು ತಾನೇ ಸುಸ್ಪಷ್ಟ.

''ವಿವೇಕ ಚಿಂತಾಮಣಿ'' ಎಂಬ ಹೆಸರೇ ಹೇಳುವಂತೆ ಈ ಗ್ರಂಥ ಮುಮುಕ್ಷುವಿಗೆ ಮೋಕ್ಷ ದಯಪಾಲಿಸುವ ಚಿಂತಾರತ್ನವೇ ಆಗಿದೆ. ಏಕೆಂದರೆ ಮೋಕ್ಷಕ್ಕೆ ವಿವೇಕವೇ ಬಹುದೊಡ್ಡ ಸಾಧನ.

ದ್ವಿತೀಯ ಪರಿಚ್ಛೇದದಲ್ಲಿ ಶೈವಾಗಮ ಪ್ರತಿಪಾದವಾದ ವೀರಶೈವಸಿದ್ಧಾಂತ ನಿರೂಪಿತವಾಗಿದೆ. ಚರಮ ಶರೀರಿಯಾದ ವೀರಶೈವ ಲಿಂಗ ಭೋಗೋಪಭೋಗಿ ಯಾಗಿರುವದರಿಂದ ಅಲ್ಪಕ್ರಿಯೆಯ ಮೂಲಕ ವಿಶೇಷ ಫಲ ಪಡೆಯುವನೆಂಬುದು ಬಹು ಸ್ವಾರಸ್ಯವಾಗಿ ಇಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ಇದೇ ಗ್ರಂಥದ ಎರಡನೇ ಪ್ರಕರಣದಲ್ಲಿ ಜನ ಬದುಕಲಿ ಎಂದು ನೀತಿಪರವಾದ ಅನುಭವೋಕ್ತಿಗಳು ಮನನೀಯವಾಗಿ ಹೇಳ್ಪಟ್ಟಿವೆ.

- ಅರಿಯಲ್ಪಡದ ಕುಲನಾಮಂಗಳುಳ್ಳ ಪಥಶ್ರಾಂತನಾದ ಅನ್ನಕಾಮನಪ್ಪ ಅತಿಥಿಗೃಹಕ್ಕೆ ಬರಲಾತನಂ ಸರ್ವಥಾ ಸತ್ಕರಿಸಬೇಕು.
- ವಿದ್ಯಾ ವ್ಯಸನಿಯಾಗಬೇಕು.
- ಬುದ್ಧಿವಂತನಾದ ಬಾಲಕನಾದರೂ ಬೆಸಗೊಳ್ಳಬೇಕು.
- ಸಂಪತ್ತು ಬಂದಲ್ಲಿ ಕುಸುಮದಂತೆ ಮೃದು ಹೃದಯನಾಗಬೇಕು.
- ವಿಪತ್ತಡಸಿದಲ್ಲಿ ಶಿಲೆಯಂತೆ ಕಠಿಣ ಚಿತ್ತನಾಗಿರಬೇಕು.
- ವೃಕ್ಷಾಧಿಕದಂತೆ ಸ್ವಕಾರ್ಯವನ್ನುಳಿದಾದರೂ ಪರೋಪಕಾರಂಗಳಂ ಮಾಡಬೇಕು.
- ಸರ್ವವೂ ದೈವಾಧೀನವೆಂದು ಆಲಸಿಭಾವದಿಂದಿರದೆ ಪುರುಷ ಪ್ರಯತ್ನದಿಂದುದ್ಯೋಗಂ ಗೆಯ್ಯಬೇಕು.
- ಪರಗುಣ ಪರಮಾಣುವಾದರೂ ಪರ್ವತೋಪಮಾನವಾಗಿ ಸ್ತುತಿಸಬೇಕು.

- ನಿಜಗುಣಾತಿಶಯಮಂ ಮರೆಸಬೇಕು.
- ಲೋಕಾಪವಾದದಲ್ಲಿ ಭೀತನಾಗಿರಬೇಕು.
- ಕರಣೇಂದ್ರಿಯಗಳಲ್ಲಿ ನಿಗ್ರಹ ಸಮರ್ಥನಾಗಿರಬೇಕು.
- ವ್ಯವಹಾರದಲ್ಲಿ ಸತ್ಯವಂತನಾಗಿರಬೇಕು.

ಹೀಗೆ ದಶ ಪರಿಚ್ಛೇದಗಳಿಂದ ಕೂಡಿದ ಈ ವಿವೇಕಚಿಂತಾಮಣಿಯಲ್ಲಿ ಮಾನವನಿಗೆ ಅತ್ಯವಶ್ಯವಾದ ಧರ್ಮ, ತತ್ತ್ವ, ನೀತಿ, ಸಂಗೀತ, ಸಾಹಿತ್ಯ, ಜ್ಯೋತಿಷ್ಯ ಇವೇ ಮೊದಲಾದ ವಿಷಯಗಳೂ ಬಂದಿವೆ. ಇದರಿಂದಾಗಿ ಇದು ಕನ್ನಡದಲ್ಲಿ ಬಂದ ಪ್ರಪ್ರಥಮ ''ವಿಶ್ವಕೋಶ''ವೆಂದು ಧಾರಾಳವಾಗಿ ಹೇಳಬಹುದು.

### ಪರಮಾರ್ಥಪ್ರಕಾಶಿಕೆ

ಇದು ಚೆನ್ನಸದಾಶಿವಯೋಗೀಂದ್ರ ವಿರಚಿತ ''ಶಿವಯೋಗ ಪ್ರದೀಪಿಕೆ'' ಎಂಬ ಸಂಸ್ಕೃತ ಗ್ರಂಥದ ಕನ್ನಡ ಅನುವಾದ. ಇದನ್ನು ತಮ್ಮ ಗ್ರಂಥದಲ್ಲಿ ಶ್ರೀ ನಿಜಗುಣರು

''.......ಚೆನ್ನ ಸದಾಶಿವನೆನಿಸುವ ಆಚಾರ್ಯನು ಮುಮುಕ್ಷುಗಳ ಹೃದಯ ಗುಹಾಂತರಾಳವ ಬೆಳಗಲೆಂದು ಶಿವಯೋಗ ಪ್ರದೀಪಿಕೆ ಎಂಬ ಯೋಗಶಾಸ್ತ್ರವಂ ಮಾಡಲುದ್ಯೋಗಿಸಿ ನಿರ್ವಿಘ್ನದಿಂದಿದು ಪರಿಸಮಾಪ್ತಿಯಾಗಲೋಸುಗಮಾಗಿ ಶ್ರೀ ಗುರುನಮಸ್ಕಾರ ಲಕ್ಷಣ ಮಂಗಳಾಚರಣಂ ಗೈದನದೆಂತೆಂದೊಡೆ......'' ಎಂದು ಹೇಳಿರುವರು. ಮಂತ್ರ, ಲಯ, ಹಠ ಇವುಗಳಿಂತ ರಾಜಯೋಗವೇ ಶ್ರೇಷ್ಠ. ಈ ರಾಜಯೋಗಕ್ಕಿಂತ ಶಿವಯೋಗವೇ ಶ್ರೇಷ್ಠ ಎಂಬುದನ್ನು ಶ್ರೀ ನಿಜಗುಣರು ತಮ್ಮ ಗ್ರಂಥದಲ್ಲಿ ಹೇಳಿದ್ದಾರೆ.

''ಮತ್ತಮಾ ರಾಜಯೋಗದಿಂದುತ್ತರಮಾದ ಶಿವಯೋಗಮುಂಟಾದೊಡಾ ಶಿವಯೋಗಕ್ಕಂ ರಾಜಯೋಗಕ್ಕಂ ಪಾರಮಾರ್ಥದಿಂ ಭೇದವಿಲ್ಲ ಮಂತಾದೊಡಂ ನಿಜಮೋಕ್ಷಮಂ ಬಯಸುವ ಅಧಿಕಾರಿಗಳ ಬುದ್ಧಿ ಸೌಕರ್ಯಕ್ಕೋಸುಗ ಮುಪಚಾರಭೇದಮುಂಟದೆಂತೆನೆ : ಪತಂಜಲಾದಿ ಯೋಗಶಾಸ್ತ್ರಂಗಳಲ್ಲಿ ಕಾರ್ಯರೂಪಮಾದ ಗುಣತ್ರಯ ಸಾಕ್ಷಾತ್ಕಾರವೇ ತಾರಕತ್ರಯವೆಂದೂ ಕಾರಣಮಾದ ಪ್ರಕೃತಿಯಲ್ಲಿ ಮನೋಲಯವೇ ಅಮನಸ್ಕವೆಂದೂ ಪ್ರಕೃತ ತತ್ತ್ವೋದ್ಭೇಧ ಪುರುಷ ಸಾಕ್ಷಾತ್ಕಾರವೇ ರಾಜಯೋಗವೆಂದೂ ಪೇಳುವದರಿಂದ ರಾಜಯೋಗಂ ಶಿವಯೋಗವೆನಿಸಲಾರದು.''

''ಮತ್ತಾ ಶಿವಯೋಗವೆನೆ ಶಿವಭಕ್ತಿ ಸಂಪುಟದಾಧಾರಮಾದ ಮಹಾಕುಂಡಲಿ ಜನಿತಂಗಳಾದ ತಾರಕತ್ರಯ ಸಾಕ್ಷಾತ್ಕಾರ ದ್ವಾರದಿಂದ ಶಕ್ತಿಯಲ್ಲಿ ವೃತ್ತಿಜ್ಞಾನವಳಿದು ಸರ್ವತೋಮುಖವಾಗಿ ನಿಂದ ನಿಜ ಶಿವತತ್ತ್ವಾಭಿವ್ಯಕ್ತಿಯೇ ಶಿವಯೋಗ

ವೆನಿಪುದಾಗಿ ವಿವೇಕಗಳಿಂ ಸಕಲ ತತ್ತ್ವ ತಾತ್ವಿಕ ವಿಲಕ್ಷಣತೆಯಿಂ ಕೈವಲ್ಯ ಸ್ವರೂಪಮಾದ ಶಿವಯೋಗವೇ ಸ್ವೀಕೃತಮಕ್ಕುಂ'' ಎಂದು ಶಿವಯೋಗದ ಘನತೆಯನ್ನು ಸಾರಿರುವರು.

ಇದರಲ್ಲಿ ಶಿವಯೋಗದಂತೆ ರಾಜಯೋಗದ ಬಗೆಗೂ ಹೇಳಿ, ಅನುಷಂಗಿಕವಾಗಿ ಅಷ್ಟಾಂಗಯೋಗದ ಸೂಕ್ಷ್ಮ ವಿವೇಚನೆಯನ್ನು ಮಾಡಿರುವರು. ಐದನೇ ಪರಿಚ್ಛೇದದಲ್ಲಿ ಶಾಂಭವಿ, ಖೇಚರಿ ಮುಂತಾದ ಮುದ್ರೆಗಳನ್ನು ವಿವರಿಸಿರುವರು. ಹೃದಯಾಕಾಶದಲ್ಲಿ ಒಳ ಹೊರಗೂ ಬೆಳಗುವ ಶಿವಲಿಂಗವನ್ನು ಸಾಧಕನು ಖೇಚರಿ ಮುದ್ರೆಯಿಂದ ಕಾಣುವನು. ಅಲ್ಲಿ ಆ ಲಿಂಗವು ರತ್ನದೀಪ್ತಿ, ಅಗ್ನಿ, ನಕ್ಷತ್ರ ಇವುಗಳಂತೆ ಕಂಗೊಳಿಸುವದು.

ಇದನ್ನೇ ನಿರ್ಮಲವಾದ ಭಾವಪುಷ್ಪದಿಂದ ಪೂಜಿಸುವ ಶಿವಯೋಗ ನಿರ್ವಾತ ಜ್ಯೋತಿಯಂತೆ ಶಿವತತ್ತ್ವವೇ ತಾನು ತಾನಾಗಿ ತೊಳಗೆ ಬೆಳಗುವನು ಎಂದು ಶ್ರೀ ನಿಜಗುಣರು ಶಿವಯೋಗ ವೈಭವವನ್ನು ಹೃದಯಂಗಮವಾಗಿ ಚಿತ್ರಿಸಿರುವರು.

### ಸತ್‌ಶಿಷ್ಯ ಲಕ್ಷಣ

ಆಗ, ಪ್ರಭಾತ ಸಮಯ. ಮಂದಮಾರುತನು ಸುಳ್ಳನೇ ಸುಳಿದು ಎಳಂದೂರು ಆಶ್ರಮದಲ್ಲಿಯ ಹೂ–ಬಳ್ಳಿಗಳನ್ನು ಅಲ್ಲಾಡಿಸುತ್ತ ಸದ್ದಿಲ್ಲದೆ ಸಂಚರಿಸತೊಡಗಿದ್ದಾನೆ.

ಆಶ್ರಮದ ಹೊರಾಂಗಣದಲ್ಲಿ ಹಾಕಿದ ಕುರ್ಚ್ಯಾಸನದ ಮೇಲೆ ವಶಿಷ್ಠ ಋಷಿಗಳನ್ನು ಹೋಲುವ ಶ್ವೇತಜಟಾಧಾರಿಗಳು ಭಸ್ಮ–ರುದ್ರಾಕ್ಷಿಗಳಿಂದ ಪರಿಶೋಭಿಸುತ್ತ ಕಾವೀ ವಸನಭೂಷಿತರಾಗಿ ವಿರಮಿಸಿದ್ದಾರೆ.

ಕೆಲಸಮಯದ ನಂತರ ಒದ್ದೆಯಾದ ಕೈಗಳನ್ನು ವಸ್ತ್ರದಿಂದ ವರೆಸಿಕೊಳ್ಳುತ್ತ ತರುಣನೋರ್ವನು ಬಂದು ಪೂಜ್ಯರಿಗೆ ದಂಡವತ್ ಪ್ರಣಾಮಗೈದು ಸಮ್ಮುಖದಲ್ಲಿ ಮಂಡಿಸಿದನು. ಆಗ ಅವನನ್ನು ನೋಡಿ–

''ದೀರ್ಘ ಪ್ರಯಾಣದಿಂದ ಆಯಾಸವಾಗಿರಬಹುದೆ ?'' ''ಶಾಸ್ತ್ರಚಿಂತನ ಮಾಡುತ್ತ ಬಂದದ್ದರಿಂದ ವೇಳೆ ಹೋದದ್ದು ಗೊತ್ತಾಗಲಿಲ್ಲ''ವೆಂದು ಗುರುಗಳ ಪ್ರಶ್ನೆಗೆ ಶಿಷ್ಯ ಉತ್ತರಿಸಿದ.

ಶ್ರೀ ಎಳಂದೂರು ಬಸವಲಿಂಗ ಮಹಾಸ್ವಾಮಿಗಳು ತಮ್ಮ ನೂತನ ಶಿಷ್ಯನೊಡನೆ ಮುನ್ನಾದಿನ ರಾತ್ರಿ ಎಳಂದೂರಿಗೆ ಆಗಮಿಸಿದ್ದರು. ಅವರು ಶಿಷ್ಯನಿಗೆ ''ಮಾರ್ಗದಲ್ಲಿ ಆಯಾಸ ಕಳೆಯಲೆಂದು ಸ್ಥೂಲವಾಗಿ ಶ್ರೀ ನಿಜಗುಣರ ಷಟ್‌ಶಾಸ್ತ್ರಗಳನ್ನು ಹೇಳಿದರು. ಇಂದಿನಿಂದ ಆ ಶಾಸ್ತ್ರಗಳನ್ನು ಒಂದೊಂದರಂತೆ ಕ್ರಮವಾಗಿ ಹೇಳುವೆ. ನೀನು ಅದನ್ನು ಸ್ವಾಧ್ಯಾಯದ ಮೂಲಕ ಚಿಂತನೆ ಮಾಡು.

ಬಹಳ ಕಷ್ಟಕಾರ್ಪಣ್ಯಗಳನ್ನು ನೀನು ಅನುಭವಿಸಿರುವಿ. ಅಂತೆಯೇ ನಿನ್ನ ಆರೋಗ್ಯ ಸೂಕ್ಷ್ಮವಾಗಿದೆ. ಮೊದಲು ಆರೋಗ್ಯದ ಕಡೆಗೆ ಲಕ್ಷ ಕೊಡು. ಏಕೆಂದರೆ

ಮನುಷ್ಯನು ತನ್ನ ಪುರುಷಾರ್ಥಗಳನ್ನು ಸಾಧಿಸಿಕೊಳ್ಳಲಿಕ್ಕೆ ಆರೋಗ್ಯವೇ ಮೂಲವಾಗಿದೆ. ಅದು ಶರಣರು ಹೇಳುವಂತೆ 'ಕೂಡಲಸಂಗನ ಒಲಿಸಲು ಬಂದ ಪ್ರಸಾದಕಾಯ'. ವೇದಾಂತವನ್ನು ತಪ್ಪಾಗಿ ತಿಳಿದುಕೊಂಡವರು ಹೇಳುವಂತೆ ಅದು ಹೇಯವಲ್ಲ.

ಅನಂತ ಜನ್ಮದ ಪುಣ್ಯದ ಫಲವಾಗಿ ಈ ಮನುಷ್ಯ ಜನ್ಮ ಬಂದಿರುತ್ತದೆ. ಕೇವಲ ಮೋಕ್ಷಪ್ರಾಪ್ತಿಗಾಗಿ ಬಂದ ಈ ದೇಹವನ್ನು ಅದಕ್ಕಾಗಿಯೇ ವಿನಿಯೋಗಿಸಬೇಕು. ಅಂತೆಯೇ ಶ್ರೀ ನಿಜಗುಣರು 'ವರಮೋಕ್ಷ ಪಡೆಯದ ನರಜನ್ಮವೇಕೆ' ಎಂದು ಹೇಳಿರುವರು. ಹೀಗೆ ಧರ್ಮಾಚರಣೆಗೆ ಶರೀರವೇ ಮುಖ್ಯವಾದ್ದರಿಂದ ಅದರ ಬಲ ಸಂವರ್ಧನೆಗೆ 'ಹಠಯೋಗ'ದಲ್ಲಿ ಯೋಗಾಸನಗಳು ಹೇಳಲ್ಪಟ್ಟಿವೆ. ಇಂತಹ ಯೋಗಾಸನಗಳನ್ನು ರೋಗನಿವಾರಣೆಗಾಗಿ, ದೈಹಿಕ ಹಾಗೂ ಮಾನಸಿಕ ಶಕ್ತಿ ಸಂಪಾದನೆಗಾಗಿ ಮತ್ತು ಅಧ್ಯಾತ್ಮ ಸಾಧನೆಗಾಗಿ ಹೀಗೆ ಮೂರು ರೀತಿಯಲ್ಲಿ ವಿಭಾಗಿಸಿರುವರು.

ಯೋಗಾಸನ ಕ್ರಮವನ್ನು ಅನುಭವಿಗಳ ಮೂಲಕ ಅವುಗಳನ್ನು ತಿಳಿಯಬೇಕು. ಸ್ವಂತ ಬುದ್ಧಿಯಿಂದ ಅವುಗಳನ್ನು ಹಾಕಲಿಕ್ಕೆ ಹೋಗಬಾರದು. ಅದರಿಂದ ಆರೋಗ್ಯಕ್ಕೆ ಅಪಾಯ ಉಂಟು. ಪ್ರತಿ ದಿನ ನಾವು ತೋರಿಸಿದ ರೀತಿಯಲ್ಲಿ ಆಸನಗಳನ್ನು ಹಾಕು. ಆಸನಗಳು ಹೆಚ್ಚು ಸಂಖ್ಯೆಯಲ್ಲಿದ್ದರೂ ಅವಶ್ಯವಿದ್ದ ಆಸನಗಳನ್ನು ಮಾತ್ರ ನೀನು ಹಾಕಲಿಕ್ಕೆ ಪ್ರಾರಂಭ ಮಾಡು. ಇಂತಹ ಯೋಗಾಸನಗಳನ್ನು ಹಾಕುವದಕ್ಕೆ ಪೋಷಕವಾಗಿ 'ಬ್ರಹ್ಮಚರ್ಯ'ವನ್ನು ನೀನು ತ್ರಿಕರಣಪೂರ್ವಕ ಪಾಲಿಸಬೇಕು.

ಮುಂದೆ ಶಿವಯೋಗದ ಸಾಧನೆಯನ್ನು ತಿಳಿಸಿಕೊಡುವಾಗ ಶರೀರದಲ್ಲಿ ಇರುವ ಆಧಾರ ಸ್ವಾದಿಷ್ಠಾನ ಚಕ್ರಗಳು, ಈಡಾ, ಪಿಂಗಳ, ಸುಷುಮ್ನ ನಾಡಿಗಳು ಹಾಗೂ ಮುದ್ರೆಗಳು ಹೀಗೆ ಅನೇಕ ವಿಷಯಗಳ ಪರಿಚಯ ಮಾಡಿಕೊಡುವೆ.

ತನ್ನಲ್ಲಿಯೇ ಶಿವನ ಅನುಭವ ಹೊಂದಲು ಶಿವಾನುಗ್ರಹದಿಂದ ಶರೀರದಲ್ಲಿ ಎಲ್ಲ ರೀತಿಯ ಸೌಕರ್ಯ ಭಗವಂತನಿಂದ ದಯಪಾಲಿಸಲ್ಪಟ್ಟಿರುತ್ತದೆ. ಇದನ್ನು ತಿಳಿಯದ ಅಜ್ಞಾನಿಗಳು ವಿಷಯ ಸುಖದ ಬೆನ್ನು ಹತ್ತಿ ಇಹದಲ್ಲಿ ದುಃಖ, ಪರದಲ್ಲಿ ದುರ್ಗತಿಗೆ ಗುರಿಯಾಗುವರು.

ಪರಮಾತ್ಮನು ಪ್ರತಿಯೊಂದು ಪ್ರಾಣಿಗಳ ಹೃದಯದಲ್ಲಿ ಇದ್ದಾನೆ. ತನ್ನ ಮುಖವು ತನಗೆ ಕಾಣದಿರುವಂತೆ ಪ್ರಾಣಿ ಮಾತ್ರರಿಗೆ ತಮ್ಮಲ್ಲಿರುವ ಶಿವನ ಅನುಭವ ಆಗುವದಿಲ್ಲ. ಅದನ್ನು ಅನುಭವಕ್ಕೆ ತಂದು ಕೊಡುವವನೇ ಗುರುನಾಥನು.

ಈ ಗುರುನಾಥ ನಮ್ಮಲ್ಲಿರುವ ಚಿತ್ಕಳೆಯನ್ನು ಅಂದರೆ ಅರಿವನ್ನು ಕುರುಹಾಗಿ ಮಾಡಿ ನಮ್ಮ ಕರಸ್ಥಲಕ್ಕೆ ಕೊಟ್ಟಿರುವನು. ಈ ಲಿಂಗಾನುಸಂಧಾನದಿಂದ

ಅಂಗೇಂದ್ರಿಯಗಳೆಲ್ಲ ಲಿಂಗೇಂದ್ರಿಯಗಳಾಗುವವು. ಅದರಂತೆ ವಿಷಯಗಳು ಪ್ರಸಾದವಾಗುವವು. ಹೀಗೆ ಲಿಂಗ ಭೋಗೋಪಭೋಗಿಯ ಪ್ರಾಕೃತ ಶರೀರವಳಿದು ಪ್ರಸಾದ ಕಾಯವಾಗುವದು. ಇವನೇ ಶರಣ ಹಾಗೂ ಶಿವಯೋಗಿ ಎಂದು ಕರೆಯಲ್ಪಡುವನು. ಇದರಿಂದ ಕೆಲವರು ಹೇಳುವಂತೆ ಈ ಜಗತ್ತು ಮಿಥ್ಯವಾಗಿರದೆ ಸತ್ಯವೂ, ಶಿವವೂ, ಸುಂದರವೂ ಆಗಿರುವದು. ವೀರಶೈವರದು ದೃಷ್ಟಿಯೋಗ ಹೇಗೆ ದೃಷ್ಟಿಯೋ ಹಾಗೆ ಸೃಷ್ಟಿ. ಶಿವದೃಷ್ಟಿಯಿಂದ ನೋಡಿದರೆ ಜಗತ್ತೇ ಶಿವಮಯವಾಗಿ ಕಾಣುವದು.

ಪ್ರತಿಯೊಂದು ವ್ಯಕ್ತಿಯ ವ್ಯಕ್ತಿತ್ವ ಅವನ ಪರಿಸರದಿಂದ ನಿರ್ಮಾಣ ವಾಗುವದು. ಹಾಲುಶುದ್ಧವಾಗಿಯೇ ಇರುವದು. ಆದರೆ ಅದು ದೂಷಿತ ಪಾತ್ರೆಯಲ್ಲಿದ್ದರೆ ಕೆಟ್ಟು ಹೋಗುವದು. ಆದ್ದರಿಂದ ವೈಯಕ್ತಿಕ ಆತ್ಮೋದ್ಧಾರಕ್ಕಾಗಿ ನಾವು ಒಳ್ಳೆಯ ಪರಿಸರ ನಿರ್ಮಾಣ ಮಾಡಿಕೊಳ್ಳದಿದ್ದರೆ ಗತಿಯೇ ಇಲ್ಲ.

ಕಾರಣ ನಿನ್ನ ಸೇವೆಯನ್ನು ಕೆಲವು ಕಾಲದವರೆಗೆ ಅಂದರೆ ನಮಗೆ ನಿನ್ನ ಆಚರಣೆಯಲ್ಲಿ ನಂಬಿಕೆ ಹುಟ್ಟುವವರೆಗೆ ತೆಗೆದುಕೊಳ್ಳುವದಿಲ್ಲ. ಅಲ್ಲಿಯವರೆಗೆ ನಿನಗೆ ನಾವೇ ಪಾಕ ಸಿದ್ಧಪಡಿಸಿ ಪ್ರಸಾದಕೊಡುವೆವು. ''ಇನ್ನು ನಮ್ಮ ಸೇವೆಯ ಹೊರತುಪಡಿಸಿ ಆಶ್ರಮದ ಕೆಲಸವನ್ನು ಮಾತ್ರ ನೀನು ಮಾಡುವುದು'' ಎಂದು ಹೇಳಿ ಶಿವಪೂಜೆಗೆ ಸಮಯವಾಯಿತೆಂದು ಶ್ರೀ ಬಸವಲಿಂಗ ಸ್ವಾಮಿಗಳು ಒಳಗೆ ದಯಮಾಡಿಸಿದರು.

ಗುರುಗಳಿಂದ ಹೀಗೆ ಅನಿರೀಕ್ಷಿತ ವಿಚಾರಗಳು ಬಂದರೂ ಶಿಷ್ಯನು ಮಾತ್ರ ವ್ಯಗ್ರಚಿತ್ತನಾಗಲಿಲ್ಲ, ಧೈರ್ಯಗುಂದಲಿಲ್ಲ. ಗುರುಗಳ ಪ್ರಾಮಾಣಿಕ ಅಭಿಪ್ರಾಯ ವನ್ನು ನೋಡಿ ಅವನಲ್ಲಿ ಗುರುಭಕ್ತಿ ಇನ್ನೂ ದ್ವಿಗುಣಿತವಾಯಿತು.

''ಸದ್ಗುರುವಿನ ಕೃಪೆ ದೊರೆಯುವದು ಕೇವಲ ಸತ್‌ಶಿಷ್ಯನಿಗೆಮಾತ್ರ. ನಾನೂ ಸಹ ಅಂತಹ ಸತ್‌ಶಿಷ್ಯನೇ ಆದಲ್ಲಿ ಗುರುಗಳ ಕೃಪೆ ತಾನಾಗಿ ದೊರೆಯುವದು'' ಎಂದು ಧೃಢನಿಶ್ಚಯ ಮಾಡಿಕೊಂಡು ಆ ದಿಸೆಯಲ್ಲಿ ತನ್ನ ಸಾಧನೆಯನ್ನು ಆ ಶಿಷ್ಯ ಮುಂದುವರಿಸಿದ.

## ಚಿನ್ಮಯ ದೀಕ್ಷೆ

ಭಗವಾನ್ ಭಾಸ್ಕರ ಪಶ್ಚಿಮಾದ್ರಿಯ ಕಡೆಗೆ ಸಾಗಿದ್ದಾನೆ. ಆಕಾಶವೆಲ್ಲ ಕೆಂಪುವರ್ಣದಿಂದ ರಂಜಿತವಾಗಿದೆ. ಆಗ ಎಳಂದೂರು ಆಶ್ರಮದಲ್ಲಿ ಶ್ರೀ ಬಸವಲಿಂಗ ಮಹಾಸ್ವಾಮಿಗಳು ಬಿಲ್ವವೃಕ್ಷದ ಕಟ್ಟೆಯ ಮೇಲೆ ಅಪರ ಪರಶಿವನಂತೆ ಮಂಡಿಸಿದ್ದಾರೆ. ಅವರ ಶಿಷ್ಯ ಅಲ್ಲಿಯ ಹೂವಿನ ಗಿಡಗಳಿಗೆ ಕೊಡ ಹೊತ್ತು ನೀರುಣಿಸುತ್ತಿದ್ದಾನೆ.

ನಿತ್ಯದ ಪದ್ಧತಿಯಂತೆ ಭಕ್ತರು ಸಾಯಂಕಾಲ ಗುರುಗಳ ದರ್ಶನಕ್ಕಾಗಿ ಬರುತ್ತಿದ್ದಾರೆ. ಹೀಗೆ ಬಂದ ಭಕ್ತರನ್ನು ಗುರುಗಳು ತಮ್ಮ ಸಮ್ಮುಖದಲ್ಲಿಯೇ ಕುಳಿತುಕೊಳ್ಳಲು ತಿಳಿಸಿದರು. ಎಲ್ಲ ಭಕ್ತರೂ ಬರುವದಾದ ಮೇಲೆ ಗುರುಗಳೇ ಮಾತನ್ನು ಪ್ರಾರಂಭಿಸಿದರು.

''ಈಗ್ಗೆ ಎಂಟು ತಿಂಗಳ ಹಿಂದೆ ನಮ್ಮಲ್ಲಿಗೆ ಒಬ್ಬ ಶಿಷ್ಯ ಬಂದಿರುವದು ನಿಮಗೆಲ್ಲ ಗೊತ್ತಿದೆ. ಅವನು ನಮ್ಮಿಂದ ನಿಜಗುಣರ ಷಟ್‌ಶಾಸ್ತ್ರಗಳನ್ನು ಅಭ್ಯಾಸ ಮಾಡಿದ್ದಾನೆ. ಅನೇಕ ಯೋಗಾಸನಗಳನ್ನು ಕಲಿತಿದ್ದಾನೆ. ಅದರಂತೆ ಶಿವಯೋಗದ ನೆಲೆ–ಕಲೆಗಳನ್ನು ನಮ್ಮಿಂದ ತಿಳಿದುಕೊಂಡಿದ್ದಾನೆ. ಇವೆಲ್ಲಕ್ಕಿಂತ ಹೆಚ್ಚಾಗಿ ಅವನ ಗುಣಶೀಲಗಳು ನಮಗೆ ತುಂಬಾ ಮೆಚ್ಚುಗೆಯಾಗಿವೆ. ಆದ ಕಾರಣ ಅವನಿಗೆ ನಾಳೆ 'ಚಿನ್ಮಯ ದೀಕ್ಷೆ' ಕೊಡಬೇಕೆಂದು ವಿಚಾರ ಮಾಡಿದ್ದೇವೆ. ಆದುದರಿಂದ ಅದರ ಪೂರ್ವಸಿದ್ಧತೆಯನ್ನು ನೀವೆಲ್ಲ ಮಾಡಬೇಕು'' ಎಂದು ಶ್ರೀಗಳು ಭಕ್ತರಿಗೆ ಅಪ್ಪಣೆ ಮಾಡಿ ಕಳಿಸಿಕೊಟ್ಟರು.

ಮಾರನೇ ದಿನ ಶುಭಮೂಹೂರ್ತ ಕಾಲದಲ್ಲಿ 'ಚಿನ್ಮಯ ದೀಕ್ಷೆ' ಯಥಾವತ್ತಾಗಿ ನೆರವೇರಿತು. ಬಡಬಗ್ಗರಿಗೆ ಅನ್ನ ಸಂತರ್ಪಣೆಯೂ ವಿಶೇಷವಾಗಿ ಜರುಗಿತು. ಹೀಗೆ ದೀಕ್ಷೆಯಾದ ನಂತರ ಗುರುಗಳು ತಮ್ಮ ಶಿಷ್ಯನನ್ನು ತಮ್ಮ ಸೇವೆಗೆ ತೆಗೆದುಕೊಂಡರು.

### ಅಹಿಂಸಾ ಪ್ರಭಾವ

ಒಂದು ಮುಂಜಾನೆ ಗುರುಗಳ ಲಿಂಗಪೂಜೆ ನಡೆದಿದೆ. ಶಿಷ್ಯ ಅಡಿಗೆಮನೆಯಿಂದ ಧೂಪಾರತಿಯಲ್ಲಿ ಬೆಂಕಿಯನ್ನು ತೆಗೆದುಕೊಂಡು ಗುರುಗಳ ಶಿವಪೂಜಾ ಕೋಣೆಗೆ ಹೊರಟಿದ್ದಾನೆ.

ಆಗ ಒಂದು ಬೆಕ್ಕು ಬಂದು ಶಿಷ್ಯನ ಮೈತಿಕ್ಕಿ ಮುಂದೆಹೋಯಿತು. ಇದರಿಂದ ಶಿಷ್ಯ ತುಂಬಾ ವ್ಯಾಕುಲಚಿತ್ತನಾಗಿ ''ಬೆಕ್ಕು ಹಿಂಸ್ರಪ್ರಾಣಿ, ಇದು ಮುಟ್ಟಿದ್ದರಿಂದ ಮೈಲಿಗೆಯಾದೆ. ಇನ್ನು ಸ್ನಾನ ಮಾಡಬೇಕೆಂದರೆ ಗುರುಗಳು ಪೂಜೆಗೆ ಕುಳಿತಿದ್ದಾರೆ. ಅಷ್ಟರಲ್ಲಿ ಕರೆದರೆ ಹೇಗೆ?'' ಎಂಬ ವಿಚಾರಗಳ ಗೊಂದಲದಲ್ಲಿ ಅವನು ಬಿದ್ದಿರುವಂತೆ ಗುರುಗಳಿಂದ ಮತ್ತೆ ಕರೆಯೂ ಬಂದಿತು.

ಶಿಷ್ಯ ಅವಸರದಿಂದ ಹೋಗಿ ಶಿವಪೂಜಾ ಕೋಣೆಯ ಬಾಗಿಲ ಬಳಿಯಲ್ಲಿ ನಿಂತ. ಅವನನ್ನು ನೋಡಿ ಗುರುಗಳು ಆತನಿಗೆ ಒಂದು ಬಟ್ಟಲದಲ್ಲಿ ಹಾಲು ತರಲು ಹೇಳಿದರು.

ಇದರಿಂದ ಶಿಷ್ಯನಿಗೆ ಇನ್ನೂ ಆಶ್ಚರ್ಯವಾಯಿತು. ''ಪೂಜೆಯೇ ಮುಗಿದಿಲ್ಲ. ಗುರುಗಳೇಕೆ ಹಾಲು ತರಲು ಹೇಳಿದರು?'' ಎಂದು ವಿಚಾರಿಸುತ್ತಿರುವಂತೆ ಗುರುಗಳಿಂದ ಮತ್ತೊಮ್ಮೆ ಹಾಲು ತರಲು ಅಪ್ಪಣೆಯಾಯಿತು. ಶಿಷ್ಯ

ಉಪಾಯಗಾಣದೆ ಅಡಿಗೆಮನೆಗೆ ಹೋಗಿ ಒಂದು ಬಟ್ಟಲದಲ್ಲಿ ಹಾಲನ್ನು ತಂದ. ಗುರುಗಳು ಆ ಹಾಲಿನ ಬಟ್ಟಲನ್ನು ಸಮೀಪದಲ್ಲಿದ್ದ ಇಲಿಯ ಬಿಲದ ಬಳಿ ಇಡಲು ತಿಳಿಸಿದರು. ಆ ಮೇಲೆ ಗುರುಗಳು ಇಲಿಯನ್ನು ಕರೆದರು. ಅದು ಬಂದು ಹಾಲು ಕುಡಿಯಹತ್ತಿತು. ಅದರಂತೆ ಬೆಕ್ಕನ್ನೂ ಕರೆದರು, ಅದೂ ಬಂದು ಇಲಿಯೊಡನೆ ಹಾಲು ಕುಡಿಯಹತ್ತಿತು. ಪರಸ್ಪರ ವೈರಭಾವವುಳ್ಳ ಈ ಎರಡೂ ಪ್ರಾಣಿಗಳು ಹೀಗೆ ನಿರ್ವೈರ ಭಾವದಿಂದ ಹಾಲು ಕುಡಿಯುತ್ತಿರುವದನ್ನು ನೋಡಿ ಶಿಷ್ಯನಿಗೆ ತಾನು ಬೆಕ್ಕಿಗೋಸ್ಕರ ಸಂದೇಹಪಟ್ಟಿದ್ದಕ್ಕಾಗಿ ಪಶ್ಚಾತ್ತಾಪವಾಯಿತು. ಆ ಕೂಡಲೇ ಅವನು ಗುರುಗಳಲ್ಲಿಯ 'ಸರ್ವಜ್ಞತ್ವ'ವನ್ನು ಕಂಡು, ಅವರಿಗೆ ಸಾಷ್ಟಾಂಗ ಹಾಕಿ ತನ್ನನ್ನು ಕ್ಷಮಿಸಲು ಬೇಡಿಕೊಂಡನು.

ಅದಕ್ಕೆ ಗುರುಗಳು ಶಿಷ್ಯನನ್ನುದ್ದೇಶಿಸಿ ''ಅಹಿಂಸೆ ಅಷ್ಟಾಂಗಯೋಗದ ಪ್ರಾರಂಭದಲ್ಲಿ ಇರುವ ಯಮನಿಯಮಾದಿಗಳಲ್ಲಿ ಬರುತ್ತದೆ. ಈ ಅಹಿಂಸಾ ಸಿದ್ಧಿಯಾದರೆ ಅದರ ಪರಿಣಾಮ ನಮ್ಮ ಸುತ್ತುಮುತ್ತಲಿನ ಪರಿಸರದ ಮೇಲೆ ಉಂಟಾಗುತ್ತದೆ. ಇದರಿಂದಾಗಿ ಈ ಪ್ರಾಣಿಗಳು ನಮ್ಮ ಸಾಧನೆಯ ಒರೆಗಲ್ಲುಗಳು.

## ಗುರು-ಶಿಷ್ಯರ ದೇಶಪರ್ಯಟನ

ಕಾಲಚಕ್ರ ಉರುಳಿತು. ಗುರುಗಳು ಶಿಷ್ಯನನ್ನು ಕರೆದು ಹೇಳಿದರು. ''ಶಂಭುಲಿಂಗನ ಬೆಟ್ಟಕ್ಕೆ ಅನುಷ್ಠಾನ ಮಾಡಲು ಹೋಗೋಣ'' ಇದನ್ನು ಕೇಳಿ ಶಿಷ್ಯನಿಗೆ ಎಲ್ಲಿಲ್ಲದ ಸಂತೋಷವಾಯಿತು.

ಶಂಭುಲಿಂಗನ ಬೆಟ್ಟಕ್ಕೆ ಹೋದಮೇಲೆ ಗುರು–ಶಿಷ್ಯರಿಬ್ಬರಿಂದ ಅನುಷ್ಠಾನ ಬಹುಕಾಲ ನಡೆಯಿತು.

ಹೀಗೆ ಅನುಷ್ಠಾನ ಪೂರ್ತಿಯಾದ ಮೇಲೆ ಉಭಯತರು ದೇಶ ಸಂಚಾರಾರ್ಥ ಹೊರಟರು. ಪ್ರವಾಸದಲ್ಲಿ ಮೊದಲು ಅವರು ಶ್ರೀ ಯಡೆಯೂರು ಕ್ಷೇತ್ರಕ್ಕೆ ಹೋಗಿ ಅಲ್ಲಿ ಅನಾದಿಸಿದ್ಧಲಿಂಗನ ದರ್ಶನ ಪಡೆದು ಮುಂದಕ್ಕೆ ಪ್ರಯಾಣ ಬೆಳೆಸಿದರು. ಮೈಸೂರು ಅರಮನೆಯ ಆಮಂತ್ರಣವಿದ್ದುದರಿಂದ ಅಲ್ಲಿಗೆ ಹೋದಮೇಲೆ ಅರಮನೆಯಿಂದ ಶ್ರೀ ಬಸವಲಿಂಗಮಹಾಸ್ವಾಮಿಗಳಿಗೆ ಒಂದು 'ಆನೆ' ಭಕ್ತಿ ಕಾಣಿಕೆಯಾಗಿ ಅರ್ಪಿಸಲ್ಪಟ್ಟಿತು. ಆದರೆ ಶ್ರೀಗಳವರು ಅದನ್ನು ತಮ್ಮ ಮೂಲ ಗುರುಸ್ಥಾನವಾದ ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠಕ್ಕೆ ಕಳಿಸಿಕೊಟ್ಟರು. ಅದರ ಹೆಸರು 'ಸಿದ್ಧಗಂಗಾ'. ಆ ಆನೆಯ ಬಗೆಗೆ ಇಂದಿಗೂ ಅನೇಕ ಕಥೆಗಳು ಡಂಬಳ ಮುಂತಾದ ಭಾಗಗಳಲ್ಲಿ ಪ್ರಚಾರದಲ್ಲಿವೆ.

ಹೀಗೆ ಮೈಸೂರು ನಾಡಿನಲ್ಲೆಲ್ಲ ಸಂಚಾರವಾದ ಮೇಲೆ ಆ ಉಭಯ ಗುರು–ಶಿಷ್ಯರು ಉತ್ತರ ಕರ್ನಾಟಕಕ್ಕೆ ಆಗಮಿಸಿದರು.

## ಮರಳಿ ಗುರುಮನೆಗೆ

ಗುರುಗಳಿಗೆ ದೇಹಾಲಸ್ಯವಾಯಿತು. ಶಿಷ್ಯ ಗುರುಗಳಲ್ಲಿ ''ಬುದ್ಧಿ! ಮುಪ್ಪಿನಕಾಲ, ಮುಂದೆ ಸಂಚರಿಸುವದು ಬೇಡ. ಮರಳಿ ಎಳಂದೂರಿಗೆ ಹೋಗೋಣ'' ಎಂದು ಅರಿಕೆ ಮಾಡಿಕೊಂಡ. ಅದಕ್ಕೆ ಗುರುಗಳು ''ಸಮೀಪದಲ್ಲಿ ಅಣ್ಣಿಗೇರಿಯಿದೆ, ಅದು ನಮ್ಮ ಗುರುಸ್ಥಾನ. ಪ್ರಾರಂಭದಲ್ಲಿ ಗುರುಸ್ಥಾನದಿಂದ ಹೊರಟ ನಾನು, ಈಗ ಕೊನೆಯಲ್ಲಿ ಅಲ್ಲಿಗೆ ಹೋಗುವದೇ ವಿಹಿತ'' ಎಂದರು.

ಅದೇ ಮೇರೆಗೆ ಗುರು–ಶಿಷ್ಯರಿಬ್ಬರೂ ಅಣ್ಣಿಗೇರಿಗೆ ಬಂದರು. ಅಣ್ಣಿಗೇರಿ ಫಲದ್ರೂಪವಾದ ಪ್ರದೇಶ. ಅದು ಅನ್ನಗಿರಿ. ಪುರಾತನವಾದ ಈ ಗ್ರಾಮ ಸ್ವಯಂಭು ಅಮೃತೇಶ್ವರನ ದಿವ್ಯಸಾನ್ನಿಧ್ಯದಿಂದ 'ಶಿವಕ್ಷೇತ್ರ'ವಾಗಿದೆ.

ಅಣ್ಣಿಗೇರಿ ನಿವಾಸಿಗಳಿಗೆ ಶಿವನು ಫಲವತ್ತಾದ ಭೂಮಿಯನ್ನು ಉದಾರವಾಗಿ ಅನುಗ್ರಹಿಸಿದಂತೆ, ಅಲ್ಲಿಯ ಜನರೂ ಸಹಿತ ದಾನ ಧರ್ಮ–ಪರೋಪಕಾರಗಳಲ್ಲಿ ತುಂಬಾ ಉದಾರವಾಗಿದ್ದುದು ಶ್ಲಾಘನೀಯವಾಗಿದೆ. ಬಹುಶಃ ಇದು ನೆಲದ ಗುಣವೇ ಇರಬೇಕು. ಹೀಗೆ ಧರ್ಮ ಪರಾಯಣರಾದ ಅಲ್ಲಿಯವರ ಭಕ್ತಿಗೆ ಮೆಚ್ಚಿ ಡಂಬಳದ ಶ್ರೀ ಅರ್ಧನಾರೀಶ್ವರರ ಶಿಷ್ಯರಾದ ಜಗದ್ಗುರು ಈಸೂರು ನಂದೀಶ್ವರ ಮಹಾಸ್ವಾಮಿಗಳೂ ಈ ಅಣ್ಣಿಗೇರಿಗೆ ದಯಮಾಡಿಸಿ ಇಲ್ಲಿಯೇ ನೆಲೆಸಿದರು.

ಪರಶಿವನೇ ಒಂದು ಕಡೆಗೆ ಅಚರ ಲಿಂಗವಾಗಿ 'ಅಮೃತೇಶ್ವರ'ನೆಂದು ಹೆಸರುಪಡೆದಂತೆ, ಇನ್ನೊಂದು ಕಡೆಗೆ ಚರಲಿಂಗವಾಗಿ 'ಈಸೂರು ನಂದೀಶ್ವರ'ನೆಂಬ ಹೆಸರು ಪಡೆದನು. ಹೀಗಾಗಿ ಅಣ್ಣಿಗೇರಿ 'ಶಿವಲಿಂಗ ಕ್ಷೇತ್ರ'ವಾದಂತೆ ಮುಂದೆ 'ಜಂಗಮಲಿಂಗ ಕ್ಷೇತ್ರ'ವೂ ಆಯಿತು. ಮೇಲೆ ತಿಳಿಸಿದಂತೆ ಅಣ್ಣಿಗೇರಿಗೆ ಆಗಮಿಸಿದ ಗುರು ಶಿಷ್ಯರು ಮೊದಲು ಊರಲ್ಲಿಯ ಈಸೂರು ನಂದೀಶ್ವರ ಮಹಾಸ್ವಾಮಿಗಳವರ ಗದ್ದುಗೆಯ ದರ್ಶನಕ್ಕೆ ಹೋಗಿ, ಅಲ್ಲಿಂದ ನೇರವಾಗಿ ಊರ ಹೊರಗಿನ ತೋಂಟದಾರ್ಯಮಠಕ್ಕೆ ಬಂದರು. ಅಲ್ಲಿ ಸ್ನಾನ ಪೂಜಾದಿಗಳನ್ನು ತೀರಿಸಿಕೊಂಡು ಗುರುಗಳು ಶ್ರೀ ಉಗ್ಗದ ತೋಂಟದಾರ್ಯರ ಗದ್ದುಗೆಯ ಕಂಬಕ್ಕೆ ಒರಗಿಕೊಂಡು ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾಗ ಜಿಜ್ಞಾಸುವಾದ ಶಿಷ್ಯ ವಿನೀತನಾಗಿ ಗುರುಗಳಿಗೆ ಅರಿಕೆ ಮಾಡಿಕೊಂಡ. ''ಗುರುಗಳೇ, ಇದು ಹೇಗೆ ನಿಮಗೆ ಗುರುಸ್ಥಾನವಾಯಿತು ?'' ಅದಕ್ಕೆ ಗುರುಗಳು ಸಂತೋಷಭರಿತರಾಗಿ ಹೇಳಿದರು.

''ಒಳ್ಳೆಯ ಪ್ರಶ್ನೆ ಮಾಡಿದೆ. ಇದನ್ನು ನೀನು ತಿಳಿದುಕೊಳ್ಳಬೇಕಾದುದು ಅವಶ್ಯ. ತೋಂಟದ ಸಿದ್ಧಲಿಂಗೇಶ ಈ ಜಗದ್ಗುರು ತೋಂಟದಾರ್ಯ ಪರಂಪರೆಯ ಮೂಲ ಕರ್ತೃ. ಕಗ್ಗೆರೆಯ ತೋಟದಲ್ಲಿ ಅವರು ಬಹುಕಾಲ ಶಿವಯೋಗ ಸಮಾಧಿಯಲ್ಲಿದ್ದು, ಅವರ ಮೇಲೆ ಹುತ್ತಬೆಳೆದ ಪವಾಡದಿಂದಾಗಿ ಅವರಿಗೆ 'ತೋಂಟದಾರ್ಯ' ಎಂಬ ಅಭಿದಾನ ಪ್ರಾಪ್ತವಾಯಿತು. ಅಂದಿನಿಂದ ಅವರ ಪರಂಪರೆಯವರು 'ತೋಂಟದಾರ್ಯ'ರೆಂದೇ ಹೆಸರಾದರು.

ಡಂಬಳದಲ್ಲಿದ್ದವರು ಈ ಪೀಠಪರಂಪರೆಯಲ್ಲಿ ಒಂಭತ್ತನೆಯವರಾದ ಶ್ರೀ ಜಗದ್ಗುರು ಅರ್ಧನಾರೀಶ್ವರ ಮಹಾಸ್ವಾಮಿಗಳು. ಡಂಬಳ ಸಂಸ್ಥಾನಿಕರು ಶ್ರೀಗಳವರ ತಪೋಶಕ್ತಿಗೆ ತಲೆಬಾಗಿ ಅವರಿಗೆ ಶಿಷ್ಯರಾಗಿ ಅನೇಕ ದಾನ ದತ್ತಿಗಳನ್ನು ಕೊಟ್ಟಿದ್ದರಿಂದ ಡಂಬಳ ಮಠವು 'ಸಂಸ್ಥಾನ ಮಠ'ವೆಂದು ಪ್ರಖ್ಯಾತವಾಯಿತು. ಅದರಂತೆ ಕೆಳದಿ ಮುಂತಾದ ಅವನಿಪಾಲರೂ ಸಹಿತ ಅವರಿಗೆ ಶಿಷ್ಯರಾಗಿ ಹೇರಳ ಭಕ್ತಿ ಕಾಣಿಕೆಗಳನ್ನು ಸಲ್ಲಿಸಿದರು.

ಊರ ಹೊರಗಿರುವ ಅಣ್ಣಿಗೇರಿಯ ಈ ಮಠ ಮೊದಲು ಹಾಳುದಿಬ್ಬ. ಈ ಊರ ದೇಶಪಾಂಡೆಯವರಿಗೆ ಸ್ವಪ್ನ ದೃಷ್ಟಾಂತವಾದ ಮೇಲೆ ಈ ದಿಬ್ಬವನ್ನು ಅವರು ಪರಿಶೀಲಿಸಿದರು. ಆಗ ಈ ವಿರೂಪಾಕ್ಷಲಿಂಗನ ದೇವಸ್ಥಾನ ಬೈಲಿಗೆ ಬಂದಿತು. ವಿಚಿತ್ರವೆಂದರೆ ಇಲ್ಲಿಯ ಗರ್ಭಗುಡಿಯಲ್ಲಿ ಓರ್ವ ಜಂಗಮ ಮೂರ್ತಿಗಳು ಅನುಷ್ಠಾನದಲ್ಲಿ ಕುಳಿತಿರುವದು ಕಣ್ಣಿಗೆ ಬಿದ್ದಿತು. ಅವರೇ ಶ್ರೀ ಈಸೂರು ನಂದೀಶ್ವರ ಮಹಾಸ್ವಾಮಿಗಳು.

ಇಲ್ಲಿಯ ದೇಶಪಾಂಡೆ ಹಾಗೂ ದೇಸಾಯಿಯವರು ಈ ಶ್ರೀಗಳವರಿಗೆ ಅನೇಕ ದಾನ ದತ್ತಿಗಳನ್ನು ಹಾಕಿಕೊಟ್ಟು, ಈ ದೇವಸ್ಥಾನವನ್ನೇ ಮಠವನ್ನಾಗಿ ಮಾರ್ಪಡಿಸಿ, ಇಲ್ಲಿಯೇ ಅವರು ನೆಲೆಸುವಂತೆ ಮಾಡಿದರು. ಅವರು ಶಿವಾಧೀನರಾದ ನಂತರ ಭಕ್ತರಿಗೆ ಗದ್ದುಗೆಯ ದರ್ಶನಕ್ಕೆ ಬರಲು ಇದು ದೂರಾಗುವದೆಂಬ ಉದ್ದೇಶದಿಂದ ಇಲ್ಲಿಯ ದೇಸಾಯಿಯವರು ಗುರುಗಳ ಸಮಾಧಿಯನ್ನು ಊರಲ್ಲಿಯೇ ತಮ್ಮ ಮನೆಗೆ ಸಮೀಪದಲ್ಲೇ ಮಾಡಿಸಿದರು. ಹಿಂದಿನಿಂದ ಅಲ್ಲಿಯೂ ಒಂದು ಮಠ ನಿರ್ಮಾಣವಾಯಿತು. ಅದುವೇ ಶ್ರೀ ಈಸೂರು ನಂದೀಶ್ವರ ಮಠ.

ಈಸೂರು ನಂದೀಶ್ವರ ಮಹಾಸ್ವಾಮಿಗಳ ನಂತರ ಪೀಠಕ್ಕೆ ಬಂದವರು ಉಗ್ಗದ ತೋಂಟದಾರ್ಯರು. ಅತಿ ಉಷ್ಣ ನೀರಿನಿಂದ ಅವರು ಸ್ನಾನ ಮಾಡುತ್ತಿದ್ದ ಪ್ರಯುಕ್ತ ಅವರು 'ಉಗ್ಗದ ತೋಂಟದಾರ್ಯ'ರೆಂದು ಪ್ರಸಿದ್ಧರಾದರು. ಈಗ ನಾವು ಕುಳಿತಿರುವ ಗದ್ದುಗೆ ಅವರದೇ ಆಗಿದೆ.

ಪಕ್ಕದಲ್ಲಿದ್ದ ಈ ಗದ್ದುಗೆ ಶ್ರೀ ಅನ್ನದಾನೀಶ್ವರ ಚರಮೂರ್ತಿಗಳದು. ಈ ಪರಂಪರೆಗೆ ಚರಮೂರ್ತಿಗಳು ಬಹಳ. ತೋಂಟದಾರ್ಯರ ಪ್ರತಿಯೊಂದು ಶಾಖಾಮಠದಲ್ಲಿ ಚರಮೂರ್ತಿಗಳಿದ್ದು, ಅವರು ಮಠ ಹಾಗೂ ಭಕ್ತರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದರು. ಜ್ಞಾನ-ವೈರಾಗ್ಯ ಮೂರ್ತಿಗಳಾದ ಇಂತಹ ಚರಮೂರ್ತಿಗಳಿಂದ ಮಠಗಳು ಬೆಳೆದಿರುವದೂ ಉಂಟು. ಈ ಕಾರಣದಿಂದ ರೂಢಿಯಲ್ಲಿ ಈ ಮಠಗಳನ್ನು ಆಯಾ ಚರಮೂರ್ತಿಗಳ ಹೆಸರಿನಿಂದ ಕರೆಯುವದು ವಾಡಿಕೆಯಾಗಿ ಬಂದಿದೆ. ಈಗ ಗದಗಿನಲ್ಲಿರುವವರು ಪೀಠ ಪರಂಪರೆಯಲ್ಲಿ ೧೬ನೆಯವರು. ಅವರ ಹೆಸರು ಶ್ರೀ ತೋಂಟದ ಸಿದ್ಧೇಶ್ವರ ಮಹಾಸ್ವಾಮಿಗಳು.

ಡಂಬಳ ಮಠದಲ್ಲಿ ಶಿವಾನುಭವ ಚರಮೂರ್ತಿಗಳು ಬಹಳ. ಅವರಲ್ಲಿ ನಾನೂ ಒಬ್ಬನು. ನಾನು ಅತಿ ಚಿಕ್ಕವನಿರುವಾಗ ಮಠಕ್ಕೆ ಕೊಡಲ್ಪಟ್ಟಿದ್ದರಿಂದ ನನ್ನ ತಾಯಿ–ತಂದೆಗಳ ಬಗ್ಗೆ ಮತ್ತು ನನ್ನ ಜನ್ಮಸ್ಥಳದ ಬಗ್ಗೆ ನನಗೆ ಏನೂ ಗೊತ್ತಿಲ್ಲ. ಮಕ್ಕಳಾಗದವರು ಹರಕೆ ಹೊತ್ತು ಮಕ್ಕಳಾದನಂತರ ಆ ಮಕ್ಕಳನ್ನು ತಮ್ಮ ಹರಕೆಯ ಪ್ರಕಾರ ಮಠಕ್ಕೆ ಸಲ್ಲಿಸುವದೊಂದು ರೂಢಿ. ಬಹುತರವಾಗಿ ನಾನೂ ಹಾಗೆ ಕೊಡಲ್ಪಟ್ಟಿರಬೇಕು.

ಯೋಗ ಸಾಧನೆಗೆ ಏಕಾಂತವಾಸ ಮುಖ್ಯ. ಈ ಯೋಗದ ಮೇಲಿನ ವಿಶೇಷ ಆಸಕ್ತಿಯಿಂದ ಉದ್ದೇಶಪೂರ್ವಕವಾಗಿ ನಾವು ಯಾವುದೇ ಮಠಗಳಲ್ಲಿ ಇರದೆ ಎಳಂದೂರಲ್ಲಿ ಆಶ್ರಯ ಮಾಡಿ ಇದ್ದೆವು. ಹಾಗೆ ನೋಡಿದರೆ ಜಂಗಮನು ಇಂಥಲ್ಲಿಯೇ ಇರಬೇಕೆಂಬ ನಿಯಮವಿಲ್ಲ. ಶ್ರೀ ಸಿದ್ಧಲಿಂಗೇಶನ ನಂತರ ಆತನ ಪರಂಪರೆಯವರು ಯಾರೂ ಒಂದು ಕಡೆಗೆ ನೆಲೆ ನಿಂತಿಲ್ಲ. ಈಗಲೂ ಬೇರೆ ಬೇರೆ ಕಡೆಗೆ ಇರುವ ಅವರ ಶಿವಯೋಗ ಸಮಾಧಿಗಳೇ ಇದಕ್ಕೆ ಸಾಕ್ಷಿಯಾಗಿವೆ.

ಜಂಗಮನು ಹೀಗೆ ಸಂಚಾರ ಮಾಡಲೇಬೇಕಾದ್ದರಿಂದ ಅವನನ್ನು 'ಚರಜಂಗಮ' ಎಂದು ಕರೆಯಲಾಗುತ್ತಿದೆ. 'ಸುಜ್ಞಾನವೇ ಜಂಗಮ' ಎಂತಲೂ ಹೇಳಲಾಗುತ್ತಿದೆ. ಏಕೆಂದರೆ ಆತನು ಸಂಚರಿಸುವಾಗ ಜನರ ಆಚಾರ–ವಿಚಾರ ಗಳನ್ನು ಪರೀಕ್ಷಿಸಿ, ಅವರ ಅಜ್ಞಾನವನ್ನು ದೂರ ಮಾಡಿ, ಭವದುಃಖದಿಂದ ಅವರನ್ನು ಪಾರು ಮಾಡುವನು. ಇದಕ್ಕಾಗಿ ಅವನು 'ಮೋಕ್ಷ ಗುರು' ಎಂತಲೂ ಕರೆಯಲ್ಪಡುವನು. ಪ್ರತಿಯೊಬ್ಬ ವ್ಯಕ್ತಿಯ ಮೇಲೆ ಸಮಾಜದ ಋಣವಿದೆ. ಸಮಾಜದಲ್ಲಿ ಹುಟ್ಟಿ ಸಮಾಜದಲ್ಲಿ ಬೆಳೆದು ಸಮಾಜದಲ್ಲಿಯೇ ಕೊನೆಯುಸಿರು ಎಳೆಯಬೇಕಾಗಿರುವದರಿಂದ ಸಮಾಜ ಸೇವೆಯೇ 'ಪರೋಧರ್ಮ'ವಾಗಿದೆ. ಶಿವನನ್ನು 'ವಿಶ್ವಾತ್ಮಕ'ನೆಂದು ಶಾಸ್ತ್ರಗಳು ಹೇಳುತ್ತವೆ. ಅಂದರೆ ಶಿವನು ಸಮಾಜ ರೂಪದಲ್ಲಿಯೇ ಇರುವನು. ಈ ಕಾರಣದಿಂದ ಸಮಾಜ ಸೇವೆಯೇ ಒಂದು ಶಿವಪೂಜೆಯಾಗಿದೆ.

ಗರ್ಭಿಣಿಯ ಶುಶ್ರೂಷಣೆಯಲ್ಲಿ ಗರ್ಭಸ್ಥ ಶಿಶುವಿನ ಪಾಲನೆಯಾಗುವಂತೆ ಸಮಾಜ ಸೇವೆಯಲ್ಲಿಯೇ ಸಮಾಜದ ಪ್ರತಿಯೊಂದು ವ್ಯಕ್ತಿಯ ಕಲ್ಯಾಣ ಅಡಗಿದೆ. ಗುರು–ಜಂಗಮರಿರುವದೇ ಸಮಾಜ ಕಲ್ಯಾಣಕ್ಕಾಗಿ. ಆದ್ದರಿಂದ ಅವರು ಸಮಾಜದ ಎರಡು ಕಣ್ಣು. ಸಮಾಜವನ್ನು ಸಾಮಾಜಿಕವಾಗಿ, ನೈತಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ಬೆಳೆಯುವಂತೆ ನೋಡಿಕೊಳ್ಳುವದು ಅವರ ಕರ್ತವ್ಯ.

ಈಗ ಏನಾಗಿದೆ ? ನಮ್ಮ ಮೊನ್ನೆಯ ಸಂಚಾರದಲ್ಲಿ ನೀನೇ ನೋಡಿರುವಿ. ಎಷ್ಟು ಮಂದಿಯ ಕೊರಳಲ್ಲಿ ಲಿಂಗವಿದೆ ? ಯಾರು ರುದ್ರಾಕ್ಷಿ ಧರಿಸಿದ್ದಾರೆ ? ಯಾರ ಹಣೆಯಲ್ಲಿ ಭಸ್ಮವಿದೆ ? ಇನ್ನು ಅವರ ಆಚಾರ–ವಿಚಾರಗಳ ವಿಷಯವಂತೂ ದೂರೇ

ಉಳಿಯಿತು. ಇದು ಭಕ್ತರ ತಪ್ಪಲ್ಲ. ಅವರಿಗೆ ಮಾರ್ಗದರ್ಶಕರಾದ ಗುರು–ಜಂಗಮರ ಕರ್ತವ್ಯ ಲೋಪ. ಎಲ್ಲಿಯವರೆಗೆ ಗುರು–ಜಂಗಮರು ತಮ್ಮ ಕರ್ತವ್ಯ ಪರಿಪಾಲನೆ ಮಾಡುವದಿಲ್ಲವೋ ಅಲ್ಲಿಯವರೆಗೆ ಸಮಾಜೋದ್ಧಾರ ಸಾಧ್ಯವಿಲ್ಲ.

ಈ ಗುರು–ಜಂಗಮರಲ್ಲಿ ಕರ್ತವ್ಯದ ಪ್ರಜ್ಞೆ ಬರಬೇಕಾದರೆ, ಅವರೆಲ್ಲರಿಗೆ ಬಾಲ್ಯದಿಂದಲೂ ಒಂದೇ ವಿಧವಾದ ಶಿಕ್ಷಣ ಹಾಗೂ ಸಂಸ್ಕಾರಗಳ ತರಬೇತಿ ಕೊಡಲ್ಪಡಬೇಕು. ಅಂದರೆ 'ವೀರಶೈವ ಗುರುಕುಲ' ನಿರ್ಮಾಣವಾಗಬೇಕು. ಅಲ್ಲಿ ಸಾಧಕರು ಸಮ್ಮಿಲಿತರಾಗಿ ಬೆಳೆದು ಬರಬೇಕು ಮತ್ತು ಅವರಿಗೆ ಧರ್ಮ, ಸಾಹಿತ್ಯ, ಸಂಸ್ಕೃತಿ, ಯೋಗ ಇವುಗಳ ಅಭ್ಯಾಸವಾಗಬೇಕು. ಇದಲ್ಲದೆ 'ಶಿವಯೋಗ' ಸಾಧನೆಯ ತರಬೇತಿಯಂತೂ ಅವರಿಗೆ ಅತ್ಯವಶ್ಯ.

'ಶಿವಯೋಗ'ವೆಂದರೆ ಕೇವಲ ಶಿವಪೂಜೆ ಅಷ್ಟೇ ಅಲ್ಲ. ಲಿಂಗಧಾರಕನ ಕ್ರಿಯೆಗಳೆಲ್ಲವೂ ಶಿವಕ್ರಿಯೆಗಳಾಗುವದರಿಂದ ಅವನ ಲೋಕಾನುಭವವೆಲ್ಲ ಶಿವಾನುಭವವೇ ಆಗಬೇಕು. ಶಿವಾನುಭವವೆಂದರೆ ಶಿವಯೋಗದ ಪರಿಪಕ್ವಸ್ಥಿತಿ. ಇದರಿಂದ ಗುರುಕುಲದಲ್ಲಿ ಕೇವಲ ಶಿವಯೋಗ ಅಷ್ಟೇ ಅಲ್ಲ. ಕಲೆ, ಸಾಹಿತ್ಯ, ಸಂಗೀತ ಮುಂತಾದವುಗಳಿಗೆ ಅವಕಾಶವಿರಬೇಕು. ಏಕೆಂದರೆ ಪರಶಿವ ವಾಚ್ಯವಾದ ಪರಬ್ರಹ್ಮವು ಆನಂದ ಸ್ವರೂಪವೆಂದು ಹೇಳಲಾಗುತ್ತದೆ. ಈ ಸಾಹಿತ್ಯ ಸಂಗೀತಾದಿ ಕಲೆಗಳು ಆನಂದದ ಆವಿಷ್ಕಾರಗಳೇ ಆಗಿರುವದರಿಂದ, ಅವು ಶಿವೋಪಾಸನೆಯಷ್ಟೇ ಪವಿತ್ರವಾಗಿರುವವು. ಈ ದೃಷ್ಟಿಯಿಂದ ಶರಣರು ಅವುಗಳನ್ನು ತಮ್ಮ ಕಾಯಕದಲ್ಲಿ ಅಳವಡಿಸಿಕೊಂಡಿರುವರು.

ಒಟ್ಟಿನ ಮೇಲೆ ಅಲೌಕಿಕ ! ನೀನೊಬ್ಬ ಮಾತ್ರ ಶಿವಯೋಗಿ ಆಗುವದು ಮುಖ್ಯವಲ್ಲ. ಈ ವರೆಗೂ ನಾನು ಹೇಳಿದಂತೆ ಶಿವಯೋಗದಿಂದ ಕೂಡಿದ ಗುರುಕುಲ ದ್ವಾರಾ ಸಮಾಜವನ್ನೇ ಶಿವಮಯವನ್ನಾಗಿ ನೀನು ಮಾಡಬೇಕು. ಇದೇ ನನ್ನ ಕೊನೆಯ ಇಚ್ಛೆ.

### ಉರಿಯುಂಡ ಕರ್ಪೂರ

''ಇನ್ನು ನಮಗೆ ಶಿವನ ಅಪ್ಪಣೆಯಾಗಿದೆ. ಅದಕ್ಕೋಸ್ಕರವೇ ಈ ಗುರು ಸನ್ನಿಧಿಗೆ ನಾನು ಬಂದದ್ದು. ಈ ಜಗದ್ಗುರು ಉಗ್ಗದ ತೋಂಟದಾರ್ಯರ ಗದ್ದುಗೆಯ ಸಮ್ಮುಖದಲ್ಲಿ ನಮ್ಮ ಸಮಾಧಿಯಾಗಬೇಕು. ಸಮಾಜೋದ್ಧಾರದ ವಿಷಯದಲ್ಲಿ ನಾನು ಹೇಳಿದ ಮಾತುಗಳೆಲ್ಲ ನಿನ್ನ ನೆನಪಿನಲ್ಲಿರಲಿ. ಅವುಗಳನ್ನು ಕಾರ್ಯಗತ ಮಾಡುವದೇ ನಿನ್ನ ಪಾಲಿನ ಕರ್ತವ್ಯ.'' ಎಂದು ಹೇಳುತ್ತ ಗದ್ದುಗೆಯ ಕಡೆ ಒಮ್ಮೆ ನೋಡಿ ತಮ್ಮ ಎದೆಯ ಮೇಲಿನ ಇಷ್ಟಲಿಂಗವನ್ನು ಕೈಯಲ್ಲಿ ಹಿಡಿದು 'ಸಿದ್ಧಲಿಂಗಾ' ಎಂಬ ನಾಮಸ್ಮರಣೆಯೊಡನೆ ಕಂಬಕ್ಕೆ ಒರಗಿದರು.

ಶಿಷ್ಯ ಎದ್ದು ನೋಡುತ್ತಾನೆ. ಆಗಲೇ ಗುರುಗಳು ತಮ್ಮ ನಿಜೇಷ್ಟಲಿಂಗದಲ್ಲಿ ಉರಿಯುಂಡ ಕರ್ಪುರದಂತೆ ಬೆರೆತುಬಿಟ್ಟಿದ್ದರು. ದುಃಖತಪ್ತನಾದ ಶಿಷ್ಯ ಗುರುಗಳ

ಅಂತೇಷ್ಟಿ ವಿಧಿಗಳನ್ನೆಲ್ಲ ಪೂರೈಸಿ, ಗದುಗಿಗೆ ಬಂದು ಪೀಠಪರಂಪರೆಯಲ್ಲಿ ೧೬ನೆಯವರಾದ ಶ್ರೀ ಜಗದ್ಗುರು ಸಿದ್ಧೇಶ್ವರ ಮಹಾಸ್ವಾಮಿಗಳಿಗೆ ತನ್ನ ಗುರುಗಳು ಬಿಟ್ಟು ಹೋದ ಸಾಮಾನುಗಳನ್ನು ಮತ್ತು ಹಣವನ್ನು ಒಪ್ಪಿಸಿದ.

ಅದನ್ನು ನೋಡಿ ಶ್ರೀ ಜಗದ್ಗುರುಗಳು ''ತಮ್ಮಾ! ನಿನ್ನ ಗುರುಗಳ ವಸ್ತುಗಳು ನಿನ್ನವೇ ಆಗಿರುವವು. ಇವನ್ನೆಲ್ಲ ಏಕೆ ತಂದೆ ? ಇವು ನಿನಗೆ ಇರಲಿ. ಈ ನಿನ್ನ ಪ್ರಾಮಾಣಿಕತನ ನಮಗೆ ತುಂಬಾ ಮೆಚ್ಚುಗೆಯಾಗಿದೆ. ಇನ್ನು ನೀನು ಎಲ್ಲಿಯೂ ಹೋಗಬೇಡ. ಇದು ನಿನ್ನ ಮಠವೇ ಆಗಿದೆ. ಇಲ್ಲಿಯೇ ಇದ್ದು ಬಿಡು'' ಎಂದು ಅಪ್ಪಣೆ ಮಾಡಿದರು. ಅದಕ್ಕೆ ಶಿಷ್ಯ ''ಬುದ್ಧಿ! ತಮ್ಮ ಕೃಪೆಯೊಂದಿದ್ದರೆ ಸಾಕು. ಹೆಚ್ಚಿಗೆ ನನಗೆ ಏನೂ ಬೇಡ. ಸಧ್ಯ ನಾನು ಹೋಗಬೇಕಾಗಿದೆ. ದಯವಿಟ್ಟು ಅಪ್ಪಣೆ ಕೊಡಿ'' ಎಂದು ಹೇಳಿ ಅವರಿಂದ ಒಪ್ಪಿಗೆ ಪಡೆದುಕೊಂಡು ಮುಂದಕ್ಕೆ ಪ್ರಯಾಣ ಬೆಳೆಸಿದ.

### ಎಮ್ಮವರಿಗೆ ಸಾವಿಲ್ಲ

ಶ್ರೀ ಯಡೆಯೂರು ಜಂಗಮಲಿಂಗ ಕ್ಷೇತ್ರ. ಶ್ರೀ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗೇಶ ಇಲ್ಲಿ ನಿತ್ಯ ಜಾಗ್ರತನಾಗಿ ಇರುವನೆಂಬ ಭಾವನೆ–ಭಾವುಕ ಭಕ್ತರಿಗೆ ಅನುಭವ ವೇದ್ಯವಾದ ವಿಷಯ. ಚರಕುಲ ಚಕ್ರವರ್ತಿಯ ಆತನ ಪವಿತ್ರ ದರ್ಶನಕ್ಕೆ ಭಕ್ತರಾದಿಯಾಗಿ ಗುರು–ಜಂಗಮ ಮೂರ್ತಿಗಳೆಲ್ಲರೂ ಹೋಗುತ್ತಿರುವದು ವಾಡಿಕೆ. ರಾತ್ರಿಯಾಗಿದೆ. ಅರ್ಚಕರು ಅದೇ ಮಹಾಸ್ವಾಮಿಯ ಪೂಜೆ ಮುಗಿಸಿ ತಮ್ಮ ಮನೆಗೆ ಹೊರಡುವ ಸಿದ್ಧತೆಯಲ್ಲಿದ್ದಾರೆ. ಆಗ ಕಾವೀವಸನಧಾರಿಯಾದ ಒಬ್ಬರು ಹಣೆಯಲ್ಲಿ ಭಸ್ಮ, ತ್ರಿಪುಂಡ್ರ ಧರಿಸಿ, ಕೊರಳಲ್ಲಿ ರುದ್ರಾಕ್ಷಮಾಲೆ ಹಾಕಿಕೊಂಡು, ಅಲ್ಲಿಗೆ ಆಗಮಿಸಿದರು.

ತೆಳುವಾದ ಎತ್ತರದ ದೇಹ, ಕಾಂತಿಯುಕ್ತ ಮೈಬಣ್ಣ, ಪ್ರಶಾಂತ ಮುಖ ಮುದ್ರೆ, ಹೊಳೆಹೊಳೆವ ಆ ತೀಕ್ಷ್ಣವಾದ ಕಣ್ಣುಗಳು, ಅವರ ಗಂಭೀರ ವ್ಯಕ್ತಿತ್ವಕ್ಕೆ ವಿಶೇಷ ಮೆರುಗನ್ನು ತಂದುಕೊಟ್ಟಿದ್ದವು. ಹೀಗೆ ಆಗಮಿಸಿದ ಆ ಜಂಗಮ ಮೂರ್ತಿಗಳು ಪೂಜಾಲಂಕೃತ ಶ್ರೀ ಸಿದ್ಧೇಶ್ವರ ಮೂರ್ತಿಯನ್ನು ಎವೆಯಿಕ್ಕದೆ ವೀಕ್ಷಿಸುತ್ತ ಕೆಲಕಾಲ ನಿಂತರು. ನಂದಾದೀವಿಗೆಯ ನಸುಬೆಳಕಿನಲ್ಲಿ ಶ್ರೀ ಸಿದ್ಧೇಶ್ವರ ಬೆಳ್ಳಿಯಮೂರ್ತಿ ಮುಗುಳುನಗೆ ಬೀರುತ್ತ ಬಂದ ಭಕ್ತರನ್ನು ವಾತ್ಸಲ್ಯದಿಂದ ಬರಮಾಡಿಕೊಳ್ಳುತ್ತಿರುವಂತೆ ನಯನ ಮನೋಹರವಾಗಿ ಕಾಣುತ್ತಿತ್ತು.

ಹೀಗೆ ಸ್ವಾಮಿಯ ದರ್ಶನವಾದ ನಂತರ ಆ ಜಂಗಮ ಮೂರ್ತಿಗಳು ಗದ್ದುಗೆಗೆ ಸಾಷ್ಟಾಂಗ ನಮಸ್ಕಾರ ಮಾತ್ರ ಹಾಕದೆ, ಅಲ್ಲಿಂದ ಹಿಂತಿರುಗಿ ಹೋಗಿ ತಮ್ಮ ಸ್ನಾನ, ಪೂಜೆ, ಪ್ರಸಾದ ಇವುಗಳನ್ನು ಮುಗಿಸಿಕೊಂಡು ಬಂದು ಮಲಗಿ ನಿದ್ರೆ ಹೋದರು. ಅವರೇ ಶ್ರೀ ಎಳಂದೂರು ಬಸವಲಿಂಗಸ್ವಾಮಿಗಳವರ ಶಿಷ್ಯರಾದ ಶ್ರೀ ಹಾಲಯ್ಯ ದೇಶಿಕರು (ಶ್ರೀ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರು).

ಇನ್ನೂ ಬೆಳಕು ಆಗಿರಲಿಲ್ಲ. ಆಗ ಹಾನಗಲ್ಲ ಶ್ರೀಗಳವರಿಗೆ ಒಂದು ಸ್ವಪ್ನವಾಯಿತು. ಅದರಲ್ಲಿ ಅವರ ಗುರುಗಳಾದ ಎಳಂದೂರು ಬಸವಲಿಂಗ ಮಹಾಸ್ವಾಮಿಗಳು ಅವರಿಗೆ ದರ್ಶನ ಕೊಟ್ಟು. ''ಇಲ್ಲಿಯ ಗದ್ದುಗೆಯನ್ನು ಸ್ಥಾವರವೆಂದು ಭಾವಿಸಿರುವಿಯಾ ? ಇದು ಜಂಗಮಲಿಂಗ ಕ್ಷೇತ್ರ. ಸಾಕ್ಷಾತ್ ಸಿದ್ಧಲಿಂಗ ಇಲ್ಲಿ ಶಿವಯೋಗ ಸಮಾಧಿಯಲ್ಲಿದ್ದಾನೆ. ಪ್ರಣಾಮ ಸಲ್ಲಿಸು'' ಎಂಬ ಆದೇಶ ನೀಡಿ ಅದೃಶ್ಯರಾದರು.

ಶ್ರೀಗಳವರಿಗೆ ಪಕ್ಕನೆ ಎಚ್ಚರಿಕೆಯಾಯಿತು. ತಮ್ಮ ಗುರುಗಳು ಗತಿಸಿ ಹೋಗಿದ್ದರೂ ಪುನಃ ಹೀಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ತಮ್ಮನ್ನು ಎಚ್ಚರಿಸಿದ್ದಕ್ಕೆ ಅವರಿಗೆ ಆನಂದ ಹಾಗೂ ಆಶ್ಚರ್ಯಗಳು ಏಕಕಾಲಕ್ಕೆ ಉಂಟಾದವು. ಬೆಳಿಗ್ಗೆ ಗುರುಗಳ ಅಪ್ಪಣೆಯ ಪ್ರಕಾರ ಸಿದ್ಧಲಿಂಗೇಶನಿಗೆ ಸಾಷ್ಟಾಂಗ ಪ್ರಣಾಮ ಸಲ್ಲಿಸಬೇಕೆಂದು ಸಂಕಲ್ಪ ಮಾಡಿ ತಮ್ಮ ಗುರುಗಳನ್ನು ಹಾಗೂ ಸಿದ್ಧಲಿಂಗೇಶನನ್ನು ಸ್ಮರಿಸುತ್ತ ಪುನಃ ನಿದ್ರೆ ಹೋದರು. ಏಕೆಂದರೆ, ಅವರು ಶ್ರೀ ಯಡೆಯೂರು ಕ್ಷೇತ್ರಕ್ಕೆ ಪಾದಚಾರಿಗಳಾಗಿಯೇ ಆಗಮಿಸಿದ್ದರಿಂದ ಪಥಶ್ರಮದ ಮೂಲಕ ಅವರಿಗೆ ಬೇಗ ನಿದ್ರೆ ಹತ್ತಿತ್ತು. ಹೀಗೆ ಅವರು ಪುನಃ ಎರಡನೇ ಸಲ ನಿದ್ರೆ ಹೋದಾಗ ಅವರಿಗೆ ಮತ್ತೊಮ್ಮೆ ಸ್ವಪ್ನ ದೃಷ್ಟಾಂತವಾಯಿತು. ಅದರಲ್ಲಿ ಶಿವಯೋಗಿ ಸಾರ್ವಭೌಮ ಶ್ರೀ ಸಿದ್ಧಲಿಂಗೇಶನ ಇಷ್ಟಲಿಂಗಾರ್ಚನೆ ವೈಭವದಿಂದ ಸಾಗಿದೆ. ಆತನ ಶಿಷ್ಯರಾದ ಅನೇಕ ಹರ–ಗುರು–ಚರ ಮೂರ್ತಿಗಳು ಅದನ್ನು ಭಕ್ತಿ ತತ್ಪರತೆಯಿಂದ ವೀಕ್ಷಿಸುತ್ತಿದ್ದಾರೆ.

ಶ್ರೀ ಸಿದ್ಧಲಿಂಗೇಶನ ಇಷ್ಟಲಿಂಗಾರ್ಚನೆಯ ನಂತರ ಆತನ ಪಾದಪೂಜೆ ಪ್ರಾರಂಭವಾಗಿ ಶಿಷ್ಯರೆಲ್ಲ ಒಬ್ಬೊಬ್ಬರಾಗಿ ಬಂದು ಪಾದತೀರ್ಥ ಪಡೆದುಕೊಳ್ಳ ಹತ್ತಿದ್ದಾರೆ. ನಂತರ ಪ್ರಸಾದ ವಿನಿಯೋಗವೂ ನಡೆಯಿತು. ಆದರೆ ಅದರಲ್ಲಿ ಉಳಿದವರೆಂದರೆ ತಾವೊಬ್ಬರೇ ಎಂಬುದು ಅವರಿಗೆ ಹೊಳೆಯುತ್ತಲೆ ಮೈಪುಳಕಿತವಾಗಿ ಅವರು ಎಚ್ಚತ್ತರು. ಆಗ ಅವರಿಗೆ ಶ್ರೀ ಸಿದ್ಧಲಿಂಗೇಶ ಪ್ರತ್ಯಕ್ಷ ಇದ್ದಾನೆ ಎಂಬುದು ಸಂಪೂರ್ಣ ಅನುಭವಕ್ಕೆ ಬಂದು ಅವರು ಆತನ ಗದ್ದುಗೆಗೆ ಸಾಷ್ಟಾಂಗ ಪ್ರಣಾಮಗೈದರು.*

## ಉಪಸಂಹಾರ

ಎಳಂದೂರು ಬಸವಲಿಂಗ ಸ್ವಾಮಿಗಳವರ ಕನಸಾದ ವೀರಶೈವ ಗುರುಕುಲ ''ಶಿವಯೋಗಮಂದಿರ'' ಇಂದು ನನಸಾಗಿ ನಮ್ಮ ಕಣ್ಣೆದುರು ಕಂಗೊಳಿಸುತ್ತಿದೆ. ನೂರಾರು ಸಂಖ್ಯೆಯಲ್ಲಿ ಗುರು–ಜಂಗಮ ಮೂರ್ತಿಗಳು, ಆ ಶಿವಯೋಗ

---

* ಈ ವಿಷಯವನ್ನು ಹೇಳಿದವರು ಲಿಂ. ಜಿಗಳೂರು ಲಿಂಗಪ್ಪ ಮಾಸ್ತರರು ಮತ್ತು ಲಿಂ. ಶ್ರೀ ಹಾಳಕೇರಿ ಅಜ್ಜಾ ಅವರು ಅಲ್ಲದೆ ನವಲಗುಂದ ಗವಿಮಠದ ಲಿಂ. ಬಸವಲಿಂಗಸ್ವಾಮಿಗಳವರು.

ಮಂದಿರದಿಂದ ಸಿದ್ಧರಾಗಿ ಹೊರ ಬಂದು ಸಮಾಜದಲ್ಲಿ ಜ್ಯೋತಿರ್ಮಯ ನಕ್ಷತ್ರದಂತೆ ಹೊಳೆಯುತ್ತ ಸಮಾಜಕ್ಕೆ ಮಾರ್ಗದರ್ಶನ ಮಾಡುತ್ತಿರುವದು ಸರ್ವವಿದಿತ.

ಹೀಗೆ ಗುರುಗಳ ಸತ್ಯಸಂಕಲ್ಪ ಸಾರ್ಥಕವಾಗುವಂತೆ ಮಾಡಿದ ಅಪೂರ್ವ ಶ್ರೇಯಸ್ಸು ೨೦ನೆಯ ಶತಮಾನದ ಬಸವಣ್ಣನವರೆಂದು ಪ್ರಖ್ಯಾತರಾದ ಸಮಾಜ ಜಾಗೃತ ಕರ್ತೃ ಲಿಂಗೈಕ್ಯ ಹಾನಗಲ್ಲ ಕುಮಾರಸ್ವಾಮಿಗಳಿಗೆ ಸಲ್ಲುತ್ತದೆ.

ಪೂಜ್ಯ ಹಾನಗಲ್ಲ ಕುಮಾರ ಮಹಾಸ್ವಾಮಿಗಳು ತಮ್ಮ ಗುರುಗಳ ಗದ್ದುಗೆಯ ಪೂಜಾ ವಿನಿಯೋಗಾರ್ಥವಾಗಿ ಅಣ್ಣಿಗೇರಿಯಲ್ಲಿಯ ಶಿವಯೋಗ ಮಂದಿರದ ಆರು ಕೂರಿಗೆ ಜಮೀನು ಬಿಟ್ಟುಕೊಟ್ಟರು. ತಾವು ಶಿವಾಧೀನರಾಗುವವರೆಗೂ ಅವರು ಮೇಲಿಂದ ಮೇಲೆ ತಮ್ಮ ಗುರುಗಳ ಗದ್ದುಗೆಯ ದರ್ಶನಕ್ಕೆ ಆಗಮಿಸಿ ಆರಾಧನೆ ಮಾಡಿ ಹೋಗುತ್ತಿದ್ದರು. ಶಿವಯೋಗ ಮಂದಿರದ ಅನೇಕ ಪೂಜ್ಯಪಾದರು ಈಗಲೂ ಲಿಂ. ಎಳಂದೂರ ಬಸವಲಿಂಗ ಮಹಾಸ್ವಾಮಿಗಳವರ ಮಂಗಲವನ್ನು ಪಾಡುತ್ತಿರುವರು. ಅದು ಹೀಗಿದೆ :

ಮಂಗಲಂ ಶ್ರೀ ಬಸವಲಿಂಗ ಯತೀಂದ್ರ
ಶಿವಯೋಗೀಂದ್ರ ಭೋ
ಜಂಗಮಾರ್ಯ ಪದಾಬ್ಜ ಭೃಂಗತ
ಲಿಂಗ ಸಂಗತ ಅಂಗ ಭೋ ॥ ॥ ಪ ॥

ವರ್ಣ ಶಿಕ್ಷಣ ಕ್ರಮವ ಗಮ್ಯ ಸು–
ವರ್ಣ ಮುಖ ಸಂಕಾಶಯಾ
ವರ್ಣ ಮೂಲ ಪ್ರಣವ ವಿದ್ಯಾ
ಪೂರ್ಣ ಹೃದಯ ಕುಶೇಶಯಾ ॥ ೧ ॥

ಸ್ಮರಣ ಮಾತ್ರಂ ತತ್‌ಸ್ವರೂಪಂ
ಚರಣ ಸಜ್ಜನ ಸೇವಿತಂ
ಶರಣ ಜನ ಸಂದೋಹ ಪ್ರೀತಂ
ಕರುಣ ಸದ್ಗುರು ರೂಪ ಭೋ ॥ ೨ ॥

ವಿನುತ ಶ್ರೀ ಶಿವಯೋಗಮಂದಿರ
ವನರುಹಸ್ಯ ನಿಧಾನವು
ಮನಸಿಜಾರಿಯ ನೇತ್ರ ಭೋ ।
ತನಯ ಲೀಲನಂದ ಭೋ ॥ ೩ ॥
ಘನಪಿತಾಮಹ ಗುರುವರಾ

ವೀರಶೈವ ಪುಣ್ಯ ಪುರುಷ ಸಾಹಿತ್ಯ ರತ್ನಮಾಲೆ-೬೦

# ತೋಂಟದ ಶ್ರೀ ಸಿದ್ಧೇಶ್ವರ ಜಗದ್ಗುರುಗಳವರು

❋

ಲೇಖಕರು :
ಶ್ರೀ ಸಿದ್ಧಲಿಂಗಯ್ಯ ಹೊಸಮಠ

❋

ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,
ಡಂಬಳ-ಗದಗ

*

## ಮೊದಲ ಮಾತು

ಶಿವಶರಣರ ವಚನ ವಾಙ್ಮಯವನ್ನು ಮಥಿಸಿ ಸಾಹಿತ್ಯ ಸೌಂದರ್ಯವನ್ನು ಹರಿಹರ–ರಾಘವಾಂಕಾದಿಗಳು ಪ್ರಕಟಿಸಿದರೆ, ತತ್ತ್ವಸೌಂದರ್ಯವನ್ನು ಸಾಕ್ಷಾತ್ಕಾರ ಗೊಳಿಸಿದವರು, ಏಳು ನೂರೊಂದು ವಿರಕ್ತರು. ಈ ವಿರಕ್ತ ಸಮೂಹದ ನಾಯಕ ವ್ಯಕ್ತಿಯಾಗಿ, ವೀರಶೈವ ಧರ್ಮಪರಂಪರೆಯ ಯುಗಪುರುಷನಾಗಿ ಮೆರೆದವ ತೋಂಟದ ಸಿದ್ಧಲಿಂಗಯತಿ. ಪ್ರಭುವಿನಂತೆ ನಿರಂಜನಮೂರ್ತಿಯಾಗಿ, ಬಸವನಂತೆ ವೀರಶೈವ ಸಂಘಟಕನಾಗಿ, ಚೆನ್ನಬಸವಣ್ಣನಂತೆ ತತ್ತ್ವವೇತ್ತನಾಗಿ ಬೆಳಗಿದ ೧೫ನೆಯ ಶತಮಾನದ ಈ ಶಿವಯೋಗಿಸೂರ್ಯನ ಪೀಠ–ಪ್ರಪೀಠ ಪರಂಪರೆ, ಶಿಷ್ಯ–ಪ್ರಶಿಷ್ಯ ಪರಂಪರೆ ನಾಡಿನ ಒಳಗೆಲ್ಲ ತುಂಬಿದೆ, ಹೊರಗೆಲ್ಲ ತುಳುಕಿದೆ. ಅಂದಿನಿಂದಲೂ ಕನ್ನಡಿಗರ, ವಿಶೇಷವಾಗಿ ವೀರಶೈವರ ಬದುಕನ್ನು ತಿದ್ದಿ, ಭಾವನೆಯನ್ನು ತೀಡಿ, ''ಅಂಗವೇ ಶರಣ, ಲಿಂಗವೇ ಶಿವ'' ಎಂಬ ಮಂತ್ರವನ್ನು ಘೋಷಿಸುತ್ತ, ಶಿಷ್ಯಕೋಟಿಯನ್ನು ಪೋಷಿಸುತ್ತ ಬಂದ ಘನತೆ ಈ ''ತೋಂಟದಾರ್ಯ ಪೀಠಪರಂಪರೆ''ಗೆ ಸಲ್ಲುತ್ತದೆ.

'ಶಿಷ್ಯರ ಸೇವೆಯೇ ಶಿವಪೂಜೆ'ಯೆಂಬ ಮಹಾಗುರು ತೋಂಟದಾರ್ಯರ ಸಂದೇಶದಂತೆ ನಡೆಯುವುದು ತನ್ನ ಪರಮ ಕರ್ತವ್ಯವೆಂದು ಡಂಬಳ–ಗದುಗಿನ ''ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ'' ನಂಬಿದೆ. ಈ ನಂಬಿಕೆಯ ಫಲವಾಗಿ ೧೯೭೫ರಲ್ಲಿ ಸ್ಥಾಪಿತವಾದ ''ವೀರಶೈವ ಅಧ್ಯಯನ ಸಂಸ್ಥೆ''ಯ ಅಂಗವಾಗಿ ಪ್ರಾರಂಭವಾದ ''ವೀರಶೈವ ಪುರಾತನ, ನೂತನ ಹಾಗೂ ಅನುವಾದ ಸಾಹಿತ್ಯರತ್ನಮಾಲೆ''ಗಳ ಜೊತೆ ''ವೀರಶೈವ ಪುಣ್ಯಪುರುಷ ಸಾಹಿತ್ಯರತ್ನಮಾಲೆ'' ಉದಯವಾಗಿದೆ.

ಸಮಾಜದಲ್ಲಿ ಘಟಿಸಿದ ಸತ್ಕಾರ್ಯಗಳ ದಾಖಲೆ, ಸಮಾಜವನ್ನುದ್ಧರಿಸಿದ ಪುಣ್ಯಪುರುಷರ ಚರಿತ್ರೆಗಳು ಮುಂದಿನ ಪೀಳಿಗೆಗೆ ದಾರಿದೀಪವೂ ಹೌದು, ತೋರುಬೆರಳೂ ಹೌದು. ಕಾರಣ ಇತ್ತೀಚಿನ ದಿನಗಳಲ್ಲಿ ಸಮಾಜವನ್ನು ಕಟ್ಟಿ ಬೆಳೆಸಿದ. ಸಮಾಜಕ್ಕಾಗಿ ದುಡಿದ ಮಹಾತ್ಮರ ಚರಿತ್ರೆಗಳನ್ನು ಬರೆದು ಪ್ರಕಟಿಸಬೇಕೆಂಬ ಉದ್ದೇಶದಿಂದ ಈ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ೧೯–೨೦ನೆಯ ಶತಮಾನಗಳಲ್ಲಿ ಬಾಳಿದ ನೂರಾರು ಜನ ವೀರಶೈವ ಪುಣ್ಯಪುರುಷರಲ್ಲಿ ಪ್ರತಿ ತಿಂಗಳು ಒಬ್ಬರನ್ನು ಕುರಿತು ಉಪನ್ಯಾಸವನ್ನೇರ್ಪಡಿಸುವದು. ಏರ್ಪಡಿಸಿದ ಉಪನ್ಯಾಸವನ್ನು ಪ್ರಕಟಿಸಿ ಸುಲಭ ಬೆಲೆಯಲ್ಲಿ ವಿತರಣೆಗೊಳಿಸುವದು ಈ ಮಾಲಿಕೆಯ ಸಂಕಲ್ಪವಾಗಿದೆ. ತಿಂಗಳು

ತಿಂಗಳು ಪ್ರಕಟವಾಗುವ ಈ ಮಾಲಿಕೆಯಲ್ಲಿ ೯ನೇ ಕೃತಿ ''ಶ್ರೀ ತೋಂಟದ ಸಿದ್ಧೇಶ್ವರ ಜಗದ್ಗುರುಗಳವರು''.

ಗದುಗಿನ ಶ್ರೀ ತೋಂಟದಾರ್ಯ ಪೀಠಪರಂಪರೆಯಲ್ಲಿ ಲಕ್ಕುಂಡಿ ಜಗದ್ಗುರುಗಳೆಂದು ಪ್ರಸಿದ್ಧರಾಗಿದ್ದ ಶ್ರೀ ಸಿದ್ಧೇಶ್ವರ ಜಗದ್ಗುರುಗಳು ಯುಗಪುರುಷರೆನಿಸಿಕೊಂಡವರು. ಮಠದ ಸತ್ವವನ್ನು ಎತ್ತಿ ಹಿಡಿದು ಮಠಕ್ಕೆ ಸತ್ವವನ್ನು ತುಂಬಿದ ಕೀರ್ತಿ ಅವರದಾಗಿದೆ. ಸಾರ್ವಜನಿಕರಿಂದಲೂ, ಸರಕಾರದಿಂದಲೂ ಗೌರವ ಗಳಿಸಿದ ಅವರ ಅವಧಿಯಲ್ಲಿ ಶ್ರೀ ತೋಂಟದಾರ್ಯಮಠ ಅನೇಕ ಮುಖಗಳಲ್ಲಿ ಮುನ್ನಡೆಯಿತು.

ಅರಟಾಳ ರುದ್ರಗೌಡರು, ಸಿರಸಂಗಿ ಲಿಂಗರಾಜರು, ವಾರದ ಮಲ್ಲಪ್ಪನವರು, ಸರ್ ಕೆ.ಪಿ. ಪುಟ್ಟಣ್ಣಶೆಟ್ಟರು, ರಾಜಾ ಲಖಮಗೌಡರು, ಮೆಣಶಿನಕಾಯಿ ಶಾಂತವೀರಪ್ಪನವರು ವೀರಶೈವ ಧುರೀಣರು ಮೊದಲುಮಾಡಿ ಸಮಸ್ತ ಕರ್ನಾಟಕದಲ್ಲಿ ಇವರು ಶಿಷ್ಯ ಸ್ತೋಮವನ್ನು ಪಡೆದಿದ್ದರು. ಅಂದು ಸೂರ್ಯನಂತೆ ಮೂಡಿ ವೀರಶೈವ ಸಮಾಜದ ಒಳಹೊರಗೆ ಬೆಳಕನ್ನು ತುಂಬಿದ ಶ್ರೇಯಸ್ಸು ಶ್ರೀ ಜಗದ್ಗುರುಗಳಿಗೆ ಸಲ್ಲುತ್ತದೆ.

ವೀರಶೈವ ಅಧ್ಯಯನ ಸಂಸ್ಥೆಯ ಮುಖಾಂತರ ಈ ಕೃತಿಯನ್ನು ಪ್ರಕಟಿಸಲು ನಮಗೆ ತುಂಬ ಸಂತೋಷವೆನಿಸುತ್ತದೆ. ಇಲ್ಲಿ ವ್ಯಕ್ತವಾದ ಅಭಿಪ್ರಾಯಗಳಿಗೆ ಲೇಖಕರೇ ಸಂಪೂರ್ಣ ಹೊಣೆಗಾರರು. ಶ್ರಮವಹಿಸಿ, ಲಿಂಗೈಕ್ಯ ಶ್ರೀ ಸಿದ್ಧೇಶ್ವರ ಜಗದ್ಗುರುಗಳ ಮೇಲಿನ ಶ್ರದ್ಧೆಯಿಂದ ಬರೆದುಕೊಟ್ಟ ಶ್ರೀ ಸಿದ್ಧಲಿಂಗಯ್ಯ ಹೊಸಮಠ, ಗದಗ ಅವರಿಗೆ, ಗ್ರಂಥದಾನವನ್ನು ಪೂರೈಸಿದ ಶ್ರೀ ಸ್ವಾಮಿಯ ಪರಮಭಕ್ತರೂ ಗುರು–ಲಿಂಗ–ಜಂಗಮ ಪ್ರೇಮಿಗಳು ಆದ ದಾವಣಗೆರೆಯ ಶ್ರೀ ಜಾಲಿಮರದ ಚನ್ನಬಸಪ್ಪನವರ ಧರ್ಮಪತ್ನಿಯವರಾದ ಶ್ರೀಮತಿ ವೀರಮ್ಮ ಅವರಿಗೆ, ಅಂದವಾಗಿ ಮುದ್ರಿಸಿದ ಶ್ರೀ ಪ್ರಭು ಪ್ರಿಂಟಿಂಗ ಪ್ರೆಸ್ಸಿನವರಿಗೆ ಮಹಾಗುರು ಶ್ರೀ ಎಡೆಯೂರ ಶಿವಯೋಗಿ ಸನ್ಮಂಗಳವನ್ನುಂಟುಮಾಡಲಿ ಎಂದು ಹಾರೈಸುತ್ತೇವೆ.

– ಪ್ರಕಾಶಕರು

*

# ಆತ್ಮ ನಿವೇದನೆ

ವ್ಯಕ್ತಿಯಿಂದ ಸ್ಥಾನಕ್ಕೆ ಗೌರವವೇ ಹೊರತು ಸ್ಥಾನದಿಂದ ವ್ಯಕ್ತಿಗೆ ಗೌರವವಲ್ಲ. ಇದಕ್ಕೆ ಗದುಗಿನ ಶ್ರೀ ನಿರಂಜನ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ಪೀಠ–ಪರಂಪರೆಯಲ್ಲಿ ಹದಿನಾರನೆಯವರಾದ ಶ್ರೀ ಸಿದ್ಧೇಶ್ವರ ಜಗದ್ಗುಗಳವರು ಉಜ್ವಲ ನಿದರ್ಶನವೆನಿಸಿದ್ದಾರೆ. ಪ್ರತಿವ್ಯಕ್ತಿಯಲ್ಲಿಯೂ ಗುಣ–ದೋಷಗಳು ಇದ್ದೇ ಇರುತ್ತವೆ. ಯಾರು ತಮ್ಮಲ್ಲಿಯ ದೋಷಗಳನ್ನು ಸಾಧನೆಯ ಬಲದಿಂದ ನೀಗಿಕೊಳ್ಳುವರೋ ಅಂಥವರಲ್ಲಿ ಸದ್ಗುಣಗಳು ತಾವೇ ಪ್ರಕಾಶಕ್ಕೆ ಬಂದು ಅವರಿಗೆ ''ಲೋಕಪೂಜ್ಯತೆ''ಯನ್ನು ತಂದುಕೊಡುತ್ತವೆ. ಇಂತಹ ಪೂಜ್ಯ ವ್ಯಕ್ತಿತ್ವವನ್ನು ಹೊಂದಿದ ಶ್ರೀ ಜಗದ್ಗುರು ಸಿದ್ಧೇಶ್ವರ ಮಹಾಸ್ವಾಮಿಗಳವರ ದಿವ್ಯ ಚರಿತ್ರೆಯನ್ನು ಪ್ರಕಟಗೊಳಿಸಬೇಕೆಂಬುದು ಅವರ ಪರಂಪರೆಯಲ್ಲಿ ಬಂದ ಹತ್ತೊಂಭತ್ತನೇ ಪೀಠಾಧೀಶರಾದ ಸದ್ಯದ ಶ್ರೀ ಜಗದ್ಗುರು ಮಹಾಸನ್ನಿಧಿಯವರ ಬಯಕೆ.

ಶ್ರೀ ಮಹಾಸನ್ನಿಧಿಯವರ ಅಪ್ಪಣೆಯಂತೆ ಗ್ರಂಥ ರಚನೆಗೆ ಒಪ್ಪಿಕೊಂಡರೂ ಅದು ಮೂರ್ತಸ್ವರೂಪಕ್ಕೆ ಬರಲು ಬಹಳಷ್ಟು ವಿಲಂಬವಾಯಿತು. ಹೀಗೆ ವಿಲಂಬವಾಗಲು ಅವಶ್ಯವಿದ್ದ ವಿಷಯ ಸಂಗ್ರಹದಲ್ಲಿಯ ಅನಾನುಕೂಲತೆಯೇ ಕಾರಣ. ಶ್ರೀ ಸಿದ್ಧೇಶ್ವರ ಜಗದ್ಗುರುಗಳವರನ್ನು ಪ್ರತ್ಯಕ್ಷ ನೋಡಿ ತಿಳಿದ ಅನೇಕ ಹಿರಿಯರು ಸ್ಥಳ–ಪರಸ್ಥಳಗಳಲ್ಲಿ ಈಗಲೂ ಇದ್ದಾರೆ. ಈ ಕಾರ್ಯ ಕೈಕೊಂಡ ನಂತರ ನಾನು ಅವರಿದ್ದಲ್ಲಿಗೆ ಹೋಗಿ ಬರಬೇಕಾಯಿತು.

ನನಗೆ ಹೆಚ್ಚು ವಿಷಯ ಸಂಗ್ರಹ ನೀಡಿದವರು, ಕಾಟನ್ ಓವ್ಹರ್ಸಿಯರಾಗಿ ಕೆಲಸಮಾಡಿ ನಿವೃತ್ತಿ ಹೊಂದಿದ ಶ್ರೀ ಸಿದ್ಧನಗೌಡ ಪಾಟೀಲ ಸಾ|| ಚುರ್ಚಿಹಾಳ ಅವರು. ಬಾಲ್ಯದಿಂದಲೂ ಶ್ರೀಮಠದಲ್ಲಿದ್ದು ಅಭ್ಯಾಸ ಮಾಡಿದವರು ಹಾಗೂ ಶ್ರೀ ಸನ್ನಿಧಿಯ ಪ್ರತ್ಯಕ್ಷ ಸೇವೆ ಮಾಡಿದವರು. ಅದರಂತೆ ಮತ್ತೆ ಕೆಲವು ವಿಷಯಗಳನ್ನು ಒದಗಿಸಿದವರು ಮಠದ ಅಭಿಮಾನಿ ಭಕ್ತರಾದ ಶ್ರೀ ಯಳಮಲಿ ಶಾಂತಪ್ಪಣ್ಣನವರು ಹಾಗೂ ಶ್ರೀ ವೀರಪ್ಪನವರು ಬುಳ್ಳಾ.

ಇನ್ನು ಗ್ರಂಥ ರಚನೆಗೆ ಮೂಲ ವಿಷಯಗಳನ್ನು ಒದಗಿಸಿದ ಆಧಾರ ಗ್ರಂಥಗಳೆಂದರೆ ಲಿಂಗೈಕ್ಯ ತೋಟಪ್ಪನವರು ಕೋಟಿ, ಬಿ.ಎ.ಎಲ್.ಎಲ್.ಬಿ. ವಕೀಲರು ಅವರಿಂದ ಪ್ರಕಾಶಿತವಾದ ''ಶ್ರೀಮದರ್ಧನಾರೀಶ್ವರ ಪುರಾಣ'' ಹಾಗೂ ಲಿಂಗೈಕ್ಯ ಲಿಂಗಪ್ಪ ಮಾಸ್ತರರು ಜಿಗಳೂರ ಅವರಿಂದ ರಚಿತವಾದ ''ಗುರು–ಶಿಷ್ಯ ಸಂವಾದ ವಿರಚ್ಯತೆ'' ಎಂಬ ಶ್ರೀ ಕ್ಷೇತ್ರ ಎಡಿಯೂರು ಪ್ರವಾಸ ಕಥನ.

ಚರಿತ್ರೆಗೆ ಸಂಬಂಧಪಟ್ಟ ಅನೇಕ ಮಹತ್ವದ ದಾಖಲೆಗಳು ಶ್ರೀಮಠದ ಹಳೆಯ ಕಡತಗಳಲ್ಲಿ ದೊರೆತವು. ಅವುಗಳನ್ನು ಸಂಶೋಧಿಸಿ ಹೊರತರುವಲ್ಲಿ ಸಾಕಷ್ಟು ಶ್ರಮ, ಸಮಯ ವ್ಯಯವಾಯಿತು. ಹೀಗೆ ಗ್ರಂಥರಚನೆಗೆ ಪೋಷಕವಾಗಿ ಸಹಕರಿಸಿದ ಯಾವತ್ತೂ ಮಹನೀಯರಿಗೆ ಅನೇಕ ಕೃತಜ್ಞತಾಪೂರ್ಣ ವಂದನೆಗಳು.

ಶ್ರೀ ಸಿದ್ಧೇಶ್ವರ ಜಗದ್ಗುರುಗಳವರನ್ನು ನಾನು ಬಾಲ್ಯದಿಂದಲೂ ಬಲ್ಲೆ. ನನ್ನ ಹಿಂದಿನ ಮೂರು ತಲೆಮಾರಿನ ಹಿರಿಯರೆಲ್ಲ ಶ್ರೀಮಠದಲ್ಲಿ ಚರಮೂರ್ತಿಗಳಾಗಿ, ಮರಿದೇವರಾಗಿ, ಶಾಸ್ತ್ರಿಗಳಾಗಿ, ಕವಿಗಳಾಗಿ, ಗಾಯಕರಾಗಿ, ವಾದಕರಾಗಿ ಸೇವೆ ಸಲ್ಲಿಸಿದ್ದಾರೆ. ನನ್ನ ಆರಾಧ್ಯದೈವ ಅನಾದಿ ಸಿದ್ಧಲಿಂಗನ ಕೃಪೆಯಿಂದ ಗುರುಸೇವಾ ರೂಪದಲ್ಲಿ ಲಭ್ಯವಾದ ಈ ಪವಿತ್ರಸೇವೆ ನನ್ನಿಂದ ಪೂರೈಸಿರುವುದಕ್ಕೆ ನನಗೆ ''ಕೃತ ಕೃತ್ಯತೆಯ ಆನಂದ'' ಉಂಟಾಗಿದೆ. ಕೃತಿ ರಚನೆಯಲ್ಲಿ ಭಕ್ತಿ ಪ್ರಧಾನವಾಗಿದೆಯೇ ವಿನಃ ಪಾಂಡಿತ್ಯವಲ್ಲವೆಂಬುದನ್ನು ಸಹೃದಯ ವಾಚಕಮಹಾಶಯರಲ್ಲಿ ನಮ್ರತೆಯಿಂದ ಅರಿಕೆ ಮಾಡಿಕೊಳ್ಳುತ್ತೇನೆ.

ಈ ಗ್ರಂಥದ ಹಸ್ತಪ್ರತಿಯನ್ನು ನೋಡಿ ಉಪಯುಕ್ತ ಸಲಹೆಗಳನ್ನು ನೀಡಿ ಗ್ರಂಥದ ಗುಣಮಟ್ಟವನ್ನು ಹೆಚ್ಚಿಸಿದ ವೀರಶೈವ ಅಧ್ಯಯನ ಸಂಸ್ಥೆಯ ನಿರ್ದೇಶಕರು ಮತ್ತು ಕರ್ನಾಟಕ ವಿಶ್ವವಿದ್ಯಾಲಯದ ಬಸವಪೀಠದ ಮುಖ್ಯಸ್ಥರೂ ಆದ ಡಾ|| ಎಂ.ಎಂ. ಕಲಬುರ್ಗಿಯವರಿಗೆ ನನ್ನ ಅನಂತ ಧನ್ಯವಾದಗಳು.

ಶ್ರೀ ಜಗದ್ಗುರು ಮಹಾಸನ್ನಿಧಿಯವರ ಅಪ್ಪಣೆಯಂತೆ ಅವರ ಅಪಾರ ಕೃಪೆಯಿಂದಾಗಿ ಈ ಗ್ರಂಥವನ್ನು ಮುಗಿಸಿದ್ದಾಯಿತು. ಆದರೆ ಇದು ಬೆಳಕು ಕಾಣುವಂತೆ ಹೆಚ್ಚು ಪರಿಶ್ರಮ ಪಟ್ಟವರು ಶ್ರೀ ಸನ್ನಿಧಿಯ ಆಪ್ತ ಕಾರ್ಯದರ್ಶಿಗಳಾದ ಶ್ರೀ ಶಿವಾನಂದ ಪಟ್ಟಣಶೆಟ್ಟಿ ಎಂ.ಎ. ಅವರಿಗೆ ನನ್ನ ಅನಂತ ಕೃತಜ್ಞತೆಗಳು. ಮುದ್ರಣಕ್ಕೆ ಅಣಿಯಾಗುವಂತೆ ಹಸ್ತಪ್ರತಿಯನ್ನು ಶುದ್ಧವಾಗಿ ಬರೆದುಕೊಟ್ಟವರು ನನ್ನ ಊರಿನ ನಿವೃತ್ತಶಿಕ್ಷಕರಾದ ಶ್ರೀ ಜಿ.ಎಫ್. ಚಿಗರಿಯವರು ಅವರಿಗೆ ನನ್ನ ಅನಂತ ವಂದನೆಗಳು.

ಬೂದಿಹಾಳ ಸಿದ್ಧಲಿಂಗಯ್ಯ ಹೊಸಮಠ
೧೩-೧-೧೯೮೬ ಬೂದಿಹಾಳ, ತಾ. ರೋಣ

*

## ಗದುಗಿನ ತೋಂಟದಾರ್ಯಪೀಠ ಪರಂಪರೆ

ಶ್ರೀ ತ್ರಿಕೂಟೇಶ್ವರ ದಿವ್ಯ ಸಾನ್ನಿಧ್ಯದಿಂದ ಶೈವಕ್ಷೇತ್ರವಾದ ಗದಗು ಶ್ರೀ ವೀರ ನಾರಾಯಣನ ದೆಸೆಯಿಂದ ವೈಷ್ಣವರಿಗೂ ಭಕ್ತಿಯ ಕೇಂದ್ರಸ್ಥಾನವಾಯಿತು. ಆ ಮೇಲೆ ಶ್ರೀ ನಿರಂಜನ ಜಗದ್ಗುರು ತೋಂಟದಾರ್ಯಪೀಠ ಇಲ್ಲಿ ನೆಲೆಸಿದ್ದರಿಂದ ಶೈವ–ವೈಷ್ಣವ ಸಂಸ್ಕೃತಿಗಳೊಡನೆ ವೀರಶೈವ ಸಂಸ್ಕೃತಿಯೂ ಸೇರಿ ಗದಗು ಮೂರೂ ಸಂಸ್ಕೃತಿಗಳ ತ್ರಿವೇಣಿ ಸಂಗಮವೆಂದೆನಿಸಿದೆ.

ಶ್ರೀ ಬಸವಾದಿಪ್ರಮಥರ ನಂತರ ವೀರಶೈವಧರ್ಮಜ್ಯೋತಿಯನ್ನು ಪುನಃ ಹದಿನೈದನೆಯ ಶತಮಾನದಲ್ಲಿ ಉಜ್ವಲಗೊಳಿಸಿದ ಕೀರ್ತಿ ಶ್ರೀ ಮದನಾದಿ ತೋಂಟದ ಸಿದ್ಧಲಿಂಗಯತಿವರ್ಯರಿಗೆ ಸಲ್ಲುತ್ತದೆ. ಅವರು ತಮ್ಮ ಅನುಚರರಾದ ಮೂರುಸಾವಿರ ಶಿವಾನುಭವ ಚರಮೂರ್ತಿಗಳು ಮತ್ತು ಏಳುನೂರು ವಿರಕ್ತರು ಈ ಮಹಾಪಡೆಯೊಡನೆ ಆಸೇತು ಹಿಮಾಚಲಪರ್ಯಂತ ಸಂಚರಿಸಿ, ತಮ್ಮ ಪ್ರಕಾಂಡ ಪಾಂಡಿತ್ಯ ಹಾಗೂ ಪ್ರಖರ ತಪಶ್ಚರ್ಯಗಳಿಂದ ಜನಮನದ ಅಜ್ಞಾನವನ್ನು ದೂರಮಾಡಿ ದ್ವಿತೀಯ ಅಲ್ಲಮಪ್ರಭು ಎಂಬ ಅಗ್ಗಳಿಕೆಗೆ ಪಾತ್ರರಾದರು. ಭಕ್ತಿಭಂಡಾರಿ ಶ್ರೀ ಬಸವಣ್ಣನವರ ನಂತರ ಅಷ್ಟೇ ಮನ್ನಣೆಗೆ ಪಾತ್ರರಾದವರೆಂದರೆ ಶ್ರೀ ಮದನಾದಿ ತೋಂಟದ ಸಿದ್ಧಲಿಂಗಯತಿಗಳು.

ಶ್ರೀ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗನ ಉಜ್ವಲಪರಂಪರೆಯ ದಿವ್ಯ ಪ್ರವಾಹ ನಾಡಿನ ನಾಲ್ಕು ನಿಟ್ಟಿನಲ್ಲಿ ಹರಿದಾಡಿದರೂ ಅದು ಒಂದೆಡೆಗೆ ಸ್ಥಿರವಾಗಿ ನಿಂತದ್ದು ಗದುಗಿನಲ್ಲಿ ಮಾತ್ರ. ಮೊದಲು ಎಡೆಯೂರು ನಂತರ ಡಂಬಳ ಆ ಮೇಲೆ ಗದುಗು ಹೀಗೆ ಗದುಗು ಶ್ರೀ ಜಗದ್ಗುರು ತೋಂಟದಾರ್ಯಪೀಠದ ಮೂರನೆಯ ಕೇಂದ್ರವಾಯಿತು.

ಈ ಪರಂಪರೆಯಲ್ಲಿ ಬಂದ ಮೊದಲಿನ ಕೆಲವು ಪೀಠಾಧೀಶರು ಬೇರೆ ಬೇರೆ ಕಡೆಗೆ ತಮ್ಮ ಪೀಠವನ್ನು ವಿಸ್ತರಿಸಿದರೂ ಗದುಗಿನ ಸಂಬಂಧವನ್ನು ಅವರು ಬಿಟ್ಟಿರಲಿಲ್ಲ. ಮುಂದೆ ಪೀಠಪರಂಪರೆಯಲ್ಲಿ ಬಂದ ಏಳನೆಯವರಾದ ಶ್ರೀ ಜಗದ್ಗುರು ತೋಂಟದ ರಾಚೋಟಿ ಸ್ವಾಮಿಗಳವರು ಮತ್ತು ತರುವಾಯದ ಎಲ್ಲ ಪೂಜ್ಯ ಪಾದರು ಗದುಗಿನ ಸಂಪರ್ಕವನ್ನು ವಿಶೇಷ ಹೊಂದಿದರು. ಆದಾದ ಮೇಲೆ ಹನ್ನೆರಡನೆಯ ಪೀಠದ ಶ್ರೀ ಜಗದ್ಗುರು ತೋಂಟದ ಸದಾಶಿವಸ್ವಾಮಿಗಳವರಿಂದ ಹಿಡಿದು; ಇಲ್ಲಿಯ ವರೆಗಿನ ಯಾವತ್ತು ಶ್ರೀ ಜಗದ್ಗುರು ಸನ್ನಿಧಿಯವರಿಗೆ ಗದಗು ಮುಖ್ಯಕೇಂದ್ರವೇ ಆಯಿತು.

ಶ್ರೀ ತೋಂಟದ ವೃದ್ಧ ತೋಂಟದಾರ್ಯರು :

ಗದುಗಿನ ಜಗದ್ಗುರು ಪೀಠದ ಪುಣ್ಯಪರಂಪರೆಯಲ್ಲಿ ಸುಮಾರು ಒಂದು ಶತಮಾನದ ಹಿಂದೆ ಹದಿನಾಲ್ಕನೆಯವರಾಗಿ ಶ್ರೀ ಜಗದ್ಗುರು ವೃದ್ಧ ತೋಂಟದಾರ್ಯರು ಅಧಿಪತಿಗಳಾದರು. 'ತೋಂಟದಾರ್ಯ' ಎಂಬುದು ಅವರ ಪುಣ್ಯನಾಮ. ಅತೀ ವೃದ್ಧರಾಗುವವರೆಗೆ ಬಾಳಿದುದರಿಂದ 'ವೃದ್ಧ ತೋಂಟದಾರ್ಯ'ರೆಂದೇ ಅವರು ಪ್ರಸಿದ್ಧರಾದರು. ಸ್ಥಾನಮಾನದಿಂದ, ವಯೋಮಾನದಿಂದ ಮತ್ತು ತಪೋಮಾನದಿಂದ ಹಿರಿಮೆಯನ್ನು ಹೊಂದಿದ ಈ ಪೂಜ್ಯಪಾದರು 'ಹಿರೇ(ಹಿರಿಯ)ಸ್ವಾಮಿಗಳು' ಎಂದೇ ಪ್ರಖ್ಯಾತರಾದರು. ಈ ಕಾರಣದಿಂದ ಎಲ್ಲರೂ ಈ ಪೂಜ್ಯ ಶ್ರೀಗಳವರನ್ನು ಭಯ–ಭಕ್ತಿಯಿಂದ ಕಾಣುತ್ತಿದ್ದರು.

ಒಮ್ಮೆ ಶ್ರೀ ವೃದ್ಧತೋಂಟದಾರ್ಯರಿಂದ ಗದುಗಿನ ಮಠದ ಭಕ್ತರಿಗೆ, ಮಠಕ್ಕೆ ತೀವ್ರ ಆಗಮಿಸಲು ಕರೆಹೋಯಿತು. ಅದರಂತೆ ಭಕ್ತರೆಲ್ಲರೂ ಶ್ರೀಮಠಕ್ಕೆ ಧಾವಿಸಿ ಬಂದರು. ಶ್ರೀ ಮಠದ ಸದರಿನ ಮಧ್ಯಭಾಗದಲ್ಲಿ ಗುರುಮಠ, ಅದರ ಮುಂಭಾಗದಲ್ಲಿ ಪಡಸಾಲೆ, ಅದರ ಬಲಭಾಗದ ಗೋಡೆಗೆ ಹೊಂದಿ ಒಂದು ಮಂಚ (ಬೆತ್ತದ ಸೋಫಾ), ಅದರ ಮೇಲೆ ಶ್ರೀವೃದ್ಧ ತೋಂಟದಾರ್ಯರು ದಿಂಬಕ್ಕೆ ಆತುಕೊಂಡು ಮೂರ್ತಮಾಡಿದ್ದರು. ಬಂದ ಭಕ್ತರು ಪೂಜ್ಯ ಜಗದ್ಗುರುಗಳವರಿಗೆ ದೂರದಿಂದಲೇ ಸಾಷ್ಟಾಂಗ ಪ್ರಣಾಮಗೈದು ಕುಳಿತರು. ಹೀಗೆ ಆಗಮಿಸಿದ ಯಾವತ್ತೂ ಭಕ್ತರನ್ನೂ ಉದ್ದೇಶಿಸಿ ಶ್ರೀ ಜಗದ್ಗುರುಗಳವರು ''ಇನ್ನು ನಮ್ಮ ಕೆಲಸ ತೀರಿತು..... ನೀವೆಲ್ಲ ಗುರುಗಳ ಮಕ್ಕಳಾಗಬೇಕೆ ವಿನಃ ಹೆರವರ ಮಕ್ಕಳಾಗಬಾರದು. ಇನ್ನು ಮೇಲೆ ನಮ್ಮ ಪೀಠಾಧಿಕಾರವನ್ನು ನಮ್ಮ ಶಿಷ್ಯರಿಗೆ ಕೊಟ್ಟುಬಿಡುತ್ತೇವೆ'' ಎಂದು ಅಪ್ಪಣೆ ಕೊಡಿಸಿದರು.

ಗುರುಗಳ ಈ ಅನಿರೀಕ್ಷಿತ ನಿರ್ಣಯ ಭಕ್ತರಿಗೆ ಬಹಳ ವಿಚಾರಕ್ಕಿಟ್ಟಿತು. ''ಗುರುಗಳಿಗೆ ಯಾವ ಬೇನೆ–ಬೇಸರಿಕೆಗಳೂ ಇಲ್ಲ. ಆದರೂ ಈಗೇಕೆ ಈ ಪ್ರಸ್ತಾಪ?'' ಎಂಬ ಆಪ್ತಾಲೋಚನೆಗಳು ಭಕ್ತರಲ್ಲಿ ಪ್ರಾರಂಭವಾದವು. ಆದರೆ ಈ ಬಗ್ಗೆ ಗುರುಗಳನ್ನು ಪ್ರಶ್ನಿಸುವ ಧೈರ್ಯ ಯಾರಿಗೂ ಬರಲಿಲ್ಲ. ಕೊನೆಗೆ ಭಕ್ತರೆಲ್ಲರೂ ಗುರುಗಳ ನಿರ್ಧಾರಕ್ಕೆ ಮೌನ ಸಮ್ಮತಿಯನ್ನಿತ್ತರು.

ಆ ಮೇಲೆ ಭಕ್ತರಲ್ಲಿಯ ಒಬ್ಬ ಪ್ರತಿಷ್ಠಿತ ವ್ಯಕ್ತಿ ಗುರುಗಳ ಸಮೀಪಕ್ಕೆ ಬಂದು, ಅವರ ಬಳಿಯಲ್ಲಿಯೇ ನಿಂತಿದ್ದ ಶಿಷ್ಯಸಮುದಾಯದಲ್ಲಿಯ ಒಬ್ಬ ಶಿಷ್ಯನನ್ನು ಸಂಜ್ಞೆಯಿಂದ ಬರಮಾಡಿಕೊಂಡು, ಅವನನ್ನು ಗುರುಗಳ ಮುಂದೆ ತಲೆ ಬಾಗಿಕೊಂಡು ನಿಲ್ಲಲು ಸೂಚಿಸಿದ. ಅದರಂತೆ ಆ ಶಿಷ್ಯನು ಬಂದು ಗುರುಗಳ ಪಾದಕ್ಕೆ ನಮಸ್ಕರಿಸಿ ತಲೆ ಬಾಗಿಕೊಂಡು ನಿಂತ.

ಗುರುಗಳು ಅಂತರ್ಮುಖಿಗಳಾಗಿದ್ದ ಪ್ರಯುಕ್ತ ಅವರ ನೇತ್ರಗಳು ಅರೆ ಮುಚ್ಚಿದ್ದವು. ಇದರಿಂದಾಗಿ ಅವರಿಗೆ ತಮ್ಮೆದುರಿಗೆ ನಿಂತ ಶಿಷ್ಯನಾರು ? ಎಂಬುದು

ತಿಳಿಯಲಿಲ್ಲ. ಹಾಗೇ ಅವರು ತಮ್ಮ ಬಲ ಹಸ್ತವನ್ನು ಆ ಶಿಷ್ಯನ ಮಸ್ತಕದ ಮೇಲೆ ಇಟ್ಟರು. ನಂತರ ಅವರು ಬೆಚ್ಚಿ ಬಿದ್ದವರಂತೆ ಹಿಂದಕ್ಕೆ ಸರಿದರು. ಅವರ ಅರೆಮುಚ್ಚಿದ ಕಣ್ಣುಗಳು ಪೂರ್ಣ ವಿಕಸಿತವಾದವು. ಆಗ ಅವರು ಆ ಶಿಷ್ಯನನ್ನು ಕುರಿತು ''ಯಾರು ? ಮೃತ್ಯುಂಜಯನೇನು ? ನಾನು ಸಿದ್ಧೇಶ್ವರನೆಂದೇ ತಿಳಿದಿದ್ದೆ...... ಆಗಲಿ.......ಆಗಲಿ'' ಎಂದು ಸುತ್ತಲೂ ಕಣ್ಣರಳಿಸಿ ನೋಡಿ ಅಧೋವದನರಾಗಿ ನಿಂತಿದ್ದ ದುಃಖತಪ್ತ ಶ್ರೀ ಸಿದ್ಧೇಶ್ವರ ಚರಮೂರ್ತಿಗಳನ್ನು ಮುಂದಕ್ಕೆ ಕರೆದು ಅವರ ಬೆನ್ನನ್ನು ನೇವರಿಸುತ್ತ ''ಮಗು ! ನಿನಗೆ ಅಧಿಕಾರ ಕೊಡಬೇಕೆಂದೇ ನನ್ನ ಇಚ್ಛೆಇತ್ತು. ಆದರೆ ದೈವೇಚ್ಛೆ ಬೇರೆಯಾಯಿತು'' ಎಂದು ಭಕ್ತರತ್ತ ಹೊರಳಿ ''ಮೃತ್ಯುಂಜಯ ಅಲ್ಪಾಯು. ಅವನ ನಂತರದ ಪಟ್ಟ ಈ ಸಿದ್ಧೇಶ್ವರನಿಗೆ ಲಭಿಸುವಂತೆ ನೀವೆಲ್ಲ ನೋಡಿಕೊಳ್ಳಬೇಕು'' ಎಂದು ಅಪ್ಪಣೆ ಕೊಡಿಸಿ ಶ್ರೀ ಸಿದ್ಧೇಶ್ವರ ಚರಮೂರ್ತಿಗಳ ಮಸ್ತಕದ ಮೇಲೆ ತಮ್ಮ ವರದ ಹಸ್ತವನ್ನಿಟ್ಟು ''ಸಿದ್ಧೇಶ್ವರ ! ನಿನ್ನ ಪಟ್ಟ ನಮ್ಮ ಪೀಠಪರಂಪರೆಯಲ್ಲಿ ಹದಿನಾರನೆಯದಾಗುವದು. ನಿನ್ನ ಕಾಲದಲ್ಲಿ ಈ ತೋಂಟದಾರ್ಯಪೀಠದ ಕೀರ್ತಿ ಹದಿನಾರು ಕಲೆಗಳಿಂದ ಕೂಡಿದ ಚಂದ್ರಮನಂತೆ ನಾಲ್ದೆಸೆಗಳಲ್ಲಿ ಬೆಳಗುವದು. ಈ ವರೆಗಿನ ಪಟ್ಟಗಳು ಯೋಗಿಪಟ್ಟಗಳಾದರೆ ನಿನ್ನದು ರಾಜಪಟ್ಟವಾಗುವದು. ಅಂದರೆ ಸಮಸ್ತ ರಾಜವೈಭವವೇ ಯೋಗಿರಾಜನಾದ ನಿನ್ನ ಸೇವೆಗೆ ನಿಲ್ಲುವದು. ನಿನ್ನ ನಂತರದ ಪಟ್ಟ ! ಯಾತರ ಪಟ್ಟ !! ಅವು ಲಟಪಟ್ಟ !!!'' ಎಂದು ತಮ್ಮ ಚರಮ ವಾಕ್ಯವನ್ನು ಸಾರಿ, ತಮ್ಮ ನಿಜೇಷ್ಟ ಲಿಂಗದಲ್ಲಿ ದೃಷ್ಟಿ ಇಟ್ಟು ''ಸಿದ್ಧಲಿಂಗ...... ಸಿದ್ಧಲಿಂಗ'' ಎಂದು ಗುರುಸ್ಮರಣೆ ಮಾಡುತ್ತಿರುವಾಗ ಅವರ ಮಸ್ತಕದ ಬ್ರಹ್ಮರಂಧ್ರದಿಂದ ಗುಂಡು ಹಾರಿಸಿದಂತೆ ಶಬ್ದವಾಯಿತು. ಭಯಭರಿತರಾದ ಭಕ್ತರು ಗುರು ಸನ್ನಿಧಿಗೆ ಬಂದು ನೋಡುತ್ತಾರೆ ! ಜ್ಯೋತಿ ಸ್ವರೂಪನಾದ ಅವರ ಜೀವಾತ್ಮನು ಅವರ ನಿಜೇಷ್ಟಲಿಂಗದ ಘನತೇಜದಲ್ಲಿ ಆಗಲೇ ಬೆರತು ಬಿಟ್ಟಿದ್ದನು.

ಜೀವನು ಪರಬ್ರಹ್ಮದ ಒಂದು ಅಂಶ. ದೇಹದಲ್ಲಿ ಅವನು ಬ್ರಹ್ಮ ರಂಧ್ರದ ದ್ವಾರವಾಗಿಯೇ ಪ್ರವೇಶಿಸಿರುವನು. ಇಲ್ಲಿ ಅವನ ಜೀವನ ಯಾತ್ರೆಯು ಪೂರೈಸಿದ ನಂತರ ಅವನು ತಾನು ಬಂದ ಬ್ರಹ್ಮರಂಧ್ರದ ದಾರಿಯಿಂದಲೇ ನಿರ್ಗಮಿಸಿ ತನ್ನ ಮೂಲ ಸ್ಥಾನ ಸೇರುವುದು. ಇದು ಯೋಗ ಮಾರ್ಗ. ಯಾವುದೇ ರೋಗರುಜಿನಗಳಿಲ್ಲದೆ ಹೇಳಿ–ಕೇಳಿ ತಮ್ಮ ಜೀವನ ಪರಿಸಮಾಪ್ತಿಗೊಳಿಸುವದು, 'ಶಿವಯೋಗ'ದ ಅನುಸಂಧಾನ ಉಳ್ಳವರಿಗೆ ಅಸ್ವಾಭಾವಿಕವೇನಲ್ಲ. ವಿಲಕ್ಷಣವಾಗಿ ನಡೆದ ಈ ಘಟನೆಯನ್ನು ನೋಡಿದ ಭಕ್ತರು ಮೂಕವಿಸ್ಮಿತರಾದರು. ಶ್ರೀ ಜಗದ್ಗುರು ವೃದ್ಧ ತೋಂಟದಾರ್ಯರ ಅಂತ್ಯೇಷ್ಟಿವಿಧಿ ಪೂರೈಸಿದನಂತರ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳಿಂದ ಪೀಠಾರೋಹಣವಾಗಿ ಅವರು ತಮ್ಮ ಹಿಂದಿನ ಗುರು ಪರಂಪರೆಯಲ್ಲಿ ಹದಿನೈದನೆಯವರೆಂದೆನಿಸಿದರು.

**ಭವಿಷ್ಯ ದಿಟವಾಯಿತು :**

ಗುರುಗಳು ಅಗಲಿದ ಮೇಲೆ ಶ್ರೀ ಸಿದ್ಧೇಶ್ವರ ಚರಮೂರ್ತಿಗಳ ಪರಿಸ್ಥಿತಿ ತುಂಬಾ ಶೋಚನೀಯವಾಯಿತು. ಅವರು ಅನೇಕ ರೀತಿಯಲ್ಲಿ ದ್ವೇಷ, ಅಸೂಯೆಗಳಿಗೆ ಬಲಿಯಾದರು. ಇದು ಎಲ್ಲಿಯವರೆಗೆ ಹೋಯಿತೆಂದರೆ ಅವರಿಗೆ ಒಪ್ಪತ್ತಿನ ಪ್ರಸಾದಕ್ಕೂ ಅಭಾವವಾಯಿತು.

ಒಂದು ದಿನ ಅವರು ಪ್ರಸಾದಕ್ಕೆ ಕುಳಿತಾಗ ಒಬ್ಬರು ಬಂದು ಅವರ ಎಡೆ ಬಟ್ಟಲವನ್ನೇ ಕಿತ್ತೆಸೆದರು. ದ್ವೇಷ–ಅಸೂಯೆಗಳ ಪರಿಣಾಮವೇ ಅಂತಹದು. ಅರಿಷಡ್ವರ್ಗದಲ್ಲಿ 'ಅಸೂಯೆ' ದುರ್ದಮನೀಯವೆಂದು ಹೇಳಲಾಗುತ್ತದೆ.

ಹೀಗೆ ದ್ವೇಷ–ಅಸೂಯೆಗಳಿಂದ ಕೂಡಿದ ವಿಷಾದಿತ ಘಟನೆಗಳು ಪ್ರತಿದಿನ ಜರುಗಿದರೂ ಶ್ರೀ ಸಿದ್ಧೇಶ್ವರ ಚರಮೂರ್ತಿಗಳು ಅವುಗಳಿಂದ ಎಷ್ಟೂ ವಿಚಲಿತರಾಗದೆ ಎಂದಿನಂತೆ ಶಾಂತಿ ಸಹನೆಗಳಿಂದ ಕೂಡಿಕೊಂಡು ಸ್ಥಿತಪ್ರಜ್ಞರಾಗಿದ್ದರು.

ಒಂದು ರೀತಿಯಲ್ಲಿ ಶ್ರೀ ಸಿದ್ಧೇಶ್ವರ ಚರಮೂರ್ತಿಗಳಿಗೆ ಬಂದ ಈ ಎಲ್ಲ ವಿಪತ್ಪರಂಪರೆಗಳು ಅವರಿಗೊಂದು ಮಹಾತಪಸ್ಸೇ ಆಗಿ ಪರಿಣಮಿಸಿ, ಅಪಾರ ಸಹಿಷ್ಣುತೆಯ ಅಮೃತ ಫಲವನ್ನೇ ತಂದುಕೊಟ್ಟವು.

ಕಾಲಚಕ್ರ ಉರುಳಿ ಮೂರು ವರ್ಷಗಳು ಕಳೆದವು. ಶ್ರೀ ಜಗದ್ಗುರು ಮೃತ್ಯುಂಜಯ ಮಹಾಸ್ವಾಮಿಗಳಿಗೆ ರುಜೆ ಆವರಿಸಿ ಅವರು ರುಗ್ಣಶಯನದಲ್ಲಿ ಪವಡಿಸಿದರು. ಅವರಿಗೆ ಬದುಕುವ ಆಶೆಯೇ ಉಳಿದಿರಲಿಲ್ಲ. ಅವರು ತಮ್ಮ ಭಕ್ತರಿಗೆ ಬರ ಹೇಳಿದರು. ಆ ಮೇರೆಗೆ ಭಕ್ತರು ಮಠಕ್ಕೆ ಆಗಮಿಸಿದರು. ಬಂದ ಭಕ್ತರಿಗೆ ಶ್ರೀ ಸನ್ನಿಧಿಯವರು ತಮಗೆ ಅವಸಾನಕಾಲ ಸಮೀಪಿಸಿತೆಂಬುದನ್ನು ತಿಳಿಸಿ, ತಮ್ಮ ಬಳಿಯಲ್ಲಿ ಸೇವೆಗಾಗಿ ನಿಂತಿದ್ದ ಶ್ರೀ ಸಿದ್ಧೇಶ್ವರ ಚರಮೂರ್ತಿಗಳನ್ನು ಹತ್ತಿರಕ್ಕೆ ಕರೆದು, ''ಸಿದ್ಧೇಶ್ವರಾ ! ಮಠದಲ್ಲಿ ನಮಗೆ ಗೊತ್ತಾಗದಂತೆ ಕೆಲವರಿಂದ ನಿನಗೆ ತುಂಬಾ ಹಿಂಸೆಯಾಯಿತೆಂಬುದನ್ನು ಕೇಳಿ ಬಹಳ ವ್ಯಥೆಯಾಯಿತು. ಆದರೂ ನೀನು ನಮ್ಮ ಮೇಲಿನ ಭಕ್ತಿಯಿಂದ ಮತ್ತು ಪೀಠದ ಅಭಿಮಾನದಿಂದ ಆ ವಿಷಯವನ್ನು ಬಹಿರಂಗ ಪಡಿಸದೆ ಅತ್ಯಂತ ಶಾಂತರೀತಿಯಿಂದ ಏನೂ ಆಗದವರಂತೆ ಸಹಿಸಿಕೊಂಡು ಬಂದದ್ದು, ನಿನ್ನಲ್ಲಿಯ ಬಹುದೊಡ್ಡ ಗುಣ. ಈಗ ಅದೆಲ್ಲವನ್ನೂ ದುಃಸ್ವಪ್ನದಂತೆ ಮರೆತುಬಿಡು. ನಾವು ವಹಿಸಿಕೊಂಡ ಪೀಠ ನ್ಯಾಯವಾಗಿ ಗುರುಕೃಪೆಗೆ ಪಾತ್ರನಾದ ನಿನಗೇ ಸಲ್ಲಬೇಕಾಗಿತ್ತು. ಆದದ್ದು ಆಗಿ ಹೋಯಿತು. ಈಗ ನಾವು ಪರಮಗುರುವಿನ ಪವಿತ್ರ ಸಂಕಲ್ಪದಂತೆ ಈ ಪೀಠಾಧಿಕಾರವನ್ನು ಇಲ್ಲಿ ಸಮ್ಮಿಲಿತರಾದ ಯಾವತ್ತೂ ಭಕ್ತರ ಸಮ್ಮುಖದಲ್ಲಿ ನಿನಗೆ ವಹಿಸಿಕೊಡುತ್ತೇವೆ'' ಎಂದು ಹೇಳಿ ಅವರು ಶ್ರೀ ಸಿದ್ಧೇಶ್ವರ ಚರಮೂರ್ತಿಗಳವರ ಮಸ್ತಕದ ಮೇಲೆ ತಮ್ಮ ಬಲ ಹಸ್ತವನ್ನಿಟ್ಟು, ಗುರುಸ್ಮರಣ ಪೂರ್ವಕ ತಮ್ಮ ಇಷ್ಟಲಿಂಗದಲ್ಲಿ ಬಯಲಾದರು.

ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳವರ ಅಂತೇಷ್ಠಿವಿಧಿಗಳೆಲ್ಲ ಪೂರೈಸಿದ ಮೇಲೆ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳವರ 'ಶೂನ್ಯ ಸಿಂಹಾಸನಾರೋಹಣ' ಅತ್ಯಂತ ವೈಭವದಿಂದ ನೆರವೇರಿತು.

**ವಿರತಿಚಂದ್ರ :**

ಶ್ರೀ ಸಿದ್ಧೇಶ್ವರ ಜಗದ್ಗುರುಗಳವರಿಗೆ ಜನ್ಮ ನೀಡಿದ ಶ್ರೇಯಸ್ಸು ಪುರಾಣೇತಿಹಾಸಗಳಲ್ಲಿ ಪ್ರಸಿದ್ಧಿ ಪಡೆದ 'ಲೊಕ್ಕಿಗುಂಡಿ' ಎಂದು ಪ್ರಸಿದ್ಧವಾದ ಇಂದಿನ 'ಲಕ್ಕುಂಡಿ'ಗೆ ಸಲ್ಲುತ್ತದೆ. ನೆಲದ ಗುಣವೇ ಇರಬೇಕು. ಅಂತೆಯೇ ಇಲ್ಲಿ ಅನೇಕ ಮಹಾಪುರುಷರು ಆಗಾಗ ಉದಯಿಸುತ್ತಲೇ ಬಂದಿರುವರು. ಇಲ್ಲಿರುವ ನಾಗಾವಿಮಠ ಶ್ರೀ ಸಿದ್ಧೇಶ್ವರ ಜಗದ್ಗುರುಗಳವರ ಪೂರ್ವಾಶ್ರಮಕ್ಕೆ ಸೇರಿದ್ದು; ಗುರುಸ್ಥಲದ ಈ ಮಠದಲ್ಲಿ ಪೂರ್ವಿಕರ ಗದ್ದುಗೆಗಳು ಈಗಲೂ ಇವೆ.

ಶ್ರೀ ಸಿದ್ಧೇಶ್ವರ ಜಗದ್ಗುರುಗಳು ತಾವಿನ್ನೂ ಬಾಲ್ಯಾವಸ್ಥೆಯಲ್ಲಿರುವಾಗಲೇ ತಮ್ಮ ಮಾತಾಪಿತೃಗಳಿಂದ ಗದುಗಿನ ಶ್ರೀ ಮಠಕ್ಕೆ ಮರಿದೇವರೆಂದು ಸಮರ್ಪಿಸಲ್ಪಟ್ಟರು. ಗದುಗಿನ ಮಠಕ್ಕೆ ಬಂದ ನಂತರ ಅವರ ಪ್ರಾಥಮಿಕ ಅಭ್ಯಾಸ ಮುಗಿದ ಕೂಡಲೇ ಪದ್ಧತಿಯಂತೆ ಶಿವಾನುಭವಶಾಸ್ತ್ರದ ಅಧ್ಯಯನವೂ ಆಯಿತು. ಗುರುಗಳಾದ ಶ್ರೀ ಜಗದ್ಗುರು ವೃದ್ಧ ತೋಂಟದಾರ್ಯರಲ್ಲಿ ಅವರಿಗೆ ಅಪಾರ ಭಕ್ತಿ. ಅಂತೆಯೇ ಅವರ ಪ್ರತ್ಯಕ್ಷ ಸೇವೆಯನ್ನು ತ್ರಿಕರಣ ಪೂರ್ವಕವಾಗಿ ಮಾಡಿ ಅವರ ಅಪಾರ ಅನುಗ್ರಹಕ್ಕೆ ಪಾತ್ರರಾದರು. ಶ್ರೀ ಸಿದ್ಧೇಶ್ವರ ದೇವರಿಗೆ ಆಚಾರ ನಿರ್ವಹಿಸುವ ಶಕ್ತಿ ಪ್ರಾಪ್ತವಾದ ಕೂಡಲೇ ವೃದ್ಧ ತೋಂಟದಾರ್ಯ ಗುರುಗಳಿಂದ ಚರಾಧಿಕಾರ ದಯಪಾಲಿಸಲ್ಪಟ್ಟಿತು.

**ಗೌರವಾನ್ವಿತ ಗಂಭೀರ ವ್ಯಕ್ತಿತ್ವ :**

ಶ್ರೀ ಸಿದ್ಧೇಶ್ವರ ಜಗದ್ಗುರು ಸನ್ನಿಧಿಯವರದು ಆಕರ್ಷಕವಾದ ಗಂಭೀರ ವ್ಯಕ್ತಿತ್ವ. ಜೀವನದಲ್ಲಿ ವ್ಯಕ್ತಿತ್ವಕ್ಕೂ ಒಂದು ವಿಶೇಷ ಮಹತ್ವವಿದೆ. ಪ್ರಭುದೇವರ ವರ್ಣನೆಯನ್ನು ಕಾವ್ಯಗಳಲ್ಲಿ ಕೇಳಿದಾಗ ಈ ಮಾತಿನ ನಿದರ್ಶನ ತಾನೇ ತೋರಿ ಬರುವದು. ಶಕಪುರುಷ ವಿಕ್ರಮಾದಿತ್ಯ ತನ್ನ ಪ್ರತಿಯೊಂದು ಅಂಗಾಂಗಗಳಲ್ಲಿ ರಾಜಲಕ್ಷಣಗಳಿಂದ ಕೂಡಿಕೊಂಡಿದ್ದನೆಂದು ಪ್ರತೀತಿ ಇದೆ. ಇದನ್ನು ಶ್ರೀ ಜಗದ್ಗುರುಗಳವರಿಗೂ ಅನ್ವಯಿಸಿ ಹೇಳಬಹುದು. ಪೌರ್ಣಮಿಯ ಚಂದ್ರನಂತೆ ಶಾಂತವಾದ ಮುಖಮಂಡಲ, ತ್ರಿಪುಂಡ್ರ ಭಸ್ಮಧಾರಣೆಯಿಂದ ಪರಿಶೋಭಿಸುವ ವಿಶಾಲವಾದ ಲಲಾಟ. ಅರಳಿದ ಪುಷ್ಪಗಳಂತಿರುವ ತೇಜಃಪುಂಜವಾದ ನೇತ್ರದ್ವಯ, ನೀಳವಾದ ನಾಸಿಕ, ಮಂದಹಾಸ ಬೀರುವ ಕೆಂದುಟಿಗಳು, ಅವರ ಅಮೋಘ ವ್ಯಕ್ತಿತ್ವದ ರಾಜತೇಜವನ್ನು ಇಮ್ಮಡಿಸಿದ್ದವು. ಕಾಸಿದ ಮಿಸುನಿಯಂತಹ

ಅಂಗಕಾಂತಿಯಿಂದ ಕೂಡಿದ, ಆರು ಅಡಿಗೂ ಮಿಕ್ಕಿದ, ಅಜಾನುಬಾಹು ಶರೀರವು ಅದಕ್ಕನುಗುಣವಾದ ಗಾತ್ರದಿಂದ ಕೂಡಿಕೊಂಡು ನಯನ ಮನೋಹರವಾಗಿದ್ದಿತು. ಈ ಬಗ್ಗೆ ರೋಣ ಗುಲಗಂಜಿಮಠದ ಲಿಂಗೈಕ್ಯ ಗುರುಪಾದಸ್ವಾಮಿಗಳು "ಪಾದಕಮಲ ಎಂಬ ಉಪಮೆ ಗದುಗಿನ ಶ್ರೀ ಜಗದ್ಗುರು ಸಿದ್ಧೇಶ್ವರ ಮಹಾಸ್ವಾಮಿಗಳವರ ಪಾದಕ್ಕೆ ಮಾತ್ರ ಅನ್ವಯಿಸುತ್ತದೆ" ಎಂದು ಆಗಾಗ್ಗೆ ಸಂದರ್ಭಾನುಸಾರ ಉದ್ಗಾರ ತೆಗೆಯುತ್ತಿದ್ದರು. ಸಂಸ್ಥಾನಮಠದ ಉತ್ಸವ ಸಮಾರಂಭಗಳಲ್ಲಿ ಶ್ರೀ ಸಿದ್ಧೇಶ್ವರ ಜಗದ್ಗುರು ಸನ್ನಿಧಿಯವರು ಕೆಳದಿ ಭೂಪಾಲರಿಂದ ಕಾಣಿಕೆಯಾಗಿ ಬಂದ ಹರಳು ಕೆತ್ತಿದ ಹೊನ್ನಿನ ಪಾದುಕೆಗಳನ್ನು ಮೆಟ್ಟಿ, ಪಂಚರತ್ನ ಖಚಿತವಾದ ಚಿನ್ನದ ಪಾದ ಪೆಂಡೆಯನ್ನು ಧರಿಸುತ್ತಿದ್ದರು. ಈ ಅಲಂಕಾರಗಳಿಂದ ಅವರ ಪಾದಗಳಿಗೆ ಭೂಷಣವಾಯಿತೋ ? ಅಥವಾ ಆ ಪಾದಕಮಲಗಳಿಂದ ಈ ಅಲಂಕಾರಗಳಿಗೆ ಶೋಭೆಯುಂಟಾಯಿತೋ ಎಂಬುದನ್ನು ನಿರ್ಣಯಿಸುವದೇ ಕಠಿಣವಾಗಿತ್ತು. ಅಷ್ಟೊಂದು ಅವುಗಳಲ್ಲಿ ಸಾಮ್ಯವಿತ್ತು.

ಶ್ರೀ ಸಿದ್ಧೇಶ್ವರ ಜಗದ್ಗುರುಗಳು ಎಂಭತ್ತೈದು ವರುಷ ಬಾಳಿದರು. ಅವರಿಗೆ ಕೊನೆಯವರೆಗೂ ವೃದ್ಧಾಪ್ಯದ ಯಾವ ಲಕ್ಷಣಗಳೂ ತೋರಿ ಬರಲಿಲ್ಲ. ಅಷ್ಟೊಂದು ಅವರು ತೇಜಸ್ವಿಯಾಗಿದ್ದರು. ಇದಕ್ಕೆ ಅವರು ತಮ್ಮ ಜೀವನದುದ್ದಕ್ಕೂ ತ್ರಿಕರಣ ಪೂರ್ವಕವಾಗಿ ಪಾಲಿಸಿಕೊಂಡು ಬಂದ ಬ್ರಹ್ಮಚರ್ಯವೆಂದು ಹೇಳಬಹುದು. ಇದರೊಡನೆ ಇನ್ನೊಂದು ಪ್ರಧಾನ ಅಂಶವೆಂದರೆ ಅವರಲ್ಲಿಯ ಆನಂದ ಪ್ರವೃತ್ತಿ. ಸ್ವ-ಸ್ವರೂಪ ಜ್ಞಾನದಿಂದ ಉಂಟಾಗುವ ಆನಂದವೇ ಭೂಮಾನಂದ. ಈ ಆನಂದಾನುಭೂತಿಯೇ ಅವರ ಚಿರಯೌವನಕ್ಕೆ ಕಾರಣವೆಂದು ಹೇಳಬಹುದು.

ಸಭೆ ಹಾಗೂ ಪಾಲ್ಕಿ ಉತ್ಸವಗಳು ತಮ್ಮನ್ನೇ ಕುರಿತು ನಡೆಯುತ್ತಿದ್ದರೂ ಶ್ರೀ ಸಿದ್ಧೇಶ್ವರ ಜಗದ್ಗುರುಗಳವರು ಅವುಗಳತ್ತ ಎಷ್ಟೂ ಲಕ್ಷ್ಯವೀಯದೇ ಕೇವಲ ಅಂತರ್ಮುಖಿಗಳಾಗಿರುತ್ತಿದ್ದರು. ಈ ನಿರ್ಲಿಪ್ತ ಮನೋಭಾವಕ್ಕೆ ಮೇಲೆ ಹೇಳಿದ ಅವರ ಸ್ವರೂಪ ಜ್ಞಾನವೇ ಕಾರಣವಾಗಿದೆ. ಈ ಸಮಾರಂಭಗಳು ವ್ಯಕ್ತಿಮಾತ್ರರಾದ ತಮಗಾಗಿ ಇರದೆ ತಮ್ಮ ಮೂಲ ಕರ್ತೃ ಶ್ರೀ ಅನಾದಿ ತೋಂಟದ ಸಿದ್ಧಲಿಂಗನ ಕುರಿತೇ ಇರುವದೆಂದು ಅವರ ಬಲವಾದ ನಂಬಿಕೆ. ಪೀಠಪರಂಪರೆಯಲ್ಲಿ ಬಂದ ತಾವು ಕೇವಲ ಮೂಲ ವಿಗ್ರಹವನ್ನು ಪ್ರತಿನಿಧಿಸುವ ಉತ್ಸವ ಮೂರ್ತಿಗಳೆಂದು ಅವರ ಸಂಪೂರ್ಣ ಗ್ರಹಿಕೆ. ಅಂತೆಯೇ ಅವರು ಆ ಎಲ್ಲ ಸಂದರ್ಭಗಳಲ್ಲಿ ಅನಾದಿ ಸಿದ್ಧಲಿಂಗನ ಧ್ಯಾನದಲ್ಲಿ ತನ್ಮಯರಾಗಿ ಆತನನ್ನು ತಮ್ಮಲ್ಲಿ ಆತ್ಮಸಾಕ್ಷಾತ್ಕಾರ ಮಾಡಿಕೊಂಡು ಬಿಡುತ್ತಿದ್ದರು. ಈ ಮನೋಧರ್ಮ ಅವರಿಗೆ ಅವರ ಗುರುಗಳಾದ ವೃದ್ಧ ತೋಂಟದಾರ್ಯರಿಂದ ಬಳುವಳಿಯಾಗಿ ಬಂದಿತ್ತೆಂಬುದು ಶ್ರೀ ವೃದ್ಧತೋಂಟದಾರ್ಯರ ಚರಿತ್ರೆ (ಶ್ರೀ ಅರ್ಧನಾರೀಶ್ವರ ಪುರಾಣ)ಯಿಂದ ತಿಳಿದುಬರುತ್ತದೆ.

### ವ್ಯಕ್ತಿತ್ವದ ದಿವ್ಯ ಪ್ರಭಾವಗಳು :

ಹತ್ತೊಂಭತ್ತನೆಯ ಶತಮಾನದ ಉತ್ತರಾರ್ಧದಲ್ಲಿ ವೀರಶೈವ ಧರ್ಮ ಜಾಗ್ರತಿಯ ಕಾರಣಪುರುಷರ ಪುಣ್ಯಸ್ಮರಣೆ ನಮ್ಮಲ್ಲಿ ಆದಾಗ ಪ್ರಪ್ರಥಮವಾಗಿ ನಮ್ಮ ಮುಂದೆ ಸುಳಿಯುವ ವ್ಯಕ್ತಿಗಳೆಂದರೆ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳು ಮತ್ತು ದಿವಾನ್–ಬಹದ್ದೂರ ಶ್ರಿ ಅರಟಾಳ ರುದ್ರಗೌಡರು ಪಾಟೀಲ. ವೀರಶೈವ ಮಹಾಸಭೆ ಮತ್ತು ಶಿವಯೋಗಮಂದಿರ ಇವುಗಳು ಶ್ರೀ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರ ಕೊಡುಗೆಗಳಾದರೆ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ ಮತ್ತು ಕರ್ನಾಟಕ ಕಾಲೇಜ ಇವು ಶ್ರೀ ಅರಟಾಳ ರುದ್ರಗೌಡರ ತ್ಯಾಗ ಪರಿಶ್ರಮದ ಫಲಗಳು. ಸಂಸ್ಮರಣೀಯರಾದ ಈ ಉಭಯ ಮಹನೀಯರು ಶ್ರೀ ಜಗದ್ಗುರು ತೋಂಟದ ಸಿದ್ಧೇಶ್ವರ ಮಹಾಸ್ವಾಮಿಗಳವರೊಡನೆ ಇಟ್ಟುಕೊಂಡ ಹಾರ್ದಿಕ ಸಂಬಂಧವನ್ನು ನೋಡಿದರೆ ಆಗ ಶ್ರೀ ಜಗದ್ಗುರು ತೋಂಟದಾರ್ಯಸಂಸ್ಥಾನಮಠ ಇವರೆಲ್ಲರ ಕಾರ್ಯವ್ಯಾಪ್ತಿಯ ಮಹತ್ವದ ವೇದಿಕೆಯಾಗಿತ್ತೆಂದು ತಿಳಿದುಬರುತ್ತದೆ. ಇವರಲ್ಲದೆ ಅನೇಕ ಪ್ರತಿಷ್ಠಿತರು ಇದೇ ರೀತಿಯಲ್ಲಿ ಶ್ರೀಗಳವರ ದರ್ಶನಾಶೀರ್ವಾದ ಪಡೆದಿದ್ದಾರೆ.

### ಶ್ರೀ ಮಲ್ಲಪ್ಪನವರು ವಾರದ, ಸೊಲ್ಲಾಪೂರ :

ಸೊಲ್ಲಾಪೂರದ ಶ್ರೀ ವಾರದ ಮಲ್ಲಪ್ಪನವರು ತಮ್ಮ ಅಲೌಕಿಕ ಸದ್ಗುಣಗಳಿಂದ ಇಪ್ಪತ್ತನೆಯ ಶತಮಾನದಲ್ಲಿ ವೀರಶೈವ ಸಮಾಜಕ್ಕೆ ಪ್ರತಿಷ್ಠೆಯನ್ನು ತಂದು ಕೊಟ್ಟವರು, ಅದರ ಆತ್ಮ ಗೌರವವನ್ನು ಎತ್ತಿ ಹಿಡಿದವರು. ಇದಲ್ಲದೆ ತ್ಯಾಗಭೋಗಗಳೆರಡನ್ನೂ ಸಮಾನವಾಗಿ ಆಚರಿಸಿದ ನಿಷ್ಕಾಮ ಕರ್ಮಯೋಗಿಗಳು. ಒಮ್ಮೆ ಇವರು ಗದುಗಿಗೆ ತಮ್ಮ ಕುಟುಂಬ ಪರಿವಾರದೊಡನೆ ಆಗಮಿಸಿ ಶ್ರೀ ಜಗದ್ಗುರು ಸನ್ನಿಧಿಯಲ್ಲಿ ಜಂಗಮಾರಾಧನೆಯನ್ನು ಮಾಡಿ ಎರಡು ದಿನ ನಿಂತು, ಸಂತೃಪ್ತ ಮನೋಭಾವದಿಂದ ತಮ್ಮ ಊರಿಗೆ ಮರಳಿದರು.

### ಶ್ರೀ ದಾನವೀರ ಸಿರಸಂಗಿ ಲಿಂಗರಾಜರು :

ತ್ಯಾಗವೀರ ಎಂದು ಖ್ಯಾತರಾದ ಶ್ರೀ ಸಿರಸಂಗಿ ಲಿಂಗರಾಜರಿಗೆ ಗದುಗಿನ ಶ್ರೀ ಜಗದ್ಗುರುಗಳವರ ದರ್ಶನಾಪೇಕ್ಷೆ ಬಹು ದಿನಗಳಿಂದ ಇತ್ತು. ಒಮ್ಮೆ ಇದಕ್ಕೆ ಕಾಲ ಕೂಡಿ ಬಂದಿತು. ಅಣ್ಣಿಗೇರಿ ಶ್ರೀ ಶಂಕರಪ್ಪ ದೇಸಾಯಿಯವರ ಮನೆಯಲ್ಲಿಯ ಮದುವೆಗೆ ಆಮಂತ್ರಿತರಾದ ಶ್ರೀ ಲಿಂಗರಾಜರು ಶಿರಸಂಗಿಯಿಂದ ಬಂದರು. ಶ್ರೀ ಜಗದ್ಗುರು ಸನ್ನಿಧಿಗೆ ಸಿದ್ಧಪಡಿಸಿದ ಸಿಂಹಾಸನದ ಪಕ್ಕದಲ್ಲಿ ಶ್ರೀ ಲಿಂಗರಾಜರಿಗೊಂದು ಉಚಿತಾಸನವನ್ನು ಹಾಕಲಾಗಿತ್ತು. ಆದರೆ ಶ್ರೀ ಲಿಂಗರಾಜರು ಆ ಆಸನದ ಮೇಲೆ ಮಂಡಿಸದೆ ''ಶ್ರೀ ಜಗದ್ಗುರು ಸನ್ನಿಧಿಯ ಸಮ್ಮುಖದಲ್ಲಿ ಆಸನದ ಮೇಲೆ ಕುಳಿತುಕೊಳ್ಳಬಾರದು'' ಎಂದು ಬಳಿಯಲ್ಲಿ ಇದ್ದವರಿಗೆ ಹೇಳಿ; ಎಲ್ಲರಂತೆ ತಾವೂ ಕೆಳಗೆ ಕುಳಿತರು.

ಮುಂದೆ ವಿವಾಹ ಮಂಟಪಕ್ಕೆ ಶ್ರೀ ಜಗದ್ಗುರುಗಳವರ ಆಗಮನವಾಯಿತು. ಕೂಡಲೇ ಶ್ರೀ ಶಂಕರಪ್ಪ ದೇಸಾಯಿಯವರು ತಮ್ಮ ಬಂಧು–ಮಿತ್ರರೊಡಗೂಡಿ ಶ್ರೀಗಳವರನ್ನು ಸ್ವಾಗತಿಸಲು ಹೋದರು. ಆಗ ಅವರೊಡನೆ ಶ್ರೀ ಲಿಂಗರಾಜರೂ ಹೋಗಿ ಶ್ರೀ ಜಗದ್ಗುರುಗಳವರನ್ನು ಆದರ ಪೂರ್ವಕವಾಗಿ ಬರಮಾಡಿಕೊಂಡು ಬಂದು, ಸಿಂಹಾಸನದ ಮೇಲೆ ಶ್ರೀ ಸನ್ನಿಧಿಯವರನ್ನು ಮೂರ್ತಗೊಳಿಸಿ ಪುನಃ ತಾವು ಕೆಳಗೆ ಕುಳಿತುಕೊಂಡರು. ಇದನ್ನು ನೋಡಿದ ಶ್ರೀ ಜಗದ್ಗುರು ಸನ್ನಿಧಿಯವರು ಶ್ರೀ ಲಿಂಗರಾಜರು ಶ್ರೀ ಸನ್ನಿಧಿಯವರಿಗೆ ''ಲಗ್ನಕ್ಕೆ ನಾನು ಬಂದದ್ದು ಕೇವಲ ನಿಮಿತ್ಯ ಮಾತ್ರ. ಪಾದ ದರ್ಶನದ ಅಪೇಕ್ಷೆಯೇ ನನಗೆ ಮುಖ್ಯವಾಗಿತ್ತು. ಇಂದು ಅದು ನೆರವೇರಿತು'' ಎಂದು ವಿನಮ್ರತೆಯಿಂದ ಅರಿಕೆ ಮಾಡಿಕೊಂಡರು.

**ಸರ್ ಕೆ. ಪಿ. ಪುಟ್ಟಣ್ಣಶೆಟ್ಟರು :**

ಮೈಸೂರು ಸರಕಾರದ ದಿವಾನರಾಗಿದ್ದ ಸರ್ ಕೆ.ಪಿ. ಪುಟ್ಟಣ್ಣಶೆಟ್ಟರು ಆ ಭಾಗದ ಯಾವತ್ತೂ ಸಾಮಾಜಿಕ ಕಾರ್ಯಗಳಲ್ಲಿ ಸಕ್ರೀಯವಾಗಿ ಪಾಲ್ಗೊಂಡವರಲ್ಲಿ ಅಗ್ರಗಣ್ಯರು. ಶ್ರೀ ಜಗದ್ಗುರುಗಳವರ ಪ್ರಭಾವ ಕೇಳಿ ಅವರು ಬೆಂಗಳೂರಿನಿಂದ ಗದುಗಿಗೆ ಆಗಮಿಸಿ ಶ್ರೀ ಜಗದ್ಗುರುಗಳವರ ದರ್ಶನಾಶೀರ್ವಾದ ಪಡೆದು ಒಂದೆರಡು ದಿನ ನಿಂತು, ಸಮಾಜ ಸುಧಾರಣೆಯ ಬಗ್ಗೆ ಶ್ರೀ ಸನ್ನಿಧಿಯವರೊಡನೆ ಸಾಕಷ್ಟು ವಿಚಾರ ವಿನಿಮಯಮಾಡಿ ಬೆಂಗಳೂರಿಗೆ ಹಿಂದಿರುಗಿದರು. ಹೀಗೆ ಶ್ರೀಯುತರು ಆಗಮಿಸಿದ ಭಾವಚಿತ್ರ ಗದಗ ಸಂಸ್ಥಾನ ಮಠದಲ್ಲಿ ಈಗಲೂ ಇದೆ.

**ರಾಜಾ ಲಖಮಗೌಡ ಸರದೇಸಾಯಿ, ವಂಟಮುರಿ :**

ಶ್ರೀಯುತ ರಾಜಾಲಖಮಗೌಡ ಸರದೇಸಾಯಿ ಅವರು ವಂಟಮುರಿಯ ಸಂಸ್ಥಾನಿಕರು. ಇವರು ದಿಲ್ಲಿಯ ಕಾಯ್ದೆ ಕೌನ್ಸಿಲ್ ಸದಸ್ಯರಾಗಿ ಬಹಳಷ್ಟು ಕೆಲಸ ಮಾಡಿದರು. ಶ್ರೀ ಜಗದ್ಗುರುಗಳವರಲ್ಲಿ ಅವರಿಗೆ ತುಂಬಾ ಭಕ್ತಿ, ಶ್ರೀ ಸನ್ನಿಧಿಯ ದರ್ಶನಕ್ಕೆ ಅವರು ಮೇಲಿಂದ ಮೇಲೆ ಬಂದು ಹೋಗುತ್ತಿದ್ದರು.

**ಶ್ರೀ ಗಿಲಗಂಚಿ ಗುರುಸಿದ್ಧಪ್ಪನವರು :**

ಡೆಪ್ಯೂಟಿ ಕಲೆಕ್ಟರರಾಗಿದ್ದ ಶ್ರೀ ಗಿಲಗಂಚಿ ಗುರುಸಿದ್ಧಪ್ಪನವರು ಶ್ರೀ ಮಠಕ್ಕೆ ಆಗಾಗ್ಗೆ ಆಗಮಿಸಿ ಪೂಜ್ಯರ ಜೊತೆ ಸಮಾಜಸುಧಾರಣೆ ಕುರಿತು ವಿಶೇಷ ವಿಚಾರ ವಿನಿಮಯ ಮಾಡುತ್ತಿದ್ದರು.

**ಶ್ರೀ ಶಾಂತವೀರಪ್ಪನವರು ಮೆಣಸಿನಕಾಯಿ :**

ವೀರಶೈವ ಗಣ್ಯವ್ಯಕ್ತಿಗಳೆನಿಸಿದ್ದ ಮೆಣಸಿನಕಾಯಿ ಶ್ರೀ ಶಾಂತವೀರಪ್ಪನವರು ತಮ್ಮ ಸ್ನೇಹಿತರಾದ ಶ್ರೀ ಅರಟಾಳ ರುದ್ರಗೌಡರೊಡನೆ ಗದುಗಿನ ಸಂಸ್ಥಾನಮಠಕ್ಕೆ

ಮೇಲಿಂದ ಮೇಲೆ ಆಗಮಿಸುತ್ತಿದ್ದರು. ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಕೃತ ಪಾಠಶಾಲಾ ಸಂಬಂಧದಲ್ಲಿ ಶ್ರೀ ಸಿದ್ಧೇಶ್ವರ ಜಗದ್ಗುರುಗಳ ಜತೆ ಸಾಕಷ್ಟು ಪತ್ರ ವ್ಯವಹಾರ ಮಾಡಿದ್ದು ತಿಳಿದು ಬರುತ್ತದೆ.

**ಹೈದರಾಬಾದಿನ ಸಾಲಾರಜಂಗ :**

ಹೈದರಾಬಾದ ನಿಜಾಮರ ಸಂಬಂಧಿಗಳೂ ಅಲ್ಲಿಯ ಸರಕಾರದ ವರಿಷ್ಠರೂ ಆದ ಸಾಲಾರಜಂಗ ಅವರು; ಕೊಪ್ಪಳದ ಶ್ರೀ ಸಂಗಪ್ಪನವರು ಮುದಗಲ್ಲ ಅವರೊಡನೆ ಗದುಗಿಗೆ ಆಗಮಿಸಿ ಶ್ರೀ ಜಗದ್ಗುರುಗಳವರ ದರ್ಶನಾಶೀರ್ವಾದ ಪಡೆದು ಪುನಃ ಹೈದರಾಬಾದಿಗೆ ಹೋದರು.

ಹೀಗೆ ಶ್ರೀ ಜಗದ್ಗುರುಗಳವರ ಪಾದಪಂಕಜಗಳಿಗಾಗಿ ಭಕ್ತ ಮಧುಕರಗಳು ಆಗಮಿಸುತ್ತಿರುವಂತೆ ಶ್ರೀ ಜಗದ್ಗುರುಗಳವರ ಶಿವಯೋಗ ತೇಜಸ್ಸಿನ ಸೆಳೆತದಿಂದಾಗಿ ಅನೇಕ ಶಿವಯೋಗಿವರ್ಯರು ದರ್ಶನೋತ್ಕಂಠಿತರಾಗಿ ಗದುಗಿಗೆ ಬಿಜಯಂಗೈಯ್ಯುತ್ತಿದ್ದರು.

ಅಂಥವರಲ್ಲಿ ಇಪ್ಪತ್ತನೆಯ ಶತಮಾನದಲ್ಲಿ ಸಮಾಜ ಸುಧಾರಣೆಯ ಕಾರಣ ಪುರುಷರಾದ ಲಿಂ. ಶ್ರೀ ಹಾನಗಲ್ಲ ಕುಮಾರಮಹಾಸ್ವಾಮಿಗಳವರು, ಮಹಾ ತಪಸ್ವಿಗಳಾದ ಹಾವೇರಿಯ ಶಿವಬಸವ ಮಹಾಸ್ವಾಮಿಗಳವರು, ವೀರವಿರತರಾದ ಶ್ರೀ ಮ.ನಿ.ಪ್ರ. ಬೀಳೂರ ಗುರುಬಸವ ಮಹಾಸ್ವಾಮಿಗಳವರು ಮತ್ತು ಮಹಾಮಹಿಮರಾದ ಶಲವಡಿ ಗುರುಶಾಂತ ಸ್ವಾಮಿಗಳವರು ಮುಖ್ಯರು. ಅದರಂತೆ ಮಲ್ಲನಕೇರಿಯ ಶಿವಾನುಭವ ಚರವರ್ಯ ಶ್ರೀ ಚನ್ನಬಸವ ಮಹಾಸ್ವಾಮಿಗಳು, ನೊಣವಿನಕೆರೆ ತರೀಕೆರೆ, ನಂದಗಡ, ರಾಮಗಿರಿ, ಕನಕಗಿರಿ, ರೋಣ ಮುಂತಾದ ಶ್ರೀಗಳವರು ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠಕ್ಕೆ ಆಗಾಗ್ಗೆ ಆಗಮಿಸುತ್ತಿದ್ದರು.

**ಶಿವಾನುಭವ ಚರಪರಿವಾರ :**

ಅನಾದಿ ಸಿದ್ಧಲಿಂಗನು ತನ್ನ ಸಹಸ್ರಾರು ಚರವರ್ಯ ಪರಿವೇಷ್ಠಿತನಾದಂತೆ ಶ್ರೀ ಜಗದ್ಗುರುಗಳವರು ಸಹ ಅನೇಕ ಶಿವಾನುಭವಚರ ಸಮೂಹದೊಡನೆ ಇರುತ್ತಿದ್ದರು. ಇಂತಹ ಶಿವಾನುಭವ ಚರಮೂರ್ತಿಗಳನ್ನು ಬೇರೆ ಬೇರೆ ತಮ್ಮ ಶಾಖಾ ಮಠಗಳಿಗೆ ಕಳಿಸಿ, ಒಬ್ಬರನ್ನು ಮಾತ್ರ ತಮ್ಮ ಸನ್ನಿಧಾನದಲ್ಲಿ ಇಟ್ಟುಕೊಂಡಿದ್ದರು. ಅವರನ್ನು ಸನ್ನಿಧಿಚರಮೂರ್ತಿ ಎಂದೇ ಕರೆಯಲಾಗುತ್ತಿತ್ತು.

**ಗದುಗಿನಲ್ಲಿ ಶ್ರೀ ಸನ್ನಿಧಿಚರಮೂರ್ತಿಗಳು :**

ಶ್ರೀ ಜಗದ್ಗುರು ಸನ್ನಿಧಿಯಲ್ಲಿದ್ದವರು ಶ್ರೀ ರೇವಣಸಿದ್ಧ ಚರಮೂರ್ತಿಗಳು. ಇವರಿಗೆ ಸಮಾಜಸೇವೆಯಲ್ಲಿ ತುಂಬಾ ಆಸಕ್ತಿ, ಒಳ್ಳೇ ಆಚಾರಸ್ಥರು. ಅನೇಕ ಕಡೆಗೆ ಪ್ರಸಾದ ನಿಲಯಗಳನ್ನು ಸ್ಥಾಪಿಸಿರುವರಲ್ಲದೆ, ಒಂದೆರಡು ಕಡೆಗೆ ಮಾಧ್ಯಮಿಕ ಶಾಲೆಗಳು ಸ್ಥಾಪನೆಗೊಳ್ಳಲು ಕಾರಣರಾದರು.

ಡಂಬಳದಲ್ಲಿ ಶ್ರೀ ಶಂಕರಪ್ಪ ಚರಮೂರ್ತಿಗಳು :

ಡಂಬಳದಲ್ಲಿದ್ದ ಶ್ರೀ ಶಂಕರಪ್ಪ ಚರಮೂರ್ತಿಗಳು ವಿಚಕ್ಷಣ ವ್ಯಕ್ತಿಗಳು. ವಹಿಸಿಕೊಟ್ಟ ಯಾವದೇ ಕಾರ್ಯದಲ್ಲಿ ತುಂಬಾ ದಕ್ಷರು, ಡಂಬಳವೇ ಕರ್ತೃ ಮಠವಾದ್ದರಿಂದ ಅದಕ್ಕನುಗುಣವಾಗಿ ಎಲ್ಲ ಆಗು–ಹೋಗುಗಳನ್ನು ಗಮನಿಸುತ್ತಿದ್ದರು.

ಅಣ್ಣಿಗೇರಿಯಲ್ಲಿ ಶ್ರೀ ಸಿದ್ದಲಿಂಗಚರಮೂರ್ತಿಗಳು :

ಅಣ್ಣಿಗೇರಿಯಲ್ಲಿ ಸಿದ್ಧಲಿಂಗಚರಮೂರ್ತಿಗಳು ಆಧ್ಯಾತ್ಮ ಜೀವಿಗಳು. ಏಕಾಂತ ಪ್ರಿಯರು. ಇವರ ಪ್ರಭಾವದಿಂದ ಆಕರ್ಷಿತರಾದವರು ಗದುಗಿನ ಪ್ರಸಿದ್ಧ ಶ್ರೀಮಂತರಾದ ಶ್ರೀ ಮೇಲಗಿರಿ ಸಿದ್ಧಲಿಂಗಪ್ಪಶೆಟ್ಟರು. ಆಗ ತುಂಬಾ ಪ್ರಸಿದ್ಧರಾದ ಹುಲಕೋಟೆಯ ಶ್ರೀ ಸಿ.ಸಿ. ಹುಲಕೋಟಿ ಜಡ್ಡಸಾಹೇಬರ ಸಹೋದರಿಯನ್ನೇ ಇವರಿಗೆ ಕೊಟ್ಟಿತ್ತು. ಇದರಂತೆ ಕುಕನೂರ ಹತ್ತಿರ ಇರುವ ಶ್ರೀ ಕ್ಷೇತ್ರ ಗುದ್ನೆಪ್ಪನಮಠದ ವಂಶಸ್ಥರಾದ ಶ್ರೀ ನೀಲಗುಂದ ಗುದ್ನೆಪ್ಪನವರು ಶ್ರೀ ಸಿದ್ಧಲಿಂಗಚರಮೂರ್ತಿಗಳ ಶಿಷ್ಯರಾಗಿ ಬಹುಕಾಲ ಸೇವೆಸಲ್ಲಿಸಿದರು. ಈ ಸೇವಾ ಫಲವೇ ಅವರು ಮುಂದೆ ಮಹಾಮಹಿಮರೆಂದು ಪ್ರಸಿದ್ಧರಾಗಲು ಕಾರಣವಾಯಿತು. ಶ್ರೀ ಗುದ್ನೆಪ್ಪಜ್ಜನವರ ಅಂತಿಮ ಇಚ್ಛೆಯಂತೆ ಸಮಾಧಿ ಅಣ್ಣಿಗೇರಿಯಲ್ಲಿ ಅವರ ಗುರುಗಳ ಗದ್ದುಗೆಯ ಪಕ್ಕದಲ್ಲಿಯೇ ಆಯಿತು.

ಶಿರೋಳದಲ್ಲಿ ಶ್ರೀ ಸದಾಶಿವಚರಮೂರ್ತಿಗಳು :

ಶ್ರೀ ಜಗದ್ಗುರು ತೋಂಟದಾರ್ಯಮಠದಲ್ಲಿ ಎಲ್ಲರಿಗಿಂತ ವಯಸ್ಸಿನಲ್ಲಿ ಹಿರಿಯರಾದವರೆಂದರೆ ಶಿರೋಳದ ಶ್ರೀ ಸದಾಶಿವ ಚರಮೂರ್ತಿಗಳು ಇವರು ಶ್ರೀ ಜಗದ್ಗುರುಗಳಿಗಿಂತಲೂ ವಯಸ್ಸಿನಲ್ಲಿ ಹಿರಿಯರು. ಅದರಂತೆ ವಿರತಿ ಹಾಗೂ ಪೂಜಾ ನಿಷ್ಠತೆಗಳಲ್ಲಿಯೂ ಇವರು ಎಲ್ಲರಿಗಿಂತ ಗೌರವಾನ್ವಿತರಾಗಿದ್ದರು. ಸ್ವತಃ ಶ್ರೀ ಜಗದ್ಗುರುಗಳು ಸಹ ಇವರಿಗೆ ಸಮಾನ ಗೌರವ ಕೊಡುತ್ತಿದ್ದರು. ಇದರಿಂದಾಗಿ ತೋಂಟದಾರ್ಯಪೀಠದ ಎಲ್ಲ ಭಕ್ತಾದಿಗಳು ಶ್ರೀ ಜಗದ್ಗುರುಗಳವರಿಗೆ ಕೊಡುವಷ್ಟೇ ಗೌರವಾದರಗಳನ್ನು ಇವರಿಗೂ ಸಲ್ಲಿಸುತ್ತಿದ್ದರು. ಸ್ವಾಭಾವಿಕವಾಗಿ ಇವರಲ್ಲಿ ಕ್ರಿಯಾಸಿದ್ಧಿಯುಂಟಾದ್ದರಿಂದ ಇವರೊಡನೆ ಎಲ್ಲರೂ ಭಯಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು.

ಇವರು ಮಹಾಮಹಿಮರಾದ ಲಿಂಗೈಕ್ಯ ಶ್ರೀ ಗುರುಬಸವ ಮಹಾಸ್ವಾಮಿಗಳಿರುವಾಗಲೇ ಮಠಕ್ಕೆ ಮರಿದೇವರಾಗಿ ಬಂದರು. ಮುಂದೆ ಅವರಿಂದಲೇ ಚರಪಟ್ಟಾಧಿಕಾರ ಪ್ರಾಪ್ತವಾಯಿತು.

ತಪೋಧನರಾದ ಈ ಚರಮೂರ್ತಿಗಳಿಗೆ ವಾಕ್‌ಸಿದ್ಧಿ ತಮ್ಮ ಗುರುಗಳಿಂದಲೇ ಬಳುವಳಿಯಾಗಿ ಬಂದಂತೆ ಕಾಣುತ್ತದೆ. ಅವರದು ಗುಡುಗಿನಂತಹ ಕಂಠ. ಅವರು ಮಠದಲ್ಲಿ ಮಾತನಾಡಿದರೆ ಮಠದ ಹೊರಗಿದ್ದ ಜನರಿಗೂ ಆ ಧ್ವನಿ ಕೇಳಿಸುತ್ತಿತ್ತು.

ಊರವರು ತಮ್ಮೊಳಗೆ ಎಷ್ಟೇ ಮತಭೇದವಿದ್ದರೂ ಈ ಪೂಜ್ಯರ ವಿಷಯದಲ್ಲಿ ಮಾತ್ರ ಭಯ–ಭಕ್ತಿಯಿಂದಲೇ ವ್ಯವಹರಿಸುತ್ತಿದ್ದರು. ಪೂಜ್ಯರು ಶಿರೋಳ, ಅಸೂಟಿ, ಕರಿಕಿಕಟ್ಟಿ ಹಾಗೂ ಸುಳ್ಳ (ಹೆಬ್ಬಳ್ಳಿ) ಗ್ರಾಮಗಳಲ್ಲಿಯ ಶಾಖಾಮಠಗಳ ಮೇಲ್ವಿಚಾರಣೆಯನ್ನು ಸ್ವತಃ ನೋಡಿಕೊಳ್ಳುತ್ತಿದ್ದರು. ಈಗಿರುವ ಅವರ ಗುರುಗಳ ಗದ್ದುಗೆಯ ಕಟ್ಟಡವೂ ಸಹ ಅವರಿರುವಾಗಲೇ ನಿರ್ಮಾಣವಾಯಿತು.

ಶ್ರೀ ಗಳವರಲ್ಲಿ ಅನುಗ್ರಹ ಶಕ್ತಿ ಅಪಾರವಾಗಿತ್ತು. ಒಮ್ಮೆ ಶಿರೋಳ ಗ್ರಾಮಕ್ಕೆ ಪ್ಲೇಗ ಹಬ್ಬಿಕೊಂಡಿತು. ವಸ್ತ್ರದ ಮನೆತನದವರು ಶಿರೋಳದಲ್ಲಿಯ ತೋಂಟದಾರ್ಯ ಮಠದ ಅಭಿಮಾನಿ ಭಕ್ತರು. ಈ ವಸ್ತ್ರದ ಗುರುಬಸಯ್ಯನವರ ಮಗ ವೀರಬಸಯ್ಯನವರು ಕೇವಲ ಎಂಟು ವರ್ಷದವರಿರುವಾಗ ಅವರಿಗೆ ಪ್ಲೇಗ ಅಂಟಿಕೊಂಡು ಮರಣೋನ್ಮುಖವಾದರು. ಇದರಿಂದ ವಿವಂಚನೆಗೊಳಗಾದ ಶ್ರೀ ಗುರುಬಸಯ್ಯನವರು ಪೂಜ್ಯ ಸದಾಶಿವಸ್ವಾಮಿಗಳವರಲ್ಲಿ ಮಗನ ವಿಷಯ ಅರಿಕೆ ಮಾಡಿಕೊಂಡು ಅವರ ಅಪ್ಪಣೆಯಂತೆ ಆ ಮಗುವನ್ನು ತಂದು ಮಠದ ಗದ್ದುಗೆಯ ಮುಂದೆ ಹಾಕಿದರು. ಆಶ್ಚರ್ಯವೆಂದರೆ ಮುಂದೆ ಕೆಲವೇ ಘಂಟೆಗಳಲ್ಲಿ ಆ ಮಗುವಿನ ಪ್ಲೇಗಿನ ಗಡ್ಡೆಗಳು ಒಡೆದು; ಜ್ವರ ಇಳಿಮುಖವಾಯಿತು. ಈಗ ಆ ಮಗು ವೀರಬಸಯ್ಯನವರು ೮೫ ವರ್ಷದ ಮುಪ್ಪಿನವರಾದರೂ ಒಳ್ಳೇ ಆರೋಗ್ಯದಿಂದಿರುವರು.

ಶಿರೋಳ ಮಠದ ಗದ್ದುಗೆ ತುಂಬಾ ಜಾಗೃತವಾಗಿದ್ದು, ಆ ಭಾಗದ ಜನರಿಗೆ ಭಕ್ತಿಯ ಕೇಂದ್ರವಾಗಿದೆ. ಅಲ್ಲಿರುವ ಮಲಪ್ರಭಾ ನದಿ ಮೊದಲು ಶಿರೋಳ ಗ್ರಾಮದ ಹತ್ತಿರವೇ ಹಾಯ್ದು ಹೋಗುತ್ತಿತ್ತು. ಆಗ ಆ ಗ್ರಾಮದಲ್ಲಿದ್ದ ತೋಂಟದಾರ್ಯಮಠದ ಚರಮೂರ್ತಿಗಳಾದ ಶ್ರೀ ಅನ್ನದಾನ ಮಹಾಸ್ವಾಮಿಗಳವರು ಭಕ್ತರ ಕೋರಿಕೆಯಂತೆ ಮಲಪ್ರಭಾ ನದಿಗೆ ಊರಿಂದ ದೂರದಲ್ಲಿ ಹರಿದು ಹೋಗಲು ಆದೇಶವಿತ್ತರು. ಆ ಮೇರೆಗೆ ಮಲಪ್ರಭಾ ನದಿ ತನ್ನ ಗತಿಯನ್ನೇ ಬದಲಿಸಿ, ಊರಿಗೆ ದೂರದಲ್ಲಿಯೇ ಹರಿದು ಹೋಗಹತ್ತಿತ್ತು. ಇದನ್ನು ನಾವು ಈಗಲೂ ನೋಡಬಹುದು.

ಹೀಗೆ ನದಿ ತನ್ನ ಎಲ್ಲೆಯನ್ನು ಬದಲಿಸಿದ್ದರಿಂದ ಆಗಾಗ್ಗೆ ನದಿಯ ನೆರೆ ಹಾವಳಿಗೆ ತುತ್ತಾಗುತ್ತಿದ್ದ ಆ ಊರ ಶಾನಭೋಗರ ಹೊಲ ನೆರೆಹಾವಳಿಯಿಂದ ಪಾರಾಯಿತು. ಈ ಶಾನಭೋಗರು ತೊನ್ನು ರೋಗದಿಂದ ಬಳಲುತ್ತಿದ್ದು, ಮಹಾತ್ಮರಾದ ಶ್ರೀ ಅನ್ನದಾನ ಮಹಾಸ್ವಾಮಿಗಳವರ ಕೃಪೆಯಿಂದ ತಮ್ಮ ತೊನ್ನು ರೋಗವನ್ನು ಕಳೆದುಕೊಂಡು ತಮ್ಮ ಭಕ್ತಿಯ ದ್ಯೋತಕವಾಗಿ ಊರ ಹತ್ತಿರ ಇರುವ ತಮ್ಮ ಹೊಲವನ್ನು ಮಹಾಸ್ವಾಮಿಗಳವರಿಗೆ ದಾನವಾಗಿ ಕೊಟ್ಟರು. ಅವರು ಬ್ರಾಹ್ಮಣರಾದರೂ ಇಂದಿಗೂ ಕೂಡಾ ಅವರ ಮನೆತನದವರು ಶ್ರೀಮಠಕ್ಕೆ ಅಷ್ಟೇ ಭಕ್ತಿ, ವಿಶ್ವಾಸಗಳಿಂದ ನಡೆದುಕೊಳ್ಳುತ್ತಿರುವರು.

ಶ್ರೀ ಅನ್ನದಾನ ಸ್ವಾಮಿಗಳವರು ಭಕ್ತರ ಇಚ್ಛೆಯಂತೆ ಇದೇ ಹೊಲದಲ್ಲಿ ಮಠ ಕಟ್ಟಿಸಲು ಸ್ಥಳ–ಪರಸ್ಥಳಗಳಲ್ಲಿ ಬಿಕ್ಷೆ ಮಾಡುತ್ತ ಮುಷ್ಟಿಗೇರಿ ಗ್ರಾಮಕ್ಕೆ ಬಂದರು. ಆ ಗ್ರಾಮದ ಪ್ರಮುಖರೊಡನೆ ಶ್ರೀಗಳವರು ಅಲ್ಲಿಯ ದ್ಯಾಮವ್ವನ ದೇವಸ್ಥಾನದ ಮುಂದೆ ಹಾಯ್ದು ಹೋಗುವಾಗ ಥಟ್ಟನೇ ನಿಂತು ಭಕ್ತರ ಕಡೆಗೆ ಹೊರಳಿ 'ದ್ಯಾಮವ್ವ ಪಟ್ಟಿ ಕೊಡತೀನಿ ಅಂತಾಳ' ಎಂದು ಹೇಳಿದರು. ಭಕ್ತರಿಗೆ ಇದು ತುಂಬಾ ವಿನೋದವಾಗಿ ಕಂಡಿತು. ಅವರೆಲ್ಲ ನಗುತ್ತ 'ಹಾಗೆ ಆಗಲಿ ಬುದ್ದಿ' ಎಂದು ಹೇಳಿ ಶ್ರೀಗಳೊಡನೆ ದ್ಯಾಮವ್ವನ ಗರ್ಭಗುಡಿಯ ಮುಂದೆ ಹೋಗಿ ನಿಂತರು. ಕೂಡಲೇ ಒಳಗಿನಿಂದ ಒಂದು ಅರಿವೆಯ ಗಂಟು ತೂರಿ ಬಂದು ಶ್ರೀಗಳವರ ಪಾದದಡಿಯಲ್ಲಿ ಬಿದ್ದಿತು. ತೆಗೆದು ನೋಡಿದಾಗ ಅದರಲ್ಲಿ ದ್ಯಾಮವ್ವನ ಬಂಗಾರದ ದಾಗೀನುಗಳೆಲ್ಲ ಇದ್ದವು. ಅವುಗಳಿಂದಲೇ ಶಿರೋಳ ಮಠ ಕಟ್ಟಲ್ಪಟ್ಟಿತು. ಇಂದಿಗೂ ಶಿರೋಳ ಮಠದ ಜಾತ್ರೆಯ ಕಾಲದಲ್ಲಿ ಮಠದಿಂದ ಮುಷ್ಟಿಗೇರಿ ದ್ಯಾಮವ್ವನಿಗೆ ಒಂದು ಸೀರೆ ಮತ್ತು ಒಂದು ಖಣ ಕಳಿಸುವ ಸಂಪ್ರದಾಯವಿದೆ.

**ಇಟಗಿಯಲ್ಲಿ ಶ್ರೀ ಗುರುಬಸವಚರಮೂರ್ತಿಗಳು :**

ಶ್ರೀವೃದ್ಧ ತೋಂಟದಾರ್ಯರ ಕಾಲಕ್ಕೆ ಕುಕನೂರ ಬಳಿ ಇರುವ ಇಟಗಿ ಗ್ರಾಮದ ಶಾಖಾಮಠದಲ್ಲಿ ಇನ್ನೋರ್ವ ಶ್ರೀ ಸದಾಶಿವಚರಮೂರ್ತಿಗಳಿದ್ದರು. ಅವರ ತರುವಾಯ ಅದೇ ಸ್ಥಾನಕ್ಕೆ ಶ್ರೀ ಗುರುಬಸವಚರಮೂರ್ತಿಗಳು ಬಂದರು. ಅವರೂ ಅದೇ ಊರಿನ ಕಳ್ಳಿಮಠದವರು. ಶ್ರೀ ಗುರುಬಸವಚರಮೂರ್ತಿಗಳು ಶಿವಾನುಭವ ಶಾಸ್ತ್ರ ತುಂಬಾ ಬಲ್ಲಿದವರು. ಕಾಯಕ ನಿಷ್ಠರಾದ ಇವರು ಇಟಗಿ ಸುತ್ತಲಿನ ಐದು ಶಾಖಾ ಮಠಗಳ ಆಡಳಿತವನ್ನು ಒಳ್ಳೇ ದಕ್ಷತೆಯಿಂದ ನೋಡುತ್ತಿದ್ದರು. ಇಳಕಲ್ಲಿನ ಮಹಾ ತಪಸ್ವಿಗಳಾದ ಶ್ರೀ ವಿಜಯಮಹಾಂತ ಸ್ವಾಮಿಗಳಲ್ಲಿಗೆ ಹೋಗಿ ಶಿವಯೋಗ ಹಾಗೂ ಶಿವಾನುಭವಗಳ ಸೂಕ್ಷ್ಮ ರಹಸ್ಯಗಳನ್ನು ತಿಳಿದುಕೊಂಡು ಬಂದಿದ್ದರು.

**ಮುಂಡರಗಿಯ ಶ್ರೀ ಅನ್ನದಾನಚರಮೂರ್ತಿಗಳು :**

ಮುಂಡರಗಿಯಲ್ಲಿದ್ದ ಶ್ರೀ ಅನ್ನದಾನಮಹಾಸ್ವಾಮಿಗಳವರು ತಂಬ್ರಳ್ಳಿಯವರು. ಮಹಾ ತಪಸ್ವಿಗಳಾದ ಗದುಗಿನ ಶ್ರೀ ವೃದ್ಧ ತೋಂಟದಾರ್ಯರ ಜನ್ಮ ಭೂಮಿಯೂ ಅದೇ ಆಗಿದೆ. ಹೀಗಾಗಿ ಇದೊಂದು ಪುಣ್ಯಗ್ರಾಮ. ಶ್ರೀ ಅನ್ನದಾನಚರಮೂರ್ತಿಗಳ ಪೂರ್ವಾಶ್ರಮದ ಹೆಸರು ಮೃತ್ಯುಂಜಯ, ಇನ್ನೂ ಬಾಲಕರಿರುವಾಗಲೇ ಇವರು ತಮ್ಮ ತಾಯಿಯಿಂದ ಶ್ರೀ ಗದುಗಿನ ತೋಂಟದಾರ್ಯಮಠಕ್ಕೆ ಮರಿದೇವರು ಎಂದು ಅರ್ಪಿಸಲ್ಪಟ್ಟರು. ಸ್ವಭಾವತಃ ಮುಗ್ಧರಾದ ಇವರಿಗೆ ಗದುಗಿನ ಮಠದಲ್ಲಿದ್ದ ಎಲ್ಲ ಗದ್ದುಗೆಗಳ ಸೇವಾಕಾರ್ಯ ವಹಿಸಲ್ಪಟ್ಟಿತು. ಹೀಗೆ ಸ್ವೀಕೃತವಾದ ಗದ್ದುಗೆಗಳ

ಸೇವೆಯನ್ನು ಅವರು ಬೆಳಗಾಗುವುದರೊಳಗಾಗಿ ಮನಮುಟ್ಟಿ ಮಾಡುತ್ತಿದ್ದರು. ಮುಂದೆ ಇವರಿಗೆ ವಾಕ್ ಸಿದ್ಧಿ ಉಂಟಾದ ನಂತರ ಈ ಶಕ್ತಿ ತಮಗೆ ಪ್ರಾಪ್ತವಾಗಲು ತಾವು ಮರಿದೇವರಿದ್ದಾಗ ಮನಃಪೂರ್ವಕವಾಗಿ ಮಾಡಿದ ಗದ್ದುಗೆಗಳ ಸೇವಾ ಫಲವೇ ಇದಾಗಿದೆ ಎಂದು ಹೃದಯ ತುಂಬಿ ಹೇಳುತ್ತಿದ್ದರು.

ಇವರಲ್ಲಿದ್ದ ವಿರತಿ ಮತ್ತು ಮಕ್ಕಳಂತಹ ನಿರ್ಮಲವಾದ ಮನಸ್ಸನ್ನು ನೋಡಿ ಸಂಪ್ರೀತರಾದ ಶ್ರೀ ಜಗದ್ಗುರು ವೃದ್ಧ ತೋಂಟದಾರ್ಯರು ಇವರಿಗೆ ಮುಂಡರಗಿಯ ಅನ್ನದಾನಚರಪಟ್ಟವನ್ನು ಅನುಗ್ರಹಿಸಿ ಮುಂಡರಗಿಯ ಶ್ರೀಮಠಕ್ಕೆ ಕಳಿಸಿಕೊಟ್ಟರು. ಅಂದಿನಿಂದ ಇವರು ಮುಂಡರಗಿ ಶ್ರೀ ಅನ್ನದಾನಮಹಾಸ್ವಾಮಿಗಳು ಎಂದೇ ಪ್ರಸಿದ್ಧರಾದರು.

ಹೆಣ್ಣುಮಕ್ಕಳನ್ನು ಕಂಡಾಗ ಆಗುವ ಯಾವ ವಿಕಾರವೂ ಇವರಲ್ಲಿ ಉಂಟಾಗುತ್ತಿರಲಿಲ್ಲ. ಆದ್ದರಿಂದ ಎಲ್ಲ ಹೆಣ್ಣು ಮಕ್ಕಳೂ ಇವರಿಗೆ ಅಪ್ಪಾ–ಅಪ್ಪಾ ಎಂದು ಮುಗಿಬೀಳುತ್ತಿದ್ದರು. ಹೀಗೆ ಹೆಣ್ಣಿನ ವ್ಯಾಮೋಹ ಜಯಿಸಿದ ಇವರು ಮಣ್ಣಿನ ವ್ಯಾಮೋಹದಿಂದಂತೂ ಬಹುದೂರೇ ಉಳಿದರು. ಇನ್ನು ಕಾಂಚನದ ಬಗ್ಗೆ ಹೇಳುವದಾದರೆ ಇವರಿಗೆ, ಒಂದು ರೂಪಾಯಿಯ ಚಿಲ್ಲರೆಗಳನ್ನು ಸಹ ಎಣಿಸಲಿಕ್ಕೆ ಬರುತ್ತಿರಲಿಲ್ಲ. ಇಷ್ಟೊಂದು ಮುಗ್ಧ ಸ್ವಭಾವ ಇವರದು.

ಪ್ರಪಂಚದಲ್ಲಿ ಹೆಣ್ಣು–ಹೊನ್ನು–ಮಣ್ಣು ಇವುಗಳ ಮೋಹವೇ ಮಾಯಾಪಾಶವೆನಿಸಿದೆ. ಅದನ್ನು ಅತಿಗಳೆದ ಮಹನೀಯರು ಸಾಕ್ಷಾತ್ ಭಗವಾನ ಸ್ವರೂಪರೇ ಆಗಿರುವರು. ಆದ್ದರಿಂದ ಶ್ರೀ ಅನ್ನದಾನಮಹಾಸ್ವಾಮಿಗಳವರು ತಮ್ಮ ಪೂರ್ವಾಶ್ರಮದ ಹೆಸರಿಗನುಗುಣವಾಗಿ ಪ್ರತ್ಯಕ್ಷ ಮೃತ್ಯುಂಜಯರೇ ಆಗಿದ್ದರು.

ಯಾರಾದರೂ ವಿರಕ್ತರು ಹೆಣ್ಣು–ಹೊನ್ನು–ಮಣ್ಣುಗಳ ಆಮಿಷದಿಂದ ಭ್ರಷ್ಟತೆಯನ್ನು ಹೊಂದಿದ್ದನ್ನು ಕೇಳಿ ತಿಳಿದರೆ ಇವರು ತಮ್ಮ ತೊಡೆಯನ್ನು ಚಪ್ಪರಿಸಿ "ನೋಡು ! ಈ ತಂಬ್ರಳ್ಳಿಯ ವಿರಕ್ತ ಹೇಗಿದ್ದಾನೆ ?" ಎಂದು ಗಹಗಹಿಸಿ ನಗುತ್ತ ಹೇಳುತ್ತಿದ್ದರು. ಇಷ್ಟೊಂದು ಬಲವಾದ ಆತ್ಮವಿಶ್ವಾಸ ಅವರಿಗೆ ಇತ್ತು. ಇಂತಹ 'ವಿರತಿ' ಬಲಿದುದರಿಂದಲೇ ಇವರಲ್ಲಿ 'ವಾಕ್ಸಿದ್ಧಿ'ಯೇ ಮುಂತಾದ ಯೋಗೈಶ್ವರ್ಯಗಳು ಪ್ರಾಪ್ತವಾಗಿದ್ದವು. ಈ ನಿಗ್ರಹಾನುಗ್ರಹ ಶಕ್ತಿ ಅವರಲ್ಲಿ ಇದ್ದುದರಿಂದ ಮುಂಡರಗಿಯ ಭಕ್ತರೆಲ್ಲರೂ ಅವರಿಂದ ಪ್ರಭಾವಿತರಾದರು. ಈ ಭಕ್ತರ ನೆರವಿನಿಂದಲೇ ಹಳೆ ಮಠದ ಜೀರ್ಣೋದ್ಧಾರ ಕಾರ್ಯಪ್ರಾರಂಭವಾಗಿ ಅದು ಒಳ್ಳೇ ನಯನ ಮನೋಹರವಾಗಿ ಕಂಗೊಳಿಸಹತ್ತಿತ್ತು.

ಮೊದಲು ಸಾಮಾನ್ಯ ಸ್ಥಿತಿಯಲ್ಲಿದ್ದ 'ಅನ್ನದಾಸೋಹ' ಇವರ ಕಾಲದಲ್ಲಿ ಬೃಹತ್ ಪ್ರಮಾಣದಲ್ಲಿ ಬೆಳೆಯಿತು. ದಾಸೋಹದಲ್ಲಿ 'ಪ್ರಸಾದ' ಸ್ವೀಕರಿಸುವವರ ಬಗ್ಗೆ ಇವರಿಗೆ ಶ್ರೇಷ್ಠ–ಕನಿಷ್ಠ ಎಂಬ ಭೇದ ಭಾವ ಇರುತ್ತಿರಲಿಲ್ಲ. ಎಲ್ಲರಿಗೂ ತೃಪ್ತಿ

ಪಡಿಸುವದರಲ್ಲಿಯೇ ಇವರಿಗೆ ಎಲ್ಲಿಲ್ಲದ ಆನಂದ. ಇವರ ಸಹ ಪಂಕ್ತಿಗಳಲ್ಲಿ ಕುಳಿತವರಿಗಿಂತಲೂ ಸಾಕುಬೇಕಾಗಿ ಹೋಗುತ್ತಿತ್ತು. ಒಮ್ಮೊಮ್ಮೆ ತಾವೇ ಸ್ವತಃ ಎಡೆ ಬಡಿಸುತ್ತಿದ್ದರು.

ಶ್ರೀಗಳು ಆಗಾಗ ಗದುಗಿಗೆ ದಯಮಾಡಿಸುವದು ವಾಡಿಕೆ. ಗದುಗಿನ ಶ್ರೀಮಠದಲ್ಲಿಯ ಅವರಿರುವ ಖೋಲಿಗೆ 'ಚರಮೂರ್ತಿಗಳ ಖೋಲಿ' ಎಂದು ಹೆಸರು.

ಒಮ್ಮೆ ಜಾತ್ರೆಯ ಸಮಯ. ಟಾಂಗಾದಲ್ಲಿ ಅವರು ಗದುಗಿನ ಒಂದು ಓಣಿಯಲ್ಲಿ ದಯಮಾಡಿಸುತ್ತಿದ್ದರು. ಭಕ್ತಸಮೂಹ ಅವರ ಟಾಂಗಾದ ಹಿಂದೆಯೇ ಹೊರಟಿತ್ತು. ಇದನ್ನು ಕಂಡು ಓಣಿಯಲ್ಲಿಯ ಒಬ್ಬ ಮಹಿಳೆ ತನ್ನ ಬಾಗಿಲದಲ್ಲಿಯೇ ನಿಂತು ಶ್ರೀಗಳಿಗೆ ಭಕ್ತಿಯಿಂದ ಕೈ ಮುಗಿದಳು. ಇದನ್ನು ಕಂಡು ಟಾಂಗಾದ ಹಿಂದೆ ಇದ್ದ ಭಕ್ತರು ಆ ಹೆಣ್ಣು ಮಗಳಿಗೆ ''ಕಾಣಿಕೆಕೊಡು. ಹಾಗೆ ಕೈ ಮುಗಿದರೇನಂತೆ'' ಎಂದು ಹಾಸ್ಯವಾಗಿ ಹೇಳಿದರು. ಅದಕ್ಕೆ ಮತ್ತೆ ಕೆಲವು ವಿನೋದಿ ಭಕ್ತರು ''ಹಾಗೇ ಹೇಗೆ ಕೊಡುತ್ತಾಳೆ ? ಮನೆಯಲ್ಲಿ ಶ್ರೀಗಳು ಪಾದ ಹಾಕಿದರೆ ಕೊಡುತ್ತಾಳೆ'' ಎಂದು ವಿನೋದ ಮಾಡಿದರು. ಅದನ್ನು ಕೇಳಿ ಟಾಂಗಾದಲ್ಲಿದ್ದ ಶ್ರೀಗಳು ಭಕ್ತರನ್ನುದ್ದೇಶಿಸಿ ''ಮಗಳು ಕರೀತಾಳ ಹೋಗತೀನಿ. ಅದರೊಳಗೇನಿದೆ ?'' ಎಂದು ಹೇಳಿ ಟಾಂಗಾದಿಂದ ಇಳಿದು ಆಕೆಯ ಮನೆಯಲ್ಲಿ ಪ್ರವೇಶಿಸಿದರು. ಆಗ ಆ ಹೆಣ್ಣುಮಗಳಿಗೆ ಏನು ಮಾಡಬೇಕೆಂಬುದೇ ತಿಳಿಯಲಿಲ್ಲ. ಶ್ರೀಗಳವರೇ ಮುಂದಾಗಿ ಅಲ್ಲಿದ್ದ ಪಲ್ಲಂಗದ ಮೇಲೆ ಮೂರ್ತಮಾಡಿ ಬಿಟ್ಟರು. ನಂತರ ಹೊರಗಿದ್ದ ಭಕ್ತರೂ ಒಳಗೆ ಬಂದರು. ಆ ಬಳಿಕ ಆ ಹೆಣ್ಣು ಮಗಳು ಭಸ್ಮ–ಪತ್ರಿ–ಪುಷ್ಪಗಳಿಂದ ಶ್ರೀಗಳವರ ಪಾದಪೂಜೆಯನ್ನು ಮಾಡಿ ಅವರ ಕೊರಳಿಗೆ ಪುಷ್ಪಮಾಲೆಯನ್ನು ಅಲಂಕರಿಸಿ, ವೀಳ್ಯೆಯೊಡನೆ ಐದು ರೂಪಾಯಿಗಳನ್ನು ಭಕ್ತಿ ಕಾಣಿಕೆಯಾಗಿ ಸಲ್ಲಿಸಿದಳು. ಅನಿರೀಕ್ಷಿತವಾಗಿ ಒದಗಿದ ಶ್ರೀಗಳ ದರ್ಶನ ಹಾಗೂ ಸೇವೆ ಸಿಕ್ಕಿದ್ದಕ್ಕೆ ಆಕೆಯ ಕಂಠವು ಉಕ್ಕಿಬಂದು ಆನಂದ ಬಾಷ್ಪಗಳು ಉದರಿದವು.

ಇದಾದ ಮೇಲೆ ಶ್ರೀಗಳು ಮಠಕ್ಕೆ ದಯಮಾಡಿಸಿದರು. ಅವರೊಡನೆ ಭಕ್ತರೂ ಬಂದರು. ಮಠಕ್ಕೆ ಬಂದ ಶ್ರೀಗಳು ಶ್ರೀ ಜಗದ್ಗುರು ಸನ್ನಿಧಿಯವರಿದ್ದ ಸದರಿಗೆ ಹೋಗಿ, ಬಂದ ಭಕ್ತಿ ಕಾಣಿಕೆಯನ್ನು ಸಮರ್ಪಿಸಿ ಸಾಷ್ಟಾಂಗ ಹಾಕಿ ಎದ್ದುನಿಂತರು. ಅನ್ನದಾನ ಮಹಾಸ್ವಾಮಿಗಳ ಕೊರಳಲ್ಲಿ ಭಕ್ತೆ ಹಾಕಿದ ಪುಷ್ಪಮಾಲೆ ಹಾಗೇ ಇತ್ತು. ಶ್ರೀ ಜಗದ್ಗುರುಗಳಿಗೆ ಏನೋ ಅನುಮಾನ ಬಂದು ಭಕ್ತಸಮೂಹದತ್ತ ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿದರು. ಆಗ ಭಕ್ತರಲ್ಲಿ ಒಬ್ಬರು ''ಶ್ರೀಗಳು ಪಾತರದವರ ಮನೆಗೆ ಹೋಗಿ ಕಾಣಿಕೆ ಸ್ವೀಕರಿಸಿದರು'' ಎಂದು ಹಾಸ್ಯಮಯವಾಗಿ ಅರಿಕೆ ಮಾಡಿಕೊಂಡರು. ಇದನ್ನು ಕೇಳಿದ ಶ್ರೀ ಅನ್ನದಾನಸ್ವಾಮಿಗಳು ಶ್ರೀ ಜಗದ್ಗುರು ಸನ್ನಿಧಿಗೆ ''ಮಗಳು ಕರೆದಳು, ಹೊದೆ. ಅದರಲ್ಲೇನು ತಪ್ಪಿದೆ ?'' ಎಂದು ಸಣ್ಣ

ಮಕ್ಕಳಂತೆ ಬಿನ್ನವಿಸಿದರು. ಆಗ ಶ್ರೀ ಜಗದ್ಗುರುಗಳ ಮಂದಹಾಸ ಬೀರುತ್ತ ಭಕ್ತರನ್ನು ನೋಡಿ ''ಇವರು ಶ್ರೀ ಬಸವಣ್ಣನವರ ಕಾಲದ ಮುಗ್ಧಸಂಗಯ್ಯನವರು. ಇವರಿಗೆ ಈಕೆ ವೇಶ್ಯೆ, ಈಕೆ ಕುಲೀನೆ ಎಂಬ ತಾರತಮ್ಯವೇ ಇಲ್ಲ. ಇನ್ನು ಮುಂದೆ ಹೀಗೆಲ್ಲ ಮಾಡಬೇಡಿ'' ಎಂದು ವಾತ್ಸಲ್ಯಪೂರಿತ ಎಚ್ಚರಿಕೆ ನೀಡಿದರು.

ಕೋಟಿ ತೋಟಪ್ಪನವರು ಪುಣೆಯಲ್ಲಿ ಎಲ್.ಎಲ್.ಬಿ. ಪರೀಕ್ಷೆಗೆ ಕುಳಿತು ಆದೇ ಗದುಗಿಗೆ ಬಂದಿದ್ದರು. ಅವರೊಮ್ಮೆ ಮಠಕ್ಕೆ ಬಂದಾಗ ಮುಂಡರಗಿ ಶ್ರೀ ಅನ್ನದಾನ ಮಹಾಸ್ವಾಮಿಗಳವರ ವಾಸ್ತವ್ಯ ಮಠದಲ್ಲಿಯೇ ಇತ್ತು. ಶ್ರೀ ತೋಟಪ್ಪನವರು ಶ್ರೀ ಅನ್ನದಾನ ಸ್ವಾಮಿಗಳಿಗೆ ನಮಸ್ಕರಿಸಿ ''ಬುದ್ಧಿ! ಎಲ್.ಎಲ್.ಬಿ. ಪರೀಕ್ಷೆ ಕೊಟ್ಟು ಬಂದಿದ್ದೇನೆ'' ಎಂದು ಇಷ್ಟೇ ಅರಿಕೆ ಮಾಡಿ ಕೈಮುಗಿದುಕೊಂಡು ನಿಂತರು. ಅದಕ್ಕೆ ಶ್ರೀಗಳು ''ಈ ಸಲ ನೀನು ಬರೆದದ್ದು ನಪಾಸಾಗತೈತಿ. ಮುಂದಿನ ವರುಷ ಬರೆದು ಬಾ. ಪಾಸಾಗತೈತಿ'' ಎಂದು ಅಪ್ಪಣೆ ದಯಪಾಲಿಸಿದರು. ಆದರಂತೆ ಆ ವರ್ಷ ಶ್ರೀ ಕೋಟಿಯವರು 'ಲಾ' ಪರೀಕ್ಷೆಯಲ್ಲಿ ಉತ್ತೀರ್ಣರಾಗಲಿಲ್ಲ. ಮುಂದಿನ ವರ್ಷವೇ ಶ್ರೀಗಳ ಅಪ್ಪಣೆ ಕೊಡಿಸಿದಂತೆ ಅವರು ತೇರ್ಗಡೆ ಹೊಂದಿದರು. ಈ ವಿಷಯವನ್ನು ಶ್ರೀ ಕೋಟಿ ವಕೀಲರು ಮಠದ ಕಾರ್ಯಕ್ರಮ ಒಂದರಲ್ಲಿ ಭಾಷಣ ಮಾಡುವಾಗ ಶೃತಪಡಿಸಿದರು.

ಈ ಲೇಖಕನಿಗೂ ಇಂತಹದೇ ಒಂದು ಅನುಭವ ಗದುಗಿನ ಜಾತ್ರೆಯ ಸಮಯ. ಆಗ ನಾನು ನನ್ನ ಸ್ವಗ್ರಾಮವಾದ ಬೂದಿಹಾಳದಲ್ಲಿಯೇ ಇದ್ದೆ. ಬಹುಶಃ ಅದು ಕ್ರಿ.ಶ. ೧೯೩೪ ಇರಬೇಕು. ರಥೋತ್ಸವಕ್ಕಾಗಿ ಪತ್ನೀಸಮೇತ ಗದುಗಿಗೆ ಬಂದೆ. ಏಕೆಂದರೆ ಪತ್ನಿಯ ತವರುಮನೆಯು ಗದುಗೇ ಆಗಿತ್ತು. ರಥೋತ್ಸವ ಪ್ರಾರಂಭವಾಗುವದಕ್ಕೆ ಮೊದಲು ನಾನು ಶ್ರೀಮಠದಲ್ಲಿದ್ದ ಮುಂಡರಗಿ ಶ್ರೀ ಅನ್ನದಾನ ಮಹಾಸ್ವಾಮಿಗಳವರ ಪಾದಸನ್ನಿಧಿಯಿಲ್ಲಿ ಕುಳಿತಿದ್ದೆ. ಭಕ್ತರು ಕಿಕ್ಕಿರಿದು ನೆರೆದಿದ್ದರು. ತೇರು ಜಯಘೋಷದೊಡನೆ ಸಾಗುತ್ತಲೇ, ಶ್ರೀಗಳ ಬಳಿಯಲ್ಲಿ ನೆರೆದಿದ್ದ ಭಕ್ತರೆಲ್ಲರೂ ತೇರಿನ ಹತ್ತಿರ ಧಾವಿಸಿ ಹೋದರು. ನಾನು ಶ್ರೀಗಳ ಹತ್ತಿರದಲ್ಲಿಯೇ ಇದ್ದು ಬೀಸಣಿಕೆಯಿಂದ ಗಾಳಿ ಹಾಕುತ್ತಿದ್ದೆ. ಏಕೆಂದರೆ ಮೊದಲು ಗಾಳಿ ಹಾಕುತ್ತಿದ್ದ ಒಬ್ಬ ಭಕ್ತ ಆ ಸೇವೆಯನ್ನು ಬಿಟ್ಟು ಹೋಗಿದ್ದ. ತೇರಿನ ಹತ್ತಿರ ಹೋಗಲು ನನ್ನ ಮನಸ್ಸು ಚಡಪಡಿಸಹತ್ತಿತ್ತು. ಶ್ರೀಗಳಿಂದ ನನಗೆ ತೇರಿನ ಹತ್ತಿರ ಹೋಗಲು ಅಪ್ಪಣೆ ಕೊಡುವ ಸೂಚನೆಗಳು ಕಾಣಬರಲಿಲ್ಲ. ಮನಸ್ಸು ತಡೆಯದೆ ಶ್ರೀಗಳಿಗೆ ''ಬುದ್ಧಿ! ಸ್ವಲ್ಪ ತೇರಿನ ಹತ್ತಿರ ಹೋಗಿ ಬರುವೆ. ಏಕೆಂದರೆ ನಾನು ಊರಿಂದ ಬಂದದ್ದೇ ಜಾತ್ರೆಗಾಗಿ'' ಎಂದು ಅರಿಕೆ ಮಾಡಿಕೊಂಡೆ. ಅದಕ್ಕೆ ಶ್ರೀಗಳವರು ''ಇದು ಸಿದ್ಧಲಿಂಗನ ಸೇವೆ ಅಲ್ಲವೇನು ?'' ಎಂದು ಹೇಳಿ ತೇರಿನ ಬಳಿ ಹೋಗಲು ನನಗೆ ಅನುಮತಿ ನೀಡಿದರು. ನಾನು ಆ ಕೂಡಲೇ ತೇರಿನ ಹತ್ತಿರ ತ್ವರಿತಗತಿಯಿಂದ ಹೋಗಿ ಗದ್ದಲದಲ್ಲಿ ಕೂಡಿಕೊಂಡೆ. ತೇರು ಮರಳಿ ಪಾದಗಟ್ಟಿಗೆ

ಬರುತ್ತಲೇ ಮುಖ ಒರಿಸಿಕೊಳ್ಳಲು ಕರವಸ್ತ್ರಕ್ಕಾಗಿ ಜೇಬಿನಲ್ಲಿ ಕೈಹಾಕಿದೆ. ಜೇಬು ಖಾಲಿ ಆಗಿರುವದನ್ನು ನೋಡಿ ಹೌಹಾರಿದೆ. ಏಕೆಂದರೆ ಜೇಬಿನಲ್ಲಿಟ್ಟ ಹಣದ ಪಾಕೀಟು ಮಾಯವಾಗಿತ್ತು. ಅಂತೂ ಗುರುಸೇವೆ ತಪ್ಪಿಸಿ ಬಂದದಕ್ಕೆ ನನಗೆ ತಕ್ಕ ಶಾಸ್ತಿಯಾಗಿತ್ತು. ಪುನಃ ಶ್ರೀಗಳವರನ್ನು ಕಾಣುವ ಧೈರ್ಯ ನನ್ನಲ್ಲಿ ಉಳಿಯಲಿಲ್ಲ. ಭಾರವಾದ ಹೆಜ್ಜೆಗಳನ್ನು ಹಾಕುತ್ತ ಮಡದಿಯ ಮನೆಗೆ ಬಂದೆ. ಆದರೆ ಮನೆಯಲ್ಲಿ ನೋಡುತ್ತೇನೆ. ಎಲ್ಲರೂ ಖಿನ್ನಮನಸ್ಕರಾಗಿ ಕುಳಿತಿದ್ದರು. ಅಲ್ಲಿಯೇ ನಮ್ಮ ರೈತನ ಮಗ ಕಳಕಪ್ಪ ಒಂದೆಡೆ ಅಧೋವದನನಾಗಿ ಕುಳಿತಿದ್ದ. ಅವನಿಗೆ ಬಂದ ಕಾರಣವನ್ನು ಕೇಳಿದೆ. ಆಗ ಅವನು ಶೋಕತಪ್ತನಾಗಿ ''ಅಮ್ಮನು ತೀರಿಕೊಂಡಳು; ಅದಕ್ಕಾಗಿ ನಿಮ್ಮನ್ನು ಕರೆಯಲು ಬಂದೆ'' ಎಂದು ಹೇಳಿದ. ನನಗೆ ಆಕಾಶವೇ ಹರಿದು ಬಿದ್ದಂತಾಯಿತು. ಆ ವೇಳೆಯಲ್ಲಿ ಬೂದಿಹಾಳಕ್ಕೆ ಹೋಗಲು ಬಸ್‌ಸೌಕರ್ಯ ಇರಲಿಲ್ಲ. 'ಆಯಿತು. ಬೆಳಿಗ್ಗೆ ಹೋಗೋಣ' ಎಂದು ಹೇಳಿ ಅವನನ್ನು ಕರೆದುಕೊಂಡು ಶ್ರೀಮಠಕ್ಕೆ ಬಂದೆ. ಆಗ ರಾತ್ರಿ ಹತ್ತುಘಂಟೆಯಾಗಿರಬಹುದು. ಶ್ರೀ ಅನ್ನದಾನ ಮಹಾಸ್ವಾಮಿಗಳು ಅದೇ ಪವಡಿಸಿದ್ದರು. ನಾನು ಹೋಗಿ ಅವರಿಗೆ ನನ್ನ ಕೂಡ ಬಂದವರೊಡನೆ ಸಾಷ್ಟಾಂಗ ಹಾಕಿ ಎದ್ದು ನಿಂತೆ. ಶ್ರೀಗಳು ನನ್ನನ್ನು ಉದ್ದೇಶಿಸಿ ''ಯಾರು! ಸಿದ್ಧಲಿಂಗನೇನು?'' ಎಂದು ಕೇಳಿದರು. ಅದಕ್ಕೆ ನಾನು ''ಹೌದು ಬುದ್ಧಿ! ಅಮ್ಮ ಸತ್ತ ಸುದ್ಧಿ ಬಂದಿದೆ. ಬೆಳಿಗ್ಗೆ ಹೋಗಬೇಕು. ಅಂತೂ ಅಮ್ಮ ಪ್ರಾಣ ಬಿಡುವಾಗ ನೀರು ಹಾಕಲು ಮೊಮ್ಮಗನೇ ಇಲ್ಲ ಎಂಬ ಅಪವಾದ ಮಾತ್ರ ಬಂದಿತು'' ಎಂದು ದುಃಖದಿಂದ ಅರಿಕೆ ಮಾಡಿಕೊಂಡೆ. ಅದನ್ನು ಕೇಳಿ ಪೂಜ್ಯ ಶ್ರೀಗಳು ಧಿಗ್ಗನೆದ್ದು ನನಗೆ ''ಆ ಪೀಡೆ ಇನ್ನೂ ಎರಡು ವರ್ಷಸಾಯುವದಿಲ್ಲ. ಚಿಂತೆ ಮಾಡಬೇಡ. ಇನ್ನೂ ನಾಲ್ಕೈದು ದಿನ ಇದ್ದು ಸ್ವಾಮಿಯ ಸೇವೆ ಮಾಡಿ ಊರಿಗೆ ಹೋಗು. ಸ್ವಾಮಿಯ ಸೇವೆ ಮಾಡಿದವರಿಗೆ ಅಪವಾದ ಬರುವದೇ?'' ಎಂದು ನನಗೆ ಸಾಂತ್ವನ ಹೇಳಿ ಪುನಃ ಹಾಸಿಗೆಯ ಮೇಲೆ ಪವಡಿಸಿದರು. ನನ್ನ ಬಳಿ ಇದ್ದವನು ನನಗೆ ''ಅಮ್ಮ ತೀರಿದ ನಂತರವೇ ಊರ ಹಿರಿಯರು ನನ್ನನ್ನು ನಿಮ್ಮ ಬಳಿಗೆ ಕಳಿಸಿಕೊಟ್ಟರು. ನೀವು ಬರಲೇಬೇಕು. ಅಜ್ಜನವರ ಮಾತು ಕೇಳಿ ಬಿಡಬಾರದು'' ಎಂದು ಹೇಳಿದನು. ನಾನು ಆತನಿಗೆ ''ಖಂಡಿತ ಬರುವೆ. ಅವರ ಮಾತು ಕೇಳಿ ಬಿಡಲಿಕ್ಕೆ ನಾನೇನು ಹುಚ್ಚನಲ್ಲ'' ಎಂದು ಹೇಳಿ ಮಾರನೆಯ ದಿನ ಬೆಳಿಗ್ಗೆ ಪತ್ನಿ ಸಮೇತ ಬಂದವರೊಡನೆ ಬೂದಿಹಾಳಕ್ಕೆ ಹೋದೆ. ಮನೆಗೆ ಹೋಗಿ ನೋಡುತ್ತೇನೆ, ಅಮ್ಮ ಆರೋಗ್ಯದಿಂದ ಕುಳಿತಿದ್ದಳು. ಅದನ್ನು ಕಂಡ ನಾನು ನಿಜಕ್ಕೂ ಹುಚ್ಚನಾದೆ.

ಪೂಜ್ಯಶ್ರೀ ಅನ್ನದಾನಮಹಾಸ್ವಾಮಿಗಳವರ ಇಂತಹ ಮಹಿಮೆಗಳು ಅನೇಕ. ಅವೆಲ್ಲವುಗಳನ್ನು ವಿವರಿಸುತ್ತ ಹೋದರೆ ಅದೊಂದು ಗ್ರಂಥವೇ ಆಗುವದು. ಈ ಮಹಾಶಕ್ತಿ ಅವರಲ್ಲಿ ಉಂಟಾಗಲು ಅವರಲ್ಲಿದ್ದ ಅಪಾರ ಗುರುಭಕ್ತಿಯೇ ಕಾರಣ. ಕುಳಿತಾಗ, ನಿಂತಾಗ ಎಲ್ಲ ಕಾಲದಲ್ಲಿಯೂ ಸಿದ್ಧಲಿಂಗ.......ಸಿದ್ಧಲಿಂಗ ಎಂಬ

ನಾಮಸ್ಮರಣೆ ಅವರಲ್ಲಿ ಎಡಬಿಡದೆ ಶ್ವಾಸೋಚ್ಛ್ವಾಸದೊಡನೆ ಅಖಂಡವಾಗಿ ನಡೆಯುತ್ತಿತ್ತು. ಪೂಜಾ ಕಾಲದಲ್ಲಿ ಲಿಂಗಪೂಜೆಯ ಎಲ್ಲ ಮಂತ್ರಗಳಿಗೂ ''ಸಿದ್ಧಲಿಂಗ'' ಎಂಬ ಪವಿತ್ರ ನಾಮಸ್ಮರಣೆಯೇ ಉಪಯೋಗಿಸಲ್ಪಡುತ್ತಿತ್ತು. ಅಷ್ಟೇ ಅಲ್ಲ ''ಸಿದ್ಧಲಿಂಗ'' ಎಂದು ಅವರು ಉದ್ಘೋಷಿಸುತ್ತಿರುವಂತೆ ಅವರು 'ಭಾವ ಸಮಾಧಿ'ಸ್ಥರಾಗುತ್ತಿದ್ದರು.

ಭಕ್ತ ಮನೆಗೆ ಶ್ರೀಗಳವರು ಭಿನ್ನಹ ಕೈಕೊಂಡು ದಯಮಾಡಿಸಿದಾಗ ಹಿಂದೆ ಶ್ರೀ ಮದರ್ಧನಾರೀಶ್ವರರು ತಮ್ಮ ಸೇವಕ ಕೋರಿಶೆಟ್ಟರಿಗೆ ಅನ್ನದಾನಚರಪಟ್ಟ ದಯಪಾಲಿಸುವಾಗ ಅನುಗ್ರಹಿಸಿದ ''ಕೋರೀಟೊಪ್ಪಿಗೆ''ಯನ್ನು ಇವರು ಧರಿಸುತ್ತಿದ್ದರು. ಹೀಗೆ ಧರಿಸಿದ ಶ್ರೀಗಳವರ ಭಾವಚಿತ್ರಗಳು ಅವರ ಭಕ್ತಾದಿಗಳ ಮನೆಗಳಲ್ಲಿ ಈಗಲೂ ಶ್ರದ್ಧಾಪೂರ್ವಕವಾಗಿ ಪೂಜಿಸಲ್ಪಡುತ್ತಿವೆ.

**ಭಕ್ತರಿಂದ ಕಾಣಿಕೆ :**

ಧರ್ಮಜಾಗೃತಿಯ ಕಾರ್ಯದಲ್ಲಿ ಉತ್ಸವಗಳ ಪಾತ್ರ ಹಿರಿದು. ಇವುಗಳಿಂದ ಧರ್ಮಜಾಗೃತಿಯಾಗುತ್ತಿರುವ ಕಾರಣ ಈ ಕಾರ್ಯಕ್ಕಾಗಿ ಕೊಡುವ ದಾನ ದತ್ತಿಗಳು ಧರ್ಮಕಾರ್ಯವೆಂದೇ ಜನರ ಭಾವನೆ. ಆನೆ ಶ್ರೀ ಮಠಕ್ಕೆ ಭಕ್ತಿಕಾಣಿಕೆಯಾಗಿ ಈ ಅವಧಿಯಲ್ಲಿ ಬಂದುದು ಒಂದು ವಿಶೇಷ. ಅದಕ್ಕೆ ಬೆಳ್ಳಿಯ ಅಂಬಾರಿಯನ್ನು ಗದುಗಿನ ಶ್ರೀ ಬುಳ್ಳಾ ಹೊಳಿಯಪ್ಪನವರು ಮಾಡಿಸಿಕೊಟ್ಟರು. ಅದೇ ರೀತಿ ಅಣ್ಣಿಗೇರಿಯ ಶ್ರೀ ಫಕೀರಪ್ಪನವರು ಬಳೊಳ್ಳಿ ಅವರು ಪಲ್ಲಕ್ಕಿಗೆ ಬೇಕಾದ ಚಿನ್ನದ 'ಗೊಂಡೆ'ಗಳನ್ನು ಮಾಡಿಸಿಕೊಟ್ಟರು. ಹಂಪಸಾಗರದಲ್ಲಿ 'ಮತ್ತೂರ' ಎಂಬುವರದು ಪ್ರಸಿದ್ಧ ಶ್ರೀಮಂತ ಮನೆತನ. ಅವರು ಶ್ರೀ ಜಗದ್ಗುರು ತೋಂಟದಾರ್ಯಪೀಠದ ಪರಮಭಕ್ತರು. ಅವರ ಸಿರಿವಂತಿಕೆಯ ಬಗ್ಗೆ ಹೇಳಬೇಕಾದರೆ ಅವರ ಮನೆಯ ಬೀಸುವ ಕಲ್ಲಿನ 'ಗೂಟ'ಕ್ಕೆ ಮತ್ತು ಕುಟ್ಟುವ 'ಒಣಕಿಗೆ' ಸಹ ಬಂಗಾರದ ಅಣಸುಗಳಿದ್ದವು. ಈ ಮನೆತನದವರಿಂದ ಶ್ರೀಮಠಕ್ಕೆ ಸಾಕಷ್ಟು ಸುವರ್ಣಖಚಿತ ಉತ್ಸವದ ಸಾಮಾನುಗಳು ಕೊಡಲ್ಪಟ್ಟವು. ಅದರಲ್ಲಿ ಪಾದದಲ್ಲಿ ಧರಿಸುತ್ತಿದ್ದ ಪಚ್ಚರತ್ನಖಚಿತ 'ಪಾದಪೆಂಡೆ' ಮುಖ್ಯವಾದುದು. ಶ್ರೀ ಸಿದ್ಧೇಶ್ವರ ಜಗದ್ಗುರುಗಳಿಗೆ ಬಂದ ಈ ಎಲ್ಲ ಭಕ್ತಿ ಕಾಣಿಕೆಗಳು ಮೇಲ್ಕಾಣಿಸಿದವರ ಭಕ್ತಿಯ ದ್ಯೋತಕವಾಗಿ, ಈಗಲೂ ಗದಗ ಸಂಸ್ಥಾನಮಠದಲ್ಲಿ ಇವೆ.

**ಸಂಸ್ಕೃತ ಅಧ್ಯಯನಕ್ಕೆ ಪ್ರೋತ್ಸಾಹ :**

'ಸಂಸ್ಕೃತ' ಭಾರತದ ಪ್ರಾಚೀನಭಾಷೆ, ದೇಶ–ವಿದೇಶಗಳ ಅನೇಕ ಭಾಷೆಗಳಿಗೆ ಅದು ತನ್ನ ಶಬ್ದ ಭಂಡಾರವನ್ನು ಒದಗಿಸಿದೆ. ವೇದೋಪನಿಷತ್ತುಗಳನ್ನು ತನ್ನಲ್ಲಿ ಗರ್ಭೀಕರಿಸಿಕೊಂಡ ಈ ಭಾಷೆಯ ಅಧ್ಯಯನ ಜ್ಞಾನಪಿಪಾಸುಗಳಿಗೆ ಅನಿವಾರ್ಯ. ಹೀಗೆ ಸಂಸ್ಕೃತ ಅಧ್ಯಯನ ಸಮಾಜಕ್ಕೆ ಅತ್ಯವಶ್ಯವೆಂದು ಮನಗಂಡ

ಶ್ರೀ ಜಗದ್ಗುರುಗಳವರು ಶ್ರೀ ಮಠದ ಆಪ್ತ ಭಕ್ತರಾದ ಸರ್ವಶ್ರೀ ಹೊಳಿಯಪ್ಪ ಬುಳ್ಳಾ, ಮಲ್ಲೇಶಪ್ಪ ಮಾನ್ವಿ, ವೀರಪ್ಪಕೋಟಿ ಮತ್ತು ಗುರುಲಿಂಗಪ್ಪ ತಳಕಲ್ಲ ಅವರುಗಳನ್ನು ಆಗಿನ ಸಮಾಜಸೇವಾ ದುರಂಧರವಾದ ಶ್ರೀ ಅರಟಾಳ ರುದ್ರಗೌಡ್ರು ಪಾಟೀಲ ಅವರ ಕಡೆಗೆ ಕಳಿಸಿದರು. ಆಗ ಅವರು ಆ್ಯಕ್ಟಿಂಗ್ ಡಿ.ಸಿ. ಆಗಿ ಕೆಲಸ ಮಾಡುತ್ತಿದ್ದರು.

ಶ್ರೀ ರುದ್ರಗೌಡರು ಮೇಲ್ಕಂಡಂತೆ ಬಂದವರ ಮುಖದಿಂದ 'ಸಂಸ್ಕೃತ ಪಾಠಶಾಲಾ ಸ್ಥಾಪನೆ'ಯ ವಿಷಯ ತಿಳಿದು ಬಹಳ ಸಂತೋಷಪಟ್ಟು ಆ ಕಾರ್ಯಕ್ಕಾಗಿ ಆದಷ್ಟು ತೀವ್ರ ವಂತಿಗೆ ಕೂಡಿಸಿ ಅದನ್ನು ತೆಗೆದುಕೊಂಡು ತಮ್ಮಲ್ಲಿಗೆ ಬರಬೇಕೆಂದು ಹೇಳಿದರು. ಆ ಮೇರೆಗೆ ಸರ್ವಶ್ರೀ ಹೊಳಿಯಪ್ಪ ಬುಳ್ಳಾ, ಮಲ್ಲೇಶಪ್ಪ ಮಾನ್ವಿ, ವೀರಪ್ಪ ಕೋಟಿ ಮತ್ತು ದಂಡಪ್ಪ ಮಾನ್ವಿ ಹೀಗೆ ತಲಾ ೨೦೦೦ ರೂಪಾಯಿಗಳಂತೆ ೮೦೦೦ ರೂಪಾಯಿ ನಗದು ಹಣಕೂಡಿಸಿದರು. ನಂತರ ಶ್ರೀಮಂತ ಮಡಿವಾಳಪ್ಪ ಬುಳ್ಳಾ ಅವರಿಂದ ತಮಗೆ ತುಲಾಭಾರದ ಮೂಲಕ ಅರ್ಪಿಸಲ್ಪಟ್ಟ ನಗದು ೨೦೦೦ ರೂಪಾಯಿಗಳನ್ನು ಶ್ರೀ ಜಗದ್ಗುರುಗಳವರ ಸಂಸ್ಕೃತಪಾಠಶಾಲಾ ಫಂಡಿಗೆ ಅರ್ಪಿಸಿದರು. ಈ ರೀತಿ ಕೂಡಿದ ಒಟ್ಟು ೧೦,೦೦೦ ಸಾವಿರ ರೂಪಾಯಿಗಳನ್ನು ಶ್ರೀ ಅರಟಾಳ ರುದ್ರಗೌಡರ ಸಲಹೆಯಂತೆ ಸಂಸ್ಕೃತಪಾಠಶಾಲಾ ಫಂಡಿಗೆ ಸೇರಿಸಲಾಯಿತು.

ಹೀಗೆ ಸಂಸ್ಕೃತ ಪಾಠಶಾಲೆ ಕ್ರಿ.ಶ. ೧೮೮೯ ರಲ್ಲಿ ಸ್ಥಾಪಿಸಲ್ಪಟ್ಟು ಅಂದಿನಿಂದ ಇಂದಿನವರೆಗೆ ಒಂದು ಶತಮಾನಕಾಲ ಅವ್ಯಾಹತವಾಗಿ ನಡೆದುಬಂದಿದೆ. ಈ ಪಾಠಶಾಲೆಯಲ್ಲಿ ಅನೇಕ ಉದ್ದಾಮ ಪಂಡಿತರು ಅಧ್ಯಾಪಕರಾಗಿ ಸೇವೆ ಸಲ್ಲಿಸಿದ್ದು, ಇಲ್ಲಿ ಸ್ಮರಣೀಯವಾಗಿ. ಅಂಥವರಲ್ಲಿ ಶ್ರೀ ನೀಲಕಂಠಶಾಸ್ತ್ರಿಗಳು, ಶ್ರೀ ಕೋಟಿ ಬಸವಪ್ಪ ಶಾಸ್ತ್ರಿಗಳು, ಶ್ರೀ ದಡ್ಡಿ ಮಲ್ಲಿಕಾರ್ಜುನ ಶಾಸ್ತ್ರಿಗಳು. ಶ್ರೀ ಪಗಡದಿನ್ನಿ ಕಲಿಗಣನಾಥ ಶಾಸ್ತ್ರಿಗಳು ಮತ್ತು ಪಗಡದಿನ್ನಿ ಬಸವರಾಜ ಶಾಸ್ತ್ರಿಗಳು ಇವರೇ ಮುಂತಾದವರೆಂದು ಹೇಳಬಹುದು.

ಈ ಪಾಠಶಾಲೆಯಲ್ಲಿ ಕಲಿತು ಪ್ರಸಿದ್ಧರಾದವರೆಂದರೆ ವಿರಕ್ತಮೂರ್ತಿಗಳಲ್ಲಿ ಚಿತ್ರದುರ್ಗದ ಬೃಹನ್ಮಠಾಧ್ಯಕ್ಷ ಶ್ರೀ ಜಯದೇವ ಜಗದ್ಗುರುಗಳು, ಶಲವಡಿ ಶ್ರೀ ಗುರುಶಾಂತಸ್ವಾಮಿಗಳು ಮತ್ತು ಧಾರವಾಡದ ಮುರುಘಾಮಠಾಧ್ಯಕ್ಷರಾದ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳವರು.

ಅದೇ ರೀತಿ ಇಲ್ಲಿ ಕಲಿತ ಗೃಹಸ್ಥ ಪಂಡಿತರೆಂದರೆ ಯಾದಗಿರಿಯ ಸಂಸ್ಕೃತ ಕಾಲೇಜ ಪ್ರಿನ್ಸಿಪಾಲರಾಗಿ ಬಹುಕಾಲ ಸೇವೆಸಲ್ಲಿಸಿದ ಮತ್ತು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಶ್ರೀ ಹೊಳಲ ಚಂದ್ರಶೇಖರ ಶಾಸ್ತ್ರಿಗಳು ಮತ್ತು ಸಂಸ್ಕೃತ-ಇಂಗ್ಲೀಷ ಹಿಂದಿ ಭಾಷೆಗಳಲ್ಲಿ ಉದ್ದಾಮ ಪಂಡಿತರೆನಿಸಿದ

ಶ್ರೀ ಶಂಕರಶಾಸ್ತ್ರಿಗಳು ಹಾಗೂ ಶ್ರೀ ಸಿದ್ಧಲಿಂಗನ ಅನಂತ ಸ್ತೋತ್ರಗಳನ್ನು ರಚಿಸಿ ಪ್ರಸಿದ್ಧರಾದ ಶ್ರೀ ಮೂಗನೂರ ಶಿವದೇವಶಾಸ್ತ್ರೀಗಳು ಮುಂತಾದವರು.

ಇನ್ನು ಗದುಗು ಸಂಸ್ಥಾನಮಠದ ಸಹಾಯದಿಂದ ಶ್ರೀಕ್ಷೇತ್ರ ಕಾಶಿಯಲ್ಲಿ ಸಂಸ್ಕೃತ ಅಧ್ಯಯನ ಮಾಡಿದ ವಿದ್ಯಾರ್ಥಿಗಳಲ್ಲಿ ಶ್ರೀ ಬಸವಲಿಂಗಶಾಸ್ತ್ರಿಗಳು ಸುರಪೂರಮಠ, ಶ್ರೀ ವಿಶ್ವೇಶ್ವರಶಾಸ್ತ್ರಿಗಳು ಉಪ್ಪಿನಬೆಟಗೇರಿ, ಶ್ರೀ ಉಮಾಪತಿಶಾಸ್ತ್ರಿಗಳು ಸೂಡಿ ಹಿರೇಮಠ, ಶ್ರೀ ಬಸವರಾಜಶಾಸ್ತ್ರಿಗಳು ಚಳಗೇರಿಮಠ, ಶ್ರೀ ರಾಜಶೇಖರ ಶಾಸ್ತ್ರಿಗಳು ಅಜ್ಜಂಪೂರ ಮತ್ತು ಶ್ರೀ ಚನ್ನಬಸವಶಾಸ್ತ್ರಿಗಳು ಹೊಳಲು ಇವರೇ ಮುಂತಾದವರು.

**ಸಂಗೀತಕಲೆಗೆ ಆಶ್ರಯ :**

ಸಾಮಾನ್ಯವಾಗಿ ಇನ್ನುಳಿದ ಶಾಸ್ತ್ರಗಳು ಕಲಿತರೆ ಬರುವವು. ಆದರೆ ಸಂಗೀತಶಾಸ್ತ್ರ ಮಾತ್ರ ಗಂಧರ್ವ ಅಂಶ ಇಲ್ಲದವರಿಗೆ ಬರುವದಿಲ್ಲ. ಸಂಗೀತಕ್ಕೆ ವೇದಮನ್ನಣೆ ಇದೆ. ಅದಕ್ಕೆ ಸಾಮವೇದವೇ ನಿದರ್ಶನ. ಶಿಶು–ಪಶು ಮತ್ತು ಸರ್ಪ ಮುಂತಾದವುಗಳೂ ಸಹಿತ ಗಾನರಸದಿಂದ ಮುಗ್ಧವಾಗುವವೆಂದು ಸುಭಾಷಿತ ಹೇಳುತ್ತಿದೆ. ಅಂದ ಬಳಿಕ ಕರುಣಾಮಯನಾದ ಭಗವಂತನು ಈ ಸಂಗೀತಕ್ಕೆ ಮೆಚ್ಚುವದರಲ್ಲಿ ಆಶ್ಚರ್ಯವಿಲ್ಲ. ಅಂತೆಯೇ ನೃತ್ಯ–ಗೀತಗಳನ್ನು ನವವಿಧ ಭಕ್ತಿಗಳಲ್ಲಿ ಸೇರಿಸಲಾಗಿದೆ. ಸಂಸ್ಕೃತ ಸಾಹಿತ್ಯದೊಡನೆ ಈ ಸಂಗೀತದ ಜೋಡಣೆ ಅಗತ್ಯವೆಂದು ಭಾವಿಸಿದ ಶ್ರೀ ಜಗದ್ಗುರು ಗಳವರು ತಮ್ಮ ಗದಗ ಸಂಸ್ಥಾನ ಮಠದಲ್ಲಿ ಶ್ರೀ ಜಗದ್ಗುರು ತೋಂಟದಾರ್ಯ ಸಂಗೀತ ಪಾಠಶಾಲೆಯನ್ನು ಸ್ಥಾಪಿಸಿ ಅದಕ್ಕೆ ಅದೇ ತಾನೇ ತಂಜಾವೂರದಿಂದ ದಕ್ಷಿಣಾದಿ ಸಂಗೀತ ವಿದ್ವಾಂಸರಾಗಿ ಬಂದ ಶ್ರೀ ಕರಿಬಸವಗವಾಯಿಗಳವರನ್ನು ಪ್ರಾಧ್ಯಾಪಕರನ್ನಾಗಿ ನೇಮಿಸಿದರು.

**ಬಡ ವಿದ್ಯಾರ್ಥಿಗಳಿಗೆ ನೆರವು :**

ಪಾಶ್ಚಾತ್ಯ ಆಡಳಿತವಿದ್ದಾಗ ಆಂಗ್ಲ ಶಿಕ್ಷಣದ ಅವಶ್ಯಕತೆ ಬಹಳವಿದ್ದುದರಿಂದ ಬಡ ವಿದ್ಯಾರ್ಥಿಗಳು ಊಟದ ತೊಂದರೆಯನ್ನು ನಿವಾರಿಸಿಕೊಂಡು ಇಂಗ್ಲೀಷ ಅಭ್ಯಾಸ ಮುಂದುವರಿಸಬೇಕೆಂದು ಭಾವಿಸಿದ ಶ್ರೀ ಜಗದ್ಗುರು ಸನ್ನಿಧಿಯವರು ಈಗ್ಗೆ ಒಂದು ಶತಮಾನದ ಹಿಂದೆಯೇ ಶ್ರೀ ಜಗದ್ಗುರು ತೋಂಟದಾರ್ಯ ಉಚಿತಪ್ರಸಾದ ನಿಲಯವನ್ನು ಸ್ಥಾಪಿಸಿದರು. ಈ ಪ್ರಸಾದ ನಿಲಯದಲ್ಲಿದ್ದು ತಮ್ಮ ವ್ಯಾಸಂಗವನ್ನು ಪೂರ್ಣಗೊಳಿಸಿ ಪ್ರಸಿದ್ಧರಾದವರೆಂದರೆ ವಿಜಾಪೂರ ಜಿಲ್ಲೆಯ ಕಲೆಕ್ಟರರೆಂದು ಬಹುಕಾಲ ಕೆಲಸ ಮಾಡಿದ ಶ್ರೀ ಹಿರೇಮಠ ಸಾಹೇಬರು. ಶ್ರೀ ಆರಾಧ್ಯಮಠ ಮಾಮಲೆದಾರರು. ಅಗ್ರಿಕಲ್ಚರಲ್ ಕಾಟನ್ ಓವ್ಹರಸಿಯರಾಗಿದ್ದ ಶ್ರೀ ಎಸ್.ಎಂ. ಪಾಟೀಲರು ಮತ್ತು ಕರ್ನಾಟಕ ವಿಶ್ವವಿದ್ಯಾಲಯದ ಮಾಜಿ ಕುಲಪತಿ ಡಾಕ್ಟರ್ ಆರ್.ಸಿ. ಹಿರೇಮಠ ಮುಂತಾದವರು.

**ಗುಣ-ಶೀಲ-ಸ್ವಭಾವ :**

ವಿಶಾಲವಾಗಿ ಬೆಳೆದ ವೃಕ್ಷ ಅನೇಕ ಪಕ್ಷಿಗಳಿಗೆ ಆಶ್ರಯವೀಯುವಂತೆ ಶ್ರೀ ಜಗದ್ಗುರು ಸನ್ನಿಧಿಯವರ ಔದಾರ್ಯ ಅನೇಕರಿಗೆ ಆಶ್ರಯ ಕೊಟ್ಟಿತು. ಮುಂದೆ ಸ್ವಾಮಿಗಳಾಗಲಿರುವ ವಟುಗಳನ್ನು ಶ್ರೀ ಜಗದ್ಗುರು ತೋಂಟದಾರ್ಯ ಮಠಕ್ಕೆ ಬಿಡುವದು ವಾಡಿಕೆ. ಇಂತಹ ವಟುಗಳು ಆಗ ಶ್ರೀ ಮಠದಲ್ಲಿ ವಿಶೇಷ ಸಂಖ್ಯೆಯಲ್ಲಿ ಇರುತ್ತಿದ್ದರು. ಅದರಂತೆ ಶ್ರೀಮಠದಲ್ಲಿ ಸಂಸ್ಕೃತಪಾಠಶಾಲೆಯ ವಿದ್ಯಾರ್ಥಿಗಳು, ಸಂಗೀತಪಾಠಶಾಲೆಯ ವಿದ್ಯಾರ್ಥಿಗಳು ಮತ್ತು ಆಂಗ್ಲಶಿಕ್ಷಣ ಪಡೆಯುವ ವಿದ್ಯಾರ್ಥಿಗಳು ಹೀಗೆ ನೂರಾರು ಸಂಖ್ಯೆಯಲ್ಲಿ ಇರುತ್ತಿದ್ದರು. ಬರು ಹೋಗುವ ಅತಿಥಿ–ಅಭ್ಯಾಗತರಿಗಂತೂ ಶ್ರೀಮಠ ಶ್ರೀ ಬಸವಣ್ಣನವರ ಮಹಾಮನೆಯೇ ಆಗಿತ್ತು.

ಗದುಗಿನ ರಥೋತ್ಸವದ ಸಮಯಕ್ಕೆ ಮಠದ ಸಿಬ್ಬಂದಿಯವರೆಲ್ಲರಿಗೂ ಹೊಸ ಬಟ್ಟೆ ಹೊಲಿಸುವದು ಪದ್ಧತಿ. ಮಧ್ಯದಲ್ಲಿ ಅರಿವೆ ಹರಿದ ಆಶ್ರಿತರಿಗೆ ಮಠದ ವ್ಯವಸ್ಥಾಪಕರು ಬಟ್ಟೆ ಹೊಲಿಸದಿದ್ದರೆ, ಅಂಥವರು ಶ್ರೀ ಜಗದ್ಗುರುಗಳವರ ದೃಷ್ಟಿಗೆ ಬೀಳುವಂತೆ ಹರಿದಬಟ್ಟೆಯಿಂದ ಹಾದುಹೋದರೆ ಸಾಕು, ಮೃದುಹೃದಯದ ಶ್ರೀ ಜಗದ್ಗುರುಗಳು ವ್ಯವಸ್ಥಾಪಕರನ್ನು ಕರೆಯಿಸಿ ಬಟ್ಟೆ ಹರಿದವರಿಗೆ ಹೊಸಬಟ್ಟೆ ಹೊಲಿಸಿ ಕೊಡಲು ಅಪ್ಪಣೆ ನೀಡುತ್ತಿದ್ದರು.

ಶ್ರೀ ಜಗದ್ಗುರುಗಳವರು ಇಷ್ಟೊಂದು ಕರುಣಾಶೀಲ ಹೃದಯದವ ರಾಗಿದ್ದರೂ ಕೆಲ ಪ್ರಸಂಗದಲ್ಲಿ ಅಷ್ಟೇ ಕಠೋರ ಹೃದಯದವರಾಗುತ್ತಿದ್ದರು. ಲಕ್ಕುಂಡಿಯ ನಾಗಾವಿಮಠ ಅವರ ಪೂರ್ವಾಶ್ರಮಕ್ಕೆ ಸಂಬಂಧಪಟ್ಟದ್ದು. ಅಲ್ಲಿಂದ ಯಾರಾದರೂ ತಮ್ಮ ಪೂರ್ವಾಶ್ರಾಮದವರು ಯಾವದೇ ಪ್ರಯೋಜನಾರ್ಥ ತಮ್ಮ ಮಠಕ್ಕೆ ಬಂದರೆ ಅವರಿಗೆ ಒಂದು ಪುಡಿಕಾಸೂ ಮಠದಿಂದ ದೊರೆಯುತ್ತಿದ್ದಿಲ್ಲ. ಅಷ್ಟೇ ಅಲ್ಲ ಅವರಿಗೆ ಶ್ರೀ ಸನ್ನಿಧಿಯ ದರ್ಶನದ ಲಾಭವೂ ಸಿಗುತ್ತಿರಲಿಲ್ಲ. ಹೀಗೆ ಜಗದ್ಗುರುಗಳವರು ತಮ್ಮ ಆಶ್ರಮದ ನೀತಿಪಾಲನೆಯಲ್ಲಿ ಇಷ್ಟೊಂದು ನಿಷ್ಠುರರಾಗುತ್ತಿದ್ದರು.

ಅದರಂತೆ ಶ್ರೀಮಠದಲ್ಲಿ ಯಾರಿಂದಲಾದರೂ ತಪ್ಪುಗಳಾದರೆ ಅಂಥವರನ್ನು ಒಂದಲ್ಲ, ಎರಡು–ಮೂರು ಸಲಕ್ಷಮಿಸಲಾಗುತ್ತಿತ್ತು. ಮುಂದೆ ಅವರಿಂದ ಅದೇ ತೆರನಾದ ಪ್ರಮಾದಗಳು ಮೇಲಿಂದ ಮೇಲೆ ಘಟಿಸಹತ್ತಿದರೆ ಆ ಕ್ಷಣವೇ ಅವರನ್ನು ಇದ್ದಕ್ಕಿದಂತೆ ಹೊರಗೆ ಹಾಕಲಾಗುತ್ತಿತ್ತು. ಅನಂತರ ಅವರಿಗೆ ಶ್ರೀಮಠದಲ್ಲಿ ಪ್ರವೇಶವೇ ದೊರೆಯುತ್ತಿರಲಿಲ್ಲ. ಏಕೆಂದರೆ ಅಂಥವರಿಂದ ಶ್ರೀ ಮಠದಲ್ಲಿದ್ದ ಉಳಿದವರೂ ಕೆಡುವ ಸಂಭವವಿರುತ್ತಿತ್ತು.

ಶ್ರೀ ಜಗದ್ಗುರುಗಳವರು 'ದಯೆ'ಯ ಸಾಕಾರಮೂರ್ತಿ ಶ್ರೀ ಸನ್ನಿಧಿಯವರು ಕೇವಲ ಮಾನವ ಮಾತ್ರರಿಗೆ ಅಷ್ಟೇ ದಯಾಪರರಾಗಿರದೆ ಪ್ರಾಣಿ, ಪಕ್ಷಿಗಳಲ್ಲಿಯೂ

ಕರುಣಾಶೀಲರಾಗಿದ್ದರು. ಒಮ್ಮೆ ಒಂದು ಊರಿಗೆ ಶ್ರೀ ಸನ್ನಿಧಿಯವರು ಭಿನ್ನಹದ ಮೇರೆಗೆ ದಯಮಾಡಿಸಿದ್ದರು. ಶ್ರೀ ಜಗದ್ಗುರುಗಳವರು ಮನೆಗೆ ಆಗಮಿಸುತ್ತಲೇ ಅವರ ದೃಷ್ಟಿ ಮನೆಯ ಹೊರಗೆ ಬಿಸಿಲಲ್ಲಿ ಕಟ್ಟಿದ ದನಕರುಗಳ ಕಡೆಗೆ ಹೋಯಿತು. ಶ್ರೀ ಮಹಾಸನ್ನಿಧಿಯವರು ತಮ್ಮ ಮನೆಗೆ ದಯಮಾಡಿಸುವರೆಂದು ತಿಳಿದೇ ಆ ಮನೆಯವರು ತಮ್ಮ ಮನೆಯಲ್ಲಿದ್ದ ದನಕರುಗಳನ್ನು ಸ್ವಚ್ಛತೆಗಾಗಿ ಹೊರಗೆ ಕಟ್ಟಿಸಿದ್ದರು. ಇದನ್ನು ಗಮನಿಸಿದ ಶ್ರೀ ಪೂಜ್ಯಪಾದರು ಆ ಮನೆಯಲ್ಲಿ ತಾವು ಪ್ರವೇಶಿಸಿದ ನಂತರ ಮನೆಯವರನ್ನು ತಮ್ಮಲ್ಲಿಗೆ ಕರೆಯಿಸಿ ಮೊದಲು ದನಕರುಗಳಿಗೆ ನೀರು ಕುಡಿಸಿ ಒಳಗೆ ಕಟ್ಟಿ ಮೇವು ಹಾಕಲು ಅಪ್ಪಣೆ ಮಾಡಿದರು. ಆನಂತರ ತಾವು ಸ್ನಾನಕ್ಕೆ ದಯಮಾಡಿಸಿದರು.

ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳವರು ಜಗದ್ಗುರು ಪೀಠಾಧೀಶರಾಗಿದ್ದರೂ ಆ ಬಗ್ಗೆ ಅವರಲ್ಲಿ ಎಷ್ಟೂ ಅಹಂಕಾರವಿರಲಿಲ್ಲ. ಯಾರೆ ಜಂಗಮಮೂರ್ತಿಗಳು ತಮ್ಮಲ್ಲಿಗೆ ಬಂದರೂ ಅವರಿಗೆ ಉಚಿತಾಸನವನ್ನು ಕೊಟ್ಟು ದಮ್ಮಯ್ಯ ಎಂದು ವಿನಯ ಪೂರ್ವಕವಾಗಿ ಸಂಭೋಧಿಸಿ ಗೌರವಿಸುತ್ತಿದ್ದರು.

ಒಮ್ಮೆ ಗದುಗಿನ ಶ್ರೀಮಠದ ದಾಸೋಹ ಶಾಲೆಯಲ್ಲಿ ಯಾವತ್ತೂ ಶಿವಾನುಭವ ಚರಮೂರ್ತಿಗಳ ಪ್ರಸಾದನಡೆದಿತ್ತು. ಮುಂಡರಗಿಯ ಶ್ರೀ ಅನ್ನದಾನ ಮಹಾಸ್ವಾಮಿಗಳೂ ಅಲ್ಲಿ ಉಪಸ್ಥಿತರಿದ್ದರು. ಅವರದು ವಿನೋದಿ ಸ್ವಭಾವ, ಪ್ರಸಾದದ ಪ್ರತಿಯೊಂದು ಪದಾರ್ಥಕ್ಕೂ ಅವರು ಒಂದೊಂದು ವಿನೋದಪರ ಹೆಸರುಗಳನ್ನು ಇಟ್ಟಿದ್ದರು. ಅಂದು ಅರ್ಪಿತವಾದ ಪದಾರ್ಥಗಳಲ್ಲಿ ಶಾವಿಗೆ ಪಾಯಸ ಪ್ರಸಾದವಿತ್ತು. ಅದಕ್ಕೆ ಅವರು 'ಗಡ್ಡಾಮಿಯಾ' ಎಂದು ಗೇಲಿ ಮಾಡಿದರು. ಅವರು ಹೀಗೆ ಪ್ರಸಾದಕ್ಕೆ ಹಾಸ್ಯ ಮಾಡಲಿಕ್ಕೂ ಶ್ರೀ ಜಗದ್ಗುರು ಸನ್ನಿಧಿಯವರು ತಮ್ಮ ಶಿವಪೂಜಾ ಖೋಲಿಯಿಂದ ಹೊರಗೆ ದಯಮಾಡಿಸಲಿಕ್ಕೂ ಸರಿಹೋಯಿತು. ಆಗ ಶ್ರೀ ಜಗದ್ಗುರುಗಳವರು ಶ್ರೀ ಅನ್ನದಾನ ಮಹಾಸ್ವಾಮಿಗಳವರನ್ನು ಕುರಿತು 'ದಮ್ಮಯ್ಯ' ಎಂದು ಘಟ್ಟಿಸಿ ನುಡಿದು ಸದರಿನ ಕಡೆಗೆದಯಮಾಡಿಸಿದರು. ಶ್ರೀ ಅನ್ನದಾನ ಮಹಾಸ್ವಾಮಿಗಳವರಿಗೆ ಅಷ್ಟೇ ಸಾಕಾಯಿತು. ಮುಂದೆ ಅಲ್ಲಿಯ ವಾತಾವರಣ ಸ್ತಬ್ಧವಾಯಿತು. ಪ್ರಸಾದವನ್ನು ಕುರಿತು ಹಾಸ್ಯಮಾಡಬಾರದೆಂಬುದೇ ಶ್ರೀ ಸನ್ನಿಧಿಯವರ ಉದ್ದೇಶ. ಅದನ್ನು ವ್ಯಕ್ತವಾಗಿ ಹೇಳುವದು ಸೌಜನ್ಯವಲ್ಲವೆಂದೇ ದಮ್ಮಯ್ಯ ಎಂಬ ಸಂಜ್ಞೆಯ ಮೂಲಕ ಅವರನ್ನು ಎಚ್ಚರಿಸಿದರು.

ಶ್ರೀ ಜಗದ್ಗುರುಗಳವರು ಯಾರದೋ ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ತಮ್ಮ ಅಂತಃಸಾಕ್ಷಿಗೆ ವಿರುದ್ಧವಾಗಿ ವರ್ತಿಸುತ್ತಿರಲಿಲ್ಲ. ತಮ್ಮ ಅಭಿಪ್ರಾಯಕ್ಕೆ ವ್ಯತಿರಿಕ್ತವಾಗಿ ನಡೆಯುವ ವ್ಯಕ್ತಿಗಳು ಸಮಾಜದಲ್ಲಿ ಎಂತಹ ದೊಡ್ಡ ಅಂತಸ್ತಿನಲ್ಲಿಯೇ ಇರಲಿ, ಅವರನ್ನು ಉದ್ದೇಶಪೂರ್ವಕವಾಗಿ ದೂರವಿಡುತ್ತಿದ್ದರು. ಅದರಂತೆ ಶ್ರೀಮಠದ ಬಗ್ಗೆ ಅಭಿಮಾನವಿಟ್ಟುಕೊಂಡ ವ್ಯಕ್ತಿಗಳು ಎಷ್ಟೇ ಸಾಮಾನ್ಯರಿರಲಿ ಅಂಥವರನ್ನು ಆತ್ಮೀಯವಾಗಿ ಕಾಣುತ್ತಿದ್ದರು.

ಶಹಪೂರಪೇಟೆಯ ಶ್ರೀ ಕುಬಸದ ನೂರಂದಪ್ಪನವರು ಗೌರವಸ್ಥರೆಂಬುದು ನಿಜ. ಆದರೆ ಆರ್ಥಿಕವಾಗಿ ಅವರು ಹಿಂದುಳಿದವರು. ಒಮ್ಮೆ ಅವರು ಶ್ರೀಮಠದ ಲಘುರಥೋತ್ಸವದ ದಿವಸ ತಮ್ಮ ಬಿನ್ನಹ ಕೈಕೊಳ್ಳಬೇಕೆಂದು ಸನ್ನಿಧಿಯಲ್ಲಿ ಅರಿಕೆ ಮಾಡಿಕೊಂಡಾಗ ಶ್ರೀ ಜಗದ್ಗುರುಗಳವರು ಸಂತೋಷದಿಂದ ಒಪ್ಪಿಕೊಂಡರು. ಅಂದಿನ ಬಿನ್ನಹಕ್ಕಾಗಿ ಅನೇಕ ಪ್ರತಿಷ್ಠಿತ ವ್ಯಕ್ತಿಗಳು ಜಗದ್ಗುರುಗಳವರಲ್ಲಿ ಎಷ್ಟೇ ಕೇಳಿಕೊಂಡರೂ ಅವರಿಗೆ ಶ್ರೀ ಸನ್ನಿಧಿಯಿಂದ ಸಮ್ಮತಿ ದೊರೆಯಲಿಲ್ಲ.

**ಕಲಾಪ್ರೇಮ :**

ಒಂದು ದಿನ ರಾತ್ರಿಯ ಸಮಯ. ಆಗ ಒಬ್ಬ ಅಪರಿಚಿತ ವ್ಯಕ್ತಿ ಕೈಯಲ್ಲಿ ಗೌಸಣಿಕೆ ಹಾಕಿದ ವೀಣೆಯೊಂದನ್ನು ಹಿಡಿದು ಮಠದಲ್ಲಿ ಪ್ರವೇಶಿಸಿದ. ಆಗ ಆತನನ್ನು ತಡೆದ ಮಠದ ಪಹರೆಯವನು ಆತನಿಗೆ ಮರಳಿ ಹೋಗಲು ತಿಳಿಸಿದ. ಆದರೆ ಆ ಆಗಂತುಕ ಕೇಳಲಿಲ್ಲ. ಈ ವಾದವಿವಾದವನ್ನು ದೂರದಿಂದ ಕೇಳಿದ ಶ್ರೀ ಮಠದ ವ್ಯವಸ್ಥಾಪಕರಾದ ಶ್ರೀ ಅನ್ನದಾನಮರಿದೇವರು ಮಧ್ಯ ಪ್ರವೇಶಿಸಿ ಆ ಆಗಂತುಕನಿಗೆ ಮಹಾದ್ವಾರದ ಛಾವಣೆಯಲ್ಲಿಯೇ ಮಲಗಲು ಹೇಳಿ ಹೋದರು.

ಬೆಳಗಿನ ಸಮಯ. ಅದೇ ಬೆಳ್ಳಿಚುಕ್ಕಿ ಮೂಡಿರಬಹುದು. ಆಗ ತಂತಿವಾದ್ಯದ ಮಧುರತರಂಗಗಳ ನಿನಾದ ಶ್ರೀಮಠದಲ್ಲೆಲ್ಲ ಹರಡಹತ್ತಿತ್ತು. ಅದರ ಮಧುರಾಲಾಪನೆಯಿಂದ ಎಚ್ಚೆತ್ತ ಶ್ರೀ ಜಗದ್ಗುರುಗಳವರು ಆ ಧ್ವನಿ ಬಂದ ಕಡೆಗೆ ಸಾವಕಾಶವಾಗಿ ಹೆಜ್ಜೆಹಾಕುತ್ತ ಮಹಾದ್ವಾರದವರೆಗೂ ಹೋದರು. ಅಲ್ಲಿ ನೋಡುತ್ತಾರೆ. ಮಧ್ಯಮ ವಯಸ್ಸಿನ ಓರ್ವನು ತನ್ನ ಕೈಯಲ್ಲಿದ್ದ ರುದ್ರವೀಣೆಯ ವಾದನದಲ್ಲಿ ತಲ್ಲೀನನಾಗಿ ಬಾಹ್ಯಪ್ರಪಂಚವನ್ನೇ ಮರೆತಿದ್ದನು. ಕೆಲವು ಸಮಯ ಕಳೆದ ಮೇಲೆ ತನ್ನ ಕಲಾತಪಸ್ಸಿನಿಂದ ಎಚ್ಚರಾಗಿ ಆ ಕಲಾವಿದ ಮುಖವೆತ್ತಿ ನೋಡಿದಾಗ ಶ್ರೀ ಜಗದ್ಗುರುಗಳವರ ದರ್ಶನವಾಯಿತು. ಶ್ರೀ ಸನ್ನಿಧಿಯವರು ಅವನ ಕಲಾನೈಪುಣ್ಯಕ್ಕೆ ಮೆಚ್ಚಿ, ಅವನನ್ನು ಶ್ರೀಮಠದಲ್ಲಿ ನಾಲ್ಕು ದಿನ ಇಟ್ಟುಕೊಂಡು ಯೋಗ್ಯ ಸಂಭಾವನೆ ಕೊಟ್ಟು ಬಟ್ಟೆಬರೆಗಳಿಂದ ಗೌರವಿಸಿ ಕಳಿಸಿದರು.

ಅಣ್ಣಿಗೇರಿಯ ಶ್ರೀಮಠದಲ್ಲಿ ಶ್ರೀ ಜಗದ್ಗುರುಗಳವರ ವಾಸ್ತವ್ಯವಿತ್ತು. ಒಂದು ಸಂಜೆ ಸನ್ನಿಧಿಯ ಸಮ್ಮುಖದಲ್ಲಿ ಮಠದ ಕಲಾವಿದರೊಬ್ಬರಿಂದ ಪಿಟೀಲುವಾದನ ಅತ್ಯಂತ ರಸವತ್ತಾಗಿ ನಡೆಯಿತು. ಈ ಕಲಾವಿದ ಅಫೀಮು ಸೇವನೆಯ ಹವ್ಯಾಸವುಳ್ಳವನಾಗಿದ್ದರಿಂದ ಮಠದಲ್ಲಿದ್ದೂ ಶ್ರೀ ಸನ್ನಿಧಿಯವರಿಗೆ ಕಾಣಿಸಿಕೊಳ್ಳುತ್ತಿರಲಿಲ್ಲ. ಅವನ ಕಲಾ ನೈಪುಣ್ಯಕ್ಕೆ ಮೆಚ್ಚಿದ ಶ್ರೀ ಜಗದ್ಗುರುಗಳವರು ಇನ್ನು ಮುಂದೆ ತಮ್ಮ ದರ್ಶನ ತೆಗೆದುಕೊಳ್ಳುವಲ್ಲಿ ಯಾವ ಭಯವೂ ಬೇಡವೆಂದು ಅಭಯದಾನ ಮಾಡಿದರು. ಅವರೇ ಪಿಟೀಲು ವಾದನದಲ್ಲಿ ಪ್ರಸಿದ್ಧರಾದ ಹರ್ಲಾಪುರದ ಒಂಟೆತ್ತಿನ ಮಠದ ಶ್ರೀ ಬಸಯ್ಯನವರು.

ಇವರ ಸಂಗೀತ ವಿದ್ಯಾಗುರುಗಳಾದ ಹರ್ಲಾಪೂರ ಮೂಗಂಡಗದಮಠದ ಚನಬಸಯ್ಯನವರು ಸಂಗೀತ ಸೇವೆಗಾಗಿ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠಕ್ಕೆ ಆಗಾಗ್ಗೆ ಬರುವದು ವಾಡಿಕೆ. ಇವರಿಗೆ ಗಾಂಜಾ ಸೇವನೆಯೊಂದು ದುರಭ್ಯಾಸ. ಒಮ್ಮೆ ಇವರು ಗದುಗಿನ ಶ್ರೀಮಠಕ್ಕೆ ಬಂದಾಗ ಶ್ರೀಜಗದ್ಗುರುಗಳ ಸನ್ನಿಧಿಗೆ ಸಾಷ್ಟಾಂಗ ಪ್ರಣಾಮ ಮಾಡಿದರು. ಅವರು ಹಾಗೆ ಪ್ರಣಾಮ ಸಲ್ಲಿಸಿದಾಗ ಅವರ ಜೇಬಿನಲ್ಲಿದ್ದ ಗಾಂಜಾ ಸೇದುವ ಚಿಲಿಮೆ ಕೆಳಗೆ ಬಿದ್ದಿತು. ಅದು ಶ್ರೀ ಜಗದ್ಗುರುಗಳವರ ದೃಷ್ಟಿಗೂ ಬಿದ್ದಿತು. ಇನ್ನು ಮುಂದೆ ಅದನ್ನು ತ್ಯಜಿಸಲು ಸನ್ನಿಧಿಯಿಂದ ಅಪ್ಪಣೆಯಾಗಬಹುದೆಂಬ ಭೀತಿಯುಂಟಾಗಿ ಶ್ರೀ ಚನ್ನಬಸಯ್ಯನವರು ಶ್ರೀ ಜಗದ್ಗುರುಗಳವರಿಗೆ ''ಬುದ್ಧಿ! ನನ್ನಿಂದ ತನ್ನನ್ನು ದೂರ ಮಾಡಬಾರದೆಂದು ಈ ಸಿದ್ಧ ಪತ್ರಿಯ ಚಿಲುಮೆ ನನಗಿಂತ ಮೊದಲಾಗಿ ತಮಗೆ ದಂಡವತ್ ಪ್ರಣಾಮಮಾಡಿದೆ'' ಎಂದು ಕೈಮುಗಿದು ವಿನಯದಿಂದ ಅರಿಕೆ ಮಾಡಿಕೊಂಡರು. ಈ ಸಮಯೋಚಿತ ಮಾತುಗಳಿಂದ ಸಂತುಷ್ಟರಾದ ಶ್ರೀ ಜಗದ್ಗುರುಗಳವರು 'ಆಗಲಿ' ಎಂದು ಅಪ್ಪಣೆ ಕೊಟ್ಟರು.

ಕಲೆ ಅವಲಂಬಿಸಿರುವದು ಪರಿಪಕ್ವ ಭಾವನೆಯನ್ನೇ ಹೊರತು ಜಾತಿಯನ್ನಲ್ಲ. ಅದು ಕುಲದ ಎಲ್ಲೆಯನ್ನು ಮೀರಿದೆ. ಅಂತೆಯೇ ಕಲಾವಿದ ಹಾಗೂ ಕಲಾಪ್ರೇಮಿ ಇವರಲ್ಲಿ ಭಾವ ಸಾಮರಸ್ಯವಿರುತ್ತದೆ. ಅಣ್ಣಿಗೇರಿಯ ಯಾಸಿನ್‌ಪೀರ್ ಕಮಲಾಪುರಿ ಎಂಬವರು ಸಿತಾರ ವಾದನದಲ್ಲಿ ಒಳ್ಳೇ ನೈಪುಣ್ಯತೆ ಪಡೆದ ಇಸ್ಲಾಮ್ ಬಾಂಧವರು. ಅಣ್ಣಿಗೇರಿಗೆ ಶ್ರೀ ಜಗದ್ಗುರುಗಳವರು ದಯಮಾಡಿಸಿದಾಗೆಲ್ಲ ಯಾಸಿನ್‌ಪೀರ್ ಕಮಲಾಪುರಿ ಅವರ ಸಿತಾರ ವಾದನದ ಸೇವೆ ಸನ್ನಿಧಿಯವರ ಸಮ್ಮುಖದಲ್ಲಿ ನಡೆಯಲೇಬೇಕು. ಹಾಗೆಯೇ ಅದು ಯಾವಾಗಲೂ ತಪ್ಪಿರಲಿಲ್ಲ.

### ಅನನ್ಯ ಗುರುಭಕ್ತಿ :

ಶ್ರೀ ಜಗದ್ಗುರು ಸನ್ನಿಧಿಯವರ ವ್ಯಕ್ತಿತ್ವದ ಮುಖ್ಯ ಆಸ್ತಿಯೆಂದರೆ ಗುರುಭಕ್ತಿ, ಸಿದ್ಧಲಿಂಗಾ ಎಂಬ ಪವಿತ್ರನಾಮ ಅವರ ಕರ್ಣರಂಧ್ರವನ್ನು ಪ್ರವೇಶಿಸುತ್ತಲೇ ಅವರು ಭಾವಪುಲಕಿತರಾಗುತ್ತಿದ್ದರು.

ಗದುಗು ಸಂಸ್ಥಾನ ಮಠದಲ್ಲಿ ಪ್ರತಿ ಶ್ರಾವಣ ಶ್ರೀ ಸಿದ್ಧೇಶ್ವರ ಮಹಾಪುರಾಣವನ್ನು ಹಚ್ಚುವದು ರೂಢಿ. ಸನ್ನಿಧಿಯವರು ಪುರಾಣಶ್ರವಣ ಮಾಡುವಾಗ ಸ್ನಾನಪೂಜೆ ತೀರಿಸಿಕೊಂಡು ಬಂದು, ತೊಯ್ದಕಾವಿಯ ಬಟ್ಟೆಯನ್ನೇ ಮೈತುಂಬ ಹೊದೆದುಕೊಂಡು ಕುರ್ಚಿಯ ಮೇಲೆ ಪದ್ಮಾಸನ ಹಾಕಿಕುಳಿತು ಪುರಾಣಶ್ರವಣ ಮಾಡುತ್ತಿದ್ದರು. ಶ್ರೀ ಸಿದ್ಧೇಶ್ವರ ಪುರಾಣ ಹಚ್ಚಿದೆ ಎಂದರೆ ಅಲ್ಲಿ ಸಿದ್ಧಲಿಂಗ ಪ್ರತ್ಯಕ್ಷ ಇದ್ದಾನೆ ಎಂಬುದೇ ಅವರ ನಂಬಿಕೆ.

ಶಿವಪೂಜಾ ಖೋಲಿಯಲ್ಲಿ ಅವರು ಮೂರ್ತಮಾಡುವ ಆಸನದ ಮೇಲ್ಭಾಗಕ್ಕೆ ಶ್ರೀ ಸಿದ್ಧೇಶ್ವರ ರಜತಮೂರ್ತಿ ಪುಷ್ಪಾಲಂಕಾರಗೊಂಡು ರಾರಾಜಿಸುತ್ತಿತ್ತು. ಪೂಜಾ ನಂತರ ಶ್ರೀ ಸನ್ನಿಧಿಯವರು ಸದರಿಗೆ ದಯಮಾಡಿಸಿದ ಕೂಡಲೇ ತಾವು ಮೂರ್ತ ಮಾಡುವ ಸಿಂಹಾಸನದ ಮೇಲ್ಭಾಗದಲ್ಲಿ ಕಟ್ಟಿದ ಅನಾದಿ ಸಿದ್ಧಲಿಂಗನ ಭಾವಚಿತ್ರಕ್ಕೆ ಪತ್ರ-ಪುಷ್ಪಗಳನ್ನು ಅರ್ಪಿಸಿ ತಮ್ಮ ಆಸನದಲ್ಲಿ ಮಂಡಿಸುತ್ತಿದ್ದರು. ಇಲ್ಲಿ ತಾವೆಂದರೆ ಕೇವಲ ಆತನ ಪ್ರತಿನಿಧಿ ಎಂಬುದೇ ಅವರ ಭಾವನೆ.

ಅವರ ಈ ಗಾಢವಾದ ಶ್ರದ್ಧೆಯೇ ಅವರಿಗೆ ಅಪಾರವಾದ ಆತ್ಮಬಲವನ್ನು ತಂದುಕೊಟ್ಟಿದ್ದಿತು. ಅವರ ಗುರುಗಳಾದ ಶ್ರೀ ವೃದ್ಧತೋಂಟದಾರ್ಯರ ಗದ್ದುಗೆ ಶ್ರೀ ಸಿದ್ಧೇಶ್ವರ ಜಗದ್ಗುರುಗಳವರ ಪಾಲಿಗೆ ಪ್ರತ್ಯಕ್ಷ ಗುರುಗಳು. ಮಠದ ಸದರ ಬಿಟ್ಟು ಹೊರಗೆ ಬಂದರೆ ತಮ್ಮ ಗುರುಗಳ ಗದ್ದುಗೆಯ ಪರಿಸರದಲ್ಲಿಯೇ ಖುರ್ಚಿಯ ಮೇಲೆ ಮೂರ್ತಮಾಡುತ್ತಿದ್ದರು. ತಾಯಿಯ ಹತ್ತಿರ ಮಗು ಸ್ವಸ್ಥಮಾನಸದಿಂದ ಕುಳಿತುಕೊಳ್ಳುವಂತೆ ಶ್ರೀ ಸನ್ನಿಧಿಯವರು ತಮ್ಮ ಗುರುಗಳ ಗದ್ದುಗೆಯ ಸಮೀಪ ಅಷ್ಟೇ ಪ್ರಶಾಂತ ಮನಸ್ಸಿನಿಂದ ಮೂರ್ತ ಮಾಡುತ್ತಿದ್ದರು.

ಕರ್ತೃ ಗದ್ದುಗೆಯಲ್ಲಿ ನಂದಾದೀವಿಗೆ ಸದಾ ಬೆಳಗುತ್ತಿತ್ತು. ಸ್ನಾನ ಮಾಡಿದವರಿಗೆ ಮಾತ್ರ ಅದರಲ್ಲಿ ಪ್ರವೇಶವಿತ್ತು. ಯಥಾ ಪ್ರಕಾರವಾಗಿ ತ್ರಿಕಾಲಪೂಜಾ ಜರುಗುತ್ತಿತ್ತು. ತಮ್ಮ ಸ್ನಾನ ಪೂಜಾದಿಗಳು ತೀರಿದ ನಂತರ ಈ ಗದ್ದುಗೆಯ ದರ್ಶನ ತೆಗೆದುಕೊಳ್ಳುವದು ಶ್ರೀ ಸನ್ನಿಧಿಯವರ ನಿತ್ಯಕ್ರಮ. ಹೊರಗೆ ಪ್ರಯಾಣ ಬೆಳೆಸುವಾಗಂತೂ ಗದ್ದುಗೆಯ ದರ್ಶನವಿಲ್ಲದೆ ಎಲ್ಲಿಗೂ ದಯಮಾಡಿಸುತ್ತಿರಲಿಲ್ಲ.

ಅದೇ ಮೇರೆಗೆ ಶ್ರೀ ಸನ್ನಿಧಿಯವರು ತಮ್ಮ ಹಿಂದಿನ ಯಾವತ್ತೂ ಗುರುಗಳ ಯೋಗಸಮಾಧಿಗಳ ದರ್ಶನವನ್ನು ಶ್ರಾವಣ, ಕಾರ್ತಿಕಮಾಸಗಳಲ್ಲಿ ತಪ್ಪದೇ ಮಾಡಿಕೊಳ್ಳುತ್ತಿದ್ದರು. ಹಾಗೆ ಅಲ್ಲಿಗೆ ದಯಮಾಡಿಸಿದಾಗ ಗಣಾರಾಧನೆ ನಡೆಯುತ್ತಿತ್ತು. ಡಂಬಳ, ಅಣ್ಣಿಗೇರಿ, ಮುಂಡರಗಿ, ಹಂಪಸಾಗರ, ಬಾಚಿಗೊಂಡನಹಳ್ಳಿ ಮತ್ತು ಹಿರೇಹಡಗಲಿ ಮುಂತಾದ ಊರುಗಳಿಗೆ ಮೇಲಿಂದ ಮೇಲೆ ದಯಮಾಡಿಸಿ ಅಲ್ಲಿಯ ತಮ್ಮ ಗುರುಗಳ ಗದ್ದುಗೆಯ ಪೂಜಾ ವ್ಯವಸ್ಥೆಯನ್ನು ಪರಿಶೀಲಿಸುತ್ತಿದ್ದರು. ಡಂಬಳ, ಅಣ್ಣಿಗೇರಿಗಳಿಗಂತೂ ವಿಶೇಷವಾಗಿ ದಯಮಾಡಿಸಿ ಹೆಚ್ಚು ದಿನಗಳಕಾಲ ಅಲ್ಲಿ ವಾಸ್ತವ್ಯ ಮಾಡುತ್ತಿದ್ದರು. ಗದುಗನ್ನು ಬಿಟ್ಟರೆ ಅವರು ವಿಶೇಷ ವಾಸ್ತವ್ಯ ಮಾಡುವ ಸ್ಥಳ ಡಂಬಳ.

ಪ್ರತಿ ಚೈತ್ರಶುದ್ಧ ಸಪ್ತಮಿಗೆ ಶ್ರೀ ಎಡೆಯೂರ ಕ್ಷೇತ್ರದಲ್ಲಿ ಜರುಗುವ ಮಹಾರಥೋತ್ಸವಕ್ಕೆ ತಮ್ಮ ಪರವಾಗಿ ತಮ್ಮ ಪ್ರತಿನಿಧಿಗಳೆಂದು, ಸಂಸ್ಥಾನಮಠದ ವ್ಯವಸ್ಥಾಪಕರಾದ ಶ್ರೀ ಅನ್ನದಾನ ಮರಿದೇವರನ್ನು ಕಳಿಸಿಕೊಡುತ್ತಿದ್ದರು. ಶ್ರೀ ಅನ್ನದಾನ ಮರಿದೇವರು ಮರಳಿದ ನಂತರ ಗದುಗಿನ ರಥೋತ್ಸವ ಜರುಗುತ್ತಿತ್ತು.

**ಭಾವೈಕ್ಯತೆ :**

ಪ್ರತಿಯೊಂದು ಆಸ್ತಿಕ ಮತ–ಧರ್ಮ–ಪಂಥಗಳಲ್ಲಿ ಜೀವ–ಜಗತ್ತು–ಈಶ್ವರ–ಮೋಕ್ಷ ಇವುಗಳ ಕಲ್ಪನೆ ಇದೆ. ಸರ್ವಶಕ್ತನಾದ ಭಗವಂತನಿಂದ ಹೊರಬಂದ ಜೀವನು ಪುನಃ ಆತನಲ್ಲಿ ಬೆರೆಯುವುದೇ ಮೋಕ್ಷವೆನಿಸಿದೆ. ಇದೇ ಪರಮಧ್ಯೇಯ. ಕೇವಲ ಸಾಧನೆಯ ಮಾರ್ಗಗಳಿಗಾಗಿ ಬಡಿದಾಡುವವರು ಅಜ್ಞಾನಿಗಳು. ಶ್ರೀ ಸಿದ್ಧೇಶ್ವರ ಜಗದ್ಗುರುಗಳವರದು ಇಂತಹದೇ ವಿಶಾಲದೃಷ್ಟಿ. ಈ ದೃಷ್ಟಿಯಿಂದ ಅವರಲ್ಲಿ ಮತಗಳ ವಿಷಯವಾಗಿ ಯಾವ ಭೇದಭಾವವೂ ಇರಲಿಲ್ಲ. ಶ್ರೀ ಜಗದ್ಗುರುಗಳವರು ಮಹಮ್ಮದೀಯ ಸಾಧುಗಳಾದ ಶ್ರೀ ಯಾಸನ್‌ಪೀರ್ ಕಮಲಾಪುರಿಯವರಿಗೆ ಅಣ್ಣಿಗೇರಿಯಲ್ಲಿ ಒಂದು ನಿವೇಶನವನ್ನು ದಯಪಾಲಿಸಿದ್ದು ಅವರ ಭಾವೈಕ್ಯ ದೃಷ್ಟಿಗೆ ನಿದರ್ಶನವಾಗಿದೆ. ಈ ವಿಷಯ ತಿಳಿದ ಹುಬ್ಬಳ್ಳಿಯವರಾದ ಸಯ್ಯದಗೌಸ ಮದ್ನಿ ಎಂಬ ವಿದ್ಯಾವಂತರು ತುಂಬಾ ಸಂತೋಷಪಟ್ಟು ಪುಷ್ಪಮಾಲೆ* ಎಂಬ ಉರ್ದುಶ್ಲೋಕಗಳ ಗ್ರಂಥರಚನೆಯ ಮೂಲಕ ತಮಗಾದ ಆನಂದವನ್ನು ವ್ಯಕ್ತಮಾಡಿರುವರು. ಇದರಲ್ಲಿಯ ಶ್ಲೋಕಗಳು ೨೩ ಇದ್ದು ಅದಕ್ಕೆ ವಿಸ್ತಾರವಾದ ಕನ್ನಡ ತಾತ್ಪರ್ಯವಿರುವದರಿಂದ ಆ ಎಲ್ಲ ತಾತ್ಪರ್ಯಗಳ ಸಂಕ್ಷಿಪ್ತ ಭಾವಾನುವಾದವನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

ಶ್ರೀ ಗುರು ತೋಂಟದಸ್ವಾಮಿಯವರು ಮಾನವಾಕೃತಿಯಿಂದ ಇದ್ದರೂ ಸೋಪೇರವಾನೆ ಅದಿಲ್‌ರಂತೆ ದಿವ್ಯ ಜ್ಞಾನಿಗಳು. ಇಂತಹ ಉದಾರಿಗಳು ಮೈಸೂರಿನಿಂದ ಹುಬ್ಬಳ್ಳಿಯವರೆಗೆ ನೋಡಿದರೂ ನಮಗೆ ಕಂಡಿಲ್ಲ. ದೇವರು ಇವರ ದೇಹದಲ್ಲಿ ಚಂದ್ರನನ್ನು ಇಟ್ಟಿರಬೇಕು. ಅಂತೆಯೇ ಅವರು ಹೀಗೆ ಬೆಳಗುತ್ತಿದ್ದಾರೆ. ಫಕೀರ–ಜಂಗಮರನ್ನು ಸಮಾನವಾಗಿ ಕಾಣುವ ಇವರನ್ನು ದೇವರು ಸುಖದಲ್ಲಿರಿಸಲಿ.

ಶಾಂತಾತ್ಮರಾದ ಇವರಲ್ಲಿ ದೇವರಿದ್ದಾನೆ (ಇಲ್ಲಿಲ್ಲಾಹ) ಎಂಬ ನಂಬಿಕೆ ಇದೆ. ಇದೇ ಇವರಿಗೆ ಸಾಗರವನ್ನು ದಾಟುವ ಸಾಧನವಾಗಿದೆ. ಇವರಲ್ಲಿ ವೇದಾಂತ ಜ್ಞಾನ ಉಂಟಾಗಿದೆ. ಇದಕ್ಕೆ ಕಾರಣ ಇವರ ಗುರುಗಳು ಪರಿಪೂರ್ಣಜ್ಞಾನಿಗಳಾದ ಸಿದ್ಧರೇ ಆಗಿರಬೇಕು. ಈ ಜ್ಞಾನದ ಫಲವಾಗಿ ಇವರಲ್ಲಿ ದೀನರ ಬಗ್ಗೆ ದಯಾಪರತೆ ಮತ್ತು ಅಂತರಂಗದಲ್ಲಿ ಶಿವಭಕ್ತಿ ಮತ್ತು ಬಹಿರಂಗದಲ್ಲಿ ಔದಾರ್ಯಗಳಿರುವವು. ಇಂಥವರಿಗೆ ದೇವರು ಅಪಾರ ಆಯುಷ್ಯವನ್ನು ಕೊಡಲಿ.

ಈ ಕಲಿಯುಗದಲ್ಲಿ ಎಲ್ಲರಿಗೂ ಹೊನ್ನು–ಹೆಣ್ಣು–ಮಣ್ಣು ಇವುಗಳಲ್ಲಿ ಆಸೆ ಇರುವದು. ಆದರೆ ಇವುಗಳ ಕರ್ತನಾದ ಪರಮೇಶ್ವರನಲ್ಲಿ ಬಹಳ ಜನರಿಗೆ ಲಕ್ಷ್ಯವೇ ಇರುವದಿಲ್ಲ ಮತ್ತು ದಾನ–ಧರ್ಮ–ಪರೋಪಕಾರ ಇವುಗಳಲ್ಲಿಯೂ

---

* ಇದು ಇತ್ತೀಚೆಗೆ ಲಿಂಗಾಯತ ಅಧ್ಯಯನ ಸಂಸ್ಥೆಯ ಮೂಲಕ ಪ್ರಕಟವಾಗಿದೆ.

ಮನಸ್ಸು ಇರುವದಿಲ್ಲ. ಆದರೆ ಶ್ರೀಗುರು ತೋಂಟದಸ್ವಾಮಿಯವರು ನಮ್ಮ ತಾಯಿಯಂತೆ ಯಾವಾಗಲೂ ಪರೋಪಕಾರ ನಿರತರು.

ಭೇದ-ಭಾವಕ್ಕೆ ಕಾರಣವಾದ ದ್ವೈತ ಬುದ್ಧಿ ನಷ್ಟವಾಗಿರಬೇಕಾದರೆ ಇವರಿಗೆ ಎಂತಹ ದೀಕ್ಷೆಯಾಗಿರಬೇಕು ? ರತ್ನ ಪರೀಕ್ಷಕನಿಗೆ ಮಾತ್ರ ರತ್ನದ ಬೆಲೆ ಗೊತ್ತಾಗುವಂತೆ ಗುಣಗ್ರಾಹಕ ದೃಷ್ಟಿಯಿದ್ದ ಇವರು ಗುಣಜ್ಞರನ್ನೇ ಆರಿಸುವರು. ಅಂತೆಯೇ ಈ ಗುರುಸ್ಥಾನ ಇವರಿಗೆ ದೊರೆತಿದೆ. ಸಹಸ್ರಾವಧಿ ಪ್ರಯತ್ನದಿಂದ ಯಾವ ಪದವಿ ಇವರಿಗೆ ದೊರೆಯಬೇಕೋ ಅದು ಇವರಿಗೆ ಈಗಾಗಲೇ ದೊರಕಿಬಿಟ್ಟಿದೆ. ಇಂತಹ ಗುಣರತ್ನವುಳ್ಳವರನ್ನುಕಂಡು ರತ್ನಗಳೂ ಸಹ ನಾಚುತ್ತವೆ. ಐಶ್ವರ್ಯದೊಡನೆ ಔದಾರ್ಯ ಎಷ್ಟು ಜನರಿಗೆ ಇರುತ್ತದೆ ?

ಪ್ರತಿಯೊಬ್ಬರಿಗೂ ಅವರವರ ಕರ್ಮಫಲ ಇದ್ದೇ ಇರುತ್ತದೆ. ಸದಾ ನಿಷ್ಕಾಮ ಕರ್ಮದಲ್ಲಿಯೇ ಇರುವ ಇವರು ನಿತ್ಯಮುಕ್ತರು. ಬಿಂಬದಂತೆ ಪ್ರತಿಬಿಂಬ. ಅದರಂತೆ ಇವರ ಸ್ಥಾನ ದೇವರಲ್ಲಿ ಸದಾ ಇರುತ್ತದೆ. ತಮ್ಮ ನಿರಹಂಕಾರ ಭಾವನೆಯಿಂದ ಇವರು ಲೋಹಚುಂಬಕದಂತೆ ದೇವರಿಂದ ಸೆಳೆಯಲ್ಪಟ್ಟಿರುವರು.

ಉಪಕಾರ ಮಾಡುವವರ ಹಿಂದೆ ದೇವರು ಇದ್ದೇ ಇರುತ್ತಾನೆ. ಆ ದೇವರ ಹತ್ತಿರ ಕತೆಬಿನ್ ತನ್ನ ಜೊತೆಗಾರನೊಡನೆ ಇದ್ದೇ ಇರುವನು. ಅವರು ತಮ್ಮ ದಫ್ತರುಗಳಲ್ಲಿ ಇವರ ಲೆಕ್ಕವನ್ನು ಇಟ್ಟೇ ಇರುವರು. ದಯಾಮಯನಾದ ಪರಮಾತ್ಮನು ಇವರನ್ನು ತನ್ನ ಅಂತಃಕರಣದ ನೆರಳಲ್ಲಿ ಸದಾ ಇಟ್ಟಿರುವನು.

ಗುರು ತೋಂಟದಸ್ವಾಮಿಗಳವರ ಜಾಗೆಯಲ್ಲಿ ಮಹಮ್ಮದಿಯ ಪೀರರ ಪ್ರಾರ್ಥನೆ ಸದಾ ನಡೆಯುತ್ತಿರುವದರಿಂದ ಆ ಫಲ ಕೀರ್ತಿಯಪುಸ್ತಕದಲ್ಲಿ ಬರೆಯಲ್ಪಡುತ್ತಿದೆ.

ಇವರಿಂದ ಉಪಕೃತರಾದವರು ಬುಲ್‌ಬುಲ್ ಪಕ್ಷಿಯಂತೆ ಇವರ ಗುಣಗಾನ ನಿತ್ಯ ಮಾಡುವರು. ಹಾಗೆ ಸ್ಮರಿಸುವದು ನ್ಯಾಯಸಮ್ಮತ. ದೇವರು ನ್ಯಾಯಪಕ್ಷಪಾತಿ. ಅಂತೆಯೇ ಈ ಗ್ರಂಥದ ಮೂಲಕ ಉಪಕಾರ ಸ್ಮರಿಸಲಾಗಿದೆ. ಸುಲೇಮಾನ ಅರಸನಂತೆ ದೊಡ್ಡವರಾಗಿರುವ ಇವರನ್ನು ನಾವೆಂತು ಕೊಂಡಾಡಬಹುದು ? ಅವರ ಮುಂದೆ ನಾವು ಒಂದು ಇರುವೆ. ಇದು ನಮ್ಮ ಅಳಿಲು ಸೇವೆ.

**ಕ್ರಮಬದ್ಧ ಜೀವನ :**

ನಿಸರ್ಗದಲ್ಲಿ ನಾವು ಕ್ರಮಬದ್ಧ ಜೀವನವನ್ನೇ ಕಾಣುತ್ತೇವೆ. ಸೂರ್ಯ-ಚಂದ್ರರ ಉದಯಾಸ್ತಗಳಲ್ಲಿ ಮತ್ತು ಋತುಮಾನಗಳ ಬದಲಾವಣೆಯಲ್ಲಿ ಇದನ್ನು ಮನಗಾಣಬಹುದು. ಶ್ರೀ ಜಗದ್ಗುರುಗಳವರ ನಿತ್ಯಾಚರಣೆಯಲ್ಲಿಯೂ ಈ ನಿಯಮಬದ್ಧತೆ ಇತ್ತು. ಅವರ ತ್ರಿಕಾಲ ಪೂಜೆಗಳು ಹಾಗೂ ವಿಶ್ರಾಂತಿ ಮೊದಲಾದವುಗಳು ಕಾಲೋಚಿತವನ್ನರಿತೇ ಸಾಗುತ್ತಿದ್ದವು.

ಜಗದ್ಗುರುಗಳು ವಿಶ್ರಾಂತಿ ಕಾಲದಲ್ಲಿ ಭಕ್ತ ಜನರ ಸಂದರ್ಶನದ ತೊಂದರೆಯಾಗಬಾರದೆಂದು ಖಾಕಿ ಪೋಷಾಕು ಧರಿಸಿದ ಒಬ್ಬ ಬಿಲ್ಲಾ ಸಿಪಾಯಿ ಸದರಿನ ಬಾಗಿಲ ಬಳಿ ಸದಾನಿಂತಿರುತ್ತಿದ್ದ. ಬಂದ ದರ್ಶನಾರ್ಥಿಗಳ ವಿಚಾರವನ್ನು ಸನ್ನಿಧಿಗೆ ಅರಿಕೆ ಮಾಡಿ ಅವರ ಅಪ್ಪಣೆ ದೊರೆತ ನಂತರ ಭಕ್ತರನ್ನು ಒಳಗೆ ಬಿಡುವದು. ಅವನ ಕೆಲಸ. ಆದರಂತೆ ಕರಿಯ ಜರದ ಪೋಷಾಕು ಧರಿಸಿದ ಬೆಳ್ಳಿಯ ದಂಡವನ್ನು ಹಿಡಿದ ಒಬ್ಬ ವೇಷಧಾರಿಯು ಜಗದ್ಗುರುಗಳವರ ಬಳಿಯಲ್ಲಿ ನಿಂತಿರುತ್ತಿದ್ದ. ಭಕ್ತರ ವಿಷಯವನ್ನು ಸನ್ನಿಧಿಗೆ ಅರಿಕೆ ಮಾಡಿ ಸನ್ನಿಧಿಯ ಅಪ್ಪಣೆಯನ್ನು ಭಕ್ತರಿಗೆ ತಿಳಿಸುವದು ಅವನ ಕೆಲಸ. ಹೀಗಾಗಿ ಜಗದ್ಗುರುಗಳವರ ದರ್ಶನ ಹೊರತುಪಡಿಸಿ ಭಕ್ತರಿಗೆ ವೃಥಾ ಕಾಲಾಕ್ಷೇಪ ಮಾಡಲು ಅವಕಾಶವಿರುತ್ತಿರಲಿಲ್ಲ. ವಿಶಾಲವಾದ ತಾಳೆಗರಿಯ ಬೀಸಣಿಕೆಯನ್ನು ಹಿಡಿದು ಯಾವಾಗಲೂ ಗಾಳಿಹಾಕುತ್ತಿದ್ದ ಸೇವಕನು ಸನ್ನಿಧಿಯ ಪಕ್ಕದಲ್ಲಿಯೇ ಇರುತ್ತಿದ್ದ, ಸನ್ನಿಧಿಯವರು ಸದರಿನಿಂದ ಹೊರಗೆ ದಯಮಾಡಿಸುವಾಗ ಮತ್ತೊಬ್ಬ ಸೇವಕನು ಒಂದು ಚಿಕ್ಕ ಗಾದೆ ಹಾಗೂ ಚಿತ್ರಾಸನಗಳನ್ನು ಹಿಡಿದು ಹಿಂಬಾಲಿಸುತ್ತಿದ್ದ. ಸನ್ನಿಧಿಯವರು ಎಲ್ಲಿ ಮೂರ್ತ ಮಾಡುವರೋ ಅಲ್ಲಿ ಅವುಗಳನ್ನು ಹಾಕಲಾಗುತ್ತಿತ್ತು. ಶ್ರೀ ಜಗದ್ಗುರುಗಳವರು ಕಂಡ ಕಂಡಲ್ಲಿ ಮೂರ್ತಮಾಡುತ್ತಿರಲಿಲ್ಲ. ಕೆಲವೊಂದು ವಿಶಿಷ್ಟ ಸ್ಥಾನಗಳಲ್ಲಿ ಮಾತ್ರ ಮೂರ್ತಮಾಡುತ್ತಿದ್ದರು. ಸನ್ನಿಧಿಯವರು ಮೂರ್ತ ಮಾಡುವಾಗ ಮತ್ತು ಆಸನದಿಂದ ಏಳುವಾಗ ಸೇವಕರು ಶ್ರೀ ಸನ್ನಿಧಿಯವರಿಗೆ ಹಸ್ತಲಾಘವ ಕೊಡುತ್ತಿದ್ದರು.

ಶ್ರೀ ಜಗದ್ಗುರುಗಳವರು ತಮ್ಮ ಬೆಳಗಿನ ಪೂಜೆ ತೀರಿಸಿಕೊಂಡು ಬಂದ ನಂತರ ಸದರಿನ ಮೇಲೆ ಅಂಕಣದಲ್ಲಿ ಹಾಕಿದ ಸಿಂಹಾಸನದಲ್ಲಿ ಮಂಡಿಸುತ್ತಿದ್ದರು. ಮಧ್ಯಾಹ್ನ ಸದರಿನ ಕೆಳಗಿನ ಅಂಕಣದಲ್ಲಿ ಹಾಕಿದ ಖುರ್ಚಿಯ ಮೇಲೆ ಮೂರ್ತಗೊಳ್ಳುತ್ತಿದ್ದರು. ಸಾಯಂಕಾಲ ನಾಲ್ಕು ಘಂಟೆಗೆ ತಮ್ಮ ಗುರುಗಳಾದ ಶ್ರೀ ವೃದ್ಧತೋಂಟದಾರ್ಯರ ಗದ್ದುಗೆಯ ಮುಂಭಾಗದಲ್ಲಿ ಹಾಕಿದ ಖುರ್ಚಿಯ ಮೇಲೆ ಆಸೀನರಾಗುತ್ತಿದ್ದರು. ಮುಂದೆ ಐದೂವರೆ ಘಂಟೆಗೆ ಮಹಾದ್ವಾರದವರೆಗೆ ದಯಮಾಡಿಸಿ ಕೇವಲ ಹತ್ತು–ಹದಿನೈದು ನಿಮಿಷಗಳವರೆಗೆ ಅಲ್ಲಿ ನಿಂತು ಆಗ ಬಂದ ದರ್ಶನಾರ್ಥಿಗಳಿಗೆ ದರ್ಶನ ಕೊಟ್ಟು ಹಿಂದಿರುಗುತ್ತಿದ್ದರು. ಬಳಿಕ ಬಗೀಚದ ಕಡೆಗಾಗಲಿ ಇಲ್ಲವೆ ಚೌಕಿಯಲ್ಲಿರುವ ಶ್ರೀ ಕೊಟ್ಟೂರ ಸ್ವಾಮಿಗಳ ಗದ್ದುಗೆಯ ಕಡೆಗಾಗಲಿ ವಿಹಾರಾರ್ಥವಾಗಿ ತಮ್ಮ ಜೊತೆ ಇದ್ದ ಸೇವಕನೊಡನೆ ದಯಮಾಡಿಸುತ್ತಿದ್ದರು.

ಹೊಲದಲ್ಲಿ ಬೆಳೆ ಇದ್ದಾಗ ಅದನ್ನು ನೋಡಲಿಕ್ಕೆಂದು ಯಾವಾಗಾದರೊಮ್ಮೆ ತಮ್ಮ ಹೊಲಕ್ಕೆ ದಯಮಾಡಿಸುತ್ತಿದ್ದರು. ಹೀಗೆ ಅಲ್ಲಿಗೆ ದಯಮಾಡಿಸುವಾಗ ಜೋಡಿ ಕುದುರೆಯ ಬಗಿಯನ್ನು ಉಪಯೋಗಿಸಲಾಗುತ್ತಿತ್ತು. ಆಗ ಅದರ ಹಿಂದೆ ಸಮವಸ್ತ್ರ ಧರಿಸಿ ಬಿಚ್ಚುಗತ್ತಿ ಹಿಡಿದ ಇಬ್ಬರು ಅಶ್ವಾರೋಹಿಗಳು ಹಿಂಬಾಲಿಸುತ್ತಿದ್ದರು. ಕರಿಯ ಪೋಷಾಕು ಧರಿಸಿದ ಚೋಪದಾರನು ಬಗಿ ಹೊರಡುವ ಪೂರ್ವದಲ್ಲಿ ಬೆಳ್ಳಿಯ

ದೊಡ್ಡ ಪ್ರಮಾಣದ ತುತ್ತೂರಿಯನ್ನು ಊದುತ್ತಿದ್ದ. ಆ ಧ್ವನಿ ಕನಿಷ್ಠ ಒಂದೆರಡು ಫರ್ಲಾಂಗವಾದರೂ ಕೇಳುತ್ತಿರಬೇಕು. ತುತ್ತೂರಿಯ ಧ್ವನಿಯನ್ನಾಲಿಸಿದ ಭಕ್ತರು ಮಾರ್ಗದ ಇಕ್ಕೆಲಗಳಲ್ಲಿ ನಿಂತು ಸಾಗುವ ಬಗಿಯಲ್ಲಿ ಕುಳಿತ ಸನ್ನಿಧಿಯವರಿಗೆ ಬಾಗಿ ಕೈಜೋಡಿಸಿ ವಂದನೆ ಸಲ್ಲಿಸುತ್ತಿದ್ದರು. ಆ ಮಂಗಲಮಯ ದೃಶ್ಯವನ್ನು ಕಾಣುವದೇ ಭಕ್ತರಿಗೊಂದು ಅಹೋಭಾಗ್ಯ. ಪರಸ್ಥಳಕ್ಕೆ ಬಗಿಯಲ್ಲಿ ದಯಮಾಡಿಸುವಾಗಲೂ ಕೂಡ ಇಂತಹ ಸನ್ನಿವೇಶವೇ ಇರುತ್ತಿತ್ತು. ತಾವು ತಲುಪುವ ಗ್ರಾಮ ಸಮೀಪಿಸಿದ ಕೂಡಲೇ ಚೋಪದಾರನು ತುತ್ತೂರಿಯನ್ನು ಊದುತ್ತಿದ್ದ ಆಗ ಈ ಧ್ವನಿಯನ್ನು ಆಲಿಸಿದ ಊರಿನ ಪ್ರಮುಖರು ಊರ ಹೊರಗೆ ಬಂದ ಶ್ರೀ ಜಗದ್ಗುರುಗಳವರನ್ನು ಭಕ್ತಿ ಪೂರ್ವಕವಾಗಿ ಬರಮಾಡಿಕೊಳ್ಳುತ್ತಿದ್ದರು.

ಇಷ್ಟೆಲ್ಲ ರೀತಿಯಲ್ಲಿ ಒಂದು ನಿಬಂಧನೆಗೊಳಪಟ್ಟು ನಡೆಯುವ ಉದ್ದೇಶವೆಂದರೆ ಅನಾದಿ ಸಿದ್ಧಲಿಂಗನ ಜಗದ್ಗುರುಪೀಠ ಗೌರವವನ್ನು ಕಾಯ್ದುಕೊಳ್ಳುವದು ಮತ್ತು ಚಂಚಲವಾದ ಮನಸ್ಸಿನಲ್ಲಿ ಸ್ವೇಚ್ಛಾಚಾರಕ್ಕೆ ಆಸ್ಪದವಾಗಬಾರದೆಂಬುದು. ಈ ಕ್ರಮವನ್ನು ಶ್ರೀ ಜಗದ್ಗುರು ಸನ್ನಿಧಿಯವರು ಚಾಚೂ ತಪ್ಪದಂತೆ ತಮ್ಮ ಜೀವನದುದ್ದಕ್ಕೂ ನಡೆಯಿಸಿಕೊಂಡು ಬಂದರು.

**ಗುಣೈಕ ದೃಷ್ಟಿ :**

ತ್ರಿಗುಣಾತ್ಮಕವಾದ ಈ ಜಗತ್ತಿನಲ್ಲಿ ಗುಣ-ದೋಷಗಳು ಇದ್ದೇ ಇರುತ್ತವೆ. ನೀರು ಮಿಶ್ರಿತವಾದ ಹಾಲಿನಿಂದ ಹಂಸಪಕ್ಷಿ ತನ್ನ ಚಂಚುಪುಟದ ಮೂಲಕ ಹಾಲನ್ನಷ್ಟೇ ಗ್ರಹಿಸುವಂತೆ ಗುಣಜ್ಞರು ಸಜ್ಜನರನ್ನಷ್ಟೇ ಗುರುತಿಸಿ ಅವರಿಗೆ ಪ್ರೋತ್ಸಾಹ ನೀಡುವರು. ಪೂಜ್ಯ ಜಗದ್ಗುರುಗಳು ಗುರುತಿಸಿದ ಸಜ್ಜನರ ಸರಮಾಲೆ ಹೀಗಿದೆ.

**ಶ್ರೀ ಅನ್ನದಾನಮರಿದೇವರು :**

ಶ್ರೀ ಅನ್ನದಾನಮರಿದೇವರು ಗದುಗಿನ ಶ್ರೀಮಠಕ್ಕೆ ತಮ್ಮ ಬಾಲ್ಯಾವಸ್ಥೆಯಲ್ಲಿಯೇ ಮರಿದೇವರಾಗಿ ಬಂದರು. ಮುಂದೆ ಕೆಲವೇ ಕಾಲದಲ್ಲಿ ಅವರು ತಮ್ಮ ನಿಷ್ಕಪಟ ಸೇವಾಭಾವನೆ ಹಾಗೂ ಪ್ರಾಮಾಣಿಕತೆ ಇವುಗಳಿಂದಾಗಿ ಕ್ರಮೇಣ ಶ್ರೀ ಜಗದ್ಗುರುಗಳವರ ವಿಶ್ವಾಸಕ್ಕೆ ಪಾತ್ರರಾದರು. ವಿರಾಗ ಮನೋಭಾವದ ಅವರು ಕೊನೆಯವರೆಗೂ ಕೇವಲ ಮರಿದೇವರಾಗಿಯೇ ಉಳಿದರು. ಬಯಸಿದ್ದರೆ ಚರಾಧಿಕಾರ ಸ್ವೀಕರಿಸಿ ಯಾವುದಾದರೊಂದು ದೊಡ್ಡ ಶಾಖಾಮಠಕ್ಕೆ ಅಧಿಕಾರಿಗಳಾಗಿ ಹೋಗಬಹುದಾಗಿತ್ತು. ಶ್ರೀ ಮಠಕ್ಕೆ ಈ ಮರಿದೇವರಿಂದ ಸಲ್ಲಿದ ಸೇವೆ ಅಪಾರ. ಮೈಸೂರು ಮಹಾರಾಜರಿಗೆ ಹುಜೂರ ಸೆಕ್ರೆಟರಿ ಇರುವಂತೆ ಶ್ರೀ ಸನ್ನಿಧಿಯವರಿಗೆ ಶ್ರೀ ಅನ್ನದಾನಮರಿದೇವರಿದ್ದರು.

ಶ್ರೀ ಜಗದ್ಗುರು ಮಹಾಸನ್ನಿಧಿಯವರು ಸ್ವಭಾವತಃ ಗಂಭೀರ ಪ್ರಕೃತಿಯುಳ್ಳವರು ಮತ್ತು ನಿರ್ಲಿಪ್ತರು. ಈ ಅವರ ಸ್ವಭಾವಕ್ಕೆ ಚ್ಯುತಿಬಾರದಂತೆ ಮತ್ತುಶ್ರೀಮಠವು ಜನಸಂಪರ್ಕದಿಂದ ದೂರ ಉಳಿಯದಂತೆ ನೋಡಿಕೊಂಡ ಬಹು ದೊಡ್ಡ ಶ್ರೇಯಸ್ಸು ಶ್ರೀ ಅನ್ನದಾನಮರಿದೇವರಿಗೆ ಸಲ್ಲುತ್ತದೆ. ಮುಖ್ಯವಾಗಿ ಶ್ರೀ ಅನ್ನದಾನಮರಿದೇವರು ಭಕ್ತರು ಹಾಗೂ ಜಗದ್ಗುರುಗಳ ಮಧ್ಯ ಸೇತುವೆ ಆಗಿದ್ದರು.

ಗುರುಗಳೊಡನೆ ತಮಗಿದ್ದ ಸಂಬಂಧವನ್ನು ಭಕ್ತರು ಶ್ರೀ ಅನ್ನದಾನಮರಿ ದೇವರಲ್ಲಿಯೇ ಕಾಣುತ್ತಿದ್ದರು. ಹೀಗಾಗಿ ಅವರು ವಿರಕ್ತ ಮೂರ್ತಿಗಳಾಗಿದ್ದರೂ ಮಠದ ಭಕ್ತರಾದ ಯಾವತ್ತೂ ಸ್ತ್ರೀ–ಪುರುಷರು ಅವರನ್ನು ಪ್ರೇಮದಿಂದ ಅಣ್ಣಾ ಎಂದು ಕರೆಯುತ್ತಿದ್ದರು.

ಶ್ರೀ ಅರಟಾಳ ರುದ್ರಗೌಡರೇ ಮುಂತಾದ ಸಮಾಜ ಮುಖಂಡರು ವಿಶೇಷವಾಗಿ ಶ್ರೀಮಠಕ್ಕೆ ಬರುವದು ವಾಡಿಕೆ. ಹಾಗೆ ಅವರು ಬಂದಾಗೆಲ್ಲ ಶ್ರೀ ಅನ್ನದಾನಪ್ಪಣ್ಣನವರನ್ನೇ ಹುಡುಕಿಕೊಂಡು ಬರಬೇಕು. ಏಕೆಂದರೆ ಶ್ರೀ ಜಗದ್ಗುರುಗಳೊಡನೆ ಯಾರದೂ ನೇರ ಸಂಪರ್ಕವಿರುತ್ತಿರಲಿಲ್ಲ.

ಗದುಗಿನ ಲಘು ರಥೋತ್ಸವದ ದಿವಸವೇ ಅವರು ಲಿಂಗದೊಳಗಾದರು. ಆಗ ಅಣ್ಣಾ.... ಅಣ್ಣಾ ಎಂದು ಆಲ್ಪರಿಯುವ ಹೆಣ್ಣು ಮಕ್ಕಳ ಕಣ್ಣೀರಿನ ಕಥೆ ನೆನಪಾದರೆ ಈಗಲೂ ಕಣ್ಣುಗಳು ತೇವಗೊಳ್ಳುತ್ತವೆ. ಅಂದು ಮಠದ ಭಕ್ತರಾದ ಗದುಗಿನ ಹೆಣ್ಣು ಮಕ್ಕಳು ನಿಜವಾಗಿಯೂ ತಮ್ಮ ಪಾರಮಾರ್ಥಿಕ ಅಣ್ಣನನ್ನು ಕಳೆದುಕೊಂಡು ಅನಾಥರಾದರು. ಶ್ರೀ ಅನ್ನದಾನಮರಿದೇವರ ಸಮಾಧಿ ಶ್ರೀ ಸಿದ್ಧೇಶ್ವರ ಜಗದ್ಗುರುಗಳ ಗದ್ದುಗೆಯ ಮುಂಭಾಗದ ಪಾತಾಳ ಅಂಕಣದಲ್ಲಿಯ ಮಧ್ಯಭಾಗದಲ್ಲಿ ಇದೆ.

ಶ್ರೀ ಅನ್ನದಾನಮರಿದೇವರು ಲಿಂಗದೊಳಗಾದ ನಂತರ ಶ್ರೀ ಜಗದ್ಗುರುಗಳವರು ಕೇವಲ ಹತ್ತುವರ್ಷಮಾತ್ರ ಇದ್ದರು. ಈ ಅವಧಿಯಲ್ಲಿ ಮೊದಲೇ ಏಕಾಂತ ಪ್ರಿಯರಾದ ಇವರು ಇನ್ನೂ ಹೆಚ್ಚು ನಿರ್ಲಿಪ್ತ ಮನೋಭಾವದವರಾದರು. ಹೀಗೆ ಶ್ರೀ ಅನ್ನದಾನ ಮರಿದೇವರು ತಮ್ಮ ಅಪಾರ ಗುರುಭಕ್ತಿಯ ಮೂಲಕ ಶ್ರೀ ಜಗದ್ಗುರುಗಳವರ ಅಂತರಂಗವನ್ನೇ ಸೂರೆಗೊಂಡಿದ್ದರು.

**ಶ್ರೀ ಕೋಟಿ ಬಸವಪ್ಪಶಾಸ್ತ್ರಿಗಳು :**

ಗದುಗಿನ ಶ್ರೀಮಠಕ್ಕೆ ಒಬ್ಬ ಅಂಧ ಬಾಲಕನು ಪ್ರತಿದಿನವೂ ಒಬ್ಬರನ್ನು ಜೊತೆ ಮಾಡಿಕೊಂಡು ಬಂದು ಶ್ರೀ ಮಠದ ಪಾಠಶಾಲೆಯ ಕಟ್ಟೆಯ ಮೇಲೆ ಕುಳಿತುಕೊಳ್ಳುತ್ತಿದ್ದ. ಪಾಠಶಾಲೆಯಲ್ಲಿ ನಡೆಯುವ ವಿಷಯಗಳು ಈ ಬಾಲಕನಿಗೆ ಮನನವಾಗುತ್ತಿದ್ದವು.

ಅಂಧ ಬಾಲಕನ ಈ ನಿತ್ಯಕ್ರಮ ಶ್ರೀ ಜಗದ್ಗುರು ಸನ್ನಿಧಿಗೆ ಶ್ರೀ ಅನ್ನದಾನಮರಿದೇವರ ಮೂಲಕ ನಿವೇದಿಸಲ್ಪಟ್ಟಿತು. ಅಂದಿನಿಂದ ಈ ಬಾಲಕ ಪಾಠಶಾಲೆಯ ವಿದ್ಯಾರ್ಥಿಗಳಲ್ಲಿ ಒಬ್ಬನಾದ. ಕೆಲ ಕಾಲದ ನಂತರ ಇವನು ಒಬ್ಬ ದೊಡ್ಡ ಪಂಡಿತನಾಗಿ ಇದೇ ಪಾಠಶಾಲೆಯ ಪ್ರಾಧ್ಯಾಪಕನೂ ಆದ ಪಂಡಿತ ಕೋಟಿ ಬಸವಶಾಸ್ತ್ರಿಗಳು ಎಂಬ ನಾಮಧೇಯದಿಂದ ವಿಖ್ಯಾತನಾದವನು ಇದೇ ಬಾಲಕ. ಸ್ಮರಣೀಯ ಶ್ರೀ ಬಸವಪ್ಪಶಾಸ್ತ್ರಿಗಳು ಅನಾದಿ ತೋಂಟದ ಸಿದ್ಧಲಿಂಗನ ದಿವ್ಯಪರಂಪರೆಯನ್ನು ಅಧಿಕೃತವಾಗಿ ಸಾರಿಹೇಳುವ 'ನಿರಂಜನ ಜಂಗಮವಂಶ ದರ್ಪಣ' ಎಂಬ ಗ್ರಂಥವನ್ನು ರಚಿಸಿ ಸಾರಸ್ವತ ಪ್ರಪಂಚಕ್ಕೆ ಅಪೂರ್ವ ಕೊಡುಗೆ ನೀಡಿದ್ದಾರೆ.

**ಶ್ರೀ ಕಲ್ಲಿನಾಥ ಕವಿಗಳು :**

ಶ್ರೀಕ್ಷೇತ್ರ ಡಂಬಳದಲ್ಲಿ ರಥೋತ್ಸವದ ಸಮಯ. ಅದರ ಅಂಗವಾಗಿ ಶ್ರೀ ಜಗದ್ಗುರು ಸನ್ನಿಧಾನದಲ್ಲಿ ಸಭೆ ಜರುಗಿದ್ದಿತು. ಸಭೆಯಲ್ಲಿ ಸಂಚಾಲಕರು ಎದ್ದು ನಿಂತು ಒಬ್ಬ ಅಶುಕವಿಗಳು ಸ್ವರಚಿತ ಕವನವನ್ನು ಸಭೆಯಲ್ಲಿ ಶೃತಪಡಿಸುವರು ಎಂದು ಸೂಚಿಸಿದರು. ಆ ಮೇರೆಗೆ ಮಧ್ಯಮ ವಯಸ್ಸಿನವರೊಬ್ಬರು ಎದ್ದು ನಿಂತು ತಾವೇ ರಚಿಸಿದ ತೋಂಟದಾರ್ಯ ಪರಂಪರೆಯ ಹದಿನಾರು ಶ್ಲೋಕಗಳ ಕನ್ನಡ ಸ್ತೋತ್ರವನ್ನು ಓದಿ ಹೇಳಿದರು. ಈ ಸ್ತೋತ್ರ ಪದ್ಯಗಳಲ್ಲಿ ಮೂರು ಪದ್ಯಗಳು ಮಾತ್ರ ಈ ಲೇಖಕನ ನೆನಪಿನಲ್ಲಿದ್ದು ವಾಚಕರ ಅವಗಾಹನೆಗಾಗಿ ಅವನ್ನು ಇಲ್ಲಿ ಕೊಡಲಾಗಿದೆ.

**ಶ್ರೀ ಸಿದ್ಧಲಿಂಗ ಸ್ತೋತ್ರ :**

ಮೃಡನ ಸದ್ಧರ್ಮವ ।
ಪೊಡವಿಯಲ್ಲವಚರಸಿ । ಬಿಡದೇ ಬೋಧಿಸಿದ ॥
ಯಡಿಯೂರ ತೋಂಟದ ।
ಒಡೆಯ ಸಿದ್ಧೇಶಾ ಕೃಪೆಯಾಗು ॥ ೧ ॥

**ಶ್ರೀ ಬೋಳಬಸವ ಸ್ತೋತ್ರ :**

ಅಳಿವ ತನುವನು ಬಿಟ್ಟ ।
ಸೆಳೆವ ಇಂದ್ರಿಯ ಸುಟ್ಟ । ಪಂಚೇಂದ್ರಿಯಗಳ ॥
ನಳಿದ ನಿರಕ್ಷರದ ।
ಮಳ ಬೋಳ ಬಸವ ಕೃಪೆಯಾಗು ॥ ೨ ॥

### ಶ್ರೀ ಅರ್ಧನಾರೀಶ್ವರ ಸ್ತೋತ್ರ :

ಮೂರು ಮಲಗಳ ಬಿಟ್ಟ ।
ಮಾರ ವಿಕೃತಿಯ ಸುಟ್ಟು । ಭಾರೀ ತನುವಿನೊಳು ॥
ನಾರೀಯಳ ಪಟ್ಟರ್ಧ ।
ನಾರೀ ನೀ ಯೆನಗೆ ಕೃಪೆಯಾಗು ॥ ೩ ॥

ಸಭೆ ಈ ಕಾವ್ಯ ವಾಚನವನ್ನು ಏಕಾಗ್ರ ಚಿತ್ತದಿಂದ ಕೇಳಿ ಕರತಾಡನ ಹಾಗೂ ಹರ್ಷೋದ್ಗಾರಗಳಿಂದ ಸ್ವಾಗತಿಸಿತು. ಈ ಕಾವ್ಯವಾಚನದಿಂದ ಸಂಪ್ರೀತರಾದ ಶ್ರೀ ಜಗದ್ಗುರುಗಳು ಇವರನ್ನು ತಮ್ಮ ಸಂಸ್ಥಾನದಲ್ಲಿ ಆಸ್ಥಾನಕವಿಗಳನ್ನಾಗಿ ನೇಮಿಸಿಕೊಂಡರು. ಇವರೇ ಶ್ರೀ ಕಲ್ಲಿನಾಥಶಾಸ್ತ್ರಿಗಳು. ಶ್ರೀ ಅನ್ನದಾನ ಮರಿದೇವರ ಚಿಕ್ಕತಮ್ಮಂದಿರು. ಇವರಿಂದ ರಚಿತವಾದ ಮಹಾಸ್ವಾಮಿಯ ಅನೇಕ ಸ್ತೋತ್ರಗಳು ಹಾಗೂ ಮಂಗಲಗಳು ಈಗಲೂ ಹಳಬರಲ್ಲಿ ಕಂಠಸ್ಥವಾಗಿ ಉಳಿದಿವೆ. ಇವರಿಗೆ ಏಳು ಜನ ಮಕ್ಕಳಾದರೂ ದೈವವಶಾತ್ ಅವು ಒಂದೂ ಉಳಿಯಲಿಲ್ಲ. ಇದರಿಂದ ಅವರ ಧರ್ಮಪತ್ನಿ ತುಂಬಾ ಶೋಕವಿಷ್ಟರಾದರು. ಶಾಸ್ತ್ರಿಗಳು ಅನಾದಿ ಶ್ರೀ ಸಿದ್ಧಲಿಂಗನ ಮೇಲೆ ಒಂದು ಜೋಗುಳ ಪದ್ಯವನ್ನು ರಚಿಸಿ ತಮ್ಮ ಮಡದಿಗೆ ಕೊಟ್ಟು ಅದನ್ನು ತನ್ನ ಇಷ್ಟಲಿಂಗ ಪೂಜಾನಂತರ ನಿತ್ಯಪಠಿಸುವಂತೆ ತಿಳಿಸಿದರು. ಮುಂದೆ ಅದರ ಮಹಿಮೆಯಿಂದ ಆ ತಾಯಿ ಒಂದು ಗಂಡು ಹಾಗೂ ಎರಡು ಹೆಣ್ಣು ಮಕ್ಕಳಿಗೆ ಜನ್ಮ ನೀಡಿದಳು. ಮಹಾಸ್ವಾಮಿಯ ಕೃಪೆಯಿಂದ ಪಲ್ಲವಿಸಿದ ಆ ಸಂತಾನದ ಬಳ್ಳಿ ಶಾಸ್ತ್ರಿಗಳವರ ಅನನ್ಯ ಭಕ್ತಿಯನ್ನು ಇಂದಿನವರೆಗೂ ಸಾರಿಹೇಳುತ್ತದೆ.

### ಶ್ರೀ ಕರಿಬಸವ ಗವಾಯಿಗಳು :

ಶ್ರೀ ಜಗದ್ಗುರು ಸನ್ನಿಧಿಯವರು ಒಂದು ಸಾಯಂಕಾಲ ದೀಪಾರಾಧನೆಯ ಸಮಯಕ್ಕೆ ಎಂದಿನಂತೆ ಸದರಿನಲ್ಲಿ ಆಸನದ ಮೇಲೆ ವಿರಮಿಸಿದ್ದರು. ನಿತ್ಯದ ಪದ್ಧತಿಯಂತೆ ಅಂದೂ ಸಹ ಶ್ರೀಮಠದ ವಿದ್ಯಾರ್ಥಿ ವೃಂದದಿಂದ ಮಂಗಲದ ಸೇವೆ ನಡೆಯಿತು. ಅಂದಿನ ಸರತಿಯಂತೆ ಓರ್ವ ಏಳುವರ್ಷದ ಬಾಲಕನ ಒಂದು ಮಂಗಲಗೀತೆಯನ್ನು ಕೇಳುತ್ತಿರುವಂತೆ ಶ್ರೀ ಜಗದ್ಗುರುಗಳವರು ಭಾವಪರವಶ ರಾದರು. ಕರ್ನಾಟಕ ಸಂಗೀತದ ಭೈರವಿ ರಾಗದ ಈ ಮಂಗಲಗೀತೆಯಲ್ಲಿ ಆರ್ತಭಕ್ತನ ಮೊರೆಯೇ ಕೇಳಿ ಬರುತ್ತಿತ್ತು. ''ಯಾರು ಈ ಬಾಲಕ ?'' ಎಂದು ಶ್ರೀ ಸನ್ನಿಧಿಯವರು ಉಳಿದ ವಿದ್ಯಾರ್ಥಿಗಳನ್ನು ಕೇಳಿದರು. ''ಇವನು ಶ್ರೀಮಠದ ಅನ್ನದಾನಮರಿದೇವರ ಅಣ್ಣಂದಿರರಾದ ಶ್ರೀ ಚನಬಸಯ್ಯನವರ ಮಗ. ಆತನ ಹೆಸರು ಕರಿಬಸವಯ್ಯ. ಈತನ ತಂದೆ-ತಾಯಿಗಳು ತೀರಿಹೋಗಿದ್ದರಿಂದ ಆ ಊರ ಹಿರಿಯರು ಈತನನ್ನು ಇಲ್ಲಿಗೆ ಕರೆದುಕೊಂಡು ಬಂದು ಮೊನ್ನೆ ಶ್ರೀ ಅನ್ನದಾನಮರಿದೇವರಿಗೆ ಒಪ್ಪಿಸಿ ಹೋದರು''. ಎಂದು ಹೇಳಿದರು.

ಅಂದಿನಿಂದ ಈ ಬಾಲಕ ಶ್ರೀ ಜಗದ್ಗುರು ಮಹಾಸನ್ನಿಧಿಯ ಕೃಪಾಪುತ್ರನಾದ. ಬಾಲಕನ ಭಾಗ್ಯದ ಬಾಗಿಲು ತೆರೆಯುವ ಕಾಲ ಸನ್ನಿಹಿತವಾಯಿತು.

ಗುರುಗಳ ಅನುಗ್ರಹ ಶಕ್ತಿಯೇ ಅಂತಹದು. ಕದರಮಂಡಲಗಿಯ ಸುಪ್ರಸಿದ್ಧ ದಕ್ಷಿಣಾಧಿ ಸಂಗೀತ ವಿದ್ವಾಂಸರಾದ ಶ್ರೀ ಬಸಪ್ಪಗವಾಯಿಗಳು ಶ್ರೀ ಜಗದ್ಗುರುಗಳ ದರ್ಶನಾರ್ಥವಾಗಿ ಒಮ್ಮೆ ಗದಗ ಸಂಸ್ಥಾನಮಠಕ್ಕೆ ಆಗಮಿಸಿದರು. ದಕ್ಷಿಣಾದಿ ಸಂಗೀತದಲ್ಲಿ ನಿಷ್ಣಾತರಾದ ಅವರು ಭೈರವಿ ರಾಗದಲ್ಲಿ ತುಂಬಾ ಪಳಗಿದವರಾದ್ದರಿಂದ ಅವರಿಗೆ ಭೈರವಿಬಸಪ್ಪನವರು ಎಂದೇ ಕರೆಯಲಾಗುತ್ತಿತ್ತು. ಒಂದು ದಿನ ಶ್ರೀ ಬಸಪ್ಪನವರು ಶ್ರೀ ಜಗದ್ಗುರುಗಳ ಸನ್ನಿಧಾನದಲ್ಲಿ ತಮ್ಮ ಸಂಗೀತಸೇವೆ ಸಲ್ಲಿಸಿದರು. ಶ್ರೀ ಬಸಪ್ಪ ಗವಾಯಿಗಳಿಗೆ ಶ್ರೀಮಠದಿಂದ ಯಥೋಚಿತ ಸಂಭಾವನೆ ಶ್ರೀ ಜಗದ್ಗುರುಗಳವರ ಆಶೀರ್ವಾದದೊಡನೆ ದೊರೆಯಿತು. ಅನಂತರ ಶ್ರೀ ಜಗದ್ಗುರು ಸನ್ನಿಧಿಯವರು ಶ್ರೀ ಬಸಪ್ಪ ಗವಾಯಿಗಳನ್ನು ಉದ್ದೇಶಿಸಿ.

''ಬಸಪ್ಪನವರೇ ! ನಿಮಗೊಂದು ನಮ್ಮ ಮಠದ ಸೇವೆಯನ್ನು ಒಪ್ಪಿಸುತ್ತೇವೆ. ಇಲ್ಲಿ ನಿಂತಿರುವ ಈ ಬಾಲಕನ ತಂದೆ ಹರ್ಲಾಪೂರ ಚನಬಸಯ್ಯನವರು. ಹೆಸರುವಾಸಿಯಾದ ಪಿಟೀಲುವಾದಕರು. ತಂದೆ–ತಾಯಿಗಳನ್ನು ಕಳೆದುಕೊಂಡ ಈ ಬಾಲಕ ಈಗ ನಮ್ಮ ಆಶ್ರಯದಲ್ಲಿದ್ದಾನೆ. ಇವನ ತಂದೆಯ ಶಿಷ್ಯರಾದ ಹಡಗಲಿ ಕಪ್ಪತ್ತಯ್ಯನವರು, ಒಂಟೆತ್ತಿನಮಠದ ಬಸಯ್ಯನವರು ಮತ್ತು ಭಿಕ್ಷಾವತಿಮಠದ ಚನಮಲ್ಲಯ್ಯನವರು ಮುಂತಾದವರು ಈಗಲೂ ಪಿಟೀಲುವಾದನದಲ್ಲಿ ಪ್ರಸಿದ್ಧರಾಗಿದ್ದಾರೆ. ಆದರೆ ಈ ಬಾಲಕನಿಗೆ ಸುಶ್ರಾವ್ಯವಾದ ಕಂಠತ್ರಾಣ ದೈವದತ್ತವಾಗಿದೆ. ಶಿವನು ಅನುಗ್ರಹಿಸಿದ ಈ ದೇಣಿಗೆ ವ್ಯರ್ಥವಾಗಬಾರದು. ಕಾರಣ ಇವನನ್ನು ನೀವು ಕರೆದುಕೊಂಡು ಹೋಗಿ ನಿಮ್ಮಂತೆ ಇವನನ್ನು ಸಂಗೀತ ವಿದ್ವಾಂಸನನ್ನಾಗಿ ಮಾಡಿ ನಮ್ಮ ಮಠಕ್ಕೆ ಕಳಿಸಿಕೊಡಬೇಕು'' ಎಂದು ಅಪ್ಪಣೆ ಮಾಡಿದರು. ಅದಕ್ಕೆ ಬಸಪ್ಪ ಗವಾಯಿಗಳು ''ಈ ಮಹಾಸೇವೆ ಸಿಕ್ಕಿದ್ದು ನನ್ನ ಭಾಗ್ಯ. ಸತ್ಪಾತ್ರದಲ್ಲಿ ವಿದ್ಯಾದಾನ ಮಾಡುವ ಅವಕಾಶ ನನಗೆ ದೊರೆತದ್ದು ತಮ್ಮ ಕೃಪಾವಿಶೇಷ. ನನಗೆ ದೊರೆತಷ್ಟು ವಿದ್ಯೆಯನ್ನೆಲ್ಲ ಈ ಬಾಲಕನಿಗೆ ಧಾರೆ ಎರೆಯುವೆ'' ಎಂದು ಅರಿಕೆ ಮಾಡಿಕೊಂಡು ಅಂದೇ ಕದರಮಂಡಲಗಿಗೆ ಆ ಬಾಲಕನೊಡನೆ ಹೋದರು. ಕದರಮಂಡಲಗಿಯಲ್ಲಿ ಆ ಬಾಲಕನ ಶಿಕ್ಷಣ ಪೂರೈಸಿದ ನಂತರ ಅವನನ್ನು ಸ್ವತಃ ಬಸಪ್ಪನವರೇ ಹೆಚ್ಚಿನ ಶಿಕ್ಷಣಕ್ಕಾಗಿ ಆ ಕಾಲದಲ್ಲಿ ದಕ್ಷಿಣಾದಿ ಸಂಗೀತ ಕೇಂದ್ರವಾದ ತಂಜಾವೂರಿಗೆ ಕಳಿಸಿಕೊಟ್ಟರು. ನಂತರ ಅವರು ಪ್ರಸಿದ್ಧ ಸಂಗೀತ ವಿದ್ವಾಂಸರಾಗಿ ಬಂದರು. ಇವರೇ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ಆಸ್ಥಾನ ಗವಾಯಿಗಳಾದ 'ಸಂಗೀತ ಕರಿಬಸಯ್ಯನವರು' ಇವರನ್ನೇ ಹಿಂದೆ ಹೇಳಿದಂತೆ ಸಂಗೀತ ಪಾಠಶಾಲೆಯ ಪ್ರಾಧ್ಯಾಪಕರನ್ನಾಗಿ ಮಾಡಲಾಯಿತು.

### ಶ್ರೀ ಪ್ರಭುದೇವರ ಮಠದ ಪಟ್ಟದದೇವರು :

ಗದುಗಿನ ಶ್ರೀ ಪ್ರಭುದೇವರಮಠದ ಪಟ್ಟದದೇವರು ಶ್ರೀ ಜಗದ್ಗುರು ತೋಂಟದಾರ್ಯಸಂಸ್ಥಾನಮಠದ ಕಾರ್ಯಭಾರಿಗಳು. ವಿಚಕ್ಷಣ ಬುದ್ಧಿಯ ಅವರ ಕಾರ್ಯಕ್ಷಮತೆ ಶ್ಲಾಘನೀಯವಾದುದು. ಒಂದು ವಿರಕ್ತಮಠದ ಆಡಳಿತ ವ್ಯವಸ್ಥೆ ಒಬ್ಬ ಗುರುಸ್ಥಳದ ಮಠಾಧೀಶರಿಗೆ ಇದೆ ಎಂದರೆ ಅದು ಶ್ರೀ ಜಗದ್ಗುರು ಸಿದ್ಧೇಶ್ವರ ಮಹಾಸ್ವಾಮಿಗಳ ಸಮನ್ವಯ ದೃಷ್ಟಿ ಹಾಗೂ ಶ್ರೀ ಪ್ರಭುದೇವರ ಮಠದ ಪಟ್ಟದೇವರ ಸರಳಹೃದಯ ದ್ಯೋತಕವೆಂದು ಹೇಳಬಹುದು. ಶ್ರೀ ಜಗದ್ಗುರು ಸನ್ನಿಧಿಯವರು ತಮ್ಮ ಸಹಸ್ರಾರು ಶಿಷ್ಯರೊಡನೆ ಶ್ರೀ ಎಡೆಯೂರ ಕ್ಷೇತ್ರಕ್ಕೆ ದಯಮಾಡಿಸಿದಾಗ ಶ್ರೀ ಪಟ್ಟದದೇವರು ಸಲ್ಲಿಸಿದ ಸೇವೆ ಅವರ್ಣನೀಯ.

### ರಾವಸಾಹೇಬ ಶ್ರೀ ಮಾನ್ವಿ ಮಲ್ಲೇಶಪ್ಪನವರು :

ಗದುಗಿನ ಗಣ್ಯ ಮನೆತನದವರಾದ ಶ್ರೀ ಮಾನ್ವಿಮಲ್ಲೇಶಪ್ಪನವರು ಗೌರವಾನ್ವಿತ ವ್ಯಕ್ತಿತ್ವ ಹೊಂದಿದಂತೆ ಅತ್ಯಂತ ಪ್ರಭಾವಿ ಪುರುಷರೂ ಆಗಿದ್ದರು. ಅವರು ಬಹುಕಾಲ ಗದಗ–ಬೆಟಗೇರಿ ನಗರಸಭೆಯ ಅಧ್ಯಕ್ಷರಾದ ಪ್ರಯುಕ್ತ ಅವರ ಪೂರ್ಣಾಕಾರಾದ ತೈಲ ಚಿತ್ರ ಗದಗ ನಗರಸಭೆಯ ಸಭಾಮಂಟಪದಲ್ಲಿ ಈಗಲೂ ಕಂಗೊಳಿಸುತ್ತದೆ. ಶ್ರೀ ಜಗದ್ಗುರು ಸನ್ನಿಧಿಯವರಲ್ಲಿಟ್ಟ ಅವರ ಅಪಾರ ಭಕ್ತಿಯನ್ನು ಆಗ ಜರುಗಿದ ಒಂದು ಘಟನೆಯಿಂದ ಇಲ್ಲಿ ತಿಳಿಯಬಹುದು. ಶ್ರೀ ಮಲ್ಲೇಶಪ್ಪನವರು ಪ್ರತಿದಿನ ಸಾಯಂಕಾಲ ಶ್ರೀಮಠಕ್ಕೆ ಬರುವದು ವಾಡಿಕೆ. ಒಂದು ದಿನ ಅವರು ಶ್ರೀಮಠಕ್ಕೆ ಬಂದಾಗ ಶ್ರೀ ಸನ್ನಿಧಿಯವರು ಶ್ರೀ ಮಲ್ಲೇಶಪ್ಪನವರಿಗೆ ಒಂದು ಮಹತ್ವದ ಕೆಲಸಕ್ಕಾಗಿ ಧಾರವಾಡ ಕಲೆಕ್ಟರ ಸಾಹೇಬರಲ್ಲಿಗೆ ಹೋಗಲು ಅಪ್ಪಣೆ ಮಾಡಿದರು. ಆಗ ಶ್ರೀ ಮಲ್ಲೇಶಪ್ಪನವರ ಧರ್ಮಪತ್ನಿಗೆ ಅನಾರೋಗ್ಯ ಉಂಟಾಗಿ ಅಂತ್ಯಾವಸ್ಥೆ ಸಮೀಪಿಸಿದರು. ವಸ್ತುಸ್ಥಿತಿ ಹೀಗಿದ್ದರೂ ಅದನ್ನು ಶ್ರೀ ಮಲ್ಲೇಶಪ್ಪನವರು ಗುರುಗಳಿಗೆ ಬಾಯಿಬಿಟ್ಟು ಹೇಳಲಿಲ್ಲ. ಗುರುಗಳು ಒಪ್ಪಿಸಿದ ಕೆಲಸಕ್ಕೆ 'ಆಗಲಿ' ಎಂದು ಇಷ್ಟೇ ಹೇಳಿ ಮನೆಗೆ ಹೋದರು. ಅದೊಂದು ಪರೀಕ್ಷಾ ಪ್ರಸಂಗವೆಂದೇ ಹೇಳಬೇಕು. ಏಕೆಂದರೆ ಅಂದಿನ ರಾತ್ರಿ ಶ್ರೀ ಮಲ್ಲೇಶಪ್ಪನವರ ಧರ್ಮಪತ್ನಿಯವರು ಲಿಂಗೈಕ್ಯರಾದರು. ಆದರೆ ತಮ್ಮ ಗುರುಗಳಂತೆ ಸ್ಥಿತಪ್ರಜ್ಞರಾದ ಶ್ರೀ ಮಲ್ಲೇಶಪ್ಪನವರು ಅದರ ಕಡೆಗೆ ಎಷ್ಟೂ ಲಕ್ಷ್ಯಗೊಡದೆ ತಮ್ಮ ಕುಂಕುಮ ಸೌಭಾಗ್ಯವತಿಯ ಅಂತ್ಯಕ್ರಿಯೆ ಪೂರೈಸಲು ಮನೆಯವರಿಗೆ ತಿಳಿಸಿ ಆ ದಿನ ಬೆಳಿಗ್ಗೆ ಧಾರವಾಡಕ್ಕೆ ಹೋದರು. ಈ ಘಟನೆಯು ಶ್ರೀ ಜಗದ್ಗುರುಗಳನ್ನು ಭಕ್ತರು ಎಷ್ಟು ನಿಷ್ಠೆಯಿಂದ ಕಾಣುತ್ತಿದ್ದರೆಂಬುದಕ್ಕೆ ನಿದರ್ಶನ. ಶ್ರೀ ಮಲ್ಲೇಶಪ್ಪನವರು ಶ್ರೀ ತೋಂಟದಾರ್ಯರಲ್ಲಿ ಅಪಾರ ಭಕ್ತಿ ವಿಶ್ವಾಸಗಳನ್ನಿಟ್ಟ ಶರಣ. ಅವರ ಅಪೇಕ್ಷೆಯಂತೆ ಅವರ ಸಮಾಧಿ ಗದುಗಿನ ಶ್ರೀ ಮಠದಲ್ಲಿರುವ ಶ್ರೀ ವೃದ್ಧತೋಂಟದಾರ್ಯರ ಗದ್ದುಗೆಯ ಸಮ್ಮುಖದಲ್ಲಿ ಆಯಿತು.

**ಶ್ರೀ ರವದಿ ಅಂದಾನಪ್ಪನವರು :**

ಶ್ರೀ ರವದಿ ಅಂದಾನಪ್ಪನವರು ಶ್ರೀಮಠದ ಅತ್ಯಂತ ನಿಷ್ಠಾವಂತ ಭಕ್ತರಲ್ಲಿ ಒಬ್ಬರು. ಅವರೇನು ಅಗರ್ಭ ಶ್ರೀಮಂತರಲ್ಲ. ಆದರೇನು ಯಾವ ಶ್ರೀಮಂತರಿಗೂ ಕಡಿಮೆ ಇಲ್ಲದ ಧೀರೋದಾತ್ ವ್ಯಕ್ತಿತ್ವ ಹೊಂದಿದವರು. ಅವರದು ಬೆಟಗೇರಿ. ಪೀಠ ಪರಂಪರೆಯಲ್ಲಿ ಬಂದ ಹನ್ನೆರಡನೆಯ ಪೀಠಾಧಿಕಾರಿಗಳಾದ ಶ್ರೀ ಸದಾಶಿವ ಜಗದ್ಗುರುಗಳ ನಂತರ ಶ್ರೀಮಠದ ಯಾವ ಜಗದ್ಗುರುಗಳವರ ಪಾಲ್ಕಿಉತ್ಸವವೂ ಬೆಟಗೇರಿಯಲ್ಲಿ ಆಗಿರಲಿಲ್ಲ. ತಮ್ಮಂಥ ಅಭಿಮಾನಿ ಭಕ್ತರು ಬೆಟಗೇರಿಯಲ್ಲಿದ್ದರೂ ಶ್ರೀ ಜಗದ್ಗುರುಗಳವರ ಆಂದೋಲಿಕೋತ್ಸವ ಅಲ್ಲಿ ಆಗದಿದ್ದರೆ ಅದು ಭಕ್ತರಾದ ತಮ್ಮ ದೌರ್ಬಲ್ಯ ಎನ್ನುವ ವ್ಯಥೆ ಅವರನ್ನು ಕಾಡಹತ್ತಿತು. ಈ ಬಗ್ಗೆ ಶ್ರೀ ಸನ್ನಿಧಿಗೆ ಸ್ವತಃ ತಾವೇ ಬಿನ್ನಹ ಮಾಡಿ ಜಗದ್ಗುರುಗಳವರನ್ನು ಅಡ್ಡಪಲ್ಲಕ್ಕಿ ಉತ್ಸವದಿಂದ ಬೆಟಗೇರಿಗೆ ಕರೆದೊಯ್ದರು. ಅಡ್ಡಪಲ್ಲಕ್ಕಿ ಉತ್ಸವ ಮನೆಗೆ ತಲುಪುತ್ತಲೇ ಶ್ರೀ ಅಂದಾನಪ್ಪನವರು ಸಂತೋಷಾತಿಶಯದಿಂದ ತಮ್ಮ ಅಪರವಯಸ್ಸಿನಲ್ಲಿಯೂ ಹಾರಾಡಿ ಕುಣಿದಾಡಿದರಂತೆ. ಯಾವ ಕೆಲಸ ಕೈಕೊಂಡರೂ ಅದನ್ನು ಹಠದಿಂದ ಸಾಧಿಸುವಷ್ಟು ಅವರು ಛಲಗಾರರು. ಹೀಗಾಗಿ ಊರಲ್ಲಿ ಅವರಿಗೆ ಎಲ್ಲರೂ ವಿಧೇಯರಾಗಿ ನಡೆದುಕೊಳ್ಳುತ್ತಿದ್ದರು. ಒಮ್ಮೆ ಶ್ರೀ ಜಗದ್ಗುರು ಮಹಾಸನ್ನಿಧಿ ಶ್ರೀ ಯಡೆಯೂರ ಕ್ಷೇತ್ರಕ್ಕೆ ಪ್ರಯಾಣಮಾಡುವ ಸಂದರ್ಭ ಉಂಟಾಯಿತು. ಆಗ ಮಠದ ಭಕ್ತರೆಲ್ಲರೂ ಶ್ರೀ ಮಠದಲ್ಲಿ ಸಭೆ ಕೂಡಿದ್ದರು. ಯಥಾ ಪ್ರಕಾರ ಸನ್ನಿಧಿಗೆ ಕಾಣಿಕೆ ಸಲ್ಲಿಸುವ ಕಾರ್ಯ ಆರಂಭವಾಯಿತು. ಆಗ ಮೊದಲು ಕಾಣಿಕೆ ಸಲ್ಲಿಸುವವರು ಯಾರು? ಎಂಬ ಪ್ರಶ್ನೆ ಬಂದಿತು. ಈ ಪ್ರಸಂಗದಲ್ಲಿ ಅಲ್ಲಿದ್ದ ಅಗರ್ಭ ಶ್ರೀಮಂತರನೇಕರು ಶ್ರೀ ರವದಿ ಅಂದಾನಪ್ಪನವರ ಹೆಸರನ್ನೇ ಸೂಚಿಸಿದರು. ಇದರಿಂದ ಅಂದಾನಪ್ಪನವರಿಗೆ ಸಹನೆ ಉಳಿಯಲಿಲ್ಲ. ಕಾಣಿಕೆಸಲ್ಲಿಸುವ ಕಾರ್ಯದಲ್ಲಿ ಶ್ರೀಮಂತರೆನ್ನುವವರು ಮುಂದಾಗುವದು ಅವಶ್ಯ. ಹೀಗಿದ್ದೂ ಪ್ರತಿಷ್ಠಿತ ಎಂಬ ನೆಪದಲ್ಲಿ ತಮ್ಮ ಹೆಸರನ್ನೇ ಮುಂದೆ ಮಾಡುತ್ತಿರುವದು ಅವರ ಅಭಿಮಾನವನ್ನು ಕೆರಳಿಸಿತು. ಆ ಕೂಡಲೇ ಅವರು ಸಭೆಯಲ್ಲಿ ಎದ್ದು ನಿಂತು ಶ್ರೀ ಜಗದ್ಗುರುಗಳತ್ತ ಮುಖಮಾಡಿ ಕೈ ಮುಗಿದು ''ನನ್ನ ಹೆಂಡತಿಯ ಮಾಂಗಲ್ಯ ಹಾಗೂ ನಮ್ಮಿಬ್ಬರ ಉಟ್ಟ ಬಟ್ಟೆ ಹೊರತುಪಡಿಸಿ ಎಲ್ಲವೂ ಶ್ರೀ ಜಗದ್ಗುರುಗಳವರಿಗೆ ಅರ್ಪಣ'' ಎಂದು ಶ್ರೀ ಸನ್ನಿಧಿಗೆ ಸಾಷ್ಟಾಂಗವೆರಗಿದರು. ಆಗ ಸಭೆಗೆ ಸಭೆಯೇ ಹೌಹಾರಿ ಸ್ತಬ್ಧವಾಯಿತು. ಶ್ರೀ ಜಗದ್ಗುರು ಸನ್ನಿಧಿಯವರು ಶ್ರೀ ರವದಿ ಅಂದಾನಪ್ಪನವರನ್ನು ಪುತ್ರವಾತ್ಸಲ್ಯದಿಂದ ಬಳಿಗೆ ಕರೆದು ಸಂತೈಸುತ್ತ ''ನಿನ್ನ ಇಷ್ಟದಂತೆ ನಿನ್ನದೆಲ್ಲವೂ ಮಹಾಸ್ವಾಮಿಗೆ ಅರ್ಪಿತವಾಗಿದೆ. ಆದರೆ ಅದನ್ನೇ ನಿನಗೆ ಪ್ರಸಾದ ರೂಪವಾಗಿ ಆಶೀರ್ವಾದ ಮಾಡಿದ್ದೇವೆ'' ಎಂದು ಸಭಿಕರ ಹರ್ಷೋದ್ಗಾರ ಮತ್ತು ಕರತಾಡನಗಳ ಮಧ್ಯದಲ್ಲಿ ಅಪ್ಪಣೆ ಮಾಡಿದರು.

ಕೆಲವು ಕಾಲಾನಂತರ ಶ್ರೀ ರವದಿ ಅಂದಾನಪ್ಪನವರಿಗೆ ಅಂತ್ಯಾವಸ್ಥೆ ಪ್ರಾಪ್ತವಾಯಿತು. ಆಗ ಅವರು ಗುರುಗಳ ಅಂತ್ಯದರ್ಶನವನ್ನು ಅಪೇಕ್ಷಿಸಿದರು. ಇಷ್ಟರಲ್ಲಿ ಅವರು ಬೆಟಗೇರಿಯನ್ನು ತ್ಯಜಿಸಿ ಶ್ರೀ ಮಠದ ಹತ್ತಿರವೇ ನೂತನ ಬಂಗ್ಲೆಯನ್ನು ಕಟ್ಟಿಸಿ ವಾಸವಾಗಿದ್ದರು. ಅಂದು ಸಾಯಂಕಾಲದ ಸಮಯ. ಶ್ರೀ ರವದಿಯವರ ಮನೆಯಿಂದ ಒಬ್ಬರು ಬಂದು ಶ್ರೀ ಸನ್ನಿಧಿಗೆ ಸಾಷ್ಟಾಂಗವೆರಗಿ ''ಶ್ರೀ ಅಂದಾನಪ್ಪಣ್ಣವರಿಗೆ ಈಗ ಅಂತ್ಯ ಕಾಲ. ಅವರು ತಮ್ಮ ಕೊನೆಯ ದರ್ಶನ ಬಯಸಿದ್ದಾರೆ'' ಎಂದು ದುಃಖಪೂರಿತ ಧ್ವನಿಯಿಂದ ಬಿನ್ನವಿಸಿದರು. ಆ ಕೂಡಲೇ ಎಂದೂ ಪಾದಚಾರಿಗಳಾಗಿ ಹೊರಗೆ ದಯಮಾಡಿಸದ ಶ್ರೀ ಜಗದ್ಗುರುಗಳವರು ತಮ್ಮ ಬಳಿಯಲ್ಲಿ ನಿಂತಿದ್ದ ಚುರ್ಚಿಹಾಳದ ಸಿದ್ಧನಗೌಡ ಪಾಟೀಲ ಎಂಬ ವಿದ್ಯಾರ್ಥಿಯೊಡನೆ ಶ್ರೀಮಠದ ದಿಡ್ಡಿ ಬಾಗಿಲದೊಳಗಿಂದ ಹಾಯ್ದು ಶ್ರೀ ಅಂದಾನಪ್ಪನವರ ಮನೆಯ ಕಡೆಗೆ ಹೊರಟು. ಶ್ರೀ ಸನ್ನಿಧಿಯವರು ಇನ್ನೂ ಮಾರ್ಗ ಮಧ್ಯದಲ್ಲಿಯೇ ಇರುವಾಗ ಭಕ್ತರೊಬ್ಬರು ಬಂದು ಸಾಷ್ಟಾಂಗ ಹಾಕಿ ''ಶ್ರೀ ಅಂದಾನಪ್ಪನವರು ತಮ್ಮ ಪಾದಸೇರಿದರು'' ಎಂದು ದುಃಖದಿಂದ ನಿವೇದಿಸಿದರು. ಆದರೂ ಶ್ರೀ ಜಗದ್ಗುರುಗಳವರು ಹಿಂದಿರುಗದೆ ರವದಿಯವರ ಬಂಗ್ಲೆಗೆ ದಯಮಾಡಿಸಿದರು.

ಶ್ರೀ ಜಗದ್ಗುರುಗಳವರು ಆಗಮಿಸುತ್ತಲೇ ಮನೆಯಲ್ಲಿ ಆರಂಭವಾದ ರೋಧನ ಧ್ವನಿಗಳು ತಮ್ಮಷ್ಟಕ್ಕೆ ತಾವೇ ನಿಂತವು. ಶ್ರೀ ಸನ್ನಿಧಿಯವರು ಅಂದಾನಪ್ಪನವರ ಶವದ ಬಳಿಗೆ ಹೋದರು. ಆಗ ಅವರಿಗೊಂದು ಆಸನವನ್ನು ಹಾಕಲಾಯಿತು. ಶ್ರೀ ಜಗದ್ಗುರುಗಳವರು ದುಃಖ ತಪ್ತರಾಗಿ ಆಸೀನರಾಗುತ್ತಿರುವಂತೆ ಶ್ರೀ ಅಂದಾನಪ್ಪನವರ ದೇಹದಲ್ಲಿ ಪುನಃ ಪ್ರಾಣ ಸಂಚಾರ ಉಂಟಾಯಿತು. ಅವರು ಮಲಗಿದವರು ಏಳುವಂತೆ ಎದ್ದು ಸನ್ನಿಧಿಯವರ ಪಾದಕ್ಕೆ ನಮಸ್ಕರಿಸಿ ''ಬುದ್ಧಿ! ತಮ್ಮ ಪಾದಕ್ಕೆ ಸಲ್ಲಿಸಿಕೊಳ್ಳಬೇಕು'' ಎಂದು ಹೇಳಿ ಪುನಃ ಮಲಗಿದರು. ಆಗ ಅವರಿಗೆ ಶ್ರೀ ಜಗದ್ಗುರುಗಳವರ ಪಾದೋದಕ ಮಾಡಿ ಹಾಕುತ್ತಿರುವಂತೆ ಅಂದಾನಪ್ಪನವರ ಪ್ರಾಣ ಜ್ಯೋತಿ ಶ್ರೀ ಸನ್ನಧಿಯ ಪಾದದಲ್ಲಿ ಐಕ್ಯವಾಯಿತು.

ಶ್ರೀ ಬುಳ್ಳಾ ಹೊಳಿಯಪ್ಪನವರು :

ಬುಳ್ಳಾ ಅವರ ಮನೆತನ ಶ್ರೀ ಜಗದ್ಗುರು ತೋಂಟದಾರ್ಯಪೀಠಕ್ಕೆ ತವರುಮನೆ. ಮೊದಲು ಆ ಮನೆತನಕ್ಕೆ ದಟ್ಟದಾರಿದ್ರ್ಯ. ಆದರೆ ಸೂರ್ಯ ಉದಯವಾಗುತ್ತಲೇ ಕತ್ತಲೆ ಕಳೆದುಹೋಗುವಂತೆ ಗುರು ಕರುಣೋದಯದೊಡನೆ ಬುಳ್ಳಾ ಮನೆತನಕ್ಕೆ ಆವರಿಸಿದ ಬಡತನ ಮಾಯವಾಯಿತು.

ಒಂದು ರಾತ್ರಿ ಬುಳ್ಳಾ ಅವರ ಮನೆಯ ಕದ ಹಾಕಿದೆ. ದೀಪದ ಮಂದ ಪ್ರಕಾಶ ಸುತ್ತಲೂ ಹರಡಿದೆ. ಆಗ ಒಂದು ಕೆಂಪು ಅಲಸಂದಿ ಬಣ್ಣದ ಆಕಳು ಇದ್ದಕ್ಕಿದಂತೆ ಹಾಕಿದ ಕದದಿಂದಲೇ ಒಳಗೆ ಬಂದು ಮನೆಯ ಯಜಮಾನ ನೋಡು ನೋಡುತ್ತಿರುವಂತೆ ಆ ಮನೆಯ ಲಕ್ಷ್ಮೀಕಂಬದಲ್ಲಿ ಅಡಕವಾಗಿಹೋಯಿತು. ಹಾಕಿದ ಕದದಿಂದ ಆಕಳು ಬಂದದ್ದು ಹೇಗೆ ? ಆ ಮೇಲೆ ಕಂಬದಲ್ಲಿ ಆಕಳು ಅದೃಶ್ಯವಾದದ್ದು ಹೇಗೆ ? ಇದೆಲ್ಲವೂ ತೋಂಟದಾರ್ಯನ ಲೀಲೆಯೆಂದು ಭಾವಿಸಿದ ಆ ಹಿರಿಯ ಭಕ್ತರು ಶ್ರೀ ಸಿದ್ಧಲಿಂಗನನ್ನು ಸ್ಮರಿಸುತ್ತ ಹಾಗೇ ಮಲಗಿದರು. ಮುಂದೆ ಸ್ವಲ್ಪೇ ಕಾಲದಲ್ಲಿ ಬುಳ್ಳಾ ಮನೆತನದವರು ತುಂಬಾ ಐಶ್ವರ್ಯವಂತರಾದರು.

ಈಗಿರುವ ಶ್ರೀಮಠದ ಮಹಾದ್ವಾರ ಬುಳ್ಳಾ ಮಡಿವಾಳಪ್ಪನವರಿಂದಲೇ ಕಟ್ಟಿಸಲ್ಪಟ್ಟಿದ್ದು. ಹಿಂದೆ ಹೇಳಿದಂತೆ ಆನೆಯ ಅಂಬಾರಿಯನ್ನು ಬುಳ್ಳಾ ಹೊಳಿಯಪ್ಪ ನವರು ಮಾಡಿಸಿಕೊಟ್ಟರು. ಬುಳ್ಳಾ ಹೊಳಿಯಪ್ಪನವರು ಹತ್ತಿ ಅರಳಿ ವ್ಯಾಪಾರಸ್ಥರು. ಒಮ್ಮೆ ಅವರು ಯಾವುದೋ ಬೇನೆಯಿಂದ ಹಾಸಿಗೆ ಹಿಡಿದರು. ಇದನ್ನು ಕೇಳಿ ತಿಳಿದ ಶ್ರೀ ಜಗದ್ಗುರುಗಳವರು ಕುದುರೆಯ ಬಗಿಯಲ್ಲಿ ಅವರ ಮನೆಗೆ ದಯಮಾಡಿಸಿದರು. ಶ್ರೀ ಹೊಳಿಯಪ್ಪನವರ ಯೋಗಕ್ಷೇಮ ವಿಚಾರಿಸಿ ಆಶೀರ್ವದಿಸಿ ಮಠಕ್ಕೆ ಶ್ರೀಗಳು ಮರಳುವಾಗ ಶ್ರೀ ಹೊಳಿಯಪ್ಪನವರು ೨೦೦೦ ರೂ. ರೋಖ ಹಣವನ್ನು (ಬೆಳ್ಳಿ ರೂಪಾಯಿ) ಚೀಲಗಳಲ್ಲಿ ತುಂಬಿ ಕುದುರೆ ಬಗಿಯಲ್ಲಿ ಇಟ್ಟು ಕಳಿಸಿದರು. ಮುಂದೆ ಮಹಾಸ್ವಾಮಿ ಕೃಪೆಯಿಂದ ಅವರು ಸಂಪೂರ್ಣ ಗುಣಹೊಂದಿದರು.

ಶ್ರೀ ಲಕಮಸಿ ಲದ್ವಾ ಪ್ರಸಿದ್ಧ ಗುಜರಾಥಿ ವ್ಯಾಪಾರಸ್ಥರು. ಶ್ರೀ ಹೊಳಿಯಪ್ಪ ನವರಿಗೆ ಅವರು ಆತ್ಮೀಯ ಸ್ನೇಹಿತರು. ಒಮ್ಮೆ ಶ್ರೀ ಲದ್ವಾ ಅವರು ಹೊಳಿಯಪ್ಪನವರ ಮನೆಗೆ ಬಂದಾಗ ಶ್ರೀ ಹೊಳಿಯಪ್ಪನವರಿಗೆ ''ಅಂತೂ ಸ್ವಾಮಿಗಳಿಗೆ ಲಂಚಾಕೊಟ್ಟು ಉಳಿದಿ'' ಎಂದು ವಿನೋದವಾಗಿ ಮಾತನಾಡಿದರು. ಅದಕ್ಕೆ ಶ್ರೀ ಹೊಳಿಯಪ್ಪನವರು ''ಅದು ಲಂಚವಲ್ಲ, ಅದು ಅವರದೇ ಹಣ. ಮಠದಲ್ಲಿ ಅದನ್ನು ಇಡಲಿಕ್ಕೆ ಸ್ಥಳವಿಲ್ಲದ್ದರಿಂದ ನಮ್ಮ ಮನೆಯಲ್ಲಿ ಇಟ್ಟಿದ್ದರು. ಈಗ ತಮ್ಮದನ್ನು ತಾವು ತೆಗೆದುಕೊಂಡು ಹೋದರು'' ಎಂದು ಹೇಳಿದರು. ಇದನ್ನು ಕೇಳಿದ ಶ್ರೀ ಲದ್ವಾ ಅವರು ಹೊಳಿಯಪ್ಪನವರ ತ್ಯಾಗ ಬುದ್ಧಿಯನ್ನು ನೋಡಿ ಮೂಕವಿಸ್ಮಿತರಾದರು.

ಒಮ್ಮೆ ಶ್ರೀಮಠದ ದಾಸೋಹಕ್ಕೆ ಜೋಳದ ಕೊರತೆಯಾಗಿತ್ತು. ಇದನ್ನು ಪರೋಕ್ಷವಾಗಿ ಕೇಳಿದ ಶ್ರೀ ಹೊಳಿಯಪ್ಪನವರು ತಮ್ಮ ದಲಾಲಿ ಅಂಗಡಿಗೆ ವಿಕ್ರಿಗಾಗಿ ಬಂದ ಮೂವತ್ತು ಚೀಲ ಜೋಳವನ್ನು ಮಠಕ್ಕೆ ಹೇರಿಸಿ ಕಳಿಸಿದರು. ಆದರೆ ಮಠದಿಂದ ಹೀಗೆ ಜೋಳ ಕಳಿಸಲು ಶ್ರೀ ಹೊಳಿಯಪ್ಪನವರಿಗೆ ಯಾವ ಸೂಚನೆಯೂ ಬಂದಿರಲಿಲ್ಲ. ಮಠ ಶ್ರೀ ಹೊಳಿಯಪ್ಪನವರ ಪಾಲಿಗೆ ಅವಿಭಾಜ್ಯ ಅಂಗವೇ ಆಗಿತ್ತು. ಇಷ್ಟೊಂದು ಮಠದ ವಿಷಯದಲ್ಲಿ ಅವರಿಗೆ ಅನನ್ಯ ಭಕ್ತಿ.

**ಶ್ರೀ ಕೋಟಿ ವೀರಪ್ಪನವರು :**

ಗದುಗಿನಲ್ಲಿ ಕೋಟಿಯವರ ಮನೆತನದವರು ಎಂದಿನಿಂದಲೂ ಶ್ರೀ ಜಗದ್ಗುರು ತೋಂಟದಾರ್ಯರ ಪರಮಭಕ್ತರು. ಸಾಮಾನ್ಯವಾಗಿ ಲಕ್ಷ್ಮೀ–ಸರಸ್ವತಿಯರು ಒಂದೆಡೆಗೆ ನೆಲೆಸುವದಿಲ್ಲ ಎಂಬುದು ಸಾಮಾನ್ಯ ಗ್ರಹಿಕೆ. ಆದರೆ ಈ ಮನೆತನದಲ್ಲಿ ಅವರೀರ್ವರು ಸಮ್ಮಿಲಿತರಾದದ್ದು ಅನಾದಿ ಸಿದ್ಧಲಿಂಗನ ವಿಷಯದಲ್ಲಿದ್ದ ಶ್ರೀ ಕೋಟಿ ಮನೆತನದವರ ಭಕ್ತಿಯೇ ಕಾರಣ. ಈ ಮನೆತನದ ಶ್ರೀ ವೀರಪ್ಪನವರು ೧೮ನೇ ಪೀಠಾಧಿಪತಿಗಳಾಗಿದ್ದ ವೃದ್ಧ ತೋಂಟದಾರ್ಯರ ಕಾಲದಿಂದಲೂ ಮಠದ ಸೇವೆಯನ್ನು ತ್ರಿಕರಣ ಪೂರ್ವಕವಾಗಿ ಮಾಡಿದವರು. ಈ ಅವರ ಸೇವೆ ಶ್ರೀ ಸಿದ್ಧೇಶ್ವರ ಜಗದ್ಗುರುಗಳವರವರೆಗೂ ಅವಿಚ್ಛಿನ್ನವಾಗಿ ಮುಂದುವರಿಯಿತು. ಅವರ ನಂತರ ಅದೇ ಸೇವಾ ದೀಕ್ಷೆಯನ್ನು ತೊಟ್ಟು ಶ್ರೀ ಮಠದ ಯಾವದೇ ಸೇವೆಯನ್ನು ತನು–ಮನ–ಧನಗಳಿಂದ ಸಲ್ಲಿಸಿದವರು ಅವರ ಮಕ್ಕಳಾದ ಮಾಜಿ ನಗರಾಧ್ಯಕ್ಷ ಶ್ರೀ ತೋಟಪ್ಪ ವಕೀಲರು ಅಂದರೆ ಶ್ರೀ ಮಠದ ಪಂಡಿತರಾದ ಕೋಟಿ ಬಸಪ್ಪ ಶಾಸ್ತ್ರಿಗಳ ತಮ್ಮಂದಿರರು.

**ಶ್ರೀ ಯಳಮಲಿ ಸಂಗಪ್ಪನವರು :**

ಶ್ರೀ ಜಗದ್ಗುರುಗಳವರು ಹಿಂದೆ ಹೇಳಿದಂತೆ ಯಾವಾಗಾದರೊಮ್ಮೆ ಸಾಯಂಕಾಲ ವಾಯುವಿಹಾರಾರ್ಥವಾಗಿ ಶ್ರೀ ಮಠದ ಪೂರ್ವಕ್ಕಿರುವ ಬಯಲಿನಲ್ಲಿ ಅಂದರೆ ಶ್ರೀ ಕೊಟ್ಟೂರ ಸ್ವಾಮಿಗಳವರ ಗದ್ದುಗೆಯ ಕಡೆಗೆ ಹೋಗುವದು ಪದ್ಧತಿ. ಹಾಗೆ ಸನ್ನಿಧಿಯವರು ಹೋದಾಗ ಸ್ವಲ್ಪ ಸಮಯ ಕೊಟ್ಟೂರ ಸ್ವಾಮಿಗಳವರ ಗದ್ದುಗೆಯ ಹತ್ತಿರ ಮೂರ್ತಮಾಡುತ್ತಿದ್ದರು. ಇದೇ ಸಮಯವನ್ನು ನಿರೀಕ್ಷಿಸುತ್ತಿದ್ದ ಶ್ರೀ ಸಂಗಪ್ಪನವರು ತಮ್ಮ ಕುಟುಂಬ ಪರಿವಾರದೊಡನೆ ಆಗಾಗ್ಗೆ ಬಂದು ಸನ್ನಿಧಿಯ ದರ್ಶನತೆಗೆದುಕೊಂಡು ಹೋಗುತ್ತಿದ್ದರು. ಮುಂದೆ ಇವರ ಮಕ್ಕಳಾದ ಶ್ರೀ ಶಾಂತಪ್ಪಣ್ಣನವರು ಶ್ರೀ ಜಗದ್ಗುರು ಪೀಠದ ವಿಷಯದಲ್ಲಿ ತಮ್ಮ ತಂದೆಯವರಂತೆ ತುಂಬಾ ಅಭಿಮಾನ ವಹಿಸಿ ಅದೇ ಭಕ್ತಿ–ನಿಷ್ಠೆಗಳನ್ನು ಮುಂದುವರೆಸಿಕೊಂಡು ಬಂದರು.

**ಶ್ರೀ ತುಪ್ಪದ ಶಿವಪ್ಪನವರು :**

ತುಪ್ಪದ ಮನೆತನದವರು ಶ್ರೀ ಜಗದ್ಗುರು ತೋಂಟದಾರ್ಯಪೀಠದ ಅಭಿಮಾನಿ ಭಕ್ತರು. ಆ ಮನೆತನದ ಶ್ರೀ ಶಿವಪ್ಪನವರು ತಮ್ಮ ಕಿರಿಯ ವಯಸ್ಸಿನಲ್ಲಿಯೇ ಶ್ರೀ ಜಗದ್ಗುರು ಸನ್ನಿಧಿಯವರ ಆಪ್ತ ಶಿಷ್ಯರಲ್ಲಿ ಒಬ್ಬರಾಗಿದ್ದರು. ಶ್ರೀ ಶಿವಪ್ಪನವರ ಮೇಲೆ ಶ್ರೀ ಜಗದ್ಗುರುಗಳವರದು ತುಂಬಾ ಭಕ್ತವಾತ್ಸಲ್ಯ.

**ಶ್ರೀ ಕುಬಸದ ನೂರಂದಪ್ಪನವರು :**

ಶ್ರೀಮಠದ ಎದುರುಭಾಗದಲ್ಲಿ ಶಹಪೂರಪೇಟೆ ಇದೆ. ಅಲ್ಲಿಯ ಭಕ್ತರಿಗೆ ತೋಂಟದಾರ್ಯಮಠವೆಂದರೆ ಪಂಚಪ್ರಾಣ. ಶಹಪೂರಪೇಟೆಯವರು ಮೂಲತಃ ಬೆಟಗೇರಿ ನಿವಾಸಿಗಳು. ಮಠದಿಂದದೂರ ಉಳಿಯಲಿಕ್ಕಾಗದೆ ಅವರು ಬೆಟಗೇರಿಯಿಂದ ವಲಸೆ ಬಂದು ಶಹಪೂರಪೇಟೆಯಲ್ಲಿ ನೆಲಸಿದರು. ಕುಬಸದ ನೂರೊಂದಪ್ಪನವರ ಮನೆತನ ಶಹಪೂರಪೇಟೆಯ ಗಣ್ಯಮನೆತನಗಳಲ್ಲಿ ಒಂದು. ಶ್ರೀ ನೂರೊಂದಪ್ಪನವರು ಇನ್ನೂ ಚಿಕ್ಕವರಿರುವಾಗ ಬೆಳಿಗ್ಗೆ ಸ್ನಾನ ಮಾಡಿ ಶ್ರೀ ಮಠಕ್ಕೆ ಬಂದುಹೋಗುವದು ಪದ್ಧತಿ. ಒಂದು ದಿನ ಯುವಕ ನೂರೊಂದಪ್ಪನವರು ಸನ್ನಿಧಿಯವರ ದರ್ಶನಕ್ಕೆ ಬಂದಾಗ ಅವರನ್ನು ನೋಡಿ ''ನೂರೊಂದಿ ! ಎಷ್ಟು ಸೊರಗಿರುವಿ ? ನೋಡಿದರೆ ವಯಸ್ಸಿಗೆ ಬಂದಿರುವಿ. ಇನ್ನು ಮುಂದೆ ಮಧ್ಯಾಹ್ನಕ್ಕೆ ಇಲ್ಲಿಗೇ ಬಂದುಬಿಡು'' ಎಂದು ಅವರು ಅಪ್ಪಣೆಮಾಡಿದರು. ಅದರಂತೆ ಶ್ರೀ ನೂರೊಂದಪ್ಪನವರ ಮಧ್ಯಾಹ್ನದ ಪ್ರಸಾದ ಮಠದಲ್ಲಿಯೇ ನಡೆಯಹತ್ತಿತು. ಈ ಪ್ರಸಾದಮಹಾತ್ಮೆಯಿಂದ ಶ್ರೀ ನೂರೊಂದಪ್ಪನವರ ಆರೋಗ್ಯ ಎಷ್ಟು ಸುಧಾರಿಸಿತೆಂದರೆ ಕ್ಷೀಣಕಾಯರಾದ ಅವರು ಭೀಮಕಾಯರಾದರಲ್ಲದೆ ಅವರು ಅಂಗಸೌಷ್ಟವ ಅವರ ಜೀವಿತದ ಕೊನೆಯವರೆಗೂ ಹಾಗೆ ಉಳಿಯಿತು.

ಗದುಗಿನ ಶ್ರೀಮಠದ ಜಾತ್ರೆಯ ಸಮಯ. ಅಂದು ಲಘು ರಥೋತ್ಸವ. ಅದೇಕೋ ಸನ್ನಿಧಿಯವರು ಲಘು ರಥೋತ್ಸವದ ದಿನ ಯಾರ ಮನೆಯ ಬಿನ್ನಹವನ್ನೂ ಕೈಕೊಂಡಿರಲಿಲ್ಲ. ಇದನ್ನರಿತ ಕುಶಲಮತಿಗಳಾದ ಶ್ರೀ ನೂರೊಂದಪ್ಪನವರು ಶಹಪೂರಪೇಟೆಯ ಭಕ್ತರೊಡನೆ ಸನ್ನಿಧಿಗೆ ಬಂದು ಎರಡು ಕಾಯಿಗಳನ್ನು ಮುಂದಿಟ್ಟು ಸಾಷ್ಟಾಂಗವೆರಗಿ ''ಲಘು ರಥೋತ್ಸವದ ನಮ್ಮ ಭಿನ್ನಹವನ್ನು ಕೈಕೊಳ್ಳಬೇಕು'' ಎಂದು ಪ್ರಾರ್ಥಿಸಿಕೊಂಡರು. ಈ ಲಘುರಥೋತ್ಸವದ ಬಿನ್ನಹ ಶಹಪೂರಪೇಟೆಯ ಕುಬಸದವರ ಮನೆತನದಲ್ಲಿ ಇಂದಿಗೂ ಅವ್ಯಾಹತವಾಗಿ ನಡೆಯುತ್ತ ಬಂದಿದೆ.

ಶ್ರೀ ನೂರೊಂದಪ್ಪನವರು ಅಷ್ಟೊಂದು ಶ್ರೀಮಂತರಾಗಲಿಲ್ಲವೆಂಬುದು ನಿಜ. ಆದರೆ ಅವರಿಗೆ ಯಾವ ಗೌರವವೂ ಕಡಿಮೆ ಇರಲಿಲ್ಲ. ಅವರು ನಗರಸಭೆಯ ಮಾನ್ಯ ಸದಸ್ಯರಾಗಿ ೧೫–೨೦ ವರ್ಷ ಸೇವೆ ಸಲ್ಲಿಸಿದರು. ಮಠದ ಅಭಿಮಾನದಿಂದ ಯಾವದೇ ಕಾರ್ಯದಲ್ಲಿ ಅತ್ಯಂತ ಕಳಕಳಿಯಿಂದ ದುಡಿಯುತ್ತಿದ್ದರು. ಅವರ ತಮ್ಮಂದಿರರಾದ ಮಾಜಿ ಎಂ.ಎಲ್.ಸಿ. ಕುಬಸದ ಶಿವಪ್ಪನವರು ತಮ್ಮ ಅಣ್ಣನವರಂತೆ ತಮ್ಮ ಮನೆಯ ಲಘುರಥೋತ್ಸವದ ಬಿನ್ನಹವನ್ನು ಇಂದಿಗೂ ಮುಂದುವರೆಸಿಕೊಂಡು ಬಂದಿರುವದು ಇಲ್ಲಿ ಅಭಿನಂದನೀಯವಾಗಿದೆ. ಶ್ರೀ ಶಿವಪ್ಪನವರು ಶ್ರೀಮಠದ ಯಾವದೇ ಕಾರ್ಯಗಳಿದ್ದರೂ ಅಷ್ಟೇ ಶ್ರದ್ಧೆವಹಿಸಿ ಈಗಲೂ ಅಭಿಮಾನದಿಂದ ಸೇವೆ ಸಲ್ಲಿಸುತ್ತಲಿರುವರು.

ಈ ಸೇವಾ ಫಲವಾಗಿ ಲಿಂ. ನೂರೊಂದಪ್ಪನವರು ೧೬ ವರ್ಷ ಮುನಸಿಪಲ್ ಕೌನ್ಸಿಲರ್ ಆಗಿದ್ದರೆ ಶ್ರೀ ಶಿವಪ್ಪನವರು ಅಷ್ಟೇ ೧೬ ವರ್ಷಗಳವರೆಗೆ ರಾಜ್ಯದ ವಿಧಾನ ಪರಿಷತ್ತಿನ ಸದಸ್ಯರಾಗಿ ಸೇವೆ ಸಲ್ಲಿಸಿದರು.

ಶ್ರೀ ಗುರುಲಿಂಗಯ್ಯನವರು ಲಿಂಗದಾಳಮಠ :

ವಿಶಾಲವಾಗಿ ಬೆಳೆದ ವೃಕ್ಷ ಪ್ರಾಣಿ ಮಾತ್ರರಿಗೆಲ್ಲ ಆಶ್ರಯವೀಯುವಂತೆ ಶ್ರೀ ಜಗದ್ಗುರುಗಳವರ ವಿಶಾಲ ಮನೋಭಾವದ ಉದಾರಾಶ್ರಯದಲ್ಲಿ ಅನೇಕ ಬಡ ಕುಟುಂಬಗಳ ಉದ್ಧಾರವಾದವು. ಅಂಥವರಲ್ಲಿ ಶ್ರೀ ಲಿಂಗದಾಳಮಠ ಅವರ ಮನೆತನವೂ ಒಂದು.

ಲಿಂಗದಾಳ ಗದುಗಿಗೆ ಸಮೀಪದಲ್ಲಿರುವ ಒಂದು ಗ್ರಾಮ. ಅಲ್ಲಿ ಶ್ರೀ ಜಗದ್ಗುರುಗಳವರ ಅಂದೋಲಿಕೋತ್ಸವವಾಯಿತು. ಉತ್ಸವದ ನಂತರ ಶ್ರೀ ಸನ್ನಿಧಿಯವರು ತಮ್ಮ ಬಿಡಾರದಲ್ಲಿ ವಿಶ್ರಮಿಸಿದಾಗ ಆ ಊರ ಕೆಲ ಪ್ರಮುಖರು ಒಬ್ಬ ಇಳಿ ವಯಸ್ಸಿನ ಹೆಣ್ಣುಮಗಳೊಡನೆ ಬಂದು ಸಾಷ್ಟಾಂಗವೆರಗಿದರು. ಆಕೆಯ ಮುಖ ಚಿಂತಾಗ್ನಿಯಿಂದ ಬಾಡಿಹೋಗಿತ್ತು. ಆಕೆಯಬಳಿಯಲ್ಲಿದ್ದ ಮಕ್ಕಳಸ್ಥಿತಿಯೂ ಅಷ್ಟೇ ಕರುಣಾಜನಕವಾಗಿತ್ತು. ಶ್ರೀ ಜಗದ್ಗುರುಗಳವರು ಆ ಮುದುಕಿಯತ್ತ ದೃಷ್ಟಿ ಬೀರಿ ''ಯಾರು ಈ ಮುದಕಮ್ಮ ? ಏನಾಗಬೇಕಾಗಿದೆ ?'' ಎಂದು ಪ್ರಶ್ನಿಸಿದರು. ಅದಕ್ಕೆ ಆಕೆಯೊಡನೆ ಬಂದವರು ''ಈಕೆಯದು ಇದೇ ಊರು. ಬಡಜಂಗಮರು ಈಕೆಯ ಪತಿ ಮಲ್ಲಯ್ಯ ಮೊನ್ನೆ ತೀರಿಕೊಂಡ. ಆತನ ಆರು ಮಕ್ಕಳ ಪೋಷಣೆಯ ಭಾರ ಈ ಮುದುಕಿಯ ಮೇಲೆ ಇದೆ. ಹೆತ್ತ ಹತ್ತು ಮಕ್ಕಳಲ್ಲಿ ಆರು ಮಕ್ಕಳು ಮಾತ್ರ ಉಳಿದವು. ಹೇಗಾದರೂ ಮಾಡಿ ಅವುಗಳನ್ನು ಸಲುಹಬೇಕೆಂದು ಕೈಕೂಲಿಮಾಡಿ ಬಹಳ ಶ್ರಮಪಟ್ಟಳು. ಆದರೆ ಒಬ್ಬಳ ದುಡಿಮೆಯಿಂದ ಈ ಆರು ಮಕ್ಕಳು ಪೋಷಣೆ ಹೇಗೆ ಸಾಧ್ಯ ? ಅನೇಕ ದಿವಸಗಳು ಉಪವಾಸ–ವನವಾಸಗಳಲ್ಲಿ ಕಳೆದು ಹೋದವು. ನಾವೆಲ್ಲರೂ ತಮ್ಮ ಆಶ್ರಯವನ್ನು ಕೋರಿ ಈಕೆಯನ್ನು ಇಲ್ಲಿಗೆ ಕರೆತಂದಿದ್ದೇವೆ'' ಎಂದು ಆ ಮುದುಕಿಯ ಕರುಣಾಮಯ ಕಥೆಯನ್ನು ವಿವರಿಸಿದರು. ಆಮೇಲೆ ಶ್ರೀ ಸನ್ನಿಧಿಯವರ ಅಪ್ಪಣೆಯಂತೆ ಡಂಬಳದ ಶ್ರೀಮಠದಲ್ಲಿ ಆ ಮುದುಕಿಗೆ ಆಶ್ರಯ ದೊರೆಯಿತು. ಆದರೆ ಅಲ್ಲಿಯೂ ಆ ಮುದುಕಮ್ಮನಿಗೆ ತೊಂದರೆಗಳು ತಪ್ಪಲಿಲ್ಲ. ಪ್ರಯುಕ್ತ ಸನ್ನಿಧಿಯ ಅಪ್ಪಣೆಯಂತೆ ತನ್ನ ಮಕ್ಕಳನ್ನೆಲ್ಲ ಕರೆದುಕೊಂಡು ಗದುಗಿನ ಮಠಕ್ಕೆ ಬಂದಳು ''ಹರ ಮುನಿದರೂ ಗುರು ಕಾಯುವ'' ಎಂಬ ಗಾದೆಯಂತೆ ಶ್ರೀಗುರು ಕೃಪೆಗೆ ಪಾತ್ರಳಾದ ಈ ವೀರಮ್ಮನ ಸಂಚಿತ ಕರ್ಮಗಳೆಲ್ಲ ಸುಟ್ಟು ಹೋಗಿರಬೇಕು. ಅಂತೆಯೇ ಈಕೆಗೆ ಈ ಮಹದಾಶ್ರಯ ದೊರೆಯಿತು.

ಗದುಗಿಗೆ ಬಂದ ನಂತರ ವೀರಮ್ಮ ಶಹಪೂರಪೇಟೆಯಲ್ಲಿ ಮನೆ ಮಾಡಿಕೊಂಡು ಶ್ರೀಮಠದ ದಾಸೋಹದಲ್ಲಿ ಸೇವೆಸಲ್ಲಿಸುತ್ತ ದಿನಗಳನ್ನು ನೂಕುತ್ತ

ಬಂದಳು. ಈ ಸಮಯದಲ್ಲಿ ಆಕೆ ಮಠದ ಸೂಚನೆಯಂತೆ ತನ್ನ ಮಕ್ಕಳನ್ನು ಶಾಲೆಗೂ ಕಳಿಸಿದಳು. ಭೂಮಿಗೆ ಗಂಧವತಿ ಎಂದು ಹೇಳುತ್ತಾರೆ. ಹೀಗೆ ಭೂಮಿಯಲ್ಲಿಯ ಗಂಧಹೂವಿನ ಮೂಲಕ ಹೊರಹೊಮ್ಮುವಂತೆ ಶ್ರೀ ಜಗದ್ಗುರುಗಳವರ ಕೃಪಾಶಕ್ತಿ ವೀರಮ್ಮನ ಹಿರಿಯಮಗ ಹದಿನೈದು ವರ್ಷದ ಬಾಲಕ ಶ್ರೀ ಗುರುಲಿಂಗಯ್ಯನಲ್ಲಿ ಕೃತುಶಕ್ತಿಯಾಗಿ ಪರಿಣಮಿಸಿತು. ಇದರಿಂದಾಗಿ ಶ್ರೀ ಗುರುಲಿಂಗಯ್ಯನಲ್ಲಿ ಉದ್ಯೋಗಶೀಲತೆ ಸ್ವಭಾವವಾಗಿಬಿಟ್ಟಿತು. ಶ್ರೀ ಗುರುಲಿಂಗಯ್ಯನವರು ಮೊದಲು ಸರಾಫಿ ವ್ಯಾಪಾರದಲ್ಲಿ, ನಂತರ ಬಳೆ ವ್ಯಾಪಾರದಲ್ಲಿ, ಆಮೇಲೆ ಸ್ಟೇಶನರಿ ವ್ಯಾಪಾರದಲ್ಲಿ ಹೀಗೆ ವಿವಿಧ ಕಾಯಕಗಳಲ್ಲಿ ಸಾಕಷ್ಟು ಅನುಭವ ಪಡೆದರು. ಇದನ್ನು ನೋಡಿದ ಗದುಗಿನ ಗೌರಿಶಂಕರ 'ಲಾಜ' ಮಾಲೀಕರು ಶ್ರೀ ಗುರುಲಿಂಗಯ್ಯನವರಿಗೆ ಆರ್ಥಿಕ ನೆರವು ನೀಡಿದರು. ಇದರಿಂದ ಶ್ರೀಗುರುಲಿಂಗಯ್ಯನವರು ಕ್ರಿ.ಶ. ೧೯೪೩ರಲ್ಲಿ ಬಣ್ಣ ಮತ್ತು ಕೆಮಿಕಲ್ಸ್ ವ್ಯಾಪಾರವನ್ನು ಸ್ವತಂತ್ರವಾಗಿ ಪ್ರಾರಂಭಮಾಡಿದರು. ಈ ಹೊಸಉದ್ಯಮದಲ್ಲಿ ಶ್ರೀ ಗುರುಲಿಂಗಯ್ಯನವರಿಗೆ ಅಪಾರ ಆರ್ಥಿಕ ಭದ್ರತೆಯುಂಟಾಯಿತು. ಶ್ರೀ ಗುರು ಲಿಂಗಯ್ಯನವರು ಸ್ಥಿತ ಪ್ರಜ್ಞರು. ಹಿಂದಿನ ಕಷ್ಟದ ದಿನಗಳಲ್ಲಿ ಕುಗ್ಗಲಿಲ್ಲ. ಇಂದಿನ ಸುಖದ ದಿನಗಳಲ್ಲಿ ಉಬ್ಬಲಿಲ್ಲ.

ತಾಯಿವೀರಮ್ಮನವರಿಗೆ ತಮ್ಮ ಹಿರಿಯಮಗ ಗುರುಲಿಂಗಯ್ಯನನ್ನು ಶ್ರೀ ತೋಂಟದಾರ್ಯಮಠದ ಮರಿದೇವರನ್ನಾಗಿ ಮಾಡುವ ವಿಚಾರ ಮೊದಲು ಇತ್ತು. ಆದರೆ ತಂದೆಯನ್ನು ಕಳೆದುಕೊಂಡ ಆತನು ತನ್ನ ಚಿಕ್ಕ ತಮ್ಮಂದಿರರಿಗಾಗಿ ಹಾಗೂ ಚಿಕ್ಕ ತಂಗಿಯರಿಗಾಗಿ, ವಿರಕ್ತಾಶ್ರಮ ಸ್ವೀಕರಿಸುವದನ್ನು ಬಿಡಬೇಕಾಯಿತು. ಹೀಗೆ ವಿರಕ್ತಾಶ್ರಮ ಸ್ವೀಕರಿಸದಿದ್ದರೂ ಅವರು ಕೊನೆಯವರೆಗೂ ನೈಷ್ಠಿಕ ಬ್ರಹ್ಮಚಾರಿಯಾಗಿಯೇ ಉಳಿದರು. ಅದರಂತೆ ಅಷ್ಟೇ ಆಚಾರ ನಿಷ್ಠರೂ ಆದರು. ಶ್ರೀ ಗುರುಲಿಂಗಯ್ಯನವರು ಕಾಯಕನಿಷ್ಠರಾಗಿರುವಂತೆ ಸಜ್ಜನಪ್ರೇಮಿಗಳೂ ಆಗಿದ್ದರು. ಅವರು ತಮ್ಮ ಆಯುಷ್ಯವನ್ನೆಲ್ಲ ಮಹಾಸ್ವಾಮಿಗಳ ಹಾಗೂ ಸದ್ಗೃಹಸ್ಥರ ಸಂಪರ್ಕದಲ್ಲಿ ಕಳೆದರು. ಹಿಂದೆ ಗದಗು ಮುಲ್ಕೀ ಪರೀಕ್ಷೆಯ ಕೇಂದ್ರವಾಗಿತ್ತು. ಆಗ ಆಹಾರ ಧಾನ್ಯದ ಅಭಾವದ ಕಾಲ. ಗದುಗಿಗೆ ಪರೀಕ್ಷಾರ್ಥವಾಗಿ ಬಂದ ಸಹಸ್ರಾರು ಬಡ ವಿದ್ಯಾರ್ಥಿಗಳಿಗೆ ಶ್ರೀ ಗುರುಲಿಂಗಯ್ಯನವರು ಪ್ರಸಾದ ವ್ಯವಸ್ಥೆ ಮಾಡಿ ಧನ್ಯರಾದರು. ಹದಿನೆಂಟನೆಯ ಪೀಠದ ಶ್ರೀ ಶಿವಕುಮಾರ ಜಗದ್ಗುರುಗಳು ಆಗ ಇನ್ನೂ ಕೇವಲ ಚರಮೂರ್ತಿಗಳಾಗಿದ್ದರು. ಒಮ್ಮೆ ಅವರ ಪ್ರಸಾದ ಬಟ್ಟಲ, ಥಾಲಿ, ತಂಬಿಗೆ ಮುಂತಾದವುಗಳೆಲ್ಲ ಮಠದಲ್ಲಿ ಕಳವಾಗಿ ಹೋದವು. ಈ ಸುದ್ದಿ ತಿಳಿಯುತ್ತಲೇ ಶ್ರೀ ಗುರುಲಿಂಗಯ್ಯನವರು ಮಠಕ್ಕೆ ಧಾವಿಸಿ ಬಂದು ಶ್ರೀ ಚರಮೂರ್ತಿಗಳಿಗೆ ಅಂತಹವೇ ಹೊಸ ಸಾಮಾನುಗಳನ್ನು ಕೊಡಿಸಿದರು.

ಶ್ರೀ ಗುರುಲಿಂಗಯ್ಯನವರು ಲಿಂಗಪೂಜಾ ನಿಷ್ಠರು, ತಮ್ಮ ಪೂಜಾ ವ್ಯವಸ್ಥೆಯನ್ನು ತಮ್ಮ ಅಪರ ವಯಸ್ಸಿನಲ್ಲಿಯೂ ಕೂಡ ತಾವೇ ಮಾಡಿಕೊಳ್ಳುತ್ತಿದ್ದರು. ಪ್ರತಿ ದಿವಸ ಬೆಳಕಿನಲ್ಲಿ ಪುಷ್ಪಾರ್ಚನಕ್ಕೆ ಹೋಗುವದು ಅವರ ಪದ್ಧತಿ. ಮರಳಿ ಬರುವಾಗ ಶ್ರೀಮಠಕ್ಕೆ ಬಂದು ಎಲ್ಲ ಗದ್ದುಗೆಗಳ ಮುಂದೆ ಪೂಜೆಗೆ ವಿನಿಯೋಗವಾಗಲೆಂದು ಪತ್ರಿ–ಪುಷ್ಪಗಳನ್ನು ಅಲ್ಲಿ ಇರಿಸಿ ಬರುತ್ತಿದ್ದರು.

ಹಾಗೆ ಒಂದು ದಿನ ಶ್ರೀ ಗುರುಲಿಂಗಯ್ಯನವರು ಪತ್ರಿ–ಪುಷ್ಪಗಳೊಡನೆ ಮಠಕ್ಕೆ ಬಂದಾಗ ಶ್ರೀ ಶಿವಕುಮಾರ ಜಗದ್ಗುರುಗಳವರು ಸದರಿನ ಬಾಗಿಲ ಮುಂದೆ ನಿಂತಿದ್ದರು. ಇವರನ್ನು ಕಾಣುತ್ತಲೇ ಶ್ರೀ ಗುರುಲಿಂಗಯ್ಯನವರು ಸಾಷ್ಟಾಂಗವೆರಗಿ ಎದ್ದು ನಿಂತು ಕೈಜೋಡಿಸಿ "ಬುದ್ಧಿ! ಇದು ಅಸ್ಥಿರಕಾಯ. ಯಾವಾಗ ಹೋಗುವದೋ ಹೇಳಲಿಕ್ಕಾಗದು. ಹಾಗೇನಾದರೂ ಆದರೆ ಈ ದೇಹವನ್ನು ಶ್ರೀ ಸಿದ್ಧೇಶ್ವರ ಜಗದ್ಗುರುಗಳವರ ಗದ್ದುಗೆಯ ಸಮ್ಮುಖದಲ್ಲಿ ನಿಕ್ಷೇಪಮಾಡಬೇಕು. ಏಕೆಂದರೆ ಈ ದೇಹ ಅವರದು. ಅವರ ಮಹಾಪ್ರಸಾದದಿಂದಲೇ ಬೆಳೆದಿದೆ." ಎಂದು ಗದ್ಗದಿತ ಕಂಠದಿಂದ ಹೇಳಿದರು. ಅದನ್ನು ಕೇಳಿ ಶ್ರೀ ಶಿವಕುಮಾರ ಜಗದ್ಗುರುಗಳವರು ಶ್ರೀ ಗುರುಲಿಂಗಯ್ಯನವರಿಗೆ "ಈಗೇನಾಗಿದೆ ? ಚನ್ನಾಗಿಯೇ ಇದ್ದೀರಿ. ಆಗಲಿ, ಆ ಪ್ರಸಂಗ ಬಂದಾಗ ನಿಮ್ಮ ಇಚ್ಛೆಯಂತೆಯೇ ಮಾಡೋಣ ?" ಎಂದು ಅಪ್ಪಣೆ ಕೊಡಿಸಿದರು. ಹದಿನೈದು ದಿನಗಳು ಕಳೆದಿರಬಹುದು ಶ್ರೀ ಗುರುಲಿಂಗಯ್ಯನವರು ಯಾವದೇ ಬೇನೆ ಬೇಸರಿಕೆ ಇಲ್ಲದೆ ದಿ. ೨೫–೫–೧೯೭೩ರಂದು ಅನಾದಿ ಸಿದ್ಧಲಿಂಗನ ಪಾದ ಸೇರಿದರು. ಕೊನೆಗೆ ಅವರ ಅಪೇಕ್ಷೆಯಂತೆ ಅವರ ಸಮಾಧಿ ಅವರ ಗುರುಗಳಾದ ಶ್ರೀ ಸಿದ್ಧೇಶ್ವರ ಜಗದ್ಗುರುಗಳವರ ಗದ್ದುಗೆಯ ಮುಂಭಾಗದಲ್ಲಿ ಆಯಿತು.

**ಶ್ರೀ ಎಡೆಯೂರ ಕ್ಷೇತ್ರ ದರ್ಶನ :**

ಎಡೆಯೂರು ತುಮಕೂರ ಜಿಲ್ಲೆಯ ಕುಣಿಗಲ್ಲ ತಾಲೂಕಿನ ಒಂದು ಗ್ರಾಮ. ಗಾತ್ರದಲ್ಲಿ ಅದು ಚಿಕ್ಕದು. ಆದರೆ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗ ಯತಿಗಳು ಶಿವಯೋಗ ಸಮಾಧಿಯಿಂದ ಇಲ್ಲಿ ನೆಲೆಸಿರುವ ಕಾರಣ ಇದು ಜಂಗಮಲಿಂಗ ಕ್ಷೇತ್ರ.

ಶ್ರೀ ಸಿದ್ಧಲಿಂಗನ ಪವಿತ್ರ ಪರಂಪರೆಯಲ್ಲಿ ಹದಿನಾರನೆಯವರಾದ ಶ್ರೀ ಸಿದ್ಧೇಶ್ವರ ಜಗದ್ಗುರುಗಳವರು ತಮ್ಮ ಮೂಲ ಕರ್ತೃವಿನ ಕ್ಷೇತ್ರವಾದ ಶ್ರೀ ಎಡೆಯೂರಿಗೆ ಹೊರಡಲನುವಾದರು.

ಪೂರ್ವದಲ್ಲಿ ಚರಕುಲ ಸಾರ್ವಭೌಮನಾದ ಅನಾದಿ ತೋಂಟದ ಸಿದ್ಧಲಿಂಗನು ತನ್ನ ಮೂರುಸಾವಿರ ಶಿವಾನುಭವ ಚರಮೂರ್ತಿಗಳು ಹಾಗೂ ಏಳು ನೂರು ವಿರಕ್ತರೊಡಗೂಡಿ ನಾಡಿನಾದ್ಯಂತ ಸಂಚರಿಸುವಾಗ ಅದರ ವ್ಯವಸ್ಥೆಯನ್ನು

ದೊಡ್ಡ ಸಿದ್ಧಲಿಂಗಾರ್ಯರೆಂಬ ಚರವರ್ಯರಿಗೆ ಒಪ್ಪಿಸಿದಂತೆ ಪ್ರಸ್ತುತ ಪ್ರಯಾಣದ ಸಂಪೂರ್ಣ ಹೊಣೆಗಾರಿಕೆಯನ್ನು ಸಮಾಜೋದ್ಧಾರದ ಕಾರಣ ಪುರುಷರಾದ ಶ್ರೀ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರಿಗೆ ಶ್ರೀ ಜಗದ್ಗುರು ಸನ್ನಿಧಿಯವರು ವಹಿಸಿಕೊಟ್ಟರು.

ಈ ಮೊದಲೆ ನಿಶ್ಚಿತವಾದಂತೆ ಶಾಲಿವಾಹನ ಶಕೆ ೧೮೩೯ನೆಯ ಪಿಂಗಳನಾಮ ಸಂವತ್ಸರದ ಕಾರ್ತಿಕ ಶುದ್ಧ ಸಪ್ತಮಿ ಕ್ರಿ.ಶ. ೨೧–೧೧–೧೯೧೭ ರಂದು ಪ್ರಾತಃಕಾಲ ಶುಭಮುಹೂರ್ತದಲ್ಲಿ ಅಭಿನವತೋಂಟದಾರ್ಯನು ತನ್ನ ಪೂರ್ವಾನುಭವದ ಸ್ಮರಣಾರ್ಥ ದಯಮಾಡಿಸುತ್ತಿರುವಂತೆ ಶ್ರೀ ಜಗದ್ಗುರು ಸನ್ನಿಧಿಯ ಮಹಾಪ್ರಯಾಣ ಗದುಗಿನಿಂದ ಡಂಬಳ ಮಾರ್ಗವಾಗಿ ಪ್ರಾರಂಭಿಸಲ್ಪಟ್ಟಿತು. ಶ್ರೀ ಜಗದ್ಗುರು ಸನ್ನಿಧಿಯವರೊಡನೆ ದಯಮಾಡಿಸಿದ ಹರಗುರು ಚರಮೂರ್ತಿಗಳೆಂದರೆ – ಪೂಜ್ಯರಾದ ಲಿಂ. ಹಾನಗಲ್ಲ ಕುಮಾರ ಮಹಾಸ್ವಾಮಿಗಳು, ಶ್ರೀ ಮ.ನಿ.ಪ್ರ. ಶಿವಬಸವ ಮಹಾಸ್ವಾಮಿಗಳು ಹಾವೇರಿ, ಶ್ರೀ ಮ.ನಿ.ಪ್ರ. ಶಿವಮೂರ್ತಿಸ್ವಾಮಿಗಳು ಚರಂತಿಮಠ, ಬಾಗಲಕೋಟೆ, ಶ್ರೀ ಮ.ನಿ.ಪ್ರ. ಅಪ್ಪಯ್ಯಸ್ವಾಮಿಗಳು ಬಿದರಿ ಸವದತ್ತಿ, ಶ್ರೀ ಷ.ಬ್ರ. ವ್ಯಾಕರನಾಳ ಪಟ್ಟಾಧ್ಯಕ್ಷರು, ಶ್ರೀ ನಿ.ಪ್ರ. ಗವಿಮಠದ ಬಸವಲಿಂಗಸ್ವಾಮಿಗಳು ನವಲಗುಂದ, ಶ್ರೀ ನಿ.ಪ್ರ. ಕೊಪ್ಪದ ಮಹಾಂತಸ್ವಾಮಿಗಳು ಇಲಕಲ್, ಶ್ರೀ ನಿ.ಪ್ರ. ಬಸವಲಿಂಗಸ್ವಾಮಿಗಳು ನಿರಡಗಂಬ, ಶ್ರೀ ನಿ.ಪ್ರ. ಶಿವಬಸವಸ್ವಾಮಿಗಳು ರುದ್ರಾಕ್ಷಿಮಠ ನಾಗನೂರ, ಶ್ರೀ ಷ.ಬ್ರ. ಶಿರೂರ ಪಟ್ಟಾಧ್ಯಕ್ಷರು ಬಾಗಲಕೋಟೆ, ಶ್ರೀ ನಿ.ಪ್ರ. ಮಾಹೇಶ್ವರ ಸ್ವಾಮಿಗಳು ಹಾನಗಲ್, ಶ್ರೀ ಷ.ಬ್ರ. ಬಿದರಿ ಪಟ್ಟದ್ದೇವರು, ಶ್ರೀ ನಿ.ಪ್ರ. ಚರಂತಪ್ಪನವರು ಸಂಪಗಾವ, ಶ್ರೀ ಸೊನ್ನದ ಮರಿದೇವರು, ಶ್ರೀ ರೇಣುಕದೇವರು ಹಾನಗಲ್ (ಲಿಂ. ಸದಾಶಿವಸ್ವಾಮಿಗಳು). ಶ್ರೀ ಷ.ಬ್ರ. ಕೆಂಚಬಸವ ಪಟ್ಟದ್ದೇವರು ಗುಲಬರ್ಗಾ, ಶ್ರೀ ನಿ.ಪ್ರ. ಓಲಿಮಠದ ಸ್ವಾಮಿಗಳು ಜಮುಖಂಡಿ, ಶ್ರೀ ಘನಲಿಂಗ ದೇವರು ಶಿಶಂಬರ, ಅನಂತಪುರದ ಶ್ರೀ ಸಚ್ಚಿದಾನಂದದೇವರು, ಶ್ರೀ ಆದಿನಾಥ ದೇವರು ಖೇಳಗಿ, ಶ್ರೀ ಸಿದ್ಧವೀರದೇವರು ನವಲಗುಂದ, ಶ್ರೀ ನಿ.ಪ್ರ. ರಾಮುಗಡ್ಡಿಸ್ವಾಮಿಗಳು, ಶ್ರೀ ಗುರುಲಿಂಗ ದೇವರು, ಹಾರನಹಳ್ಳಿ, ಶ್ರೀ ಚಿದ್ಘನಾರ್ಯರು ಅನಂತಪುರ, ಶ್ರೀ ಷ.ಬ್ರ. ರೇವಣಸಿದ್ಧ ಪಟ್ಟದ್ದೇವರು ಕೆಳದಿ, ಹಾರನಹಳ್ಳಿ ಮರಿದೇವರು, ಶ್ರೀ ಕೆಂಪಯ್ಯದೇವರು ಮರಡಿಮಠ, ಕೊಣ್ಣೂರ, ಶ್ರೀ ಷ.ಬ್ರ. ಸಖರಾಯಪಟ್ಟದ್ದೇವರು, ಶ್ರೀ ನಿ.ಪ್ರ. ನೊಣವಿನಕೆರೆ ಶ್ರೀಗಳು, ಶ್ರೀ ನಿ.ಪ್ರ. ತುರುವಿನಕೆರೆ ಸ್ವಾಮಿಗಳು, ಶ್ರೀ ನಿ. ಪ್ರ. ತರೀಕೆರೆ ಶ್ರೀಗಳು, ಶ್ರೀ ನಿ.ಪ್ರ. ನಂದಗಡ ಶ್ರೀಗಳು, ಶ್ರೀ ನಿ.ಪ್ರ. ಗುರುಪಾದಸ್ವಾಮಿಗಳು ಗುಲಗಂಜಿಮಠ ರೋಣ, ಶ್ರೀ ಷ.ಬ್ರ. ಶಿಗ್ಗಾಂವಿ ಪಟ್ಟದ್ದೇವರು ಶ್ರೀ ಷ.ಬ್ರ. ಸವಡಿ ಪಟ್ಟದ್ದೇವರು, ಶ್ರೀ ಷ.ಬ್ರ. ಸತ್ತಿಗೇರಿ ಪಟ್ಟದ್ದೇವರು, ಶ್ರೀ ಷ.ಬ್ರ. ಅಬ್ಬಿಗೇರಿ ಪಟ್ಟದೇವರು ಹಾಗೂ ಶ್ರೀ ಷ.ಬ್ರ. ಮಂಗಳೂರು ಪಟ್ಟದ್ದೇವರು ಮುಂತಾದವರು.

ಈ ಮಹಾಪ್ರಯಾಣದಲ್ಲಿ ೧ ಆನೆ, ೪ ಒಂಟೆ, ೨೫ ಕುದುರೆ, ೧ ಮೇಣೆ, ೨ ಮೋಟಾರಕಾರ, ೧೦ ಡಮಣಿಗಾಡಿ, ೮ ಕುದುರೆ ಗಾಡಿ, ೧೦೦ ಎತ್ತಿನ ಗಾಡಿ, ೨ ಲಾಂಡಾ ಗಡಿ, ೧೦ ಬಂದೂಕ, ೨ ರಿವಾಲ್ವರ್, ೧೦ ಖಡ್ಗ, ೪ ಭಲ್ಲೆಗಳು ಇವುಗಳ ಜತೆ ಸಂಸ್ಥಾನ ಮಠದ ಬೆಳ್ಳಿ ಬಂಗಾರದ ಉತ್ಸವದ ಸಾಮಾನುಗಳು ಒಯ್ಯಲ್ಪಟ್ಟವು. ಇದಕ್ಕೆ ಸರಿಯಾಗಿ ೫೦೦ ಸಿಬ್ಬಂದಿ ಜನರು ಇದ್ದರು.

ಮೊದಲು ಡಂಬಳ ನಂತರ ಮುಂಡರಗಿ ಹೀಗೆ ತಮ್ಮ ಕರ್ತೃ ಸ್ಥಾನಗಳ ಸಂದರ್ಶನ ಮಾಡಿಕೊಂಡ ಈ ಮಹಾಯಾತ್ರಿಕರು ಮುಂಡರಗಿ ಸಮೀಪದ ತಂಗಭದ್ರಾ ತೀರದಲ್ಲಿ ಬೀಡುಬಿಟ್ಟರು.

ಅಲ್ಲಿ ಹಂಪಸಾಗರದ ಆಗರ್ಭ ಶ್ರೀಮಂತರಾದ ಶ್ರೀ ಮರ್ತೂರ ಸಂಗಪ್ಪನವರು ಮತ್ತು ಶ್ರೀ ಮಸಗಿ ಗುರುಬಸಪ್ಪನವರೇ ಮುಂತಾದ ಪ್ರಮುಖ ಭಕ್ತಾಗ್ರೇಸರರು ಶ್ರೀ ಜಗದ್ಗುರು ಸನ್ನಿಧಿಯವರನ್ನು ಹಾಗೂ ಸನ್ನಿಧಿಯೊಡನೆ ಆಗಮಿಸಿದ ಹರ–ಗುರು–ಚರಸಮೂಹವನ್ನು ಹಾನಗಲ್ಲ ಶ್ರೀಗಳೊಡನೆ ಆಗಮಿಸಿದ ಶಿವಯೋಗ ಮಂದಿರದ ಸಾಧಕರು ಹಾಗೂ ವಟುಗಳನ್ನು ಕ್ರಮೋಪಚಾರಗಳಿಂದ ಸತ್ಕರಿಸಿ ಮಹಾಗಣಾರಾಧನೆಯನ್ನೆಸಗಿದರು. ಆ ಮೇಲೆ ಈ ಮಹಾಪಾದಸವಾರಿ ಹೂವಿನಹಡಗಲಿಗೆ ದಯಮಾಡಿಸಿತು. ಅಲ್ಲಿಯ ಭಕ್ತರಾದ ಸರ್ವಶ್ರೀ ಮುಂಡರಗಿ ರುದ್ರಪ್ಪನವರು, ಡಂಬಳದ ಬಂಗಾರಶೆಟ್ಟಿ ಬಂಗಾರಪ್ಪನವರು ಮತ್ತು ಷಣ್ಮುಖಪ್ಪನವರೇ ಮೊದಲಾದವರು ವಾದ್ಯ ವೈಭವದಿಂದ ಶ್ರೀ ಜಗದ್ಗುರುಗಳವರನ್ನು ಬರಮಾಡಿಕೊಂಡು ತಮ್ಮ ಸೇವೆ ಸಲ್ಲಿಸಿದರು. ಆನಂತರ ಮಹಾಸನ್ನಿಧಿ ಹರಪನಹಳ್ಳಿಗೆ ದಯಮಾಡಿಸಿತು. ಇಲ್ಲಿಯ ವೇ|| ಶಿವರುದ್ರ ಶಾಸ್ತ್ರಿಗಳು ತಮ್ಮ ಪಾಠಶಾಲಾ ವಿದ್ಯಾರ್ಥಿಗಳೊಡನೆ ವೇದಘೋಷದಿಂದ ಶ್ರೀ ಜಗದ್ಗುರುಗಳವರನ್ನು ಬರಮಾಡಿಕೊಂಡ ಮೇಲೆ ಆ ಊರಿನ ಪ್ರಮುಖ ಮುಂದಾಳುಗಳಿಂದ ಅತಿಥಿಗಳಿಗೆಲ್ಲ ಪ್ರಸಾದ ಸಂತರ್ಪಣೆ ಯಾಯಿತು. ಅದೇ ಸಮಯದಲ್ಲಿ ಶ್ರೀ ಶಾಸ್ತ್ರಿಗಳವರ ಕೋರಿಕೆಯ ಮೇರೆಗೆ ಮದ್ರಾಸಿನಲ್ಲಿ ಬಿ.ಎ. ತರಗತಿಯಲ್ಲಿರುವ ಅವರ ಮಗನಿಗೆ ಮಾಸಿಕಸಹಾಯ ಮಾಡುವ ಕುರಿತು ಶ್ರೀ ಸನ್ನಿಧಿಯಿಂದ ಆಶೀರ್ವಾದವಾಯಿತು.

ಆ ಬಳಿಕ ಶ್ರೀ ಸನ್ನಿಧಿಯ ಪ್ರಯಾಣ ದಾವಣಗೇರಿಯ ಮಾರ್ಗವಾಗಿ ಸಾಗಿತು. ಅಷ್ಟರಲ್ಲಿ ಮೈಸೂರ ಸರಕಾರದವರು ಶ್ರೀ ಜಗದ್ಗುರುಗಳವರ ಸವಾರಿಯೊಂದಿಗೆ ಇರಬೇಕಾದ ರಕ್ಷಣಾ ಸಿಬ್ಬಂದಿ ಮೊದಲಾದವುಗಳ ವ್ಯವಸ್ಥೆಯನ್ನು ಏರ್ಪಡಿಸಿದ್ದರು. ದಾವಣಗೇರಿಯ ಪುರಪ್ರಮುಖರು ಊರಲ್ಲೆಲ್ಲ ತಳಿರುತೋರಣಗಳನ್ನು ಕಟ್ಟಿಸಿ ಮಹಾಸನ್ನಿಧಿಯನ್ನು ಅಭೂತಪೂರ್ವ ಉತ್ಸವದಿಂದ ಸ್ವಾಗತಿಸಿದರು. ಶಿವಯೋಗ ಮಂದಿರದ ಸಾಧಕರು, ವಟುಗಳು ಹಾಗೂ ಇನ್ನುಳಿದ ಹರ–ಗುರು–ಚರಮೂರ್ತಿಗಳಿಂದ ಅಲ್ಲಿಯ ಸಭೆ ಪರಶಿವನ ಒಡ್ಡೋಲಗದಂತೆ

ಕಂಗೊಳಿಸಿತು. ಸಭೆಯಲ್ಲಿ ವಿದ್ವಜ್ಜನರ ಭಾಷಣಗಳಾದವು. ಕನ್ನಡ–ಸಂಸ್ಕೃತ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಪಂಡಿತ ಪ್ರಭಪ್ಪನವರು ಸ್ವರಚಿತ ಜಗದ್ಗುರುಗಳವರ 'ಸ್ತೋತ್ರ ಪಂಚಕ'ವನ್ನು ಪ್ರಸ್ತಾಪಿಸಿ ಶ್ರೀ ಸನ್ನಿಧಿಗೆ ಅದನ್ನು ಭಕ್ತಿಪೂರ್ವಕವಾಗಿ ಸಮರ್ಪಿಸಿದರು.

ಮಾರನೆಯ ದಿನ ಪ್ರಾತಃಕಾಲ ದಾವಣಗೇರಿಯ ಸದ್ಭಕ್ತರಾದ ಬಾಗಿಲಮನೆಯ ಶ್ರೀ ಷಡಕ್ಷರಪ್ಪನವರು ಶ್ರೀ ಜಗದ್ಗುರುಗಳವರ ಪಾದಧೂಳಿ ತಮ್ಮ ಮನೆಯಲ್ಲಿ ಬೀಳಲೆಂದು ಅಪೇಕ್ಷಿಸಿದ್ದರಿಂದ ಶ್ರೀ ಮಹಾಸನ್ನಿಧಿಯವರು ಅವರ ಮನೆಗೂ ದಯಮಾಡಿಸಿದರು. ಆ ಸಂದರ್ಭದಲ್ಲಿ ಶ್ರೀ ಷಡಕ್ಷರಪ್ಪನವರು ೨೧ ನೋಟುಗಳನ್ನು ಹಾರಿಸಿ ಶ್ರೀ ಜಗದ್ಗುರುಗಳನ್ನು ಸ್ವಾಗತಿಸಿದರು.

ಮುಂದಿನದು ಬೀರೂರು ಪ್ರಯಾಣ. ಆದರೆ ಮಾರ್ಗ ಮಧ್ಯದಲ್ಲಿ ಹೊಳಲಕೆರೆ, ಹೊಸದುರ್ಗ, ಅಜ್ಜಂಪೂರ ಮುಂತಾದ ಊರುಗಳ ಭಕ್ತರು ಶ್ರೀ ಜಗದ್ಗುರುಗಳವರ ಪಾದದರ್ಶನದ ಅಪೇಕ್ಷೆಗಾಗಿ ಕಾಯುತ್ತಿದ್ದುದರಿಂದ ಆಯಾ ಊರುಗಳ ಭಕ್ತರಿಗೂ ಶ್ರೀ ಸನ್ನಿಧಿಯವರಿಂದ ದರ್ಶನಾಶೀರ್ವಾದಗಳಾದವು. ಬೀರೂರಲ್ಲಿ ವೇ॥ ಪತ್ರಿ ಚನ್ನವೀರಯ್ಯನವರು ತಮ್ಮ ಇನ್ನುಳಿದ ಪ್ರತಿಷ್ಠಿತರೊಡನೆ ಸಲ್ಲಿಸಿದಸೇವೆ ಅವಿಸ್ಮರಣೀಯ. ಅಂದು ಪೌರ್ಣಿಮೆ. ಹದಿನಾರು ಕಲೆಗಳಿಂದ ಕೂಡಿಕೊಂಡ ಚಂದ್ರನು ಉದಯವಾದಂತೆ ತೋಂಟದಾರ್ಯಪೀಠಪರಂಪರೆಯಲ್ಲಿ ಹದಿನಾರನೆಯವರಾದ ವಿರತಚಂದ್ರ ಶ್ರೀ ಸಿದ್ಧೇಶ್ವರ ಜಗದ್ಗುರುಗಳವರ ಆಗಮನ ಬೀರೂರಿಗೆ ಆದದ್ದು ಒಂದು ಯೋಗಾಯೋಗವೆಂದು ಅಲ್ಲಿಯವರು ಭಾವಿಸಿ ಹರ್ಷಪಟ್ಟರು. ಶ್ರೀ ಪತ್ರಿ ಚನ್ನವೀರಯ್ಯನವರ ಉದ್ಯಾನದಲ್ಲಿಯೇ ಅಂದಿನ ರಾತ್ರಿ ಶ್ರೀ ಜಗದ್ಗುರುಗಳವರ ಬಿಡಾರವಾಯಿತು. ಮಾರನೆಯ ದಿನ ಪ್ರಾತಃಕಾಲ ಶ್ರೀ ಚನ್ನವೀರಯ್ಯನವರ ಮನೆಯಲ್ಲಿ ಶ್ರೀ ಜಗದ್ಗುರುಗಳವರ ಪಾದಪೂಜೆ ಜರುಗಿತು. ಶ್ರೀ ಸನ್ನಿಧಿಯವರು ಉಳಿದ ಶ್ರೀಗಳಾದ ಹಾನಗಲ್ಲ, ಹಾವೇರಿ, ರಾಮಗಡ್ಡಿ ಮೊದಲಾದ ಸಮಸ್ತ ಹರ–ಗುರು–ಚರಮೂರ್ತಿಗಳೊಡನೆ ಪೂಜೋಪಚಾರಗೊಂಡು ಅರ್ಪಿತಾನುಭವ ಕ್ರಮವಿಡಿದು ಆ ಮನೆಯ ಉಪ್ಪರಿಗೆಯ ಮೇಲೆ ಸಿದ್ಧವಾದ ಸಿಂಹಾಸನದಲ್ಲಿ ಮೂರ್ತ ಮಾಡಿದರು. ಆ ನಂತರ ಶ್ರೀ ಪತ್ರಿಯವರ ಮನೆಯವರಿಗೆ ಮತ್ತು ಬೀರೂರ ಸದ್ಭಕ್ತರಿಗೆ ಆಶೀರ್ವಾದ ಅನುಗ್ರಹಿಸಿ ಅವರೆಲ್ಲರಿಗೂ ತಮ್ಮೊಡನೆ ಶ್ರೀ ಎಡೆಯೂರ ಕ್ಷೇತ್ರಕ್ಕೆ ಬರಲು ಅಪ್ಪಣೆ ಮಾಡಿ ಪ್ರಯಾಣ ಮುಂದುವರಿಸಿದರು.

ಬೀರೂರ ಶ್ರೀ ಸಣ್ಣಕ್ಕಿ ಪರ್ವತಮ್ಮನವರ ವ್ಯವಸ್ಥೆಯಂತೆ ಶ್ರೀ ಸನ್ನಿಧಿಯ ಸವಾರಿ ಬಾಣಾವರ, ಅರಸಿಕೇರಿ ಗ್ರಾಮಗಳ ಮೇಲೆ ಹಾಯ್ದು ತಿಪಟೂರ ಭಕ್ತರ ಬಿನ್ನಹದ ಮೇರೆಗೆ ಅಲ್ಲಿಗೆ ದಯಮಾಡಿಸಿತು. ಮಾರ್ಗದುದ್ದಕ್ಕೂ ಅನಾದಿ ಸಿದ್ಧಲಿಂಗನ ಜಯಘೋಷ ನಡೆದಿತ್ತು. ಸಂಗೀತ ಪ್ರಿಯರಾದ ಶ್ರೀ ಜಗದ್ಗುರುಗಳವರ

ಹಿಂದೆಯೇ ಶ್ರೀಮಠದ ಸಂಗೀತ ಪಾಠಶಾಲೆಯ ವಾದ್ಯವೃಂದದ ಗಾಡಿಸಾಗಿತ್ತು. ಆಸ್ಥಾನ ಗವಾಯಿಗಳಾದ ಶ್ರೀ ಸಂಗೀತ ಕರಬಸಯ್ಯನವರ ಸುಮಧುರ ಕಂಠದಿಂದ ಕೇಳಿಬರುವ ''ಭೋ ವಿಶ್ವನಾಥ ಪಾಹಿಮಾಂ'' ಎಂಬ ಸ್ತೋತ್ರಪದ್ಯ ಮಾರ್ಗದಲ್ಲಿರುವ ಪಾಂಥಸ್ಥರನ್ನು ಬಲವಾಗಿ ಆಕರ್ಷಿಸಿತು. ''ಅಯ್ಯಾ ! ಸ್ವಲ್ಪು ತಡೆ ಸ್ವಾಮಿ, ನಾವು ಆ ಸಂಗೀತ ಕೇಳುತ್ತೇವೆ'' ಎಂಬ ಪಾಂಥಸ್ಥರ ಕುತೂಹಲದ ಬೇಡಿಕೆಯನ್ನು ಅಂದಿನ ಪ್ರಯಾಣದಲ್ಲಿದ್ದ ವಯೋವೃದ್ಧರು ಈಗಲೂ ಕಥೆ ಮಾಡಿ ಹೇಳುತ್ತಿರುವರು. ಶ್ರೀ ಜಗದ್ಗುರುಗಳವರ ಸಂಗೀತ ಪ್ರೇಮಕ್ಕೆ ಉಪಮೆಯೇ ಇಲ್ಲವೆಂದು ಹೇಳಬೇಕು. ಅವರ ಪೂಜಾ ಕಾಲದಲ್ಲಿ ಅವರ ವಿಶ್ರಾಂತಿ ಕಾಲದಲ್ಲಿ ಮತ್ತು ಅವರ ಪ್ರಯಾಣ ಕಾಲದಲ್ಲಿ ಶ್ರೀ ಕರಿಬಸವ ಗವಾಯಿಗಳವರ ಕಂಚಿನ ಕಂಠದಿಂದ ಹರಿದು ಬರುವ ಗಾನ ಲಹರಿ ಪೂಜ್ಯರಿಗೆ ಕೇಳಿಸುತ್ತಲೇ ಇರಬೇಕು. ಹೀಗೆ ವೈವಿಧ್ಯಮಯವಾದ ಪ್ರಯಾಣ ಮೊದಲೇ ಗೊತ್ತುಪಡಿಸಿದಂತೆ ನೊಣವಿನಕೆರೆಗೆ ತಲುಪಿತು. ನೊಣವಿನಕೆರೆಯ ಶಿವಾನುಭವ ಚರವರ್ಯರಾದ ಸೋಮಕಟ್ಟೆ ಶ್ರೀ ಕರಿ ವೃಷಭೇಂದ್ರ ಸ್ವಾಮಿಗಳವರ ಮಠದಲ್ಲಿ ಅಂದು ವಾಸ್ತವ್ಯ ಮಾಡಿ ಅಲ್ಲಿ ಭಕ್ತಾದಿಗಳ ಸೇವೆಯನ್ನು ಸ್ವೀಕರಿಸಿ ಮುಂದೆ ಪ್ರಯಾಣ ಬೆಳೆಯಿಸಲಾಯಿತು.

ಮಾರ್ಗ ಮಧ್ಯದಲ್ಲಿ ತುರುವೇಕೆರೆಯ ಭಕ್ತರು ಶ್ರೀ ಸನ್ನಿಧಿಯವರು ವಿಶ್ರಾಂತಿ ತೆಗೆದುಕೊಳ್ಳಲು ಸುಂದರವಾದ ಮಂಟಪ ರಚಿಸಿದ್ದರು. ತಜ್ಞರು ಅಲ್ಲಿ ಆ ಭಕ್ತಾದಿಗಳ ಕೋರಿಕೆಯ ಮೇರೆಗೆ ಕೆಲ ಸಮಯ ವಿಶ್ರಾಂತಿ ತೆಗೆದುಕೊಂಡು ಅಲ್ಲಿಯ ಭಕ್ತರೆಲ್ಲರಿಗೆ ಆಶೀರ್ವದಿಸಿ ಮುಂದೆ ಎಲ್ಲಿಯೂ ನಿಲ್ಲದೆ ಶ್ರೀ ಎಡೆಯೂರ ಕ್ಷೇತ್ರವನ್ನು ಪ್ರವೇಶಿಸಿದರು. ಆಗ ಪ್ರಯಾಣಿಕರಾದ ಭಕ್ತಸಂಕುಲಕ್ಕೆ ಆದ ಆನಂದ ಅಷ್ಟಿಷ್ಟಲ್ಲ. 'ಶಿವನೇ ಸಿದ್ಧಲಿಂಗ' ಎಂಬ ಪವಿತ್ರನಾಮ ಘೋಷಣೆ ಮಾಡುತ್ತ ಭಕ್ತರೆಲ್ಲ ಭಕ್ತಿಯ ಆವೇಶದಿಂದ ಕುಣಿದಾಡಿದರು.

**ಶ್ರೀ ಕ್ಷೇತ್ರ ದರ್ಶನ :**

ಮಹಾಕ್ಷೇತ್ರ ಅನತಿ ದೂರದಲ್ಲಿ ಕಂಡಕೂಡಲೇ ಶ್ರೀ ಜಗದ್ಗುರುಗಳವರು ಹಾನಗಲ್ಲ ಶ್ರೀಗಳವರ ಹಸ್ತದಲ್ಲಿ ತಮ್ಮ ಹಸ್ತವನ್ನಿಟ್ಟು ಪಾದಚಾರಿಗಳಾಗಿಯೇ ದಯಮಾಡಿಸಿದರು. ಅವರನ್ನು ಉಳಿದ ಎಲ್ಲ ಹರ–ಗುರು–ಚರಮೂರ್ತಿಗಳು ಹಿಂಬಾಲಿಸಿದರು. ಅವರೆಲ್ಲರ ಹಿಂದೆ ಗಮಕಿ–ಗಾಯಕ–ಶಾಸ್ತ್ರಿ ಹಾಗೂ ಭಕ್ತ ಸಮೂಹ ಬೆಂಬತ್ತಿತ್ತು. ಎಲ್ಲಕ್ಕೂ ಮುಂದೆ ವಾದ್ಯಗಳ ಭೋರ್ಗರೆಯುತ್ತಿದ್ದವು. ಛತ್ರ ಚಾಮರಗಳು ಮೇಲೆದ್ದು ಕಾಣಿಸಿಕೊಂಡವು. ಶ್ರೀ ಜಗದ್ಗುರುಗಳವರು ಕ್ಷೇತ್ರವನ್ನು ಸಮೀಪಿಸುತ್ತಿದ್ದಂತೆ ಕ್ಷೇತ್ರದ ಧರ್ಮದರ್ಶಿಗಳು ಅರ್ಚಕರೊಡಗೂಡಿ ಪೂರ್ಣಕುಂಭದಿಂದ ಸ್ವಾಗತಿಸಿ ವೇದ ಮಂತ್ರಗಳ ಘೋಷಣೆಯೊಡನೆ ಸ್ವಾಮಿಯ ಸ್ಥಾನಕ್ಕೆ ಶ್ರೀ ಜಗದ್ಗುರುಗಳವರನ್ನು ಬರಮಾಡಿಕೊಂಡರು.

ಶ್ರೀ ಜಗದ್ಗುರುಗಳವರಿಗೆ ಕ್ಷೇತ್ರದಲ್ಲಿಯೇ ಬಿಡಾರ ಮಾಡಿಸಲಾಯಿತು. ಉಳಿದ ಶ್ರೀ ಹಾನಗಲ್ಲ ಶ್ರೀಗಳವರೇ ಮುಂತಾದ ಹರ–ಗುರು–ಚರಮೂರ್ತಿಗಳನ್ನು ನದೀ ತೀರದಲ್ಲಿದ್ದ ಚಿತ್ರಮಠಕ್ಕೆ ಕಳಿಸಲಾಯಿತು. ಶ್ರೀ ಬೋಳಬಸವೇಶ್ವರಿಗೆ ಅನಾದಿ ಸಿದ್ಧಲಿಂಗನಿಂದ ಷಟಸ್ಥಲತತ್ತ್ವೋಪದೇಶವಾಗಿ ನಿರಂಜನ ಪಟ್ಟಕಟ್ಟಿದ್ದು ಈ ಚಿತ್ರಮಠದಲ್ಲಿ. ಕಾರ್ತಿಕ ಬಹುಳ ಪಂಚಮಿಯಂದು ಶ್ರೀ ಜಗದ್ಗುರುಗಳವರ ಸನ್ನಿಧಿಯಲ್ಲಿ ಸಭೆಜರುಗಿತು. ಅನಾದಿ ಸಿದ್ಧಲಿಂಗನೇ ಪುನಃ ಈ ರೂಪದಲ್ಲಿ ಆಗಮಿಸಿದನೆಂದು ಭಾವುಕನಿಗೆ ಭಕ್ತಿಕಂಪನವಾಯಿತು. ಅನಾದಿ ಸಿದ್ಧಲಿಂಗನಿಂದ ಹಿಡಿದು ತೋಂಟದಾರ್ಯ ಪರಂಪರೆಯ ಶ್ರೀ ಜಗದ್ಗುರು ಸಿದ್ದೇಶ್ವರ ಮಹಾಸ್ವಾಮಿಗಳವರ ವರೆಗಿನ ಚರಿತ್ರೆಯನ್ನು ಶ್ರೀ ಹಾನಗಲ್ಲ ಶ್ರೀಗಳವರ ಅಪ್ಪಣೆಯ ಮೇರೆಗೆ ಆದರ್ಶ ಶಿಕ್ಷಕರೂ, ಕವಿಗಳೂ, ಉತ್ತಮ ವಾಗ್ಮಿಗಳೂ ಆದ ಶ್ರೀ ಜಿಗಳೂರ ಲಿಂಗಪ್ಪ ಮಾಸ್ತರರು ಸಭೆಯಲ್ಲಿ ನಿರೂಪಿಸಿದರು. ಅದರಂತೆ ಶ್ರೀ ಕೊಪ್ಪದ ಮಹಾಂತದೇಶಿಕರೂ ಉಪನ್ಯಾಸ ಮಾಡಿದರು. ಮಾರನೆಯ ದಿನವೂ ವಿದ್ವಜ್ಜನರ ಭಾಷಣಗಳಾದವು. ಅಂದು ಮಹಾಸ್ವಾಮಿಗೆ ತ್ರಿಕಾಲ ರುದ್ರಾಭಿಷೇಕ ಮತ್ತು ರಾತ್ರಿಯಲ್ಲಿ ದೀಪೋತ್ಸವಾದಿ ಸೇವೆಗಳು ನಡೆದವು. ಒಂದು ದಿನ ತಿರ್ಯಗಾಂದೋಲಿಕೋತ್ಸವವು ಗಜ–ಅಶ್ವ ಹಾಗೂ ಸಮಸ್ತ ಬಿರುದಾವಳಿ ಸಹಿತ ವೈಭವದಿಂದ ಜರುಗಿತು.

ಈ ಎಲ್ಲ ಉತ್ಸವ ಕಾರ್ಯಗಳು ಮುಗಿದ ಮೇಲೆ ಗದಗ ಸಂಸ್ಥಾನ ಮಠದಿಂದ ೫೦೦೦ ರೂ. ಶಿವಯೋಗ ಮಂದಿರ ಸಂಸ್ಥೆಯಿಂದ ೧೦೦೦ ರೂ. ಬೀರೂರ ಪತ್ರಿ ಚನ್ನವೀರಯ್ಯನವರಿಂದ ೧೦೦೦ ರೂ. ಹಾಗೂ ಗದುಗಿನ ಶ್ರೀಮಂತ ಭಕ್ತರಿಂದ ೩೦೦೦ ರೂ. ಹೀಗೆ ೧೦,೦೦೦ ರೂಪಾಯಿಗಳನ್ನು ಮೂಲ ಧನವನ್ನಾಗಿ ಕೂಡಿಸಿ ಅದರ ಆದಾಯದಲ್ಲಿ ಸಂಸ್ಕೃತ ವೈದಿಕ ಪಾಠಶಾಲೆಯನ್ನು ಈ ಕರ್ತೃಸ್ಥಾನದಲ್ಲಿ ನಡೆಸಬೇಕೆಂದು ಗೊತ್ತುಪಡಿಸಲಾಯಿತು.

ಮಹಾಸ್ವಾಮಿಗಳವರ ನಿತ್ಯ ನೈವೇದ್ಯಕ್ಕೆ ಬೆಟಗೇರಿ ಕಣವಿ ಶ್ರೀ ಮಲ್ಲೇಶಪ್ಪನವರು ಮತ್ತು ನರೇಗಲ್ಲ ಕಣವಿ ಶ್ರೀ ಗುರಪ್ಪನವರು ಒಂದು ಹೊಲವನ್ನೇ ಖರೀದಿಸಿಕೊಟ್ಟು ಕೃತಾರ್ಥರಾದರು. ಅದರಂತೆ ಮುಂಡರಗಿಯ ಶೆಟ್ಟರ ಸಂಗಪ್ಪಯ್ಯನವರು ಮಹಾಸ್ವಾಮಿಯ ದೀಪಾರಾಧನೆಗೆ ಒಂದು ಹೊಲವನ್ನು ದಾನವಾಗಿ ಸಲ್ಲಿಸಿ ನಿತ್ಯರಾದರು. ಅದೇ ಮೇರೆಗೆ ಜಕ್ಕಲಿಯ ಸದ್ಭಕ್ತರಾದ ಕಡಗದ ತೋಟಪ್ಪನವರು ಮಹಾಸ್ವಾಮಿಯ ರಥೋತ್ಸವ ಕಾಲದಲ್ಲಿ ಆ ರಥಕ್ಕೆ ತಗಲುವ ಎಣ್ಣೆಯ ಖರ್ಚನ್ನು ನೋಡಿಕೊಂಡರು.

**ಶ್ರೀ ಕಗ್ಗೆರೆ ಕ್ಷೇತ್ರ :**

ಶ್ರೀ ಕ್ಷೇತ್ರ ಎಡೆಯೂರ ಕಾರ್ಯಕ್ರಮ ಪೂರೈಸಿದ ಮೇಲೆ ಅನಾದಿ ಸಿದ್ಧಲಿಂಗನ ತಪೋಭೂಮಿಯಾದ ಶ್ರೀಕಗ್ಗೆರೆ ಕ್ಷೇತ್ರಕ್ಕೆ ಈ ಮಹಾಯಾತ್ರಿಕರು

ಪ್ರಯಾಣಗೈದರು. ಅಲ್ಲಿಯ ಖರ್ಚಿನ ಭಾಗವನ್ನು ಸಂಪೂರ್ಣವಾಗಿ ಹೊಂಬಳ ಗ್ರಾಮದ ಸದ್ಭಕ್ತರಾದ ಶ್ರೀ ಮೈಲಾರ ಶಂಕರಪ್ಪನವರು ವಹಿಸಿಕೊಂಡರು. ಶ್ರೀಜಗದ್ಗುರುಗಳೊಡನೆ ಪ್ರಯಾಣ ಬೆಳಸಿದವರ ಸಂಖ್ಯೆ ಕನಿಷ್ಠ ೧೦೦೦ ವಾದರೂ ಇರಬೇಕು. ಆದರೆ ಕಗ್ಗೆರೆ ಗ್ರಾಮದ ಸುತ್ತು ಮುತ್ತಲಿನ ಊರುಗಳ ೮–೧೦ ಸಾವಿರ ಜನ ಗದುಗಿನ ಶ್ರೀ ಜಗದ್ಗುರುಗಳವರನ್ನು ನೋಡಲು ಹಿಂಡು ಹಿಂಡಾಗಿ ಬಂದರು. ಅವರೆಲ್ಲರಿಗೆ ಅನಾದಿ ಸಿದ್ಧಲಿಂಗನೇ ಪುನಃ ದಯಮಾಡಿಸಿದನೆಂದು ಭಾವನೆ. ಕಗ್ಗೆರೆಯಲ್ಲಿ ವ್ಯವಸ್ಥೆಯಾದದ್ದು ಕೇವಲ ೧೦೦೦ ಜನರಿಗೆ ಆಗುವಷ್ಟು ಪ್ರಸಾದ. ಆದರೆ ಈ ಅಪರಿಮಿತ ಜನಸಂಖ್ಯೆಗೆ ಪ್ರಸಾದ ವ್ಯವಸ್ಥೆ ಹೇಗೆ ಮಾಡಬೇಕೆಂಬುದು ದೊಡ್ಡ ಪ್ರಶ್ನೆಯೇ ಆಯಿತು. ಎಲ್ಲರಿಗೂ ಒಂದು ಮುಷ್ಠಿ ಪ್ರಸಾದಕೊಟ್ಟು ಕಳಿಸಬೇಕೆಂದರೆ ಊಟದ ಎಲೆಗಳೂ ಇಲ್ಲ. ಇನ್ನು ಪ್ರಯಾಣದೊಡನೆ ತಂದ ಸಾಮಗ್ರಿಗಳಿರುವದು ಶ್ರೀಕ್ಷೇತ್ರ ಎಡೆಯೂರಲ್ಲಿ. ಅದು ಇರುವದು ೮–೧೦ ಮೈಲು ದೂರ. ಸಮೀಪದ ಹಳ್ಳಿಗಳಾದರೋ ಕೇವಲ ೮–೧೦ ಮನೆಯ ಸಣ್ಣ ಸಣ್ಣ ಕೊಂಪೆಗಳು. ಈ ಧರ್ಮ ಸಂಕಟದಲ್ಲಿ ಏನು ಮಾಡಬೇಕೆಂಬುದು ಯಾರಿಗೂ ಹೊಳೆಯಲಿಲ್ಲ. ಆಗ ಶ್ರೀ ಹಾನಗಲ್ಲ ಮಹಾಸ್ವಾಮಿಗಳವರು ಶ್ರೀಜಗದ್ಗುರುಗಳವರು ಇದ್ದಲ್ಲಿಗೆ ಬಂದು ''ಬುದ್ಧಿ! ಆಲೋಚನೆ ಏಕೆ ? ಯಾವ ಮಹಾತ್ಮನು ಒಂದು ಭಾಂಡ ಅನ್ನದಿಂದ ೫೦೦ ಜನರನ್ನು ತಣಿಸಿದನೋ ಆತನು ಈಗಲೂ ಇರುವನು. ಇದು ಆತನದೇ ಪವಿತ್ರ ಕ್ಷೇತ್ರ'' ಎಂದು ಧೈರ್ಯ ಹೇಳಿ ಶ್ರೀ ಜಗದ್ಗುರುಗಳವರನ್ನು ಪ್ರಸಾದ ವ್ಯವಸ್ಥೆ ಇದ್ದಲ್ಲಿಗೆ ಕರೆದುಕೊಂಡು ಹೋಗಿ ಅಲ್ಲಿದ್ದ ಪ್ರಸಾದಕ್ಕೆ ಜಗದ್ಗುರುಗಳವರ ಹಸ್ತವನ್ನು ಸ್ಪರ್ಶಿಸಿದರು. ಅಷ್ಟರಲ್ಲಿ ಒಬ್ಬ ಹಳ್ಳಿಗನು ಧಾವಿಸಿ ಬಂದು ''ಊಟದ ಎಲೆಗಳಿಂದ ತುಂಬಿದ ಗಾಡಿ ಹಳ್ಳದಲ್ಲಿ ನಿಂತಿದೆ ಸಹಾಯಕ್ಕೆ ಬನ್ನಿ'' ಎಂದು ಹೇಳಿದನು. ಕೂಡಿದ ಜನ ಹೋಗಿ ಗಾಡಿಯನ್ನು ಸಾಗಿಸಿಕೊಂಡು ಬಂದರು. ನೋಡ ಬಂದವರೊಡನೆ ಎಲ್ಲ ಯಾತ್ರಿಕರನ್ನು ಕುಳ್ಳಿರಿಸಿ ಎಲೆಗಳನ್ನು ಹಂಚಿ ಎಡೆ ಮಾಡಹತ್ತಿದರು. ವಿಚಿತ್ರವೆಂದರೆ ಎಲ್ಲರಿಗೂ ಎಲೆಗಳು ಮುಟ್ಟಿದವಲ್ಲದೆ ಪ್ರಸಾದ ಯಾರಿಗೂ ಕಡಿಮೆ ಬೀಳಲಿಲ್ಲ. ಇದೆಲ್ಲವೂ ಅನಾದಿ ಸಿದ್ಧಲಿಂಗನ ಅಪಾರ ಮಹಿಮೆ ಎಂದು ಎಲ್ಲರೂ ಮಹಾಸ್ವಾಮಿಯ ಗುಣಗಾನ ಮಾಡುತ್ತ ಶ್ರೀ ಎಡೆಯೂರ ಕ್ಷೇತ್ರಕ್ಕೆ ಮರಳಿದರು.

ಹೀಗೆ ಶ್ರೀ ಎಡೆಯೂರ ಕ್ಷೇತ್ರಕ್ಕೆ ಮರಳಿ ಬಂದ ಮೇಲೆ ಯಾತ್ರಿಕರು ಸಿಡಿಲುಮಠ, ಚಿತ್ರಮಠ, ಗೂಳಿಯಗುಡಿ ಮೊದಲಾದ ಪ್ರೇಕ್ಷಣೀಯ ಸ್ಥಾನಗಳನ್ನು ನೋಡಿಕೊಂಡು. ಅಂದು ರಾತ್ರಿ ಸಹಸ್ರ ದೀಪೋತ್ಸವವನ್ನು ಸ್ವಾಮಿಯ ಸನ್ನಿಧಿಯಲ್ಲಿ ನೆರವೇರಿಸಿದರು. ಆಕಾಶದಲ್ಲಿದ್ದ ನಕ್ಷತ್ರಗಳೇ ಭುವಿಗಿಳಿದು ಬಂದಂತೆ ಆ ದೀಪೋತ್ಸವ ಅಷ್ಟೊಂದು ನಯನ ಮನೋಹರವಾಗಿದ್ದಿತು.

ಮಾರನೆಯ ದಿನ ಶ್ರೀ ಜಗದ್ಗುರು ಸನ್ನಿಧಿಯವರು, ಅರ್ಚಕರು, ಧರ್ಮದರ್ಶಿಗಳು, ಸೇವಕರು ಮೊದಲಾದವರಿಗೆ ಸಂಸ್ಥಾನಮಠದಿಂದ ಆಶೀರ್ವಾದ ಮಾಡಿ ಕರ್ತೃಸ್ಥಾನದ ಆಗು ಹೋಗುಗಳ ಬಗೆಗೆ ಧರ್ಮದರ್ಶಿಗಳಿಗೆ ಕೆಲವು ಮಹತ್ವದ ಸೂಚನೆಗಳನ್ನು ಕೊಟ್ಟು ತುರುವೇಕೆರೆ ಮಾರ್ಗವಾಗಿ ಮರುಪ್ರಯಾಣ ಬೆಳೆಸಿದರು.

**ಶ್ರೀ ಕೊಟ್ಟೂರು ಕ್ಷೇತ್ರಕ್ಕೆ ಆಗಮನ :**

ಮಾರ್ಗ ಮಧ್ಯದಲ್ಲಿ ಶ್ರೀ ಕೊಟ್ಟೂರು ಕ್ಷೇತ್ರ ಹತ್ತಿತು. ವೀರಶೈವ ಕ್ಷೇತ್ರಗಳಲ್ಲಿ ಅದೂ ಒಂದು ಮಹತ್ವದ ಸ್ಥಾನ. ಈ ಕ್ಷೇತ್ರಾಧಿಪತಿ ಶ್ರೀ ಕೊಟ್ಟೂರ ಬಸವೇಶ್ವರರು ಲೋಕೋದ್ಧಾರಕ್ಕಾಗಿ ಅವತರಿಸಿದ ಪಂಚಗಣಾಧೀಶ್ವರರಲ್ಲಿ ಒಬ್ಬರು. ಅಪಾರ ಮಹಿಮಾಶಾಲಿಗಳು. ಕೊಟ್ಟೂರಲ್ಲಿ ಅವರ ಜೀವಂತಸಮಾಧಿ ಇದೆ. ಇಲ್ಲಿಗೆ ದಯಮಾಡಿಸಿದ ಮೇಲೆ ಶ್ರೀ ಜಗದ್ಗುರುಗಳವರು ಬಾಚಿಗೊಂಡನಹಳ್ಳಿ, ಹಿರೇಹಡಗಲಿ, ಹಂಪಸಾಗರಗಳಿಗೆ ಬಂದು ಅಲ್ಲಿಯ ತಮ್ಮ ಪೀಠದ ಗುರುಗಳ ಗದ್ದುಗೆಗಳಿಗೆ ಪೂಜೋಪಚಾರಗಳನ್ನು ಸಲ್ಲಿಸಿ ಗಣಾರಾಧನೆಯನ್ನೆಸಗಿ ಮುಂಡರಗಿಗೆ ಬಂದರು. ಮುಂಡರಗಿ ಸದ್ಭಕ್ತರಿಗೆ ಅಲ್ಲಿಯೇ ನಿರೂಪಕೊಟ್ಟು ಮುಂದೆ ಡಂಬಳ ಸಂಸ್ಥಾನ ಮಠಕ್ಕೆ ಆಗಮಿಸಿದರು. ಅಲ್ಲಿಯೂ ಗಣಾರಾಧನೆಯನ್ನು ಮಾಡಿ ನಂತರ ಅಣ್ಣಿಗೇರಿಗೆ ಶ್ರೀ ಜಗದ್ಗುರುಗಳ ಪ್ರಯಾಣ ಮುಂದುವರಿಯಿತು. ಅಣ್ಣಿಗೇರಿಗೆ ಬಂದ ಮೇಲೆ ಅಲ್ಲಿಯ ಪರಮ ಭಕ್ತರಾದ ಶ್ರೀ ಶಂಕರಪ್ಪ ದೇಸಾಯವರ ಸೇವೆಯನ್ನು ಸ್ವೀಕರಿಸಿ, ಅಣ್ಣಿಗೇರಿ ಭಕ್ತರಿಗೆ ಅಲ್ಲಿಯೇ ಆಶೀರ್ವದಿಸಿ ಗದುಗಿನ ಕಡೆಗೆ ಪ್ರಯಾಣ ಬೆಳೆಸಿದರು.

**ಗಡಿಪರ್ವ :**

ಶ್ರೀ ಮಹಾಸನ್ನಿಧಿಯ ಗದುಗಿನ ಹೊರವಲಯದಲ್ಲಿದ್ದ ಮಾನ್ವಿ ಮಲ್ಲೇಶಪ್ಪನವರ ತೋಟದಲ್ಲಿ ವಾಸ್ತವ್ಯಮಾಡಿತು. ಈ ಸಂದರ್ಭದಲ್ಲಿ ಗದಗ–ಬೆಟಗೇರಿ– ಶಹಪೂರಪೇಟೆಯ ಸದ್ಭಕ್ತರು ನಾನಾವಿಧದ ಪಕ್ವಾನ್ನಗಳನ್ನು ಸಿದ್ಧಪಡಿಸಿ ಶ್ರೀ ಜಗದ್ಗುರು ಸನ್ನಿಧಾನದಲ್ಲಿ ಗಡಿಪರ್ವವನ್ನು ವಿಜೃಂಭಣೆಯಿಂದ ಆಚರಿಸಿದರು.

ತೋಟದ ಮಧ್ಯದಲ್ಲಿ ನಾನಾತೆರನಾದ ಪುಷ್ಪಲತೆಗಳಿಂದ ಪರಿಶೋಭಿಸುವ ಹುತ್ತವನ್ನು ರಚಿಸಿ, ಅದರ ಮೇಲೆ ಹಾಲು ಕರೆಯುತ್ತಿರುವ ಆಕಳದ ವಿಗ್ರಹವನ್ನು ನಿಲ್ಲಿಸಿ, ಬೆಳ್ಳಿಯ ಶ್ರೀ ಸಿದ್ಧೇಶ್ವರಮೂರ್ತಿಯನ್ನು ಹುತ್ತದ ಮಧ್ಯದಲ್ಲಿ ಮೂರ್ತಗೊಳಿಸಿದ್ದರು. ಭಾವಿಕ ಭಕ್ತರಿಗೆ ಕಗ್ಗೆರೆಯ ಪುಷ್ಪವಾಟಿಕಾ ವಿರಾಜಮಾನನಾದ ಅನಾದಿ ಸಿದ್ಧಲಿಂಗನನ್ನೇ ನೋಡುತ್ತಿರುವಂತೆ ಭಾಸವಾಯಿತು. ಅದ್ದೂರಿಯಿಂದ ನಡೆದ ಈ ಮಹಾ ಗಣಾರಾಧನೆಯ ಪ್ರಸಂಗದಲ್ಲಿ ಗದುಗಿನ ಪ್ರಸಿದ್ಧ

ವ್ಯಾಪಾರಸ್ಥರಾದ ಗುಜ್ಜರ ಬಂಧುಗಳೂ ಭಾಗವಹಿಸಿ ಶ್ರೀ ಸನ್ನಿಧಿಯವರ ಕೃಪೆಗೆ ಪಾತ್ರರಾದರು. ಹೀಗೆ ಗಡಿಪರ್ವ ಯಶಸ್ವಿಯಾಗಿ ಮುಗಿದ ನಂತರ ಸಂಸ್ಥಾನಮಠಕ್ಕೆ ಶ್ರೀ ಜಗದ್ಗುರುಗಳವರನ್ನು ಗದುಗಿನ ಎಲ್ಲ ಭಕ್ತರೂ ವಾದ್ಯಸಮೇತ ಬರಮಾಡಿಕೊಂಡರು. ಉತ್ಸವವು ಶ್ರೀಮಠವನ್ನು ತಲುಪುತ್ತಲೇ ಶ್ರೀ ಸನ್ನಿಧಿಯ ದಿವ್ಯ ನೇತೃತ್ವದಲ್ಲಿ ಸಮಸ್ತ ಯಾತ್ರಿಕರಿಗೆ ಬೀಳ್ಕೊಡುವ ಸಮಾರಂಭ ಜರುಗಿತು. ಸಭೆಯಲ್ಲಿ ಪರಮಪೂಜ್ಯ ಶ್ರೀ ಹಾನಗಲ್ಲ ಕುಮಾರಮಹಾಸ್ವಾಮಿಗಳವರು ಬೃಹತ್ ಪ್ರಮಾಣದ ಈ ದೀರ್ಘಕಾಲದ ಯಾತ್ರೆ ಯಶಸ್ವಿಯಾಗುವಂತೆ ಸಹಕರಿಸಿದ ಸಮಸ್ತರಿಗೆ ಶುಭವನ್ನು ಕೋರಿದರು.

ದಿನಾಂಕ : ೨-೧-೧೯೧೮ರಂದು ನೆರವೇರಿದ ಈ ಮುಕ್ತಾಯ ಸಮಾರಂಭದಲ್ಲಿ ವಿಶೇಷವಾಗಿ ಭಾಗವಹಿಸಿದವರೆಂದರೆ, ಸೋಲಾಪೂರದ ಶ್ರೀ ವಾರದ ಮಲ್ಲಪ್ಪನವರ ಸಹವರ್ತಿಗಳಾದ ಶ್ರೀ ಪಾಟೀಲ ಮಲ್ಲಿಕಾರ್ಜುನಪ್ಪನವರು ಮತ್ತು ವಾರದವರ ಪಾಠ ಶಾಲೆಯ ಪ್ರಾಧ್ಯಾಪಕರಾದ ಪಂಡಿತ ಜಗದೀಶ ಶಾಸ್ತ್ರಿಗಳು ನಾಲವಾರ, ಅದರಂತೆ ಹಾವೇರಿ ಶ್ರೀ ಶಿವಲಿಂಗಪ್ಪನವರು, ಬಿಸನಾಳ ಕೊಪ್ಪದ ಶ್ರೀ ಮಹಾದೇವಪ್ಪನವರು, ಸವಡಿ ಶ್ರೀ ಸಂಗನಬಸಪ್ಪನವರು, ನರೇಗಲ್ಲ ಶ್ರೀ ಜೋಳದ ದೊಡ್ಡಪ್ಪನವರು, ಜಕ್ಕಲಿಯ ಕಡಗದ ಶ್ರೀ ತೋಟಪ್ಪನವರು ಮತ್ತು ಹೊಂಬಳದ ಮೈಲಾರ ಶ್ರೀ ಶಂಕರಪ್ಪನವರು ಹಾಗೆ ಅನೇಕ ಪರಸ್ಥಳದ ಗಣ್ಯವ್ಯಕ್ತಿಗಳು ಈ ಸಭೆಯಲ್ಲಿ ಭಾಗವಹಿಸಿದ್ದರು. ಸಭೆಯಲ್ಲಿ ಪಂಡಿತೋತ್ತಮರಾದ ನಾಲವಾರ ಶ್ರೀ ಜಗದೀಶ ಶಾಸ್ತ್ರಿಗಳು ಕೆಳಗೆ ಕಾಣಿಸಿದ ತಮ್ಮ ಸ್ವರಚಿತ 'ಅಷ್ಟಕ'ವನ್ನು ಶ್ರೀ ಜಗದ್ಗುರುಗಳವರ ಸನ್ನಿಧಿಯಲ್ಲಿ ಪಠಿಸಿ ಅದನ್ನು ಅರ್ಪಿಸಿದರು.

ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ತೋಂಟದಾರ್ಯ ಮಹಾಸ್ವಾಮಿ ನಾಮ ಸ್ತೋತ್ರಾಷ್ಟಕ ಮಿದಂ ರಾಜತೆ,

ಶ್ರೀ ಮನ್ನಿರಂಜನ ಜಗದ್ಗುರು ಸಿಂಹಪೀಠಾ ।
ಲಂಕಾರಮಂಕುರಿತ ಶಾಂಕರಭಕ್ತಿಗಮ್ಯಂ ॥
ನೀಹಾರ ಹಾರ ಹರ ನಿರ್ಮಲ ಕೀರ್ತಿರಾಶಿಂ ।
ಶ್ರೀ ತೋಂಟದಾರ್ಯ ಚರವರ್ಯ ಗುರುಂ ನಮಾಮಿ ॥ ೧ ॥

ಕ್ಷೇತ್ರ ಪ್ರಸಿದ್ಧ ಎಡೆಯೂರ ಪುರಾಧಿವಾಸ ಶ್ರೀ ಸಿದ್ಧ ।
ಲಿಂಗಯತಿ ಪುಂಗನ ವಂಶ ರತ್ನಂ ॥
ಯಾತ್ರಾ ವಿನೋದ ಪರಿಪಾಲಿತ ಭಕ್ತವರ್ಗಂ ।
ಶ್ರೀ ತೋಂಟದಾರ್ಯ ಚರವರ್ಯ ಗುರುಂ ನಮಾಮಿ ॥ ೨ ॥

ಶ್ವೇತಾತಪತ್ರವರ ತೋರಣ ತಿರ್ಯಗಾಂದೋಲಾದಿ ।
ಪ್ರಸಿದ್ಧ ಬಿರುದಾವಲಿ ಭೂಷಣಾಢ್ಯಂ ॥
ಅನ್ನಾದಿ ದಾನ ಪರಿತೋಷಿತ ದೀನ ಜಾಲಂ ।
ಶ್ರೀ ತೋಂಟದಾರ್ಯ ಚರವರ್ಯ ಗುರು ನಮಾಮಿ ॥ ೩ ॥

ನಿತ್ಯಂ ನಿರಂಜನ ನಿರಾವರಣಾದ್ವಿತೀಯ ।
ಸತ್ತಾದಿ ಲಕ್ಷಣ ಪರಾತ್ಮ ಶಿವಸ್ವರೂಪಂ ॥
ವಿದ್ಯಾ ವಿಶಾರದ ಜನಾವಲಿ ಕಲ್ಪವೃಕ್ಷಂ ।
ಶ್ರೀ ತೋಂಟದಾರ್ಯ ಚರವರ್ಯ ಗುರುಂ ನಮಾಮಿ ॥ ೪ ॥

ಪಾದಾಂಭುಜ ಪ್ರಣಮದಾವಲಿ ಪಾಪ ಪಾಂಶುಂ ।
ಪ್ರಾವೃಟ್ಟ ಯೋಧರ ಧುರಂಧರಮೂರ್ಜಿತಾಂಶುಂ ॥
ದುರ್ವಾದಿ ಗರ್ವಗಿರಿಭೇದನ ಶಂಬಶಸ್ತ್ರಂ ।
ಶ್ರೀ ತೋಂಟದಾರ್ಯ ಚರವರ್ಯ ಗುರುಂ ನಮಾಮಿ ॥ ೫ ॥

ಸ್ವೀಕೃತ್ಯ ನಿತ್ಯ ಸಮದೃಷ್ಟಿಮಭೀಪ್ಸಿತಾರ್ಥಂ ದಾತು ।
ಸಮಾಗತ ಮಾ ಮಾಧವ ಮಾರ್ಯ ಹೃದ್ಯಂ ॥
ಪಂಚಾಯುಧ ದ್ವಿಪ ವಿಪಾಟನ ಪಂಚವಕ್ತ್ರಂ ।
ಶ್ರೀ ತೋಂಟದಾರ್ಯ ಚರವರ್ಯ ಗುರುಂ ನಮಾಮಿ ॥ ೬ ॥

ಮಾಯಾ ವಿಮೋಹಿತ ಜಗಜ್ಜಡ ತಾ ಪಿಶಾಚೀ ।
ದೂರ ಪ್ರಸಾರಣ ಪಟ್ಟು ಸ್ವಭಿಧಾನ ವರ್ಣಂ ॥
ಲಿಂಗಾಂಗ ಸಂಗ ಸುಖ ಸೂತಿನಿಕೇತನಂ ತಂ ।
ಶ್ರೀ ತೋಂಟದಾರ್ಯ ಚರವರ್ಯ ಗುರು ನಮಾಮಿ ॥ ೭ ॥

ಭಸ್ಮ ತ್ರಿಪುಂಡ್ರ ಪರಿಶೋಭಿತ ಫಾಲಪಟ್ಟಂ ।
ದಾರಿದ್ರ್ಯ ಧಾನ್ಯದಲನೇ ಭಜನಾ ಘರಟ್ಟ ॥
ವೈರಾಗ್ಯ ಮೃಗ್ಯ ಘನಜಂಗಮರಾಜ ಪಟ್ಟಂ ।
ಶ್ರೀ ತೋಂಟದಾರ್ಯ ಚರವರ್ಯ ಗುರುಂ ನಮಾಮಿ ॥ ೮ ॥

ಶ್ರೀ ತೋಂಟದಾಹ್ವಯ ಗುರೋರಮಲಾಷ್ಟಕಂ ಹಿ ।
ನಾಲ್ವಾರ ನಿಮ್ ಜಗದೀಶ ಬುಧ ಪ್ರಣೀತಂ ॥
ಭಕ್ತ್ಯಾ ಪಠಂತಿ ಭುವಿಯೇ ಸಕಲಂ ಸುಖಂತೆ ।
ಭುಕ್ತ್ವಾ ಪರತ್ರ ನಿರಘಂ ಸುಖಮಾಪ್ನುವಂತಿ ॥ ೯ ॥

ನಾಲ್ವಾರದ ಜಗದೀಶ ಶಾಸ್ತ್ರಿಗಳು ಅಧ್ಯಾಪಕರು
ಸೊಲ್ಲಾಪೂರ ವಾರದ ಸಂಸ್ಕೃತ ಪಾಠಶಾಲಾ
ತಾ. ೨-೧-೧೯೧೧ಲನೇ ಇಸ್ವಿ

ಇದಾದ ನಂತರ ಸಭೆಯ ಸಂಚಾಲಕರು ಎದ್ದು ನಿಂತು ಯಾತ್ರೆಯ ಸೌಕರ್ಯಕ್ಕಾಗಿ ತಮ್ಮ ಕಾರನ್ನು ಕೊಟ್ಟ ವೇ॥ ಶಿವಮೂರ್ತಿಸ್ವಾಮಿಗಳು ಕಣಬುರ್ಗಿಮಠ ಅವರನ್ನು ಅಭಿನಂದಿಸಿದರು. ಕೊನೆಗೆ ಎಲ್ಲರಿಗೂ ಶ್ರೀ ಸನ್ನಿಧಿಯಿಂದ ಆಶೀರ್ವಾದ ಆದನಂತರ ಸಂಸ್ಥಾನ ಮಠದ ಸಂಗೀತ ಪಾಠಶಾಲಾ ವೃಂದದಿಂದ ಮಹಾ ಮಂಗಲವಾಗಿ ಸಭೆ ವಿಸರ್ಜಿಸಲ್ಪಟ್ಟಿತು.

**ಶ್ರೀ ಶಿವಯೋಗ ಮಂದಿರದಲ್ಲಿ ಉತ್ಸವ :**

ಶೈವ ಕ್ಷೇತ್ರವಾದ ಮಹಾಕೂಟ, ಶಕ್ತಿಪೀಠವಾದ ಬನಶಂಕರಿ ಈ ಎರಡೂ ಪುಣ್ಯಕ್ಷೇತ್ರಗಳ ಮಧ್ಯದಲ್ಲಿ ಶಿವ-ಶಕ್ತಿಗಳ ಅವಿನಾಭಾವ ಸಂಬಂಧವನ್ನು ಸೂಚಿಸುವಂತೆ ರಾರಾಜಿಸುತ್ತಿದೆ ವೀರಶೈವ ಗುರುಕುಲ ಶಿವಯೋಗ ಮಂದಿರ.

ಶತ ಶತಮಾನಗಳ ಕಾಲದಿಂದ ಆತ್ಮವಿಸ್ಮೃತಿ ಹೊಂದಿ ಕೇವಲ ಜಡ ನಿದ್ರೆಯಲ್ಲಿದ್ದ ಸಮಾಜವನ್ನು ತನ್ನ ಚೈತನ್ಯ ಪೂರ್ಣ ವ್ಯಕ್ತಿತ್ವದಿಂದ ಜಾಗೃತಗೊಳಿಸಿದ ಶ್ರೇಯಸ್ಸು ಹಾನಗಲ್ಲ ಶ್ರೀ ಕುಮಾರ ಗುರುವರನಿಗೆ ಸಲ್ಲುತ್ತದೆ. ಈತನೇ ಶ್ರೀ ಶಿವಯೋಗ ಮಂದಿರದ ರೂವಾರಿ. ವಿರತ ಸಾರ್ವಭೌಮನಾದ ಅನಾದಿ ತೋಂಟದ ಸಿದ್ಧಲಿಂಗನೇ ಶ್ರೀ ಹಾನಗಲ್ಲ ಮಹಾಶಿವಯೋಗಿಗೆ ಪರಮಆರಾಧ್ಯಮೂರ್ತಿ ಹಾಗೂ ಆದರ್ಶಮೂರ್ತಿ. ಅಂತೆಯೇ ಅನಾದಿ ತೋಂಟದ ಸಿದ್ಧಲಿಂಗನ ಪರಂಪರಾಗತವಾದ ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯ ಪೀಠದಲ್ಲಿ ಶ್ರೀ ಹಾನಗಲ್ಲ ಶ್ರೀಗಳವರಿಗೆ ಎಲ್ಲಿಲ್ಲದ ಭಕ್ತಿ ಹಾಗೂ ಗೌರವ. ಶಿವಯೋಗ ಮಂದಿರ ಗದುಗಿನ ಶ್ರೀಮಠದ ಅವಿಭಾಜ್ಯ ಅಂಗವೆಂದೇ ಶ್ರೀ ಹಾನಗಲ್ಲ ಅಪ್ಪಗಳವರ ಪವಿತ್ರಭಾವನೆ. ಈ ಕಾರಣದಿಂದಾಗಿ ಗದುಗಿನ ಶ್ರೀಮಠದಲ್ಲಿ ಜರುಗುವ ಯಾವದೇ ಧಾರ್ಮಿಕ ಕಾರ್ಯ ಕಲಾಪಗಳಲ್ಲಿ ಶ್ರೀ ಹಾನಗಲ್ಲ ಅಪ್ಪಗಳವರದು ಅಗ್ರಪಾತ್ರ.

ಒಮ್ಮೆ ಸವಡಿಯ (ಗದಗ) ಶ್ರೀ ಸಂಗನಬಸಪ್ಪನವರು ತಮ್ಮ ಊರಿಗೆ ಜಗದ್ಗುರುಗಳವರನ್ನು ಆಮಂತ್ರಿಸಿ ಏಕಾದಶ ರುದ್ರಪೂಜೆಯನ್ನು ಇಟ್ಟುಕೊಂಡರು. ಶ್ರೀಮಠದ ಏಕಾದಶ ಶಿವಾನುಭವ ಚರಮೂರ್ತಿಗಳು ಅದರಲ್ಲಿ ಪಾಲ್ಗೊಂಡಿದ್ದರು. ಆಗ ಶ್ರೀ ಹಾನಗಲ್ಲ ಶ್ರೀಗಳವರು ಶಿವಯೋಗ ಮಂದಿರದಲ್ಲಿ ಇರಲಿಲ್ಲ. ಮಂದಿರದ ಕಾರ್ಯಕ್ಕಾಗಿ ಸಂಚಾರದಲ್ಲಿದ್ದರು. ಹೀಗಾಗಿ ಸವಡಿಯಲ್ಲಿ ಶ್ರೀ ಜಗದ್ಗುರುಗಳವರ ಕಾರ್ಯಕ್ರಮದ ವಿಷಯ ಅವರಿಗೆ ತಿಳಿದಿರಲಿಲ್ಲ. ಮುಂದೆ ಹೇಗೋ ತಿಳಿದಾಗ ಆ

ಕೂಡಲೇ ಶ್ರೀಗಳವರು ಸವಡಿಗ್ರಾಮಕ್ಕೆ ಧಾವಿಸಿ ಬಂದು ಕಾರ್ಯಕ್ರಮದಲ್ಲಿ ಭಾಗವಹಿಸಿ ಆ ಮಹಾಕಾರ್ಯಕ್ಕೆ ಏನೂ ಚ್ಯುತಿ ಬಾರದಂತೆ ನೋಡಿಕೊಂಡರು. ಇದು ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯಪೀಠದಲ್ಲಿಟ್ಟ ಹಾನಗಲ್ಲ ಶ್ರೀಗಳವರ ಉತ್ಕಟ ಅಭಿಮಾನಕ್ಕೆ ಜೀವಂತ ಉದಾಹರಣೆಯಾಗಿದೆ.

ಒಮ್ಮೆ ಶ್ರೀ ಹಾನಗಲ್ಲ ಮಹಾಸ್ವಾಮಿಗಳವರು ಗದುಗಿನ ಜಗದ್ಗುರುಗಳಿಗೆ ಬಿನ್ನಹ ಮಾಡಿ ಶ್ರೀ ಶಿವಯೋಗ ಮಂದಿರಕ್ಕೆ ಬರಮಾಡಿಕೊಂಡರು. ಅಲ್ಲಿ ಶ್ರೀ ಜಗದ್ಗುರುಗಳವರ ಉತ್ಸವವನ್ನು ಗದುಗಿನ ಮಠದ ಆನೆ ಅಂಬಾರಿ ಮುಂತಾದವುಗಳಿಂದ ಅತ್ಯಂತ ವೈಭವಯುತವಾಗಿ ಉತ್ಸವವನ್ನು ನೆರವೇರಿಸಿದರು.

ಸಮಾಜೋದ್ಧಾರ ಕಾರ್ಯದಲ್ಲಿ ''ಇಪ್ಪತ್ತನೆ ಶತಮಾನದ ಬಸವಣ್ಣ'' ಎಂಬ ಅಗ್ಗಳಿಕೆಗೆ ಪಾತ್ರರಾದ ಶ್ರೀ ಹಾನಗಲ್ಲ ಕುಮಾರ ಮಹಾಸ್ವಾಮಿಗಳಂಥವರು ಮೇಲ್ಕಂಡ ಉತ್ಸವವನ್ನು ತಮ್ಮಲ್ಲಿ ನೆರವೇರಿಸಿದುದು ಪೂಜ್ಯ ಶ್ರೀ ಗದುಗಿನ ಜಗದ್ಗುರುಗಳವರ ಔನ್ನತ್ಯಕ್ಕೆ ನಿದರ್ಶನವೆನಿಸಿದೆ.

**ಅಣ್ಣಿಗೇರಿಯಲ್ಲಿ ಮಳೆ :**

ಶ್ರೀ ಜಗದ್ಗುರುಗಳವರ ವಾಸ್ತವ್ಯ ಅಣ್ಣಿಗೇರಿಯ ಊರ ಹೊರಗಿನ ಶ್ರೀ ತೋಂಟದಾರ್ಯಮಠದಲ್ಲಿತ್ತು. ಸನ್ನಿಧಿಯವರು ಪುನಃ ಗದುಗಿಗೆ ದಯಮಾಡಿಸುವರೆಂದು ಕೇಳಿ ತಿಳಿದ ಭಕ್ತರು ಮಠಕ್ಕೆ ಬಂದರು. ಮಳೆಯ ಅಭಾವದಿಂದ ಪರಿತಪಿಸಿದ ಅವರು ಮಳೆಗಾಗಿ ಸನ್ನಿಧಿಗೆ ಪ್ರಾರ್ಥಿಸಿಕೊಂಡರು. ಅದಕ್ಕೆ ಪೂಜ್ಯಪಾದರು ''ಸ್ವಾಮಿ ಇದ್ದಾನೆ. ಭಯಪಡಬೇಡಿ ಆತನಲ್ಲಿ ನಂಬಿಕೆ ಇಡಿ, ಮಳೆ ತಾನೇ ಆಗುವದು'' ಎಂದು ಅಪ್ಪಣೆ ಕೊಟ್ಟು ಕಾರಿನಲ್ಲಿ ಗದುಗಿಗೆ ದಯಮಾಡಿಸಿದರು. ಕಾರು ಇನ್ನೂ ಮಾರ್ಗದಲ್ಲಿತ್ತು. ಆಕಾಶ ಇದ್ದಕ್ಕಿದ್ದಂತೆ ಮೇಘಾಚ್ಛಾಧಿತವಾಗಿ ಮಳೆ ಸುರಿಯಹತ್ತಿತ್ತು. ಮಳೆಯ ರಭಸಕ್ಕೆ ದಾರಿ ಕಾಣದಂತಾಗಿ ಕಾರು ಮಾರ್ಗದಲ್ಲಿ ನಿಂತೇಬಿಟ್ಟಿತು. ಕೆಲ ಸಮಯದ ಬಳಿಕ ಹಿಂದಿನಿಂದ ಅಣ್ಣೀಗೇರಿಯ ಮೇಲೆ ಹಾಯ್ದು ಬಂದ ವಾಹನಗಳ ಚಾಲಕರಿಂದ ಅಣ್ಣಿಗೇರಿಗೆ ಸಾಕಷ್ಟು ಮಳೆ ಆದದ್ದು ತಿಳಿಯಿತು. ಆ ಮಳೆ ಕೇವಲ ವೃಷ್ಟಿ ಆಗಿರದೆ ಶ್ರೀಗಳವರ ಕೃಪಾದೃಷ್ಟಿಯೇ ಆಗಿತ್ತು.

**ಸೇವಕನನ್ನು ಮೃತ್ಯುವಿನಿಂದ ಪಾರು ಮಾಡಿದ್ದು :**

ಸಂಸ್ಥಾನಮಠದ ಸಂಗೀತ ವಿದ್ವಾಂಸರಾದ ಶ್ರೀ ಕರಿಬಸವ ಗವಾಯಿಗಳು ಏಕಾಏಕಿ ಅಸ್ವಸ್ಥರಾಗಿ ಬಂದರು. ದೇಹ ತಣ್ಣಗಾಗಿ ಕಣ್ಣುಗಳು ನೆಟ್ಟಗೆ ನಿಂತವು. ಇನ್ನು ಅವರು ಉಳಿಯುವದಿಲ್ಲವೆಂದು ತಿಳಿದ ಮನೆಯವರು ಭೂಶಯನಕ್ಕಾಗಿ ಕೆಳಗೆ ಒಂದು ಚಾಪೆಯನ್ನು ಹಾಸಿ ಅದರ ಮೇಲೆ ಅವರನ್ನು ಮಲಗಿಸಿದರು. ಎಷ್ಟು

ಹೊತ್ತಾದರೂ ಅವರ ಪ್ರಾಣೋತ್ಕ್ರಮಣವಾಗಲಿಲ್ಲ. ಇದನ್ನು ನೋಡಿ ಬಂಧುಗಳು ಬಹುಶಃ ಇವರಿಗೆ ಶ್ರೀ ಜಗದ್ಗುರುಗಳವರ ದರ್ಶನದ ಅಪೇಕ್ಷೆ ಇರಬೇಕು ಎಂದು ಭಾವಿಸಿ ಸನ್ನಿಧಿಗೆ ಅರಿಕೆ ಮಾಡಿಕೊಳ್ಳಲು ಗವಾಯಿಗಳವರ ಚಿಕ್ಕ ಮಗ ಸಿದ್ಧಲಿಂಗನನ್ನು ಕರೆದುಕೊಂಡು ಮಠಕ್ಕೆ ಹೋದರು. ಆಗ ಶ್ರೀ ಸನ್ನಿಧಿಯವರು ಅದೇ ತಮ್ಮ ಬೆಳಗಿನ ಪೂಜೆ ತೀರಿಸಿಕೊಂಡು ಬಂದು, ಗುರುಮಠದ ಮುಂದೆ ಇದ್ದ ಸಿಂಹಾಸನದ ಮೇಲೆ ಮೂರ್ತಮಾಡಿದ್ದರು. ಗವಾಯಿಗಳ ವಿಷಯ ಅರಿಕೆ ಮಾಡಿಕೊಳ್ಳಲು ಹೋದವರು ಶ್ರೀ ಜಗದ್ಗುರುಗಳಿಗೆ ಸಾಷ್ಟಾಂಗ ಹಾಕಿ ಎದ್ದುನಿಂತು ಗವಾಯಿಗಳ ಅಂತ್ಯಾವಸ್ಥೆಯ ವಿಷಯವನ್ನು ಅರಿಕೆ ಮಾಡಿ ಅಂತಿಮ ದರ್ಶನ ಕೊಡಲು ಗವಾಯಿಗಳ ಮನೆಗೆ ದಯಮಾಡಿಸಬೇಕೆಂದು ಬೇಡಿಕೊಂಡರು. ಇದನ್ನು ಕೇಳಿದ ಶ್ರೀ ಜಗದ್ಗುರುಗಳು ಥಟ್ಟನೇ ಎದ್ದುನಿಂತು ಸಿಂಹಾಸನದ ಮೇಲ್ಭಾಗದಲ್ಲಿ ಕಟ್ಟಿದ ಪುಷ್ಪಾಲಂಕೃತ ಸಿದ್ಧಲಿಂಗನ ಭಾವಚಿತ್ರವನ್ನು ಭಕ್ತಿಭಾವದಿಂದ ವೀಕ್ಷಿಸಿದರು. ಎಂತಹ ವಿಚಿತ್ರ ! ಆ ಭಾವಚಿತ್ರಕ್ಕೆ ಧರಿಸಿದ ಒಂದು ಬಿಳಿಯ ದಾಸಾಳದ ಹೂವು ಪ್ರಸಾದರೂಪವಾಗಿ ಕೆಳಗೆ ಬಿದ್ದಿತು. ಅದನ್ನು ನೆಲಕ್ಕೆ ಬೀಳದಂತೆ ಶ್ರೀ ಜಗದ್ಗುರುಗಳವರು ಮಧ್ಯದಲ್ಲಿಯೇ ತಮ್ಮ ಹಸ್ತಚಾಚಿ ತೆಗೆದುಕೊಂಡು ಬಂದವರೊಡನೆ ಕುದುರೆಬಗಿಯಲ್ಲಿ ಗವಾಯಿಗಳ ಮನೆಗೆ ದಯಮಾಡಿಸಿದರು. ಮನೆಗೆ ಹೋದ ನಂತರ ಗವಾಯಿಗಳ ಬಾಯಿ ತೆಗೆಯಿಸಿ ಪ್ರಸಾದ ಪುಷ್ಪವನ್ನು ಅವರ ಬಾಯಲ್ಲಿ ಹಾಕಿ ಅಲ್ಲಿದ್ದವರಿಗೆ ''ಇವನಿಗೆ ಏನೂ ಆಗುವದಿಲ್ಲ. ಭಯಪಡಬೇಡಿ'' ಎಂಬ ಅಭಯದಾನ ಮಾಡಿ ಶ್ರೀಮಠಕ್ಕೆ ಹಿಂತಿರುಗಿದರು. ಆನಂತರ ಶ್ರೀ ಗವಾಯಿಗಳು ತೀವ್ರಗತಿಯಲ್ಲಿ ಗುಣಹೊಂದಿ, ಬಹುಕಾಲ ಬಾಳಿ ಶ್ರೀಮಠದ ಸೇವೆ ಮಾಡಿದರು.

### ಶ್ರೀ ಕೊಟ್ರಪ್ಪಜ್ಜನವರಿಂದ ಭವಿಷ್ಯ ಸೂಚನೆ :

ಶ್ರೀ ಹರ್ಲಾಪೂರ ಕೊಟ್ರಪ್ಪನವರು ನವಲಗುಂದ ಶ್ರೀ ನಾಗಲಿಂಗಯೋಗಿಗಳಂತೆ ಸಿದ್ಧಪುರುಷರು ಮತ್ತು ಲೀಲಾ ವಿನೋದಿಗಳು. ಚೈತ್ರ ಶುದ್ಧ ಪೌರ್ಣಿಮೆ ಗದುಗಿನ ಶ್ರೀಮಠದ ಜಾತ್ರಿಯ ಸಂದರ್ಭ, ರಥೋತ್ಸವ ಸಾಂಗವಾಗಿದೆ. ಆಗ ಶ್ರೀ ಜಗದ್ಗುರು ಸಿದ್ಧೇಶ್ವರ ಮಹಾಸ್ವಾಮಿಗಳವರು ಆಂದೋಲಿಕೆಯಲ್ಲಿ ಆಸೀನರಾಗಿದ್ದರು.

ಅಷ್ಟರಲ್ಲಿ ಶ್ರೀ ಹರ್ಲಾಪೂರದ ಕೊಟ್ರಪ್ಪಜ್ಜನವರು ಎಲ್ಲಿಂದಲೋ ಧಾವಿಸಿ ಶ್ರೀ ಜಗದ್ಗುರುಗಳವರ ಪಾಲ್ಕಿಹತ್ತಿರ ಬಂದು ಸನ್ನಿಧಿಯವರಿಗೆ ''ಅಪ್ಪಾ ! ಹೊಯ್ಯಕೊಳ್ಳಲಾ'' ಎಂದು ಕೇಳಿದರು. ಅದಕ್ಕೆ ಶ್ರೀ ಸನ್ನಿಧಿಯವರು ''ಬೇಡ ! ಮಹಾ ಸ್ವಾಮಿಯ ಜಾತ್ರೆ ನಡೆದಿದೆ. ಶಿವ ಶಿವಾ ಅನ್ನಬೇಕು'' ಎಂದು ಅಪ್ಪಣೆಗೈದರು. ಅದಕ್ಕೆ ಶ್ರೀ ಕೊಟ್ರಪ್ಪಜ್ಜನವರು ''ಶಿವ ಶಿವಾ, ಶಿವ ಶಿವಾ, ಶಿವ

ಶಿವಾ'' ಎಂದು ನಾಮಘೋಷ ಮಾಡುತ್ತ ದೂರಸರಿದರು. ಆಗ ಜಾತ್ರೆಯಲ್ಲಿ ಹಾರಿಸಿದ ಒಂದು ಬಿರುಸುಬಾಣ ಸುಂಯ್‌ಗುಡುತ್ತ ಬಂದು ಶ್ರೀ ಜಗದ್ಗುರುಗಳ ಮುಖದ ಎದುರಿಗೆ ನಾಲ್ಕೇ ಬೆರಳಿನ ಅಂತರದಲ್ಲಿ ಹಾಯ್ದುಹೋಯಿತು. ಸಿದ್ಧಪುರುಷ ಕೊಟ್ರಪ್ಪಜ್ಜನವರ ಭವಿಷ್ಯ ಸೂಚನೆಯಂತೆ ಗುಡ್ಡದಂತೆ ಬಂದ ಮರಣಾಂತಿಕ ಅಪಘಾತ ಶ್ರೀ ಜಗದ್ಗುರುಗಳವರ ಭಕ್ತಿ ಪ್ರಭಾವದಿಂದ ಕಡ್ಡಿಯಂತೆ ಹಾರಿಹೋಯಿತು.

**ಗುರುದ್ರೋಹಕ್ಕೆ ಶಾಸ್ತಿ :**

ಮತ್ತೊಮ್ಮೆ ಗದುಗಿನ ರಥೋತ್ಸವ ಜರುಗಲಿಕ್ಕೆ ಕೆಲವೇ ದಿನಗಳು ಉಳಿದಿದ್ದವು. ಅದರ ಕಾರ್ಯಕ್ರಮಗಳನ್ನು ಗೊತ್ತುಪಡಿಸಲು ಶ್ರೀ ಮಠದಭಕ್ತರೆಲ್ಲ ಶ್ರೀ ಜಗದ್ಗುರುಗಳವರ ಸನ್ನಿಧಿಯಲ್ಲಿ ಸಭೆಗೂಡಿದ್ದರು. ಲಿಂಗೈಕ್ಯ ಶ್ರೀ ಅನ್ನದಾನಮರಿ ದೇವರಿದ್ದಾಗ ಶ್ರೀ ಜಗದ್ಗುರುಗಳ ಹಾಗೂ ಭಕ್ತರ ಮಧ್ಯದಲ್ಲಿ ನೇರ ಸಂಪರ್ಕವಿರಲಿಲ್ಲ. ಈಗ ಆ ಕಾಲ ಬದಲಾಗಿ ಭಕ್ತರು ಶ್ರೀ ಸನ್ನಿಧಿಯವರ ಸಮ್ಮುಖದಲ್ಲಿ ಮಾತನಾಡುವದು ಅನಿವಾರ್ಯವಾಗಿತ್ತು. ಮಠದ ಭಕ್ತರಲ್ಲಿಯ ಹಳಬರು ಈಗಾಗಲೇ ಕಾಲವಶರಾಗಿ ನೂತನ ಪೀಳಿಗೆ ಅವರ ಸ್ಥಾನವನ್ನು ಆಕ್ರಮಿಸಿತ್ತು. ಹೀಗಾಗಿ ಮೊದಲಿನ ಭಕ್ತರಲ್ಲಿ ಇದ್ದ ಭಕ್ತಿ–ನಿಷ್ಠೆಗಳು ನೂತನ ಭಕ್ತರಲ್ಲಿ ಅಷ್ಟೊಂದು ಉಳಿದಿರಲಿಲ್ಲ.

ಸಭೆ ಜರುಗಿದಾಗ ಒಬ್ಬ ಭಕ್ತ ಎದ್ದುನಿಂತು ಯಾವುದೋ ತನ್ನ ವೈಯಕ್ತಿಕ ಅಭಿಪ್ರಾಯವನ್ನು ವ್ಯಕ್ತಮಾಡಿದ. ಅದಕ್ಕೆ ಶ್ರೀಗಳವರು ಸಮ್ಮತಿಸಲಿಲ್ಲ. ಆಗ ಆ ಭಕ್ತ ಶ್ರೀ ಸನ್ನಿಧಿಯವರಿಗೆ ''ಬುದ್ಧಿ! ನನ್ನ ವಿಚಾರ ಕಾರ್ಯಗತವಾಗದಿದ್ದರೆ ಇನ್ನು ಮುಂದೆ ನಾನು ಮಠಕ್ಕೆ ಬರುವದಿಲ್ಲ'' ಎಂದು ಅಲ್ಲಿಯ ಸ್ಥಾನ–ಮಾನದ ಔಚಿತ್ಯವನ್ನರಿಯದೆ ಮಾತನಾಡಿದ. ಆಗ ಶ್ರೀ ಜಗದ್ಗುರುಗಳವರು ಅವನಿಗೆ ''ಆಗಲಿ! ಸಿದ್ಧಲಿಂಗನ ಇಚ್ಛೆ ಹಾಗೇ ಇದ್ದರೆ ಅದರಂತೆಯೇ ಆಗಲಿ'' ಎಂದು ಶಾಂತವಾಗಿ ಅಪ್ಪಣೆ ಕೊಡಿಸಿದರು.

ಮುಂದೆ ಕೆಲವೇ ದಿನಗಳಲ್ಲಿ ಸೌಜನ್ಯಮೀರಿ ವಾದಿಸಿದ ಭಕ್ತನು ಹಲ್ಲುನೋವಿನ ಬಾಧೆಯಿಂದ ಹಾಸಿಗೆ ಹಿಡಿದ. ಹೀಗೆ ಮಲಗಿದ ಎರಡೇ ದಿನಗಳಲ್ಲಿ ಅವನ ಹಲ್ಲಿನ ಒಸಡೆಗಳಲ್ಲಿ ವ್ರಣಗಳು ಕಾಣಿಸಿಕೊಂಡು ಅದರಲ್ಲಿ ಹುಳಗಳೂ ಬಿದ್ದವು. ಇದು ಗುರುಗಳಿಗೆ ಬಿರುನುಡಿಗಳನ್ನಾಡಿದ ದುಷ್ಕರ್ಮಫಲ ಎಂದು ಅರಿತ ಆ ಭಕ್ತ ಹೌಹಾರಿದ. ಮುಂದೆ ಇದಕ್ಕೆ ಪರಿಹಾರವೆಂದರೆ ಗುರು ಪಾದೋದಕವೇ ಎಂದು ತಿಳಿದು ಅದನ್ನು ತರಲು ಮನೆಯವರೊಬ್ಬರನ್ನು ಸ್ನಾನಮಾಡಿಸಿ ಮಠಕ್ಕೆ ಕಳಿಸಿದ ಹೀಗೆ ಶ್ರೀಮಠದಿಂದ ಪಾದೋದಕ ತರುತ್ತಿರುವಾಗ ಇತ್ತ ಆ ಭಕ್ತ ಅಸುನೀಗಿದ. ಪಾದೋದಕವೇ ಇನ್ನು ಮನೆಗೆ ಮುಟ್ಟರಿಲಿಲ್ಲ. ಅಂತೂ ಗುರುದ್ರೋಹಕ್ಕೆ ತಕ್ಕ ಶಾಸ್ತಿಯಾಯಿತು.

**ಗುರುನಿಂದೆಗೆ ಪ್ರಾಯಶ್ಚಿತ್ತ :**

ಮತ್ತೊಮ್ಮೆ ಇಂತಹದೇ ಜಾತ್ರೆಯ ಸಂದರ್ಭ. ಜಾತ್ರೆಯ ಆಗು ಹೋಗುಗಳ ಕುರಿತು ಶ್ರೀ ಜಗದ್ಗುರುಗಳ ಸನ್ನಿಧಾನದಲ್ಲಿ ಭಕ್ತಾದಿಗಳ ಸಮಾಲೋಚನೆ ನಡೆದಿತ್ತು. ಆಗಲೂ ಕೂಡ ಮತ್ತೊಬ್ಬ ಪ್ರತಿಷ್ಠಿತ ಭಕ್ತ ಎದ್ದುನಿಂತು ಸಭೆಯಲ್ಲಿ ಯಾವದೋ ತನ್ನ ವೈಯಕ್ತಿಕ ವಿಷಯ ಪ್ರಸ್ತಾಪಿಸಿದ. ಅದಕ್ಕೆ ಶ್ರೀ ಜಗದ್ಗುರುಗಳು ''ಸ್ವಂತವಿಷಯದ ಪ್ರಸ್ತಾಪನೆ ಇಲ್ಲಿ ವಿಹಿತವಲ್ಲ. ಸ್ವಾಮಿಯ ರಥೋತ್ಸವವನ್ನು ಕುರಿತ ವಿಷಯವನ್ನಷ್ಟೇ ಇಲ್ಲಿ ಮಾತನಾಡಬೇಕು. ಸುಮ್ಮನೆ ಸ್ವಾಮಿಯ ಕಾರ್ಯಕ್ಕೆ ವಿಘ್ನ ಒಡ್ಡಬೇಡ'' ಎಂದು ಹೇಳಿದರು. ಆದರೂ ಅವನು ತನ್ನ ಹಠಬಿಡದೆ ತನ್ನ ವಿಚಾರ ಕುರಿತು ಸಭೆಯಲ್ಲಿ ಒತ್ತಾಯಿಸಿದ. ಇದರಿಂದ ಶ್ರೀಗಳವರು ಬಹಳ ನೊಂದುಕೊಂಡು ಅವನಿಗೆ ''ನಿನ್ನ ಜಾತ್ರೆ ಆದ ನಂತರವೇ ಸಿದ್ಧಲಿಂಗನ ಜಾತ್ರೆ ಆಗುವಂತೆ ಕಾಣುತ್ತದೆ. ಆಗಲಿ ದೈವೇಚ್ಛೆ ಇದ್ದಂತೆ ಆಗುವದು ಉಪಾಯವಿಲ್ಲ'' ಎಂದು ಅಪ್ಪಣೆ ಕೊಡಿಸಿದರು. ಆಗ ಸಭೆಯೇ ಸ್ಥಬ್ಧವಾಗಿ ಹೋಯಿತು. ಮುಂದೆ ಮೂರೇ ದಿನಗಳಲ್ಲಿ ಜಾತ್ರೆಗೆ ವಿಘ್ನ ಒಡ್ಡಿದ ವಿಘ್ನ ಸಂತೋಷ ತನ್ನ ಇಹಲೋಕಯಾತ್ರೆಯನ್ನು ಮುಗಿಸಿದ. ಆ ನಂತರವೇ ಆದದ್ದು ಶ್ರೀಮಠದ ಜಾತ್ರೆ.

**ಉತ್ತರಾಧಿಕಾರ ಪ್ರಧಾನ :**

ಶ್ರೀ ಸಿದ್ಧೇಶ್ವರ ಜಗದ್ಗುರುಗಳವರಿಗೆ ಎಂಭತ್ತೈದು ವರುಷಗಳು ತುಂಬುತ್ತ ಬಂದಿದ್ದವು. ಶ್ರೀಮಠದ ತಮ್ಮ ಮೊದಲಿನ ನಿಷ್ಠಾವಂತ ಭಕ್ತರೂ ಗತಿಸಿ ಹೋಗಿದ್ದರಿಂದ ಶ್ರೀ ಸನ್ನಿಧಿಯವರಿಗೆ ಹೆಚ್ಚು ಕಾಲ ಬಾಳುವ ಅಪೇಕ್ಷೆ ಉಳಿದಿರಲಿಲ್ಲ. ಈ ಕಾರಣದಿಂದ ತಮ್ಮ ಉತ್ತರಾಧಿಕಾರವನ್ನು ತೀವ್ರಮಾಡುವ ಕುರಿತು ಸಿದ್ಧತೆನಡೆಸಿದರು. ಗೊತ್ತುಪಡಿಸಿದ ದಿನ ಶ್ರೀ ಜಗದ್ಗುರುಗಳವರು ಸ್ವಸ್ಥಳ ಹಾಗೂ ಪರಸ್ಥಳದ ಭಕ್ತರನ್ನು ಮತ್ತು ತಮ್ಮ ಯಾವತ್ತು ಶಾಖಾಮಠಗಳಲ್ಲಿದ್ದ ಶಿವಾನುಭವ ಚರಮೂರ್ತಿಗಳನ್ನು ಕರೆಯಿಸಿ ತಮ್ಮ ಉತ್ತರಾಧಿಕಾರಿಗಳನ್ನು ಆಯ್ಕೆ ಮಾಡುವ ಕುರಿತು ಸೂಚನೆ ಕೊಟ್ಟರು. ಸಭೆಯಲ್ಲಿದ್ದ ಕೆಲವರಿಂದ ವಾಕ್ಸಿದ್ಧಿಯುಳ್ಳ ಮುಂಡರಗಿಯ ಶ್ರೀ ಅನ್ನದಾನ ಮಹಾಸ್ವಾಮಿಗಳವರ ಹೆಸರು ಸೂಚಿಸಲ್ಪಟ್ಟಿತು. ಆಗ ಇದ್ದಕ್ಕಿದ್ದಂತೆ ದೀಪ ಹಚ್ಚಿದ ಕಾಜಿನ ಬಿಜಲಿ ಕೆಳಗೆ ಬಿದ್ದು ಒಡೆದು ಹೋಯಿತು. ಅಲ್ಲಿಗೇ ಕೈಬಿಟ್ಟರು.

ಆ ಮೇಲೆ ಸೂಚಿತವಾದ ಹೆಸರು ಇಟಗಿಯ ಶ್ರೀ ಗುರುಬಸವ ಚರಮೂರ್ತಿಗಳದು. ಅವರು ಕಾಯಕನಿಷ್ಠರು, ಕೆಲಕಾಲ ಇಳಕಲ್ಲ ಶ್ರೀ ವಿಜಯ ಮಹಾಂತ ತಪಸ್ವಿಗಳಲ್ಲಿ ಇದ್ದು ಬಂದವರು. ಶ್ರೀ ಸನ್ನಿಧಿಯವರು ಈ ಸೂಚನೆಯನ್ನು ಮಾನ್ಯಮಾಡಿ ಇಟಗಿಯ ಶ್ರೀ ಗುರುಬಸವ ಚರಮೂರ್ತಿಗಳಿಗೆ ಅಧಿಕಾರ ಪ್ರಧಾನ ಮಾಡಿದರು.

ಅಮವಾಸ್ಯೆಯ ಗಾಢಾಂಧಕಾರ :

ಶ್ರೀ ಜಗದ್ಗುರುಗಳವರು ತಾವು ನಿಶ್ಚಿಂತರಾಗಬೇಕೆಂದೇ ತಮ್ಮ ಅಧಿಕಾರ ಬಿಟ್ಟು ಕೊಟ್ಟಿದ್ದರು. ಆದರೆ ಕೆಲಕಾಲದ ನಂತರ ಅವರು ಅಸ್ವಸ್ಥರಾದರು. ಇನ್ನು ಮುಂದೆ ತಾವು ಬಾಳಬೇಕೆಂಬ ಅಪೇಕ್ಷೆಯೇ ಅವರಿಗೆ ಉಳಿಯಲಿಲ್ಲ. ಬಹುಶಃ ಅವರು ಇಚ್ಛಾ ಮರಣಿಗಳೇ ಇರಬೇಕು.

ಒಮ್ಮೆ ಡಂಬಳ ಕರ್ತೃ ಗದ್ದುಗೆಯ ದರ್ಶನಕ್ಕೆ ಹೋಗಿ ಬಂದರು. ಅದೇ ಅವರ ಶ್ರೀ ಅರ್ಧನಾರೀಶ್ವರನ ಕೊನೆಯ ದರ್ಶನವಾಯಿತು. ಡಂಬಳದಿಂದ ಮರಳಿದ ನಂತರ ಅವರು ಹಾಸಿಗೆ ಹಿಡಿದರು. ಕ್ರಮೇಣ ಪಾದಗಳಲ್ಲಿಯ ಶಕ್ತಿ ಉಡುಗಿ ಕೇವಲ ಸೇವಕರ ಆಸರೆಯಿಂದ ಸ್ನಾನ ಪೂಜೆಗಳನ್ನು ತಿರಿಸಿಕೊಳ್ಳುತ್ತಿದ್ದರು.

ಅಂದು ಅಮವಾಸ್ಯೆ ಅವರು ಒಂದು ದಿನ ತಮ್ಮ ಸೇವೆಯಲ್ಲಿದ್ದ ಶಂಕರಯ್ಯ, ಸುರಕೋಡದ ಬಸಯ್ಯ ಮತ್ತು ಮಠದ ವಿದ್ಯಾರ್ಥಿ ಸಿದ್ಧನಗೌಡ ಪಾಟೀಲ ಅವರೆಲ್ಲರನ್ನು ಬಳಿಗೆ ಕರೆದು ''ನಮ್ಮ ಅಂತ್ಯ ಕಾಲದಲ್ಲಿ ಸೇವೆ ಚೆನ್ನಾಗಿ ಮಾಡಿದಿರಿ. ಮಹಾಸ್ವಾಮಿ ಅನಾದಿ ಸಿದ್ಧಲಿಂಗ ನಿಮಗೆ ಒಳ್ಳೆಯದು ಮಾಡಲಿ'' ಎಂದು ಅವರನ್ನು ಆಶೀರ್ವದಿಸಿ ಅವರ ಸಹಾಯದಿಂದ ಗುರುಮಠದ ಎದುರು ಭೂಶಯನ ಮಾಡಿದರು. ಕ್ರಮೇಣ ಹೊತ್ತು ಜಾರುತ್ತ ಬಂದ ಹಾಗೆ ಅವರ ಬಾಹ್ಯಪ್ರಜ್ಞೆ ತಪ್ಪುತ್ತ ಬಂದಿತು. ಆದರೂ ಸಿದ್ಧಲಿಂಗ ಎಂಬ ನಾಮಸ್ಮರಣೆ ಮಾತ್ರ ಅವರ ಶ್ರೀ ಮುಖದಿಂದ ಎಡಬಿಡದೆ ಸಾಗಿತ್ತು.

ಈ ದಾರುಣ ವಾರ್ತೆ ಊರಲ್ಲಿ ಹರಡುತ್ತಿರುವಂತೆ ಶ್ರೀಮಠ ಭಕ್ತರಿಂದ ಕಿಕ್ಕಿರಿದು ತುಂಬಿತು. ಶಿವನಾಮಸ್ಮರಣೆ ಹಾಗೂ ಅನಾದಿಸಿದ್ಧಲಿಂಗನ ಜಯಘೋಷಣೆಗಳು ಶ್ರೀ ಮಠದಲ್ಲಿ ಭಕ್ತರಿಂದ ಗಡಚಿಕ್ಕಿದವು. ಬೆಳಗಿನಜಾವ ಸಮೀಪಿಸುತ್ತಿರುವಂತೆ ಬ್ರಾಹ್ಮೀ ಮುಹೂರ್ತದಲ್ಲಿ ಶ್ರೀ ಜಗದ್ಗುರು ಮಹಾಸನ್ನಿಧಿಯವರು ತಮ್ಮ ನಿಜೇಷ್ಟಲಿಂಗದಲ್ಲಿ ಗುರುಸ್ಮರಣಪೂರ್ವಕ ಬೆರೆತರು. ದಿ. ೪-೧೧-೧೯೨೬ನೇ ಗುರುವಾರ ಅಂದು ಕಾರ್ತಿಕ ಶುದ್ಧ ಪ್ರತಿಪದೆ, ಅಂದೇ ಸಾಯಂಕಾಲ ಅವರ ಅಂತೇಷ್ಠಿ ವಿಧಿಯೂ ಪೂರೈಸಲ್ಪಟ್ಟಿತು. ಗುರುಗಳಾದ ಶ್ರೀ ವೃದ್ಧತೋಂಟದಾರ್ಯರ ಗದ್ದುಗೆಯ ಪಕ್ಕದಲ್ಲಿಯೇ ಮುಂಚಿತವಾಗಿ ಸಿದ್ಧಪಡಿಸಲಾಗಿದ್ದ ಸ್ಥಳದಲ್ಲಿ ಸಮಾಧಿಗೊಳಿಸಲಾಯಿತು.

ಅರ್ಧ ಶತಮಾನಕಾಲ ಶ್ರೀ ಜಗದ್ಗುರು ತೋಂಟದಾರ್ಯಪೀಠದಲ್ಲಿ ಷೋಡಶ ಕಲಾಯುಕ್ತ ಪೌರ್ಣಿಮೆಯ ಚಂದ್ರನಂತೆ ಬೆಳಗಿದ ಈ ವಿರತಿಕುಲಚಂದ್ರ ಅಮವಾಸ್ಯೆಯ ಕರಾಳರಾತ್ರಿಯಲ್ಲಿ ಅಗೋಚರನಾದ.

■■

# ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗ ಶಿವಯೋಗಿಗಳ ಪೀಠಪರಂಪರೆ

| ನಂ. | ಶೂನ್ಯ ಸಿಂಹಾಸನಾಧಿಪತಿಗಳು | ಪೀಠಾರೋಹಣ ಕಾಲ | ಸಮಾಧಿ ಸ್ಥಳ |
|---|---|---|---|
| ೧. | ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳು | ೧೪೨೫–೧೪೫೬ | ಎಡೆಯೂರ |
| ೨. | ಶ್ರೀ ತೋಂಟದ ಬೋಳಬಸವ ಸ್ವಾಮಿಗಳು | ೧೪೫೬–೧೪೬೮ | ಮದ್ದಗಿರಿ |
| ೩. | ಶ್ರೀ ತೋಂಟದ ಸಿದ್ಧೇಶ್ವರ ಸ್ವಾಮಿಗಳು | ೧೪೬೮–೧೪೮೪ | ಗುಳೂರ |
| ೪. | ಶ್ರೀ ತೋಂಟದ ಉದ್ಧನಾರ್ಯ ಸ್ವಾಮಿಗಳು | ೧೪೮೪–೧೫೦೪ | ಭದ್ರರಾಜಪೂರ |
| ೫. | ಶ್ರೀ ತೋಂಟದ ಹರಿಹರ ಸ್ವಾಮಿಗಳು | ೧೫೦೪–೧೫೨೭ | ಹಿರೇಹಡಗಲಿ |
| ೬. | ಶ್ರೀ ತೋಂಟದ ಭಿಕ್ಷುಕದ ಬಸವಲಿಂಗ ಸ್ವಾಮಿಗಳು | ೧೫೨೭–೧೫೫೭ | ರುದ್ನೂರು |
| ೭. | ಶ್ರೀ ತೋಂಟದ ಕಟಗಿಹಳ್ಳಿ ರಾಚೋಟಿ ಸ್ವಾಮಿಗಳು | ೧೫೫೭–೧೬೦೭ | ತಿಳವಳ್ಳಿ |
| ೮. | ಶ್ರೀ ತೋಂಟದ ಕೌದಿ ಮಹಾಂತ ಸ್ವಾಮಿಗಳು | ೧೬೦೭–೧೬೭೨ | ಬಾಚಿಗೊಂಡನಹಳ್ಳಿ |
| ೯. | ಶ್ರೀ ತೋಂಟದ ಅರ್ಧನಾರೀಶ್ವರ ಸ್ವಾಮಿಗಳು | ೧೬೭೨–೧೭೨೨ | ಡಂಬಳ |
| ೧೦. | ಶ್ರೀ ತೋಂಟದ ನಂದೀಶ್ವರ ಸ್ವಾಮಿಗಳು | ೧೭೨೨–೧೭೬೭ | ಅಣ್ಣಿಗೇರಿ |
| ೧೧. | ಶ್ರೀ ತೋಂಟದ ಉಗ್ಗದ ತೋಂಟದಾರ್ಯ ಸ್ವಾಮಿಗಳು | ೧೭೬೭–೧೭೭೩ | ಅಣ್ಣಿಗೇರಿ |
| ೧೨. | ಶ್ರೀ ತೋಂಟದ ಸದಾಶಿವ ಸ್ವಾಮಿಗಳು | ೧೭೭೩–೧೮೦೮ | ಕೊಪ್ಪಳ |
| ೧೩. | ಶ್ರೀ ತೋಂಟದ ಮಹಾಂತ ಸ್ವಾಮಿಗಳು | ೧೮೦೮–೧೮೩೮ | ಹಂಪಸಾಗರ |
| ೧೪. | ಶ್ರೀ ತೋಂಟದ ವೃದ್ಧ ತೋಂಟದಾರ್ಯ ಸ್ವಾಮಿಗಳು | ೧೮೩೮–೧೮೭೮ | ಗದಗ |
| ೧೫. | ಶ್ರೀ ತೋಂಟದ ಮೃತ್ಯುಂಜಯ ಸ್ವಾಮಿಗಳು | ೧೮೭೮–೧೮೮೧ | ಗದಗ |
| ೧೬. | ಶ್ರೀ ತೋಂಟದ ಸಿದ್ಧೇಶ್ವರ ಸ್ವಾಮಿಗಳು | ೧೮೮೧–೧೯೨೪ | ಗದಗ |
| ೧೭. | ಶ್ರೀ ತೋಂಟದ ಗುರುಬಸವ ಸ್ವಾಮಿಗಳು | ೧೯೨೪–೧೯೬೦ | ಗದಗ |
| ೧೮. | ಶ್ರೀ ತೋಂಟದ ಶಿವಕುಮಾರ ಸ್ವಾಮಿಗಳು | ೧೯೬೧–೧೯೭೪ | ಗದಗ |
| ೧೯. | ಶ್ರೀ ತೋಂಟದ ಸಿದ್ಧಲಿಂಗ ಸ್ವಾಮಿಗಳು | ೧೯೭೪ | |

ಆಧಾರ : ೧. ನಿರಂಜನ ಜಂಗಮ ವಂಶದರ್ಪಣ – ಶ್ರೀ ಕೋಟಿ ಚನ್ನಪ್ಪನವರು.

೨. ಮೈಸೂರ ಮಹಾರಾಜರಿಗೆ ಅರ್ಪಿಸಲಾದ ಮನವಿಪತ್ರ.

## ಶ್ರೀ ಜಗದ್ಗುರುಗಳವರು ಎಡೆಯೂರಿಗೆ ದಯಮಾಡಿಸಿದಾಗ ಅವರೊಂದಿಗೆ ಒಯ್ಯಲಾದ ಸರಂಜಾಮಗಳ ವಿವರ ಹಾಗೂ ಈ ಕುರಿತು ಸರಕಾರ ಹೊರಡಿಸಿದ ಆದೇಶ

# PROCEEDINGS THE GOVERNMENT OF HIS HIGHNESS

## THE MAHARAJA OF MYSORE

Read :

Memorial No. 1289 dated the 15th January 1914 from Sriman Thotada Swamy of Dombal and Gadag, Daharwar District, stating that he intends to visit the shrine of Saint Sri Siddalingeshwar Swamy at Yediyur in the Kunigal Taluk, Tumkur District, with equipage and attendants befitting his position and requesting that a Rahadari may be issued to the local officers of afford the party necessary help in obtaining provisions and that a police guard may be furnished for maintenance of peace and order during the tour.

Order thereon No. $\frac{2357-9}{\text{Mus. } 326-13-2}$

Dated Bangalore, 6th March 1914.

The following equipage, camp followers and accompaniments will, it is reported accompany the Swamigalu during the ensuing tour-

1 Mena 2 Landaus.
2 Motor cars.
8 Tongas drawn by horses
10 Dumny Carts.
100 Bullock Carts.
1 Elephant
4 Camels
25 Horses.
4 Sawars with lances.

10 Swords.
10 Guns.
2 Revolvers.
Gold and silver Ornaments.
500 Followers

2. The Swmigalu is exampted from personal appearance in the Bombay Civil Court and consequently under Schedule-I of the Indian Arms Rules he is exempted from the operation of the Arms Act. He will accordingle be permitted to possess the arms secified above.

3. The tour of the Swamigalu will lie within the districts of Chitradrug and Tumkur and the tour programme will be communicted by the Agent of the Matt Direct to the District Officers concerned. The Deputy Commissioners of these districts are requested to arrange for the necessary help to secure provisions and lodgings for the Swamigalu and his large following, and such Police assistance as may be necessary for the maintenance of peace and order. A Canarese Rahadari in the usual terms will also issue.

Sd/
**K.R. Srinivasaingar**
Secretary to Government

To,

The Deputy Commissioner, Tumkur District
The Deputy Commissioner, Chitradurg District.
The Muzrai Suprintendent in Mysore. K.N.N.r.

Memo No. $\frac{2360}{\text{Mus. } 326-13-2}$ Date 6th March 1914

Copy of the above is forwarded to Mr. H.K. Veerabasaviah, Advocate for the memorialist.

"By Order"
**Sd/-**
For secretary to Government



ಶ್ರೀ ಜಗದ್ಗುರು ತೋಂಟದಾರ್ಯ ಮಹಾಸ್ವಾಮಿಗಳವರನ್ನು ಪ್ರಥಮ ದರ್ಜೆಯ ಸರದಾರರೆಂದು ಪರಿಗಣಿಸಬೇಕೆಂದು ರಾಜ ಲಖಮಗೌಡರು, ಸಿರಸಂಗಿ ಲಿಂಗರಾಜರು, ಮೆಣಶಿನಕಾಯಿ ಶಾಂತ ವೀರಪ್ಪನವರು, ಆರಟಾಳ ರುದ್ರಗೌಡರು ಮುಂತಾದ ಮುಖಂಡರು ಸರಕಾರಕ್ಕೆ ಬರೆದುಕೊಂಡ ಮನವಿಯಿದು.

# ಕೋಡಿಕೊಪ್ಪದ

# ಶ್ರೀ ಹುಚ್ಚೀರಪ್ಪಜ್ಜನವರ

## ದಿವ್ಯ ಚರಿತಾಮೃತ

❋

ಲೇಖಕರು :

ಶ್ರೀ ಸಿದ್ಧಲಿಂಗಯ್ಯ ಹೊಸಮಠ

❋

ಪ್ರಕಾಶಕರು :

ಶ್ರೀ ಹಠಯೋಗಿ ಸಾಹಿತ್ಯ ಪ್ರಕಾಶನ ಟ್ರಸ್ಟ ಕಮೀಟಿ,

ನರೇಗಲ್

## ಪ್ರಕಾಶಕರಾದ
## ಕೋಡಿಕೊಪ್ಪದ ಶ್ರೀವೀರಪ್ಪಜ್ಜನ ಮಠದ ದತ್ತಿ ಸಮಿತಿಯವರ
## ನಾಲ್ಕು ಮಾತುಗಳು

'ಅವ ಜಾಗಂತಿ ಮಾಂ ಮೂಢಾ ಮಾನುಷಿಂ ತನುಮಾಶ್ರೀ ತಂ।
ಪರಂ ಭಾವ ಮಜಾನಂತೋ ಮಮ ಭೂತ ಮಹೇಶ್ವರಂ ॥ (ಭಗವದ್ಗೀತೆ)

''ಮಾನವ ರೂಪವನ್ನು ತಾಳಿದ ನನ್ನನ್ನು ಮೂಢರು ಪ್ರಪಂಚದ ಒಡೆಯನೆಂದು ತಿಳಿಯದೇ ನನ್ನನ್ನು ಹಾಸ್ಯ ಮಾಡುವರು''

ಇದು ಶ್ರೀ ಭಗವದ್ಗೀತೆಯಲ್ಲಿ ಬರುವ ಒಂದು ಉಕ್ತಿ, ನಮ್ಮೀ ಹಠಯೋಗಿ ಶ್ರೀ ವೀರಪ್ಪಜ್ಜನಿಗೆ ಅಕ್ಷರಶಃ ಅನ್ವಯವಾಗಬಲ್ಲ ಅನುಭವದಮಾತಾಗಿದೆ. ಇದರ ಸತ್ಯಾಂಶವನ್ನು ಅನುಭವದಿಂದ ಪಡೆಯಬಹುದು ಆತನ ಚರಿತ್ರೆ ಓದಿದ ಪ್ರತಿಯೊಬ್ಬರಿಗೂ ಇದು ಆಗಲು ಸಾಧ್ಯ.

ಬಹಳ ವರ್ಷಗಳಿಂದ ಸಮಿತಿಯು ಈತನ ಜೀವನವನ್ನು ಚರಿತ್ರೆ ರೂಪದಲ್ಲಿ ಹೊರತರಲು ಪ್ರಯತ್ನ ಮಾಡುತ್ತಲೇ ಇತ್ತು, ಆದರೆ ವಿಷಯ ಸಂಗ್ರಹ ತೊಂದರೆದಾಯಕವಾಗಿತ್ತು. ಸ್ಥಳೀಯ ಐತಿಹ್ಯ ಜನರಿಂದ ಸಂಗ್ರಹಿಸುವ ಕೆಲಸವೇ ಕುಂಟುತ್ತಾ, ಎಡವುತ್ತಾ ನಡೆಯಿತು. ಇದರ ಮೂಲ ಕಾರಣ; ಈ ಕಾರ್ಯ ನಿಧಾನವಾಗಲು ಇನ್ನೊಂದು ಕಾರಣ ಆತನ ಬಗ್ಗೆ ಇರುವ ಭಯ. ಹೀಗೆ ಸಂದಿಗ್ಧ ಸ್ಥಿತಿಯಲ್ಲಿ ನಮಗೆ ಲೇಖಕರೇ ಮುಂದೆ ಬಾರದಾದರು. ಆತನ ಕೃಪೆಯಿಂದಲೇ ಕಡೆಗೆ ನಮ್ಮ ವೈಚಾರಿಕ ಸ್ತರಕ್ಕೆ ಸೂಕ್ತರಾದ ಪಂ. ಶ್ರೀಸಿದ್ಧಲಿಂಗಶಾಸ್ತ್ರಿಗಳು ಹೊಸಮಠ ಸಾ. ಬೂದಿಹಾಳ ಇವರು ದೊರೆತುದು ಒಂದು ಯೋಗಾಯೋಗ ಸೇವೆ ಎನ್ನಲಡ್ಡಿಯಿಲ್ಲ. ಇವರ ಲೇಖನಿಯಿಂದ ಮೂಡಿದ ವಿಚಾರಗಳ ಓತಪ್ರೋತ – ವಿಮರ್ಶೆ ಈತನ ಬಗ್ಗೆ ಜನರಲ್ಲಿ ಬಹುದಟ್ಟವಾದ ಹಾಗೂ ಆಳವಾದ ಜ್ಞಾನ ಪರಿಣಾಮವಾಗುವದರಲ್ಲಿ ಯಾವ ಸಂದೇಹವೂ ಇಲ್ಲ.

ಇನ್ನು ನಮ್ಮ ಪೂರ್ವಜರು, ಹಿರಿಯರೂ ಕೂಡಾ ಶ್ರೀ ಅಜ್ಜನ ಚಿರಸ್ಥಾಯಿತ್ವಕ್ಕೆ ಅವಶ್ಯವಿರುವ ಧಾರ್ಮಿಕ, ವೈಜ್ಞಾನಿಕ ಕಾರ್ಯಗಳನ್ನು ಸ್ಥಾಪಿಸಿ, ನೆರವೇರಿಸಿ, ಮುಂದುವರೆಸಿಕೊಂಡು ಬಂದ ಕಾರ್ಯ ಅವರ ಸ್ಥಿತಿ ಭಕ್ತಿಗೆ ಕನ್ನಡಿಯಾಗಿದೆ, ಈ ಕಾರ್ಯದಲ್ಲಿ ಹಿಂದಿನ ಹಾಗೂ ಇಂದಿನ ಮಹನೀಯರೆಲ್ಲರೂ ಶ್ರೀ ಅಜ್ಜನ ಕೃಪೆಗೆ ಪಾತ್ರರಾದರು. ಅವರನ್ನು ನಾವು ಮನಸಾರೆ ಸ್ಮರಿಸುತ್ತೇವೆ.

ತದನಂತರ ನಮಗೆ ಹಿಂದಿನ ಹಿರಿಯರಿಂದ ಅನಿರೀಕ್ಷಿತವಾಗಿ ಹೆಗಲ ಮೇಲೆ ಹಾಕಿದ ಈ ಕಾರ್ಯಭಾರವನ್ನು ಒಪ್ಪಿದ ಪರಮ ತಪಸ್ವಿಗಳಾದ ಹಾಲಕೇರಿ

ಶ್ರೀ ಅನ್ನದಾನ ಮಹಾಸ್ವಾಮಿಗಳು ನೀಡಿದ ವಾಗ್ದಾನುಗ್ರಹ ಆಶೀರ್ವಾದದ ಪ್ರೇರಣೆಯಂತೆ ಎಂದು ಹೇಳಲು ಬಹು ಹೆಮ್ಮೆ ಆನಂದವಾಗುತ್ತದೆ.

ಶ್ರೀ ಅಜ್ಜನ ಯಾವತ್ತೂ ಕ್ಷೇತ್ರ ಪ್ರಗತಿಗೆ ನಿಷ್ಠಾಭಕ್ತರ ಸಹಾಯ, ಸಹಕಾರ, ಬೆಂಬಲವು ಮುಖ್ಯ ಕಾರಣವಾಗಿದೆ. ತನು–ಮನ–ಧನದಿಂದ ಸೇವೆಮಾಡಿದ ಅವರೆಲ್ಲರನ್ನು ಈ ಸಮಯದಲ್ಲಿ ತುಂಬು ಹೃದಯದಿಂದ ನೆನೆಯದೇ ಇರಲಾರೆವು.

ಹಾಗೆಯೇ ನಿಷ್ಠೆ, ಪ್ರಾಮಾಣಿಕತೆ, ಸೇವಾಭಾವದಿಂದ ದುಡಿದು ತಮ್ಮ ಸಹಯೋಗತ್ವವನ್ನು ಕೊಡಮಾಡಿದ ಮಠದ ಯಾವತ್ತೂ ಕಾರ್ಯಕರ್ತರನ್ನು, ಕರ್ಮಚಾರಿಗಳನ್ನು ಸ್ಮರಿಸುವದು ನಮ್ಮ ಕರ್ತವ್ಯವಾಗಿದೆ.

ಅತ್ಯಂತ ಅಲ್ಪಕಾಲದಲ್ಲಿ ಚರಿತ್ರೆ ಬರೆದುದು ಒಂದು ವಿಸ್ಮಯವಾದರೆ, ಅದಕ್ಕಿಂತ ವಿಸ್ಮಯದ ಕೆಲಸ ಮುದ್ರಿಸಿಕೊಟ್ಟ ಶ್ರೇಯಸ್ಸು ಶ್ರೀ ಎಸ್. ಟಿ. ಹಿರೇಮಠರಿಗೆ ಸಲ್ಲುವದು. ಶ್ರೀ ಅಜ್ಜನ ಕೃಪೆ ಅವರಿಗೆ ಸದಾ ಇರಲೆಂದು ಹಾರೈಸುತ್ತೇವೆ.

ಪಿತಾಽಸಿ ಲೋಕಸ್ಯ ಚರಾಚರಸ್ಯ ತ್ವಮಸ್ಯ ಪೂಜ್ಯಶ್ಚ ಗುರುರ್ಗರಿಯಾನ್ ।
ನ ತ್ವತ್ಸಮೋಽ ಅಸ್ತ್ಯಭ್ಯಧಿಃ ಕುತೋಽ ನ್ಯೋ ಲೋಕತ್ರಯೇಽ ಪ್ಯಪತ್ರಿಮ
ಪ್ರಭಾವ ॥ (ಗೀತೆ)

ಈ ವಾಕ್ಯದಂತೆ ಪೂರ್ಣನಾದ ಶ್ರೀ ಅಜ್ಜನ ಚರಿತ್ರೆ ಓದಿ, ಸ್ವಆತ್ಮ ವಿಚಾರ ಸಿದ್ಧನಾದ ಹಠಯೋಗಿಯ ಜೀವನ ಹಾಗೂ ಹೇಳಿದ ಮಾತಿನ – ತತ್ತ್ವ ವಿಚಾರ ಮಂಥನ ಮಾಡಿ ಅರ್ಥಮಾಡಿಕೊಂಡರೆ ಅದೇ ನಮ್ಮ ಶ್ರಮಕ್ಕೆ ಸಾರ್ಥಕ ಬೆಲೆ ಎಂದು ಭಾವಿಸುವೆವು. ಓದುಗರೆಲ್ಲರಿಗೂ ಧನ್ಯವಾದ ಅರ್ಪಿಸುತ್ತೇವೆ.

■■

*

# ಆತ್ಮನಿವೇದನೆ

ಈಗ್ಗೆ ಐದು–ಆರು ವರ್ಷಗಳ ಹಿಂದಿನ ಮಾತು, ಕೋಡಿಕೊಪ್ಪದ ಶ್ರೀ ಹುಚ್ಚೀರಪ್ಪಜ್ಜನವರ ಯಾತ್ರಾ ಸಮಯ. ಅದಕ್ಕಾಗಿಯೇ ನಾನು ಗದಗಿನಿಂದ ಬೂದಿಹಾಳಿಗೆ ಬಂದೆ. ಆಗ ನನಗೆ ತಿಳಿಯತು ನನ್ನ ಪ್ರವಚನ ಶ್ರೀ ಹುಚ್ಚೀರಪ್ಪಜ್ಜನವರ ಜಾತ್ರೆಯಲ್ಲಿದೆ ಎಂದು. ನಾನು ಜಾತ್ರೆಗೂ ಹೋದೆ. ಆದರೆ ಅಲ್ಲಿ ಪ್ರವಚನ ಸೇವೆ ಸಲ್ಲಿಸದೆ ಹಾಗೇ ಊರಿಗೆ ಬಂದೆ.

ಮಾರನೆ ದಿನ ಮಧ್ಯಾನ್ಹ ಗದುಗಿಗೆ ಹೋಗುವವನಿದ್ದೆ. ಬಟ್ಟೆಗಳು ಸೆಲ್ಫಿನ ಮೇಲೆ ಇದ್ದವು. ಸ್ಟೂಲಿನ ಮೇಲೆ ನಿಂತು ಅವುಗಳನ್ನು ತೆಗೆದುಕೊಳ್ಳುವಾಗ ಸ್ಟೂಲು ಉರುಳಿ ಬಿದ್ದು ಬಲಗಡೆಗೆ ಛಪ್ಪಿ ಎಲುಬೇ ಮುರಿದು ಹೋಗಿ ಏಳಲಿಕ್ಕೆ ಬಾರದಂತಾಯಿತು.

ಈ ಅನರ್ಥಕ್ಕೆ ನಾನು ಶ್ರೀ ಹುಚ್ಚೀರಪ್ಪಜ್ಜನವರ ಮಠದಲ್ಲಿ ಸೇವೆ ಸಲ್ಲಿಸಲು ನಿರಾಕರಿಸಿದ್ದೇ ಕಾರಣ ಎಂದು ಭಾವಿಸಿದ ನನ್ನ ಪತ್ನಿ ಶ್ರೀಮತಿ ಸುಮಿತ್ರಮ್ಮ ಮಠಕ್ಕೆ ಹೋಗಿ ''ಅಜ್ಜ ! ನಮ್ಮ ಶಾಸ್ತ್ರಿಗಳು ನೆಟ್ಟಗಾದರೆ ಅವರು ಇರುವವರೆಗೂ ನಿನ್ನ ಜಾತ್ರೆಯಲ್ಲಿ ಉಚಿತವಾಗಿ ಪ್ರವಚನ ಸೇವೆ ಸಲ್ಲಿಸುವರು'' ಎಂದು ಬೇಡಿಕೊಂಡು ಬಂದಳಂತೆ. ಶ್ರೀಮತಿಯ ಪ್ರಾರ್ಥನೆ ವ್ಯರ್ಥವಾಗಲಿಲ್ಲ. ನಾನು ಕ್ರಮೇಣ ಗುಣ ಹೊಂದಿ ಅಂದಿನಿಂದ ಇಂದಿನವರೆಗೂ ಅಜ್ಜನ ಜಾತ್ರೆಯಲ್ಲಿ ಪ್ರವಚನದ ಸೇವೆ ಸಲ್ಲಿಸುತ್ತ ಬಂದಿದ್ದೇನೆ.

ನನ್ನ ಪ್ರವಚನ ಕೇಳಿದ ಟ್ರಸ್ಟ ಕಮಿಟಿಯವರು ಮತ್ತು ಅಲ್ಲಿಯೇ ಇದ್ದ ಅನೇಕ ಹಿರಿಯರು ಇವೇ ಆಧ್ಯಾತ್ಮ ವಿಚಾರಗಳ ಹಿನ್ನೆಲೆಯಲ್ಲಿ ಅಜ್ಜನ ಗ್ರಂಥ ರಚನೆಯಾಗಲಿ ಎಂದು ಅಭಿಪ್ರಾಯಪಟ್ಟು, ಅದನ್ನು ರಚಿಸಲು ನನಗೆ ವಹಿಸಿಕೊಟ್ಟರು. ಏಕೆಂದರೆ, ಈ ಹಿಂದೆ ಪಂ. ಬಸವಶಾಸ್ತ್ರಿಗಳು ಕೋಡಿಕೊಪ್ಪಮಠ ಅವರು ಬರೆದ ಗ್ರಂಥ ಬಹುಕಾಲದಿಂದಲೂ ಉಪಲಬ್ಧವಿರಲಿಲ್ಲ. ಅದರಲ್ಲಿ ಅಜ್ಜನವರ ಕುರಿತ ಅನೇಕ ಸಂಗತಿಗಳು ಹೊಸದಾಗಿ ಬಂದಿದ್ದವು. ಇವು ಪ್ರಕಟವಾಗದೆ ಹೋದರೆ ಅವೆಲ್ಲ ಕಾಲಗರ್ಭದಲ್ಲಿ ಹೂತುಹೋಗಬಹುದೆಂದು ನೂತನ ಗ್ರಂಥ ಪ್ರಕಟನೆಗೆ ಟ್ರಸ್ಟ ಕಮೀಟಿಯವರು ಕೈ ಹಾಕಿದರು.

ನಾನು ಗ್ರಂಥ ರಚನೆಗೆ ಒಪ್ಪಿಕೊಂಡು ಒಂಬತ್ತು ತಿಂಗಳ ಕಳೆದರೂ ಆ ಕಾರ್ಯಕ್ಕೆ ಉದ್ಯುಕ್ತನಾಗಿರಲಿಲ್ಲ. ೧೯೯೩ ನೇ ಸಾಲಿನ ಕಾರ್ತಿಕ ಮಾಸದಲ್ಲಿ ನನಗೆ ಅಜ್ಜನ ಟ್ರಸ್ಟ ಕಮಿಟಿ ಅಧ್ಯಕ್ಷರ ಭೇಟಿಯಾಯಿತು. ಆಗ ಅಧ್ಯಕ್ಷರು ನನಗೆ ''ಈ

ಸಲದ ಜಾತ್ರೆಗೆ ನೀವು ಬರೆದ ನಿಮ್ಮ ಪುಸ್ತಕದ ಬಿಡುಗಡೆ'' ಎಂದು ಹೇಳಿದರು. ನಾನು ಅವಾಕ್ಕಾದೆ. ಏಕೆಂದರೆ, ಜಾತ್ರೆ ಇನ್ನು ಮೂರು ತಿಂಗಳು, ಅದರಲ್ಲಿ ಮುದ್ರಣಕ್ಕೆ ಒಂದು ತಿಂಗಳು ಕಳೆದರೆ ನನಗೆ ಉಳಿದ ಸಮಯ ಕೇವಲ ಎರಡೇ ತಿಂಗಳು. ಅಜ್ಜನ ಮೇಲೆ ಭಾರಹಾಕಿ ಧೈರ್ಯ ತಂದುಕೊಂಡು, ''ಜಾತ್ರೆಗೆ ಒಂದು ತಿಂಗಳು ಮೊದಲು ಗ್ರಂಥದ ಕೈ ಬರಹದ ಪ್ರತಿ ನಿಮಗೆ ಮುಟ್ಟಿಸುವೆ'' ಎಂದು ಹೇಳಿ ಊರಿಗೆ ಬಂದೆ.

ಗ್ರಂಥ ರಚನೆಯ ವಿಷಯ ಕೇಳಿದ ನನ್ನ ಶ್ರೀಮತಿ ಸುಮಿತ್ರಮ್ಮ ''ಇದೋ ನೋಡಿ! ಈ ಹಿಂದೆ ಅಜ್ಜನ ಮಠದಲ್ಲಿ ಪ್ರವಚನ ಮಾಡದೇ ಇದ್ದುದಕ್ಕೆ ಒಂದು ಕಾಲು ಮುರಿಯಿತು. ಈಗ ಅಜ್ಜನ ಗ್ರಂಥ ರಚನೆ ಸಕಾಲದಲ್ಲಿ ಮಾಡದೇ ಇದ್ದರೆ, ಮತ್ತೊಂದು ಕಾಲು ಮುರಿಯುವದು.'' ಎಂದು ಎಚ್ಚರಿಕೆ ನೀಡಿದಳು.

ನಾನು ಊರು ಬಿಟ್ಟು ಎಲ್ಲಿಯೂ ಹೋಗಲಿಲ್ಲ. ನಾನಾಯಿತು, ನನ್ನ ಗ್ರಂಥ ರಚನೆಯಾಯಿತು. ಅಂತೂ ಅಜ್ಜನ ಜಾತ್ರೆ ಒಂದು ತಿಂಗಳು ಇರುವಾಗ ಅಜ್ಜನ ಟ್ರಸ್ಟ ಕಮಿಟಿ ಅಧ್ಯಕ್ಷರಿಗೆ ಮಾತು ಕೊಟ್ಟಂತೆ ಅಜ್ಜನ ದಯೆಯಿಂದ ಗ್ರಂಥವನ್ನು ಪೂರ್ತಿಗೊಳಿಸಿ, ಅದನ್ನು ಅಧ್ಯಕ್ಷರ ಕೈಗೆ ಕೊಟ್ಟೆ. ಹೀಗೆ ಗ್ರಂಥ ರಚನೆ ನಿರ್ದಿಷ್ಟ ವೇಳೆಗೆ ಮುಗಿಯುವಂತೆ ಪ್ರೇರೇಪಿಸಿದ ಶ್ರೇಯಸ್ಸು ನನ್ನ ಶ್ರೀಮತಿಗೆ ಸಲ್ಲುತ್ತದೆ.

ಗ್ರಂಥ ರಚನೆಗೆ ಆಧಾರ ಈ ಹಿಂದೆ ಬರೆದ ಪಂ. ಬಸವರಾಜ ಶಾಸ್ತ್ರಿಗಳು ರಚಿಸಿದ ಗ್ರಂಥ ಮತ್ತು ಟ್ರಸ್ಟ ಕಮಿಟಿಯವರು ನೂತನವಾಗಿ ಸಂಗ್ರಹಿಸಿದ ವಿಷಯಗಳು ಕೂಡಿಕೊಂಡೇ ನನ್ನ ಗ್ರಂಥ ರಚನೆಯಾಗಿವೆ. ಇದರಲ್ಲಿ ಲೋಪ–ದೋಷಗಳಿದ್ದರೆ ಅವು ನನ್ನವು. ಒಳ್ಳೆಯ ಅಂಶಗಳಿದ್ದರೆ ಹಠಯೋಗಿ ಶ್ರೀಹುಚ್ಚೀರಪ್ಪಜ್ಜನವರದು ಎಂದು ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಳ್ಳುವೆ. ಪ್ರಾಜ್ಞರು ಹಂಸಕ್ಷೀರ ನ್ಯಾಯದಂತೆ ಸ್ವೀಕರಿಸಬೇಕಾಗಿ ವಿಜ್ಞಾಪನೆ.

ಅಜ್ಜನ ಮಠದಲ್ಲಿ ಕೂಡಿದ ಟ್ರಸ್ಟ ಕಮಿಟಿ ಹಾಗೂ ಅಭಿಮಾನಿ ಭಕ್ತರು ಸಭೆಯಲ್ಲಿ ಅವರೆಲ್ಲರ ಅಪೇಕ್ಷೆಯ ಮೇರೆಗೆ ನನ್ನ ಕೈ ಬರಹದ ಪ್ರತಿಯನ್ನು ಓದಿ ಹೇಳಿದೆ. ಅದನ್ನು ಕೇಳಿದ ಯಾವತ್ತೂ ಸಭಿಕರು ತುಂಬಾ ಸಂತೋಷ ಪಟ್ಟು ಮುದ್ರಣಕ್ಕೆ ಸರ್ವಾನುಮತದ ಒಪ್ಪಿಗೆ ಕೊಟ್ಟರು. ಕೋಡಿಕೊಪ್ಪದ ಹಠಯೋಗಿ ಶ್ರೀ ಹುಚ್ಚೀರಪ್ಪಜ್ಜನವರಲ್ಲಿ ಬಾಳೇಹೊನ್ನೂರ ಮಠದ ಜಗದ್ಗುರುಗಳವರಿಗೆ ತುಂಬಾ ಗೌರವ ಅಭಿಮಾನಗಳಿವೆ. ಅಂತೆಯೇ ಅವರು ಕೃಪೆಯಿಟ್ಟು ಸಂದೇಶ ಕಳಿಸಿದ್ದಕ್ಕೆ ನನ್ನ ಅನಂತಾನಂತ ಕೃತಜ್ಞತೆಗಳು.

ಅದರಂತೆ ಗದುಗಿನ ತೋಂಟದಾರ್ಯ ಮಠದ ಜಗದ್ಗುರು ಮಹಾ ಸನ್ನಿಧಿಯವರೂ ಅಭಿಮಾನವಹಿಸಿ ಸಂದೇಶ ಕಳಿಸಿದ್ದಕ್ಕೆ ಅವರಿಗೂ ನನ್ನ ಕೃತಜ್ಞತಾ ಪೂರ್ಣ ವಂದನೆಗಳು.

ಕುಂದಗೋಳ ಪಂಚಗೃಹ ಹೀರೆಮಠದ ಪಟ್ಟಾಧ್ಯಕ್ಷರಾದ ಪ್ರವಚನಾಚಾರ್ಯ ಶ್ರೀ ಸಿದ್ಧಲಿಂಗ ಶಿವಾಚಾರ್ಯರು ನನ್ನ ಗ್ರಂಥವನ್ನು ಪರಿಶೀಲಿಸಿ, ಮುನ್ನುಡಿ ಬರೆದು ಕಳಿಸಿದ್ದಕ್ಕೆ ಅವರಿಗೂ ನನ್ನ ಕೃತಜ್ಞತಾಪೂರ್ಣ ವಂದನೆಗಳು. ಅದರಂತೆ ಸಾಹಿತ್ಯ ಆಚಾರ್ಯರೆನಿಸಿದ ಶ್ರೀ ಜ.ಚ.ನಿ. ಯವರು ತಮ್ಮ ಸಂದೇಶ ಕಳಿಸಿ ಪ್ರೋತ್ಸಾಹಿಸಿದಕ್ಕೆ ಅವರಿಗೂ ನನ್ನ ಕೃಜ್ಞತಾಪೂರ್ಣ ವಂದನೆಗಳು. ಅಜ್ಜನ ಟ್ರಸ್ಟ ಕಮಿಟಿಯವರು ಗ್ರಂಥ ರಚಿಸುವ ಸೇವೆ ನನಗೆ ಒದಗಿಸಿ ಕೊಟ್ಟದ್ದಕ್ಕಾಗಿ ಅವರಿಗೂ ನನ್ನ ವಂದನೆಗಳು.

ನಾನು ಬರೆದ ಗ್ರಂಥವನ್ನು ಮುದ್ರಣಕ್ಕೆ ಅಣಿಯಾಗುವ ಹಾಗೆ ಶುದ್ಧ ಪ್ರತಿ ಮಾಡಿಕೊಟ್ಟ ನಮ್ಮೂರವರೇ ಆದ ಶ್ರೀ ಜಿ. ಎಫ್. ಚಿಗರಿ ನಿವೃತ್ತ ಶಿಕ್ಷಕರು ಬೂದಿಹಾಳ ಅವರಿಗೂ ನನ್ನ ಅನಂತ ವಂದನೆಗಳು.

ಸಮಯಕ್ಕೆ ಸರಿಯಾಗಿ ಮುದ್ರಣ ಮಾಡಿಕೊಟ್ಟ ದೇವದಾಸ ಮುದ್ರಣಾಲಯದ ಮಾಲೀಕರಿಗೆ ನನ್ನ ಕೃತಜ್ಞತಾಪೂರ್ಣ ವಂದನೆಗಳು.

■■

*

# ಮುನ್ನುಡಿ

ಪ್ರವಚನಾಚಾರ್ಯ ಷ.ಬ್ರ. ಸಿದ್ಧಲಿಂಗ ಶಿವಾಚಾರ್ಯರು ಪಂಚಗ್ರಹ ಹಿರೇಮಠ ಕುಂದಗೋಳ ಅವರು ದಯಪಾಲಿಸಿದ್ದು.

ಕೋಡಿಕೊಪ್ಪದ ಶ್ರೀ ಹುಚ್ಚೀರಪ್ಪಜ್ಜನವರ ಮಠದ ಟ್ರಸ್ಟ ಕಮಿಟಿ ಅಧ್ಯಕ್ಷರು ನಮ್ಮಲ್ಲಿಗೆ ಬಂದು "ಹಠಯೋಗಿ ಶ್ರೀ ಹುಚ್ಚೀರಪ್ಪಜ್ಜನವರ ದಿವ್ಯ ಜೀವನ" ಎಂಬ ಕೈ ಬರಹದ ಗ್ರಂಥವನ್ನು ತೋರಿಸಿದರು.

ಗ್ರಂಥವನ್ನು ಆಮೂಲಾಗ್ರವಾಗಿ ಪರಿಶೀಲಿಸಲಾಯಿತು. ಗ್ರಂಥವು ನಿಜವಾಗಿಯೂ ಪ್ರಕಟನಾರ್ಹವಾದ ಶ್ರೇಷ್ಠ ಕೃತಿಯಾಗಿದೆ.

ನಾವು ಇನ್ನೂ ಹರಕುಣಿ ಪಟ್ಟದದೇವರು ಆಗಿರುವಾಗ ನರೇಗಲ್ಲಿನ ದಿವಂಗತ ಶ್ರೀ ಬಂದನಗೌಡರು ಸಂಕನಗೌಡ್ರ ಅವರ ಆಮಂತ್ರಣದ ಮೇರೆಗೆ ಪ್ರತಿವರ್ಷದ ಯಾತ್ರಾ ಸಮಯದಲ್ಲಿ ನಾವು ಪ್ರವಚನ ಸೇವೆ ಸಲ್ಲಿಸುತ್ತಾ ಬಂದೆವು. ಹೀಗಾಗಿ ನಮಗೆ ಹಠಯೋಗಿ ಶ್ರೀ ಹುಚ್ಚೀರಪ್ಪಜ್ಜನವರಲ್ಲಿ ತುಂಬಾ ಭಕ್ತಿ ವಿಶ್ವಾಸಗಳು ಉಂಟಾದವು.

ಶ್ರೀ ಹುಚ್ಚೀರಪ್ಪಜ್ಜನವರು ನಮ್ಮಂತೆ ದೇಹಧರಿಸಿ ಬಂದರೂ ಮಾನವ ಲೋಕದ 'ಮಹಾದೇವ'ರಾಗಿ ಹೋದರು. ಹೀಗೆ ಮಾನವನು ಮಹಾದೇವನಾಗುವದೇ ಜೀವನದ ಪರಮ ಗಂತವ್ಯ.

ಕಿಡಿ ಅಗ್ನಿಯ ಅಂಶವೇ ಆಗಿದೆ. ಅದಕ್ಕೆ ಒಂದು ಅವಕಾಶ ಸಿಕ್ಕಲ್ಲಿ ಅದೇ ಮಹಾ ಜ್ವಾಲೆಯಾಗಿ ಪರಿಣಮಿಸುವದು. ಜೀವಿಗಳಿಗೆ ಈ ಅವಕಾಶವೇ ಮಾನವ ಜನ್ಮ.

ಜೀವಾತ್ಮನಿಗೆ ದೇಹೇಂದ್ರಿಯಗಳ ಸಂಗಾತದಿಂದ ದೇಹಾತ್ಮಭಾವನೆ ಉಂಟಾಗಿ ಅವನು ಆತ್ಮವಿಸ್ಮೃತಿ ಹೊಂದಿ ಇಂದ್ರಿಯ ಜನ್ಯ ಸುಖಕ್ಕೆ ಮರುಳಾಗಿರುವವನು. ಆದರೆ ಅದು ಕ್ಷಣಿಕ ಅಂತೇ "ನ ಜಾತು ಕಾಮಃ ಕಾಮಾ ನಾಂ ಉಪಭೋಗೇನ ಶಾಮ್ಯತಿ" ಎಂಬ ಉಕ್ತಿ ಬಹು ಕಾಲದಿಂದಲೂ ಬಳಕೆಯಲ್ಲಿ ಬಂದಿದೆ. ಆದಕ್ಕಾಗಿಯೇ ಉಪನಿಷತ್ತು "ಯೋವೈ ಭೂಮಾ ತತ್ಸುಖಂ ನಾಲ್ಪೇ ಸುಖ ಮಸ್ತಿ" ಎಂದು ಘೋಷಿಸುತ್ತದೆ.

'ತತ್ಸುಖಂ' ಎಂದರೆ 'ಸ್ವಸ್ವರೂಪ' ಜ್ಞಾನದಿಂದಾದ ನಿಜಾನಂದ, ಅದಕ್ಕಾಗಿಯೇ ಶ್ರೀ ನಿಜಗುಣರು "ಆರುನಾನೆಂದು ವಿಚಾರಿಸು ವಿಷಯ ಸಂಸಾರವಿದನು ಕನಸೆಂದರಿ" ಎಂದು ಹೇಳಿರುವರು. ಹೀಗೆ ವಿಚಾರಿಸುವ ಶಕ್ತಿ ಮಾನವನಿಗಿದೆಯೇ ವಿನಃ ಇನ್ನುಳಿದ ಪ್ರಾಣಿಮಾತ್ರಗಳಿಗೆ ಇಲ್ಲ, ಆದಕ್ಕಾಗಿ ಮೋಕ್ಷ

ಮಾನವನಿಗಾಗಿಯೇ ವಿಧಿಸಲ್ಪಟ್ಟಿದೆ. ವರಮೋಕ್ಷವಡೆಯದ ನರಜನ್ಮವೇಕೆ ? ಎಂಬ ಶ್ರೀ ನಿಜಗುಣರ ಉಕ್ತಿ ಇದನ್ನೇ ಸಮರ್ಥಿಸುತ್ತದೆ.

ಕೋಡಿಕೊಪ್ಪದ ಹಠಯೋಗಿ ಹುಚ್ಚೀರಪ್ಪಜ್ಜನವರು ತಮಗೆ ವೈರಾಗ್ಯ ಪ್ರಾಪ್ತಿಯಾದ ನಂತರ ತಮ್ಮ ಜೀವನದ ಉದ್ದಕ್ಕೂ ಸ್ವಸ್ವರೂಪದಲ್ಲಿದ್ದವರು. ಇದೇ ಅವಸ್ಥಾತ್ರಯಗಳನ್ನು ದಾಟಿದ ತುರೀಯಾ ಸ್ಥಿತಿ. ಪ್ರಪಂಚದ ದೃಷ್ಟಿಯಲ್ಲಿ ಇಂಥವರು ಹುಚ್ಚರು. ಇಂಥ ಮಹಾನುಭಾವರ ದೃಷ್ಟಿಯಲ್ಲಿ ಪ್ರಪಂಚವೇ ಹುಚ್ಚರ ರಾಜ್ಯ.

ಹೀಗೆ ಮಾನವನಾಗಿ ಹುಟ್ಟಿ ಮಹಾದೇವನಾಗಿ ಹೋದ ಶ್ರೀ ಹುಚ್ಚೀರಪ್ಪಜ್ಜನ ಚರಿತ್ರೆಯನ್ನು ಶಾಸ್ತ್ರಾಧಾರಗಳಿಂದ ರಚಿಸಿದ ಪಂ. ವೇ. ಸಿದ್ಧಲಿಂಗಶಾಸ್ತ್ರಿಗಳು ಹೊಸಮಠ ಅವರು ತುಂಬಾ ಅಭಿನಂದನೀಯರು, ಅದರಂತೆ ಇಂಥ ಒಂದು ಒಳ್ಳೆಯ ಗ್ರಂಥವನ್ನು ಪ್ರಕಾಶಗೊಳಿಸಿದ ವಿಶ್ವಸ್ಥಕ ಕಮೀಟಿಯವರೂ ಅತ್ಯಂತ ಅಭಿನಂದನೀಯರು.

ಇದು ಕೇವಲ ಚರಿತ್ರೆ ಮಾತ್ರವಲ್ಲ; ಆಧ್ಯಾತ್ಮ ಸಾಧನೆಯ ತತ್ತ್ವಗ್ರಂಥ.

ಮುಮುಕ್ಷುಗಳು ಈ ಗ್ರಂಥದ ಪ್ರಯೋಜನ ಪಡೆದು ಕೃತಾರ್ಥರಾಗಲಿ ಎಂದು ಈ ಮೂಲಕ ಹಾರೈಸಲಾಗಿದೆ.

ಇತ್ಯಾಶಿಕ್ಷ

■■

॥ ಶ್ರೀ ಜಗದ್ಗುರು ರೇಣುಕಾಚಾರ್ಯ ಪ್ರಸೀದತು ॥

ಶ್ರೀ ಮದ್ವೀರಶೈವ ಮಹಾಮತ ಸಂಸ್ಥಾಪನಾಚಾರ್ಯ
ಶ್ರೀ ಜಗದ್ಗುರು ರೇಣುಕ ಮಹಾಚಾರ್ಯ ಭವ್ಯ
ಪರಂಪರಾಗತ ಶ್ರೀಮದ್ ರಂಭಾಪುರೀ ಸಿಂಹಾಸನಾ
ಧೀಶ್ವರ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ
ರೇಣುಕ ವೀರ ಸೋಮೇಶ್ವರ

## ಶುಭಾಶೀರ್ವಾದ ಸಂದೇಶ

ಕನ್ನಡನಾಡಿನ ಉದ್ದಗಲಕ್ಕೂ ಅನೇಕ ಮಹಿಮಾನ್ವಿತರು ಅವತರಿಸಿ, ಜನಮನದ ಕೊಳೆಯನ್ನು ಕಳೆದು ಜ್ಞಾನಾಮೃತವನ್ನು ನೀಡಿರುವರು. ಅಂತಹ ಅಗ್ರ ಪಂಕ್ತಿಯಲ್ಲಿ ಆಗಿಹೋದ ಲಿಂ. ಶ್ರೀ ಹಠಯೋಗಿ ಹುಚ್ಚೀರಪ್ಪಜ್ಜನವರು ಒಬ್ಬರು. ಅವರು ಹೃದಯತುಂಬಿ ನುಡಿದ ಮಾತು ಎಂದೆಂದಿಗೂ ಸತ್ಯ ನಿತ್ಯ. ಅವರು ತಮ್ಮ ಸಂದೇಶವನ್ನು ನಾಡಿಗೆ ನೇರ ಮತ್ತು ಸರಳತೆಯಲ್ಲಿ ಹೇಳಿರುವರು. ಯಾವುದು ಹೌದು ಅದು ಅಲ್ಲ, ಯಾವುದು ಅಲ್ಲ ಅದು ಹೌದು. ಇದರಲ್ಲಿ ಇಹಪರದ ಚಿಂತನ ಗೂಢಾರ್ಥ ಹುದುಗಿ ಚಿಂತನೆಗೆ ಅವಕಾಶ ಕಲ್ಪಿಸಿಕೊಡುವುದು. ಅವರು ಅಗಲಿ ಹಲವಾರು ವರ್ಷಗಳಾದರೂ ಅವರ ನೆನಹು ಅವರ ಆದರ್ಶವಾದಂತಹ ದಾರಿ ಬದುಕುವ ಮನುಷ್ಯರ ಬಾಳಿಗೆ ನಂದಾದೀಪ.

ಇಂತಹ ಹಠಯೋಗಿ ನೆಲೆಸಿದ ಸ್ಥಾನಕ್ಕೆ ನಮ್ಮ ಪರಮ ಗುರುಗಳಾದ ಶ್ರೀ ಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ ಲಿಂಗೈಕ್ಯ ಜಗದ್ಗುರು ವೀರಗಂಗಾಧರ ಶಿವಾಚಾರ್ಯ ಭಗವತ್ಪಾದರು ತಮಗಾದ ಸ್ವಪ್ನ ಪ್ರಭಾವದಿಂದ ದಯಮಾಡಿಸಿ, ಮಾಸ ಪರ್ಯಂತರ ಕರ್ತೃ ಗದ್ದುಗೆ ಹಾಗೂ ಲಿಂಗಪೂಜಾ ತಪೋನುಷ್ಠಾನವನ್ನು ನೆರವೇರಿಸಿ, ವೈರಾಗ್ಯ ಜೀವನದ ದೀಕ್ಷಾಬದ್ಧರಾಗಿ ಭಕ್ತ ಸಂಕುಲಕ್ಕೆ ದರ್ಶನಾಶೀರ್ವಾದ ದಯಪಾಲಿಸಿರುವುದು ಇತಿಹಾಸದ ಪುಟಗಳಲ್ಲಿ ಮರೆಯಲಾರದ ಪ್ರಸಂಗ.

ನಡೆ–ನುಡಿ ಒಂದಾಗಿ ಬಾಳಿದ ಸಿದ್ಧಿ ಪುರುಷ ಹಠಯೋಗಿ ಶ್ರೀ ಅಜ್ಜನವರ ಸಮಗ್ರ ಜೀವನ ಚಿಂತನವನ್ನು ಬೂದಿಹಾಳದ ಶ್ರೀ ವೆ॥ ಸಿದ್ಧಲಿಂಗಶಾಸ್ತ್ರಿಗಳು ಹೊಸಮಠ. ಇವರು ಪುಸ್ತಕ ರೂಪದಲ್ಲಿ ಬರೆದಿರುವುದು ಹೆಮ್ಮೆಯ ಸಂಗತಿ.

ಇದೊಂದು ಆದರ್ಶ ವ್ಯಕ್ತಿಯ ಜೀವನಚರಿತ್ರೆ ಎಂದು ಭಾವನೆ. ಈ ಕೃತಿಗೆ ಸಂತೋಷದಿಂದ ಸಂದೇಶವನ್ನು ಕಳಿಸಲಾಗಿದೆ. ಈ ಕೃತಿಪುಷ್ಪದ ಸಾರಾಮೃತವನ್ನು ಓದುಗರು ಅರ್ಥೈಸಿಕೊಂಡು ಬಾಳಿದರೆ ಬದುಕು ನಂದನವನವಾಗುತ್ತದೆ. ಈ ಕೃತಿಯ ಪರಾಗ ಪುಷ್ಪ ಜನಮನದ ಮಲೀನತೆಯನ್ನು ದೂರಮಾಡಿ ಶಾಂತಿ ಸಂತೃಪ್ತಿಯನ್ನು ನೀಡಲಿ.

ಪರಮ ದಯಾಳು ಪಾರ್ವತೀ ಪರಮೇಶ್ವರರು ಹಾಗೂ ಶ್ರೀ ಜಗದ್ಗುರು ರೇಣುಕಾಚಾರ್ಯರು ಕೃತಿಯ ಕರ್ತರಿಗೂ, ಪ್ರಕಾಶಕರಿಗೂ ಮತ್ತು ಓದುಗ ಧರ್ಮಾಭಿಮಾನಿಗಳೆಲ್ಲರಿಗೂ ಉತ್ತರ ಮಂಗಲ ಪರಂಪರೆಯನ್ನು ಅನುಗ್ರಹಿಸಲಿ.

ಮಲಯಾಚಲ ತಪೋಭೂಮಿ<br>
ಶ್ರೀಮದ್ ರಂಭಾಪುರಿ ಪೀಠ

ಇತ್ಯನಂತಶಿವಾಶಿಷಃ<br>
೨೯ – ೧ – ೧೯೯೪

ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ತೋಂಟದಾರ್ಯ
ಡಾ। ಸಿದ್ಧಲಿಂಗ ಮಹಾಸ್ವಾಮಿಗಳವರು ಸಂಸ್ಥಾನಮಠ
ಡಂಬಳ ಮತ್ತು ಗದಗ

## ಅವರ ಸಂದೇಶ

ಕೋಡಿಕೊಪ್ಪದ ಹಠಯೋಗಿ ಶ್ರೀ ಹುಚ್ಚೀರಪ್ಪಜ್ಜನವರ ದಿವ್ಯ ಜೀವನ ಎಂಬ ಗ್ರಂಥವನ್ನು ನಮ್ಮ ಸಂಸ್ಥಾನಮಠ ಶಾಸ್ತ್ರಿಗಳಾದ ಪಂ. ಸಿದ್ಧಲಿಂಗ ಶಾಸ್ತ್ರಿಗಳು ಹೊಸಮಠ, ಗದಗ ಮತ್ತು ಬೂದಿಹಾಳ ಅವರು ಬರೆದದ್ದು ನಮಗೆ ತುಂಬಾ ಸಂತೋಷದ ವಿಷಯವಾಗಿದೆ. ಶ್ರೀ ಶಾಸ್ತ್ರಿಗಳು ಈಗಾಗಲೇ ಎಳಂದೂರು ಬಸವಲಿಂಗಸ್ವಾಮಿಗಳು, ಶ್ರೀ ಸಿದ್ಧೇಶ್ವರ ಜಗದ್ಗುರುಗಳು ಎಂಬ ಎರಡು ಗ್ರಂಥಗಳನ್ನು ನಮ್ಮ ಮಠಕ್ಕೆ ಬರೆದು ಕೊಟ್ಟಿದ್ದು ಅವು ತುಂಬಾ ಜನಪ್ರಿಯವಾಗಿವೆ. ಮಾನ್ಯ ಲೇಖಕರು ಕೋಡಿಕೊಪ್ಪಕ್ಕೆ ನೆರೆ ಗ್ರಾಮವಾದ ಬೂದಿಹಾಳದವರು. ಅವರಿಗೆ ಶ್ರೀ ಹುಚ್ಚೀರಪ್ಪಜ್ಜನವರ ವಿಷಯದಲ್ಲಿ ಬಹಳಷ್ಟು ತಿಳಿದಿರಲು ಸಾಕು. ಮೇಲಾಗಿ ಹುಚ್ಚೀರಪ್ಪಜ್ಜನವರು ಬಹಳ ಹಿಂದಿನವರೇನಲ್ಲ. ಅವರನ್ನು ಬಲ್ಲ ವಯೋವೃದ್ಧ ಹಿರಿಯರು ಈಗಲೂ ಇರಬಹುದು.

ವೀರಶೈವ ಸಮಾಜೋದ್ಧಾರಕ್ಕೆ ತಮ್ಮನ್ನೇ ಅರ್ಪಣಮಾಡಿಕೊಂಡು ಕಾರಣಿಕ ಪುರುಷರೆನಿಸಿದ ಲಿಂಗೈಕ್ಯ ಹಾನಗಲ್ ಕುಮಾರ ಮಹಾಸ್ವಾಮಿಗಳಂಥವರೇ ಶ್ರೀಹುಚ್ಚೀರಪ್ಪಜ್ಜನವರನ್ನು ಕಾಣಲಿಕ್ಕೆ ಹೋದರೆಂದ ಮೇಲೆ ಶ್ರೀ ಹುಚ್ಚೀರಪ್ಪಜ್ಜನವರ ಮಹೋನ್ನತ ವ್ಯಕ್ತಿತ್ವಕ್ಕೆ ಬೇರೆ ಪ್ರಮಾಣವೇ ಬೇಕಾಗಿಲ್ಲ.

ನಮ್ಮ ಗದುಗಿನ ಮಠದ ಸಾಪ್ತಾಹಿಕ ಶಿವಾನುಭವ ಕಾರ್ಯಕ್ರಮದಲ್ಲಿ ದ್ವೈತ ಸಿದ್ಧಾಂತ ಪಂಡಿತರೊಬ್ಬರು ತಮ್ಮ ಭಾಷಣದಲ್ಲಿ ''ಸ್ವಸ್ವರೂಪದಲ್ಲಿ ಒಂದು ಕ್ಷಣವೂ ಕೂಡ ನಿಲ್ಲಲಿಕ್ಕೆ ಆಗುವದಿಲ್ಲ'' ಎಂದು ಹೇಳಿದ್ದು ಈಗಲೂ ನಮ್ಮ ನೆನಪಿನಲ್ಲಿದೆ. ಆದರೆ, ಶ್ರೀ ಹುಚ್ಚೀರಪ್ಪಜ್ಜನವರು ತಮ್ಮ ಜ್ಞಾನೋತ್ತರ ಜೀವನದಲ್ಲಿ ಅರ್ಧ ಶತಮಾನಕಾಲ ಸ್ವಸ್ವರೂಪದಲ್ಲಿಯೇ ಇದ್ದು ತುರೀಯರೆನಿಸಿದ್ದು ಸಾಮಾನ್ಯ ಸಂಗತಿಯಲ್ಲ. ಈ ತುರೀಯವೇ ಶಿವಸ್ಥಿತಿ. ಅಂತೆಯೇ ಅವರ ಗ್ರಂಥವಲ್ಲಿ ಶೃಂಗೇರಿ ಜಗದ್ಗುರುಗಳು ಶ್ರೀ ಹುಚ್ಚೀರಪ್ಪಜ್ಜನವರನ್ನು ಶಿವನೆಂದೇ ಭಾವಿಸಿದ್ದು ಉಕ್ತವಾಗಿದೆ.

ಶ್ರೀ ಹುಚ್ಚೀರಪ್ಪಜ್ಜನವರು ತಾವಷ್ಟೇ ಮುಕ್ತರಾಗಿ ಹೋಗಲಿಲ್ಲ; ತಮ್ಮ ಜೀವನದ ಕುಲುಮೆಯಲ್ಲಿ ಪಡೆದ–

''ಯಾವುದು ಹೌದು ; ಅದು ಅಲ್ಲ
ಯಾವುದು ಅಲ್ಲ; ಅದು ಹೌದು''

ಎಂಬ ಆತ್ಮಾನುಭಾವದ ಅಮೃತವಾಣಿಯನ್ನು ಪ್ರಪಂಚಕ್ಕೆ ಬಿಟ್ಟು ಹೋಗಿರುವರು. ಐಹಿಕ ಭೋಗಲಾಲಸೆಯಿಂದ ಆಸ್ಮವಿಸ್ಮೃತಿ ಹೊಂದಿದ ಇಂದಿನ ಜಗತ್ತಿಗೆ ಅಜ್ಜನವರ ಮೇಲ್ಕಂಡ ಅನುಭವವಾಣಿ ಎಚ್ಚರಿಕೆಯ ಘಂಟೆಯಾಗಿದೆ.

ಇಂಥ ಒಬ್ಬ ವಿಭೂತಿ ಪುರುಷರ ಆದರ್ಶಚರಿತ್ರೆಯನ್ನು ಪ್ರಕಾಶಗೊಳಿಸಿದ ಅಜ್ಜನ ಮಠದ ಟ್ರಸ್ಟ ಕಮೀಟಿಯವರಿಗೂ, ಗ್ರಂಥ ರಚಿಸಿದ ಮಾನ್ಯ ಲೇಖಕರಿಗೂ ಪರಮಾತ್ಮನು ಮಂಗಲವನ್ನುಂಟು ಮಾಡಲಿ ಎಂದು ಹಾರೈಸುವದರ ಜೊತೆಗೆ ಆಧ್ಯಾತ್ಮ ಜೀವಿಗಳು ಪ್ರಸ್ತುತ ಗ್ರಂಥವನ್ನು ಆದರದಿಂದ ಬರಮಾಡಿಕೊಳ್ಳಲಿ ಎಂದು ಈ ಮೂಲಕ ಹಾರೈಸಲಾಗಿದೆ.

### ಇತಿ ಶುಭಂ

'ಕವಿಗುರು – ಗುರುಕವಿ' 'ವಚನಬ್ರಹ್ಮ' 'ಸಾಹಿತ್ಯಸಾರ್ವಭೌಮ' 'ಸಂಶೋಧನ ಸುಧಾಕರ' ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಜಗದ್ಗುರು ಡಾ. ಚನ್ನಬಸವರಾಜ ಶಿವಾಚಾರ್ಯ ಮಹಾಸನ್ನಿಧಿಯು ಅನುಗ್ರಹಿಸಿದ–

### ಶುಭಾಶೀರ್ವಾದ ಸಂದೇಶ

ಈ ನಾಡಿನ ಪುಣ್ಯವೋ ಏನೋ ಅನೇಕ ತಪಸ್ವಿಗಳು, ಯೋಗಿಗಳು, ಶರಣರು, ಸಿದ್ಧರು ಮೊದಲಾದ ಮಹಿಮಾಪುರುಷರು ಉದಯಿಸಿ, ಬದುಕಿ, ಬಾಳಿ ತಮ್ಮ ಜೀವಿತ ಕಾಲದಲ್ಲಿ ಅನೇಕ ಅದ್ಭುತ – ಆಗಾಧವಾದ ಲೀಲೆ – ಪಾವಾಡಗಳನ್ನು ಜನರಿಗೆ ತೋರಿಸಿ, ತಮ್ಮ ತಪಶ್ಯಕ್ತಿಯ ಅಮೃತ ಧಾರೆಯನ್ನು ಈ ಮಾನವ ಕುಲಕ್ಕೆ ಸ್ಥಾಯಿಯಾಗಿ ಉಣಬಡಿಸಿ, ಪುನೀತರನ್ನಾಗಿ ಮಾಡಿದ್ದು ನಮ್ಮೆಲ್ಲರ ಜನ್ಮಜನ್ಮಾಂತರ ಮಾನವ ಜನ್ಮದ ಪುಣ್ಯದ ಫಲವೆಂದರೆ ಅತಿಶಯೋಕ್ತಿಯಾಗದು.

ಇಂತಹ ವಿರಳರಲ್ಲಿ ಅತೀ ವಿರಳರು ಹಾಗೂ ಅಗ್ರಪಂಕ್ತಿಯವರು ಆದ ನಮ್ಮ ಬ್ರಹ್ಮೀಭೂತರಾದ ಕೋಡಿಕೊಪ್ಪದ ಹಠಯೋಗಿ ಶ್ರೀ ಹುಚ್ಚೀರಪ್ಪಜ್ಜನವರು ರತ್ನಸದೃಶರು. ಲೌಕಿಕ, ಪಾರಮಾರ್ಥಿಕ ಲೋಕದ ಸಾರಭೂತವಾದ ಅನುಭಾವದ ಉತ್ತುಂಗ ಸ್ಥಿತಿಗೆ ಸಹಜ ಮಾರ್ಗದಲ್ಲಿ ತಲುಪಿ, ತ್ರಿಕಾಲಸತ್ಯವೂ, ವೇದಾಗಮ ಉಪನಿಷತ್–ದರ್ಶನವಾಕ್ಯಗಳನ್ನು ಮೀರಿ ನುಡಿದ ಅವರ ದಿವ್ಯ ವಾಣಿಯೇ ಸಾಕ್ಷಿ, ಇದೊಂದು ನುಡಿಮುತ್ತು,

''ಯಾವುದು ಹೌದು; ಅದು ಅಲ್ಲ ! ಯಾವುದು ಅಲ್ಲ; ಅದು ಹೌದು !''

ಇದು ಓದಲು ಬಲು ಸುಲಭ, ಶಬ್ದಗಳೂ ಅಷ್ಟೇ ಸರಳ ಸುಲಲಿತ, ಆದರೆ ವಿಚಾರ ಮಾಡಹತ್ತಿದರೆ, ಗೂಢದಲ್ಲಿ ನಿಗೂಢ, ಮೊನಚಾದ, ಮಾರ್ಮಿಕವಾದ ಈ

ವಾಕ್ಯ ಮಹಾ ಮಂತ್ರವಿದ್ದಂತೆ. ಇದರಲ್ಲಿ ಅದುವೋ? ಅದರಲ್ಲಿ ಇದುವೋ? ಎಂಬಂತಿದೆ ಇದರ ಗುಟ್ಟು. ಇದು ಬಿಡಿಸಲಾಗದ ಒಗಟು, ಇಳಿಸಲಾಗದ ಸತ್ಯ, ಕಾಲಾತೀತ ವಾಕ್ಯವಾಗಿದೆ.

ಇಂತಹ ಆಗಾಧ ಶಕ್ತಿ–ಆತ್ಮಶಕ್ತಿ ಪ್ರದತ್ತವಾದ 'ಹಠಯೋಗಿ'ಯ ಜೀವನ ಚರಿತ್ರೆಯನ್ನು ಪುಸ್ತಕ ರೂಪದಲ್ಲಿ ಬರೆದುದು ನಿಜವಾಗಿ ಹೆಮ್ಮೆಯ, ಅಭಿಮಾನದ ಕೆಲಸ. ಇದೊಂದು ಆತ್ಮೋನ್ನತಿಯ ಪರಮಾದರ್ಶ ವ್ಯಕ್ತಿಯ ಜೀವನ ಚರಿತ್ರೆಯನ್ನು ಬರೆದು ಶ್ರೀ ಸಿದ್ಧಲಿಂಗ ಶಾಸ್ತ್ರಿಗಳು ಹೊಸಮಠ, ಸಾ|| ಬೂದಿಹಾಳ ಇವರು ಶ್ರೀ ಹಠಯೋಗಿಯ ಕೃಪಾ ಪಾತ್ರರಾಗಿದ್ದಷ್ಟೇ ಅಲ್ಲ, ಭಾವೀ ಜನಾಂಗಕ್ಕೆ ಚಿರಸ್ಥಾಯಿಯಾಗಿ ಕೊಡಮಾಡಿದ ಸಾಹಿತ್ಯ ಸೇವೆಯ ಕೃತಿಯಾಗಿದೆ. 'ಗಂಧದ ವಾಸನೆ ಕೊರಡಿನ ತುಂಬಾ' ಎನ್ನುವಂತೆ, ಜಗದ್ಗುರು ಚಿಂತಕರು ತೆಯಿದು ಸ್ವಾಧಿಸಬೇಕು, ಪರಿಮಳವನ್ನು ಅಷ್ಟೇ !

ಈ ಕೃತಿಗೆ ಪ್ರೇರಕರಾಗಿ ಪ್ರಕಾಶನಗೈದ ಟ್ರಸ್ಟ ಕಮಿಟಿಯ ಎಲ್ಲಾ ಸದಸ್ಯರೂ ಪುಣ್ಯಭಾಗಿಗಳು. ಇದೊಂದು ಘನಕಾರ್ಯ ಸ್ತುತ್ಯಾರ್ಹವಾದುದಾಗಿದೆ. ಸರ್ವರಿಗೂ ಉತ್ತರೋತ್ತರ ಮಂಗಲ ನೀಡಲೆಂದು ಅನುಗ್ರಹಿಸುವ–

ನರೇಂದ್ರ-

■■

*

# ಪರಿವಿಡಿ

ಗದ್ದುಗೆ ಮಹಿಮೆಗಳು

*

## ಶ್ರೀ ಹುಚ್ಚೀರೇಶ್ವರ ಪಂಚರತ್ನಂ

ಶಿವಪುರೇ ಶಿವ ಶಾಸನತೋಮುದಾ ।
ನರಶರೀರಂ ವಾಪ್ಯಚರಿತಂ ಸದಾ ॥
ಭಜಮನೋ ಭುವಿ ಕಲ್ಪತರೂಪಂ ।
ಶಿವಪುರೀ ಹಠಯೋಗಿ ಹುಚ್ಚವೀರಣಂ
ಜಗತ ಜನ್ಮ ಜರಾಮಯ ವರ್ಜಿತಮ್ ।
ಪಥ ಅತೀತ್ಯನೃಣಾಂ ಶಿವಸನ್ನಿಧಿಮ್ ॥
ಗತಮಹೋಯತಿರಾಜ ತತಿ ಸೇವಿತಂ ।
ಭಜಮನೋ ಹಠಯೋಗಿ ಹುಚ್ಚವೀರಣ್ಣಂ
ಪಿತೃವನೇ ಕೃತ ಶಾಂತಿನಿಕೇತನೇ ।
ಪಶುಪತೀವ ಸ್ಥಿತಂಯತಿ ಪುಂಗವಂ ॥
ಸತತ ಭೂತ ಪಿಶಾಚ ಗಣಸೇವಿತಂ ।
ಭಜಮನೋ ಹಠಯೋಗಿ ಹುಚ್ಚವೀರಣಂ
ಪ್ರಥಿತಮಗ್ನಿ ಸಮೋಜ್ವಲ ತೈ ಜಸಮ್ ।
ಜಿತಮನೋಜ ಶರೌಘ ಮಹೌಜಸಮ್ ॥
ಸಪದಿ ದರ್ಶಿತ ಭೈರವ ಸಾಹಸಮ್ ।
ಭಜವನೋ ಹಠಯೋಗಿ ಹುಚ್ಚವೀರಣಂ
ಭುವಿಸತಾಂ ಭಿಷಜಂ ಭವರೋಗಿಣಾಂ ।
ಯಮಿಜನೋಚಿತನೀತ ಪದೇಸ್ಥಿತಂ ॥
ನತನೃಣಾಂಗತಿದಂ ಸತತಾಂಮುದಾ ।
ಭಜಮನೋ ಹಠಯೋಗಿ ಹುಚ್ಚವೀರಣಂ
ಉಷಸಿ ನಿತ್ಯಮಿದಂ ಮಣಿಪಂಚಕಂ
ಪಠತಿ ಚೇದ್ಯದಿಯೋಽಪಿಸು ಚೇತನಾ ॥
ನಿಜಮನೋರಥ ಮೇತ್ಯಮೃತಾಂಚಸಃ ।
ಶಿವಪುರೀ ಬಸವೇನವಿನಿರ್ಮಿತಮ್

ಲಿಂ ॥ ಪಂ ॥ ಬಸವರಾಜ ಶಾಸ್ತ್ರಿಗಳು
ಕೋಡೀಕೊಪ್ಪಮಠ, ಕೋಡೀಕೊಪ್ಪ.

*

# ಉಪೋದ್ಘಾತ

**ಯಾವದು ಹೌದು ಅದು ಅಲ್ಲ ; ಯಾವುದು ಅಲ್ಲ ಅದು ಹೌದು :**

ಸೂತ್ರರೂಪವಾಗಿರುವ ಶ್ರೀ ಹುಚ್ಚೀರಪ್ಪಜ್ಜನವರ ಈ ಆತ್ಮಾನುಭವದ ದಿವ್ಯವಾಣಿ ವೇದೋಪನಿಷತ್ತುಗಳ ಸಾರವೇ ಆಗಿದೆ.

ಯಾವದು ಇರುವದರಿಂದ ಜಡವಾದ ಈ ದೇಹ ಚೈತನ್ಯಯುಕ್ತ ವಾಗಿರುವುದೋ, ಆ ಚೇತನವೇ ನಾನು. ಇದು ಅಜ್ಜನವರು ಹೇಳಿದಂತೆ ಹೌದು.

ಯಾವುದರ ವಿಯೋಗದಿಂದ ಈ ದೇಹ ಪುನಃ ಜಡವಾಗಿ ಹೆಣವಾಗಿ ಬೀಳುವದೋ ಅಂಥ ದೇಹ ನಾನಲ್ಲ ಇದು ಅಜ್ಜನವರು ಹೇಳಿದಂತೆ ಅಲ್ಲ.

ಈ ಹೌದು ಮತ್ತು ಅಲ್ಲ ಇವೆರಡು ಶಬ್ದಗಳಲ್ಲಿ ಮೇಲ್ಕಂಡ ವಿವೇಚನೆಯು ಗರ್ಭೀಕೃತವಾಗಿದೆ. ಈ ದೇಹವೇ ತಾನು ಎಂಬ ಭ್ರಾಂತಿಯಿಂದ, ಇಂದಿನ ಜಗತ್ತು ದೇಹ ಸುಖದ ಬೆನ್ನು ಹತ್ತಿದೆ. ಇಂದು ಜಗತ್ತಿನಲ್ಲಿ ಕಾಣುವ ಸಕಲ ಅನರ್ಥಗಳಿಗೆ ಈ ದೇಹಾತ್ಮ ಭಾವನೆಯೇ ಕಾರಣವಾಗಿದೆ. ಹೀಗೆ, ಕಾಯದ ಕತ್ತಲೆಯಲ್ಲಿ ಬಿದ್ದು ತೊಳಲುತ್ತಿರುವ ಇಂದಿನ ಜಗತ್ತಿಗೆ ಅಜ್ಜನವರ ಮೇಲ್ಕಂಡ ಅನುಭವೋಕ್ತಿ ಚಿಜ್ಯೋತಿಯಂತೆ ಬೆಳಕು ನೀಡುತ್ತದೆ. ಮಹಾತ್ಮರಾದವರು ತಾವಷ್ಟೇ ಆತ್ಮಜ್ಞಾನ ಮಾಡಿಕೊಂಡು, ಅದರ ಆನಂದವನ್ನೂ ಅನುಭವಿಸಿ ಹೋಗುವದಿಲ್ಲ. ತಮ್ಮ ಆತ್ಮಾನುಭವದ ದಿವ್ಯ ಸಂದೇಶವನ್ನೂ ಅವರು ನಮಗಾಗಿ ಬಿಟ್ಟು ಹೋಗಿರುವರು.

ಅದಕ್ಕಾಗಿಯೇ ಶ್ರೀ ನಿಜಗುಣರು ಮನುಜ ಜನನದ ಲಾಭವಾವುದು? ಆನಾರೆಂಬುದು ತಿಳಿಯುವದು ಎಂದು ಹೇಳಿರುವರು. ಆದರೆ, ಆರುನಾನೆಂದು ತಿಳಿಯುವದು ಅಷ್ಟು ಸುಲಭವಲ್ಲ. ಅದಕ್ಕಾಗಿಯೇ ಶ್ರೀ ಬಸವಣ್ಣನವರು, ‘ಏನಾದರೂ ಸಾಧಿಸಬಹುದು ತಾನಾರೆಂಬುದು ಸಾಧಿಸಲಾಗದು ನೋಡಾ’ ಎಂದಿದ್ದಾರೆ. ಆದರೆ, ಹಠಯೋಗಿ ಶ್ರೀ ಹುಚ್ಚೀರಪ್ಪಜ್ಜನವರು ಇದನ್ನು ತಮ್ಮ ಜೀವಿತ ಕಾಲದಲ್ಲಿ ಜೀವನದುದ್ದಕ್ಕೂ ತೋರಿಸಿ ಹೋಗಿದ್ದಾರೆ.

ಶ್ರೀ ಹುಚ್ಚೀರಪ್ಪಜ್ಜನವರು ವಿಹಂಗಮ ಮಾರ್ಗಿಗಳೆಂದು ಭಾವಿಸಬಹುದು. ಇದು ಎಲ್ಲರಿಗೂ ಸಾಧ್ಯವಿಲ್ಲ. ನಾವು ಆ ಮಹಾತ್ಮರ ದಿವ್ಯವಾಣಿಯ ಶ್ರವಣ ಮಾಡಿ, ಅದನ್ನು ಮನನ ಮಾಡಿಕೊಂಡು, ಅದರ ನಿಧಿಧ್ಯಾಸನ ಮಾಡುವ ಪ್ರಯತ್ನ ಮಾಡಿದರೆ, ಆಗ ಮಾತ್ರ ನಾವು ಮುಕ್ತರಾಗುವೆವು.

ಶ್ರೀ ಹುಚ್ಚೀರಪ್ಪಜ್ಜನವರ, ಬದುಕು ಬಹು ವಿಚಿತ್ರ. ಇವರ ಚರಿತ್ರೆ ಅವರ ಜೀವಿತ ಹಾಗೂ ವಾಕ್ಯ ಸಂದೇಶಕ್ಕೆ ಭಾಷ್ಯ ಬರೆಯುವ ಪ್ರಯತ್ನವಾಗಿದೆ ಅಷ್ಟೇ !

ನೆಲದ ಗುಣ :

ಧಾರವಾಡ ಜಿಲ್ಲೆಯ ರೋಣ ತಾಲೂಕಿನ ಒಂದು ಚಿಕ್ಕ ಗ್ರಾಮ ಕೋಡಿಕೊಪ್ಪ. ಇದರ ಮೊದಲಿನ ಹೆಸರು ಶಿವಪುರವೆಂದು. ಈ ಗ್ರಾಮದ ಮಧ್ಯದಲ್ಲಿ ಅದರ ಪ್ರಾಚೀನತೆಯ ಕುರುಹಾಗಿ ಶ್ರೀಜಕ್ಕಣಾಚಾರ್ಯರ ಕಟ್ಟಡವೆಂದು ಹೇಳಲಾಗುತ್ತಿರುವ ಪುರಾತನಪ್ರಸಿದ್ಧ ಶ್ರೀ ಮಲ್ಲಿಕಾರ್ಜುನ ದೇವಸ್ಥಾನವಿದೆ.

''ಈ ಗ್ರಾಮದ ಪೂರ್ವಕ್ಕೆ ಹಿರೇಕೆರೆ ಎಂಬ ವಿಶಾಲವಾದ ಕೆರೆ ಇದೆ. ಇದರ ಪೂರ್ವಕ್ಕೆ ಒಂದು ಫರ್ಲಾಂಗ ಅಂತರದಲ್ಲಿ ಕೋಡಿಕೊಪ್ಪಕ್ಕೆ ನರೇಗಲ್ಲ ಎಂಬ ಗ್ರಾಮವಿದೆ. ದೊಡ್ಡ ಊರು. ಇವೆರಡರ ಮಧ್ಯದಲ್ಲಿರುವ ಈ ಕೆರೆಯ ಕೋಡಿಯ ಹತ್ತಿರುವ ಕಾರಣ, ಈ ಗ್ರಾಮಕ್ಕೆ ಕೋಡಿಕೊಪ್ಪ ಎಂದು ಬಂದಿದೆ ಎನ್ನಲಡ್ಡಿಯಿಲ್ಲ''.

ಕೋಡಿಕೊಪ್ಪ ಒಕ್ಕಲುತನದ ಗ್ರಾಮ. ಆದರೆ, ಇಲ್ಲಿ ಹಲವಾರು ಭಾವಿಗಳಿಂದ ನೀರಾವರಿ ಮಾಡುವ ತೋಟ ಪಟ್ಟಿಗಳು ಇವೆ. ಇದೇ ವ್ಯವಸಾಯವೇ ಮುಖ್ಯವಾಯಿತು.

ಈ ಗ್ರಾಮದ ಉತ್ತರಕ್ಕೆ ನರೇಗಲ್ಲಿನಿಂದ ಅಬ್ಬಿಗೇರಿಗೆ ಹೋಗುವ ಸರಕಾರಿ ರಸ್ತೆಯಿದೆ. ಅದರ ಎರಡೂ ಮಗ್ಗಲುಗಳಲ್ಲಿ ಉನ್ನತವಾಗಿ ಬೆಳೆದ ಅನೇಕ ತರಹದ ಮರ–ಗಿಡಗಳು ಪಥಿಕರಿಗೆ ನೆರಳು ನೀಡಲು ಸಾಲಾಗಿ ನಿಂತಿವೆ. ಅವುಗಳಾಚೆಗೆ, ಅನೇಕ ತೋಟಪಟ್ಟಿಗಳು, ಎಲೆ, ಬಳ್ಳಿ, ಬಾಳೆ ಫಸಲುಗಳಿಂದ ಕೂಡಿಕೊಂಡು ನಯನ ಮನೋಹರವಾಗಿ ಕಂಗೊಳಿಸುತ್ತಿವೆ. ತೋಟಕ್ಕೆ ನೀರು ಹಾಯಿಸುವಾಗ ಕಪ್ಪಲಿಯ ಧ್ವನಿ ನಿಸರ್ಗ ದೇವತೆಯ ಮಂಜುಳ ಗಾನದಂತೆ, ಕೇಳಿಬರುವದು.

ತೋಟದ ಬದುವಿನಲ್ಲಿ ಹಚ್ಚಿದ ತೆಂಗು, ಹುಣಿಸೆ, ಮಾವು, ಪೇರಲ ಮುಂತಾದ ಗಿಡಗಳು ಹುಲುಸಾಗಿ ಬೆಳೆದು ಗಾಳಿಗೆ ತೂಗಾಡುತ್ತ ಸಂಚಾರಿಗಳಿಗೆ ವಿಶ್ರಾಂತಿ ಪಡೆದುಕೊಂಡು ಹೋಗಲೆಂದು ಕೈ ಬೀಸಿ ಕರೆಯುತ್ತಿವೆಯೋ ಏನೋ ಎಂದು ಭಾಸವಾಗುತ್ತದೆ.

ಎಲ್ಲಿ ಸೃಷ್ಟಿ ಸೌಂದರ್ಯವಿದೆಯೋ, ಅಲ್ಲಿ ಕಲೆಯೂ ನೆಲೆಸಿರುವದು ಸಹಜ. ಇದಕ್ಕೆ ನಿದರ್ಶನವಾಗಿ ಈ ಊರಿನ ಕುಂಬಾರ ಮನೆತನದಲ್ಲಿ ಗದಿಗೆಪ್ಪನವರೆಂಬ ಅಭಿಜಾತ ಆಶುಕವಿಗಳಿದ್ದರು. ಅವರಿಗೆ ಒಳ್ಳೇ ಕಂಠ ತ್ರಾಣವಿದ್ದುದರಿಂದ, ಅವರು ಸಹಜವಾಗಿ ಸ್ವರಚಿತ ಪದ್ಯಗಳನ್ನು ತಾವೇ ಸುಶ್ರಾವ್ಯವಾಗಿ ಹಾಡುತ್ತಿದ್ದರು.

ನೆರೆಯ ಗ್ರಾಮದವರು ಇವರನ್ನು ಬಯಲಾಟಗಳಲ್ಲಿ ಹಾಡಲು ಮೇಲಿಂದ ಮೇಲೆ ಕರೆದುಕೊಂಡು ಹೋಗುತ್ತಿದ್ದರು. ಆದರೆ, ನಿರಪೇಕ್ಷ ಭಾವನೆಯ ಶ್ರೀ ಗದಿಗೆಪ್ಪನವರು ಅಲ್ಲಿಗೆ ಹೋದಾಗ, ಬರಿಗೈಯಿಂದಲೇ ಬರುವದು ಅಸಂಭವವಾಗಿರಲಿಲ್ಲ. ಕಲೆಯಿಂದ ಜನ ಸಂತೋಷಪಟ್ಟರೆ, ಅದೇ ಪ್ರತಿಫಲವೆಂದು. ''ಸಂತೋಷಂ ಜನಯೇತ್ ಪ್ರಾಜ್ಞಃ ತ ದೇವೇಶ್ವರ ಪೂಜನಂ'' ಎಂಬ ಉಕ್ತಿಯು ಇವರಿಗೆ ಅಕ್ಷರಶಃ ಅನ್ವಯಿಸುತ್ತಿತ್ತು.

ಶ್ರೀ ಗದಿಗೆಪ್ಪನವರು ಮನೆಯಲ್ಲಿ ಮಡದಿ ಮಕ್ಕಳನ್ನು ಹೊಂದಿದ್ದರು. ಕೆಲವು ಸಲ ಅವರು ಬರಿಗೈಯಿಂದ ಬಂದುದನ್ನು ಕಂಡು, ಅವರ ಹೆಂಡತಿ ಸಿಡಿಮಿಡಿಗೊಳ್ಳುತ್ತಿದ್ದಳು. ಇದರಿಂದ, ಅವರು ತಮ್ಮ ಚಿತ್ತಕ್ಷೋಭೆಯನ್ನು ಹೊಂದುತ್ತಿರಲಿಲ್ಲ. ಸಾಕ್ರೆಟಿಸ್ ಗ್ರೀಸ್ ದೇಶದ ಮಹಾನ್‌ತತ್ವಜ್ಞಾನಿ. ಅವನಿಗೂ ವಿಷಮ ಗುಣದ ಹೆಂಡತಿ ಇದ್ದಳು. ಪ್ರತಿಕೂಲ ದಾಂಪತ್ಯದ ಬಗ್ಗೆ ಅವರನ್ನು ಅವರ ಸ್ನೇಹಿತರು ವಿಚಾರಿಸಿದಾಗ ಅವರು ''ಪುರುಷನಿಗೆ ಅನುಕೂಲ ಮಡದಿ ದೊರಕಿದರೆ ಅವನೊಬ್ಬ ಸಭ್ಯ ಗ್ರಹಸ್ಥನಾಗಬಹುದು. ಆದರೆ ಪ್ರತಿಕೂಲ ಮಡದಿ ಇದ್ದಲ್ಲಿ ನಿಶ್ಚಯವಾಗಿಯೂ ಅವನೊಬ್ಬ ತತ್ವಜ್ಞಾನಿಯಾಗುವನು'' ಎಂದು ಹೇಳುತ್ತಿದ್ದರಂತೆ. ಈ ಮಾತು ಶ್ರೀ ಗದಿಗೆಪ್ಪನವರಿಗೆ ಅಕ್ಷರಶಃ ಅನ್ವಯವಾಗುತ್ತಿತ್ತು. ಅಂತೆಯೇ ಅವರು ಕಲೆಯ ಮೂಲಕ ತತ್ತ್ವಚಿಂತಕರಾಗಿ ಜೀವಿಸುತ್ತಿದ್ದರು.

''ಕಲಾತಪಸ್ವಿಗಳಂತೆ ಕೋಡಿಕೊಪ್ಪದ ನೆಲದ ಪ್ರಭಾವವೋ ಏನೋ ಆಧ್ಯಾತ್ಮ ಜ್ಞಾನ ಪಾರಮಾರ್ಥಿಕ ತಪೋನಿಷ್ಠರು ಉದಯಿಸಿದ ಭೂಮಿಕೂಡಾ ಆಗಿದೆ. ಇದು ಭೂಮಿಯ ಪುಣ್ಯ ಹಾಗೂ ನೈಜಶಕ್ತಿ ಪ್ರಭಾವವಾಗಿರುವದೊಂದು ವಿಶೇಷವೆನ್ನಬೇಕು. ''ಪಾದಾಣು ರೇಣುವೋಯತ್ರತಂತಿ ಶಿವಯೋಗಿ ನಾಂ ತದೇವ ಸದನಂ ಪುಣ್ಯಂ, ಪಾವನಂ, ಗೃಹಮೇದಿನಾಂ'' ಎಂದು ಸಿದ್ಧಾಂತ ಶಿಖಾಮಣಿ ಹೇಳುತ್ತದೆ. ಅಂತೆಯೇ ಇಲ್ಲಿಗೆ ಇಲಕಲ್ಲ ಶ್ರೀ ವಿಜಯ ಮಹಾಂತ ಸ್ವಾಮಿಗಳು, ಏಳುನೂರು ವರುಷ ಬಾಳಿದ ಬೂದೀಶ್ವರಸ್ವಾಮಿಗಳು, ಮಹಾವೈರಾಗ್ಯ ಮೂರ್ತಿಗಳಾದ ಶ್ರೀ ಘನ ಮಠದಾರ್ಯರು, ಮಹಾಮಹಿಮ ವಯೋವೃದ್ಧ ಶ್ರೀ ಅನ್ನದಾನ ಮಹಾಸ್ವಾಮಿಗಳೆಲ್ಲರೂ, ಪೂಜೆ, ಅನುಷ್ಠಾನ, ತಪಸ್ಸು, ಮಾಡಿದ್ದಾರೆಂದು ತಿಳಿಯುತ್ತದೆ. ಹಾಲಕೇರಿಯ ಶ್ರೀ ಅನ್ನದಾನ ಮಹಾಸ್ವಾಮಿಗಳು, ಈ ಭೂಮಿಯ ಪ್ರಭಾವಗುರುತಿಸಿಯೇ ಏನೋ ಇಲ್ಲೊಂದು ವಿಶಾಲ ಮಠಸ್ಥಾಪನೆ ಮಾಡಿ ತನ್ಮೂಲಕ ಪೂಜಾ–ಪುರಾಣ–ಪ್ರವಚನ–ನೆರವೇರಿಸುತ್ತಿದ್ದರು. ಅನೇಕ ಸಲ ಭವ್ಯವಾದ ಗಣಾರಾಧನೆಯನ್ನೂ ನಡೆಸುತ್ತಿದ್ದರು. ಆಗ ಗಣಂಗಳ ಅವಶ್ಯ ಬೀಳುತ್ತಿತ್ತು, ಆಗ ಗಣಂಗಳು ಇದೇ ಕೋಡಿಕೊಪ್ಪದಿಂದ ಬರುತ್ತಿದ್ದರು. ಏಕೆಂದರೆ ಈ ಗ್ರಾಮದಲ್ಲಿ ಗಣಂಗಳ ಸಂಖ್ಯೆಯೇ ವಿಶೇಷ.

ಜನನ :

''ನಿಸರ್ಗದ ನಿಯಮವೋ ಏನೋ ಸಾಮಾನ್ಯವಾಗಿ ಗಣಂಗಳು ಬಡವರಾಗಿ ರುವದೇ ಹೆಚ್ಚು''. ''ಬಡತನಕ್ಕೂ ಜಂಗಮರಿಗೂ ಎಲ್ಲಿಲ್ಲದ ನಂಟು''. 'ಬಡಜಂಗಮ' ಎನ್ನುವದು ಇದರಿಂದಲೇ ವಾಡಿಕೆಯ ಮಾತಾಗಿಬಿಟ್ಟಿದೆ. ಇಂತಹ ಅತೀ ಕಡು ಬಡಮನೆತನದ ಮಾಲಿಕನಾದ ಚನ್ನಯ್ಯ ಒಬ್ಬ ವಿನಯ ಸಂಪನ್ನ ಮಾಹೇಶ್ವರ. ಈತನಿಗೆ ಅಷ್ಟೇ ವಿನೀತ ಹಾಗೂ ಸಹಜ ಸುಶೀಲೆಯಾದ

ಶ್ರೀಕಲ್ಯಾಣಮ್ಮ ಎಂಬ ಧರ್ಮ ಪತ್ನಿ ಇದ್ದಳು. ಇವರು ಭೂವ್ಯವಸಾಯ ಹಾಗೂ ಕೂಲಿ ಮಾಡಿ ಬದುಕು ಸಾಗಿಸುತ್ತಿದ್ದರು. ಇಂತಹ ದಂಪತಿಗಳ ಉದರದಲ್ಲಿ ದೈವೀ ಸಂಕಲ್ಪದಂತೆ, ಚರಿತ್ರೆಯ ನಾಯಕನಾದ ಶ್ರೀ ವೀರಯ್ಯನೆಂಬುವನು ಜನ್ಮತಾಳಿದನು. ಸಾಮಾನ್ಯವಾಗಿ ಮಹಾತ್ಮರು, ಶರಣರು, ಯೋಗಿಗಳ ಚರಿತ್ರೆ ನೋಡಿದಲ್ಲಿ ''ಕಮಲ ಕೆಸರಿನಲ್ಲಿ ಹುಟ್ಟುವಂತೆ ಜನಿಸುವದನ್ನು ನಾವು ನೋಡುತ್ತೇವೆ.'' ಅದೇ ರೀತಿ – ಅನೇಕ ಉದಾಹರಣೆಗಳು ಸಿಗುತ್ತವೆ. ಹಾಗೆಯೇ ಇವರ ಜನನ ಕೂಡಾ ಆಗಿರುವದನ್ನು ಕಾಣಬಹುದು. ಹೀಗೆ ಸಾಮಾನ್ಯರಲ್ಲಿ ಸಾಮಾನ್ಯವಾಗಿ ಅವರು ಕ್ರಿ.ಶ. ೧೮೫೫. ಜನಿಸಿದರು. ಅವರಿಗೆ ಮನೆಗುರುಗಳಿಂದ ವೀರಯ್ಯ ಎಂದು ನಾಮಕರಣ ಮಾಡಿದರು.

ಬಾಲ್ಯ :

ಮಗು ದಿನೇ ದಿನೇ ಮುದ್ದಿನ ಖಣಿಯಾಗಿ ಬೆಳೆದು ಐದು ವರ್ಷದ್ದಾಯಿತು. ಮಗನನ್ನು ತಂದೆ ಚೆನ್ನಯ್ಯ ಅಕ್ಷರಾಭ್ಯಾಸಕ್ಕಾಗಿ ಅದೇ ಊರಿನ ಗಾವಠಿ ಶಾಲೆಗೆ ಕಳಿಸಿದರು. ಹತ್ತು ವರ್ಷದವರಿಗೆ ವಯಸ್ಸಾದರೂ ಕೇವಲ ಅಕ್ಷರ ಜ್ಞಾನ ಪ್ರಾಪ್ತವಾಯಿತೇ ವಿನಃ ಹೆಚ್ಚಿನ ವಿದ್ಯಾರ್ಜನೆ ಆಗಲಿಲ್ಲ. ಇದನ್ನು ಕಂಡು ತಂದೆ ತಾಯಿಗಳು ಚಿಂತಿತರಾದರು. ಬಾಲಕನು ಯಾರೊಡನೆಯೂ ಬೆರೆತು–ಆಟ–ನೋಟ–ಮುಂತಾದ ಬಾಲಬುದ್ಧಿಯ ಪಕ್ರಿಯೆಗಳನ್ನೂ ಮಾಡದಿದ್ದುದನ್ನು ಕಂಡು ವಿಸ್ಮಿತರಾಗುತ್ತಿದ್ದರು. ಈ ರೀತಿಯ ಅವನ ಗುಣಚರ್ಯೆ ಕಂಡು ತಂದೆ ಚೆನ್ನಯ್ಯ ಮಗನನ್ನು ಶಾಲೆಗೆ ಕಳುಹಿಸುವದು ಪ್ರಯೋಜನವಾಗದೆಂದು ಭಾವಿಸಿ, ಸಣ್ಣ ಪುಟ್ಟ ಭೂಕಾರ್ಯಗಳಿಗೆ ಕಳುಹಿಸಹತ್ತಿದನು.

ಶಾಲೆಯಲ್ಲಿ ಏನೊಂದು ವಿದ್ಯಾಪ್ರಗತಿ ತೋರದ ಬಾಲಕ ವೀರಯ್ಯನು ಭೂ–ಕೆಲಸಗಳಲ್ಲಿ ಆಸಕ್ತಿ ತೋರಿಸುತ್ತಿರುವದು ಬಹಳ ಆನಂದ ಪಡುವ ಸಂಗತಿ ಯಾಯಿತೆಂದು ಭಾವಿಸಿದರು. ಯಜಮಾನರು ಹೇಳಿದ ಪ್ರತಿಯೊಂದು ಕೆಲಸಗಳನ್ನೂ ಚೊಕ್ಕಟವಾಗಿ ಮಾಡಿ ಪ್ರಶಂಸೆಗೆ ಪಾತ್ರನಾಗುತ್ತಿದ್ದ. ಹೀಗಾಗಿ ಎಲ್ಲರೂ ಈತನನ್ನು ಕೆಲಸಕ್ಕೆ ಬರಲು ದುಂಬಾಲು ಬಿದ್ದು ಕರೆಯುತ್ತಿದ್ದರು.

ಯೌವ್ವನ :

ಕಾಲಚಕ್ರ ಉರುಳಿತು. ಬಾಲಕ ವೀರಯ್ಯ ಯೌವ್ವನಾವಸ್ಥೆಗೆ ಪಾದಾರ್ಪಣೆ ಮಾಡಿದನು. ಬಾಳೆಯ ಗಿಡದಂತೆ ಅವನು ಭರದಿಂದ ಬೆಳೆದನು. ಅವನ ಅಂಗಸೌಷ್ಟವ ನೋಡಲು ಒಳ್ಳೆಯ ಆಕರ್ಷಕವಾಗಿದ್ದಿತು.

ಅವನೇನು ಪ್ರತ್ಯೇಕ ಅಂಗಸಾಧನೆ ಮಾಡಿದವನಲ್ಲ. ತನ್ನ ಉದ್ಯೋಗ ದಲ್ಲಿಯೇ ನಿಷ್ಠೆ ಹಾಗೂ ಪರಿಶ್ರಮವೇ ಅವನಿಗೆ ವ್ಯಾಯಾಮಗಳ ಫಲ

ಕೊಡುತ್ತಿದ್ದವು. ಇದರಿಂದ, ಅವನ ಅಂಗಾಂಗಗಳಿಗೆ ಪಟುತ್ವ ಬಂದು ಅವನು ತಿದ್ದಿ ಮಾಡಿದ ಗೊಂಬೆಯಂತಾದನು.

ಯೌವ್ವನ ಜೀವನದಲ್ಲಿ ಒಂದು ವಸಂತಕಾಲ ವಿಷಯಾಸಕ್ತಿ ಉಂಟಾಗುವದು ಇಂದ್ರಿಯಗಳ ನೈಸರ್ಗಿಕ ಸ್ವಭಾವ. ಅದಕ್ಕಾಗಿ, ಶ್ರೀ ನಿಜಗುಣರು ''ದುರಿತ ಕುಲ ಬಂಧುವೆನಿಸುವ ಯೌವ್ವನವನು''– ಎಂದು ಉದ್ಗರಿಸಿರುವರು. ಆದರೆ, ವೀರಯ್ಯನು ಮಾತ್ರ ಯಾವ ವಿಷಯಾಕರ್ಷಣೆಗೆ ಗಮನ ನೀಡಲಿಲ್ಲ. ತಾನಾಯಿತು ತನ್ನ ಕೆಲಸವಾಯಿತು. ತೋಟ ಬಿಟ್ಟರೆ ಮನೆ, ಮನೆ ಬಿಟ್ಟರೆ ತೋಟ– ಇವನ ವೃತ್ತಿಚರ್ಯವಾಯಿತು. ಈ ರೀತಿ ಮನೋನಿಗ್ರಹ ಬೀಜ ರೂಪದಲ್ಲಿ ಮೊಳಕೆಯೊಡೆಯ ಹತ್ತಿದ್ದು ಶ್ರೀ ವೀರಯ್ಯನ ಎಷ್ಟು ಜನ್ಮಾಂತರಗಳ ಫಲವೋ ತಿಳಿಯದು.

ವಯೋಪ್ರಾಪ್ತ ಶ್ರೀ ವೀರಯ್ಯನಿಗೆ ಕ್ರಮೇಣ ವಯಸ್ಕರು ಮಾಡಬಲ್ಲ ಕೆಲಸಗಳು ಅವನ ಪಾಲಿಗೆ ಬರಹತ್ತಿದವು. ಎಲೆ–ಬಳ್ಳಿ ಕಟ್ಟುವದು, ಕಪ್ಪಲಿ ಹೊಡೆಯುವದು. ಮುಂತಾದ ಕೆಲಸಗಳಲ್ಲಿ ಅವನು ನಿಪುಣನಾದ. ಅವನಿಗೆ ಆಲಸ್ಯ–ಉದಾಸೀನವೆಂಬುದು ಗೊತ್ತಿರಲಿಲ್ಲ. ಯಾವ ಕೆಲಸ ಮಾಡಿದರೂ ಮನ ಒಪ್ಪುವಂತೆ ಮಾಡುತ್ತಿದ್ದನು ಎಲ್ಲರಿಗಿಂತಲೂ ಮುಂದೆ ಇರುತ್ತಿದ್ದ. ಕಪ್ಪಲಿ ಹೊಡೆಯುವಾಗ, ಕಪ್ಪಲಿಯನ್ನು ಕಾಲಿನಿಂದ ಅನಾಯಾಸವಾಗಿ ಎಳೆದು ಕೊಳ್ಳುತ್ತಿದ್ದನು. ಭಾರೀ ಕುಣಿಯಲ್ಲಿ ಎತ್ತು ಹೊಡೆಯುವಾಗ ಮಿಣಿಯ ಮೇಲೆ ಎದ್ದು ನಿಲ್ಲುತ್ತಿದ್ದನು. ಒಮ್ಮೊಮ್ಮೆ ಕೆಲಸದ ಭಾರದಲ್ಲಿ ಊಟ ಕೂಡಾ ಮರೆತು ಬಿಡುತ್ತಿದ್ದನು. ಹೀಗೆ ಕೆಲಸ ಕಾರ್ಯಗಳಲ್ಲಿ ಒಳ್ಳೆ ಪ್ರಸಿದ್ಧಿ ಪಡೆದನು.

**ಸಾಧುವಿನ ಆಗಮನ :**

''ಸಂಧ್ಯಾಕಾಲ ಸಮೀಪಿಸುತ್ತಿದೆ. ಸೂರ್ಯ ತನ್ನ ಹೊಂಗಿರಣಗಳನ್ನು ಆಗಲೇ ಸೆಳೆದುಕೊಂಡು ಪಶ್ಚಿಮಾಂಬುಧಿಯಲಿ ಧುಮುಕಲಿದ್ದಾನೆ. ಹೀಗೆ ಅವನು ಮುಳುಗುವಾಗ ತನ್ನ ತೇಜವನ್ನು ಅಗ್ನಿಯಲ್ಲಿ ಸ್ಥಾಪಿಸುವೆನೆಂದು'' ಮಹಾಕವಿ ಕಾಳಿದಾಸ ಉದ್ಗರಿಸಿದ್ದಾನೆ.

ಸಾಧು–ಸನ್ಯಾಸಿಗಳನ್ನು ಅಗ್ನಿ ಸಮಾನರೆಂದೇ ಭಾವಿಸಲಾಗಿದೆ. ಯಾಕೆಂದರೆ, ಅವರು ತಮ್ಮ ಜ್ಞಾನಾಗ್ನಿಯಿಂದ ತಮ್ಮ ಕರಣ ವೃತ್ತಿಗಳನ್ನೆಲ್ಲ ಭಸ್ಮಗೊಳಿಸಿದವರು. ಹೀಗೆ ಅಗ್ನಿಯ ಪ್ರಖರತೆ, ಸೂರ್ಯನ ತೇಜ ಮಿಲನವಾದ ಒಬ್ಬ ಬೈರಾಗಿ ಸಾಧು ವೀರಯ್ಯನಿದ್ದ ತೋಟಕ್ಕೆ ಬಂದನು. ವೀರಯ್ಯನು ಆಗ ಕೆಲವರೊಂದಿಗೆ ಎಲೆ ಬಳ್ಳಿ ಕಟ್ಟುತ್ತಿದ್ದನು. ಸಾಧು ಬರುವಾಗ, ತೋಟದ ಬಾಗಿಲು ಸಪ್ಪಳವಾದುದರಿಂದ ಎಲ್ಲರೂ ಅತ್ತ ಕಡೆಗೆ ನೋಡಿದರು. ಓರ್ವ ವಯೋವೃದ್ಧ ಸನ್ಯಾಸಿ ಒಳಗೆ ಬರುತ್ತಿರುವದು ವೀರಯ್ಯನ ಕಣ್ಣಿಗೆ ಬಿತ್ತು.

ಬಂದವನು ಅತೀ ಎತ್ತರವಾಗಿದ್ದನು. ಬಿಳಿ ಬಣ್ಣದ ಅವನ ಗಡ್ಡ ಹೊಟ್ಟೆಯವರೆಗೆ ಇಳಿಬಿದ್ದಿತ್ತು ತಲೆಯ ಮೇಲೆ ಜಡೆ ಕಟ್ಟಿ ಅದಕ್ಕೆ ರುದ್ರಾಕ್ಷಿಮಾಲೆ ಸುತ್ತಿದ್ದನು. ಕಂಠ–ಕುತ್ತಿಗೆ – ಮುಂಗೈಗಳಿಗೆ ರುದ್ರಾಕ್ಷಿ ಧರಿಸಿದ್ದನು. ಆತನ ಬಣ್ಣ ನೇತ್ರಾಕರ್ಷಕವಾಗಿತ್ತು. ಶರೀರ ಕೃಶವಾಗಿದ್ದರೂ ಮುಖಕಾಂತಿ ತೇಜಃ ಪುಂಜವಾಗಿತ್ತು. ನೆರೆಗೂದಲಿಂದ ಕೂಡಿದ ಆತನ ಹುಬ್ಬುಗಳು ಆತನ ಶತಾಯುಷಿಯ ಸೂಚನೆ ನೀಡುತ್ತಿದ್ದವು.

ಆಗಾಗ ನಡೆಯುವಾಗ ಜೋಲಿ ಹೊಡೆಯುತ್ತಿದ್ದನು. ಅದಕ್ಕಾಗಿ, ತನ್ನಷ್ಟೇ ಎತ್ತರವಾದ ನಾಗಬೆತ್ತವನ್ನು ಬಲಗೈಯಲ್ಲಿ ಹಿಡಿದಿದ್ದನು. ಬಗಲಲ್ಲಿ ಜೋಳಿಗೆ ಮತ್ತು ಸುಳ್ಳಿಸುತ್ತಿದ ಕೃಷ್ಣಾಜಿನಗಳಿದ್ದವು. ಮತ್ತೊಂದು ಕೈಯಲ್ಲಿ ಭಿಕ್ಷಾಪಾತ್ರೆ ಇತ್ತು.

ಕಾವಿ ಬಣ್ಣದ ಲುಂಗಿಯನ್ನು ತನ್ನ ನಡಕ್ಕೆ ಸುತ್ತಿ ಅದರ ಎರಡು ತುದಿಗಳನ್ನು ಎದರು ಬದರು ಸುತ್ತಿ ಅದನ್ನು ತನ್ನ ಕುತ್ತಿಗೆಗೆ ಕಟ್ಟಿಕೊಂಡಿದ್ದನು. ಪಾದದಲ್ಲಿ ಅರಿವೆಯ ಪಟ್ಟಿ ಬಡಿದ ಕಟ್ಟಿಗೆಯ ಕಡಾವಿಗಳಿದ್ದವು. ಅವು ಬಹಳ ಧೂಳಿನಿಂದ ಮುಚ್ಚಿದ್ದನ್ನು ನೋಡಿದರೆ, ಆತನು ಬಹಳ ದೂರದಿಂದ ಬಂದಿರಬಹುದೆಂದು ಭಾಸವಾಗದೇ ಇರುತ್ತಿರಲಿಲ್ಲ.

ಅಲ್ಲಿರುವ ಕೆಲಸಗಾರರಿಗೆ ಈತನ ಆಗಮನ ಆಶ್ಚರ್ಯ ನೀಡಲಿಲ್ಲ. ಯಾಕೆಂದರೆ, ಕಾಶಿಯಿಂದ ರಾಮೇಶ್ವರಕ್ಕೆ ಹೋಗುವ ಉತ್ತರ ಭಾರತದ ಅನೇಕ ಸಾಧು–ಸನ್ಯಾಸಿಗಳು ಇದೇ ಊರಿನ ಉಣಚಗೇರಿ ಹಾಗೂ ಹಳೆಮನಿಯವರ ತೋಟಗಳಲ್ಲಿ ಇಳಿದುಕೊಂಡು ಒಂದೆರಡು ದಿನ ಇದ್ದು ವಿಶ್ರಾಂತಿ ಪಡೆದುಕೊಂಡು ಮತ್ತೆ ಮುಂದಿನ ಪಯಣ ಬೆಳೆಸುತ್ತಿದ್ದ ಪರಂಪರೆ ಎಲ್ಲರಿಗೂ ಗೊತ್ತಿತ್ತು.

ಭೈರಾಗಿ ಬಂದವನೇ ತೋಟದ ಭಾವಿಯ ಹತ್ತಿರವಿದ್ದ ಹಾಸುಗಲ್ಲಿನ ಮೇಲೆ ವಿಶ್ರಾಂತಿಗಾಗಿ ಕುಳಿತನು. ಇದನ್ನು ನೋಡಿದ ವೀರಯ್ಯ ಮತ್ತು ಇತರ ಕೆಲಸಗಾರರು ಅವನಲ್ಲಿಗೆ ಮೆಲ್ಲಗೆ ಬಂದರು. ಆಗಲೇ ಸಾಯಂಕಾಲವಾದುದರಿಂದ ಅವರೆಲ್ಲರೂ ತಮ್ಮ ತಮ್ಮ ಕೆಲಸ ಮುಗಿಸಿಕೊಂಡು ಮನೆಗೆ ಹೋಗುವ ಸಿದ್ಧತೆಯಲ್ಲಿದ್ದರು.

ಅವನ ಸಮೀಪ ಬರುತ್ತಿದ್ದಂತೆ, ಅವರಿಗೆಲ್ಲ ಈ ಹಿಂದೆ ನೋಡಿದ ಅನೇಕ ಸಾಧು–ಸನ್ಯಾಸಿಗಳಂತೆ ಇವನಲ್ಲವೆಂದು ಅನ್ನಿಸದೇ ಇರಲಿಲ್ಲ. ಯಾವುದೋ ಅವ್ಯಕ್ತ ಆಕರ್ಷಣೆ ಇವನಲ್ಲಿತ್ತು, ಇದು ತತ್‌ಕ್ಷಣ ಎಲ್ಲರಿಗೂ ಭಾಸವಾಯಿತು. ಕೆಲವೇ ನಿಮಿಷಗಳಲ್ಲಿ ಅವನೊಂದಿಗೆ ವಿಲೀನವಾಗಿ ಬಿಟ್ಟರು. ಹಾಗೆಯೇ, ಅಲ್ಲಿಯೇ ಇದ್ದ ಹಳೇ ಗುಡಿಸಲಿನಲ್ಲಿ ಇರಲು ಸೂಚಿಸಿದರು. ಊಟೋಪಚಾರದ ಬಗ್ಗೆ ವಿಚಾರಿಸಿ ತಕ್ಕಮಟ್ಟಿಗೆ ವ್ಯವಸ್ಥೆಯನ್ನು ಮಾಡಿ, ತಮ್ಮ ಮನೆಗೆ ತೆರಳಿದರು.

ಮರುದಿನ ತೋಟಕ್ಕೆ ಕೆಲಸಗಾರರೆಲ್ಲ ಬಂದಾಗ ಗುಡಿಸಲಿನ ಮುಂದೆ ಒಂದು ಸಣ್ಣ ತಗ್ಗು ತೆಗೆದು, ಬೆಂಕಿ ಹಾಕಿದ್ದು ಕಾಣಿಸಿತು ಮತ್ತು ಮಗ್ಗುಲಲ್ಲಿ ದೊಡ್ಡ ಚಿಲುಮೆ ಬಿದ್ದದ್ದು ಕಂಡಿತು. ಬೈರಾಗಿ, ಗಾಂಜಾ ಸೇದುವನೆಂದು ಅರಿತುಕೊಂಡರು.

ಕೆಲವು ನಿಮಿಷದ ನಂತರ ಸಾಧು ತನ್ನ ಚೀಲದಿಂದ ಏನೋ ಒಂದು ವಸ್ತು ತೆಗೆದು ಮಿಜ್ಜಿ ಚಿಲುಮೆಯಲ್ಲಿ ಹಾಕಿ, ದುನಿಯಲ್ಲಿಯ ಒಂದು ಕೆಂಡವನ್ನು ಅದರ ಮೇಲೆ ಹೇರಿ, ಜೈ ಭೋಲನಾಥ ಎಂದು ಒಂದೆರಡು ಜುರಿ ಎಳೆಯುತ್ತಿದ್ದನು. ಆಗ ಚಿಲುಮೆಯ ಮೇಲೆ ಅಗ್ನಿಜ್ವಾಲೆ ಭುಗಿಲೆಂದು ಮೇಲೆದ್ದುದನ್ನು ಕಂಡು ಚಕಿತರಾಗುತ್ತಿದ್ದರು. ಹೀಗಾದ ನಂತರ ಸಾಧುವಿನ ಕಣ್ಣುಗಳು ಅರೆಮುಚ್ಚಿಬಿಡುತ್ತಿದ್ದವು. ಅವನ ಶರೀರ ನಿಶ್ಚಲವಾಗಿಬಿಡುತ್ತಿತ್ತು. ಅವನ ಮುಖದಲ್ಲಿ ಒಂದು ಅವರ್ಣನೀಯ ವಿಲಕ್ಷಣ ದಿವ್ಯತೇಜ ಹೊರಬಿದ್ದಂತೆ ಕಾಣುತ್ತಿತ್ತು. ಆ ಸ್ಥಿತಿಯಲ್ಲಿ ನೋಡುವದೆಂದರೆ ಭಯವಾಗುತ್ತಿತ್ತು.

ಹೀಗೆ ಕೆಲವು ದಿವಸ ಕಳೆದವು. ತೋಟದ ಕೆಲಸಗಾರರು ತಮಗೆ ಬಿಡುವು ದೊರೆತಾಗ, ಆ ಸಾಧುವಿನ ಸಮೀಪ ಬಂದು ಕೂಡುತ್ತಿದ್ದರು. ಇದರಲ್ಲಿ ವೀರಯ್ಯನೂ ಇರುತ್ತಿದ್ದನು. ಭೈರಾಗಿ ತಾನು ಸೇದಿದ ನಂತರ ಚಿಲುಮೆಯನ್ನು ಇವರತ್ತ ಹಿಡಿಯಹತ್ತಿದನು. ಮೊದಮೊದಲು ಇವರು ಸಂಕೋಚ– ಭಯ ಪಟ್ಟುಕೊಳ್ಳುತ್ತಿದ್ದರು. ಬರಬರುತ್ತಾ ಕೆಲವರು ಸ್ವೀಕರಿಸಹತ್ತಿದರು. ಆ ನಂತರ, ಇದರ ರುಚಿ ಕಂಡು, ಬುದ್ಧಿಯ ಮೇಲೆ ಆಗುವ ಒಂದು ಅವ್ಯಕ್ತ ಆನಂದದ ಗುಂಗಿಗೆ ಒಳಗಾಗಹತ್ತಿದರು. ಈ ಚಟ ಶ್ರೀ ವೀರಯ್ಯನಿಗೂ ತಗುಲಿ, ಇದರ ದಾಸನಾಗಿಬಿಟ್ಟನು. ಹೀಗೆ ಭೈರಾಗಿಯ ಹಾಗೂ ವೀರಯ್ಯನ ಗೆಳೆತನದಿಂದ ವ್ಯಸನ ಪ್ರಾಪ್ತಿ ಎನ್ನುವಂತೆ ಪರಿವರ್ತನೆಗೊಳ್ಳಹತ್ತಿತ್ತು.

ಸಾಧು ಸಮೀಪದ ನೆರೆಯ ಗ್ರಾಮಗಳಿಗೆ ಭಿಕ್ಷೆ ಬೇಡಲು ಹೋಗುತ್ತಿದ್ದನು. ಮತ್ತು ಬರುವಾಗ ಸೇಂದಿ ಕುಡಿದು ಮದೋನ್ಮತ್ತನಾಗಿ ಬರುತ್ತ ಜೋಲಿ ಹೊಡೆಯುತ್ತ ಬರುತ್ತಿದ್ದನು. ಇದನ್ನು ಈ ತೋಟದಲ್ಲಿರುವವರೆಲ್ಲರೂ ನೋಡಿದ್ದರು. ಒಮ್ಮೊಮ್ಮೆ ಬರುವಾಗ ಮುಂದೆ ತತ್ರಾಣಿಯಲ್ಲಿ ಸೇಂದಿ ತುಂಬಿಕೊಂಡು ಬರುವ ಚಟವು ಪ್ರಾರಂಭವಾಯಿತು. ಹೀಗೆ ತನ್ನೊಡನೆ ತಂದ ಸೇಂದಿಯನ್ನು ಅಲ್ಲಿರುವ ವೀರಯ್ಯನಿಗೂ ಕೂಡಾ ಕುಡಿಸಲು ಪ್ರಾರಂಭಿಸಿದನು. ಇದು ಮುಂದೆ ಹದ್ದು ಮೀರಿ ಇವೆರಡೂ ಚಟಗಳು ವೀರಯ್ಯನಲ್ಲಿ ಮನೆಮಾಡಿಕೊಂಡು ಬಿಟ್ಟವು.

ಮನುಷ್ಯಗೆ ಅವನ ಬುದ್ಧಿ ಜಾಗ್ರತವಾದಾಗ ಮನಸ್ಸಿನ ಕಿಳು ಭಾವನೆಗಳು ಕಾರ್ಯರೂಪಕ್ಕೆ ಬಾರದಂತೆ ಅದು ನಿಯಂತ್ರಿಸುತ್ತದೆ. ಮಾದಕ ಪದಾರ್ಥಗಳನ್ನು ಸೇವಿಸಿದಾಗ ಅಲ್ಲಿ ಬುದ್ಧಿಯ ಕ್ರಿಯೆ ನಿಂತು ಬಿಡುತ್ತದೆ. ಆಗ ಮನಸ್ಸಿನ ಕೀಳು ಗುಣಗಳು ಹುಚ್ಚೆದ್ದು ಕುಣಿದುಬಿಡುತ್ತವೆ. ಈ ಕಾರಣದಿಂದಲೋ ಏನೋ, ಯೋಗಿಗಳು ತಮ್ಮ ಜೀವನದಲ್ಲಿ ಇರುವ ಮನೋಧರ್ಮವನ್ನು ತಿಳಿದುಕೊಳ್ಳಲು ಮಾದಕ ಪದಾರ್ಥಗಳನ್ನು ಉದ್ದೇಶಪೂರ್ವಕ ಸೇವಿಸಿ, ಪರೀಕ್ಷಿಸಿಕೊಂಡ ಉದಾಹರಣೆಗಳನ್ನು ಕಾಣಬಹುದು. ಏಕೆಂದರೆ, ''ಮನಏವ ಮನುಷ್ಯಾಣಾಂ

ಕಾರಣಂ ಬಂಧ ಮೋಕ್ಷಯೋಃ'' ಎಂಬಂತೆ ಮನುಷ್ಯನ ಬಂಧ–ಮೋಕ್ಷಗಳಿಗೆ ಮನಸ್ಸೇ ಕಾರಣವಾಗಿದೆ.

ಹೀಗೆಯೇ, ಒಮ್ಮೆ ಆಂಧ್ರಪ್ರದೇಶದ ಪ್ರಕಾಂಡ ಪಂಡಿತರೂ ಶೈವಭಕ್ತ ಶ್ರೇಷ್ಠರೂ, ಆದ ಶ್ರೀ ಅಪ್ಪಯ್ಯ ದೀಕ್ಷಿತರು ಉನ್ಮತ್ತ ಬೀಜ ಸೇವಿಸಿ ತಮ್ಮ ಮನೋಭಾವನೆ ಪರೀಕ್ಷಿಸಿಕೊಳ್ಳಲು ನಿರ್ಧರಿಸಿದರು. ಅದರಂತೆ ಸೇವಿಸಿ, ತಮ್ಮ ಶಿಷ್ಯರಿಗೆ ತಾವು ಉನ್ಮತ್ತರಾದಾಗ ಯಾವ ಪರಿಣಾಮಗಳು ಹೊರ ಬೀಳುತ್ತವೆ ಬರೆದಿಡಲು ಹೇಳಿದರು. ನಂತರ ಪರವಶರಾದರು. ಆಗ ಅವರ ಮುಖದಿಂದ ಹೊರಬಂದದ್ದು ಶಿವಸ್ತೋತ್ರ. ಉನ್ಮಾದ ಸ್ಥಿತಿಗೆ ಇಳಿದ ನಂತರ, ತಮ್ಮ ಶಿಷ್ಯ ಬರೆದಿಟ್ಟಿರುವ ಸ್ತೋತ್ರ ನೋಡಿ, ಶ್ರೀ ಅಪ್ಪಯ್ಯ ದಿಕ್ಷೀತರು ಭಾವಾವೇಶದಿಂದ ಆನಂದ ಪರವಶರಾದರು. ಆಗ ತಮ್ಮ ಮನೋವೃತ್ತಿಯೆಲ್ಲ ಶಿವಮಯವಾಗಿ ದೆಂಬುದನ್ನು ಅರಿತುಕೊಂಡರಂತೆ.

ಹಾಗೆ ಇಲ್ಲಿಯೂ ಸಾಧು ತನ್ನ ಸಾಧನೆಗೋಸ್ಕರ ಗಾಂಜಾ ಮತ್ತು ಹೆಂಡಗಳನ್ನು ಉಪಯೋಗಿಸಿಕೊಂಡಿರಬಹುದೆಂದು ಭಾವಿಸಬಹುದು. ಆದರೆ, ಜಿಹ್ವಾ ಚಾಪಲ್ಯಕ್ಕಲ್ಲವೆಂಬುದು ನಿಶ್ಚಿತ. ಏಕೆಂದರೆ, ಅವುಗಳನ್ನು ಸೇವಿಸಿದಾಗ ಮನಬಂದಂತೆ ವರ್ತಿಸದೇ, ಒಂದು ರೀತಿಯ ಸಂವೇದನಾ ಭಾವನೆಯಲ್ಲಿ ಮುಳುಗುತ್ತಿರುವ ವರ್ತನೆಯೇ ಇದಕ್ಕೆ ಸಾಕ್ಷಿಯಾಗಿವೆ. ಇಂತಹ ಸ್ಥಿತಿಯಲ್ಲಿ ತತ್ತ್ವಚಿಂತನೆ ತಾನೇ ಹೊರಡುವದು.

ಇಂತಹ ಪ್ರಸಂಗಗಳು ಅನೇಕ ಸಲ ಆಗಿ, ಇವೆಲ್ಲವು ಒಟ್ಟಾಂಶ ವೀರಯ್ಯನ ಮೇಲೆ ಗಾಢ ಪರಿಣಾಮ ಬೀರಿದವು. ಕಾರಣ ವೀರಯ್ಯನು ಕೂಡಾ ಕುಳಿತರೆ – ನಿಂತರೆ ಒಂದು ರೀತಿಯ ತನ್ಮಯಾತ್ಮಕ ಏಕಾಗ್ರತೆಯ ಭಾವನೆಯನ್ನು ಹೊಂದುತ್ತಿದ್ದನು.

**ವಿಷಾದ ಯೋಗ :**

ಹಲವಾರು ತಿಂಗಳುಗಳವರೆಗೆ ಸಾಧುವಿನ ಸಂಪರ್ಕಕ್ಕೆ ಬಂದ ವೀರಯ್ಯನು ಏಕಾಂತಕ್ಕೆ ವಾಲಹತ್ತಿದನು. ಒಮ್ಮೊಮ್ಮೆ ಮನೆಗೆ ಬರುವ ನೆನಪು ಕೂಡಾ ಹಾರಿಬಿಡುತ್ತಿತ್ತು, ಇಲ್ಲವೆ ಅಲ್ಲಿಯೇ ಮಲಗುತ್ತಿದ್ದನು. ಸಂಗಡಿಗರು ಅವನಿಗೆ ಮನೆಗೆ ಹೋಗಿ ಅಲ್ಲಿಯೇ ಮಲಗುವದಾಗಿ ಹೇಳುತ್ತಿದ್ದರು. ಈ ಪರಿಕ್ರಮ ವೀರಯ್ಯನಿಗೆ ಮನಸ್ಸಿನ ಮೇಲೆ ಅವ್ಯಕ್ತ ಪ್ರಭಾವ ಬೀರುತ್ತಾ ಹಲವಾರು ದಿವಸ, ತಿಂಗಳುಗಳವರೆಗೆ ಜರುಗಿತು.

ಒಂದು ದಿವಸ ಪ್ರಾತಃಕಾಲ ವೀರಯ್ಯ ತನ್ನ ಹಾಸಿಗೆಯಿಂದ ಎದ್ದು ನಿತ್ಯ ವಿಧಿಗಳನ್ನು ತೀರಿಸಿಕೊಂಡು ಮನೆಯಿಂದ ಎಂದಿನಂತೆ ತೋಟಕ್ಕೆ ಹೋದನು. ಸಹಜವಾಗಿ ಅವನ ದೃಷ್ಟಿ ಗುಡಿಸಲ ಕಡೆಗೆ ಹೋಯಿತು. ಆದರೆ, ಅಲ್ಲಿ ಸನ್ಯಾಸಿ ಕಾಣಲಿಲ್ಲ, ಅತ್ತಿತ್ತ ನೋಡಿದ, ಎಲ್ಲಿಯೂ ಕಾಣಲಿಲ್ಲ, ಊರಲ್ಲಿ ಹೋಗಿರಬೇಕೆಂದು ತೋಟದ ಕೆಲಸಕ್ಕೆ ನಿರತನಾದನು. ಹೀಗೆ ಎರಡು, ಮೂರು ಗಂಟೆ ಕಳೆದರೂ ಸಾಧು

ಬರದಿದ್ದುದು ಚಿಂತೆಗೀಡುಮಾಡಿತು. ಇದನ್ನು ತಡೆಯಲಾರದೇ ಮತ್ತೆ ಗುಡಿಸಲಿಗೆ ಪುನಃ ಪುನಃ ನೋಡುತ್ತಾನೆ. ಅದು ಬರಿದಿತ್ತು ಬಣಗುಡುತ್ತಿತ್ತು. ಇದರಿಂದ, ಶ್ರೀ ವೀರಯ್ಯನ ಮನಸ್ಸಿಗೆ ನೆಮ್ಮದಿ ಉಳಿಯಲಿಲ್ಲ. ಏನೋ ಕಳೆದುಕೊಂಡಂತಾಯಿತು. ನಂತರ ತೋಟದಲ್ಲಿಯ ಇತರರನ್ನು ಕರೆದು ವೀರಯ್ಯ ಕೇಳಿದನು. ಅದಕ್ಕೆ ಅವರು, ''ಇಂದು ನಾವು ಆ ಸಾಧುವನ್ನು ನೋಡಿಯೇ ಇಲ್ಲ. ಅವನ ಗುಡಿಸಲಿನಲ್ಲಿ ಅವನ ಸಾಮಾನುಗಳೂ ಇಲ್ಲ. ಗುಡಿಸಲು ಮುಂದೆ ಇರುವ ಮನಿಯಲ್ಲಿ ಬೆಂಕಿಯೇ ಇಲ್ಲ. ಮೊದಲೇ ಅವನು ಸನ್ಯಾಸಿ; ಹಳ್ಳಿಗೆ ''ಏಕರಾತ್ರಿ ಪಟ್ಟಣಕ್ಕೆ ಪಂಚರಾತ್ರಿ'' ಇದು ಅವನ ದಿನಚರಿ. ಬಹುಶಃ ಅವನು ಹೋಗಿಯೇ ಬಿಟ್ಟಿರಬೇಕು'' ಎಂದು ಹೇಳಿದರು.

ಭೈರಾಗಿಯ ಈ ಅನಿರೀಕ್ಷಿತ ಅಗಲುವಿಕೆಯಿಂದ ದುಃಖತಪ್ತನಾದ ವೀರಯ್ಯ ಹಾಗೆಯೇ ನೆಲಕ್ಕೆ ಕುಸಿದು ಕುಳಿತನು. ಅವನ ಎರಡೂ ಕಣ್ಣುಗಳಿಂದ ನೀರು ಧಾರಾಕಾರವಾಗಿ ಅವನಿಗರಿವಿಲ್ಲದಂತೆ ಸುರಿಯಹತ್ತಿತ್ತು. ಅವನ ಗೆಳೆಯರೇ ಅವನನ್ನು ಎತ್ತಿ ಸರಿಯಾಗಿ ಕುಳ್ಳಿರಿಸಿ, ''ಹೀಗೆಲ್ಲ ಮನಸ್ಸಿಗೆ ಹಚ್ಚಿಕೊಳ್ಳಬಾರದು. ಅವನು ಮೊದಲೇ ಸನ್ಯಾಸಿ ಅವನಿಗೆ ವ್ಯಾಮೋಹವೇ ಇರುವದಿಲ್ಲ. ಹೇಗೆ ಬಂದಿದ್ದನ್ನೋ ಹಾಗೆ ಹೋದ, ಇನ್ನು ಮುಂದೆ ನೀನು ಅವನನ್ನು ಮರೆತುಬಿಡು'' ಎಂದು ಹೇಳಿ ಅವನನ್ನು ಮನೆಗೆ ಕಳಿಸಿಕೊಟ್ಟರು.

ಸಾಧು ಏನೋ ಹೋದ. ಆದರೆ, ಅವನ ಮೂಲಕ ಅಂಟಿಕೊಂಡ ಹೆಂಡ, ಗಾಂಜಾ ಗೆಳೆತನ ಮಾತ್ರ ವೀರಯ್ಯನಿಗೆ ಹೋಗಲಿಲ್ಲ. ಒಮ್ಮೆ ವೀರಯ್ಯನ ಮನೆಯಲ್ಲಿ ಎಲ್ಲರಿಗೂ ಹೆಂಡದ ವಾಸನೆ ಬರಹತ್ತಿತ್ತು. ಮನೆಯವರೆಲ್ಲ ಅದನ್ನು ತಡಕೊಳ್ಳಲಾರದೇ ಎಲ್ಲಿದೆ ? ಎಂದು ಹುಡುಕಹತ್ತಿದರು. ಕೊನೆಗೆ ಗೂಟಕ್ಕೆ ಹಾಕಿದ ಹೆಂಡದ ಗೊಬ್ಬೆ ಅವರ ಕಣ್ಣಿಗೆ ಬಿತ್ತು ಆಗ ಅವನ ತಂದೆತಾಯಿಗಳಿಗೆ ಮಗ ಕುಡುಕನಾದ ಎಂದು ಗೊತ್ತಾಯಿತು. ಇದರಿಂದ, ಅವರು ತುಂಬಾ ದುಃಖಿತರಾಗಿ ಇದ್ದೊಬ್ಬ ಮಗ ಹೀಗಾದನೆ? ಎಂದು ದುಃಖದಿಂದ ಹಲುಬಿ ಹಂಬಲಿಸಿದರು.

ಕೊನೆಗೆ ವೀರಯ್ಯನ ತಂದೆ ಚನ್ನಯ್ಯ ಮಗನನ್ನು ಹತ್ತಿರ ಕರೆದು ''ಮಗನೇ ಈ ಮೊದಲು ನೀನು ಊರಲ್ಲಿ ಎಲ್ಲರಿಂದ ಸೈ ಎನಿಸಿಕೊಂಡಿ, ಈಗ ಹೀಗೇಕೆ ಆದೆ? ಇದು ಸನ್ಯಾಸಿಯ ಗೆಳೆತನದ ಫಲವಲ್ಲವೆ? ಈಗ ಅವನು ಹೋಗಿಬಿಟ್ಟಿದ್ದಾನೆ. ಇನ್ನು ಮೇಲೆ ಈ ಚಟವನ್ನು ಬಿಟ್ಟುಬಿಡು'' ಎಂದು ಅತ್ಯಂತ ಕಳಕಳಿಯಿಂದ ಹೇಳಿದನು. ಆದರೆ, ತಂದೆಯ ಈ ಹಿತ ನುಡಿ ಮಗನಪಾಲಿಗೆ ಅರಣ್ಯರೋಧನವಾಯಿತು.

ವೀರಯ್ಯ ತಂದೆಯ ಮಾತಿಗೆ ಏನೂ ಉತ್ತರಿಸದೆ ಕೇವಲ ಮೌನವಾಗಿದ್ದ. ಇದೇ ಅವನ ಉತ್ತರವಾಯಿತು. ಏಕೆಂದರೆ, ಕುಡಿಯುತ್ತಿರುವದು ದುಃಖ ಮರೆಯುವದಕ್ಕಾಗಿಯೇ ಹೊರತು ಚಟಕ್ಕಾಗಿ ಅಲ್ಲ ಅನ್ನುವ ನಿರ್ಧಾರ ಅವನದಾಗಿತ್ತು. ಆದರೆ, ಇದನ್ನು ಹೇಳಿದರೆ ನಂಬುವರಾರು?

ಮರುದಿವಸ ಎಂದಿನಂತೆ ವೀರಯ್ಯ ತೋಟದ ಕೆಲಸಕ್ಕೆ ಹೋದ. ಆದರೆ, ಅವನಿಗೆ ಕೆಲಸ ಮಾಡಲು ಎಳ್ಳಷ್ಟು ಮನಸ್ಸು ಬರಲಿಲ್ಲ. ಬೈರಾಗಿ ಇದ್ದ ಗುಡಿಸಲು ಕಡೆಗೆ ನೋಡಿ ನಿಟ್ಟುಸಿರು ಬಿಟ್ಟ. ಅಲ್ಲೇ ಇರುವ ಹಾಸುಗಲ್ಲಿನ ಮೇಲೆ ಕುಳಿತು ಮತ್ತೆ ಮತ್ತೆ ನೋಡಹತ್ತಿದ. ಈ ಸ್ಥಿತಿ ನೋಡಿ ಅವನ ಸಂಗಡಿಗರು. ಅವನಲ್ಲಿಗೆ ಬಂದು ಹೆಲಗಮೇಲೆ ಸ್ನೇಹದಿಂದ ಕೈ ಹಾಕಿ ''ವೀರಯ್ಯ ಏನೋ ಸಾಧು ಅಂತಾ ನಾವು ಕೂಡಾ ನಿನ್ನಂತೆ ಹೆಂಡ ಕುಡಿದೆವು. ಗಾಂಜಾ ಸೇದಿದವು, ಆದರೆ ಅವನು ಹೋದ. ಹೋದ ಮೇಲೆ ನಾವು ಅಲ್ಲಿಗೆ ಕೈ ಬಿಟ್ಟೆವು. ಆದರೆ, ನೀನು ಅದನ್ನು ಬಿಡದೆ ಆದರ ಅಧೀನನಾಗಿರುವೆ. ಇದು ಒಳ್ಳೆಯದಲ್ಲ. ಇದರಿಂದ ನಿನಗೆ ಮಾತ್ರವಲ್ಲ ನಿನ್ನ ಗೆಳೆಯರಾದ ನಮಗೂ ಕೆಟ್ಟಹೆಸರು ಬರುತ್ತದೆ. ಮನೆಯವರಿಗೆ ಹೊರತಾಗಿ, ಊರಿಗೆ ಬೇಸರವಾಗಿ, ಮುಂದೆ ಎಲ್ಲಿಗೆ ಹೋಗಬೇಕೆನ್ನುವೆ ? ಒಮ್ಮೆ ಕೆಟ್ಟ ಹೆಸರು ಬಂದಿತೆಂದರೆ ಯಾರೂ ನಿನ್ನನ್ನು ನಂಬುವದಿಲ್ಲ. ವಿಚಾರಮಾಡು ನೀನು ಈಗಾಗಲೇ ಮದುವೆಯ ವಯಸ್ಕನಾಗಿರುವೆ ? ಈ ರೀತಿ ಆದರೆ ನಿನಗೆ ಕನ್ಯಾ ಕೊಡುವವರಾದರೂ ಯಾರು? ಇದು ಒಂದು ದಿನದ ಮಾತಲ್ಲ, ಜೀವನ ಪರ್ಯಂತ ನೀನು ಗೌರವದಿಂದ ಬಾಳಲೇ ಬೇಕಾದರೆ ಈ ಚಟವನ್ನು ಬಿಡಲೇಬೇಕು.'' ಎಂದು ಅವರು ಅವನಿಗೆ ಪರಿಪರಿಯಾಗಿ ಹೇಳಿದರು. ಆದರೆ, ಅವರ ಮಾತುಗಳು ವೀರಯ್ಯನ ಮೇಲೆ ಯಾವ ಪರಿಣಾಮ ಬೀರಲಿಲ್ಲ.

ಕೆಲಕಾಲ ಹೀಗೇ ಕ್ರಮಿಸಿತು. ವೀರಯ್ಯ ಕದ್ದು ಮುಚ್ಚಿ ಕುಡಿಯುವದನ್ನೂ ಬಿಡಲಿಲ್ಲ. ಮತ್ತೊಂದು ಸಲ ಹೆಂಡದ ಗೊಬ್ಬೆ ಮನೆಯಲ್ಲಿಯೇ ಹಿರಿಯಣ್ಣನ ಕಣ್ಣಿಗೆ ಬಿತ್ತು. ಚನ್ನಯ್ಯನಿಗೆ ತಡೆದುಕೊಳ್ಳಲಿಕ್ಕೆ ಆಗಲಿಲ್ಲ. ಅದು ಸಾಮಾಜಿಕ ನಿರ್ಬಂಧವಿದ್ದ ಕಾಲ. ಸಮಾಜಕ್ಕೆ ಹೊರತಾಗಿ ಯಾರೂ ಏನೂ ಮಾಡಲಿಕ್ಕೆ ಆಗುತ್ತಿರಲಿಲ್ಲ. ಒಂದು ವೇಳೆ ಹಾಗೇನಾದರೂ ಆದರೆ, ತಪ್ಪಿತಸ್ಥರು ಬಹಿಷ್ಕಾರದ ಅಸ್ತ್ರವನ್ನು ಎದುರಿಸಬೇಕಾಗುತ್ತಿತ್ತು.

ಅಸಾಹಾಯಕನಾದ ವೀರಯ್ಯನ ತಂದೆ ಚೆನ್ನಯ್ಯ ಊರ ಹಿರಿಯರಿಗೆ ಮಗನ ಈ ವಿಷಯ ತಿಳಿಸಿದ, ಆಗ ಹಿರಿಯರೆಲ್ಲ ಕೂಡಿ ವೀರಯ್ಯನಿಗೆ ಬುದ್ಧಿ ಹೇಳಿದರು. ಆದರೆ ಉಪಯೋಗವಾಗಲಿಲ್ಲ. ಮನೆಗೆ ಬಂದ ಹಿರಿಯರು ಇನ್ನೂ ಮನೆಯಲ್ಲಿಯೇ ಇದ್ದರು. ಆಗ ವೀರಯ್ಯನ ಚಿಕ್ಕಪ್ಪ ಬಡಗೌಡ ಹೊರಗೆ ಹೋದವನು ಮನೆಗೆ ಬಂದ ! ಅವನಿಗೆ ಮನೆಯಲ್ಲಿಯ ಈ ವಿದ್ಯಮಾನ ತಿಳಿಯಿತು.

ಮೊದಲೇ ಅವನು ಸಿಟ್ಟಿನ ಮನುಷ್ಯನು. ಅವನಿಗೆ ತಾಳ್ಮೆ ಎಂಬುವದು ಗೊತ್ತಿರಲಿಲ್ಲ, ಅವನು ತನ್ನ ಸ್ನೇಹಿತರಾದ ಹಿರೇಗೌಡ್ರ ಶಿವನಗೌಡ ಎಂಬುವವನನ್ನು ಕರೆಯಿಸಿ ಮನೆಯಲ್ಲಿ ನಡೆದ ಸಂಗತಿಯನ್ನು ತಿಳಿಸಿದನು. ಶಿವನಗೌಡರೂ ಬಡಗೌಡನ ಸ್ವಭಾವದವನೇ. ಅವನಲ್ಲಿ ಶಾಂತಿ ಸಹನೆಗಳು ಇರಲಿಲ್ಲ. ಅವರಿಬ್ಬರೂ ಕೂಡಿ ವೀರಯ್ಯನನ್ನು ದರದರನೇ ಎಳೆದುಕೊಂಡು ಹೋಗಿ ಅಲ್ಲಿಯೇ ಇದ್ದ

ಭರಮಪ್ಪನ ಹುಣಸಿ ಗಿಡಕ್ಕೆ ಹಗ್ಗದಿಂದ ಕಟ್ಟಿ ತಲಾ ಒಂದು ಬಡಿಗೆಯನ್ನು ಹಿಡಿದು ವೀರಯ್ಯನನ್ನು ತಮ್ಮ ಕೈ ಯಲ್ಲಿಯ ಬಡಿಗೆ ಮುರಿಯುವವರೆಗೆ ಹೊಡೆದರು, ತಮಗೆ ಸಾಕಾದ ನಂತರ ಹೋದರು.

ಇದನ್ನೆಲ್ಲ ಕಣ್ಣಾರೆ ಕಂಡ ವೀರಯ್ಯನ ತಾಯಿ. ಕಾಲ್ಯಾಣಮ್ಮನಿಗೆ ಸಂಕಟವಾಗಿ ತಡೆದುಕೊಳ್ಳಲಾಗಲಿಲ್ಲ. ಬೋರಾಡಿ ಅತ್ತಳು. ತಾಯಿಯ ಕರಳು ಅದು ಹೇಗೆ ಸಹಿಸಲು ಸಾಧ್ಯ? ಮಗನ ಹತ್ತಿರ ಆಗ ಧಾವಿಸಿ ಹೋಗಿ ಅವನಿಗೆ ಕಟ್ಟಿದ ಹಗ್ಗವನ್ನು ಬಿಚ್ಚಿ ''ಅಪ್ಪಾ ಮಗನೇ? ಇನ್ನಾದರೂ ಕುಡಿಯುವದನ್ನು ಬಿಟ್ಟು ಬಿಡು'' ಎಂದು ಪರಿಪರಿಯಾಗಿ ಬೇಡಿಕೊಂಡಳು. ಅದರೆ, ಆಕೆಯ ಯಾವ ಮಾತುಗಳೂ ವೀರಯ್ಯನ ಕರ್ಣ ರಂಧ್ರವನ್ನು ಪ್ರವೇಶಿಸಲಿಲ್ಲ. ಇಲ್ಲಿ ವಿಚಿತ್ರವೆಂದರೆ ವೀರಯ್ಯನ ಚಿಕ್ಕಪ್ಪ ಬಡಗೌಡ ಮತ್ತು ಹಿರೇಗೌಡ, ಶಿವನಗೌಡ ವೀರಯ್ಯನನ್ನು ಬಡಿದಾಗ ಅದನ್ನು ನೋಡಿದವರ ಕಣ್ಣಲ್ಲಿ ನೀರು ಬಂದವೇ ಹೊರತು ವೀರಯ್ಯನ ಕಣ್ಣಲ್ಲಿ ಹನಿ ಕೂಡಾ ನೀರು ಬರಲಿಲ್ಲ. ವೀರಯ್ಯ ತನಗಾದ ದೈಹಿಕ ಯಾತನೆಯನ್ನು ಮೌನದಿಂದ ಸಹಿಸಿಕೊಂಡನು.

ವೀರಯ್ಯನಿಗೆ ಬಡಿಸಿಕೊಂಡ ಬಾರುಗಳು ಮೈತುಂಬಾ ಎದ್ದಿವೆ. ಅವುಗಳಲ್ಲಿ ಕೆಲವು ಕಡೆಗೆ ರಕ್ತವೂ ಸೋರಹತ್ತಿದೆ. ಅವನನ್ನು ಬೀದಿಯಲ್ಲಿ ಎಳೆದಾಡಿದ್ದರಿಂದ ಮೈಮೇಲಿನ ಆರಿವೆಗಳು ಹರಿದುಹೋಗಿ ಮೈತುಂಬಾ ಧೂಳು ಆಗಿದೆ. ಆಗ ಅದೇ ತಾನೇ ಹೊತ್ತು ಮುಳುಗಿ ಮಬ್ಬುಗತ್ತಲಾಗಿತ್ತು, ಮನೆಯಿಂದ ಹೊರದೂಡಲ್ಪಟ್ಟ ತಾನು ಇನ್ನು ಎಲ್ಲಿಗೆ ಹೋಗಬೇಕು? ಎಂದು ಯೋಚಿಸುತ್ತಾ ತನ್ನ ಮನೆಯ ಬೀದಿಯಿಂದ ಹೊರಟು ಹೋದನು.

'ದಿಕ್ಕಿಲ್ಲದವರಿಗೆ ದೇವರೇಗತಿ' ಎಂಬ ನಾಣ್ಣುಡಿಯಂತೆ, ಅಲ್ಲಿಯ ಶ್ರೀ ಬಸವಣ್ಣದೇವರ ಗುಡಿಯೇ ಅವನಿಗೆ ಆಶ್ರಯ ಸ್ಥಾನವಾಯಿತು. ಆಗ ರಾತ್ರಿಯ ಸಮಯವಾದ್ದರಿಂದ ಗುಡಿಯಲ್ಲಿ ಕತ್ತಲು ಕವಿದಿದೆ. ಇದೊಂದು ವೀರಯ್ಯನಿಗೆ ಅನುಕೂಲವೇ ಆಯಿತು. ಏಕೆಂದರೆ, ಅವನಿಗೆ ನಿರ್ಜನವಾದ ಪ್ರಶಾಂತ ವಾತಾವರಣದಲ್ಲಿ ವಿಶ್ರಾಂತಿ ಬೇಕಾಗಿತ್ತು,

ಅವನೇನೋ ಗುಡಿಯಲ್ಲಿ ಹೋಗಿ ಕುಳಿತ ಆದರೆ, ಬಡಿಗೆಯ ಹೊಡೆತದ ಬೇನೆಯಿಂದ ಕುಳಿತುಕೊಳ್ಳಲಿಕ್ಕೂ ಆಗಲಿಲ್ಲ, ಮಲಗಲು ಪ್ರಯತ್ನಿಸಿದ ಮಲಗಲಿಕ್ಕೂ ಬರಲಿಲ್ಲ, ಅಷ್ಟೊಂದು ಮೈಯಲ್ಲಿ ವಿಪರೀತ ವೇದನೆ ಹಾಗೂ ಘಾಯವಾಗಿತ್ತು,

**ಜ್ಞಾನೋದಯ :**

ಶ್ರೀ ಬಸವಣ್ಣ ದೇವರ ಗುಡಿಯಲ್ಲಿ ವೀರಯ್ಯ ಕುಳಿತುಕೊಳ್ಳಲಿಕ್ಕೂ ಆಗದೆ, ಮಲಗಿಕೊಳ್ಳಲಿಕ್ಕೂ ಆಗದೇ ಉಭಯ ಸಂಕಟದಿಂದ ಪರಿತಪಿಸುತ್ತಿರುವಾಗ ಅವನಿಗೆ ಬೈರಾಗಿಯ ಚರ್ಯೆ ಹಾಗೂ ಅವನ ಮುಖತೇಜ, ಒಟಗುಡುತ್ತಿರುವ ಮಾತು.

ಅರ್ಥವಾಗದ ಹಾವಭಾವಗಳಿಂದ ಮಾಡಿದ ಸೂಚನೆಗಳು ಮುಂತಾದವುಗಳು ಕಣ್ಣು ಮುಂದೆ ಹಾಯಹತ್ತಿದವು. ತಲೆಯಲ್ಲಿ ಒಂದು ರೀತಿಯ ವಿಚಾರದ ಸುರಳಿ ಸುಳಿಯಹತ್ತಿತ್ತು.

ಅದನ್ನೇ ಮೆಲಕು ಹಾಕುತ್ತಾ ಗೋಡೆಗೆ ಆತು ಕುಳಿತು, ಕಣ್ಣು ಮುಚ್ಚಿದ. ಮಂಪರು ಬಂದಂತಾಗಿತ್ತು. ಈ ಶರೀರ ನೀನಲ್ಲ, ಇದು ಜಡವಾಗಿದೆ. ಚೇತನ ಸ್ವರೂಪನಾದ ನೀನು ಇದರಲ್ಲಿ ಇರುವದರಿಂದ ಇದು ಚೈತನ್ಯ ಯುಕ್ತವಾಗಿದೆ. ಮರಣ ಕಾಲದಲ್ಲಿ ಇದನ್ನು ನೀನು ಬಿಟ್ಟುಕೊಡಲೇ ಈ ದೇಹ ಹೆಣವಾಗಿ ಬೀಳುವದು.

ಜಡ, ಚೇತನ ಎರಡೂ ಹೇಗೆ ಒಂದಾಗುತ್ತವೆ? ಈ ಶರೀರದಿಂದ ನೀನು ಸಂಪೂರ್ಣವಾಗಿ ಭಿನ್ನನೇ ಇರುವಿ. ಮತ್ತು ಈ ದೇಹ ನಿನ್ನೊಡನೆ ಎಲ್ಲಾ ಕಾಲದಲ್ಲಿ ಇರುವದಿಲ್ಲ. ಏಕೆಂದರೆ, ನಿನಗೆ ಅವಸ್ಥೆಗಳು ಮೂರು – ಎಚ್ಚರ, ಸ್ವಪ್ನ, ಗಾಢನಿದ್ರೆ. ಈ ಮೂರು ಅವಸ್ಥೆಗಳಲ್ಲಿ ನಿನ್ನೊಡನೆ ಇದ್ದು ನಿನಗೆ ಸುಖ–ದುಃಖಗಳ ಅನುಭವ ಮಾಡಿಕೊಡುವ ಶರೀರಗಳೂ ಮೂರು. ಅವೇ ಸ್ಥೂಲ–ಸೂಕ್ಷ್ಮ–ಕಾರಣ ಶರೀರಗಳು.

ನಿನ್ನ ಎಚ್ಚರದ ಕಾಲದಲ್ಲಿ ನಿನ್ನೊಡನೆ ಇದ್ದು ನಿನಗೆ ಸುಖ–ದುಃಖಗಳ ಅನುಭವ ಮಾಡಿಕೊಡುವದೇ ಸ್ಥೂಲ ಶರೀರ. ಇದು ಪಂಚ ಭೌತಿಕವಾದ್ದರಿಂದ ಕಣ್ಣಿಗೆ ಕಾಣುತ್ತದೆ. ನೀನು ಮಲಗಿ ನಿದ್ರೆ ಹೋದಾಗ, ಸ್ವಪ್ನ ಬೀಳುತ್ತದೆ. ಆಗ ನಿನ್ನ ಎಚ್ಚರದ ಕಾಲದಲ್ಲಿಯ ಅತೃಪ್ತ ಕಾಮನೆಗಳನ್ನೆಲ್ಲ ನೀನು ಅನುಭವಿಸುವೆ. ಹೀಗೆ ನಿನ್ನ ಕಲ್ಪನಾಮಯ ಪ್ರಪಂಚದಲ್ಲಿಯೂ ನಿನಗೆ ಸುಖ–ದುಃಖಗಳ ಅನುಭವ ಮಾಡಿಕೊಡುವದೇ ಸೂಕ್ಷ್ಮ ಶರೀರ. ಇನ್ನು ನೀನು ಗಾಢ ನಿದ್ರೆಯಲ್ಲಿದ್ದಾಗ ನಿನಗೆ ಎಚ್ಚರ ಪ್ರಪಂಚವಾಗಲಿ, ಸ್ವಪ್ನ ಪ್ರಪಂಚವಾಗಲಿ ಇರುವದಿಲ್ಲ. ಮತ್ತು ಆಗಿನ ಸ್ಥೂಲ ಸೂಕ್ಷ್ಮ ಶರೀರಗಳೂ ಇರುವದಿಲ್ಲ. ನೀನು ತನಿ ನಿದ್ರೆಯಿಂದ ಎಚ್ಚತ್ತಾಗ, ನಿನಗೆ ಆನಂದದ ಅನುಭವ ಮಾತ್ರ ಆಗುತ್ತದೆ. ಇದಕ್ಕೆ ಕಾರಣವಾಗಿರುವದೇ ಕಾರಣ ಶರೀರ. ಹೀಗೆ ಮೂರು ಶರೀರಗಳು ಒಂದು ಅವಸ್ಥೆಯಲ್ಲಿ ಒಂದು ಇದ್ದಾಗ ಮತ್ತೊಂದು ಇರುವದಿಲ್ಲ. ಇದರಿಂದ ಈ ಮೂರು ಶರೀರಗಳು ನೀನಲ್ಲ.

ಇನ್ನು ಮೇಲೆ ಅನ್ನ–ಪ್ರಾಣ–ಮನಸ್ಸು–ಬುದ್ಧಿ–ಆನಂದ ಇವುಗಳನ್ನು ನೀನೇ ಎಂದು ಭಾವಿಸುವಿಯಾ? ಶಾಸ್ತ್ರದಲ್ಲಿ ಇವುಗಳನ್ನೇ ಪಂಚಕೋಶಗಳೆಂದು ಕರೆಯುವರು. ಖಡ್ಗವನ್ನೂ ಅದರ ಪರೆ ಮರೆ ಮಾಡಿರುವಂತೆ. ಇವು ಆತ್ಮನನ್ನು ಮರೆಮಾಡಿರುವವು.

ಮೊದಲನಯದೇ ಅನ್ನಮಯ ಕೋಶ ಜೀವಕೋಶ. ಅನ್ನದಿಂದಲೇ ಉದಿಸಿ, ಅನ್ನದಿಂದಲೇ ಬದುಕಿ, ಕೊನೆಗೆ ಅನ್ನ ಬೆಳೆಯುವ ಭೂಮಿಯಲ್ಲಿ ಅಂತ್ಯ

ಹೊಂದುವದರಿಂದ ನೀನು ಅನ್ನಮಯವೆಂದು ಭಾವಿಸಬಹುದು? ಆದರೆ, ಅದು ನೀನಲ್ಲ. ಯಾಕೆಂದರೆ, ಅನ್ನವು ಕೆಡುವದನ್ನು ನೋಡುತ್ತೇವೆ. ಅನ್ನದಿಂದಲೇ ಬೆಳೆದ ದೇಹ ನಾಶವಾಗುವದನ್ನು ನೋಡುತ್ತೇವೆ. ಯೋಗಿಗಳು ಅನ್ನವಿಲ್ಲದೇ ಬದುಕುವದಿಲ್ಲವೇ? ಈ ಎಲ್ಲ ಕಾರಣದಿಂದ ನೀನು ಸ್ಥೂಲ ಶರೀರವೇ ಆಗಿರುವ ಅನ್ನಮಯಕೋಶವಲ್ಲ.

ಹಾಗಾದರೆ ಪ್ರಾಣಮಯಕೋಶವಿರಬಹುದೆಂದು ಕೇಳಬಹುದು. ಅದೂ ಅಲ್ಲ, ಬದುಕಲು ಪ್ರಾಣ ಕಾರಣವಾಗಿರಬಹುದು ಅದು ಸ್ಥಿರವಲ್ಲ. ಆಯುಷ್ಯ ಮುಗಿಯುತ್ತಲೇ ತೂತು ಬಿದ್ದ ಕಮ್ಮಾರನ ತಿದಿಯಿಂದ ಗಾಳಿ ಹೊರಟು ಹೋಗುವಂತೆ ಪ್ರಾಣ ಹೋಗಿ ಬಿಡುವದು. ಕಾರಣ ಇದರಿಂದ ನೀನು ಪ್ರಾಣಮಯ ಕೋಶವಲ್ಲ.

ಬಹುಶಃ ಮನೋಮಯ ಕೋಶವೇ ನೀನೆಂದು ಭಾವಿಸಬಹುದು. ಆದರೆ ಈ ಮನಸ್ಸು ಸಂಕಲ್ಪ-ವಿಕಲ್ಪಗಳಿಂದ ಕೂಡಿಕೊಂಡು ಸುಖ-ದುಃಖಗಳನ್ನು ತಾನೇ ಕಲ್ಪಿಸುವದು. ಅವಸ್ಥಾತ್ರಯಗಳಲ್ಲಿಯ ಸುಷುಪ್ತಿಯಲ್ಲಿಯಂತೂ ಇದು ಇರುವುದೇ ಇಲ್ಲ. ಅಜ್ಞಾನಿಗಳು ಮನಬಂದಂತೆ ನಡೆಯುವದನ್ನು ಜ್ಞಾನಿಗಳು ಖಂಡಿಸುವದಿಲ್ಲವೆ? ಯೋಗಿಗಳ ಧ್ಯಾನಾವಸ್ಥೆಯಲ್ಲಿ ಈ ಮನವೇ ಲಯವಾಗುವದು. ಇದರಿಂದ ಈ ಮನೋಮಯಕೋಶವೂ ನೀನಲ್ಲ.

ಮತ್ತೆ ಬುದ್ಧಿ ಪ್ರಧಾನವಾದ ವಿಜ್ಞಾನಮಯ ಕೋಶ ನೀನೆಂದು ತಿಳಿದಿರುವೆಯಾ? ಬುದ್ಧಿ ಸ್ವತಂತ್ರವಲ್ಲ. ಸೂರ್ಯ ಕಿರಣದಿಂದ ಕನ್ನಡಿ ಪ್ರತಿ ಫಲಿಸುವಂತೆ ಆತ್ಮ ಪ್ರಕಾಶದಲ್ಲಿ ಬುದ್ಧಿ ಬೆಳಗುವದು ಇಂಥ ಜಢವಾದ ವಿಜ್ಞಾನಮಯ ಕೋಶ ಹೇಗೆ ನೀನಾಗುವೆ?

ಈ ಪ್ರಾಣಮಯ, ಮನೋಮಯ, ವಿಜ್ಞಾನಮಯ ಮೂರು ಕೋಶಗಳೇ ಸೂಕ್ಷ್ಮ ಶರೀರ. ಇನ್ನು ಕೊನೆಯದಾಗಿರುವದೇ ಆನಂದಮಯ ಕೋಶ ಇಲ್ಲಿ ಇರುವದೇ ಕಾರಣ ಶರೀರ. ಸುಷುಪ್ತಿ ಅವಸ್ಥೆಯಲ್ಲಿ ತಮೋಗುಣದಿಂದ ಆವರಿಸಲ್ಪಟ್ಟ ಪ್ರಾಜ್ಞ ಜೀವನು. ನಿದ್ರಾನಂದವನ್ನು ಅನುಭವಿಸುವನು. ಆದರೆ, ಅದು ವಿಷಯ ಬುದ್ಧಿರಹಿತ ನಿಜವಾದ ಆನಂದವಲ್ಲ. ಅದು ಕ್ಷಣಿಕ ಆನಂದ.

ಹೀಗೆ ನೀನು ಸ್ಥೂಲ, ಸೂಕ್ಷ್ಮ ಕಾರಣ ಶರೀರಗಳಿಗೆ ದೃಷ್ಟಾಂತ ಆಗಿರುವಂತೆ ಅವಸ್ಥಾತ್ರಯಗಳಿಗೆ ಸಾಕ್ಷಿಯಾಗಿರುವೆ. ಅದರಂತೆ, ಈ ಪಂಚಕೋಶಗಳಿಗೂ ವ್ಯತಿರಿಕ್ತನಾಗಿರುವೆ. 'ಈ ಶರೀರ ನಾನಲ್ಲವೆಂಬುದು ನಿಜ' ಹಾಗಾದರೆ ಈ ದೇಹ ಯಾತನೆ ನನ್ನನ್ನೇಕೆ ಬಾಧಿಸಿ ದುಃಖವನ್ನುಂಟುಮಾಡುವದು? ಎನ್ನುವ ವಿಚಾರ ಉಂಟಾಯಿತು. ದೇಹನಾನಲ್ಲ ಇದರ ಮೇಲಿನ ಅಭಿಮಾನಕ್ಕೆ ನನ್ನಲ್ಲಿಯ ಅಹಂಕಾರವೇ ಕಾರಣವಾಗಿದೆ. ಆದ್ದರಿಂದಲೇ ಈ ದೇಹದ ಮೇಲೆ ಇಷ್ಟೊಂದು

ಮಮಕಾರ, ಅಂತೆವೇ ಇಲ್ಲದ ದುಃಖಗಳು ಪ್ರಾಪ್ತವಾಗಿವೆ. ಇನ್ನು ಮುಂದೆ ಈ ಅಹಂಕಾರವನ್ನೇ ತೊರೆದು ಬಿಟ್ಟರೆ, ಈ ದೇಹಾಭಿಮಾನ ನಷ್ಟವಾಗುವದು. ಅಹಂಕಾರ ಅಜ್ಞಾನಕ್ಕೆ ಕಾರಣ, ನಿರಹಂಕಾರ ಜ್ಞಾನಕ್ಕೆ ನಾಂದಿ ಇದೇ ದುಃಖದಿಂದ ದೂರಾಗುವ ದಾರಿ. ಇದೇ ನನ್ನ ಆನಂದಮಯವಾದ ಸ್ವಸ್ವರೂಪ ಸ್ಥಿತಿ.

ದೇಹಮೋಹ ತ್ಯಾಗವೇ ಮನಸ್ಸು ಆತ್ಮನಿಷ್ಠವಾಗಲು ತಳಹದಿ. ಇದನ್ನು ಪಡೆಯಲು ದೇಹ ಭಿನ್ನ ಶರೀರದಂತೆ ಕಾಣಬೇಕು. ಆಗ ವಿಷಯಾದಿಗಳ ಸೆಳೆತವಾಗಲಿ, ಅರಿಷಡ್ವರ್ಗಗಳ ಪ್ರಭಾವವಾಗಲಿ ಆಗದು. ತೆರೆಗಳಿಲ್ಲದ ಪ್ರಶಾಂತ ಸಮುದ್ರನಂತಾಗುವೆ. ತಕ್ಷಣವೇ ಮಂಪರದಿಂದ ಗಾಭರಿಯಾಗಿ ಎಚ್ಚೆತ್ತು ತಲೆಯಲ್ಲಿಯ ವಿಚಾರಗಳ ಪ್ರಭಾವದಿಂದ ಯಾವದು ಹೌದು ಅದು ಅಲ್ಲ; ಯಾವುದು ಅಲ್ಲ ಅದು ಹೌದು; ಎಂಬ ಅನುಭವ ವಾಣಿ ಉಗ್ಗಡಿಸಹತ್ತಿತ್ತು. ಮಹಾಮಂತ್ರದಂತೆ ಹೊರಬಂದ ಈ ಎರಡು ಶಬ್ದಗಳು ವೇದೊಪನಿಷತ್ತುಗಳ ಮಂತ್ರದಂತೆ ಹೊರಹೊಮ್ಮಿತು.

ಈಗ ಅವನು ಚನ್ನಯ್ಯನ ಮಗ ವೀರಯ್ಯನಾಗಿ ಉಳಿದಿರಲಿಲ್ಲ, ಅವನು ಆತ್ಮಜ್ಞಾನಿಯಾಗಿದ್ದ, ಅವನ ಮುಖದಲ್ಲಿ ಯೋಗಿಯ ತೇಜಸ್ಸು ಮಿನುಗಹತ್ತಿತ್ತು, ಕಣ್ಣಿನಲ್ಲಿ ಪ್ರಖರ ಜ್ಯೋತಿಮೂಡಹತ್ತಿತು. ಇಡೀ ವಾತಾವರಣದಲ್ಲಿ ಪವಿತ್ರ ಆತ್ಮಾನುಭವದ ಹೊನಲು ಹರಿಯಹತ್ತಿತು. ವೀರಯ್ಯನಿಗೆ ಅಂತರಾತ್ಮನಿಂದ ಜ್ಞಾನೋದಯವಾಗಿ ಅಜ್ಞಾನದ ಅಂಧಃಕಾರ ತೊಲಗಿ, ಯಾವುದೋ ಅವ್ಯಕ್ತ ಶಕ್ತಿ ತನ್ನೊಳಗೆ ಪ್ರವಹಿಸಿದಂತಾಗಿ ಅನುಭವವಾಯಿತು. ಈ ಜಗತ್ತು 'ಸರ್ವಂ ಖಲ್ವಿದಂ ಬ್ರಹ್ಮಂ' ಎಂಬ ಬ್ರಹ್ಮಸ್ವರೂಪದ ಭಾವ ಅವನಲ್ಲಿ ಮೂಡಿತ್ತು.

ಸ್ಥಿತಪ್ರಜ್ಞ:

ಗುಡಿಯಿಂದ ಹೊರಬಂದ ವೀರಯ್ಯ ಊರು ಬಿಟ್ಟು, ಅಡವಿ ಸೇರಿದ. ಮತ್ತೆ ಬದುಕಿರುವವರೆಗೆ ಪುನಃ ಊರಲ್ಲಿ ಬರಲಿಲ್ಲ. ಅಡವಿಯೊಳಗಿನ ತರು–ಲತಾದಿಗಳೇ ಆತನಿಗೆ ನಿತ್ಯ ಆಹಾರವಾದವು. ಪ್ರಾರಬ್ಧಯೋಗ ಮುಗಿಯುವವರೆಗೆ ಹೇಗಾದರೂ ಮಾಡಿ ದೇಹ ಧಾರಣೆ ಮಾಡಲೇಬೇಕಲ್ಲವೆ?

ಶರೀರ ಬಂದದ್ದೇ ತನ್ನ ಪೂರ್ವಜನ್ಮಕೃತ ಕರ್ಮ ಫಲಗಳನ್ನು ಅನುಭವಿಸಲು ಆದ್ದರಿಂದಲೇ, ಇದಕ್ಕೆ 'ಭೋಗಾಯತನ' ಎಂಬ ಹೆಸರು ಬಂದಿದೆ. ಕರ್ಮಕ್ಷಯವಾಗುವ ವರೆಗೆ ದೇಹಾಂತರ ಅನಿವಾರ್ಯ, ಕಾರಣ ಮಹಾಂತ ಶಿವಯೋಗಿಗಳು ಹಿಂದಿನ 'ಪುಣ್ಯವನ್ನು ಇಂದುಂಡುಣಬೇಕಾತ್ಮಾ ಇಂದಿನ ಪುಣ್ಯವನು ಮುಂದುಂಡುಣಬೇಕಾತ್ಮಾ' ಎಂದು ಹೇಳಿರುವರು.

ಅಡವಿಯ ಏಕಾಂತ ಜೀವನ ಅವನು ಇನ್ನಷ್ಟು ಅಂತರ್ಮುಖನಾಗಲು ಕಾರಣವಾಯಿತು. ಅವನಲ್ಲಿ ಸರ್ವತ್ರ ಆತ್ಮಭಾವ ಬಂದುದರಿಂದ ಉಚ್ಚ

ನೀಚ–ಎಂಬ ಭೇದವಾಗಲಿ, ಬೇಕು ಬೇಡೆಂಬ ಇಚ್ಛೆಗಳಾಗಲಿ ಅಳಿದು. ಅವನು ಸಂಪೂರ್ಣ ನಿಶ್ಚಲ ಪುರುಷನಾಗಿ ಬಿಟ್ಟ.

ಒಂದು ಮಧ್ಯಾಹ್ನ ಉರಿಬಿಸಿಲು ಸುರಿಯುತ್ತಿತ್ತು, ಆಗ ವೀರಯ್ಯ ಊರ ಮುಂದೆ ಹಾದು ಹಿರೇಕೆರೆ ಕಡೆಗೆ ಹೊರಟಿದ್ದ. ಊರ ಮುಂದಿರುವ ಗಿಡದ ನೆರಳಿನಲ್ಲಿ ಬೈಲು ಗಮ್ಮಾರರು ಬೀಡು ಬಿಟ್ಟಿದ್ದರು. ಅವರೆಲ್ಲ ಊಟಕ್ಕೆ ಕುಳಿತಿದ್ದರು. ವೀರಯ್ಯ ಬಂದುದನ್ನು ಕಂಡು, 'ಉಣ್ಣಾಕ ಬಾರಪ್ಪಾ' ಎಂದು ಒಬ್ಬ ಕರೆದ. ತಕ್ಷಣವೇ ವಿಧಿನಿಷೇಧಗಳನ್ನೇ ಕಳೆದುಕೊಂಡಿದ್ದ ವೀರಯ್ಯ ಎಷ್ಟೂ ಅನುಮಾನಿಸದೇ ಅವರಲ್ಲಿಗೆ ಹೋಗಿ ಊಟಕ್ಕೆ ಕುಳಿತುಬಿಟ್ಟ.

ಈ ಘಟನೆಯನ್ನು ನೋಡಿ ಊರ ಜನರು ಜಂಗಮಜಾತಿ ವೀರಯ್ಯ ಬೈಲು ಗಮ್ಮಾರರ ಮಾಂಸಾಹಾರ ಊಟ ಮಾಡಿ ಕುಲಗೆಟ್ಟನೆಂದು ಚೀರುತ್ತಾ ಕೂಗಹತ್ತಿದರು. ಆಗ ಅಲ್ಲಿದ್ದ ಊರಲ್ಲಿ ಕೆಲವರು, ಊಟಕ್ಕೆ ಕುಳಿತ ವೀರಯ್ಯನನ್ನು ಹಿಡಿದೆಳೆದು ನೆಲಕ್ಕೆ ಕೆಡವಿ ಮನಬಂದಂತೆ, ಜಡಿಮಳೆ ಹೊಡೆದಂತೆ ಬಡಿಯ ಹತ್ತಿದರು.

ವೀರಯ್ಯ ಇದರಿಂದ ಖಿನ್ನನಾಗಲಿಲ್ಲ. ಸಾವರಿಸಿಕೊಂಡು ಎದ್ದು ಹೊರಡ ಬೇಕೆನ್ನುವಾಗ, ಅವನ ದುರ್ವಿಧಿಯೇ ಎದುರಾದಂತೆ ಅವನ ಚಿಕ್ಕಪ್ಪ ಬಡಗೌಡನೇ ಹುಡುಕಿಕೊಂಡು ಅಲ್ಲಿಗೇ ಬಂದುಬಿಟ್ಟರು. ಬಡಗೌಡನಿಗೆ ಅಲ್ಲಿಯವರು ವೀರಯ್ಯ ಬೈಲುಗಮ್ಮಾರರಲ್ಲಿ ಊಟಮಾಡಿದ್ದು. ನಾಮುಂದ, ನೀಮುಂದು ಎಂದು ಜೋರಾಗಿ ಧ್ವನಿಗೈದು ಹೇಳಹತ್ತಿದರು.

ಇದನ್ನು ಕೇಳಿದ ಬಡಗೌಡನಿಗೆ ಈ ಜಾತಿಸಂಕರ ಭೋಜನ ಸುದ್ದಿ ತಡೆದುಕೊಳ್ಳಲಿಕ್ಕೆ ಆಗಲಿಲ್ಲ. ಏಕೆಂದರೆ, ಅದು ಸಂಪ್ರದಾಯದ ಕಾಲ. ಮಡಿ–ಹುಡಿಯ ಆಚರಣೆ ಸಮಾಜದಲ್ಲಿ ಆದರದಿಂದ ಆಚರಿಸಲ್ಪಡುತ್ತಿದ್ದವು. ಕಾರಣ ಅವನಿಗೆ ಶೀಘ್ರ ಕೋಪ ಬಂತು. ಅವನು ಗಳೇ ಅಲ್ಲಿಯೇ ನಿಲ್ಲಿಸಿ, ಎತ್ತಿನ ಹಗ್ಗ ಬಿಚ್ಚಿ, ಹಲ್ಲು ಕುಡಿಯುತ್ತಾ ವೀರಯ್ಯನಿರುವಲ್ಲಿಗೆ ಬಂದು. ಅವನ ಚಂಡುಹಿಡಿದು ನೆಲಕ್ಕೆ ಕೆಡವಿ, ಹೆಡಮುರಿಗೆ ಕಟ್ಟಿ, ತನ್ನ ಹೆಗಲ ಮೇಲೆ ಇದ್ದ ಬಾರಕೋಲಿನಿಂದ ಮನಬಂದಂತೆ ಹೊಡೆಯತೊಡಗಿದ. ವೀರಯ್ಯನ ಮೈಮೇಲೆ ಇದ್ದ ಬಾರಕೋಲಿನ ಕುಡಿಚಟ್ಟನ ಹೊಡೆತದಿಂದ ಅಲ್ಲಲ್ಲಿ ಗಾಯವಾಗಿ ಹುಳಿರಕ್ತ ಬರಹತ್ತಿತ್ತು, ನಂತರ ತನಗೇ ಸಾಕಾಗಿ ಎಡಗಾಲಿನಿಂದ ಒದ್ದು ಹಾಳಾಗಿ ಹೋಗು ಎಂದು ಅನ್ನುತ್ತಾ ಎತ್ತುಗಳನ್ನು ಹೊಡಕೊಂಡು ಮನೆ ಸೇರಿದನು. ಹೀಗೆ ಬಡಗೌಡ ಹೋದಮೇಲೆ ವೀರಯ್ಯನ ಹೆತ್ತ ತಾಯಿ ಕಲ್ಯಾಣಮ್ಮ ಈ ಸುದ್ದಿಕೇಳಿ ಎದೆ ಎದೆ ಬಡಿದುಕೊಂಡು ಅಳುತ್ತಾ ಮಗನಿದ್ದಲ್ಲಿಗೆ ಬಂದು ಅವನಿಗೆ ಕಟ್ಟಿದ ಹಗ್ಗವನ್ನು ಬಿಚ್ಚಿ ಎಬ್ಬಿಸಿ, ಕುಳ್ಳಿರಿಸಿ ''ಮಗನೆ ಇಷ್ಟೆಲ್ಲ ಅನುಭವಿಸುವದು ನಿನ್ನ ಹಣೆ ಬರಹದಲ್ಲಿ ಬರೆದಿದೆಯೆ? ಅಯ್ಯೋ

ಶಿವನೆ ನಿನಗೆ ಇನ್ನಾದರೂ ದಯ ಬರಲೊಲ್ಲದೆ'' ಎಂದು ಹೇಳಿ ಮಗನಿಗೆ ಮನೆಗೆ ಬರಲು ಅವನ ಕೈ ಹಿಡಿದು ಎಳೆಯಹತ್ತಿದಳು. ಆದರೆ ವೀರಯ್ಯ ಮೃದುವಾಗಿ ತನ್ನ ಕೈಯನ್ನು ಬಿಡಿಸಿಕೊಂಡು ಪುನಃ ಆಕೆಯ ಕಡೆಗೆ ಹೊರಳಿ ನೋಡದೇ, ತನಗೆ ಏನೂ ಆಗಿಲ್ಲವೆಂಬಂತೆ ಅಡವಿ ದಾರಿ ಹಿಡಿದುಬಿಟ್ಟ.

> ದುಃಖೇಷು ದ್ವಿಗ್ನಮನಾ : ಸುಖೇಷು ವಿಗತಸ್ಪೃಹ ।
> ವೀತರಾಗ ಭಯಕ್ರೋಧ : ಸ್ಥಿತಧೀರ್ಮುನಿರುಚ್ಯತೆ ॥

ಭಗವದ್ಗೀತೆಯಲ್ಲಿ ಹೇಳಿರುವ ವಾಕ್ಯದಂತೆ ದುಃಖದಲ್ಲಿ ಉದ್ವೇಗವಿಲ್ಲ. ಸುಖದಲ್ಲಿ ಆಸೆ ಇಲ್ಲ, ಆಸ್ತಿ, ಭಯ, ಕ್ರೋಧ ಇವುಗಳಂತೂ ಇಲ್ಲವೇ ಇಲ್ಲ. ಇದೇ ಸ್ಥಿತಪ್ರಜ್ಞನ ಲಕ್ಷಣ.

ಬಡಗೌಡನ ಬಡಿತದಿಂದ ಭವದಹಂಗು ಹರಿದು ಭಗವಂತನ ಹಂಗಿಗೆ ಒಳಗಾಗಿದ್ದ ಅವನ ಕಡೆಯತನ 'ಬಡವಾ, ಬಡವಾ' ಎನ್ನುತ್ತ ಆ ಪ್ರಸಂಗವನ್ನು ಆತನು ಜೀವನ ಪರ್ಯಂತ ಮರೆಯಲಿಲ್ಲ.

**ಸರ್ವಾತ್ಮ ಭಾವ :**

ಕೋಡಿಕೊಪ್ಪದ ಉತ್ತರ ದಿಕ್ಕಿನಲ್ಲಿ ಹಳೆಯ ಕಾಲದ ನೂರಾರು ಹುಣಸೆ ತೋಪು ಇದೆ. ನಡು ಹಗಲಿನಲ್ಲಿಯೂ ಕೂಡಾ ಅಲ್ಲಿ ಕಾರ್ಗತ್ತಲೆ ವಾತಾವರಣ ಇರುತ್ತದೆ. ಇದರಿಂದಲಿದೊಂದು ಭಯಾನಕ ಪ್ರದೇಶ. ಶ್ರೀ ವೀರಯ್ಯನಿಗೆ ಇದೇ ವಿಹಾರ ಹಾಗೂ ವಾಸಸ್ಥಾನವಾಯಿತು.

ನರೇಗಲ್ಲ ಹರಿಜನರು ಸತ್ತ ದನಗಳನ್ನು ಕೊಯ್ಯಲಿಕ್ಕೆ ಇಲ್ಲಿಗೆ ಬರುವದು ರೂಢಿ. ಹಾಗೆ ದನಗಳನ್ನು ಸುಲಿದಾದ ಮೇಲೆ ಮಾಂಸದ ಆಸೆಗಾಗಿ ಹದ್ದು–ಕಾಗೆ–ನಾಯಿ ಮುಂತಾದ ಪ್ರಾಣಿಗಳು ಅಲ್ಲಿಗೆ ಹಿಂಡು ಕಚ್ಚಿಕೊಂಡು ಬರುವದು ಸಹಜವಾಗಿತ್ತು. ಈ ಹಿಂಡಿನಲ್ಲಿ ನಮ್ಮ ವೀರಯ್ಯನೂ ಒಬ್ಬನಾಗಿಬಿಟ್ಟ. ಅಲ್ಲಿ ಕೂಡಿದ ಪ್ರಾಣಿಗಳೊಡನೆ ವೀರಯ್ಯನು ಸತ್ತ ದನಗಳ ಹಸಿ ಮಾಂಸವನ್ನು ತಿನ್ನುತ್ತಿದ್ದ 'ಮಾಂಸ ಮತ್ತು ಅನ್ನ' ಇವುಗಳಲ್ಲಿ ಅವನಿಗೆ ಯಾವ ಭೇದವೂ ಉಳಿದಿರಲಿಲ್ಲ. ಒಟ್ಟಿನ ಮೇಲೆ ಅದು ಅವನ ದೈಹಿಕ ಹಸಿವು ಹಿಂಗಿಸುವ ಒಂದು ವಸ್ತು ಮಾತ್ರವಾಗಿತ್ತು.

ಒಮ್ಮೆ ಬ್ರಹ್ಮರ್ಷಿಸ್ಥಾನವನ್ನು ಪಡೆದ ವಿಶ್ವಾಮಿತ್ರರೂ ಕೂಡಾ ಒಂದು ಸಂದರ್ಭದಲ್ಲಿ ತಮ್ಮ ಹಸಿವೆ ಹಿಂಗಿಸಲು ಸತ್ತನಾಯಿಯ ಮಾಂಸವನ್ನೇ ಭಕ್ಷಿಸಿದ್ದೂ ಚರಿತ್ರೆಯಲ್ಲಿ ಬರುತ್ತದೆ. ಇದರಿಂದ ಬ್ರಹ್ಮಜ್ಞಾನಿಯಾದ ವೀರಯ್ಯನು ಇದೇ ಭಾವಾವಸ್ಥೆಯಲ್ಲಿ ಬಂದುದಕ್ಕೆ ಯಾವ ಲೋಪವು ಬರಲಾರದೆಂದು ಭಾವಿಸಬಹುದು. ವೀರಯ್ಯನಿಗೆ ತಾನು ''ವೀರಯ್ಯ'' ಎಂಬ ಭಾವನೆ ಇದ್ದರಲ್ಲವೇ ಆತನಿಗೆ ನಿಷೇಧ ? ತನ್ನೊಡನೆ ಭಕ್ಷಿಸುತ್ತಿರುವ ಹದ್ದು, ಕಾಗೆ, ನರಿ, ನಾಯಿ

ಮೊದಲಾದವುಗಳಲ್ಲಿಯೂ ಕೂಡಾ ಅವನಿಗೆ ಅದೇ ಬ್ರಹ್ಮಭಾವನೆ ಪ್ರಾಪ್ತವಾಗಿದ್ದು ಅರ್ಥವಾಗುತ್ತದೆ. ಇದನ್ನೇ ಭಗವದ್ಗೀತೆ.

> ವಿದ್ಯಾವಿನಯ ಸಂಪನ್ನೇ ಬ್ರಹ್ಮಣೇಗವಿ ಹಸ್ತಿನಿ ।
> ಶುನಿ ಚೈವ ಶ್ವಪಾಕೇಚ ಪಂಡಿತಾಃ ಸಮದರ್ಶಿನಃ ॥

ಎಂದು ಹೇಳಿದೆ ನರೇಗಲ್ಲ ಕೇರಿಯ ಜನರು ಸತ್ತ ದನ ಹೊರಲು ವೀರಯ್ಯನನ್ನು ಬಿಟ್ಟೀ ಹಿಡಿಯುತ್ತಿದ್ದರು. ವೀರಯ್ಯ ಯಾವ ಸಂಕೋಚವಿಲ್ಲದೆ ಕೇರಿಯಲ್ಲಿ ಇರಹತ್ತಿದ. ಹೀಗೆ ''ವೀರಯ್ಯ ಹೊಲಗೇರಿ ಸೇರಿದ'' ಎಂದು ಊರಿನ ಜನರಲ್ಲಿ ಹಬ್ಬಿತು. ಆದರೆ ವೀರಯ್ಯ ದಿನೇ ದಿನೇ ಅಂತಮುರ್ಖಿಯಾಗಿ ಸರ್ವಾತ್ಮಭಾವ ಬೆಳೆಯ ಹತ್ತಿದ್ದರಿಂದ ಸರ್ವರಲ್ಲಿಯೂ ಏಕೋಭಾವ ತಾಳಿದ. ಉಚ್ಚ–ನೀಚ, ಮಡಿ–ಮೈಲಿಗೆ, ಊರು–ಕೇರಿ ಮುಂತಾದವೆಲ್ಲವನ್ನೂ ದೂರಿರಿಸಿಬಿಟ್ಟ. ಕೇರಿಯ ಜನರು ಊರ ಜನರಿಗೆ ಈ ಪ್ರಸಂಗದಿಂದ ತಮಗೆ ಆಪತ್ತು ಬರಬಹುದೆಂದು ವೀರಯ್ಯನನ್ನೂ ಬೆದರಿಸಿ ತಮ್ಮ ಕೇರಿಯಿಂದ ಹೋರದೂಡಿ ಬಿಟ್ಟರು.

**ಭಿಕ್ಷಾಟನೆ :**

ನರೇಗಲ್ಲಿಂದ ಕೋಡಿಕೊಪ್ಪಕ್ಕೆ ಹೋಗುವ ಮಾರ್ಗದಲ್ಲಿ ಬಲಗಡೆಯ ಹೊಲದ ಸಮೀಪದಲ್ಲಿಯೇ ಒಂದು ಚಿಕ್ಕದಾದ ಪುರಾತನ ಶಿವಾಲಯವಿದೆ. ಅದಕ್ಕೆ ಚಂದ್ರ ಶಾಲೆ ಎನ್ನುವ ವಾಡಿಕೆಯ ಹೆಸರು. ನರೇಗಲ್ಲ ಕೇರಿಯಿಂದ ಹೊರಬಿದ್ದ ವೀರಯ್ಯ ನೇರವಾಗಿ ಇಲ್ಲಿಗೆ ಬಂದು ಬೀಡು ಬಿಟ್ಟ.

ಸ್ಮಶಾನದಿಂದ ಆರಿಸಿ ತಂದ ಕಟ್ಟಿಗೆಗಳಿಂದ ಬೆಂಕಿಮಾಡಿ ರಾತ್ರಿ ಎಲ್ಲಾ ಅದರ ಮುಂದೆ ಕೂಡ್ರುವದು ನಿತ್ಯದ ಮಾತಾಯಿತು. ಇದನ್ನೂ ದೂರದಿಂದ ನೋಡಿದ ಪುಕ್ಕ ಜನರು ಕೊಳ್ಳೀದೆವ್ವವೊ ಏನೋ ಎಂದು ಅಂದು ಕೊಳ್ಳುತ್ತಿದ್ದರು.

ವೀರಯ್ಯನು ಈಗ ಭಿಕ್ಷಾಟನೆಯನ್ನೇ ಅವಲಂಬಿಸಿದ್ದ. ಭಿಕ್ಷೆ ಅಹಂಕಾರ ನಿರಸನಕ್ಕಿರುವ ಉಪಾಯಗಳಲ್ಲಿ ಅತಿಮುಖ್ಯವಾದುದು. ಇಲ್ಲಿ ಅಹಂ ಕರ್ತೃತ್ವಾಭಿ ಮಾನಕ್ಕೆ ಅಸ್ಪದವಿಲ್ಲ. ಅನುಭಾವದ ಅತ್ಯುನ್ನತ ಸ್ಥಿತಿಗೇರಿದ ಶ್ರೀ ಅಕ್ಕಮಹಾದೇವಿ ತಿರಿದುಣ್ಣುವಂತೆ ಮಾಡು ಎಂದು ಶ್ರೀ ಚೆನ್ನಮಲ್ಲಿಕಾರ್ಜುನನಲ್ಲಿ ಬೇಡಿಕೊಂಡಿದ್ದಾಳೆ.

ಮತಾಚರಣೆಯಲ್ಲಿ ಗುರು ಹಾಗೂ ಜಂಗಮರಿಗೆ ಭಿಕ್ಷವೃತ್ತಿಯೇ ವಿಧಿಸಲ್ಪಟ್ಟಿದೆ. ವಿದ್ಯಾರ್ಥಿಗಳು 'ಮಧುಕರಿ' ಎಂದು ಭಿಕ್ಷಾವೃತ್ತಿಯನ್ನು ಅನುಸರಿಸಬೇಕೆಂದು ವಿಧಿಸಲ್ಪಟ್ಟಿದೆ. ಹೂವಿನಲ್ಲಿರುವ ಮಧುವನ್ನು ಅದಕ್ಕೆ ನೋವಾಗದಂತೆ ಹೀರಿಕೊಂಡು ಮಧುವನ್ನು ಸಂಗ್ರಹಿಸುವ ಜೇನು ನೊಣದಂತೆ ಇರುವದೇ ಮಧುಕರಿ ಭಿಕ್ಷೆ, ವೈರಾಗ್ಯ ಭಾವದಲ್ಲಿರುವ ಸಾಧು, ಸಂತ, ಸನ್ಯಾಸಿಗಳು ಈ ಭಿಕ್ಷಾವೃತ್ತಿಯನ್ನೇ ಅವಲಂಬಿಸಬೇಕೆಂದು ಸಂಪ್ರದಾಯ ಬಹಳ ದಿವಸಗಳಿಂದಲೂ ಸಾಗಿ ಬಂದಿದೆ.

ಜಗದೊಡೆಯನಾದ ಪರಶಿವನ ಪಂಚವಿಂಶತಿ ಲೀಲೆಗಳಲ್ಲಿ ಭಿಕ್ಷಾಟನೆ ಲೀಲೆಯೂ ಒಂದಾಗಿದೆ ಎಂದು ಪುರಾಣ ಪ್ರಸಿದ್ಧವಾಗಿದೆ.

ಭಿಕ್ಷಾವೃತ್ತಿಯಲ್ಲಿರುವವರಲ್ಲಿ ಕೇವಲ ಅಹಂಕಾರ ಮಾತ್ರ ನಿರಸನವಾಗುವದಿಲ್ಲ, ಅಲ್ಲಿ ಆಶೆ–ಆಕಾಂಕ್ಷೆ, ಆಶೆ–ಆಮಿಷಗಳೂ ದೂರಾಗಿ ಶಾಂತಿ ಸಹನೆಗಳು ಉಂಟಾಗುತ್ತವೆ. ಭಿಕ್ಷೆಯ ಉದ್ದೇಶ ಆತ್ಮ ಚಿಂತನೆಯೇ ಹೊರತು ಹೊಟ್ಟೆ ಹೊರಯುವದಕ್ಕಲ್ಲ. ಹೀಗೆ ವೀರಯ್ಯ ಬಿಕ್ಷೆಗಾಗಿ ನರೇಗಲ್ಲ ಗ್ರಾಮಕ್ಕೆ ಹೋಗಿ ಒಂದು ಹಾಳುದೇಗುಲದಲ್ಲಿ ಇರುತ್ತಿದ್ದ. ಕೆಲವು ದಿವಸಗಳ ಮೇಲೆ ದೇವಾಲಯವಿದ್ದ ಮಾಲಿಕನು ವೀರಯ್ಯನನ್ನೂ ಅಲ್ಲಿಂದ ಹೊರಗಟ್ಟಿದನು.

**ಹುಚ್ಚನಾಗಿ ಕಂಡದ್ದು :**

ಚಂದ್ರಶಾಲೆಯಿಂದ ಹೊರಬಿದ್ದ ವೀರಯ್ಯ ರಸ್ತೆಯ ಹತ್ತಿರ ಹಿರೇಕೆರೆಯ ದಂಡೆಯ ಮೇಲೆ ಬೆಳೆದಿದ್ದ ಒಂದು ಜಾಲಿಯ ಮರವನ್ನು ಆಶ್ರಯಿಸಿದ, ಅವನದಾದ ವಸ್ತುಗಳೆಂದರೆ ಮಣ್ಣಿನ ಒಂದು ಮಗಿ ಹಾಗೂ ಒಂದು ಪರಿಯಾಣ ಮಾತ್ರ.

ಜಾಲಿಯಗಿಡ ನೆರಳುಕೊಡುವ ಮರವಲ್ಲವೆಂದು ಹೇಳಬೇಕಾಗಿಲ್ಲ. ಮುಳ್ಳು ತುಂಬಾ ಬಿದ್ದಿದೆ. ಕೂಡ್ರಲು ಸ್ಥಳವಿಲ್ಲದಷ್ಟು ಮುಳ್ಳು. ಆದರೂ ಅಲ್ಲಿಯೇ ಈತನ ಠಿಕಾಣಿ ಆಯಿತು. ಗಿಡ ಸ್ವಲ್ಪ ಡೊಂಕಾಗಿತ್ತು. ಈ ಡೊಂಕು ಅಜ್ಜನ ಜೀವನದ ಡೊಂಕಿನ ಪ್ರತಿಬಿಂಬವೇನೋ ಅಥವಾ ಲೋಕದ ಡೊಂಕು ತಿದ್ದಲು ಅಥವಾ ತೋರಿಸಲು ಈ ಮಹಾತ್ಮನ ಧ್ಯೇಯ ಸೂಚಕವೊ ಎನ್ನುವಂತೆ ಭಾಸವಾಗುತ್ತಿತ್ತು ಆ ಡೊಂಕು.

ಈ ಗಿಡದ ಕೆಳಗೆ ಕುಳಿತಾಗ ದಾರಿಯಲ್ಲಿ ಹೋಗಿಬರುವ ಸಂಚಾರಿಗಳು, ಶಾಲೆಗೆ ಹೋಗುವ, ದನ–ಕರು ಕಾಯುವ ಹುಡುಗರು ವೀರಯ್ಯನನ್ನೇ ನೋಡುತ್ತಿದ್ದರು. ದಿನೇ ದಿನೇ ಆತನ ಶರೀರ ಬದಲಾಗುತ್ತ ಹೋಯಿತು. ಒಂದು ವಿಕೃತ ರೂಪಕ್ಕೆ ಪರಿವರ್ತಿತವಾಯಿತು. ಮುಖದ ಮೇಲೆ ದಟ್ಟವಾದ ಗಡ್ಡ, ಬೆಳೆದ ಮೀಸೆ, ಮೈಮೇಲೆ ಮಸ್ತಕದ ಮೇಲೆ ಸ್ಮಶಾನದ ಮಾಸಿದ ಅರಿವೆಗಳು, ಆತನು ನೇರವಾಗಿ ಯಾರನ್ನೂ ನೋಡುತ್ತಿರಲಿಲ್ಲ, ಎಲ್ಲಿಯೋ ಅವನ ದೃಷ್ಟಿ, ಎಲ್ಲಿಯೋ ಅವನ ಲಕ್ಷ್ಯ. ಯಾರು ಏನು ಕೇಳಿದರೂ ಅವನಿಂದ ಅವರಿಗೆ ನೇರ ಉತ್ತರ ಬರುತ್ತಿರಲಿಲ್ಲ, ತನ್ನಷ್ಟಕ್ಕೆ ತಾನೇ ಏನೇನೋ ಗೊಣಗುವದೊಂದೇ ಅವನ ಚರ್ಯೆಯಾಗಿತ್ತು, ಬಹುಶಃ ಅದು ಆತನಿಗೆ ಅಂತರಾತ್ಮದ ಅನುಸಂಧಾನಯೋಗದ ಘಟನೆಯಾಗಿರಬಹುದು.

ಅಲೌಕಿಕ ಚಟುವಟಿಕೆಗಳಿಂದ ಜನರ ದೃಷ್ಟಿಯಿಂದ ಆತನೊಬ್ಬ ಹುಚ್ಚನಂತಾಗಿ ತೋರಹತ್ತಿದ್ದ. ಲೌಕಿಕರ ದೃಷ್ಟಿಯಲ್ಲಿ ಆತ್ಮಜ್ಞಾನಿಗಳು ಹುಚ್ಚರಾಗಿಯೋ ನಿರುಪಯೋಗಿ ವ್ಯಕ್ತಿಗಳಾಗಿಯೋ, ಕಾಣುವದು ಸ್ವಾಭಾವಿಕ. ಚಳ್ಳಗುರ್ಕಿ ಎರ್ರಿ ತಾತನವರು,

ಕಮತಗಿ ಶ್ರೀ ಹುಚ್ಚಪ್ಪಯ್ಯನವರು, ಎಮ್ಮಿಗನೂರ ಜಡಿಸಿದ್ಧರು, ನವಲಗುಂದ ಶ್ರೀ ನಾಗಲಿಂಗಪ್ಪನವರು ಮುಂತಾದವರು ಇದೇ ಪಂಕ್ತಿಯಲ್ಲಿದ್ದುದನ್ನು ನಾವು ನೋಡುತ್ತೇವೆ. ಆದರೆ, ಶ್ರೀ ವೀರಯ್ಯನವರಿಗೆ ಹುಚ್ಚ ಎಂಬ ವಿಶೇಷಣ ಲೋಕಜನರ ಪದವಿ ಸ್ಥಾಯಿಯಾಗಿ ಉಳಿಯಿತು. ಆದರೆ, ಉಳಿದವರಿಗೆ ಉಳಿಯಲಿಲ್ಲ, ಇದೇ ಪರಸ್ಪರರಲ್ಲಿ ಇರುವ ಭಿನ್ನತೆ. ಲೋಕಮಾನ್ಯ ಆ ಪದವಿ ಹೆಸರಿನೊಂದಿಗೆ ಹಚ್ಚಿಕರೆಯ ಹತ್ತಿದ್ದರಿಂದ ಅಂದಿನಿಂದ ''ಹುಚ್ಚವೀರಯ್ಯ''ವಾಯಿತು. ಬಳಕೆ ನಡೆದಂತೆ ಸಾಮಾನ್ಯರೆಲ್ಲರೂ ಕೇವಲ ಹುಚ್ಚೀರಪ್ಪಜ್ಜನೆಂದು ಕರೆಯಹತ್ತಿದರು. ಅಷ್ಟೇ ಅಲ್ಲ ಆತನಿಗೆ ಕ್ರಮೇಣ ಜನರು ವಿಶೇಷವಾಗಿ ಉಪದ್ರುವ ದೈಹಿಕ, ಮಾನಸಿಕ ಎರಡರಿಂದಲೂ ಕೊಡಹತ್ತಿದರು. ಜನಹಿಂಸೆ ಹೆಚ್ಚಾದಂತೆಲ್ಲ ಬಾಲ ಮಕ್ಕಳಿಗೆ ಈತನಿಂದ ಭೀತಿ ಉಂಟಾಗಹತ್ತಿತ್ತು. ಇದರಿಂದ ಎಳೆಯ ಮಕ್ಕಳು ರಾತ್ರಿ ಮಲಗಿದಾಗ ಹುಚ್ಚೀರಪ್ಪ ಬಂದ ಎಂದು ಚಿಟ್ಟನೇ ಚೀರುತ್ತಿದ್ದವು. ಇದನ್ನೆಲ್ಲ ಕಂಡು ಬಾಲಕರ ತಂದೆ ತಾಯಂದಿರು, ಹುಚ್ಚೀರಪ್ಪಜ್ಜನಿರುವಲ್ಲಿಗೆ ಬಂದು ತಮ್ಮ ಮನ ಬಂದಂತೆ ಆತನನ್ನು ಬೈಗುಳಗಳ ಸುರಿಮಳೆಗರೆದು ಹೋಗುತ್ತಿದ್ದರು. ಕೆಲವು ದಿವಸಗಳ ಮೇಲೆ ಆತನನ್ನು ಅಲ್ಲಿಂದಲೂ ತಳಕೀಳಿಸಿದರು.

**ವಾಕ್ಸಿದ್ಧಿ :**

ಇದಾದನಂತರ ಶ್ರೀ ಹುಚ್ಚೀರಪ್ಪ ಅಲ್ಲಿಂದ ಹೊರಟು, ಹಿರೇಕೆರೆಯ ಆಚೆಯ ದಂಡೆಯ ಹತ್ತಿರ ಅಂದಾಜು ಎರಡು ಫರ್ಲಾಂಗು ದೂರದಲ್ಲಿ ಬೆಳೆದಿದ್ದ ಹಳೆಯ ಹುಣಸಿಮರವನ್ನು ಆಶ್ರಯಿಸಿದ. ಅದು ನರೇಗಲ್ಲ ಮುಸ್ಲಿಂ ಬಾಂಧವರ ಖಬರಸ್ಥಾನದ ಸಮೀಪವಿತ್ತು.

ಸಮಾಜದ ಪ್ರತಿಕೂಲ ಸ್ಥಿತಿಪ್ರಾಪ್ತವಾದಂತೆ ಹುಚ್ಚೀರಪ್ಪನ ಅಂತರ್ಯದಲ್ಲಿ ವಿರಕ್ತಿ ಭಾವಬಲಿಯಹತ್ತಿತ್ತು. ದೇಹಕ್ಕೆ ಹಸಿವೆ ಕ್ರಮೇಣ ಕಡಿಮೆ ಆದಂತೆ ಭಿಕ್ಷೆಗೆ ಹೋಗುವದನ್ನೂ ಕಡಿಮೆ ಮಾಡಹತ್ತಿದ. ನಿಗ್ರಹ ಶಕ್ತಿ ಮೂಡುತ್ತಾ ನಿರಾಹಾರ ಸ್ಥಿತಿ ಉಂಟಾಗಹತ್ತಿತು. ಆತನು ಚಿತ್ತ ಪ್ರಸನ್ನತೆಯನ್ನೂ ಪಡೆಯಹತ್ತಿದ. ಸಹಜವಾಗಿ ಈ ಕ್ರಿಯೆಗಳು ನಡೆಯುತ್ತಿರುವದು ಈತನ ಅದಾವಯೋಗ ಬಲದಿಂದಲೋ ಹೇಳಲು ಬಾರದು. ಆದರೆ, ದೇಹ ಮನಸ್ಸು ಇಂದ್ರಿಯಗಳನ್ನು ಜಯಿಸಿ, ಆತ್ಮರತ ನಾಗಿದ್ದವನೋ ಏನೋ ಯೋಗ ಸಿದ್ಧಿಗಳು ಸಾಧನಾ ಮಾರ್ಗ ಅನುಸರಿಸದೇ ಈತನಲ್ಲಿ ಸಂಪೂರ್ಣವಾಗಿ ಆತನ ಸ್ವಾಧೀನವಾದುದೊಂದು ಬಿಡಿಸದ ಪವಾಡವೇ ಆಗಿವೆ.

ಒಮ್ಮೆ ತಾನೆ ಕುಳಿತವನು ಎದ್ದು ಕಳ್ಳಿಯ ಗಿಡಕ್ಕೆ ಹಬ್ಬಿದ ಹಾಲಿ ಬಳ್ಳಿಯ ತಪ್ಪಲ ತಂದು ಕುಟ್ಟಿ ತಿನ್ನುತ್ತ ಕುಳಿತಿದ್ದನು. ಅದೇ ದಾರಿ ಹಿಡಿದು ಹೊಲಕ್ಕೆ ಹೋಗುವ ರೈತ ಜನರು ಇದನ್ನು ಕಂಡು ಆತನಿಗೆ ''ಬರೀ ತಪ್ಪಲು ತಿನ್ನುತ್ತೀಯಲ್ಲ ! ರೊಟ್ಟಿ

ಬೇಕೇನು ?'' ಎಂದು ಕೇಳಿ ತಾವು ತಂದ ಬುತ್ತೀ ಗಂಟು ಬಿಚ್ಚಿ ರೊಟ್ಟಿ ಕೊಡಹೋದರು. ಆಗ ಅವರಿಗೆ ಹುಚ್ಚೀರಪ್ಪ 'ಇದನ್ನು ತಿನ್ನಬೇಕಪ್ಪ ಒಲ್ಲೆ ಅಂದ್ರ ಹ್ಯಾಂಗ ಬಿಟ್ಟಿತ್ರಪ್ಪ' ಎಂದೆನ್ನುತ್ತಾ ತಪ್ಪಲ ತಿನ್ನಹತ್ತಿದನು. ಇದನ್ನು ಕಂಡು ರೈತ ಜನರು ಇವ ಮೊದಲೇ ಹುಚ್ಚ ಎಂದು ಮುಂದೆ ನಡೆದರು.

ಮತ್ತೊಂದು ದಿನ ರೈತಜನ ಹೊಲಕ್ಕೆ ಹೋಗುವಾಗ ದಾರಿಯಲ್ಲಿಯೇ ಹುಣಸೆಗಿಡದ ನೆರಳಿಗೆ ಕುಳಿತಿದ್ದನು. ಅವರ ಲಕ್ಷ್ಯ ಈತನ ಕಡೆಗೆ ಹೋಯಿತು. ಆಗ ಅವನು ಸ್ಮಶಾನದಿಂದ ಖಬರಸ್ಥಾನದಲ್ಲಿ ಆರಿಸಿ ತಂದ ಸಿದಿಗೆಕಟ್ಟಿಗೆಗಳಿಂದ, ಹುಣಿಸಿ ಗಿಡದ ಬೊಡ್ಡೆಗೆ ಗುಡಿಸಲದಂತೆ ನಿಲ್ಲಿಸುತ್ತಿದ್ದನು. ಇದನ್ನು ಕಂಡು ಜನ ಆಶ್ಚರ್ಯಭರಿತರಾಗಿ ನೋಡುತ್ತಾ ನಿಂತುಕೊಂಡರು. ಮರುಕ್ಷಣದಲ್ಲಿ ಅಲ್ಲಿಯೇ ಇದ್ದ ಆತನ ಪರ್ಯಾಣದ ಹಳಸಿದ ಅನ್ನ-ರೊಟ್ಟಿ ಚೂರು ತಿನ್ನಲು ಗುದ್ದಿನೊಳಗಿಂದ ಒಂದೆರಡು ಇಲಿಗಳು ಆಗಾಗ ಬಂದು ಹೋಗುತ್ತಿದ್ದವು. ಇದನ್ನು ನೋಡಿದವನೇ ಹುಚ್ಚೀರಪ್ಪ ವಿಕಾರವಾಗಿ ನಗುತ್ತಾ ಒಂದು ಇಲಿಗೆ ಕೈಯಲ್ಲಿದ್ದ ಚಿಕ್ಕಬಡಿಗೆಯಿಂದ ಹೊಡೆದನು. ಅದು ತಕ್ಷಣವೇ ಮೂರ್ಛೆ ಹೊಂದಿತು. ಅದರ ಬಾಲವನ್ನು ಹಿಡಿದು 'ಇದು ಬಾಳ ಬೆರ್ಕಿ ಇಲಿರೆಪ್ಪಾ, ಇದು ಬಾಳ ಅಂಜಸತೈತ್ರೆಪ್ಪಾ' ಎಂದು ಕೂಗುತ್ತಾ ಗುಡಿಸಲಿನಂತೆ ಮಾಡಿದ ಕಟ್ಟಿಗೆಯೊಳಗೆ ಅದನ್ನು ಒಗೆದು ಅಲ್ಲಿಯೇ ಮಾಡಿದ ಬೆಂಕಿಯಲ್ಲಿ ಬೆಂಕಿ ತಗೊಂಡು ಗುಡಿಸಲಿಗೆ ಹಚ್ಚಿದ. ಇಲಿ ಸಮೇತ ಗುಡಿಸಲು ಸುಟ್ಟುಬಿಟ್ಟಿತು. ಇದನ್ನು ನೋಡಿ ಚೀತ್ಕಾರ ಮಾಡತೊಡಗಿದನು.

ಹೀಗೆ ಗುಡಿಸಲು ಸುಡುವಾಗ ಒಂದು ಕಿಡಿ ಅವನ ಕೈಯಲ್ಲಿಯ ಬಡಿಗೆಯಿಂದ ತಿವಿದಾಡುವಾಗ, ಸಟಕ್ಕನೇ ಅವನ ಕಾಲ ಮೇಲೆ ಸಿಡಿದು ಬಿದ್ದಿತು. ತಕ್ಷಣ ಅವನ ಕಾಲ ಮೇಲೆ ಒಂದು ಗುಳ್ಳಿ ಎದ್ದಿತು. ಆಗ ಹುಚ್ಚೀರಪ್ಪ ಚೀರುತ್ತಾ ''ಏನ ಬ್ಯಾನ್ರೆಪ್ಪಾ ಈ ಗುಳ್ಳಿ, ಈ ಬ್ಯಾನಿ ಹ್ಯಾಂಗ ತಾಳಲ್ರೆಪ್ಪಾ'' ಎಂದು ಬೋರಾಡಿ ಅಳಹತ್ತಿದನು. ಈತನು ಬೊಬ್ಬೆ ಕುಟ್ಟುವದನ್ನು ನೋಡಿ, ಯಾರಾದರೂ ಹೆದರಬಹುದೆಂದು ಅಲ್ಲಿಂದಲೂ ಅವನನ್ನು ಹೊರದೂಡಿದರು. ಹೀಗೆ ವೀರಯ್ಯನಿಗೆ ಮನೆ-ಮಠ-ಊರು-ಕೇರಿ-ಅಡವಿ- ಹಾಳಗುಡಿ-ಕ್ರಮವಾಗಿ ಎರವಾದ ನಂತರ, ಅವನಿಗೆ ಸ್ಮಶಾನ ವಾಸವೇ ಗತಿಯಾಯಿತು.

ಮುಂದಿನ ಕಾಲಮಾನದಲ್ಲಿ ಆ ವರ್ಷ ಮಳೆಯಾಗದೇ ಬಿತ್ತಲಿಲ್ಲ. ಜನರಿಗೆ ಕೂಳು-ಕಾಳು ಇಲ್ಲವಾಯಿತು. ದನ-ಕರುಗಳು ಹೊಟ್ಟೆಗಿಲ್ಲದೆ ನಿತ್ರಾಣಗೊಂಡವು. ಕೆಲವು ಸತ್ತು ಹೋದವು. ಜನ ಕೆಲವರು ಊರು ಬಿಟ್ಟು ಹೊಟ್ಟೆ ತುಂಬಿಕೊಳ್ಳಲು ಪರ ಊರಿಗೆ ನಡೆದರು. ಇಂತಹ ಭೀಕರ ಬರಗಾಲ ಪ್ರಾಪ್ತವಾಗಿ, ಜನಜೀವನ ಹಂಚಿನಲ್ಲಿ ಕಾಳು ಹುರಿದಂತಾಯಿತು. ಚಿಂತಾಕ್ರಾಂತರಾದರು. ಏನೂ ತಿಳಿಯಲಿಲ್ಲ. ಕೂಸು-ಕುನ್ನಿ ಬದುಕಿಸುವದು, ಮುದುಕ ಮುದುಕಿಯರನ್ನು ಜೋಪಾನ ಮಾಡುವದು ದಿಕ್ಕು ತೋಚದಂತಾಯಿತು. ಜನರಲ್ಲಿ ಎಲ್ಲಾ ಇದ್ದ ಬಿದ್ದುದು ಮುಗಿದ

ಬಳಿಕ ಸಿಕ್ಕ-ಸಿಕ್ಕ ಗಿಡದ ತೊಪ್ಪಲು ತಂದು ಕುಟ್ಟಿಕೊಂಡು ತಿನ್ನಲಿಕ್ಕೆ ಹತ್ತಿದರು. ದನಗಳನ್ನು ಕಟುಕರಿಗೆ ಮಾರಿಕೊಂಡರು. ಈ ಪರಿಸ್ಥಿತಿ ಬಂದು ಒದಗಿದಾಗ 'ಇದನ್ನೂ ತಿನಬೇಕಪ್ಪ, ಒಲ್ಲೆ, ಅಂದರೆ ಹ್ಯಾಂಗ ಬಿಟ್ಟೀತ್ರೆಪ' ಎಂದು ವರ್ಷದ ಹಿಂದೆ ಅಂದ ಘಟನೆ ನೆನೆಸಿಕೊಂಡು, ಅಜ್ಜನ ವಾಕ್ಯ ಇಂದು ಅಕ್ಷರಶಃ ನಡೆದದ್ದನ್ನು ನೋಡಿ, ಜನ ಆತನ ವಾಕ್ಯ ಭವಿಷ್ಯ ಸೂಚನೆಯಾಗಿತ್ತೆಂದು ಅನ್ನಹತ್ತಿದರು. ಇದರಿಂದ ಜನರಲ್ಲಿ ಹುಚ್ಚೀರಪ್ಪನ ಬಗ್ಗೆ ಕ್ರಮೇಣ ಅವನೊಬ್ಬ ಹುಚ್ಚನಲ್ಲ; ಅಸಾಮಾನ್ಯ ಮನುಷ್ಯನಿರುವನೆಂದು ಭಾವನೆ ಮೂಡಹತ್ತಿತು.

ಮುಂದೆ ಮೈಸೂರು ಭಾಗದಿಂದ ರಾಗಿ ಚೀಲಗಳ ನಿಟ್ಟು ಪೇಟೆಗೆ ಬಂದು, ರೂಪಾಯಿಗೆ ಏಳು ಸೇರಿನಂತೆ ಬಹುಸುಲಭವಾಗಿ ದೊರೆಯಹತ್ತಿದವು. ಅದನ್ನೇ ಜನರು ತಮ್ಮ ಭಾಗ್ಯವೆಂದು ರಾಗಿ ಕಾಟಿ ಕಾಯಿಸಿಕೊಂಡು, ಕುಡಿದು ಬದುಕ ಹತ್ತಿದರು. ಇದೇ ರಾಗಿ ಬರ, ಏಳುಸೇರಿನಬರ ಎಂದು ಲೋಕಪ್ರಸಿದ್ಧವಾಗಿತು.

ಹುಚ್ಚೀರಪ್ಪನ ಮತ್ತೊಂದು ಘಟನಾ ಸೂಚನೆ ಸತ್ಯವಾಗಲು ಕಾಲ ಒದಗಿ ಬಂದಿತು. ಕ್ರಿ. ಶ. ೧೮೯೫ ರಲ್ಲಿ ಜನ ಬರಗಾಲ ಅನುಭವಿಸಿ, ಚೇತರಿಸಿಕೊಳ್ಳುತ್ತಿರುವಂತೆ ಪ್ಲೇಗಿನ ಹಾವಳಿ ಮಹಾಮಾರಿಯಂತೆ ಊರನ್ನು ಹೊಕ್ಕಿತು. ಪ್ಲೇಗ ಅಂದರೆ, ಗುರಳಿಬೇನೆ ಅದನ್ನೇ ತನ್ನ ಕಾಲಿಗಾದ ಗುಳ್ಳಿ ಮೂಲಕ ಭವಿಷ್ಯ ಸೂಚನೆ ನೀಡಿದ್ದನು. ಈ ಪ್ಲೇಗು ಇಡೀ ನಾಡನ್ನೇ ನಡುಗಿಸಿದ ಬಹುದೊಡ್ಡ ಸಾಂಕ್ರಾಮಿಕ ರೋಗ, ಇಡೀ ಊರಿಗೆ ಊರೇ ಈ ರೋಗಕ್ಕೆ ತುತ್ತಾಗಿತ್ತು ಒಬ್ಬೊಬ್ಬರೇ ಮನೆ ಬಿಟ್ಟು ಊರ ಹೊರಗೆ ಗುಡಿಸಲು ಹಾಕಿಕೊಂಡು ಇರಹತ್ತಿದರು. ಹೀಗಾಗಿ, ಮನೆಗಳು ದಿನೇ ದಿನೇ ಬರಿದಾಗ ಹತ್ತಿದವು. ಅನೇಕರು ಮರಣವನ್ನಪ್ಪಿದರು. ಈ ಮರಣ ಸಂಖ್ಯೆ ಎಷ್ಟೆಂದರೆ, ಒಮ್ಮೊಮ್ಮೆ ಅಂತ್ಯಕ್ರಿಯೆ ಮಾಡುವ ಕಾರ್ಯಕ್ಕೆ ವ್ಯತ್ಯಯವಾಯಿತು. ಜನರೇ ಬರದಾದರು. ಇಂತಹ ದೈವೀ ಕ್ರೂರರೋಗದ ರೂಪದಲ್ಲಿ ಜನರನ್ನು ಬಲಿತೆಗೆದುಕೊಂಡಿತು. ಈ ಸೂಚನೆಯನ್ನು ಹುಚ್ಚೀರಪ್ಪ ತಿಳಿಸಿದ್ದು ನೆನಪಾಗಿ ಜನ ಮಾತನಾಡಿಕೊಳ್ಳಹತ್ತಿದರು. ಈಗ ಜನರೆಲ್ಲ 'ವೀರಯ್ಯ ಹುಚ್ಚನಲ್ಲ ಅವನು ತ್ರಿಕಾಲಜ್ಞಾನಿ, ಮಹಾತ್ಮಾ' ಎಂದು ತಿಳಿದುಕೊಂಡರು. ಈ ರೀತಿ, ಆತನ ಅವ್ಯಕ್ತ ವೃತದಿಂದ ಆತನಲ್ಲಿ ವಾಕ್ಯಸಿದ್ಧಿ ಸಹಜವಾಗಿ ಬಂದಿತ್ತು.

**ಸಹಜಯೋಗ ಹಾಗೂ ಸಮಾಧಿ :**

ಒಮ್ಮೆ ಮಳೆಗಾಲ ಬಂತು, ಹಿರೇಕೆರೆಯಲ್ಲಿ ಹರಿದು ಬರುವ ನೀರಿನ ಹಳ್ಳದ ತಗ್ಗಿನಲ್ಲಿ ಹುಚ್ಚೀರಪ್ಪ ಕುಳಿತಿದ್ದನು. ಸಮೀಪದಲ್ಲಿಯೇ ದನಕಾಯುವ ಹುಡುಗರು ತಮ್ಮ ದನ ಮೇಯಿಸುತ್ತ ನಿಂತಿದ್ದರು. ಅಂದು ಸಾಯಂಕಾಲದ ಸಮಯ, ಆಗ ಮಳೆ-ಗಾಳಿ ಪ್ರಾರಂಭವಾಗಿ, ಮುಗಿಲಲ್ಲಿ ಮೋಡಗಳು ದಟ್ಟವಾಗಿ ಕವಿದು ಬಿಟ್ಟವು. ಮುಂದೆ ಕೆಲವೇ ಸಮಯದಲ್ಲಿ ಮೋಡಗಳಿಂದ ಮಳೆ ಹನಿ ಹನಿಯಾಗಿ ಭೂಮಿಗೆ ಬೀಳಹತ್ತಿತು.

ಆಗ ದನಕಾಯುವ ಬಾಲಕರು ಮಳೆ ಪ್ರಾರಂಭವಾದುದನ್ನು ನೋಡಿ, ಹುಚ್ಚೀರಪ್ಪನಿಗೆ ''ಏಳು ಮಳೆ ಬಂತು'' ಎಂದು ಹೇಳಿ, ತಮ್ಮ ದನಗಳನ್ನು ಅಟ್ಟಿಕೊಂಡು ಮನೆಕಡೆಗೆ ಓಡುತ್ತ ಹೋದರು.

ಹುಡುಗರು ಹೇಳಿದ ಮಾತು, ಹುಚ್ಚೀರಪ್ಪನಿಗೆ ದೇಹಭಾವವಿದ್ದರಲ್ಲವೇ? ದೇಹ ರಕ್ಷಣೆಯ ವಿಚಾರ, ಅವನು ಎಷ್ಟೂ ಮಿಸುಕದೆ ತಾನು ಇದ್ದಲ್ಲಿಯೇ ಸ್ವಸ್ಥವಾಗಿ ಕುಳಿತುಬಿಟ್ಟನು. ಹೊತ್ತುಗಳೆದಂತೆ ಮಳೆಹೆಚ್ಚಾಗಹತ್ತಿತು. ಆಕಾಶ ಹರಿದು ಹೋಯಿತೇನೋ ಎಂಬಂತೆ ಮಳೆಯು ಎಲ್ಲಿ ನೋಡಿದರೂ ನೀರೇ ನೀರು. ಹುಚ್ಚೀರಪ್ಪ ಕುಳಿತದ್ದು ಹಳ್ಳದ ನೀರು ಕೆರೆಗೆ ಕೂಡುವ ದಾರಿಯಲ್ಲಿ, ಕೇಳುವದೇನು, ಉಮಚಗಿ ಏರಿಯಿಂದ ಹಳ್ಳದ ನೀರು ಹಳ್ಳಕ್ಕೆ ಕೂಡಿ ಮಹಾಪೂರ ಬಂದು ಒಳ್ಳೇ ರಭಸದಿಂದ ಹರಿಯುತ್ತ, ಕೆರೆಗೆ ಕೂಡಹತ್ತಿತು. ಇದರಿಂದ ಹುಚ್ಚೀರಪ್ಪನೇ ಕಾಣದಂತಾದನು.

ಬೆಳಗಾಯಿತು, ಹೊತ್ತು ಏರಿತು ಎಂದಿನಂತೆ ದನಕಾಯುವ ಹುಡುಗರು ತಮ್ಮ ದನಗಳನ್ನು ಮೇಯಿಸುತ್ತ ನಿನ್ನೆ ಎಲ್ಲಿ ಹುಚ್ಚೀರಪ್ಪ ಕುಳಿತಿದ್ದನೋ ಅಲ್ಲೆ ಬಂದರು. ಆ ಬಾಲಕರು ತಮ್ಮ ತಮ್ಮೊಳಗೆ ಮಾತನಾಡುತ್ತ ''ಇಲ್ಲಿಯೇ ನೋಡು ಹುಚ್ಚೀರಪ್ಪ ಕುಳಿತಿದ್ದು. ಇಲ್ಲೆ ಅದಾನೋ ಅಥವಾ ಎದ್ದು ಮತ್ತಿನ್ನೆಲ್ಲಿಗಾದರೂ ಹೋದನೋ'' ಎಂದು ಒಬ್ಬರಿ ಗೊಬ್ಬರು ಮಾತನಾಡುತ್ತ ಹುಡುಕಹತ್ತಿದರು. ಅವರಲ್ಲೊಬ್ಬನು ಕೈಯಲ್ಲಿ ಒಂದು ದನಕಾಯುವ ಕಟ್ಟಿಗೆ ಹಿಡಿದಿದ್ದನು. ಈ ಕಟ್ಟಿಗೆಯಿಂದ, ಆ ಸ್ಥಳವನ್ನು ತಿವಿಯುತ್ತಾ ಹೋದನು. ಕಟ್ಟಿಗೆಗೆ ಏನೋ ಬಿರಿಸುಹತ್ತಿದಂತೆ ಆ ಕೆಸರಿನಲ್ಲಿ ಆಯಿತು. ಮತ್ತೊಮ್ಮೆ ಪ್ರಯತ್ನ ಮಾಡಿ, ಬೇರೆ ಕಡೆಗೆ ತಿವಿದು ನೋಡಿದನು. ಅಲ್ಲಿಯೂ ಬಿರುಸಾಗಿ ತಾಗಿತು. ಹುಡುಗನಿಗೆ ಸಂಶಯ ಬಂದು, ಉಳಿದವರನ್ನು ಕೂಗಿದ. 'ಅಜ್ಜನ ತಲೆ ಇಲ್ಲಿ ನನ್ನ ಕಟ್ಟಿಗೆಗೆ ತಟ್ಟಿದಹಾಂಗ ಅಗತೈತಿ ನೋಡಬರ್ರಿ' ಎಂದು ಅಂದು, ಅಲ್ಲಿದ್ದ ಹುಡುಗರು ಈ ವಿಷಯ ತಿಳಿಸಲೆಂದು ಭರ್‍ರನೆ ಊರ ಕಡೆಗೆ ಓಡಿದರು. ಊರಲ್ಲಿ ಎಲ್ಲ ಜನರ ಮುಂದೆ ನಡೆದ ಸಂಗತಿ ಏದುಸಿರು ಬಿಡುತ್ತಾ ಹೇಳಿದರು.

ಆಗ, ಅಲ್ಲಿ ನೆರೆದ ಜನ ಈ ಸಂಗತಿ ಕೇಳಿ ಭಯ–ಆತಂಕ– ವಿಸ್ಮಯಗೊಂಡು ಒಬ್ಬೊಬ್ಬರು ಒಂದೊಂದು ಮಾತು ಆಡಹತ್ತಿದರು. ''ನಿನ್ನೆ ಸಂಜೆಯಿಂದ ಅಲ್ಲಿ ಅವನು ಹೇಗಿರುತ್ತಾನೆ. ಎಲ್ಲಿಗಾದರೂ ಹೋಗಿರಬಹುದು?'' ಅಂದ ಒಬ್ಬ. ''ಹನ್ನೆರಡು ತಾಸು ಕೆಸರು ಮಳೆಯಲ್ಲಿ ಕೂಡ್ರುವದೆಂದರೆ ಸಾಮಾನ್ಯವೇ,? ಸತ್ತನೋ ಬದುಕಿದನೋ ಅದಾರು ಬಲ್ಲರು?'' ಎಂದ ಮತ್ತೊಬ್ಬ. ಮಣ್ಣು–ಕೆಸರು ತೆಗೆಯಲು ಸಲಕರಣೆ ತಗೊಂಡು ನಾಲ್ಕಾರು ಜನರು ಹಿರಿಯರು ಒಳ್ಳೆಹರಯದ ೮–೧೦ ಹುಡುಗರನ್ನು ಕರೆದುಕೊಂಡು ನಡೆಯಿರಿ, ನಡೆಯಿರಿ ನೋಡೋಣವೆಂದು, ಧಾವಿಸಿ ಹುಡುಗರು ಹೇಳಿದ ಸ್ಥಳಕ್ಕೆ ಧಾವಿಸಿ ಬಂದರು.

ಅವನಿರುವ ಸ್ಥಳದವರೆಗೂ ಹೋಗಿ, ಮೆತ್ತಿದ ಕೆಸರನ್ನು ತೆಗೆದು ನೋಡಿದಾಗ, ವೀರಪ್ಪಜ್ಜನ ಮುಖ–ತಲೆ ಕಂಡವು. ಆದರೆ, ಕಣ್ಣುಗಳು ಮುಚ್ಚಿದ್ದವು. ದೇಹದಲ್ಲಿ ವಾಯುಚಲನೆ ಇರಲಿಲ್ಲ. ಆದರೆ, ದೇಹ ಮಾತ್ರ ಬಿಸಿ ಇದ್ದಿತು.

ಕೂಡಿದ ಜನ ವೀರಪ್ಪಜ್ಜನನ್ನು ಸಂಪೂರ್ಣ ಮೇಲಕ್ಕೆತ್ತಿ ಕೆಸರಿನಿಂದ ಬಯಲಿಗೆ ತೆಗೆದುಕೊಂಡು ಒಂದು ದಿಬ್ಬದ ಸ್ಥಳದಲ್ಲಿ ಮಲಗಿಸಿ, ಅಲ್ಲಿಯೇ ಸಮೀಪದ ಕೆರೆಯಲ್ಲಿರುವ ನೀರಿನಿಂದ ಅಜ್ಜನ ಮೈಯ್ಯಲ್ಲ ತೊಳೆದು, ಆತನ ಅಂಗಾಲು ತಿಕ್ಕಿ, ದೇಹದ ಉಷ್ಣಹೆಚ್ಚಾಗುವಂತೆ ಮಾಡಿದರು. ಆಗ ಅಜ್ಜನ ಮಸ್ತಕಕ್ಕೇರಿರಬಹುದಾದ ಪ್ರಾಣವಾಯು ಕ್ರಮೇಣ ಕೆಳಗಿಳಿದು ಬರುವಂತೆ ತೋರಿಬಂದಿತು. ಆಗ, ಅಜ್ಜ ತನ್ನ ಕಣ್ಣುಗಳನ್ನು ತೆರೆದು, ತನ್ನ ಸುತ್ತುವರಿದ ಜನರನ್ನು ನೋಡಿ, 'ಇನ್ನೂ ಐತೆ, ಬರತೈತೆ, ಉಪವಾಸ ಕೆಡುವತೈತೆ' ಎಂದು ತನ್ನಲ್ಲಿ ಒಟಗುಡಹತ್ತಿದನು.

ಆಮೇಲೆ ಅಲ್ಲಿದ್ದವರು ಅಜ್ಜನನ್ನು ನೋಡಿ, ''ಛೇ ! ಈ ಅಜ್ಜ ನಮ್ಮಂತೆ ಮನುಷ್ಯನಲ್ಲ ಇಲ್ಲಾ ಅಂದ್ರ ಬೆಳತನಕ ಇಷ್ಟು ಮಳೆ ಹೊಡೆದರೂ, ಕೆಸರಿನಲ್ಲಿ ಮುಳುಗಿ ಹೋದರೂ, ಹ್ಯಾಂಗ ಬದಕ್ಯಾನ ನೋಡು!'' ಎಂದು ಅತ್ಯಂತ ಆಶ್ಚರ್ಯಭರಿತರಾಗಿ ಮಾತನಾಡುತ್ತಾ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು.

ಹೀಗೆ ಮಳೆಯ ಕೆಸರಿನಲ್ಲಿ, ಹುಚ್ಚೀರಪ್ಪ ಅಖಂಡ ಒಂದು ರಾತ್ರಿ–ಒಂದು ಮಧ್ಯಾಹ್ನ ಸಂಪೂರ್ಣ ಹುಗಿದು ಹೋಗಿದ್ದರೂ, ಆತನ ಪ್ರಾಣಕ್ಕೆ ಮಾತ್ರ ಯಾವ ಅಪಾಯವೂ ಆಗಿರಲಿಲ್ಲ. ಇದರಿಂದ ಯೋಗದರ್ಶನದಲ್ಲಿ ಬರುವ ಸಮಾಧಿಯೇ ಇದಾಗಿರಬೇಕು. ಇಲ್ಲವಾದರೆ, ಅವನ ಪ್ರಾಣ ವಾಯುಘ್ರಾಣೇಂದ್ರಿಯದಲ್ಲಿ ಉಸಿರಾಡುತ್ತಿದ್ದರೆ, ಅಜ್ಜ ಪ್ರಾಣದಿಂದ ಉಳಿಯಲು ಸಾಧ್ಯವೇ ಇರಲಿಲ್ಲ. ಬಹುಶಃ ಈ ಕಾರಣದಿಂದಲೇ, ಹುಚ್ಚೀರಪ್ಪ ಹಠಯೋಗಿ ಎಂದು ನಾಮ ಪಡೆದಿರಬೇಕು.

ಹಠಯೋಗದಲ್ಲಿ ಬರುವ ಹ ಮತ್ತು ಠ ಇವುಗಳೆಂದರೆ, ಚಂದ್ರ ಮತ್ತು ಸೂರ್ಯ ನಾಡಿಸ್ವರಗಳು. ಇಲ್ಲಿ ಹರಿದಾಡುವ ಪ್ರಾಣವಾಯುವನ್ನು ಪ್ರಾಣಾಯಾಮದ ಪದ್ಧತಿಯಿಂದ ಪೂರಕ–ಕುಂಭಕ–ರೇಚಕಗಳಿಂದ ನಿರೋಧಿಸುವದೇ ಹಠಯೋಗದ ಮುಖ್ಯ ಲಕ್ಷಣ. ಬಹುಶಃ ಇದರಲ್ಲಿ ಸಿದ್ಧಾಸನಾದಿ ಆಸನಗಳು, ಧೌತಿ ಮುಂತಾದ ಷಟ್‌ಕ್ರಿಯೆಗಳು, ಖೇಚರಿ ಮುಂತಾದ ಬಂಧಗಳು ಇರುತ್ತವೆ. ಇವುಗಳಿಂದ ಸಾಧಿಸಬೇಕಾದವುಗಳಲ್ಲಿ ಆರೋಗ್ಯವೂ ಒಂದಾಗಿದೆ.

ಆದರೆ, ಸಂಪೂರ್ಣ ದೇಹಭಾವವನ್ನೇ ಕಳೆದುಕೊಂಡ ನಮ್ಮ ಹುಚ್ಚೀರಪ್ಪನಿಗೆ ಈ ಸಾಧನೆಗಳಿಂದ ಏನಾಗಬೇಕಾಗಿದೆ? ಯೋಗದಲ್ಲಿ ಎರಡು ಮಾರ್ಗ, ಒಂದು ಪಿಪೀಲಿಕಾ ಇನ್ನೊಂದು ವಿಹಂಗಮವೆಂದು. ಇರುವೆ ಗಿಡದ ಬೊಡ್ಡೆಯನ್ನು ಆಶ್ರಯಿಸಿ, ತನ್ನ ಘ್ರಾಣೇಂದ್ರಿಯದಿಂದ ಗಿಡದ ತುದಿಯಲ್ಲಿಯ ಹಣ್ಣನ್ನು

ಪಡೆಯುತ್ತದೆ. ಇದು ಪಿಪೀಲಿಕಾ ಮಾರ್ಗ. ಆದರೆ ಪಕ್ಷಿ ನೇರವಾಗಿ ಆಕಾಶದಿಂದ ಹಾರಿ ಬಂದು ಹಣ್ಣನ್ನು ಕಚ್ಚಿಕೊಂಡು ಹೋಗುತ್ತದೆ. ಇದು ಎರಡನೆಯ ವಿಹಂಗಮ ಮಾರ್ಗ.

ನಮ್ಮ ಹುಚ್ಚೀರಪ್ಪನು ಏನೊಂದು ಸಾಧನೆ ಮಾಡದೇ ಸಹಜಯೋಗ ಕ್ರಿಯೆಯಿಂದಲೇ ಇಂತಹ ಉಗ್ರವೂ ಪರಿಪೂರ್ಣವೂ ಆದ ಸಮಾಧಿ ಸ್ಥಿತಿಗೆ ಬಂದುದು ದೈವಾನುಗ್ರಹವೆನ್ನದೇ ಬೇರೆ ಇಲ್ಲ. ಆತನು ಪರಮಹಂಸ ಸ್ಥಿತಿ ಮುಟ್ಟಿರಬಹುದೆಂದು ಭಾವಿಸಬೇಕಾಗುತ್ತದೆ. ಅವನಿಗೆ ಯಾವುದೇ ಸಾಧನಾ ಅಥವಾ ಅಂತಹ ಯಾವುದೇ ಮಾರ್ಗಕ್ರಮಣದ ಅವಶ್ಯಕತೆ ಇರಲಿಲ್ಲವೆಂದು ತಿಳಿಯುತ್ತದೆ. ಯೋಗದ ಪರಮಗಂತವ್ಯ ಸಮಾಧಿ ಇಲ್ಲಿ ಮನಸ್ಸು, ನೀರಿನಲ್ಲಿ ಕರಗಿದ ಉಪ್ಪಿನಂತೆ ಆತ್ಮನಲ್ಲಿ ಲೀನವಾಗಿ ಬಿಡುತ್ತದೆ. ಆದರೆ ಮನೋಧರ್ಮವೇ ಚಂಚಲ, ಈ ಚಾಂಚಲ್ಯ ನಿವಾರಣೆಗೆ ಪ್ರಾಣ ನಿರೋಧ ಅತ್ಯವಶ್ಯ. ಅದಕ್ಕಾಗಿ. ಶ್ರೀ ಚಾಮರಸರು ಪ್ರಭುಲಿಂಗಲೀಲೆಯಲ್ಲಿ 'ಅಲಿನಿಂದೊಡೆ ಮನವು ನಿಲುವದು, ಮನವು ನಿಂದಡೆ ಸುಳಿದು ಸೂಸುವ ವಾಯು ನಿಲುವದು' ಎಂದು ಹೇಳಿದ್ದು ಅನುಭವಸಿದ್ಧ ಮಾತು ಈ ಯೋಗಕ್ರಿಯಾ ಎಷ್ಟು ಅವಶ್ಯವೆಂದು ತಿಳಿಯುತ್ತದೆ.

ಹೀಗೆ ಹುಚ್ಚೀರಪ್ಪಜ್ಜನು ಯೋಗದ ಕೊನೆಯ ಹಂತವಾದ ಸಮಾಧಿ ಸ್ಥಿತಿಯನ್ನು ಮುಟ್ಟಿದ್ದರಿಂದ, ಆತನ ದೇಹ–ಪ್ರಾಣಾದಿಗಳಿಗೆ ಏನೊಂದು ಬಾಧೆ ಆಗಿರಲಿಲ್ಲ, ಆತನದು ಸಂಪೂರ್ಣ ಸಿದ್ಧಾವಸ್ಥೆ. ಇದು ನಿಸರ್ಗದತ್ತ ಶಕ್ತಿಯಾಗಿತ್ತೆಂದೆನ್ನಬಹುದು.

**ತಿತಿಕ್ಷಾ ಶಿರೋಮಣಿ :**

ಹುಚ್ಚೀರಪ್ಪಜ್ಜ ಹಿರೇಕೆರೆಯಿಂದ ಹೊರಟು ಸ್ಮಶಾನವಾಸಿಯಾಗಿ, ತನ್ನ ದೇಹವನ್ನು ಇನ್ನೂ ಹೆಚ್ಚು ವಿಕೃತಗೊಳಿಸಹತ್ತಿದ. ಅಲ್ಲಿ ಬಿದ್ದಿದ್ದ ಹೆಣದ ಅರಿವೆ ಚಿಂದಿಗಳೇ ಅವನ ಹೊದಿಕೆಗಳಾದವು. ತನ್ನ ಕಿವಿ – ಮೂಗುಗಳಲ್ಲಿ ಮಳೆ ಚುಚ್ಚುವದು, ಸೂಜಿ ಮತ್ತು ಡಬ್ಬಣಗಳೇ ಅವನ ಅಂಗಕ್ಕೆ ಹಿಂಸೆ ಕೊಡುವ ಶಸ್ತ್ರಗಳಾದವು. ಅನೇಕ ರೀತಿಯ ಹಿಂಸೆಯನ್ನು ನಿರ್ಭಯವಾಗಿ ದೇಹದ ವಿವಿಧ ಭಾಗಗಳಿಗೆ ಕೊಡಹತ್ತಿದ. ಅರಿವೆಯಿಂದ ಚಿಮಣಿ ಎಣ್ಣೆ ಡಬ್ಬಿ ಕಟ್ಟಿದನು ಅವನು ನಡೆಯುವಾಗ ಹಿಂಬಡಕ್ಕೆ ಬಡಿದು, ಡಬ್ ಡಬ್ ಎಂದು ಸಪ್ಪಳವಾಗುತ್ತ ಎಲ್ಲರ ಲಕ್ಷ್ಯವನ್ನು ಇತ್ತ ಸೆಳೆಯುತ್ತಿತ್ತು.

ಕೈಯಲ್ಲಿ ಮಣ್ಣಿನ ಪರಿಯಾಣ ಹಿಡಿದುಕೊಂಡು, ನರೇಗಲ್ಲಿನ ಓಣಿಗಳಲ್ಲಿ ತನಗೆ ತಿಳಿದ ಮನೆಯ ಮುಂದೆ ನಿಂತು, ಭಿಕ್ಷೆ ಕೇಳುವವರಂತೆ ನಿಲ್ಲುತ್ತಿದ್ದನು. ಆದರೆ, ಎಂದೂ ಬಾಯಿ ಬಿಟ್ಟು ಬೇಡುತ್ತಿರಲಿಲ್ಲ. ಇದು ಅವನ ಭಿಕ್ಷಾಟನೆಯ ವಿಶೇಷತೆಯಾಗಿತ್ತು, ಭಿಕ್ಷೆಗೆ ಹೊರಟನೆಂದರೆ ನಾಯಿಗಳ ಬೊಗಳಾಟ, ಕಲ್ಲು ಒಗೆದು

ಮೋಜು ನೋಡುವ ಹುಡುಗರ ಚಲ್ಲಾಟ, ಬೆನ್ನು ಹತ್ತಿದ ಅನೇಕ ರೀತಿಯ ನಾಯಿ, ನರಿಗಳನ್ನು ನೋಡುವದೇ ಒಂದು ಮೋಜಿನ ಸಂಗತಿಯಾಗಿತ್ತು. ಅವನು ಭಿಕ್ಷಾಕಾಂಕ್ಷಿಯಾಗಿ ಯಾರ ಮನೆಯ ಮುಂದೆ ನಿಲ್ಲುವನೋ ಮೌನ ನಿರೀಕ್ಷೆ ಮಾತ್ರ ಆಗಿರುತ್ತಿತ್ತು. ನೀಡಿದರೆ ಸರಿ, ನೀಡದೇ ಇದ್ದರೂ ಸರಿ, ಮುಂದಕ್ಕೆ ಕೆಲ ನಿಮಿಷದ ನಂತರ ಹೋಗಿ ಬಿಡುತ್ತಿದ್ದನು. ಇದು ಅವನ ಸತತ ರೂಢಿ, ಹೀಗೆ, ನರೇಗಲ್ಲಿನಲ್ಲಿ ಗ್ರಾಮಪುರೋಹಿತ ಸೀತಾರಾಮ ಶಾಸ್ತ್ರಿಗಳ ಮನೆ, ಕೃಷ್ಣಭಟ್ಟರ ಮನೆ ಮುಂತಾದವರ ಭಿಕ್ಷೆ ನೀರಿಕ್ಷೆ ಮಾಡುವ ಮನೆಗಳಾಗಿದ್ದವು. ಇವರು ನೀಡಿದ ಯಾವುದೇ ಆಹಾರವನ್ನು ಮತ್ತಾರಾದರೂ ನೀಡಿದ ಪ್ರತಿಯೊಂದು ಆಹಾರವನ್ನು ತನ್ನ ಪರಿವಾಣದಲ್ಲಿ ನೀಡಿಸಿಕೊಳ್ಳುವದೇ ಈತನ ಸಂಪ್ರದಾಯವಾಗಿತ್ತು. ಅದರಲ್ಲಿ ಉದ್ದೇಶಪೂರ್ವಕವಾಗಿ ಕಲ್ಲಿನ ಹರಳು, ಮಣ್ಣು, ಸುಣ್ಣ, ಉಸುಕು, ಸೆಗಣಿ ಹೀಗೆಲ್ಲ ಪರೀಕ್ಷೆ ಮಾಡುವದಕ್ಕಾಗಿ ಹಾಕುತ್ತಿದ್ದರು. ತಂಗುಳ ಇಲ್ಲವೆ ಹಳಸಿದ್ದು ಅಂತೂ ಸರಿಯೇ. ಆದರೆ, ಇದಾವುದನ್ನು ಅವರು ನೋಡದೇ ಅಲ್ಲಿಗೆ ಆಗಲಿ ಇಲ್ಲವೇ, ತನ್ನ ನಿತ್ಯ ಭೋಜನ ಸ್ಥಳವಾದ ಕೇರಿಗಾಗಲಿ ಹೋಗುತ್ತಿದ್ದನು. ಹೋಗುವ ಮುನ್ನ ತನ್ನ ನೆಚ್ಚಿನ ಭಕ್ತನಾದ ಕಟುಗರ ಚಿಂತಪ್ಪನ ಅಂಗಡಿಯ ಮುಂದೆ ನಿಂತು. ಅವನು ಕೊಡುವ ಒಂದು ಚೀಟು ಗಾಂಜಾ ಮತ್ತು ಮುಗಿ ಹೆಂಡವನ್ನು ತೆಗೆದುಕೊಳ್ಳುವದನ್ನು ತಪ್ಪಿಸುತ್ತಿದ್ದಿಲ್ಲ.

ಹೀಗೆ, ಭಿಕ್ಷೆಯಲ್ಲಿ ಬಂದ ಧೂಳು, ತಂಗುಳ, ಹಾಳಿ, ಕಲ್ಲು, ಮುಳ್ಳು, ಉಸುಗು, ತಂತಿ, ಗಾಜು, ಕಳ್ಳಿನುಗ್ಲು ಬೀಡಿ ಸೇದಿಬಿಟ್ಟ ಚೂರು, ಸೆಗಣಿ, ಮುಂತಾದ ವಸ್ತುಗಳನ್ನು ಆಹಾರದಲ್ಲಿ ಸೇರಿಸಿ, ಕಲಿಸಿ ಹುಚ್ಚೀರಪ್ಪ ಊಟಕ್ಕೆ ಕುಳಿತುಕೊಳ್ಳುತ್ತಿದ್ದನು. ಆಗ ನಿತ್ಯದ ಅಭ್ಯಾಸದಂತೆ, ತನ್ನ ಸನ್ಮಿತ್ರರಾದ ನಾಯಿ, ಬೆಕ್ಕು, ಇಲಿ, ಕಾಗೆ, ಹದ್ದು ಮುಂತಾದ ಪ್ರಾಣಿಗಳು ಏನೋ ಸೂಚನೆಯಿಲ್ಲದೇ, ಈತನ ಸಹಭೋಜನಕ್ಕೆ ಕೂಡ್ರುತ್ತಿದ್ದವು. ತಂದೆ ಕೂಡ ಊಟಕ್ಕೆ ಕೂಡ್ರುವ ಮಕ್ಕಳಂತೆ. ಹೀಗೆ, ಸರ್ವಜೀವಿಗಳ ಸಹಜೀವನ ಭಾವವನ್ನು ನಿತ್ಯ ಆಚರಣೆಗೆ ತಂದ ಮಹಾಪುರುಷನಾಗಿದ್ದನು. ಇದನ್ನೇ 'ತೇನತ್ಯಕ್ತೇನ ಭುಂಜೀತಾಃ' ಎಂದು ಈಶಾವಾಸೋಪನಿಷತ್ತಿನಲ್ಲಿ ಉದ್ಗರಿಸಿದ್ದು ಇಲ್ಲಿ ಅನ್ವಯವಾಗುವದೆಂದರೆ ತಪ್ಪಲ್ಲ.

ಈ ರೀತಿ ಅವನಿಗೆ ಅಭೇದಭಾವ, ಆನಂದವೇ ಆನಂದ, ಏಕೆಂದರೆ ಆತನಿಗೆ ಸರ್ವತ್ರ ಬ್ರಹ್ಮ ಭಾವನೆ, ಭೇದವೇ ಉಳಿದಿರಲಿಲ್ಲ, ಅಭೇಧ ಭಾವನೆ ದಿನದಿಂದ ದಿನಕ್ಕೆ ಉಲ್ಬಣಗೊಂಡಿತು. ಇಷ್ಟಾದ ಮೇಲೆ ಚಿಂತಪ್ಪ ಕೊಟ್ಟ ಹೆಂಡದ ಮಗಿಗೆ ಬಾಯಿಹಚ್ಚಿ ಕುಡಿದು, ಡರ್ರನೇ ಡೇಗಿ ಹತ್ತಿರವಿದ್ದ ಗಾಂಜಾವನ್ನು ಚನ್ನಾಗಿ ಮಿಜ್ಜಿ ಅದನ್ನು ಗೇಣುದ್ದ ಚಿಲುಮೆಯಲ್ಲಿ ಹಾಕಿ, ಅದರ ಮೇಲೆ ಕಾಕುಳ್ಳಿನ ಕೆಂಡವನ್ನು ಹೇರಿ ಶಂಭೋ ಎಂದು ಒಂದು ಜೂರಿ ಎಳೆದಾಗ, ಆ ಚಿಲುಮೆ ಮೇಲೆ ಒಂದು ಗೇಣು ಎತ್ತರ ಉರಿ ಕಾಣಿಸಿಕೊಳ್ಳುತ್ತಿತ್ತು. ಅನಂತರ ತಡೆಹಿಡಿದಿದ್ದ ಹೊಗೆ ಕ್ರಮೇಣ ಹೊರ ಬಂದು ಸುರಳಿ ಸುರಳಿಯಾಗಿ ಮೇಲಕ್ಕೆ ಹೋಗುತ್ತಿತ್ತು.

ಇಷ್ಟಾದ ಮೇಲೆ ಹುಚ್ಚೀರಪ್ಪಜ್ಜ ತನ್ನ ಕಣ್ಣುಗಳನ್ನು ಅರ್ಧಮುಚ್ಚಿ ಏನೋ ಗೊಣಗುತ್ತ ಆನಂದಪರವಶನಾಗಿ ತೂಗಾಡುತ್ತ ಕುಳಿತುಕೊಳ್ಳುತ್ತಿದ್ದನು. ಹಗಲು–ರಾತ್ರಿ ಎನ್ನದೇ ಮಳೆ–ಚಳಿ–ಗಾಳಿಗೆ ಬೆದರದೇ, ತನ್ನ ಜಾಗೆ ಬಿಟ್ಟು ಕದಲುತ್ತಿರಲಿಲ್ಲ, ಬಿಸಿಲಲ್ಲಿ ಕೂಡಾ ಮಿಸುಕದೇ ಕೂಡುತ್ತಿದ್ದನು. ಹೀಗೆ ನಿಶ್ಚಲ–ಸದೃಢನಾಗಿ ಕುಳಿತುಕೊಳ್ಳುವದು ಅವನ ತಿತಿಕ್ಷೆಯ ಪರಮಾವಧಿ ಸ್ಥಿತಿಯಾಗಿತ್ತು – ಎಂದು ಹೇಳಬಹುದು.

**ಮಾನವರೂಪದ ಮಹಾದೇವ :**

ಒಮ್ಮೆ ಶೃಂಗೇರಿ ಶಾರದಾಪೀಠದ ಶ್ರೀಶ್ರೀಶ್ರೀ ನರಸಿಂಹಭಾರತಿ ಶ್ರೀ ಪಾದಂಗಳವರು ನರೇಗಲ್ಲದ ಮಾರ್ಗವಾಗಿ, ಗಜೇಂದ್ರಗಡದ ಹತ್ತಿರ ಇರುವ ಶ್ರೀ ಕಾಲಕಾಲೇಶ್ವರ ಕ್ಷೇತ್ರಕ್ಕೆ ದಯಮಾಡಿಸಲಿರುವರು ಎನ್ನುವ ಸುದ್ದಿ ನರೇಗಲ್ಲ ಬ್ರಾಹ್ಮಣ ಸಮಾಜದ ಬಂಧುಗಳಿಗೆ ತಿಳಿದು ಬಂದಿತು. ಆಗ ನರೇಗಲ್ಲ ಬ್ರಹ್ಮ ವೃಂದವೆಲ್ಲ ಗುರುಗಳ ಸ್ವಾಗತ ಹಾಗೂ ದರ್ಶನ, ಆಶೀರ್ವಾದಕ್ಕಾಗಿ, ಪ್ರತೀಕ್ಷೆ ಮಾಡುತ್ತ ಮುಂಜಾನೆ ಗದಗದಿಂದ ಗಜೇಂದ್ರಗಡಕ್ಕೆ ಹೋಗುವ ಮಾರ್ಗದಲ್ಲಿ ಹಣ್ಣು–ಕಾಯಿ– ಫಲ ಪುಷ್ಪ ಅಕ್ಷತೆಗಳಿಂದ ಹಾರಸಹಿತ ಬಂದು ನಿಂತರು. ಅವರು ನಿಂತ ರಸ್ತೆ ಈಗಿನಂತೆ ಹೆದ್ದಾರಿಯಾಗಿರಲಿಲ್ಲ ಕೇವಲ ಚಕ್ಕಡಿ ಹೋಗುವ ದಾರಿಯಾಗಿತ್ತು, ವಾಹನ ಸೌಕರ್ಯ ಕೂಡಾ ಇರಲಿಲ್ಲ, ಕಾರಣ ಎಷ್ಟೇ ದೂರ ಸಂಚಾರವಿದ್ದರೂ ಕಾಲುನಡಿಗೆ, ಇಲ್ಲವೆ ಚಕ್ಕಡಿಗಳನ್ನು ಉಪಯೋಗಿಸುವ ಕಾಲವಾಗಿತ್ತು, ಇಂತಹ ಕಾಲದಲ್ಲಿ ಇಂತಹ ಯತಿಶ್ರೇಷ್ಠರು ಅಂದರೆ ನಾಲ್ಕೆಂಟು ಶಿಷ್ಯರು, ಶ್ರಮಜೀವಿಗಳು ಭಕ್ತಿ ಪುರಸ್ಸರವಾಗಿ ಇಂತಹ ಜ್ಞಾನಿಗಳನ್ನು ಹೊತ್ತುಕೊಂಡು ಸಂಚಾರ ಮಾಡುವ ಪರಿಪಾಠವಿತ್ತು, ಇದೇ ತೆರನಾಗಿ ಅಂದು ಅವರು ಬರುವ ರಸ್ತೆಯ ದಕ್ಷಿಣಕ್ಕೆ ಗ್ರಾಮವಿದ್ದರೆ ರಸ್ತೆಯ ಉತ್ತರ ದಿಕ್ಕಿನಲ್ಲಿ ಸ್ಮಶಾನವಿತ್ತು.

ಸೂರ್ಯನು ಮೆಲಕ್ಕೇರಿದಂತೆ ಆತನ ಪ್ರಖರ ಕಿರಣಗಳ ತಾಪವೂ ಹೆಚ್ಚುತ್ತಾ ಬಂದಿತು. ಆದರೂ ಗುರುಗಳ ದರ್ಶನಾಕಾಂಕ್ಷಿಗಳಾದ ಅವರಿಗೆ ಅದಾವುದರ ಪರಿವೇ ಇರಲಿಲ್ಲ, ಹೊತ್ತು ನೆತ್ತಿಗೇರಿರಬಹುದು. ಆಗ ಅನತಿ ದೂರದಲ್ಲಿ ಗುರುಗಳಿದ್ದ ಮೇಣೆ ಹಾಗೂ ಅವರ ಪರಿವಾರ ಭಕ್ತರ ದೃಷ್ಟಿಗೆ ಬಿದ್ದಿತು. ಅವರ ಆನಂದಕ್ಕೆ ಪಾರವೇ ಇಲ್ಲದಂತಾಯಿತು. ಮೇಣೆ ಸಮೀಪಿಸುತ್ತಲೇ ಅವರೆಲ್ಲ ಅತ್ತ ಧಾವಿಸಿದರು. ಭಕ್ತರಿಂದ ಜಯಘೋಷ ಮೊಳಗುತ್ತಿದ್ದಂತೆ, ಮೇಣೆ ಬಂದು ನಿಂತಿತು. ಹಸನ್ಮುಖರಾದ ಶ್ರೀಗಳು ಭಕ್ತರೆಡೆಗೆ ವಾತ್ಸಲ್ಯಪೂರಿತ ನೋಟ ಬೀರುತ್ತಾ ಮೇಣೆಯಿಂದ ಇಳಿದು ಹೊರಕ್ಕೆ ಬಂದರು.

ಎತ್ತರದ ನಿಲುವು, ಗೌರವರ್ಣ, ವೃದ್ಧಾಪ್ಯ ಆವರಿಸಿದ್ದರೂ ಮುಖಾರವಿಂದದಲ್ಲಿ ವಿದ್ವತ್ಕಳೆ ಹಾಗೂ ಬ್ರಹ್ಮತೇಜಸ್ಸುಗಳು ರಾರಾಜಿಸುತ್ತಿದ್ದವು.

ಕಾಷಾಂಬರವನ್ನುಟ್ಟು ಪಾದಗಳಲ್ಲಿ ಹಾವುಗೆಗಳನ್ನು ಮೆಟ್ಟ ಹಸ್ತದ್ವಯಗಳಲ್ಲಿ ಅವರು ದಂಡ–ಕಮಂಡಲಗಳನ್ನು ಧರಿಸಿದ್ದರು. ಅವರ ವಿಶಾಲವಾದ ಹಣೆಯಲ್ಲಿ ಭಸ್ಮ ತ್ರಿಪುಂಡಗಳು ಪರಿಶೋಭಿಸುತ್ತಿದ್ದವು. ಅವರ ಕೊರಳು–ರಟ್ಟೆ–ಮುಂಗೈಗಳಿಗೆ ರುದ್ರಾಕ್ಷಿ ಮಾಲೆಗಳು ಅಲಂಕರಿಸಿದ್ದವು.

ಗುರುಗಳ ಈ ತೇಜೋಮಯ ವ್ಯಕ್ತಿತ್ವವನ್ನು ಕಂಡ ಭಕ್ತರು ಭಕ್ತಿ ಪುಲಕಿತರಾಗಿ ಅವರಿಗೆ ದಂಡವತ ಪ್ರಣಾಮಗಳನ್ನು ಸಲ್ಲಿಸಿದರು. ಶ್ರೀಗಳವರು ಮಂದಹಾಸದಿಂದ ಮುಂದಕ್ಕೆ ಸಾಗಿ ಬರುತ್ತಿದ್ದಂತೆ ಅವರ ದೃಷ್ಠಿ ಸ್ವಾಭಾವಿಕವಾಗಿ ತಮ್ಮ ಕಣ್ಣೆದುರಿಗಿರುವ ಸ್ಮಶಾನದ ಕಡೆಗೆ ಹೋಯಿತು.

ನೋಡುತ್ತಾರೆ ! ಕೆಂಡದಂತಹ ಬಿಸಿಲಿನಲ್ಲಿ ಸ್ಮಶಾನದ ಮಧ್ಯ ಒಬ್ಬರು ಕುಳಿತು ಅಲ್ಲಿಯ ಹೆಣ ಸುಟ್ಟ ಬೂದಿಯನ್ನು ಹಿಡಿ–ಹಿಡಿಯಾಗಿ ತೆಗೆದುಕೊಂಡು ತಮ್ಮ ಮೈಮೇಲೆ ಎರಚಿಕೊಳ್ಳುತ್ತಿದ್ದರು. ಕುತೂಹಲಗೊಂಡ ಶ್ರೀಗಳಿಗೆ ಅಲ್ಲಿಗೆ ಹೋಗುವ ತವಕ. ಅವರಿಗೆ ಅರಿವಿಲ್ಲದಂತೆ ಅವರ ಪಾದಗಳು ಅತ್ತಕಡೆಗೆ ಸಾಗಿದವು. ಪೂಜ್ಯ ಶ್ರೀಗಳಿಗೆ ತಮ್ಮ ಭಕ್ತರ ಪರಿವೆಯೂ ಉಳಿದಿರಲಿಲ್ಲ. ಆದರೆ ಭಕ್ತರು ಮಾತ್ರ ತಮ್ಮ ಮಡಿ ಮೈಲಿಗೆ ಮುಂತಾದ ವಿಧದ ನಿಷೇಧಗಳಿಂದಾಗಿ ತಮ್ಮ ಗುರುಗಳನ್ನು ಹಿಂಬಾಲಿಸಲಿಲ್ಲ.

ಪೂಜ್ಯ ಶ್ರೀಗಳು ಸ್ಮಶಾನದಲ್ಲಿದ್ದ ವ್ಯಕ್ತಿಯ ಹತ್ತಿರ ಹೋಗಿ ನೋಡಿದರು. ಆ ಅಜಾನುಬಾಹು ಆಳು ಕಪ್ಪು ಮೈ ಬಣ್ಣ, ಮುಖದ ಮೇಲೆ ದಟ್ಟವಾಗಿ ಬೆಳೆದ ಅಲ್ಲಲ್ಲಿ ಬಿಳಿಗೊಂಡ ಕಪ್ಪು ಕೂದಲು ಮೈಮೇಲೆ ಹರಿದ ಹಾಗೂ ಮಾಸಿದ ಹೇಸಿಗೆ ಬರುವಂತಹ ಬಟ್ಟೆ, ತಲೆಯ ಮೇಲೆ ಕೂಡಾ ಅಂತಹದೇ ಅದರ ಎರಡು ತುಂಡುಗಳನ್ನು ಇಳಿಬಿದ್ದು ಜೋತಾಡುತ್ತಿದ್ದವು. ಆದರೆ ಮುಖದಲ್ಲಿ ಮಾತ್ರ ದಿವ್ಯ ಶಾಂತಿ, ಕಂಗಳಲ್ಲಿ ಅಪಾರ ಕಾಂತಿ ಹೊರಸೂಸುತ್ತಿದ್ದವು.

ಶ್ರೀಗಳವರಿಗೆ ತಮ್ಮ ಎದುರಲ್ಲಿದ್ದವರು ಯಾರು? ಎಂಬುದನ್ನೂ ತಿಳಿಯುವ ಅತೀ ಕುತೂಹಲ, ಆತನನ್ನು ಕೇಳಿದರು. ''ಅಯ್ಯಾ ! ನೀನಾರು ? ಎಂದು, ಆದರೆ ವ್ಯಕ್ತಿಯ ಲಕ್ಷ್ಯ ಇವರ ಕಡೆಗೆ ಇರಲಿಲ್ಲ. ತನ್ನ ಕಣ್ಣುಗಳನ್ನು ಆತನು ತೆರೆದಿದ್ದರೂ ಅನ್ಯಮನಸ್ಕನಾಗಿಯೇ ಬೇರೆ ಕಡೆಗೆ ನೋಡುತ್ತಿದ್ದನು. ಆದರೆ ಬಾಯಿಯಲ್ಲಿ ಮಾತ್ರ ಏನೇನೋ ಗುನ ಗುಣಿಸುತ್ತಿದ್ದನು ಶ್ರೀಗಳು ಅದನ್ನೇ ಲಕ್ಷ್ಯವಿಟ್ಟು ಕೇಳಿದರು.

''ಹೌದು ಅಲ್ಲ, ಅಲ್ಲಪ್ಪ, ಅಲ್ಲಾ, ಹೌದು, ಹೌದಪಾ, ಹೌದಪ ಅಲ್ಲಪ್ಪ ಅಲ್ಲಪ್ಪ ಹೌದಪ ಹೌದು ಅಲ್ಲ, ಅಲ್ಲ ಹೌದು, ಏನ್ರೆಪಾ ? ಎಂದು ಒಂದು ವಿಚಿತ್ರವಾದ ವಡಕಿನ (ವಗಟಿನ) ನಿಗೂಢಮಾತು ಹೊರಬಂದಿತು. ಈ ಮಾತು ತಾವು ಆತನಿಗೆ ಕೇಳಿದ ಪ್ರಶ್ನೆಗೆ ಉತ್ತರವೇನೋ ಆಗಿರಲಿಲ್ಲ. ಇದನ್ನು ಆತನು ತನ್ನಷ್ಟಕ್ಕೆ ತಾನೇ ಮೇಲಿಂದ ಮೇಲೆ ಹೇಳಿಕೊಳ್ಳುತ್ತಿದ್ದನು. ಇನ್ನು ಆತನನ್ನು ಹೆಚ್ಚು

ಮಾತನಾಡಿಸುವದರಿಂದ ಯಾವ ಪ್ರಯೋಜನವೂ ಇಲ್ಲವೆಂದು ಭಾವಿಸಿ ಅವರು ಕ್ಷಣಕಾಲ ಹಾಗೆಯೇ ಎವೆ ಇಕ್ಕದೇ ನೋಡುತ್ತಾ ನಿಂತುಕೊಂಡರು.

ಆದರೂ ಅವರ ಕರ್ಣ ರಂಧ್ರದಲ್ಲಿ ಆ ವ್ಯಕ್ತಿ ಆಡಿದ ಮಾತು ತೂರಿ ತೂರಿ ಬಂದು ಅಣುರಣಿತವಾಗಹತ್ತಿತ್ತು. ಅವರ ಮನಸ್ಸಿನಲ್ಲಿ ಈ ಮಾತಿನ ಬಗೆಗೆ ವಿಚಾರ ಮಂಥನವೇ ಪ್ರಾರಂಭವಾಯಿತು.

''ಜಗನ್ಮಿಥ್ಯಾ ಬ್ರಹ್ಮ ಸತ್ಯ ಜೀವೋ ಬ್ರಹ್ಮೈವ ನಾ ಪರಃ'' ಎಂಬ ಅದ್ವೈತ ಸಿದ್ಧಾಂತದ ಮಾತು ನೆನಪಿಗೆ ಬಾರದೇ ಇರಲಿಲ್ಲ. ಇದೇ ಮಾತನ್ನು ಕೇಳಿ ಸೂಕ್ಷ್ಮಾತಿ ಸೂಕ್ಷ್ಮ ಸಹಜ ಕನ್ನಡ ಭಾಷೆಯಲ್ಲಿ ಉದ್ಗಾರವಾದದ್ದು ಅತ್ಯಂತ ಹರ್ಷಭರಿತರನ್ನಾಗಿ ಮಾಡಿತು. ಶಿವ–ಜೀವರ ಅನುಸಂಧಾನ ಹಾಗೂ ಸಾಕ್ಷಾತ್ಕಾರದಲ್ಲಿ ಈತನು ತಲುಪಿದ ಸ್ಥಿತಿ ಕಂಡು ಆಶ್ಚರ್ಯಚಕಿತರಾದರು. ಈತನು ನಿಜವಾದ ಹಠಯೋಗಿ, ಮಹಾತಪಸ್ವಿ, ಯೋಗಿ ಆಗಿರುತ್ತಾನೆ ಎಂದು ಭಾವಾವೇಶದಲ್ಲಿ ನುಡಿದರು.

ತನ್ನ ಅನುಭವಾಮೃತದಲ್ಲಿ ಅದ್ದಿ ತೆಗೆದ ಈ ಅವನ ಮಾತು ಆತನು ಪ್ರಪಂಚಕ್ಕೆ ನೀಡಿದ ಒಂದು ದಿವ್ಯ ಸಂದೇಶವೇ ಆಗಿದೆ ಎಂದು ಅವರ ಅಂತರಾತ್ಮ ಸಾರಿಸಾರಿ ಹೇಳಿತು. ಹೀಗೆ ಜೀವಭಾವವನ್ನು ನೀಗಿಕೊಂಡು ಕೇವಲ ಶಿವ ಭಾವದಲ್ಲಿ ನೆಲೆ ನಿಂತ ಈ ಮಹಾನುಭಾವನು ''ಭೂಶ್ಚರತಿಶಂಭೋ'' ಎನ್ನುವಂತೆ ಮಾನವರೂಪದ ''ಮಹಾದೇವ''ನೇ ಇವನು. ಎಂದು ಭಾವಪರವಶತೆಯಿಂದ ನುಡಿದರು. ಅವರು ಆತನಿಗೆ ದೀರ್ಘದಂಡ ಪ್ರಣಾಮ ಸಲ್ಲಿಸಿ ಅಲ್ಲಿಂದ ತಮ್ಮ ಭಕ್ತರಿದ್ದೆಡೆಗೆ ಹಿಂದಿರುಗಿದರು. ಇದನ್ನೆಲ್ಲ ಪ್ರತ್ಯಕ್ಷ ನೋಡಿದ ಭಕ್ತವೃಂದಕ್ಕೆ ತಮ್ಮ ಗುರುಗಳು ಹೀಗೆ ಮಾಡಿದ್ದು ಎಳ್ಳಷ್ಟೂ ಸರಿಬರಲಿಲ್ಲ. ಅದಕ್ಕಾಗಿ ಅವರು ತಮ್ಮ ತಮ್ಮಲ್ಲಿ ಏನೇನೋ ಪಿಸುಗುಡುತ್ತಿದ್ದರು. ಗುರುಗಳು ತಮ್ಮಲ್ಲಿಗೆ ಆಗಮಿಸುತ್ತಲೇ ಅವರೆಲ್ಲ ಮೌನ ತಾಳಿದರು. ಇನ್ನೇನು ತಮ್ಮ ಗುರುಗಳು ತಮ್ಮ ಮೇಣೆ ಹತ್ತುವದರಲ್ಲಿದ್ದರು ಆಗ ಒಬ್ಬ ಭಕ್ತ ಧೈರ್ಯತಂದುಕೊಂಡು ತನ್ನ ಮನಸ್ಸಿನ ಉದ್ವೇಗ ತಡೆದುಕೊಳ್ಳಲಾರದೇ ಗುರುಗಳನ್ನು ಕೇಳಿಯೇ ಬಿಟ್ಟ.

''ನಿಲ್ಲಿ ! ಗುರುಗಳೇ ! ತಾವು ತಮ್ಮ ಮಠ, ಸಂಪ್ರದಾಯ, ಸಂಸ್ಕೃತಿಗಳನ್ನೂ ರಕ್ಷಣೆ ಮಾಡುವ ಅತ್ಯಂತ ಶ್ರೇಷ್ಠ ಗುರುಪೀಠದಲ್ಲಿದ್ದವರು. ಮಠದಶೀಲ, ಚಾರಿತ್ರ್ಯಗಳನ್ನು ರಕ್ಷಿಸುವ ಹಾಗೂ ಜಾಗೃತಗೊಳಿಸುವ ಆದ್ಯ ಕರ್ತವ್ಯ ನಿಮ್ಮದಾಗಿದೆಯೆಂದು ನಾವು ಬೇರೆ ಹೇಳಬೇಕಾಗಿಲ್ಲ. ಹೀಗಿದ್ದು ತಾವು ''ಅಶುಚಿ'' ಯಾದ ಸ್ಮಶಾನಕ್ಕೆ ಹೋಗಿದ್ದು, ಮಠಾಚಾರಕ್ಕೆ ಭಂಗವಾದಂತೆ, ಅದೂ ಇಲ್ಲದೇ ಇದಕ್ಕೆ ಸಾಲದೆಂಬಂತೆ, ''ಒಬ್ಬ ಹುಚ್ಚನಂತಿರುವ ವ್ಯಕ್ತಿ''ಗೆ, ಸ್ಮಶಾನ ವಾಸಿಯಾದವನಿಗೆ 'ಸಾಷ್ಟಾಂಗ ನಮಸ್ಕಾರ'' ಹಾಕಿಬಂದದ್ದಂತೂ ಸಂಪೂರ್ಣ ನಮ್ಮ ಸನಾತನ ಧರ್ಮಕ್ಕೆ ಅಪಚಾರವೇ ಆದಂತೆ. ಈ ಕ್ರಿಯೆಗಳು ತಾವು ವಹಿಸಿಕೊಂಡ

ಪೀಠದ ಗೌರವಕ್ಕೆ ಧಕ್ಕೆತರುವಂತಹದು ಇದು ತಮ್ಮಿಂದ ಆಗಬಾರದಿತ್ತು ನಮಗೆಲ್ಲ ಇದು ತಡೆಯಲಾರದಷ್ಟು ಮಾನಸಿಕ– ಆತ್ಮಗೌರವಕ್ಕೆ ಸಂಚಕಾರ ತಂದ ಕೃತಿಯಾಗಿದೆ'' ಎಂದು ನೇರವಾಗಿ ಅಂದುಬಿಟ್ಟನು.

ಅವನು 'ಸ್ವಧರ್ಮವನ್ನೇ' ತ್ಯಜಿಸಿ ಹೊಲೆ ಹದಿನೆಂಟು ಜಾತಿ–ಯವರಲ್ಲಿ ಉಂಡು ತಿಂದ ಜಾತಿಭ್ರಷ್ಟ' ಹಸಿಮಾಂಸವನ್ನೇ ತಿಂದು ಬಚ್ಚಲ ನೀರಿಗೂ ಬಾಯಿಹಾಕಿದ ಅನಾಚಾರಿ. ಗಾಂಜಾ, ಸೇಂದಿ, ಹೆಂಡಾ ಕುಡಿದು. ಅದರ ನಿಶೆಯಲ್ಲಿಯೇ ಯಾವಾಗಲೂ ಅಲೆದಾಡುವ ದುರ್ವ್ಯಸನಿ, ಊರವರು ಇದನ್ನೆಲ್ಲ ಕಂಡು ಅವನನ್ನು ಹೊರದೂಡಿದಾಗ ಅವನಿಗೆ ಸ್ಮಶಾನವೇ ಗತಿಯಾಗಿದೆ. ಅವನ ಬಗ್ಗೆ ನೀವು ಬಹುದೊಡ್ಡ ಭಾವನೆ ಇಟ್ಟುಕೊಂಡಂತೆ ಕಾಣುತ್ತದೆ. ಅದಕ್ಕಾಗಿ ಅವನ ಪೂರ್ವಾಪರಗಳನ್ನೆಲ್ಲ ತಮ್ಮ ದಿವ್ಯಚಿತ್ತಕ್ಕೆ ಈ ಎಲ್ಲರ ಪರವಾಗಿ ಅರಿಕೆ ಮಾಡಿಕೊಂಡಿದ್ದೇನೆ ಎಂದ ಅವರಲ್ಲಿ ಮತ್ತೊಬ್ಬ.

ನಮ್ಮಂಥವರಾದರೂ ಹೀಗೆ ಮಾಡಿದ್ದರೆ ನಾವು ಸಮಾಜದ ಆಕ್ರೋಶಕ್ಕೆ ಪಾತ್ರರಾಗಿ ಅವರು ವಿಧಿಸುವ ಪ್ರಾಯಶ್ಚಿತ್ತ ಶಿಕ್ಷೆಯನ್ನು ನಾವು ಅನುಭವಿಸಬೇಕಾಗು ತ್ತಿತ್ತು. ತಾವು ನಮ್ಮ ಗುರುಗಳು. ಅದರಲ್ಲಿ ಜಗದ್ಗುರುಗಳು. ತಾವು ನಮಗೆ ಬುದ್ಧಿವಾದ ಹೇಳಬೇಕೆ ವಿನಃ ತಮಗೆ ಅರಿಕೆ ಮಾಡಿಕೊಳ್ಳುವ ಭಾಗ ಬಿತ್ತು, ಇದರ ಮೇಲೆ ತಮ್ಮ ದಿವ್ಯ ಚಿತ್ತಕ್ಕೆ ಬಂದಂತೆ ಮಾಡಬಹುದು. ಎಂದು ಹೇಳಿ ಅವರೆಲ್ಲ ಕೈ ಮುಗಿದು ಮೌನ ತಾಳಿದರು. ಅನಿರೀಕ್ಷಿತವಾಗಿ ಬಂದ ಈ ಆಕ್ಷೇಪಣೆಯನ್ನು ಶ್ರೀಗಳು ನಿರುದ್ವಿಗ್ನತೆಯಿಂದ ಕೇಳಿದರು. ಇದು ಸಮಸ್ತ ಭಕ್ತರ ಅಭಿಪ್ರಾಯವನ್ನೇ ಪ್ರತಿನಿಧಿಸುವಂತಿತ್ತು

ಶ್ರೀಗಳವರು ತಮ್ಮ ಭಕ್ತರಿಗೆ ಶಾಂತ ರೀತಿಯಿಂದಲೇ ಉತ್ತರಿಸಿದರು. ''ಸ್ಮಶಾನಕ್ಕೆ ನಾವು ಹೋಗಿ ಬಂದದ್ದು ನಿಮ್ಮೆಲ್ಲರ ದೃಷ್ಟಿಯಲ್ಲಿ ಅಶುಚಿಯಾಯಿತು. ಇರಲಿ, ನಮ್ಮ ಮೂಲ ಗುರುಗಳಾದ ಶ್ರೀ ಶಂಕರ ಭಗವತ್ಪಾದರು ಶಿವಾಂಶ ಸಂಭೂತರು''. ನಮ್ಮದು ಶೈವಮತ, ಶಿವನೇ ನಮ್ಮ ಆರಾಧ್ಯದೈವ. ಆತನು ಸ್ಮಶಾನವಾಸಿ ಎಂಬುದನ್ನು ಆತನ ಕುರಿತಾದ ಶಾಸ್ತ್ರ, ಪುರಾಣಗಳು ಘಂಟಾಘೋಷವಾಗಿ ಸಾರುತ್ತವೆ.

ಶ್ರೀ ಕ್ಷೇತ್ರಗಳಲ್ಲಿ ಕಾಶಿಕ್ಷೇತ್ರ ರಾಜನೆನಿಸಿದೆ. ಹಿಂದುಗಳಿಗೆಲ್ಲ ಇದರಂತಹ ಪುಣ್ಯಕ್ಷೇತ್ರ ಇನ್ನೊಂದಿಲ್ಲ, ಈ ಕಾರಣದಿಂದ ಅದು ಭೂಕೈಲಾಸವಾಗಿದೆ. ಇಂಥ ಕಾಶಿ ಮಹಾ ಸ್ಮಶಾನವೆಂದು ಪ್ರಸಿದ್ಧವಾಗಿದೆ. ಏಕೆಂದರೆ, ಮಹಾ ಪ್ರಳಯದಲ್ಲಿ ನಾಮರೂಪಾತ್ಮಕವಾದ ಜಗತ್ತು ಅಳಿದು ಹೋಗಿ ಮಹಾ ಸ್ಮಶಾನವಾಗುತ್ತದೆ. ಆಗ ಅಲ್ಲಿ ಶಿವನೊಬ್ಬನೇ ಉಳಿಯುವದರಿಂದ ಶೃತಿಗಳು ಆತನನ್ನು ಶಿವಃ ಕೇವಲಂ ಎಂದು ಘಂಟಾ ಘೋಷವಾಗಿ ಘೋಷಿಸುತ್ತವೆ.

ಮಾನವನು ತನ್ನ ಪೂರಾಕೃತ ಕರ್ಮಫಲಗಳಾದ ಸುಖ–ದುಃಖಗಳನ್ನು ಅನುಭವಿಸಲಿಕ್ಕೆ ಬರಲೇಬೇಕಾಗುತ್ತದೆ. ಕರ್ಮಕ್ಷಯವಾಗುವವರೆಗೂ ಜನ್ಮಾಂತರಗಳು ತಪ್ಪಿದ್ದಲ್ಲ, ಈ ದೇಹ ಧಾರಣೆ ದೇಹಾವಸಾನಗಳೇ ಸಂಸಾರವೆಂದು ಕರೆಯಲ್ಪಡುವದು. ಆದರೆ, ತಮ್ಮ ಪ್ರಯತ್ನದಿಂದ ತಮ್ಮ ಸಂಚಿತಾದಿ ಕರ್ಮಗಳನ್ನು ಕಳೆದುಕೊಂಡು ಅದೇ ಜನ್ಮದಲ್ಲಿ ಮುಕ್ತರಾಗುವದು, ಎಲ್ಲರಿಗೂ ಸಾಧ್ಯವಿಲ್ಲ. ಅದಕ್ಕಾಗಿಯೇ, ಮಂದಾಧಿಕಾರಿಗಳಿಗೆ ಕ್ಷೇತ್ರಯಾತ್ರೆ ವಿಧಿಸಲ್ಪಟ್ಟಿದೆ. ಇಂಥ ಪವಿತ್ರ ಕ್ಷೇತ್ರಗಳಲ್ಲಿ ಹಿಂದೆ ಹೇಳಿದಂತೆ, ಕಾಶಿಕ್ಷೇತ್ರ ಅತ್ಯಂತ ಶ್ರೇಷ್ಠವಾಗಿದೆ. ಯಾವುದೋ ಪುಣ್ಯ ವಿಶೇಷದಿಂದ ಯಾರು ಶ್ರೀ ಕಾಶಿ ಕ್ಷೇತ್ರಕ್ಕೆ ಬಂದು ಅಲ್ಲಿ ಮರಣವನ್ನು ಹೊಂದುವರೋ ಅವರ ಕರ್ಮಗಳೆಲ್ಲ ಶ್ರೀ ಕಾಶಿಯ ಅಧಿದೈವ ಶ್ರೀ ವಿಶ್ವನಾಥನ ಕೃಪೆಯಿಂದ ದಗ್ಧವಾಗುವವು. ಅದಕ್ಕಾಗಿ ಈ ಕ್ಷೇತ್ರ ಕಾಶಿ ಮಹಾ ಸ್ಮಶಾನವಾಗಿದೆ.

ಹೀಗೆ ಕರ್ಮಕ್ಷಯವಾದ ನಂತರ ಮಾನವರಿಗೆ ಪುನರ್ಜನ್ಮವಿಲ್ಲ. ಅದೇ ಮುಕ್ತ, ''ಕಾಶ್ಯಾಂ ಮರಣಾನ್ಮುಕ್ತಿಃ'' ಎಂಬ ಲೋಕೋಕ್ತಿ ಈ ಕಾರಣದಿಂದ ಸುಪ್ರಸಿದ್ಧವಾಗಿದೆ. ಏಕೆಂದರೆ, ಇದು ಅವಿಮುಕ್ತ ಕ್ಷೇತ್ರ. ಅವಿ ಅಂದರೆ ಪಾಪ, ಅದು ಕಾಶಿಯಲ್ಲಿ ಈ ಹಿಂದೆ ಹೇಳಿದಂತೆ ನಾಶವಾಗುವದರಿಂದ ಕಾಶಿ ಅವಿಮುಕ್ತ ಕ್ಷೇತ್ರವೆನಿಸಿದೆ.

ಇಷ್ಟೇ ಅಲ್ಲ, ಶ್ರೀಕ್ಷೇತ್ರ ಕಾಶಿಯಂತೆ ಜ್ಯೋತಿರ್ಲಿಂಗಗಳಲ್ಲಿ ಒಂದಾದ ಉಜ್ಜಯನಿ ಮಹಾಕಾಲನಿಗೂ ಕೂಡಾ ಪ್ರತಿನಿತ್ಯ ಸ್ಮಶಾನದಿಂದ ತಂದ ಭಸ್ಮದಿಂದಲೇ ಪೂಜೆ ಸಲ್ಲುತ್ತದೆ. ಹೀಗೆ ಎಲ್ಲ ದೃಷ್ಟಿಯಿಂದಲೂ ಸ್ಮಶಾನ ಪವಿತ್ರ ಸ್ಥಾನವೇ ಆಗಿದೆ. ಈಗಲೂ ಅದನ್ನು ರುದ್ರಭೂಮಿ ಎಂತಲೇ ಕರೆಯುವರು. ಇಂಥ ಪರಮ ಪವಿತ್ರವಾದ ಸ್ಮಶಾನ ನೀನು ಆಕ್ಷೇಪಿಸಿದಂತೆ ಅಶುಚಿ ಹೇಗಾಗುತ್ತದೆ ?

ಇನ್ನು ನಿಮ್ಮ ಎರಡನೇ ಆಕ್ಷೇಪಣೆ, ನೀವೇ ಹೇಳಿದಂತೆ ವೀರಪ್ಪಜ್ಜ ಹುಚ್ಚ ಎಂದು. ಈ ಹುಚ್ಚಿನಲ್ಲಿ ಅನೇಕ ವಿಧಗಳಿವೆ. ಯಾರಲ್ಲಿ ಬುದ್ಧಿಯ ಕ್ರಿಯೆ ಸಂಪೂರ್ಣ ನಿಂತು ಮನ ಬಂದಂತೆ ಕೂಗಾಡುತ್ತಾ ಜನಗಳಿಗೆ ಕಲ್ಲು ತೂರುತ್ತ ಕಂಟಕ ಪ್ರಾಯರಾಗಿ ಇರುವರೋ ಅವರು ಮೊದಲನೆಯ ವರ್ಗದ ಹುಚ್ಚರು. ಈ ದೃಷ್ಟಿಯಿಂದ ನೋಡಿದಾಗ, ವೀರಪ್ಪಜ್ಜನಲ್ಲಿ ಮೊದಲನೆಯ ವರ್ಗದ ಹುಚ್ಚನ ಯಾವ ಲಕ್ಷಣಗಳೂ ಕಾಣುವದಿಲ್ಲ. ಆತನೊಬ್ಬ ಅಹಿಂಸಾಮೂರ್ತಿ, ಆತನಿಗೆ ಜನರಿಂದ ಹಿಂಸೆಯಾಯಿತೆ ವಿನಃ ಆತನಿಂದ ಜನರಿಗೆ ಯಾವ ಹಿಂಸೆಯೂ ಆಗಲಿಲ್ಲ. ಇದರಿಂದ ಆತನ ಬುದ್ಧಿಯು ನಷ್ಟವಾಗದೆ ಎಂದಿನಂತೆ ಶುದ್ಧವಾಗಿಯೇ ಉಳಿದಿದೆ. ಕಾರಣ ಮೊದಲನೆಯ ವರ್ಗದ ಹುಚ್ಚು ಆತನಿಗೆ ಅನ್ವಯಿಸುವದಿಲ್ಲ.

ಇನ್ನು ಎರಡನೆಯ ವರ್ಗದ ಹುಚ್ಚ, ಆತ್ಮನಿಗೆ ದೇಹೇಂದ್ರಿಯಗಳ ಸಂಘಾತವಾದ ಕೂಡಲೇ ಅವನಿಗೆ ತನ್ನ ದೇಹದಲ್ಲಿ ಅಭಿಮಾನ ಉಂಟಾಗಿ ಅವನು

ಹೆಣ್ಣು, ಹೊನ್ನು, ಮಣ್ಣು ಇವುಗಳ ಬೆನ್ನು ಹತ್ತುವನು. ಇದು ಅತಿಯಾದಾಗ ಅವನು ಹುಚ್ಚ ಎಂದು ಪರಿಗಣಿಸಲ್ಪಡುವನು. ಈ ದೃಷ್ಟಿಕೋನದಿಂದ ನೋಡಿದಾಗ, ವೀರಪ್ಪಜ್ಜ ತನ್ನ ಜೀವನದುದ್ದಕೂ ಯಾವ ಹೆಣ್ಣು, ಹೊನ್ನು, ಮಣ್ಣು ಇವುಗಳ ಸೆಳೆತಕ್ಕೆ ಒಳಗಾಗಲಿಲ್ಲ. ಕಾರಣ ಎರಡನೆಯ ವರ್ಗದ ಹುಚ್ಚು ಅವನಿಗೆ ಅನ್ವಯಿಸುವದಿಲ್ಲ.

ದ್ವೇಧಾ ವೇದಾ ಭ್ರಮಂ ಚಕ್ರೇ ಕಾಂತಾಷು ಕನಕೇಷು ಚ ।
ತಾಸುತೇಷ್ವಷ್ವನುಷ್ಟಸ್ಯ ಸಾಕ್ಷಾತ್ ಭರ್ಗೋ ನರಾಕತಿಃ ॥

ಎಂಬ ಉಕ್ತಿಯಂತೆ, ಇಂದ್ರಿಯ ಭೋಗದ ಬಲೆಗೆ ಬೀಳದ ಅವನು ನರಾಕೃತಿಯಲ್ಲಿದ್ದ ಶಿವನೇ ಆಗಿದ್ದಾನೆ. ಆದರೂ ವಿಷಯಾಸಕ್ತರ ದೃಷ್ಟಿಯಲ್ಲಿ ವಿಷಯ ವಿಮುಖನಾದ ಅವನು ಹುಚ್ಚನಾಗಿ ಕಂಡಿದ್ದರಲ್ಲಿ ಆಶ್ಚರ್ಯವಿಲ್ಲ.

ಇನ್ನು ವೀರಪ್ಪಜ್ಜ ಹೊಲಗೇರಿ ಸೇರಿದ ಎಂಬ ಬಗ್ಗೆ ವಿಚಾರವ ಮಾಡೋಣ. ಒಮ್ಮೆ ನಮ್ಮ ಆಧ್ಯ ಗುರುಗಳಾದ ಶ್ರೀ ಶಂಕರಾಚಾರ್ಯರು ಕಾಶಿಯಲ್ಲಿ ಶ್ರೀ ವಿಶ್ವನಾಥನ ದರ್ಶನಕ್ಕೆ ಗಂಗಾನದಿಯಲ್ಲಿ ಸ್ನಾನ ಮಾಡಿ ಮಡಿಯಿಂದ ತಮ್ಮ ಶಿಷ್ಯ ಪರಿವಾದೊಡನೆ ಹೋಗುತ್ತಿರುವಾಗ ಒಬ್ಬ ಚಾಂಡಾಲ ಎದುರಿಗೆ ದಾರಿಯಲ್ಲಿ ಅಡ್ಡ ಬಂದ. ಆಗ ನಮ್ಮ ಗುರುಗಳು ಅವನಿಗೆ ದಾರಿ ಬಿಡಲು ಹೇಳಿದರು. ಇದನ್ನು ಕೇಳಿದ ಚಾಂಡಾಲ ಅವರಿಗೆ, ಯತಿವರ! ನೀವು ನನ್ನನ್ನು ದೂರ ಸರಿ ಎಂದು ಹೇಳಿದಿರಷ್ಟೆ ! ಇದರಿಂದ ನೀವು ನನ್ನನ್ನು ನಿಮ್ಮ ದೇಹದಿಂದ ದೂರಮಾಡಲು ಇಚ್ಚಿಸಿದಿರೋ ? ಅಥವಾ ನಿಮ್ಮ ಚೈತನ್ಯದಿಂದ ನನ್ನ ಚೈತನ್ಯವನ್ನು ದೂರಿಕರಿಸಲಿಕ್ಕೆ ಹೇಳಿದಿರೋ? ತಿಳಿಯಲಿಲ್ಲ. ನಮ್ಮ ಹಾಗೂ ನಿಮ್ಮಲ್ಲಿ ಇರುವದು ಸಹಜಾನಂದಮಯವಾದ ಆತ್ಮಸ್ವರೂಪ ಒಂದೇ ಆಗಿದೆ. ಇದರಿಂದ ಇವನು ಬ್ರಾಹ್ಮಣ ಇವನು ಹೊಲೆಯ ಎಂಬ ಭೇದ ಎಲ್ಲಿಂದ ಬಂದಿತು? ಎಂದು ಹೇಳಿದುದನ್ನು ಕೇಳಿ, ಶ್ರೀ ಶಂಕರ ಭಗವತ್ಪಾದರು ತುಂಬಾ ಸಂತೋಷಪಟ್ಟು, ಸರ್ವತ್ರ ಬ್ರಹ್ಮಾಭಾವನೆ ಇರುವವನು ಬ್ರಾಹ್ಮಣನೇ ಇರಲಿ, ಅಥವಾ ಹೊಲೆಯನೇ ಇರಲಿ, ನಮಗೆ ಗುರುಗಳಂತೆ ಪೂಜ್ಯನು ಎಂದು ಹೇಳಿ –

ಬ್ರಹ್ಮೈವಾಹಮಿದಂ ಜಗಚ್ಚಸಕಲಂ ಚಿನ್ಮಾತ್ರ ವಿಸ್ತಾರಿತಂ ।
ಸರ್ವಚಿತ್ತದ ವಿದ್ಯೆಯಾ ತ್ರಿಗುಣ ಶೇಷಂಮಯಾ ಕಲ್ಪಿತಂ ।
ಇತ್ಥಂ ಯಸ್ಯ ಧೃಡಮತಿಃ ಸುಖತರೇ ನಿತ್ಯೇಪರೇ ನಿರ್ಮಲೇ ।
ಚಾಂಡಾಲೋಸ್ತು ಸತು ದ್ವಿಜೋಸ್ತು ಗುರು ರಿತ್ಯೋಪಾಮನೀಷಾಮಮ ॥

ಎಂಬ ತಮ್ಮ ಅತ್ಯಂತ ಪ್ರಸಿದ್ಧವಾದ ಮನೀಷಾ ಪಂಚಕವನ್ನು ಅಲ್ಲಿಯೇ ರಚಿಸಿ, ಸ್ತೋತ್ರ ಮಾಡಿದರು. ಇದರಿಂದ ಬ್ರಹ್ಮಜ್ಞಾನಿಗಳಿಗೆ ಯಾವ ತರತಮ ಭಾವವೂ ಇರುವದಿಲ್ಲವೆಂದು ಹೇಳಿದರು.

ಯೋಗಿಗಳಲ್ಲಿ ಬಾಲ, ಉನ್ಮತ್ತ, ಬಧಿರ, ಮೂಕ ಮತ್ತು ಪಿಶಾಚಿ ಹೀಗೆ ಕೆಲವು ಭೇದಗಳಿರುತ್ತವೆ. ಈಗ ವೀರಪ್ಪಜ್ಜನ ಸ್ಥಿತಿ ಇಂಥವುಗಳಲ್ಲಿ ಒಂದಾಗಿರಬಹುದು. ಇಂಥವರಿಗೆ ನಮ್ಮಂತೆ ಯಾವ ವಿಧಿ ನಿಷೇಧಗಳೂ ಇರುವದಿಲ್ಲ. ವೀರಪ್ಪಜ್ಜನು ತನ್ನ ಶರೀರಕ್ಕೆ ಅನ್ಯರಿಗೆ ಸಂಭೋಧಿಸುವಂತೆ ಸಂಭೋಧಿಸುವದನ್ನು ನೋಡಿದರೆ.

''ಚೇಷ್ಠಮಾನಂ ಶರೀರಂ ಸ್ವಪಶ್ಯತ್'ನ್ಯ ಶರೀರವತ್''

ಎಂಬ ಅಷ್ಠಾವಕ್ರಗೀತೆಯ ಉಕ್ತಿ ನಮಗೆ ನೆನಪಾಗುತ್ತದೆ. ಈ ಸ್ಥಿತಿಯಲ್ಲಿರುವದು ಯಾರಿಗೆ ಸಾಧ್ಯ? ಹುಚ್ಚೀರಪ್ಪಜ್ಜನಂಥವರನ್ನು ಕುರಿತು ಮತ್ತೆ ಕಠೋಪನಿಷತ್ತಿನಲ್ಲಿ ಬರುವ.

ಪರಂಚಖಾನಿ ವೈತೃಣತ್ ಸ್ವಯಂ ಭೂಸ್ತಮಾತ್ ಪರಾಂಜಪಶ್ಯತ ನಾಂತರಾತ್ಮಾನ್ ।
ಕಶ್ಚಿದ್ದೀರಃ ಪ್ರತ್ಯಗಾತ್ಮಾನ ಮೈಕ್ಷದಾವೃತ್ ಚಕ್ಷುರಮೃತತ್ತ್ವ ಮಿಚ್ಛನ್ ॥

ಅಂದರೆ ಸ್ವಯಂಭೂವು ಇಂದ್ರಿಯಗಳನ್ನು ಬಹಿರ್ಮುಖವಾಗಿಯೇ ಮಾಡಿದ್ದಾನೆ. ಅದುದರಿಂದಲೇ ಅವನು ಹೊರಗೆ ನೋಡುತ್ತಾನೆ. ಅಂತರಾತ್ಮನನ್ನು ನೋಡುವದಿಲ್ಲ. ಯಾರೋ ಒಬ್ಬ ಧೀರ ಅಮೃತತತ್ವವನ್ನು ಬಯಸಿ, ಚಕ್ಷುಟಸ್ಸನ್ನು ಅಂತರ್ಮುಖಮಾಡಿ ಪ್ರತ್ಯಗಾತ್ಮವನ್ನೇ ನೋಡುತ್ತಾನೆ. ಇಂಥ ಉಪನಿಷತ್ ಪ್ರತಿಪಾದ್ಯನಾದ ಧೀರನೇ ಈ ವೀರಪ್ಪಜ್ಜ ಎನ್ನಬಹುದು.

ಹೀಗೆ ಅಷ್ಟಾವಕ್ರಗೀತೆ ಮತ್ತು ಕಠೋಪನಿಷತ್ ಪ್ರಮಾಣಗಳನ್ನು ಅವಲೋಕಿಸಿದಾಗ ವೀರಪ್ಪಜ್ಜನದು.

ಪ್ರಪಂಚೋಪ ಶಮಂ ಶಾಂತಂ ಶಿವಮದ್ವೈತಂ ।
ಚತುರ್ಥಂ ಮನ್ಯಂತೆ ನ ಆತ್ಮಾ ಸವಿಜ್ಞೇಯಃ ॥

ಎಂಬ ಮಾಂಡೂಕ್ಯೋಪನಿಷತ್ ಪ್ರಮಾಣವನ್ನು ನೋಡಿದಾಗ ಹುಚ್ಚೀರಪ್ಪಜ್ಜನದು ತುರೀಯ ಸ್ಥಿತಿ ಎಂದು ವಿಧಿತವಾಗುತ್ತದೆ.

ಜಾಗ್ರತ, ಸ್ವಪ್ನ, ಸುಷುಪ್ತಿ ಈ ಮೂರು ಅವಸ್ಥೆಗಳಲ್ಲಿ ಇರುವ ಜೀವತ್ರಯರಾದ ವಿಶ್ವ, ತೈಜಸ, ಪ್ರಾಜ್ಞ ಇವರಾರೂ ಆಗದೇ ಇಂದ್ರೀಯ, ಮನ ಬುದ್ಧಿಗಳಿಂದಲೂ ಗ್ರಹಿಸಲು ಆಗದೇ ಇದ್ದುದರಿಂದ ಅವನನ್ನು ಚತುರ್ಥಂ ಎಂದು ಹೇಳಲಾಗಿದೆ. ಅಂತೆಯೆ ಈ ವೀರಪ್ಪಜ್ಜ ಪ್ರಪಂಚೋಪಶಮನನೂ, ಶಾಂತನೂ ಆದ ತುರೀಯ ಎಂದೆನ್ನಬಹುದು.

ಈ ಎಲ್ಲ ದೃಷ್ಟಿಯಿಂದ ವೀರಪ್ಪಜ್ಜ ನಾನು ಮೊದಲೇ ಹೇಳಿದಂತೆ ಭೂಸ್ಥರತಿ ಶಂಭೋ? ಇಂಥವನು ನಿಮ್ಮ ಕಣ್ಣೆದುರಿಗೆ ಇದ್ದರೂ ನೀವೆಲ್ಲ ಅವನನ್ನು ಅರಿತು ಕೊಳ್ಳಲಿಲ್ಲ. ಇನ್ನಾದರು ನೀವು ಪ್ರಾಂಜಲ ಮನಸ್ಸಿನಿಂದ ಅವನನ್ನು ಯಥಾವತ್ ರೀತಿಯಲ್ಲಿ ತಿಳಿದು ಕೃತಾರ್ಥರಾಗಬೇಕು ಎಂದು ಪೂಜ್ಯರೂ ವಂದ್ಯರೂ ಆದ ಶ್ರೀಗಳವರು ಶಾಸ್ತ್ರಾಧಾರಗಳಿಂದ ತಮ್ಮ ಭಕ್ತರ ಆಕ್ಷೇಪ ಮಾಡಿದ ಸಂಶಯಗಳಿಗೆ

ಪರಿಹಾರ ಹೇಳಿ ಅವರನ್ನೆಲ್ಲ ಆಶೀರ್ವದಿಸಿ, ಶ್ರೀ ಕಾಲಕಾಲೇಶ್ವರ ಕ್ಷೇತ್ರಕ್ಕೆ ಭಕ್ತಾದಿಗಳೆಲ್ಲ ಜಯ ಘೋಷ ಮಾಡುತ್ತಿರುವಂತೆ ಪಯಣಿಸಿದರು. ಅವರು ಪಯಣ ಮಾಡಿದ ನಂತರ ಅವರ ಹಿತೋಕ್ತಿ, ಶಾಸ್ತ್ರೋಕ್ತಿ ಕೇಳಿದ ಬ್ರಾಹ್ಮಣ ಸಮಾಜ ತಮ್ಮ ಅಜ್ಞಾನಕ್ಕೆ ಚಿಂತಿತರಾಗಿ ಇಂದು ನಮಗೆ ಗುರು ಹಾಗೂ ಹರನಾದವನನ್ನು ನೋಡಿ ಕೃತಾರ್ಥರಾದೆವು ಎಂದು ಹೇಳಿದರು. ಮತ್ತೊಮ್ಮೆ ಶ್ರೀ ವೀರಪ್ಪಜ್ಜನನ್ನು ಹಾಗೂ ಸ್ಮಶಾನವನ್ನು ಕಣ್ತುಂಬ ನೋಡಿ ತಮ್ಮ ಮನೆಗಳಿಗೆ ತೆರಳಿದರು. ಹೀಗೆ, ಮಾನವ ರೂಪಿ ಚಿನ್ಮಯ ಮಹಾದೇವನು ಪ್ರತ್ಯಕ್ಷ ಇರುವ ಮಾತು ಸುದ್ದಿಯಾಗಿ ಪಸರಿಸಿತು.

**ಶಿವ ಸ್ವರೂಪಿಯ ಸಂತೃಪ್ತಿ :**

ನರೇಗಲ್ಲ ಗ್ರಾಮದ ಶ್ರೀ ರಾಮಭಟ್ಟ ಗ್ರಾಮಪುರೋಹಿತ ಅವರು ಒಂದು ಸೋಮವಾರ ಸಂತೆಯ ದಿವಸ, ಸಂತೆಯಲ್ಲಿ ಮಾರಾಟ ಮಾಡಲಿಕ್ಕೆಂದು ತಮ್ಮ ತೋಟದಲ್ಲಿ ಹಾಕಿದ ಸವತೆಯ ಬಳ್ಳಿಯಿಂದ ಎಳೆಯ ಸವತೆಯ ಕಾಯಿಗಳನ್ನು ಮೂರು ಬುಟ್ಟಿ ಹರಿದುಕೊಂಡು ಬಂದು, ಮನೆಯ ಮುಂದೆ ಕಟ್ಟೆಯ ಮೇಲಿರಿಸಿದ್ದರು.

ಅದೇ ಹೊತ್ತಿಗೆ ಅಲ್ಲಿಗೆ ವೀರಪ್ಪಜ್ಜ ಎಲ್ಲಿಂದಲೋ ಬಂದನು. ಕಟ್ಟೆಯ ಮೇಲೆ ಬುಟ್ಟಿಯಲ್ಲಿ ಇಟ್ಟ ಸವತೆ ಕಾಯಿಗಳು ಕಣ್ಣಿಗೆ ಬಿದ್ದವು. ನೇರ ಹೋಗಿ ಬುಟ್ಟಿಯಲ್ಲಿಯ ಸವತೆಕಾಯಿ ತೆಗೆದುಕೊಂಡನು, ಅಷ್ಟರಲ್ಲಿ ಮನೆಯ ಆಳು ಮಗ ಇದನ್ನು ನೋಡಿ, ಓಡಿ ಬಂದು ಆತನನ್ನು ಬೆದರಿಸಹತ್ತಿ ಕೈಯಲ್ಲಿ ಹಿಡಿದಿದ್ದ ಸವತೆಕಾಯಿ ಕಸಿದುಕೊಳ್ಳಹತ್ತಿದ. ಅಷ್ಟರೊಳಗೆ ರಾಮಭಟ್ಟರು ಆಗುತ್ತಿರುವ ಬಾಯಿ ಕೇಳಿ ಮನೆ ಒಳಗಿಂದ ಹೊರಗೆ ಬಂದರು. ನೋಡುತ್ತಾರೆ ಆಳು ಮಗ ವೀರಪ್ಪಜ್ಜನಿಗೆ ಬೆದರಿಸಹತ್ತಿದ್ದಾನೆ. ಆಗ ಅವರು ಮುಂದಾಗಿ ತಮ್ಮ ಆಳುಮಗನಿಗೆ ಸಿಟ್ಟು ಮಾಡಿ, ''ಏಯ್ ವೀರಪ್ಪಜ್ಜನಿಗೆ ಏನೂ ಅನ್ನಬೇಡ, ಅವನು ತಗೊಂಡರೆ ತಗೊಳ್ಳಲಿ ಬಿಡು'' ಎಂದು ಅಂದರು. ಅಷ್ಟರಲ್ಲಿ ಮತ್ತೆರಡು ಕಾಯಿ ಹಿಡಿದಿದ್ದ ವೀರಪ್ಪಜ್ಜ ಹಾಗೇಯೇ ಸಾಗಿಬಿಟ್ಟ.

ಇದಾದ ನಂತರ, ಶ್ರೀ ರಾಮಭಟ್ಟರ ತೋಟದಲ್ಲಿಯ ಆ ಸವತೆ ಬಳ್ಳಿಯ ಫಸಲು ಎಷ್ಟು ಹರಿದರೂ ಮುಗಿಯದೇ ಅಕ್ಷಯ ಫಲ ನೀಡಿತು. ಕಡೆಗೆ ಹರಿಯುವದೇ ಬೇಸರ ಆಗಿ ಕೇಳಿದವರು ತಕ್ಕೊಂಡು ಹೋಗಲಿ ಬಿಡು ಎಂದು ಹಾಗೆಯೇ ಬಿಟ್ಟು ಬಿಟ್ಟರು.

ಆಗ ಶ್ರೀ ರಾಮಭಟ್ಟರಿಗೆ ಹೊಳೆಯಿತು. ಈ ಘಟನೆ ಚಿಂತಿಸ ಹಚ್ಚಿತು. ಇದು ವೀರಪ್ಪಜ್ಜನವರು ಬುಟ್ಟಿಯಲ್ಲಿಯ ಸವತೆಕಾಯಿ ತಿಂದುದರ ಫಲವೆಂದು ಸ್ಮರಣೆಗೆ ಬಂದಿತು. ಆಗವರು ತಮ್ಮ ಮಿತ್ರರಲ್ಲಿ ಈ ಘಟನೆ ಹೇಳಿ, 'ಶಿವೇನಸಂತೃಪ್ತೋತೃಪ್ತೋ ಭವತಿ ಶಂಕರಃ' ಎಂಬ ಮಾತು ನಿಜವಾಗಿ ಪರಿಣಮಿಸಿತೆಂದು ಆನಂದದಿಂದ ಹೇಳಿಕೊಳ್ಳುತ್ತಿದ್ದರು.

**ಅಜ್ಜನ ಅನುಗ್ರಹ ಶಕ್ತಿ :**

ಒಂದು ದಿನ ನಮ್ಮ ಕಥಾನಾಯಕ ಶ್ರೀ ಹುಚ್ಚೀರಪ್ಪಜ್ಜ ಎಂದಿನಂತೆ ಭಿಕ್ಷೆಗೆ ನರೇಗಲ್ಲ ಗ್ರಾಮಕ್ಕೆ ಹೋರಟಿದ್ದಾನೆ. ಆಗ ಒಕ್ಕಲಿಗರ ಓಣಿಯಲ್ಲಿ ಹಾಯ್ದು ಹೋಗುವಾಗ ಒಬ್ಬ ಬ್ರಾಹ್ಮಣ ಮುದುಕಿ ಅಜ್ಜನಿಗೆ "ಅಜ್ಜಾ! ಮಗಳು ವಯಸ್ಸಿಗೆ ಬಂದು ಬಹಳ ವರ್ಷಗಳು ಆದವು. ಆದರೂ ಆಕೆಯು ಋತುಮತಿ ಆಗಲೇ ಇಲ್ಲ. ಮುಂದೆ ಆಕೆಗೆ ಲಗ್ನ ಮಾಡಿಕೊಡುವದಾದರೂ ಹೇಗೆ ?" ಎಂದು ದೈನ್ಯದಿಂದ ಕೇಳಿದಳು. ಅದಕ್ಕೆ ಅಜ್ಜ ಆ ಮುದುಕಿಗೆ "ಒಂದು ಬಳ್ಳಿಗೆ ಒಂಭತ್ತು ಕಾಯಿ" ಎಂದು ಮೇಲಿಂದ ಮೇಲೆ ಅನ್ನುತ್ತ ಮುಂದೆ ಸಾಗಿದನು.

ಆ ಬ್ರಾಹ್ಮಣ ಮುದುಕಿಗೆ ಅಜ್ಜನ ಮೇಲೆ ತುಂಬಾ ವಿಶ್ವಾಸ, ಅದೇ ಧೈರ್ಯದಿಂದ ಮಗಳ ಮದುವೆಯನ್ನು ಕೆಲವೇ ದಿನಗಳಲ್ಲಿ ಮಾಡಿ ಮುಗಿಸಿದಳು. ಮಗಳು ಋತುಮತಿಯಾಗದಿದ್ದರೂ ಗಂಡನ ಮನೆಗೆ ಹೋಗಿ ಅಜ್ಜ ಹೇಳಿದಂತೆ ಒಂಭತ್ತು ಮಕ್ಕಳ ತಾಯಿಯಾದಳು. ಅನೈಸರ್ಗಿಕವಾದ ಈ ಘಟನೆ ಅಜ್ಜನ ತಪೋಶಕ್ತಿಗೆ ಒಂದು ಜೀವಂತ ಉದಾಹರಣೆ ಎಂದು ಆ ಓಣಿಯ ಜನರೆಲ್ಲ ಕೊಂಡಾಡಿದರು.

**ಸರ್ವ ವ್ಯಾಪಕತ್ವ :**

ಬೆಳಗಿನ ಜಾವ, ಬಾಲ ರವಿಯ ಕೋಮಲ ಕಿರಣಗಳು ವಿಶ್ವದ ಹೃದಯವನ್ನೇ ಉತ್ತೇಜಿಸಹತ್ತಿವೆ. ಈ ಸಮಯದಲ್ಲಿ ಕೋಡಿಕೊಪ್ಪದ ಹಳೇಮನಿಯವರ ತೋಟದ ಹತ್ತಿರ ವೀರಪ್ಪಜ್ಜನು ಬರುತ್ತಿದ್ದಾನೆ. ಅಷ್ಟರೊಳಗೆ ಅಲ್ಲಿಯೇ ಸಮೀಪದಲ್ಲಿ ಕೆಲವು ಹುಡುಗರು ತೋಟದಲ್ಲಿ ಬೆಳೆದು ನಿಂತ ಕಬ್ಬಿನ ಪೈರನ್ನು ನೋಡುತ್ತಾ ಆಸೆಗಣ್ಣಿನಿಂದ ನಿಂತಿದ್ದರು. ಆಗ ಆ ಹುಡುಗರ ಮನೋಗತ ಆತನಿಗೆ ಅರ್ಥವಾಗಿರಬೇಕು. ಆದರೆ, ತೋಟಕ್ಕೆ ಬಲವಾದ ಬೇಲಿ ಇತ್ತು. ಅದರ ಒಳಗಡೆ ಹೋಗಲು ಒಂದೇ ಚಿಕ್ಕ ಕಾಲುದಾರಿ ಇತ್ತು

ಏನು ತಿಳಿಯಿತೋ ಏನೋ, ಹುಚ್ಚೀರಪ್ಪಜ್ಜನು ಆ ಕಾಲು ದಾರಿ ಹಿಡಿದು, ಕಬ್ಬಿನ ತೋಟಕ್ಕೆ ಹೋಗಿ, ಎರಡು ಕಬ್ಬಿನ ಗಳಗಳನ್ನು ಲಟ ಲಟನೇ ಮುರಿದು ಕಿತ್ತೇ ಬಿಟ್ಟನು. ತೋಟ ಕಾಯುವ ಆಳು ಅಲ್ಲಿಯೇ ಇನ್ನೊಂದು ಭಾಗದಲ್ಲಿ ಮೆಂಚಿಗೆಯ ಮೇಲೆ ನಿಂತಿದ್ದನು. ಅವನಿಗೆ ಈ ಕಬ್ಬು ಮುರಿದ ಸಪ್ಪಳ ಕೇಳಿಸಿರಬೇಕು ಅವನು ಮೆಂಚಿಗೆಯು ಮೇಲಿಂದ ಕೆಳಕ್ಕೆ ಹಾರಿ, ಸಪ್ಪಳವಾದ ಸ್ಥಳಕ್ಕೆ ಓಡಿಬಂದನು.

ನೋಡುತ್ತಾನೆ! ಹುಚ್ಚೀರಪ್ಪಜ್ಜನ ಕೈಯಲ್ಲಿ ಎರಡು ಕಬ್ಬಿನ ಗಳಗಳಿವೆ. ಆ ಆಳು ಮಗನು ಆ ಗಳಗಳನ್ನು ಆತನಿಂದ ಕಸಿದುಕೊಂಡು, ವೀರಪ್ಪಜ್ಜನು ನೆಲಕ್ಕೆ ಬೀಳುವಂತೆ ಥಳಿಸ ಹತ್ತಿದನು. ಆಗ ಹುಚ್ಚೀರಪ್ಪಜ್ಜ ಆ ಆಳುಮಗನಿಗೆ, ಹೊಡಿ ಈ ಮೂಳನ್ನ, ಆ ಹುಡುಗರಿಗೆ ಈ ಕಬ್ಬು ಕೊಡಾಕ, ಈ ತೋಟ ಇವರಪ್ಪಂದೇನು? ಎಂದು ಹೇಳುತ್ತಾ ಅವನು ಹೊಡೆದ ಹಾಗೆ ತನ್ನ ಮೈಯೊಡ್ಡ ಹತ್ತಿದನು.

ಆಗ, ಆಳಿಗೆ ತೋಟದಲ್ಲಿದ್ದ ತನ್ನ ಗುಡಿಸಲಿಂದ ತನ್ನ ಹೆಂಡತಿಯ ಬೋರಾಟ – ಕಿರುಚಾಟ–ಅಳುವದು, ಲಬ–ಲಬ ಹೊಯಿಕೊಳ್ಳುವದು ಕೇಳಿಸಹತ್ತಿತ್ತು. ಅವನು ಗಾಬರಿಯಾಗಿ ಹುಚ್ಚೀರಪ್ಪಜ್ಜನನ್ನು ಹೊಡೆಯುವದನ್ನು ಬಿಟ್ಟು ತನ್ನ ಗುಡಿಸಲಿಗೆ ಓಡಿ ಹೋದನು. ಅಲ್ಲಿ ನೋಡುತ್ತಾನೆ– ತನ್ನ ಹೆಂಡತಿ ಉರುಳಾಡುತ್ತಾ ಹೊಯಿಕೊಳ್ಳುತ್ತ ಅಳುತ್ತಿದ್ದಾಳೆ.

ಅವನಿಗೆ ಏನೂ ತೋಚದಂತಾಯಿತು. ತನ್ನ ಹೆಂಡತಿಯನ್ನು ಏನಾಗಿದೆ? ಎಂದು ಕೇಳಿದ. ಆಕೆ ತನ್ನ ಮೈಮೇಲಿನ ಬಾರುಗಳನ್ನು ತೋರಿಸುತ್ತಾ, ಯಾರೋ ನನ್ನನ್ನು ಹೊಡೆಯುತ್ತಿದ್ದಾರೆ. ಆದರೆ, ಅವರು ನನ್ನ ಕಣ್ಣಿಗೆ ಕಾಣಲೊಲ್ಲರು ಎಂದು ಅಳುತ್ತ ಹೇಳಿದಳು.

ಆಗ, ಆ ಆಳು ಮಗನಿಗೆ ತಿಳಿಯಿತು. ನಾನು ಎಂತಹ ತಪ್ಪು ಮಾಡಿದೆ ಎಂದು. ಅವನು ತನ್ನ ಹೆಂಡತಿಗೆ, ''ಹುಚ್ಚೀರಪ್ಪಜ್ಜ ನಮ್ಮ ತೋಟಕ್ಕೆ ಬಂದು ಕಬ್ಬು ಕಿತ್ತನು. ಅದಕ್ಕೆ ನಾನು ಅವನನ್ನು ಹೊಡೆದೆ, ಆದರೆ, ಆ ಪೆಟ್ಟುಗಳು ಅವನಿಗೆ ಬೀಳದೇ ನಿನಗೆ ಬಿದ್ದವು'' ಎಂದು ಹೇಳಿದನು.

ಇದನ್ನು ಕೇಳಿದ ಅವನ ಹೆಂಡತಿ ''ಮಹಾರಾಯಾ ! ಅವನನ್ನು ಯಾಕೆ ಬಡಿದೆ? ಅವ ನಮ್ಮಂಗ ಮನುಷ್ಯ ಅಲ್ಲ ? ಅವ ಕೈಲಾಸದ ಶಿವಪ್ಪ ಅಂತ ಮೊನ್ನೆ ನರೇಗಲ್ಲಿಗೆ ಬಂದ ಬ್ರಾಹ್ಮಣ ಗುರುಗಳು ಹೇಳಿ ಹೋಗ್ಯಾರ ಅಂತಾ ಊರಾಗೆಲ್ಲಾ ಸುದ್ದಿ. ನಾ ಕಿವಿ ಮುಟ್ಟ ಕೇಳೀನಿ. ನಡಿ ! ಅವನ ಹತ್ತಿರ ಹೋಗಿ, ಅವನ ಕಾಲಿಗೆ ಬಿದ್ದು, ತಪ್ಪಾತು ಮರಾಯಾ ಅಂತ ಬೇಡಿಕೊಳ್ಳೂನು'' ಎಂದಳು. ಅದಕ್ಕೆ ಆಕೆಯ ಗಂಡ, ''ಹೌದು ! ಆದರೆ, ಈಗ ಆ ಅಜ್ಜ ಅಲ್ಲಿ ಇರಬೇಕಲ್ಲ? ನಾ ಇತ್ತ ಬಂದ ಕೂಡಲೇ ಅವ ಎತ್ತ ಹೋದನೋ ಏನೋ'' ಎಂದು ಅನುಮಾನಿಸಿದ.

ಅದಕ್ಕೆ ಅವನ ಹೆಂಡತಿ, 'ಆತ ಎಲ್ಲಿಗೆ ಹೋಗಬೇಕು? ಅವ ಇರೋದು ಸುಡುಗಾಡದಾಗ. ನಾವು ಅಲ್ಲಿಗೆ ಒಂದೀಸು ಕಬ್ಬಿನಗಳ ತಗೊಂಡು ಹೋಗಿ ಕಾಲ ಹಿಡಿದುಕೊಂಡು ಬರೂನು ಎಂದು ಆಕೆ ತನ್ನ ಗಂಡನನ್ನು ಕರಕೊಂಡು ಕಬ್ಬು ಕಿತ್ತ ಸ್ಥಳಕ್ಕೆ ಬಂದು ನೋಡುತ್ತಾರೆ. ಹುಚ್ಚೀರಪ್ಪಜ್ಜ, ಅಲ್ಲಿಯೇ ನಿಂತಿದ್ದ. ಎಲ್ಲಿಗೂ ಹೋಗಿರಲಿಲ್ಲ !

ಅವಳಿಗೆ ಆಶ್ಚರ್ಯ. 'ಅಜ್ಜ ಕಬ್ಬಿನ ಕಳವಿಗೆ ಬಂದಿದ್ದರೆ, ನಾನಿತ್ತ ಬಂದ ಕೂಡಲೇ ತಾನತ್ತ ಹೋಗುತ್ತಿದ್ದ. ಆತ ಕಳವಿಗೆ ಬಂದಿಲ್ಲ ಅನ್ನುವದು ಈಗ ತಿಳೀತು' ಎಂದು ಬಹಳ ಪಶ್ಚಾತ್ತಾಪ ಪಟ್ಟ. ಅವನ ಹೆಂಡತಿ ತನ್ನ ಗಂಡನನ್ನು ಹುಚ್ಚೀರಪ್ಪಜ್ಜನ ಪಾದದ ಮೇಲೆ ಕೆಡವಿ, ತಾನೂ ಆತನ ಪಾದದ ಮೇಲೆ ಬಿದ್ದು, 'ಎಪ್ಪಾ ! ದೇವರು, ನಮ್ಮದು ಬಹಳ ತಪ್ಪಾಗ್ಯೆತಿ. ನಾವಿಬ್ಬರೂ ನಿನ್ನ ಮಕ್ಕಳು ಅಂತಾ ತಿಳಿದು, ಇದನ್ನು ಹೊಟ್ಯಾಗ ಹಾಕ್ಕೋಬೇಕು' ಎಂದು ಹೇಳಿ ಕಣ್ಣೀರು ತೆಗೆದಳು.

ಆಕೆಯ ಗಂಡ ನಾಲ್ಕಾರು ಕಬ್ಬಿನಗಳ ಕಿತ್ತು, ಪೆಂಡೀಕಟ್ಟಿ, ಅದನ್ನು ತೆಗೆದುಕೊಂಡು ತನ್ನ ಹೆಂಡತಿಯೊಡನೆ ಹುಚ್ಚೀರಪ್ಪಜ್ಜನನ್ನು ಕರೆದುಕೊಂಡು, ಮೊದಲು ಹುಚ್ಚೀರಪ್ಪಜ್ಜ ಬಂದ ಕಾಲುದಾರಿಯಿಂದಲೇ ತೋಟದ ಹೊರಗೆ ಬಂದ. ಕಬ್ಬಿನ ಗಳದ ಪೆಂಡಿಯನ್ನು ಆತನ ಕೈಗೆ ಕೊಟ್ಟು, ಮತ್ತೊಮ್ಮೆ ಆತನ ಪಾದದ ಮೇಲೆ ಬಿದ್ದು, ಹೋಗಿ ಬಾ ಎಂದು ಹೇಳಿ, ಅಲ್ಲಿಯೇ ಹೆಂಡತಿಯೊಡನೆ ನಿಂತ.

ಹುಚ್ಚೀರಪ್ಪಜ್ಜ ತೋಟದ ಹೊರಗೆ ಬಂದಾಗ, ಅಲ್ಲಿ ಮೊದಲು ನಿಂತಿದ್ದ ಬಾಲಕರು ಅಲ್ಲಿಯೇ ಇದ್ದರು. ಅವರಿಗೆ ಹುಚ್ಚೀರಪ್ಪಜ್ಜ ತನ್ನಲ್ಲಿದ್ದ ಕಬ್ಬಿನ ಗಳಗಳನ್ನೆಲ್ಲ ಹಂಚಿ, ಕೈಬೀಸುತ್ತ ಏನೋ ವಟಗುಡುತ್ತ ಸ್ಮಶಾನದ ಹಾದಿ ಹಿಡಿದ. ಇದನ್ನೆಲ್ಲ ತೋಟದ ಆಳು ಮತ್ತು ಅವನ ಹೆಂಡತಿ ಕಣ್ಣಿನಿಂದ ನೋಡಿ, 'ಇಂಥ ದೇವರಂಥವರನ್ನು ಕಳ್ಳನೆಂದು ಬಡಿದು, ಎಂಥ ಪಾಪ ಮಾಡಿದೆವು' ಎಂದು ತಮ್ಮ ಮನಸ್ಸಿನಲ್ಲಿ ಮರಗುತ್ತ ತೋಟದ ಒಳಗೆ ಹೋದರು.

ಹುಚ್ಚೀರಪ್ಪಜ್ಜನ ಈ ಘಟನೆ ಸರ್ವಾತ್ಮ ಭಾವನೆಯಿಂದ ಹೊಂದಿದವರ ಸ್ಥಿತಿಯಾಗಿದೆ. ಅವರಿಗೆ ಇದು ತನ್ನದು, ಅದು ಬೇರೆಯವರದು ಅನ್ನುವ ಭಾವನೆ ಇರುವದಿಲ್ಲ.

ನಾನು–ನನ್ನದು ಎಂಬ ಅಹಂಕಾರವನ್ನು ಕಳೆದುಕೊಂಡವರೇ ಮಹಾತ್ಮರು. ಇದರಿಂದ ಅವರಲ್ಲಿ ಜೀವಭಾವಕ್ಕೆ ಕಾರಣವಾದ ಮಲ–ವಿಕ್ಷೇಪ ಅಪರಣಗಳು ಅಳಿದು ಹೋಗಿ, ಸಂಪೂರ್ಣ ಶಿವಭಾವ ಬಂದು ಬಿಟ್ಟಿರುತ್ತದೆ. ಯಾವಾಗ್ಗೆ ಶಿವಭಾವ ಉಂಟಾಗುವದೋ ಆಗ ಶಿವನಲ್ಲಿದ್ದ ಸರ್ವಜ್ಞತ್ವ ಸರ್ವ ವ್ಯಾಪಕತ್ವ ಹಾಗೂ ಸರ್ವಕರ್ತೃತ್ವ ಇವು ಸಿದ್ಧಿಸಲ್ಪಡುವವು.

ತೋಟದ ಹತ್ತಿರ ನಿಂತ ಬಾಲಕರಿಗೆ ಕಬ್ಬುಗಳ ಮೇಲೆ ಅಪೇಕ್ಷೆಯಾಗಿದೆ. ಎಂದು ತಿಳಿಯಲು ವೀರಪ್ಪಜ್ಜನಲ್ಲಿಯ ಸರ್ವಜ್ಞತ್ವ ಕಾರಣವಾಯಿತು. ಅದರಂತೆ ತೋಟದ ಆಳು ಬಡಿದ ಪೆಟ್ಟುಗಳು ಅವನ ಹೆಂಡತಿಗೆ ಬಿದ್ದದ್ದು ವೀರಪ್ಪಜ್ಜನಲ್ಲಿಯ ಸರ್ವವ್ಯಾಪಕತ್ವವನ್ನು ತೋರಿಸುತ್ತದೆ. ಅದರಂತೆ ತೋಟದ ಕಬ್ಬುಗಳನ್ನು ಬಯಸಿದ ಬಾಲಕರಿಗೆ ವೀರಪ್ಪಜ್ಜನ ಸಂಕಲ್ಪದಂತೆ ದೊರೆತದ್ದು, ವೀರಪ್ಪಜ್ಜನಲ್ಲಿಯ ಸರ್ವಕರ್ತೃತ್ವವೇ ಆಗಿದೆ ಎಂದು ಧಾರಾಳವಾಗಿ ಹೇಳಬಹುದು.

ಇವೆಲ್ಲವುಗಳ ಮೇಲಿಂದ ಹುಚ್ಚೀರಪ್ಪಜ್ಜ ತನ್ನ ಅನುಪಮ ಶಕ್ತಿಯಿಂದ ತನ್ನಲ್ಲಿಯ ಜೀವಭಯವನ್ನು ನೀಗಿಕೊಂಡು, ಶಿವಭಾವ ಪಡೆದುಕೊಂಡಿದ್ದನು. ಸಾಕ್ಷಾತ್ ಶಿವಸ್ವರೂಪನೇ ತಾನಾದನೆಂದು ನಿಸ್ಸಂದೇಹವಾಗಿ ಹೇಳಬಹುದು.

## ತಪೋಭೂಮಿಯಾದ ಡೋಣಿಕಲ್ಲ ಏರಿ

ಈ ರೀತಿ, ದಿನಕ್ಕೊಂದು ಶ್ರೀ ಹುಚ್ಚೀರಪ್ಪಜ್ಜನ ಮಹಿಮೆಗಳು ಪ್ರಕಟವಾಗುತ್ತ ಹೋದಂತೆ, ಜನರಲ್ಲಿ ಆತನ ವಿಷಯಕ್ಕೆ ಭಕ್ತಿಭಾವ–ಗೌರವಗಳು ಬೆಳೆಯುತ್ತಾ ಹೋದವು. ಮೊದಲು ಶ್ರೀ ಹುಚ್ಚೀರಪ್ಪಜ್ಜನನ್ನು ಅವನೊಬ್ಬ ಹುಚ್ಚ ಎಂದು ಉಪೇಕ್ಷೆ ಮಾಡಿದ ಜನರೇ ಈಗ ಕದ್ದು ಮುಚ್ಚಿ ಬಂದು, ಆತನ ಪಾದಕ್ಕೆ ಅಡ್ಡ ಬೀಳಹತ್ತಿದರು.

ಪರ ಊರಿನಿಂದ ತಮ್ಮ ಮಡದಿ ಮಕ್ಕಳೊಡನೆ ಚಕ್ಕಡಿ ಹೂಡಿಕೊಂಡು, ಶ್ರೀ ವೀರಪ್ಪಜ್ಜನವರ ದರ್ಶನಕ್ಕೆ ಬರುವವರ ಸಂಖ್ಯೆ ದಿನಗಳೆದಂತೆ, ಹೆಚ್ಚುತ್ತಾ ಹೋಯಿತು. ಶ್ರೀ ಹುಚ್ಚೀರಪ್ಪಜ್ಜ ಈ ಸಂಸಾರಿಕರಿಗಾಗಿ ಇನ್ನು ಸ್ಮಶಾನದಲ್ಲಿ ಇರುವದು ವಿಹಿತವಲ್ಲವೆಂದು ಭಾವಿಸಿರಬೇಕು. ಅಂತೆಯೇ ಕೋಡಿಕೊಪ್ಪದ ನೈಋತ್ಯ ದಿಕ್ಕಿನಲ್ಲಿ ಅಂದಾಜು ಒಂದು ಕಿಲೋ ಮೀಟರ ದೂರದಲ್ಲಿ ಡೋಣೀಕಲ್ಲ ಏರಿಗೆ ಹೋಗಿ, ಎರಡು ಕತ್ತರಿಯ ಬಾಂಧುಗಲ್ಲಗಳ ನಡುವೆ ವಾಸ್ತವ್ಯ ಮಾಡಿದನು. ಶ್ರೀ ವೀರಪ್ಪಜ್ಜನ ಅಂತಸ್ತು ಎತ್ತರಕ್ಕೆ ಹೋಗಿದೆ ಎಂಬುದನ್ನು ಎತ್ತಿತೋರಿಸುವಂತೆ ಆ ಪ್ರದೇಶ ಭೂಮಿಯ ಸಮಪಾತಳಿಯಿಂದ ಬಹಳ ಎತ್ತರದಲ್ಲಿ ಇದೆ.

ಇಲ್ಲಿ ನಿಂತು ನೋಡಿದರೆ, ನೆರೆಯ ಗ್ರಾಮಗಳು ದೃಷ್ಟಿಗೆ ಬೀಳುತ್ತವೆ. ಅದರಂತೆ ಅಲ್ಲಿಂದ ನೋಡಿದರೆ, ಈ ಏರಿ ಕಾಣಿಸುತ್ತದೆ. ಈ ಹುಚ್ಚೀರಪ್ಪಜ್ಜ ಕುಳಿತ ಜಾಗೆಯ ಹತ್ತಿರ, ಯರೇಬೇಲೇರಿಗೆ ಹೋಗುವ ದಾರಿ ಇದೆ. ಅಲ್ಲಿ ದಾರಿಗರ ಹೊರತು ಮತ್ತಾರ ಸಂಚಾರವೂ ಇರುವದಿಲ್ಲ. ಆ ಏರಿಯ ಮೇಲೆ ನೆರಳು ನೀಡುವ ಗಿಡ–ಮರಗಳಂತೂ ಒಂದೂ ಇಲ್ಲ. ಬಟ್ಟ ಬಯಲಿನಲ್ಲಿಯೇ ಆತನ ವಾಸ. ಈಗ ಆತನ ವಯಸ್ಸು ಸುಮಾರು ಅರವತ್ತು. ಕ್ರಿ.ಶ. ೧೯೧೫ ಎಂದು ಹೇಳಬಹುದು. ಇಲ್ಲಿಗೆ ಬಂದ ನಂತರ, ಶ್ರೀ ವೀರಪ್ಪಜ್ಜ ನರೇಗಲ್ಲ ಭಿಕ್ಷೆಗೆ ಹೋಗುವದನ್ನೇ ಕಡಿಮೆ ಮಾಡಿಬಿಟ್ಟನು.

ಇಲ್ಲಿಯ ಕಾಲುದಾರಿಯಲ್ಲಿ ಅಡ್ಡಾಡುವ ಪ್ರಯಾಣಿಕರು ಅಥವಾ ದನ ಕಾಯುವವರು, ಹೊಲ ಮನೆಗೆ ಹೋಗಿ ಬರುವವರು ಏನಾದರೂ ತಾವು ತಂದ ಬುತ್ತಿಯಲ್ಲಿ ಸ್ವಲ್ಪ ಕೊಟ್ಟರೆ, ಅದೇ ಶ್ರೀ ಹುಚ್ಚೀರಪ್ಪಜ್ಜನ ಆಹಾರ, ಇಲ್ಲವಾದರೆ ಇಲ್ಲ.

> ಯದೃಚ್ಛಾಲಾಭ ಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।
> ಸಮಃ ಸಿದ್ಧಾವ ಸಿದ್ಧೌಚ ಕೃತ್ವಾಪಿ ನ ವಿಬಧ್ಯತೆ ॥

ಅಂದರೆ, ತಾನಾಗಿ ಬಂದುದರಲ್ಲಿ ತೃಪ್ತಿಯುಳ್ಳವನೂ, ದ್ವಂದ್ವಾತೀತನೂ, ಮಾತ್ಸರವಿಲ್ಲದವನೂ, ಲಾಭ–ಹಾನಿಗಳಲ್ಲಿ ಸಮಬುದ್ಧಿಯುಳ್ಳವನೂ, ಆದವನೇಯೋಗಿ. ಈ ಮಾತು ಅಕ್ಷರಶಃ ಆತನಿಗೆ ಅನ್ವಯಿಸುವದು. ದಿನಗಳು

ಗತಿಸಿದಂತೆ, ಆತನ ಹಸಿವು. ತೃಷೆಗಳು ಅಡಗುತ್ತ ಹೋದವು. ಆತನು ಮಲ–ಮೂತ್ರ ವಿಸರ್ಜನೆಗೆ ಹೋದದ್ದನ್ನಾಗಲಿ, ಇಲ್ಲವೆ ನಿದ್ರೆ ಮಾಡುತ್ತಿರುವದನ್ನಾಗಲಿ ಈ ವರೆಗೆ ಯಾರೂ ನೋಡಿಯೇ ಇಲ್ಲ. ಪ್ರಕೃತಿ ಸಂಬಂಧವನ್ನೇ ಕಿತ್ತು ಹಾಕಿದ ಈ ಮಹಾ ಸಂಯಮಶೀಲನಿಗೆ ಹಗಲು ಯಾವುದೋ ? ರಾತ್ರಿ ಯಾವುದೋ ? ಯಾವಾಗ ನೋಡಿದರೂ ಈ ಮಹಾತ್ಮ ಕುಳಿತೇ ಇರುತ್ತಿದ್ದ. ಇದನ್ನೇ ಗೀತೆ.

ಯಾ ನಿಶಾ ಸರ್ವ ಭೂತಾನಾಂ - ತಸ್ಯಾಂ ಜಾಗರ್ತಿ ಸಂಯಮಿ ।
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇ ॥

ಎಂದು ಸ್ಪಷ್ಟವಾಗಿ ಹೇಳಿದೆ. ಅಂದರೆ, ಎಲ್ಲ ಪ್ರಾಣಿಗಳಿಗೆ ಯಾವುದು ರಾತ್ರಿಯೋ ಅದರಲ್ಲಿ ಜಿತೇಂದ್ರಿಯನು ಎಚ್ಚತ್ತಿರುತ್ತಾನೆ. ಯಾವದರಲ್ಲಿ ಪ್ರಾಣಿಗಳು ಎಚ್ಚತ್ತಿರುವವೋ ಅದು ನೋಡುತ್ತಿರುವ ಮುನಿಗೆ ರಾತ್ರಿಯಾಗಿದೆ. ಕಾಲಚಕ್ರ ಉರುಳಿದಂತೆ, ಶ್ರೀ ಹುಚ್ಚೀರಪ್ಪಜ್ಜನಿದ್ದ ಡೋಣೀಕಲ್ಲ ಏರಿ ಒಂದು ಪವಿತ್ರ ಕ್ಷೇತ್ರವಾಯಿತು.

ಆತನು ಎಷ್ಟೇ ಏಕಾಂತ ಬಯಸಿದರೂ, ಮುಂದೆ ಅದು ಉಳಿಯಲಿಲ್ಲ. ಶ್ರೀ ವೀರಪ್ಪಜ್ಜನಿಗೆ ಹರಕೆ ಹೊತ್ತವರು ಅನ್ನ ಸಂತರ್ಪಣೆಗಳನ್ನು ಮಾಡಹತ್ತಿದರು. ಶ್ರೀ ವೀರಪ್ಪಜ್ಜನ ಮುಂದೆ ಹರಕೆ ಹೊತ್ತವರು, ತಂದ ಮುಡುಪುಗಳು ರಾಶಿ ರಾಶಿಯಾಗಿ ಬೀಳಹತ್ತಿದವು. ಆದರೆ, ಶ್ರೀ ವೀರಪ್ಪಜ್ಜ ಕಣ್ಣೆತ್ತಿ ಸಹ ಅವುಗಳನ್ನು ನೋಡುತ್ತಿರಲಿಲ್ಲ. ಬಂದವರೇ ಅವುಗಳನ್ನು ಅಲ್ಲಿದ್ದ ಬಡಬಗ್ಗರಿಗೆ ಹಂಚಿ ಬಿಡುತ್ತಿದ್ದರು. ಹುಣ್ಣಿಮೆ–ಅಮವಾಸ್ಯೆಗಳಲ್ಲಿಯಂತೂ ಸಹಸ್ರಾರು ಜನರು ಬರಹತ್ತಿದರು. ಊಟೋಪಚಾರಗಳು ನಡೆಯಹತ್ತಿದವು. ಭಜನೆ–ಮೇಳಗಳಂತೂ ಹಗಲು–ರಾತ್ರಿ ನಡೆಯುತ್ತಿದ್ದವು.

ಮುಂದಾಗುವ ತಮ್ಮ ಭವಿಷ್ಯ ತಿಳಿದುಕೊಳ್ಳಲಿಕ್ಕೆ ಬಂದವರೆಷ್ಟೋ ! ತಮ್ಮ ರೋಗ–ರುಜಿನೆಗಳನ್ನು ಕಳೆದುಕೊಳ್ಳಲಿಕ್ಕೆ ಬಂದವರೆಷ್ಟೋ! ಹೀಗೆ, ಒಂದಲ್ಲ ಒಂದು ರೀತಿಯಿಂದ ಪ್ರಾಪಂಚಿಕರು ತಮ್ಮ ತಾಪತ್ರಯಗಳನ್ನು ಪರಿಹರಿಸಿಕೊಳ್ಳಲಿಕ್ಕೆ ಬರುವವರ ಸಂಖ್ಯೆ ದಿನದಿನಕ್ಕೆ ಹೆಚ್ಚುತ್ತಾ ಹೋಯಿತು.

ಇದರಿಂದ ಶ್ರೀ ವೀರಪ್ಪಜ್ಜನ ಮುಂದಿನ ಹಣ್ಣು–ಕಾಯಿಗಳು ವಿಪುಲವಾಗಿ ಬಂದು, ಅವು ದರ್ಶನಾರ್ಥಿಗಳಿಗೆ ಪ್ರಸಾದರೂಪವಾಗಿ ಹಂಚಲ್ಪಡುತ್ತಿದ್ದವು. ಹೀಗೆ, ಬಂದವರಿಗೆ ತುರೀಯ ಸ್ಥಿತಿಯಲ್ಲಿದ್ದ ಶ್ರೀ ವೀರಪ್ಪಜ್ಜ ನೇರವಾಗಿ ಏನೂ ಹೇಳುತ್ತಿರಲಿಲ್ಲ. "ಒಲ್ಲೆ ಅಂದರೆ ಹ್ಯಾಂಗ ಬಿಡತೈತಪಾ ಬಂದದ್ದು ಉಣಬೇಕಪ್ಪಾ, ಮಾಡಿದ್ದುಣ್ಣೋ ಮಾರಾಯಾ ಹೌದಿಲ್ಲಪಾ ? ಕಳ್ಳನ ಜೀವ ಹುಳ್ಳುಳ್ಳಗ ನೋಡಪ್ಪಾ, ಇನ್ನು ಹೋಗಪಾ, ಹಗಲೆಲ್ಲ ಇಲ್ಲಿಗೆ ಬರಬಾರದ್ರೆಪಾ !"

ಹೀಗೆ ಕೇಳುವವರ ಕಡೆಗೆ ಮುಖ ಸಹಿತ ತಿರುಗಿಸದೇ ತನ್ನಷ್ಟಕ್ಕೆ ತಾನೇ ಹೇಳಿಕೊಳ್ಳುತ್ತಿದ್ದ. ಇವು ತನ್ನನ್ನು ಕೇಳಲಿಕ್ಕೆ ಬಂದವರ ಪ್ರಶ್ನೆಗಳಿಗೆ ನೇರ ಉತ್ತರಗಳೇ ಆಗಿರುತ್ತಿದ್ದವು. ಅವುಗಳನ್ನು ತಿಳಿದುಕೊಂಡವರು ಅಷ್ಟಕ್ಕೆ ಸಮಾಧಾನ ಪಟ್ಟುಕೊಂಡು ಹೋಗುತ್ತಿದ್ದರು. ಆದರೆ, ಅಲ್ಲಿಯೇ ಇದ್ದ ಉಳಿದವರಿಗೆ ಇವು ಏನೂ ತಿಳಿಯುತ್ತಿರಲಿಲ್ಲ. ಶ್ರೀ ಹುಚ್ಚೀರಪ್ಪಜ್ಜ ಒಂದು ಕಲ್ಪವೃಕ್ಷ. ಯಾರಿಗೆ ಏನು ಬೇಕೋ ಅದು ಅಲ್ಲಿ ದೊರೆಯುತ್ತಿತ್ತು, ರೋಗಿಗಳಿಗೆ ವೈದ್ಯನಾಗಿ, ಪಿಶಾಚ ಬಾಧೆ ಇದ್ದವರಿಗೆ ಮಾಂತ್ರಿಕನಾಗಿ, ಭವಿಷ್ಯ ತಿಳಿಯಲು ಬಂದವರಿಗೆ ದೈವಜ್ಞನಾಗಿ ತೋರುತ್ತಿದ್ದ.

**ದೃಢ ವೈರಾಗ್ಯ :**

ಯಾವಾಗ ಶ್ರೀ ಹುಚ್ಚೀರಪ್ಪಜ್ಜ ಡೋಣೇಕಲ್ಲ ಏರಿಯ ಬೈಲಿನಲ್ಲಿ ಉರಿಬಿಸಿಲಿನೊಳಗೆ ಕುಳಿತನೋ ಆಗಲೇ ಅಲ್ಲಿ ಒಂದು ಬೇವಿನ ಸಸಿ ಹುಟ್ಟಿ ಭರದಿಂದ ಬೆಳೆದು ಆತನಿಗೆ ನೆರಳಿನ ಸೇವೆಮಾಡಹತ್ತಿತು. ಆದರೆ, ಶ್ರೀ ವೀರಪ್ಪಜ್ಜ ದೇಹ ಸುಖವನ್ನೇ ಅತಿಗಳೆದವನು. ಜ್ಞಾನಿಗಳಿಗೆ ದೇಹಸುಖವೆಂಬುದಿಲ್ಲ. ಅವನು ಈ ನೆರಳಿನಿಂದ ಪಡುವಣ ದಿಕ್ಕಿನತ್ತ ಸರಿಯುತ್ತ ಹೋದನು. ಇದೇ ನಿಜವಾದ ವೈರಾಗ್ಯ. ಒಮ್ಮೆ ದೇಹಕ್ಕೆ ಸುಖದ ಗೀಳು ಹತ್ತಿತೆಂದರೆ ಅದು ಬೆಳೆಯುತ್ತ ಹೋಗಿ ಅವನ ಅಧಃಪತನಕ್ಕೆ ಕಾರಣವಾಗುವದು. ಅದಕ್ಕಾಗಿಯೇ ಜ್ಞಾನಿಗಳು ''ಮೋಕ್ಷಸ್ಯಹೇತುಃ ಪ್ರಥಮೋನಿಗದ್ಯತೆ ವೈರಾಗ್ಯಮತ್ಯಂತ ನಿತ್ಯವಸ್ತು'' ಎಂದು ಹೇಳಿದ್ದಾರೆ.

**ಅಹಿಂಸಾ ಸಿದ್ಧಿ :**

ನರೇಗಲ್ಲಿನ ಒಬ್ಬ ಬ್ರಾಹ್ಮಣ ಭಕ್ತ ಶ್ರೀ ವೀರಪ್ಪಜ್ಜನ ದರ್ಶನಾರ್ಥವಾಗಿ ಬಂದ. ''ಅದು ಮಧ್ಯಾಹ್ನ ಕಾಲ'' ಊಟದ ಸಮಯವಾದ್ದರಿಂದ ಅಜ್ಜನ ಹತ್ತಿರ ಯಾರೂ ಇರಲಿಲ್ಲ. ಬ್ರಾಹ್ಮಣ ಅಜ್ಜನಿದ್ದ ಸ್ಥಾನವನ್ನು ಸಮೀಪಿಸುತ್ತಲೇ ಅಲ್ಲಿಯ ದೃಶ್ಯವನ್ನು ಕಂಡು, ಮುಂದಕ್ಕೆ ಒಂದು ಹೆಜ್ಜೆಯನ್ನೂ ಕೂಡಾ ಇಡುವ ಧೈರ್ಯ ಅವನಿಗೆ ಆಗಲಿಲ್ಲ.

ಒಂದು ಮಹಾ ಘಟಸರ್ಪವು ಅಜ್ಜನಿಗೆ ಸುತ್ತುಹಾಕಿ, ಆತನ ಮಸ್ತಕದ ಮೇಲೆ ಹೆಡೆಎತ್ತಿ ಆಡುತ್ತಿತ್ತು. ಇದನ್ನು ಕಂಡ ಆ ವಿಪ್ರೋತ್ತಮನು ಹೆದರಿ ಹಾಗೇ ಹಿಂದಕ್ಕೆ ಸರಿಯುತ್ತಾ, ಬಂದ ದಾರಿಹಿಡಿದು, ನರೇಗಲ್ಲಿಗೆ ಒಳ್ಳೆ ಭರಾಟೆಯಿಂದ ಹೋದ. ಇದನ್ನು ಆ ಬ್ರಾಹ್ಮಣನಿಂದ ಕೇಳಿದವರೆಲ್ಲ ಬೆರಗಾದರು.

ಯಾರಲ್ಲಿ ಅಹಿಂಸೆ ಸಿದ್ಧಿಸಿದೆಯೋ ಅವರಲ್ಲಿ ಎಂಥ ಕ್ರೂರ ಪ್ರಾಣಿಗಳು ಬಂದರೂ ಅವುಗಳಿಂದ ಅವರಿಗೆ ಯಾವ ಅಪಾಯವೂ ಆಗುವದಿಲ್ಲ. ಏಕೆಂದರೆ 'ಅಹಿಂಸಾ ಪ್ರತಿಷ್ಠಾ ಯಾಂ ತತ್ ಸನ್ನಿಧೌ ವೈರ ತ್ಯಾಗಃ ॥' ಎಂದು ಶ್ರೀ ಪತಂಜಲಿ ಮಹರ್ಷಿಗಳು ತಮ್ಮ ಯೋಗ ಸೂತ್ರದಲ್ಲಿ ವಿವರಿಸಿರುವರು.

ನಿರಂಜನ ಜಗದ್ಗುರು ತೋಂಟದ ಶ್ರೀಸಿದ್ಧಲಿಂಗೇಶ್ವರರು ಎಡೆಯೂರ ಪಕ್ಕದಲ್ಲಿರುವ ಕೆಗ್ಗೇರಿಯ ಹುದೋಟದಲ್ಲಿ ಲಿಂಗ ಪೂಜಾ ಆನಂದದಲ್ಲಿ ಕುಳಿತಿರುವಾಗ, ಅವರ ಮೇಲೆ ಹುತ್ತ ಬೆಳೆದು, ಅನೇಕ ಸರ್ಪಗಳು ಅವರ ಮೈ ಮೇಲೆ ಹರಿದಾಡಹತ್ತಿದವು. ಇದೇ ಸ್ಥಿತಿಯಲ್ಲಿ ಅವರು ಆ ಹುತ್ತದೊಳಗೆ ವರ್ಷಾರು ತಿಂಗಳು ಇದ್ದು, ನಂತರ ಹೊರ ಬಂದರು ಎನ್ನುವದನ್ನಿಲ್ಲಿ ಸ್ಮರಿಸಬಹುದು. ಇದು ಅವರಲ್ಲಿಯ ಅಹಿಂಸಾಸಿದ್ಧಿಯ ಪರಿಣಾಮ. ಶ್ರೀ ಹುಚ್ಚೀರಪ್ಪಜ್ಜನೂ ಅಂಥ ಅಹಿಂಸಾಮೂರ್ತಿ, ಆತನಿಗೆ ಎಲ್ಲ ಪ್ರಾಣಿಗಳಲ್ಲಿಯೂ ಆತ್ಮ ಭಾವ. ಎಲ್ಲ ಪ್ರಾಣಿಗಳೂ ಆತನಲ್ಲಿ ನಿರ್ವೈರಭಾವ

### ಶ್ರೀ ಬಸವರಾಜ ಶಾಸ್ತ್ರಿಗಳಿಗೆ ಕೃಪಾಭಾಗ್ಯ :

ಕೋಡಿಕೊಪ್ಪದ ಶ್ರೀ ಬಸವರಾಜ ಶಾಸ್ತ್ರಿಗಳು, ಕೋಡಿಕೊಪ್ಪಮಠ ಅವರು ಆ ಕಾಲದ ಪ್ರಕಾಂಡ ಪಂಡಿತರಲ್ಲಿ ಒಬ್ಬರು. ಕ್ರಿ.ಶ. ೧೯೪೯ಳ ರಲ್ಲಿ ಊರು ಬಿಟ್ಟು ಹೋದ ಈ ಮಹನೀಯರು ಕ್ರಿ.ಶ. ೧೯೧೪ಳ ರಲ್ಲಿ ಮತ್ತೆ ಹಿಂತಿರುಗಿ ಊರಿಗೆ ಬಂದು ನೋಡಿದಾಗ, ಕೋಡಿಕೊಪ್ಪ ಒಂದು ಪುಣ್ಯಕ್ಷೇತ್ರವಾಗಿ ಪರಿಣಮಿಸಿತ್ತು. ಶ್ರೀ ಹುಚ್ಚೀರಪ್ಪನೇ ಅದರ ಕ್ಷೇತ್ರಾಧಿಪತಿ ಸ್ವಯಂ ಶಿವನಾಗಿ ಬಿಟ್ಟದ್ದನು. ಇದನ್ನು ಕಂಡು ಶಾಸ್ತ್ರಿಗಳಲ್ಲಿ ಅತ್ಯಂತ ಆನಂದಾಶ್ಚರ್ಯಗಳು ಏಕಕಾಲಕ್ಕೆ ಉಂಟಾದವು.

ಅಂದು ಊರಲ್ಲಿ ಅನಾಮಧೇಯನಾಗಿದ್ದ ಬಸವಯ್ಯ ಈಗ ಬಸವರಾಜ ಶಾಸ್ತ್ರಿಗಳು ಆದದ್ದು ಶ್ರೀ ಹುಚ್ಚೀರಪ್ಪಜ್ಜನವರ ಕೃಪಾವಿಶೇಷವೆಂದು ಅವರೇ ತಮ್ಮ ಗ್ರಂಥದಲ್ಲಿ ಸ್ಮರಿಸಿದ್ದಾರೆ. ಶ್ರೀ ಬಸವರಾಜ ಶಾಸ್ತ್ರಿಗಳು ಕಾಶಿಯಿಂದ ಬಂದ ನಂತರ, ಹಾಳಕೇರಿ ಶ್ರೀ ಅನ್ನದಾನ ಮಹಾಸ್ವಾಮಿಗಳವರ ಸಂಸ್ಕೃತ ಪಾಠಶಾಲೆಯಲ್ಲಿ ಕೆಲವು ಕಾಲ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು.

ಆ ಮೇಲೆ, ಅಜ್ಜನವರ ಅಪ್ಪಣೆ ಮೇರೆಗೆ, ಮದ್ರಾಸಿಗೆ ಹೋಗಿ, ಅಲ್ಲಿಯ ಓರಿಯಂಟಲ್ ಲಾಯಬ್ರರಿಯಲ್ಲಿಯ ಧರ್ಮಗ್ರಂಥಗಳ ಸಂಶೋಧನೆ ಮಾಡಿದರು. ಅಲ್ಲಿ ಕೆಲವು ಮಹತ್ವದ ಧರ್ಮಗ್ರಂಥಗಳ ಹಸ್ತಪ್ರತಿಗಳೊಡನೆ ಕೋಡಿಕೊಪ್ಪಕ್ಕೆ ಹಿಂದಿರುಗಿದರು. ಆ ಬಳಿಕ, ಶ್ರೀ ಅಜ್ಜನವರ ಅಪ್ಪಣೆ ಮೇರೆಗೆ, ಮದ್ರಾಸದಿಂದ ತಂದಿದ್ದ ಗ್ರಂಥಗಳನ್ನು ಶೋಧಿಸಿ, ಅವರ ಮಠದಲ್ಲಿಯೇ ಬರೆಯಹತ್ತಿದರು.

ಇಷ್ಟೆಲ್ಲಾ ಆದರೂ, ಶ್ರೀ ಶಾಸ್ತ್ರಿಗಳ ಜೀವನ ಒಂದು ಮೆಟ್ಟಿಗೆ ಹತ್ತಿರಲಿಲ್ಲ. ಅದನ್ನು ನೋಡಿ, ಊರ ಹಿರಿಯರಾದ ಹಿರೇಗೌಡ್ರ ಬಸನಗೌಡರು ಶಾಸ್ತ್ರಿಗಳನ್ನು ಕರೆದುಕೊಂಡು, ಡೋಣಿಕಲ್ಲ ಏರಿಯಲ್ಲಿದ್ದ ಶ್ರೀ ಹುಚ್ಚೀರಪ್ಪಜ್ಜನ ಹತ್ತಿರ ಹೋಗಿ, ಶ್ರೀ ಹುಚ್ಚೀರಪ್ಪಜ್ಜನವರಿಗೆ ಪ್ರಣಾಮಸಲ್ಲಿಸಿ, ಶಾಸ್ತ್ರಿಗಳ ಭವಿಷ್ಯ ಕುರಿತು ವಿಜ್ಞಾಪಿಸಿಕೊಂಡರು. ಆಗ ಅಜ್ಜನು ತನ್ನಷ್ಟಕ್ಕೆ ತಾನು 'ಈಗೆಲ್ಲೆಪ್ಪ ಹೋಗೂದು. ಇದು ಹೋದ ಮೇಲೆಪ ಹೋಗೂದು!' ಅಂದನು.

ಇದನ್ನೆಲ್ಲ ಕೇಳಿದ ಆ ಉಭಯ ಸ್ನೇಹಿತರು ಅಜ್ಜನ ಪಾದಕ್ಕೆ ನಮಸ್ಕರಿಸಿ, ಕೆಲವು ದಿನಗಳ ಮೇಲಾದರೂ ಒಂದು ಮೆಟ್ಟಿಗೆ ಹತ್ತುವದು ಎಂದು ಸಮಾಧಾನ ಪಟ್ಟುಕೊಂಡು ಊರಿಗೆ ಹಿಂದಿರುಗಿದರು.

ಅದೇ ಮೇರೆಗೆ ಅಜ್ಜನು ಶಿವಾಧೀನನಾದ ನಂತರ, ನಾಲ್ಕು ತಿಂಗಳಲ್ಲಿ ವಿಜಾಪೂರ ಸಿದ್ದೇಶ್ವರ ಸಂಸ್ಥೆಯವರಿಂದ ಅವರ ಹೈಸ್ಕೂಲದಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಲು ಶಾಸ್ತ್ರಿಗಳು ಕ್ರಿ. ಶ. ೧೨–೮–೧೯೨೫ ರಲ್ಲಿ ಶಿಕ್ಷಕರಾಗಿ ನೆಮಕಗೊಂಡರು. ಮುಂದೆ ಕಾಲಕ್ರಮೇಣ ಅಲ್ಲಿಯೇ ಮನೆಮಾರುಗಳಿಸಿಕೊಂಡು, ನೆಮ್ಮದಿಯ ಜೀವನ ಸಾಗಿಸಹತ್ತಿದರು. ಅಂತೂ 'ಈಗೆಲ್ಲೆಪ ಹೋಗೂದು, ಇದು ಹೋದ ಮೇಲೆಪ ಹೋಗೂದು' ಎಂದು ಅಂದದ್ದು ಅವರ ಜೀವನದಲ್ಲಿ ಕೃಪಾಭಾಗ್ಯವಾಗಿ ಸತ್ಯದಲ್ಲಿ ಪರಿಣಮಿಸಿತು.

**ಶ್ರೀ ಕಾಶೀನಾಥ ಶಾಸ್ತ್ರಿಗಳಿಗೆ ಅನುಗ್ರಹ :**

ನರೇಗಲ್ಲಿನ ವೈದ್ಯರೂ ಮತ್ತು ಔಷಧ ತಯಾರಕರೂ, ದೇಶಭಕ್ತರೂ ಆದ ವೇ. ಮೂ. ಕಾಶೀನಾಥ ಶಾಸ್ತ್ರಿಗಳು ಗಚ್ಚಿನಮಠ, ಅವರು ವಿದ್ಯಾರ್ಥಿ ದೆಶೆಯಲ್ಲಿದ್ದಾಗ ಕಾಶಿಗೆ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ತಮ್ಮ ಒಬ್ಬ ಸ್ನೇಹಿತನೊಡನೆ ಹೋಗುವವರಿದ್ದರು.

ಹೀಗೆ ಹೋಗುವ ಮೊದಲು ಅವರೀರ್ವರು ಶ್ರೀ ಹುಚ್ಚೀರಪ್ಪಜ್ಜನ ದರ್ಶನಾಶೀರ್ವಾದಕ್ಕೆಂದು ಡೋಣಿಕಲ್ಲ ಏರಿಗೆ ಹೋಗಿ ಅಜ್ಜನ ಪಾದಕ್ಕೆ ನಮಸ್ಕರಿಸಿ ಅಲ್ಲಿಯೇ ಕುಳಿತರು.

ಅಜ್ಜ ಅವರ ಕಡೆಗೆ ಹೊರಳಿ ಸಹ ನೋಡದೇ ತನ್ನಷ್ಟಕ್ಕೆ ತಾನು ''ಒಬ್ಬನು ಹೋಗುವದು ಅಲ್ಲಿಗೆ ಇನ್ನೊಬ್ಬ ಹೊಳ್ಳಿ ಬರತಾನ'' ಎಂದು ಹೇಳಿಕೊಳ್ಳುತ್ತಿದ್ದ. ಇದನ್ನು ಕೇಳಿದ ಇಬ್ಬರೂ ಸ್ನೇಹಿತರಿಗೆ ಹೊರಳಿ ಬರುವವರು ಯಾರು ಎಂಬುದು ತಿಳಿಯಲಿಲ್ಲ. ಶ್ರೀ ಕಾಶಿನಾಥಶಾಸ್ತ್ರಿಗಳ ಸ್ನೇಹಿತನಿಗೆ ನೇತ್ರರೋಗ ಬಂದು ಕಾಶಿಯಂತಹ ಪಟ್ಟಣದಲ್ಲಿ ಎಷ್ಟು ತೋರಿಸಿದರೂ ನೆಟ್ಟಗಾಗದೇ ಇದ್ದುದ್ದರಿಂದ ಅವನು ತನ್ನ ಊರಿಗೆ ಮರಳಿಬಂದ. ಇದರಿಂದ ಅಜ್ಜನಭವಿಷ್ಯ ನಿಜವಾಯಿತು. ಅಜ್ಜನ ಅನುಗ್ರಹ ಆಶೀರ್ವಾದದಿಂದ ಶ್ರೀ ಕಾಶೀನಾಥ ಶಾಸ್ತ್ರಿಗಳು ವಿದ್ವಾಂಸರಾಗಿ ಮರಳಿದರು.

**ನಾಲ್ಕು ಪಾವಲಿದ್ದು ಒಂದು ಪಾವಲಿ ಕಳಿತು :**

ಬೂದಿಹಾಳ ಕೋಡಿಕೊಪ್ಪಕ್ಕೆ ಸಮೀಪದಲ್ಲಿ ಇರುವ ಒಂದು ಚಿಕ್ಕ ಗ್ರಾಮ. ಇಲ್ಲಿ ಭಿಕ್ಷಾವತಿಮಠದ ವೇ. ಚನ್ನಮಲ್ಲಯ್ಯನವರು ವೈದ್ಯಕೀಯ ವೃತ್ತಿಯಲ್ಲಿ, ಪಿಟೀಲುವಾದನದಲ್ಲಿ ತುಂಬಾ ಪರಿಣಿತರು. ಒಳ್ಳೇ ಪುರಾಣಿಕರು ಇವರು ಊರಲ್ಲಿ ಸರ್ವಜನಾಂಗಕ್ಕೂ ಅತೀ ಮೆಚ್ಚಿನವರಾಗಿದ್ದರು.

ಇವರು ಶಿವಾಧೀನರಾದಾಗ ಊರಲ್ಲಿಯ ಎರಡೂ ಪಕ್ಷಗಳಲ್ಲಿ ತಾಮುಂದು ನೀ ಮುಂದು ಎಂದು ಸಮಾಧಿ ಮಾಡಲು ಘರ್ಷಣೆ ಮಾಡಿದ ಘಟನೆ ಇವರ ವಿನಯ ಸಂಪನ್ನ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ. ಇಂತಹ ಪ್ರಸಂಗದಲ್ಲಿ ಅಧಿಕಾರಿಗಳು ಮಧ್ಯ ಪ್ರವೇಶಮಾಡಿ ಸಂಸ್ಕಾರ ಕ್ರಿಯೆನಡೆಸಿಕೊಟ್ಟರು. ಇಷ್ಟೊಂದು ಅವರ ವ್ಯಕ್ತಿತ್ವದ ಪ್ರಭಾವ ಊರಲ್ಲಿ ಇತ್ತು.

ಒಮ್ಮೆ ಇವರು ತಮ್ಮ ಶಿಷ್ಯರ ಲಗ್ನಕ್ಕೆ ಹೋಗಿದ್ದರು. ಆ ಮನೆಯಲ್ಲಿ ನಾಲ್ಕು ಲಗ್ನ ನಿರ್ಧರಿಸಲ್ಪಟ್ಟಿದ್ದವು. ಬಂಡಿಗಳು ಕೋಡಿಕೊಪ್ಪದ ಮಾರ್ಗವಾಗಿಯೇ ಊರಿಂದ ಹೊರಟಿದ್ದವು. ಆಗ ವೇ|| ಚನ್ನಮಲ್ಲಯ್ಯನವರು ಲಗ್ನದ ಮನೆಯ ಯಜಮಾನನನ್ನು ಕರೆದು, ''ಇಲ್ಲಿಯೇ ಡೋಣೀಕಲ್ಲ ಏರಿ ಮೇಲೆ ಮಹಾತ್ಮರಾದ ಶ್ರೀ ಹುಚ್ಚೀರಪ್ಪನವರು ಇದ್ದಾರೆ. ಅವರ ದರ್ಶನಾಶೀರ್ವಾದ ಪಡೆದುಕೊಂಡು ಹೋಗುವದು ನೆಟ್ಟಗೆ'' ಎಂದು ಸಲಹೆ ನೀಡಿದರು. ಅದರಂತೆ, ಅವರು ಅಲ್ಲಿಗೆ ಹೋಗಿ ಅಲ್ಲಿಯೇ ಇದ್ದ ಅಜ್ಜನ ಪಾದಮುಟ್ಟಿ ನಮಸ್ಕರಿಸಿ ಕುಳಿತರು.

ಆಗ ಶ್ರೀ ಹುಚ್ಚೀರಪ್ಪಜ್ಜನವರು ತಮ್ಮ ಮುಂದೆ ನೆಲದ ಮೇಲೆ ಕೈಯಾಡಿಸುತ್ತಾ 'ನಾಲ್ಕು ಪಾವಲಿದ್ದು ಒಂದು ಪಾವಲಿ ಕಳೆದೇ ಬಿಟ್ಟಿತು. ಎಷ್ಟು ಹುಡುಕಿದರೂ ಸಿಗವಲ್ದು' ಎಂದು ತಮ್ಮಷ್ಟಕ್ಕೆ ತಾವೇ ಹೇಳುವದು ಕೇಳಿಸಿತು. ಸೂಚನೆ ಗ್ರಹಿಸಿದ ವೇ. ಚನ್ನಮಲ್ಲಯ್ಯನವರು ತಮ್ಮೊಡನೆ ಬಂದವರೊಂದಿಗೆ ಅಜ್ಜನವರಿಗೆ ಮತ್ತೊಮ್ಮೆ ನಮಸ್ಕರಿಸಿ ಅಲ್ಲಿಂದ ತೆರಳಿದರು. ಶ್ರೀ ಅಜ್ಜನವರು ಮಾಡಿದ ಸೂಚನೆಯಂತೆ ನಾಲ್ಕು ಲಗ್ನಗಳಲ್ಲಿ ಒಬ್ಬ ವರನು ಕೆಲವೇ ದಿನಗಳಲ್ಲಿ ಪರಂಧಾಮವನ್ನು ಸೇರಿದ ಹೀಗೆ ಮಹಿಮರ ಸೂಚನೆ ನಿಜವಾಯಿತು.

ಶ್ರೀ ಹುಚ್ಚೀರಪ್ಪಜ್ಜನವರ ಕೀರ್ತಿ ಬೆಳದಿಂಗಳಂತೆ ನಾಲ್ದೆಸೆಯಲ್ಲಿ ಹರಡಹತ್ತಿತ್ತು, ಸಮಾಜ ಸುಧಾರಕರೂ, ವೀರಶೈವ ಮಹಾಸಭೆ ಮತ್ತು ಶಿವಯೋಗ ಮಂದಿರ ಸಂಸ್ಥಾಪಕರೂ ಆದ ಪೂಜ್ಯ ಹಾನಗಲ್ಲ ಕುಮಾರ ಸ್ವಾಮಿಗಳು ಮಹಿಮಾತಿಶಯಗಳನ್ನು ಕೇಳಿ ಅವರ ಪ್ರತ್ಯಕ್ಷ ದರ್ಶನ ಮಾಡಿಕೊಳ್ಳಲು ಶ್ರೀ ನಿ. ಪ್ರ. ಹಾವೇರಿ ಶಿವಬಸವ ಮಹಾಸ್ವಾಮಿಗಳನ್ನು ಮತ್ತು ಶ್ರೀ ನಿ. ಪ್ರ. ರೋಣದ ಗುರುಬಸವ ಮಹಾಸ್ವಾಮಿಗಳನ್ನು ಕೂಡಿಕೊಂಡು ಅಜ್ಜನವರ ದರ್ಶನಕ್ಕೆ ಆಗಮಿಸಿದರು.

ಅವರು ಬರುವದಕ್ಕೆ ಮುನ್ನ ಶ್ರೀ ಹುಚ್ಚೀರಪ್ಪ ''ಅಜ್ಜಾರ ಬರತಾರ ಸರೀರಿ ! ಅಜ್ಜಾರು ಬರತಾರ ಸರೀರಿ !'' ಎಂದು ತನ್ನಷ್ಟಕ್ಕೆ ತಾನೇ ಹೇಳಿ ಕೊಳ್ಳುತ್ತಿದ್ದ, ಇದನ್ನು ಕೇಳಿದ ಪಕ್ಕದಲ್ಲಿದ್ದವರು ಯಾರು ಬರುವರು? ಎಂದು ಆಶ್ಚರ್ಯಚಕಿತರಾಗಿ ನೋಡಹತ್ತಿದರು. ಅವರಿಗೆ ಯಾರೂ ಕಾಣಿಸಲಿಲ್ಲ. ಸ್ವಲ್ಪು ಹೊತ್ತಿನಲ್ಲಿ ದಾರಿಯಲ್ಲಿ ಸ್ವಾಮಿಗಳು ಹಾಗೂ ಕೆಲವು ಜನರು ಬರುವದು ಕಾಣಿಸಿತು.

ಸ್ವಲ್ಪೇ ಸಮಯದ ನಂತರ ಆ ನಾಲ್ಕು ಜನ ಸ್ವಾಮಿಗಳು ಅಲ್ಲಿಗೆ ಆಗಮಿಸಿದರು. ಅವರು ಬಂದರೆಂದ ಕೂಡಲೇ ಅಲ್ಲಿದ್ದ ಜನರೆಲ್ಲರೂ ಎದ್ದು ನಿಂತರು. ಆಗ ಸ್ವಾಮಿಗಳು ತಾವು ತಂದ ಹಣ್ಣುಗಳನ್ನು ಅಜ್ಜನ ಮುಂದೆ ಇಟ್ಟು ಅಲ್ಲೇ ಇದ್ದ ಒಂದು ಬಾಂದಗಲ್ಲಿನ ಮೇಲೆ ಕುಳಿತುಕೊಂಡರು. ಆದರೆ, ಇದಾವುದರ ಪರಿವೆಯೇ ಶ್ರೀ ಹುಚ್ಚೀರಪ್ಪಜ್ಜನಿಗೆ ಇರಲಿಲ್ಲ. ಮೊದಲೇ ಆತನು ಅಂತರ್ಮುಖಿ ಎಲ್ಲಿಯೋ ಲಕ್ಷ್ಯ ಎಲ್ಲಿಯೋ ದೃಷ್ಟಿ.

ಪೂಜ್ಯ ಹಾನಗಲ್ ಮಹಾಸ್ವಾಮಿಗಳು, ತಾವು ಕುಳಿತಲ್ಲಿಂದ ಶ್ರೀ ಹುಚ್ಚೀರಪ್ಪಜ್ಜನೆಡೆಗೆ ನಡೆದು ಬಂದು, ಕೆಲವು ತಾತ್ವಿಕ ವಿಷಯ ಕುರಿತು ವಿಚಾರ ಮಾಡಹತ್ತಿದರು. ಆತನು ಬಹಿರ್ಮುಖನಿದ್ದರಲ್ಲವೇ? ಅವರಿಗೆ ಉತ್ತರ ಕೊಡುವದು. ಆದರೂ ಏನೇನೋ ತನ್ನಷ್ಟಕ್ಕೆ ತಾನು ಹೇಳಿಕೊಳ್ಳುತ್ತಿದ್ದನು. ಇದನ್ನೆಲ್ಲ ಕೇಳಿ, ಸಂತುಷ್ಟರಾದ ಪೂಜ್ಯ ಹಾನಗಲ್ಲ ಶ್ರೀಗಳು ಉಳಿದ ಶ್ರೀಗಳವರಲ್ಲಿಗೆ ಬಂದು, 'ಈ ಹುಚ್ಚೀರಪ್ಪಜ್ಜ ಆತ್ಮಾನುಭವಿ. ಈವರೆಗೂ ಆತನು ಮಾಡಿದ್ದು ಘೋರ ಮಹಾತಪಸ್ಸೆಂದೇ ಎನ್ನಬೇಕು. ಅದರಿಂದಲೇ, ಈತನಿಗೆ ಆತ್ಮಜ್ಞಾನ ಪ್ರಾಪ್ತವಾಗಿ ಹೀಗೆ ಅಂತರ್ಮುಖಿಯಾಗಿದ್ದಾನೆ.

ಈ ಸ್ಥಿತಿಯಲ್ಲಿದ್ದ ಈತನಿಗೆ ಪೂಜೋಪಚಾರಾದಿ ಬಾಹ್ಯಕ್ರಿಯೆಗಳಾಗಲಿ, ಧ್ಯಾನಾದಿ ಆಂತರಿಕ ಕ್ರಿಯೆಗಳಾಗಲಿ ಮುಗಿದು ಹೋಗಿವೆ. ತೋರಿಕೆಗೆ ಈತ ಹುಚ್ಚನಂತೆ ಕಾಣುತ್ತಾನೆ. ಆದರೆ, ಅಂತರಂಗದಲ್ಲಿ ಈತ ಅವಿರಳಜ್ಞಾನಿ. ಅಂತೆಯೇ, ಈಗ ಈತನಿಗೆ ಆತ್ಮಾನಂದ ಪ್ರಾಪ್ತವಾಗಿದೆ. ಇದರಿಂದಾಗಿ ಈತನು ಬಹಿರ್ಮುಖನಾಗಿರುವದಿಲ್ಲ.

''ಆತ್ಮ ಕ್ರೀಡಃ ಆತ್ಮರತಃ ಕ್ರಿಯಾವಾನ್ ।
ಏಷ ಬ್ರಹ್ಮವಿದ್ಯಾಂ ವರಿಷ್ಠಃ ॥

ಎಂದು ಶಾಸ್ತ್ರಗಳು ನಿರೂಪಿಸಿರುವದು ಇಂಥವರನ್ನೇ ಕುರಿತು ಎಂದು ಹೇಳಿದರು. ಆಗ ಶ್ರೀ ಹುಚ್ಚೀರಪ್ಪ 'ಲೇ ! ಈರಾ ಹೇಳಲೇ ಅವರಿಗೆ ಮಳೆ ಬರತೈತಿ. ಲಗೂ ಹೋಗಂತ ಎಂಥಾ ಬಿಸಲಾಗ ಬಂದಿದ್ದಾರ. ಈಗ ತೋಯಿಸಿಕೊಂಡು ಬಿಡತಾರ' ಎಂದು ವಟಗುಡಹತ್ತಿದನು.

ಆಗ, ಶ್ರೀಗಳೆಲ್ಲರೂ ಭೀಕರ ಬೇಸಿಗೆ ಕಾಲವಾದದ್ದರಿಂದ ಮುಗುಳು ನಗೆ ನಕ್ಕು 'ಹುಚ್ಚೀರಪ್ಪಜ್ಜ ಈಗೆಲ್ಲಿ ಮಳಿಯಪಾ' ? ಎಂದು ಹೇಳಿ ಅಲ್ಲಿಂದ ಹೊರಟು ಹೋದರು. ಹೀಗೆ, ಸ್ವಾಮಿಗಳು ಸಂಗಡಿಗರೊಂದಿಗೆ ಸ್ವಲ್ಪು ದೂರಹೋಗಿರ ಬಹುದು ಎಲ್ಲಿಂದಲೋ ಗಾಳಿ ಭರದಿಂದ ಬೀಸಹತ್ತಿತು. ಅದರಿಂದ ಮೊಡವೆದ್ದು ಆಕಾಶ ತುಂಬ ಪಸರಿಸಿತು. ಸ್ವಲ್ಪು ಸಮಯದಲ್ಲಿಯೇ ಮಳೆ ಧಾರಾಕಾರವಾಗಿ ಸುರಿಯಹತ್ತಿತು.

ಶ್ರೀಗಳವರೆಲ್ಲ ಶ್ರೀ ವೀರಪ್ಪಜ್ಜ ಹೇಳಿದಂತೆ, ಮಠಕ್ಕೆ ತೋಯಿಸಿಕೊಂಡೇ ಹೋದರು. ಆಗ ಹಾನಗಲ್ಲ ಶ್ರೀಗಳಿಗೆ ವೀರಪ್ಪಜ್ಜನು ಹೇಳಿದ ಭವಿಷ್ಯತಿಳಿಯಿತು. ಆದರೂ ಶ್ರೀಗಳದು ಚಿಕಿತ್ಸಕ ಬುದ್ಧಿ ತಮ್ಮೊಡನೆ ಇದ್ದ ಇಬ್ಬರ ಭಕ್ತರನ್ನು ಕರೆದು, 'ಈ ಮಳೆಯಲ್ಲಿ ಶ್ರೀ ವೀರಪ್ಪಜ್ಜ ಏನು ಮಾಡತಾನ ? ನೋಡಿಕೊಂಡು ಬರ್‍ರಿ' ಎಂದು ಹೇಳಿ ಕಳಿಸಿಕೊಟ್ಟರು.

ಆ ಇಬ್ಬರು ಛತ್ರಿ ತೆಗೆದುಕೊಂಡು ಮಠದಿಂದ ಹೊರಟು ಡೋಣೀಕಲ್ಲ ಏರಿಗೆ ಹೋಗಿ ನೋಡುತ್ತಾರೆ. ಶ್ರೀ ವೀರಪ್ಪಜ್ಜ ಮಳೆಯಲ್ಲಿ ಯಥಾ ಪ್ರಕಾರ ತದೇಕ ಚಿತ್ತದಿಂದ ಕುಳಿತುಬಿಟ್ಟಿದ್ದ. ಅಲ್ಲಿದ್ದವರೆಲ್ಲ ಆಗಲೇ ಹೋಗಿಬಿಟ್ಟಿದ್ದರು. ಹೀಗೆ ಹೋದವರು ಮರಳಿ ಬಂದು, ಇದ್ದ ಸ್ಥಿತಿಯನ್ನೇ ಶ್ರೀಗಳಿಗೆ ವರದಿ ಒಪ್ಪಿಸಿದರು.

ಪೂಜ್ಯ ಹಾನಗಲ್ಲ ಶ್ರೀಗಳವರು ಇದನ್ನು ಕೇಳಿ, 'ಶ್ರೀ ವೀರಪ್ಪಜ್ಜ ನಿಜವಾಗಿಯೂ ಮಹಾತ್ಮಾ ದೇಹಭಾವವನ್ನು ನೀಗಿಕೊಂಡು ಸ್ವಸ್ವರೂಪ ದಲ್ಲಿದ್ದವನು. ಇಂಥವನಿಗೆ ಯಾವ ಮಳೆ ಬಂದರೂ ಏನಾಗಬೇಕಾಗಿದೆ? ದೇಹಾತ್ಮ ಭಾವನೆ ಇದ್ದವರು ಪ್ರಕೃತಿವಶ ಅದಿಲ್ಲದವರಿಗೆ ಪ್ರಕೃತಿಯೇ ವಶ. ಅದಕ್ಕಾಗಿಯೇ ಮಳೆ ಇಲ್ಲದ ಕಾಲದಲ್ಲಿ ಮಳೆ ಬರುವದಾಗಿ ಹೇಳಿದ ಆತನ ಮಾತು ಈಗ ಸತ್ಯವಾಗಿ ಪರಿಣಮಿಸಿದೆ.' ಎಂದು ಆನಂದಭರಿತರಾಗಿ ಹೇಳಿದರು.

**ಬಾಗಲಕೋಟೆಯ ವೈರಾಗ್ಯ ಮಲ್ಲಣಾರ್ಯರು :**

ಬಾಗಲಕೋಟೆಯ ಶ್ರೀ ಮಲ್ಲಯ್ಯಗವಾಯಿಗಳು ವೈರಾಗ್ಯ ಮಲ್ಲಣಾರ್ಯ ರೆಂದೇ ಪ್ರಸಿದ್ಧರಾದವರು. ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ವೀರಶೈವ ಸಮಾಜವನ್ನು ಜಾಗ್ರತಗೊಳಿಸಿದ ಶ್ರೇಯಸ್ಸು ಲಿಂಗೈಕ್ಯ ಹಾನಗಲ್ ಕುಮಾರಸ್ವಾಮಿಗಳವರದಾದರೆ, ಅವರನ್ನೇ ಈ ಮಹಾಕಾರ್ಯಕ್ಕೆ ಪ್ರೇರೇಪಿಸಿದ ಶ್ರೇಯಸ್ಸು ಶ್ರೀ ಕೋಟೆ ಮಲ್ಲಣಾರ್ಯರಿಗೆ ಸಲ್ಲುತ್ತದೆ. ಪೂಜ್ಯ ಶ್ರೀ ಘನಮಠಾರ್ಯರ ತರುವಾಯ ವೈರಾಗ್ಯದ ಸಾಕಾರ ಮೂರ್ತಿಗಳು ಕೋಟೆ ಮಲ್ಲಣಾರ್ಯರು ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಮಾನವನ ಪರಮ ಗಂತವ್ಯ ಮುಕ್ತಿ, ಇದನ್ನು ಸಾಧಿಸಿಕೊಡುವ ಸಾಧನೆಗಳು, ಭಕ್ತಿ–ಜ್ಞಾನ–ವೈರಾಗ್ಯಗಳು. ಈ ಮೂರು ಸಾಧನೆಗಳು ಶ್ರೋತೃಗಳಲ್ಲಿ ಉಂಟಾಗುವಂತೆ ಪುರಾಣ, ಪ್ರವಚನದ್ವಾರಾ ಬೋಧಿಸಿದ ಕೀರ್ತಿ ಶ್ರೀ ವೈರಾಗ್ಯ ಮಲ್ಲಣಾರ್ಯರದು. ಪುರಾಣಿಕರು ಶ್ರೀ ಮಲ್ಲಣಾರ್ಯರನ್ನು ಸ್ಮರಿಸಿಯೇ ಪುರಾಣಪೀಠ ಏರಬೇಕು ಅಂತಹ ಶ್ರೇಷ್ಠ ವ್ಯಕ್ತಿತ್ವ ಅವರದು.

ಒಮ್ಮೆ ಅವರು ಡೋಣಿಕಲ್ಲ ಏರಿಯ ಒಂದು ಕಾಲುದಾರಿ ಹಿಡಿದು, ಯಾವದೋ ಊರಿಗೆ ಹೊರಟ್ಟಿದ್ದರು. ಆ ದಾರಿಯಲ್ಲಿ ಹುಚ್ಚೀರಪ್ಪಜ್ಜನು ಸಮೀಪದಲ್ಲಿ ಕುಳಿತಿದ್ದನು. ಆಗ ಶ್ರೀ ವೀರಪ್ಪಜ್ಜ ತನ್ನಷ್ಟಕ್ಕೆ ತಾನು ''ಮಲ್ಲಯ್ಯ ನೀ

ಇಲ್ಲಯ್ಯ'' ಎಂದು ಹೇಳಿಕೊಳ್ಳುತ್ತಿದ್ದನು. ಅಲ್ಲಿ ಕುಳಿತವರು ಸುತ್ತಲೂ ನೋಡಿದಾಗ, ದೂರದಲ್ಲಿ ಶ್ರೀ ಮಲ್ಲಣಾರ್ಯರು ಅವರ ಕಣ್ಣಿಗೆ ಬಿದ್ದರು. ಅದೇ ಮೇರೆಗೆ ಶ್ರೀ ಮಲ್ಲಣಾರ್ಯರು ಶ್ರೀ ವೀರಪ್ಪಜ್ಜನ ಭವಿಷ್ಯವಾಣಿಯಂತೆ ಕೆಲವೇ ದಿನಗಳಲ್ಲಿ ಬಾಗಲಕೋಟೆಯ ಪುರಾಣ ಪ್ರವಚನ ಕಾಲದಲ್ಲಿ ಲಿಂಗೈಕ್ಯರಾದರು.

ಶ್ರೀ ಹುಚ್ಚೀರಪ್ಪಜ್ಜನ ಎದುರಿಗೆ ಎಷ್ಟೋ ಜನರು ಬಂದು ಹೋಗಿರುವರು. ಆದರೆ, ಅವರನ್ನು ಕುರಿತು ಶ್ರೀ ವೀರಪ್ಪಜ್ಜ ಅವರ ಹೆಸರುಗೊಂಡು ಏನೂ ಹೇಳಿರಲಿಲ್ಲ. ಆದರೆ, ಶ್ರೀ ಮಲ್ಲಣಾರ್ಯರ ವಿಷಯದಲ್ಲಿ ಮಾತ್ರ ಅವರ ಹೆಸರುಗೊಂಡು ಹೇಳಿದ್ದು ಒಂದು ವಿಶೇಷವಾಗಿದೆ.

**ನರೇಗಲ್ಲ ಹಿರೇಮಠದ ಶ್ರೀ ಚರಮೂರ್ತಿಗಳು :**

ನರೇಗಲ್ಲ ಹಿರೇಮಠದ ಶ್ರೀ ಚರಮೂರ್ತಿಗಳು ಒಳ್ಳೆಯ ಲಿಂಗಪೂಜಾ ನಿಷ್ಠರು ಮತ್ತು ಸಾತ್ವಿಕರು, ಭಕ್ತಪ್ರಿಯರು ಆಗಿದ್ದರು. ಇವರಿಗೆ ಜನರು ಚರಂತೆಪ್ಪನವರು ಎನ್ನುವದೇ ಬಳಕೆಯಲ್ಲಿ ಬಂದಿತ್ತು.

ಒಂದು ಸಲ ಸಕಾಲಕ್ಕೆ ಆಗಬೇಕಾದ ಮಳೆ ಆಗಲಿಲ್ಲ. ಬಿತ್ತಿಗೆ ನಿಂತುಹೋಗಿ, ರೈತರು ಬಹಳ ಕಳವಳಗೊಂಡು ತಮ್ಮ ಗುರುಗಳಾದ ಶ್ರೀ ಚರಂತೆಪ್ಪನವರಲ್ಲಿಗೆ ಬಂದು ಮಳೆಯ ಬಗ್ಗೆ ಕೇಳಿದರು. ಶ್ರೀ ಚರಂತೆಪ್ಪನವರಿಗೆ ರೈತರಿಗೆ ಏನು ಹೇಳಬೇಕೆಂಬುದು ತಿಳಿಯಲಿಲ್ಲ. ಆಗ ಅವರಿಗೆ ಮಳೆಯ ಕುರಿತು ಶ್ರೀ ಹುಚ್ಚೀರಪ್ಪಜ್ಜನನ್ನು ಕೇಳಿಬರಬೇಕೆಂದು ಹೊಳೆಯಿತು.

ಆಗ ಶ್ರೀ ಮ.ನಿ.ಪ್ರ. ಹಾಳಕೇರಿ ಅನ್ನದಾನ ಮಹಾಸ್ವಾಮಿಗಳವರ ವಾಸ್ತವ್ಯ ಕೋಡಿಕೊಪ್ಪದ ಮಠದಲ್ಲಿ ಇತ್ತು. ಶ್ರೀ ಚರಂತೆಪ್ಪನವರು ಅವರಲ್ಲಿಗೆ ಕುದುರೆ ತೆಗೆದುಕೊಂಡು ಹೋಗಿ, ಮಳೆಯ ಬಗ್ಗೆ ಶ್ರೀ ವೀರಪ್ಪಜ್ಜನನ್ನು ಕೇಳುವ ವಿಷಯ ಪ್ರಸ್ತಾಪಿಸಿದರು.

ಶ್ರೀ ಅನ್ನದಾನ ಮಹಾಸ್ವಾಮಿಗಳು ಅದಕ್ಕೆ ಒಪ್ಪಿ ಉಭಯತರೂ ಕೂಡಿ ಶ್ರೀ ವೀರಪ್ಪಜ್ಜನಿದ್ದ ಡೋಣಿಕಲ್ಲ ಏರಿಗೆ ಹೋದರು. ಹೀಗೆ, ಇಬ್ಬರೂ ಶ್ರೀ ಅಜ್ಜನನ್ನು ಸಮೀಪಿಸುತ್ತಲೇ ಶ್ರೀ ವೀರಪ್ಪಜ್ಜ ಅವರ ಕಡೆಗೆ ಕೈಮಾಡಿ, ''ಹೋಗಿರಿ, ಹೋಗಿರಿ ಮಳೆ ಬರತೈತಿ'' ಎಂದು ಹೇಳಿದನು. ಇದನ್ನು ಕೇಳಿ, ತಾವು ಇನ್ನೂ ಪ್ರಶ್ನೆ ಮಾಡದೇ ಇದ್ದರೂ ವಿಷಯವನ್ನು ಮುಂದಾಗಿ ಹೇಳಿದ್ದು ಕೇಳಿ ಅತ್ಯಾಶ್ಚರ್ಯಗೊಂಡರು.

ಇದನ್ನು ಕೇಳಿಕೊಂಡು ಶ್ರೀಗಳಿಬ್ಬರೂ ಹಿಂದಕ್ಕೆ ತಿರುಗಿದರು. ಇನ್ನೂ ಅವರು ಏರಿಬಿಟ್ಟು ಇಳಿದಿರಲಿಲ್ಲ. ಅಷ್ಟರಲ್ಲಿ ಗಾಳಿ ಬಿಟ್ಟು ಎಲ್ಲಿಂದಲೋ ಮೋಡ ಬಂದು ಮಳೆ ಧಾರಾಕಾರವಾಗಿ ಸುರಿಯ ಹತ್ತಿತು.

ಆಗ ಉಭಯ ಶ್ರೀಗಳು ತಾವು ತೋಯಿಸಿಕೊಂಡರೂ ಚಿಂತೆಯಿಲ್ಲ ''ಶ್ರೀ ವೀರಪ್ಪಜ್ಜನ ಮಹಿಮೆಯಿಂದ ಮಳೆ ಬಂದಿತಲ್ಲ ಇದೇ ಮಹಾ ಸಂತೋಷ'' ಎಂದು ಪರಸ್ಪರರು ಈತನ ವಾಕ್ಸಿದ್ಧಿಯ ಪ್ರಭಾವ ಕಂಡು ಬೆರಗಾದರು.

**ನರೇಗಲ್ಲ ದರ್ಗಾದ ಉರುಸು :**

ಈ ಭಾಗದಲ್ಲಿ ನರೇಗಲ್ಲಿನ ದರ್ಗಾ ಬಹಳ ಪ್ರಸಿದ್ಧ. ಆಗ ಈ ದರ್ಗಾದ ಧರ್ಮಾಧಿಕಾರಿಗಳಾದ ಶ್ರೀ ಹುಸೇನಸಾಬ ಶಾವಲಿ ಎನ್ನುವವರು ಬಹಳ ತತ್ತ್ವನಿಷ್ಟರು, ಮಹಿಮಾಶಾಲಿಗಳೆಂದು ಖ್ಯಾತರಾಗಿದ್ದರು. ಆಗಿನ ಕಾಲದಲ್ಲಿ ರೇಲ್ವೆ ಒಂದೇ ಪ್ರಯಾಣ ಸೌಕರ್ಯವಿದ್ದುದರಿಂದ ಇವರು ಎಲ್ಲಿಗೊ ತಿಕೇಟು ಇಲ್ಲದಲೇ ರೇಲ್ವೆಯಲ್ಲಿ ಪ್ರಯಾಣ ಮಾಡುತ್ತಿದ್ದರು. ಒಂದು ಸಲ ಅವರು ಗಾಡಿ ಹತ್ತಿದರು.

ಗಾಡಿ ಸ್ಟೇಶನ್ ಬಿಟ್ಟು ಹೋದ ಕೆಲವು ಸಮಯದ ನಂತರ ತಿಕೇಟು ಚೆಕ್ ಮಾಡಲು ಒಬ್ಬರು ಡಬ್ಬಿಗೆ ಪ್ರವೇಶಿಸಿದರು, ಆಗ ಈ ಸಾಹೇಬರಿಗೆ ಅವನು ರೇಲ್ವೆ ತಿಕೇಟು ಕೇಳಿದ. ಆಗ ಇವರು ತಬ್ಬಿಬ್ಬಾದರು. ತಮ್ಮ ಹತ್ತಿರ ತಿಕೇಟು ಇಲ್ಲವೆಂದು ಹೇಳಿದರು. ಆಗ ಚೆಕ್ ಮಾಡಲು ಬಂದ ಅಧಿಕಾರಿ ಮುಂದಿನ ಸ್ಟೇಶನ್‌ಗೆ ಗಾಡಿ ತರುಬಿ ಇವರನ್ನು ಡಬ್ಬಿಯಿಂದ ಕೆಳಗೆ ಇಳಿಸಿದನು. ಅನಿವಾರ್ಯ ಪ್ರಸಂಗ ಬಂದುದಕ್ಕೆ ದರ್ಗಾದ ಸಾಹೇಬರು ಕೆಳಗಿಳಿದು ಸಮೀಪದ ಪಕ್ಕದ ಹೊಲದಲ್ಲಿ ಕುಳಿತರು. ತನ್ನ ಸಮಯಕ್ಕೆ ಗಾಡಿ ಹೊರಡಲು ಸ್ಟೇಶನ್ ಮಾಸ್ತರರು ಸೀಟಿ ಊದಿದರು. ಆದರೆ ಆಶ್ಚರ್ಯವೆಂದರೆ ರೇಲ್ವೆಗಾಡಿ ಒಂದಿಂಚು ಕೂಡಾ ಮುಂದೆ ಸಾಗಲೊಲ್ಲದು. ಇದನ್ನು ನೋಡಿದ ಇಂಜನಿನಲ್ಲಿರುವ ಚಾಲಕರು–ರೇಲ್ವೆ ಗಾರ್ಡಗಳು ಮುಂತಾದವರು ಭಯಚಕಿತಗೊಂಡರು. ಏನೂ ಅರ್ಥವಾಗಲಿಲ್ಲ ಏನು ಮಾಡಬೇಕು ಅನ್ನುವದೂ ತಿಳಿಯಲಿಲ್ಲ.

ಅಷ್ಟರೊಳಗೆ ಡಬ್ಬಿಯಲ್ಲಿದ್ದ ಎಲ್ಲಾ ಜನರು ಕೆಳಗಿಳಿದು ತಮ್ಮ ತಮ್ಮೊಳಗೆ ಮಾತನಾಡಹತ್ತಿದರು. ಅಜ್ಜನ ಸಮೂಹದಲ್ಲಿ ಒಬ್ಬ ದೈವೀ ಭಕ್ತನೇ ಇರಬೇಕು. ಅವನು ಟೀಕೆಟು ಚೆಕ್ ಮಾಡಿದ ಪ್ರಸಂಗ ಅವನಿಗೆ ತಕ್ಷಣ ಹೊಳೆಯಿತು, ಆಗ ಎಲ್ಲರೂ ಸೇರಿ ಸಾಹೇಬರು ಅವಕೃಪೆಯೇ ಇರಬೇಕೆಂದು ಭಾವಿಸಿದರು. ಈ ಸಂಗತಿಯನ್ನು ನಾಲ್ಕಾರು ಹಿರಿಯರು ಕೂಡಿ ರೇಲ್ವೆ ಅಧಿಕಾರಿಗಳಿಗೆ ನಿವೇದಿಸಿದರು.

ಆಗ ಆ ರೇಲ್ವೆ ಸಿಬ್ಬಂದಿ, ಜನ ಹೇಳಿದ ಮಾತಿಗೆ ಬೆಲೆ ಕೊಟ್ಟು ಅವರನ್ನು ಹುಡುಕ ಹತ್ತಿದರು. ಆಗ ಸಮೀಪದಲ್ಲಿಯೇ ಇದ್ದ ಸಾಹೇಬರು ಕಣ್ಣಿಗೆ ಬಿದ್ದರು. ಅಲ್ಲಿಗೆ ಎಲ್ಲರೂ ಹೋಗಿ ಅದೇ ತಿಕೇಟು ಇಲ್ಲದಕ್ಕೆ ಕೆಳಗಿಸಿದ ರೇಲ್ವೆ ಅಧಿಕಾರಿಯು ಅವರ ಕಾಲಿಗೆ ನಮಸ್ಕರಿಸಿ ತನ್ನದು ತಪ್ಪಾಯಿತು ಎಂದು ಅಂಗಲಾಚಿದನು.

''ತಪ್ಪಿಗೆ ಪಶ್ಚಾತಾಪವೇ ಶಿಕ್ಷೆ'' ಎಂಬ ನಿಯಮದಂತೆ ದಯಾಳು ಆದ ಆ ಸಾಹೇಬರು ತಕ್ಷಣ ತಮ್ಮ ಕೋಪ ತ್ಯೆಜಿಸಿ. ಕಣ್ಣು ಮುಚ್ಚಿ ಏನೋ ಮನದಲ್ಲಿ

ಅಂದರು. ಆಗ ತಕ್ಷಣವೇ ರೇಲ್ವೆ ಗಾಡಿ ಮುನ್ನಡೆಯ ಹತ್ತಿತು. ಈ ಘಟನೆಯನ್ನು ನೋಡಿ ಎಲ್ಲರೂ ದೈವಿಭಕ್ತರಾದ ಇಂಥ ಸಾಧು ಸಂತರಿಗೆ ಉಪದ್ರವ ಕೊಡಬಾರದು ಮತ್ತು ಅವರಿಗೆ ಸಂಚಾರಕ್ಕೆ ''ಮುಕ್ತ'' ವಿಡಬೇಕೆಂದು ನಿರ್ಣಯ ಮಾಡಿದರು.

ಇಂಥಹ ಮಹಿಮಾಶಾಲಿಗಳಾದ ಸಾಹೇಬರು ಒಮ್ಮೆ ನರೇಗಲ್ಲನಲ್ಲಿ ಉರುಸು ಮಾಡಿದರು. ಆಗ ಹಿಂದು ಮುಸಲ್ಮಾನರೆಲ್ಲರೂ ಇವರಿಗೆ ಅನನ್ಯ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಅಷ್ಟೇ ಅಲ್ಲ ಈ ದರ್ಗಾದ ಪ್ರತಿಯೊಂದು ಧಾರ್ಮಿಕ ಉತ್ಸವದಲ್ಲಿ ಹಿಂದೂಗಳೇ ಮುಂದಾಳ್ತನ ವಹಿಸಿ ಕೆಲ್ಸ ಮಾಡುತ್ತಿದ್ದರು.

ಇಂತಹ ಉರುಸಿನ ಸಂದರ್ಭದಲ್ಲಿ ಹಿಂದೂಗಳಲ್ಲಿಯ ಮಠಾಧಿಕಾರಿಗಳಿಗೆ ಮತ್ತು ಮಂದಿರದ ಪೂಜಾರಿಗಳಿಗೆ ಸೀದಾ ಕೊಡುವ ಸಂಪ್ರದಾಯವನ್ನು ಚಾಚೂ ತಪ್ಪದೇ ನಡೆಸಿಕೊಂಡು ಬಂದಿದ್ದರು. ಅದರಂತೆ ಉರುಸಿನ ಈ ಸಮಯದಲ್ಲಿ ದರ್ಗಾದ ಸಾಹೇಬರು ತಮ್ಮಲ್ಲಿಯ ಮುಲ್ಲಾಗಳನ್ನು ಕರೆದು ''ಭಾಯಿಯೋ ಜಂಗಲ್ಮೆ ಬೈಟೆ ಹುಯೆ ಹುಚ್ಚೀರಪ್ಪ ಸಾಧು ಕೋ ಸೀದಾ ದೇನಾ ಚಾಹಿಯೆ'' ಅಂದರೆ ಅಡವಿಯಲ್ಲಿ ಕುಳಿತಿರುವ ಹುಚ್ಚಿರಪ್ಪ ಸಾಧುವಿಗೆ ಸೀದಾ ಕೊಡಿರಿ ಎಂದು ಆಜ್ಞಾಪಿಸಿದರು.

ಅದಕ್ಕೆ ಮುಲ್ಲಾಗಳು ಒಪ್ಪಲಿಲ್ಲ. ಇದನ್ನು ಕಂಡ ದರ್ಗಾದ ಸಾಹೇಬರು ''ವೇತೋ ಕೈಸಾ ಭೀ ಹೋ ತುಮ್ ಲೋಗ್ ಸಬ್ ಕೋ ಕೈಸೆ ದೇತೆ ವೈಸೆ ಉಸಕೋ ದೇನಾ'' ಅಂದರೆ ಆತನು ಹೇಗೆ ಇರಲಿ ನೀವು ಎಲ್ಲರಿಗೂ ಕೊಟ್ಟಂತೆ ಸೀದಾ ಕೊಡಿರಿ ಹೋಗಿರಿ, ಎಂದು ಅವರನ್ನು ಕಳಿಸಿದರು. ಅವರು ಸೀದಾ ಅಂದರೆ ಅಕ್ಕಿ, ಬೇಳೆ, ಬೆಲ್ಲ ಒಯ್ಯಬೇಕಾಗಿತ್ತು ಅದರ ಬದಲು ಮೀನ, ತತ್ತಿ ಮಾಂಸ ಇವುಗಳನ್ನು ಒಂದು ತಾಟಿನಲ್ಲಿಟ್ಟು ಮೇಲೆ ಒಂದು ವಸ್ತ್ರವನ್ನು ಮುಚ್ಚಿ ಡೋಣಿ ಕಲ್ಲ ಏರಿಗೆ ಹೋದರು. ಅಲ್ಲಿ ಆ ತಾಟನ್ನು ಶ್ರೀ ಹುಚ್ಚೀರಪ್ಪ ಅಜ್ಜನ ಮುಂದೆ ಇಟ್ಟು ಸಲಾಂ ಮಾಡಿಕುಳಿತರು.

ಆಗ ಹುಚ್ಚೀರಪ್ಪಜ್ಜನು ತನ್ನಷ್ಟಕ್ಕೆ ತಾನು ''ಸಾಬಾ ಅವ ಅಲ್ಲಾ ! ಈ ಮುಲ್ಲಾ ಬೆರಕಿ–ಮುಲ್ಲಾ ! ತಿನ್ನಲ್ಲೀ ಈರಾ ಫರಾಳನ'' ಎಂದು ತನ್ನ ಎದುರಿಗಿರುವ ತಾಟಿನ ಮೇಲಿನ ವಸ್ತ್ರ ತೆಗೆದರು. ಎಂಥ ಸೋಜಿಗ ! ಆ ತಾಟನಲ್ಲಿದ್ದ ಮೀನ, ತತ್ತಿ, ಮಾಂಸಗಳು ಮಾಯವಾಗಿ ಅಲ್ಲಿ ಕರ್ಚಿಕಾಯಿ, ಉಂಡಿ, ಜಿಲೇಬಿಗಳಿದ್ದವು. ಅಜ್ಜನು ಅವುಗಳನ್ನು ಅಲ್ಲಿದ್ದವರಿಗೆ ಹಂಚಿಬಿಟ್ಟ. ಇದನ್ನೆಲ್ಲ ಪ್ರತ್ಯಕ್ಷ ನೋಡಿದ ಮುಲ್ಲಾಗ 'ತೋಬಾ' ''ತೋಬಾ'' ಎಂದು ತಮ್ಮ ಗಲ್ಲ ಗಲ್ಲ ಬಡಿದುಕೊಂಡರು. ಆಗಲೇ ಏದುಸಿರು ಬಿಡುತ್ತಾ ನರೇಗಲ್ಲಿಗೆ ಬಂದು ನಡೆದ ಎಲ್ಲಾ ಸಂಗತಿಯನ್ನು ದರ್ಗಾದ ಸಾಹೇಬರಿಗೆ ತಿಳಿಸಿದರು.

ಅದಕ್ಕೆ ಸಾಹೇಬರು ಆ ಮುಲ್ಲಾಗಳಿಗೆ ನಮಗೆ ಆತನ ಮಹಿಮೆ ಗೊತ್ತಿತ್ತು ನಿಮಗೆ ಗೊತ್ತಿರಲಿಲ್ಲ ಇದು ನಿಮಗೆ ತಿಳಿಯಲೆಂದು ನಿಮ್ಮನ್ನು ಕಳಿಸಿದೆನು. ಇನ್ನಾದರೂ ಮಹಾತ್ಮರ ವಿಷಯದಲ್ಲಿ ಜಾತಿ ಭೇದ ಮಾಡಬಾರದು ಎಂದು ಅವರಿಗೆ ಬುದ್ಧೀ ಹೇಳಿ ಕಳಿಸಿದರು. ಅಂದಿನಿಂದ ಮುಸ್ಲೀಂ ಬಾಂಧವರು ಕೂಡಾ ಶ್ರೀ ಹಠಯೋಗಿ ಹುಚ್ಚೀರಪ್ಪಜ್ಜನಿಗೆ ಅನನ್ಯ ಭಕ್ತಿ ಗೌರವದಿಂದ ನಡೆದುಕೊಳ್ಳ ಹತ್ತಿದರು.

**ಹಸ್ತ ಪುರುಷದ ಫಲ :**

ಕೋಟುಮಚಗಿ ಗದಗ ತಾಲೂಕಿನ ಒಂದು ಗ್ರಾಮ. ಅಲ್ಲಿ ಒಬ್ಬ ಬ್ರಾಹ್ಮಣನ ಮಗನಿಗೆ ಯಾವುದೋ ಕಾರಣದಿಂದ ಬಾಯಿ ಸೊಟ್ಟ ಆಗಿ ಆ ಹುಡುಗನಿಗೆ ಅನ್ನ, ನೀರು ಸಹ ಗಂಟಲಲ್ಲಿ ಇಳಿಯದಾಯಿತು. ಆ ಹುಡುಗನ ತಂದೆ ಶಹರದ ಅನೇಕ ದೊಡ್ಡ ದೊಡ್ಡ ಡಾಕ್ಟರಿಗೆ, ವೈದ್ಯರಿಗೆ ತೋರಿಸಿದ್ದಾಯಿತು. ಆದರೂ ಏನೂ ಪ್ರಯೋಜನ ವಾಗಲಿಲ್ಲ.

ಅಷ್ಟರಲ್ಲಿ ಶ್ರೀ ವೀರಪ್ಪಜ್ಜನವರ ಮಹಿಮೆ ಎಲ್ಲಾ ಕಡೆಗೂ ಸೂರ್ಯನ ಕಿರಣದಂತೆ ಹರಡಿತ್ತು, ಆ ಬ್ರಾಹ್ಮಣ ತನ್ನ ಮಗನನ್ನು ಕರೆದುಕೊಂಡು ಕಡೆಯ ಪ್ರಯತ್ನವೆಂದು ನಿರ್ಧರಿಸಿ ಸಮೀಪದ ಕೋಡಿಕೊಪ್ಪದ ಶ್ರೀ ವೀರಪ್ಪಜ್ಜನ ಕಣ್ಣಿಗೆ ಹಾಕಿ ನೋಡೋಣವೆಂದು ನಿರ್ಧರಿಸಿದ. ಹಾಗೆಯೇ ಆ ಬ್ರಾಹ್ಮಣ ತಮ್ಮ ಮಗನನ್ನೂ ಒಂದು ದಿವಸ ಹಠಯೋಗಿ ಶ್ರೀ ವೀರಪ್ಪಜ್ಜನಲ್ಲಿಗೆ ಕರೆದುಕೊಂಡು ಹೋಗಿ ಅವನಿಗೆ ನಮಸ್ಕರಿಸಿ ಮುಂದೆ ಕುಳ್ಳಿರಿಸಿದ.

ಆ ಹುಡುಗನ ಕರ್ಮಕ್ಷಯವಾಗಿರಬೇಕು. ಅಂತೆಯೇ ಅಜ್ಜನ ಲಕ್ಷ್ಯ ಆ ಹುಡುಗನ ಕಡೆಗೆ ಹೋಯಿತು. ಅಜ್ಜ ಹುಡುಗನನ್ನು ನೋಡಿದೊಡನೆ ''ಲೇ ! ಮಗನೆ ಸೊಟ್ಟ ಬಾಯಿ ಮಾಡಿ ನನ್ನ ಅಣ್ಣಿಗಾಡಸ್ತಿಯಾ?'' ಎಂದು ಹುಡುಗನ ಸೊಟ್ಟ ಬಾಯಿಗೆ ಫಡೀರನೇ ಹೊಡೆದು ಬಿಟ್ಟ. ಎಂಥ ಸೋಜಿಗ ! ಅಜ್ಜನ ಹೊಡೆತದಿಂದ ಸೊಟ್ಟಬಾಯಿ ಥಟ್ಟನೇ ನೆಟ್ಟಗಾಗಿಬಿಟ್ಟಿತು. ಇದನ್ನು ನೋಡಿದ ಆ ಬ್ರಾಹ್ಮಣನಿಗೆ ಎಲ್ಲಿಲ್ಲದ ಸಂತೋಷವಾಯಿತು. ಅದನ್ನು ಅಜ್ಜನ ಎದುರಿಗಿದ್ದ ಪ್ರಸಾದವನ್ನು ಮಗನಿಗೆ ತಿನಿಸಿ, ನೀರು ಕುಡಿಸಿದ, ಅನ್ನ ನೀರು ಆ ಹುಡುಗನ ಗಂಟಲಲ್ಲಿ ಸರಿಯಾಗಿ ಇಳಿದವು.

ಆ ಮೇಲೆ ಬ್ರಾಹ್ಮಣನು ಅಜ್ಜನಿಗೆ ಮತ್ತೊಮ್ಮೆ ಸಾಷ್ಟಾಂಗ ಹಾಕಿ ಆತನ ಪಾದ ಧೂಳಿಯನ್ನು ಮಗನ ಮೈತುಂಬ ಸವರಿ ತನ್ನ ಊರಿಗೆ ಹೋದ. ಪುರುಷಮಣಿ. ಒಂದು ಕಲ್ಲು. ಅದು ತನ್ನನ್ನು ಸ್ಪರ್ಶ ಮಾಡಿದ ಕಬ್ಬಿಣವನ್ನು ಬಂಗಾರ ಮಾಡುತ್ತಿರುವಾಗ ಶ್ರೀ ಹುಚ್ಚೀರಪ್ಪಜ್ಜನಂಥ ಸಿದ್ಧ ಪುರುಷನ ಹಸ್ತ ಸ್ಪರ್ಶದಿಂದ ರೋಗವಾಸಿಯಾಗುವದರಲ್ಲಿ ಏನು ಆಶ್ಚರ್ಯ ?

**ಏಡಿಸಿ ಕಾಡಿದ ಶಿವನ ಡಂಗುರ :**

ಗದುಗಿನ ಅವಳಿ ನಗರವಾದ ಬೆಟಗೇರಿಯಲ್ಲಿ ಶ್ರೀ ವೀರಭದ್ರಪ್ಪ ಸಿದ್ನಾಳ ಶೆಟ್ಟಿ ಎಂಬ ಒಬ್ಬ ವ್ಯಾಪಾರಿ ಇದ್ದ. ಆತನಿಗೆ ಮನೆಯಲ್ಲಿ ಪತ್ನಿ ಹಾಗೂ ನಾಲ್ಕು ವರ್ಷದ ಒಬ್ಬ ಮಗಳು ಇದ್ದರು. ಶೆಟ್ಟರದು ಧಾರ್ಮಿಕಪ್ರವೃತ್ತಿ, ಪ್ರತಿ ಅಮವಾಸ್ಯೆಗೊಮ್ಮೆ ಹಾಳಕೇರಿ ಶ್ರೀ ಅನ್ನದಾನ ಮಹಾಸ್ವಾಮಿಗಳ ದರ್ಶನಕ್ಕೆ ಹೋಗುವುದು ಅವನ ಪದ್ಧತಿ. ಈ ರೀತಿ ದರ್ಶನಕ್ಕೆ ಹೋದಾಗಲೆಲ್ಲ ಶ್ರೀ ವೀರಪ್ಪಜ್ಜನಿಗೆ ಕಾಲ್ಪಿ ಸಕ್ಕರೆ, ಕೇರಬೀಜ, ದ್ರಾಕ್ಷಿ, ಗೋಡಂಬಿ ಇವುಗಳನ್ನು ಒಯ್ದು ಸಲ್ಲಿಸುತ್ತಿದ್ದ. ಆದರೆ, ಅಜ್ಜ ಇವುಗಳನ್ನು ಮುಟ್ಟುತ್ತಿರಲಿಲ್ಲ.

ಶ್ರೀ ವೀರಪ್ಪಜ್ಜ ಕೇವಲ ಬಿಸಿಲಿನಲ್ಲಿ ಇರುವದನ್ನು ನೋಡಿ ಸಿದ್ನಾಳಶೆಟ್ಟಿ ಗದುಗಿನಿಂದ ಹನ್ನೆರಡು ತಗಡುಗಳನ್ನು ತಂದು ಆತನು ಕೂಡ್ರುವ ಜಾಗೆಯಲ್ಲಿ ಹಾಕಿಸಿ ನೆರಳು ಮಾಡಿಸಿದ, ಆದರೆ, ಅಜ್ಜನು ಅದರಲ್ಲಿ ಕುಳಿತುಕೊಳ್ಳದೇ ಅಲ್ಲಿಂದ ಮೇಲಕ್ಕೆ ಸರಿಯುತ್ತ ಹೋದ. ಇದನ್ನು ನೋಡಿ, ಶೆಟ್ಟಿ ಅಜ್ಜನಿಗೆ ''ತಗಡಿನಲ್ಲಿ ಕುಳಿತುಕೊಳ್ಳದಿದ್ದರೆ, ಆ ಬೇವಿನ ಗಿಡದ ನೆರಳಿನಲ್ಲಾದರೂ ಕುಳಿತುಕೊಳ್ಳಬೇಕು'' ಎಂದು ಬಹುಪರಿಯಾಗಿ ಬೇಡಿಕೊಂಡ ಅದಕ್ಕೆ ಅಜ್ಜ ''ಅದು ಮೂಳ ! ಅದಕ್ಕೆ ಬೆನ್ನು ಹತ್ತಬಾರದು'' ಎಂದು ಹೇಳಿ ಮೊದಲಿನಂತೆ ಬಿಸಿಲಿನಲ್ಲಿಯೇ ಕುಳಿತ.

ಶ್ರೀ ಹುಚ್ಚೀರಪ್ಪಜ್ಜನ ಬಾಯಿಂದ 'ಮೂಳ' ಎಂದು ಬಂದದ್ದನ್ನು ಕೇಳಿ ಶೆಟ್ಟಿಯ ಮನಸ್ಸಿನಲ್ಲಿ ಬಹಳ ಅಸಮಾಧಾನವಾಯಿತು. ಮುಂದೆ ಕೆಲವೇ ದಿನಗಳಲ್ಲಿ ಅವನ ಹೆಂಡತಿ ತೀರಿಕೊಂಡು ಅವನ ಒಬ್ಬಳೇ ನಾಲ್ಕು ವರ್ಷದ ಮಗಳು ಅನಾಥಳಾದಳು. ಇದರಿಂದ ಶೆಟ್ಟಿಗೆ ದಿಕ್ಕೇತೋಚದಾಯಿತು. ಮನೆಯಲ್ಲಿ ಮಾಡುವವರಿಲ್ಲ, ಇಂಥದರಲ್ಲಿ ಆ ಆನಾಥ ಮಗುವನ್ನು ಜೋಪಾನ ಮಾಡುವವರಾರು ? ಎಂಬ ಚಿಂತೆ ಕಾಡಿಸಹತ್ತಿತು.

ಮುಂದೆ ಇವನು ಬೆಟಗೇರಿ ಬಿಟ್ಟು ನರೇಗಲ್ಲಿಗೆ ಬಂದು ಒಂದು ಚಿಕ್ಕ ಕಿರಾಣಿ ಅಂಗಡಿ ಇಟ್ಟುಕೊಂಡು ಇರಹತ್ತಿದನು. ಆಗ ಚಳಿಗಾಲ. ಶ್ರೀ ವೀರಪ್ಪಜ್ಜನಿಗಾಗಿ ಅವನು ಒಂದು ನೆರೆಯ ಕಂಬಳಿ ನೇಯಿಸಿ ತಂದು ಹೊಚ್ಚಲು ಹೋದನು. ಆದರೆ, ಶ್ರೀ ವೀರಪ್ಪಜ್ಜ ಅದನ್ನು ತೆಗೆದುಕೊಳ್ಳದೆ ಅಲ್ಲಿಯೇ ದಾರಿಹಿಡಿದು ಹೋಗುತ್ತಿದ್ದ, ಒಬ್ಬ ದಾರಿಕಾರನಿಗೆ ಕೊಟ್ಟುಬಿಟ್ಟನು. ಇದರಿಂದ, ದಾರಿಕಾರನಿಗೆ ಸಂತೋಷವಾಯಿತು. ಆದರೆ, ವೀರಭದ್ರಪ್ಪ ಶೆಟ್ಟಿಗೆ ಅಜ್ಜನು ಸ್ವೀಕರಿಸಲಿಲ್ಲವೆಂದು ವಿಷಾದವಾಯಿತು.

ಮುಂದೆ ಸ್ವಲ್ಪ ದಿವಸಗಳಲ್ಲಿ ಕಂಬಳಿ ಆಶೀರ್ವಾದ ಪಡೆದ ವ್ಯಕ್ತಿ ಶ್ರೀಮಂತನಾದ. ಆದರೆ, ಶೆಟ್ಟಿಗೆ ಇದ್ದ ಒಬ್ಬ ಮಗಳೂ ಕೂಡಾ ಕಾಲವಶಳಾಗಿ ಶೆಟ್ಟಿಯ ಸಂಸಾರ ವೃಕ್ಷ ಅಲ್ಲಿಗೆ ಉರುಳಿ ಬಿದ್ದಿತು.

ಹೀಗೆ ನಿರ್ಗತಿಕನಾದ ವೀರಭದ್ರಪ್ಪ ಶೆಟ್ಟಿ ಬಹು ಚಿಂತಿತನಾಗಿ ನರೇಗಲ್ಲನ್ನು ಬಿಟ್ಟು ಹಾಳಕೇರಿ ಮಠದಲ್ಲಿ ಕೆಲ ಕಾಲ ಸೇವೆ ಮಾಡುತ್ತ ಇದ್ದು, ಒಂದು ದಿನ ಕೊನೆಯುಸಿರೆಳೆದನು. ಶ್ರೀ ವೀರಪ್ಪಜ್ಜನವರಿಗೆ ಸಿದ್ನಾಳ ಶೆಟ್ಟಿದ್ರಾಕ್ಷಿ, ಕೇರಬೀಜ ಇವುಗಳನ್ನು ಕೊಡಮಾಡಿದ್ದಾಗಲಿ, ತಗಡಿನ ನೆರಳು ಮಾಡಿಸಿದ್ದಾಗಲಿ, ಇವೆಲ್ಲ ಸೂಕ್ಷ್ಮ ಸಂವೇದನಾಶೀಲನೂ, ಸರ್ವಸಂಗ ಪರಿತ್ಯಾಗಿಯೂ ಆದ ಶ್ರೀ ವೀರಪ್ಪಜ್ಜನವರಿಗೆ ಸ್ವೀಕಾರಾರ್ಹವಾದವುಗಳಾಗಿರಲಿಲ್ಲ. ಆತನ ಇಚ್ಛೆಯ ವಿರುದ್ಧ ಮಾಡಿದ ಅಪರಾಧಗಳು.

ವೈರಾಗ್ಯ ಮೂರ್ತಿಯಾದ ಶ್ರೀ ವೀರಪ್ಪಜ್ಜನನ್ನು ಲೌಕಿಕ ದೃಷ್ಟಿಯಲ್ಲಿ ಕಂಡನು ಸಿದ್ನಾಳ ಶೆಟ್ಟಿ ಸರಿಯಾಗಿ ಅರ್ಥ ಮಾಡಿಕೊಳ್ಳಲಿಲ್ಲ. ಹೀಗಾಗಿ, ಅವನು ಮಾಡಿದ ಸೇವೆ ಅಜ್ಜನಿಗೆ ವಿಪರೀತವಾಯಿತು. ಅದಕ್ಕಾಗಿ ಅವನು ಆತನ ಅವಕೃಪೆಗಳಿಗೆ ಒಳಗಾದ. ಅವನಿಗೆ ಅಜ್ಜನು ರಕ್ಷಕನೇ ಹೊರತು, ಅವನು ಅಜ್ಜನಿಗೆ ರಕ್ಷಕನಲ್ಲ. ಹಾಗೆ ಭಾವಿಸಿದ್ದೇ ಅವನ ಅಹಂಭಾವ. ಮಹಾತ್ಮರು ಇದಕ್ಕೆ ಅವಕಾಶ ಮಾಡಿಕೊಡುವದಿಲ್ಲ.

**ಅಪರಾಧಕ್ಕೆ ಶಿಕ್ಷೆ :**

ರೋಣ ತಾಲೂಕಿನ ಸವಡಿ ಗ್ರಾಮದಲ್ಲಿ ಒಬ್ಬ ಒಂದು ಕೊಲೆ ಮಾಡಿ ತಲೆ ಮರೆಸಿಕೊಂಡು ಅಲ್ಲಲ್ಲಿ ತಿರುಗಾಡುತ್ತಿದ್ದ. ಅವನೊಮ್ಮೆ ಶ್ರೀ ವಿರಪ್ಪಜ್ಜನವರ ದರ್ಶನಕ್ಕೆ ಬಂದ. ಅವನು ಬಂದಾಗ ಅಜ್ಜನವರು ತಾವು ಕುಳಿತಲ್ಲಿಂದಲೇ ಸರಿಯುತ್ತ ಮೇಲ್ಗಡೆಗೆ ಹೋಗುತ್ತಿದ್ದರು.

ಬಂದವನು ಅಜ್ಜನವರಿಗೆ ''ಎದ್ದು ಹೋಗಬೇಕ್ರೆಪ, ಹಂಗ ಸರದರ ಹ್ಯಾಂಗ್ರೆಪಾ'' ಎಂದು ಅಂದ. ಅದಕ್ಕೆ ಅಜ್ಜನವರು ಅವನಿಗೆ ''ಕಾಲಕೆಟ್ಟೈತ್ರೆಪ ಹ್ಯಾಂಗ ಹೋಗಬೇಕ್ರೆಪ'' ಎಂದು ಹೇಳಿದ. ಅದಕ್ಕೆ ಆ ಸವಡಿ ಗ್ರಾಮದವನು ''ಎಲ್ಲಿಮಟ ಸರಿಬೇಕ್ರೆಪ'' ಎಂದು ಕೇಳಿದ. ಅದಕ್ಕೆ ಅಜ್ಜ ''ಹತ್ತೇಳು ಕಟ್ಲೆ ತನಕಪ್ಪ, ಅಲ್ಲೀಮಟಪಾ ಅಲ್ಲಿಗೆ ಆತಪ ನೀ ಹೋಗಪಾ'' ಎಂದು ಹೇಳಿದ. ಮುಂದೆ ಕೆಲವು ದಿವಸಗಳಲ್ಲಿ ಆ ವ್ಯಕ್ತಿ ಪೋಲೀಸರ ಕೈಗೆ ಸಿಕ್ಕ, ಆಗ ಅವನಿಗೆ ಅಜ್ಜ ಹೇಳಿದಂತೆ, ಹತ್ತೇಳ ಕಟ್ಲೆ ಅಂದರೆ, ಹದಿನೇಳು ವರ್ಷ ಕಠಿಣ ಶಿಕ್ಷೆ ಆಯ್ತು

ಬಹಳ ಜನರು ಮಾಡಬಾರದ ಕೆಲಸಗಳನ್ನು ಮಾಡಿ, ಅವರ ಕಹಿಫಲ ಅನುಭವಿಸುವಾಗ ಸಹಿಸಲಾರದೇ ಅದನ್ನು ಕಳೆದುಕೊಳ್ಳಲು ಮಹಾತ್ಮರ ಸಾನ್ನಿಧ್ಯಕ್ಕೆ ಬರುವದುಂಟು. ಮಹಾತ್ಮರೇನು ಇಂಥವರಿಗೆ ''ಏನೇ ಮಾಡಿ ಬಂದರೂ ನಾನು ಕಳೆಯುವೆ'' ಎಂದು ಆಶ್ವಾಸನೆ ಕೊಟ್ಟಿರುವದಿಲ್ಲ. ''ಅವಶ್ಯ ಅನುಭೋಕ್ತವ್ಯಂ ಕೃತಕರ್ಮ ಫಲಾಫಲಂ'' ಎಂಬಂತೆ ಮಾಡಿದುದನ್ನು ಅನುಭವಿಸಲೇಬೇಕಾಗುತ್ತದೆ. ಇದನ್ನೇ ಸರ್ವಜ್ಞ ಮೂರ್ತಿಗಳು ಹರಿವ ಗಂಗೆಯಲಿ ಮಿಂದು ಹರಿಯಿತು

ಪಾಪವೆನಬೇಡ, ಆ ಪಾಪ ಮೈಗೆ ಹತ್ತಿದ ಲೇಪದಂತೆ ಇಹುದು ಸರ್ವಜ್ಞ ಎಂದು ಹೇಳಿರುವರು.

ಶ್ರೀ ಹುಚ್ಚೀರಪ್ಪಜ್ಜನವರು ಅಂದ ಮಾತುಗಳು ಅವರ ಬಗ್ಗೆ ಮುಂದಾಗುವ ಭವಿಷ್ಯವಾಗಿತ್ತೆಂದು ಗಮನಿಸಬೇಕು. ಏಕೆಂದರೆ, ಹತ್ತೇಳು ಕಟ್ಲೆತನಕಪ ಎಂದು ಅಂದದ್ದು ಅವರ ಎಪ್ಪತ್ತು ವರ್ಷ ಸೂಚಿಸುತ್ತದೆ. ಹಾಗೆಯೇ ಅಲ್ಲಿಮಟಪಾ ಎಂದದ್ದು, ಸರಿಯಾಗಿ ಇದೇ ಕಾಲಮಾನಕ್ಕೆ ಅದು ಮಠ ಸ್ಥಾಪಿತವಾದುದೊಂದು ಸ್ವಜೀವನ ಭವಿಷ್ಯ ಸೂಚನೆ ನೀಡಿದ್ದು ನೋಡಿದರೆ ಆ ತ್ರಿಕಾಲಜ್ಞಾನಿಯ ಬಗ್ಗೆ ನಿಷ್ಠೆ ಆದರಾಭಿಮಾನಗಳು ಬಾರದೇ ಇರಲಾರವು.

**ನಿರಪರಾಧಿ ಕುತ್ತು ಪರಿಹಾರ :**

ಹುಬ್ಬಳ್ಳಿಯಲ್ಲಿ ಒಬ್ಬ ಮಾರವಾಡಿಯ ಮನೆಗೆ ನಾಲ್ಕು ಜನ ಕಳ್ಳರು ಕನ್ನ ಹಾಕಿ ಒಳಗೆ ಬಂದು ಕೈಗೆ ಸಿಕ್ಕಿದ್ದನ್ನು ದೋಚಿಕೊಂಡು ಹೋಗಹತ್ತಿದರು ಅಷ್ಟರಲ್ಲಿ ಮನೆಯ ಯಜಮಾನನು ಅವರನ್ನು ಹೊಡಿಯಲಿಕ್ಕೆ ಹೋದ. ಅವರು ತಮ್ಮಲ್ಲಿದ್ದ ಜಂಬೆಯಿಂದ ಅವನಿಗೆ ತಿವಿದು ಕೊಂದು ಹಾಕಿ ಪರಾರಿಯಾದರು.

ಈ ಮನೆಯ ಪಕ್ಕದಲ್ಲಿ ಗುಜ್ಜರ ಹಾಗೂ ಮಾರವಾಡಿಗಳ ಮನೆಗಳಿದ್ದವು. ಈ ಕೊಲೆಯ ಆರೋಪ ಆ ಪಕ್ಕದ ಮನೆಯವರ ಮೇಲೆ ಬಂದಿತು. ಇದರಿಂದ ಆ ಮನೆಯ ಯಜಮಾನರಾದ ಗುಜ್ಜರು ಹಾಗೂ ಮಾರವಾಡಿಗಳು ತಲೆಮರೆಸಿಕೊಂಡು ತಿರುಗಹತ್ತಿದರು. ಈ ಸಮಯದಲ್ಲಿ ಅವರಿಗೆ ಕೋಡಿಕೊಪ್ಪದ ಶ್ರೀ ಹುಚ್ಚೀರಪ್ಪಜ್ಜನ ಕೀರ್ತಿ ಮಹಿಮೆಗಳು ಅವರ ಕಿವಿಗೆ ಬಿದ್ದಿದ್ದವು. ಆಗ ಅವರು ನರೇಗಲ್ಲಿಗೆ ಬಂದು ಕೋಡೀಕೊಪ್ಪಕ್ಕೆ ಹೋಗಿ ಅಲ್ಲಿ ಸಿಕ್ಕ ಬಾಳೆಹಣ್ಣುಗಳನ್ನಷ್ಟೇ ತೆಗೆದುಕೊಂಡು ಡೋಣಿಕಲ್ಲ ಏರಿಗೆ ಹೋಗಿ ಅಜ್ಜನವರ ದರ್ಶನ ನಮಸ್ಕಾರ ಮಾಡಿ ಕುಳಿತರು.

ಅಜ್ಜನು ಇವರು ಬಂದಕೂಡಲೇ ತನ್ನಷ್ಟಕ್ಕೆ ತಾನು ''ಲೇ ಈರಾ ಇವ ಕಳ್ಳ ಅಲ್ಲಲೇ, ಇವ ಬಹಳ ಒಳ್ಳೆಯವ, ಹುಡುಕಿದರಪ ಸಿಗಲ್ರೆಪ ಇನ್ನೂ ಕಾಯಿ ಆಗ್ಯೆತ್ರಪ, ಇನ್ನೂ ಹೋಗ್ರಪ'' ಎಂದು ವಟಗುಡ ಹತ್ತಿದ. ಆಗ ಬಂದವರಿಗೆ ಈ ಎರಡರ್ಥದ ಮಾತುಗಳು ತಿಳಿಯಲಿಲ್ಲ. ಅವರು ಅಲ್ಲಿ ಕುಳಿತವರನ್ನು ಈ ಬಗ್ಗೆ ಕೇಳಿದರು. ಆಗ ಅಲ್ಲಿಯವರೆಗೆ ನಿಮಗೆ ಟೆಂಗಿನಕಾಯಿ ಸಿಗಲಿಲ್ಲೇನು? ಅದಕ್ಕೆ ಅಜ್ಜ ಹೀಂಗ ಹೇಳಿದ'' ಎಂದು ತಮ್ಮ ಅಗಾಧ ಪಾಂಡಿತ್ಯವನ್ನು ಪ್ರದರ್ಶಿಸಿದರು. ನಿಜವಾಗಿ ಅಂದರೆ ಅಜ್ಜನ ಮಾತು ಅವರಿಗೂ ಅರ್ಥವಾಗಿದ್ದಿಲ್ಲ.

ಆಗ ಅವರು ನಿರ್ವಾಹವಿಲ್ಲದೆ ನರೇಗಲ್ಲಿಗೆ ಹೋಗಿ ನಾಲ್ಕು ಟೆಂಗಿನ ಕಾಯಿಗಳನ್ನು ತಂದು ಅಜ್ಜನ ಮುಂದೆ ಇಟ್ಟರು. ಅಜ್ಜ ಅವುಗಳನ್ನು ನೋಡಿ ಸಿಟ್ಟಿನಿಂದ ಕಣ್ಣು ಕೆಂಪಗೆ ಮಾಡಿ ದವಡಿ ಕಚ್ಚುತ್ತಾ ''ಕಳ್ಳ ಸೂಳೇ ಮಕ್ಕಳ ನಿಮಗೆ ಕ್ವಾಳಾ ಹಾಕತೀನಿ ಬರ್ರಿ'' ಎಂದು ಕಾಯಿಗಳನ್ನು ಜುಟ್ಟುಹಿಡಿದು ಒಂದಕ್ಕೊಂದು

ತಳಕು ಹಾಕಿ ಆಚೆಗೆ ಎಸೆದು ಬಿಟ್ಟ. ಬಂದವರು ಆ ಕಾಯಿಗಳನ್ನು ತಂದು ಅಜ್ಜನ ಮುಂದೆ ಮತ್ತೆ ಇಟ್ಟರು. ಆಗ ಅಜ್ಜನು ಅವುಗಳನ್ನು ಒಡೆದು ಚೂರು ಚೂರು ಮಾಡಿ ಆಚೆಗೆ ಒಗೆದು ಅವರಿಗೆ ''ಕಾಯಿತಾನ ಹೋಗ್ರಪ'' ಎಂದು ಹೇಳಿದ.

ಆಗ ಅವರು ಬಿದ್ದ ಚೂರುಗಳನ್ನೆಲ್ಲ ಆರಿಸಿ ಪ್ರಸಾದ ರೂಪವಾಗಿ ಸ್ವೀಕರಿಸಿ ಅಲ್ಲಿದ್ದವರಿಗೆ ಹಂಚಿ ಹುಬ್ಬಳ್ಳಿಗೆ ಹೋದರು. ಅಷ್ಟರಲ್ಲಿ ಕೊಲೆ ಆರೋಪಿಗಳಾದ ನಾಲ್ಕಾರು ಕಳ್ಳರು ಪೋಲೀಸರ ಕೈಗೆ ಸಿಕ್ಕು ಬಿದ್ದು ಜೇಲಿನಲ್ಲಿ ಬಿದ್ದಿದ್ದರು. ವೃಥಾ ಆರೋಪ ಹೊತ್ತವರು ತಮಗೆ ಬಂದ ಕೊಲೆ ಆರೋಪದಿಂದ ಬಿಡುಗಡೆ ಹೊಂದಿ ಪುನಃ ಅಜ್ಜನಲ್ಲಿಗೆ ಬಂದು ಅನ್ನಸಂತರ್ಪಣೆಮಾಡಿ ಹೋದರು. ಅಷ್ಟೇ ಅಲ್ಲ ಅವರು ತಾವು ಬದುಕಿರುವವರೆಗೂ ಅಜ್ಜನ ಪುಣ್ಯಸ್ಥಾನದಲ್ಲಿ ಅನ್ನದಾನ ಮಾಡಿಹೋಗುತ್ತಿದ್ದರು.

**ಸಂಚಿತ ಕರ್ಮ ನಿವಾರಣೆ :**

ನಿಡಗುಂದಿ ರೋಣ ತಾಲೂಕಿನ ಒಂದು ಗ್ರಾಮ, ಅಲ್ಲಿ ಒಬ್ಬನಿಗೆ ವಾತ ರೋಗ, ಸಂಧಿ, ಸಂದುಗಳಲ್ಲಿ ಶೂಲಿಯುಂಟಾಯಿತು. ಅನೇಕ ಪ್ರಸಿದ್ಧ ವೈದ್ಯರಿಗೆ ಎಷ್ಟೇ ತೋರಿಸಿದರೂ ನೆಟ್ಟಗಾಗಲಿಲ್ಲ. 'ಪ್ರಯತ್ನಾಂತೇ ಪರಮೇಶ್ವರ' ಎನ್ನುವ ಹಾಗೆ ಕೆಲವು ಜನರ ಸಲಹೆಯ ಮೇರೆಗೆ 'ಇದು ಕೊನೆಯ ಪ್ರಯತ್ನವೆಂದು ಶ್ರೀ ಹುಚ್ಚೀರಪ್ಪನವರ ದರ್ಶನಕ್ಕಾಗಿ ಚಕ್ಕಡಿ ತೆಗೆದುಕೊಂಡು, ಅದರಲ್ಲಿ ಆ ವಾತರೋಗಿಯನ್ನು ಹಾಕಿಕೊಂಡು ಶ್ರೀ ಅಜ್ಜನಿರುವ ಸ್ಥಳಕ್ಕೆ ಬಂದರು.

ಚಕ್ಕಡಿಯಿಂದ ಆ ರೋಗಿಯನ್ನು ಅನಾಮತು ಇಬ್ಬರು ಎತ್ತಿಕೊಂಡು ಬಂದು ಶ್ರೀ ಅಜ್ಜನ ಎದುರಿಗೆ ಕುಳ್ಳಿರಿಸಿದರು. ಆದರೆ, ಅಜ್ಜನ ಲಕ್ಷ್ಯ ಇವನ ಕಡೆಗೆ ಹರಿಯಲಿಲ್ಲ. ಮುಂಜಾನೆಯಿಂದ ಸಾಯಂಕಾಲದವರೆಗೆ ಕುಳಿತರೂ ಅವನ ಕಡೆಗೆ ಹೊರಳಿ ಸಹ ನೋಡಲಿಲ್ಲ. ನಮ್ಮ ಕರ್ಮಕ್ಷಯವಾಗದೇ ಮಹಾತ್ಮರ ದೃಷ್ಟಿ ನಮ್ಮ ಮೇಲೆ ಬೀಳಲಾರದು.

ಆ ವಾತರೋಗಿ ಅಖಂಡ ಹತ್ತು ತಾಸುಗಳವರೆಗೆ ಅಜ್ಜನನ್ನು ದೈನ್ಯದಿಂದ ನೋಡುತ್ತ ಹಾಗೆಯೇ ಕುಳಿತ. ಆಗಾಗ್ಗೆ ಅಜ್ಜನ ಮುಂದಿರುವ ರೊಟ್ಟಿಯ ತುಂಡುಗಳನ್ನು ಆಗಾಗ ಬಾಯಿಗೆ ಹಾಕಿಕೊಂಡು ತಿನ್ನಹತ್ತಿದ, ಇದರಿಂದ ಅವನು ಜ್ಞಾನೇಂದ್ರಿಯಗಳಾದ ನಾಲಿಗೆ, ಕಣ್ಣುಗಳು ಪವಿತ್ರವಾಗಿ ಅವನಲ್ಲಿದ್ದ ಕರ್ಮವೆಲ್ಲ ನಾಶವಾಗಿರಬೇಕು. ಅಂತೆಯೇ ಅಜ್ಜ ಅವನ ಕಡೆಗೆ ಹೊರಳಿ ನೋಡಿ ಅವನಿಗೆ ''ಏಳಲೇ ಬೋಳಿಮಗನೇ ಕುಂತಾನ ನಿಟಾಸಿಗೊಂಡು ಮ್ಯಾಕ ಏಳಲೇ'' ಎನ್ನಲು ಆ ವಾತರೋಗಿ ರೈತ ಅಜ್ಜನಿಗೆ ''ಅಜ್ಜಾ ಏಳಾಕ ಬರಲೊಲ್ಲದು ! ಬಹಳ ದಿವಸದ ರೋಗ ಹ್ಯಾಂಗ ಏಳಲಿ ?'' ಎಂದ.

ಅಜ್ಜನಿಗೆ ಸಿಟ್ಟು ಬಂದಿತು ''ಏಳಲೇ ಸೂಳೇ ಮಗನೇ'' ಎಂದು ಅಲ್ಲಿಯೇ ಬಿದ್ದಿದ್ದ ಕಟ್ಟಿಗೆಯಿಂದ ಅವನನ್ನು ಒಮ್ಮೆ ಬಡಿದು ಇನ್ನೊಮ್ಮೆ

ಬಡಿಯಬೇಕೆನ್ನುವಷ್ಟರಲ್ಲಿ ಅವನೇ ಎದ್ದು ಓಡಿಹೋದ. ಆಗ ಅವನ ಮನೆಯವರಿಗೆ ಈ ಘಟನೆ ನೋಡಿ ಆದ ಆನಂದ ಅಷ್ಟಿಷ್ಟಲ್ಲ. ಏಕೆಂದರೆ, ಅವನು ತನ್ನ ಮನೆಯಲ್ಲಿ ಅನೇಕ ವರ್ಷಗಳಿಂದ ತನ್ನಷ್ಟಕ್ಕೆ ತಾನು ಎದ್ದು ಸಹ ಕುಳಿತಿರಲಿಲ್ಲ.

ಆಗ ಮನೆಯವರು ಅವನನ್ನು ಮತ್ತೆ ಅಜ್ಜನು ಇದ್ದಲ್ಲಿಗೆ ಕರೆದುಕೊಂಡು ಬಂದರು. ಆದರೆ, ಸೋಜಿಗವೆಂದರೆ ಅವನ ವಾತರೋಗ ಆಗಲೇ ಹೊರಟು ಹೋಗಿತ್ತು, ಅವನು ಎಲ್ಲರಂತೆ ಯಾವ ಬಾಧೆಯೂ ಇಲ್ಲದೆ ಅಜ್ಜನಲ್ಲಿಗೆ ತಾನಾಗಿ ನಡೆದುಕೊಂಡು ಬಂದು ಅಜ್ಜನಿಗೆ ಅಡ್ಡ ಬಿದ್ದು ಆತನ ಪಾದಧೂಲಿಯನ್ನು ಮೈತುಂಬಾ ಸವರಿಕೊಂಡ. ತನ್ನೊಡನೆ ತಂದ ಬುತ್ತಿಯನ್ನು ಬಿಚ್ಚಿ ಆ ಬುತ್ತಿಯಲ್ಲಿಯ ಕೆಲವು ಪದಾರ್ಥಗಳನ್ನು ಅಜ್ಜನ ಮುಂದೆ ಇಟ್ಟು, ಅಜ್ಜನ ಮುಂದಿರುವ ಪ್ರಸಾದವನ್ನು ತಾವು ತೆಗೆದುಕೊಂಡು ರೋಗದಿಂದ ಮುಕ್ತನಾದ ಆ ರೈತನನ್ನು ಊರಿಗೆ ಕರೆದುಕೊಂಡು ಹೋದರು.

'ಪೂರ್ವಜನ್ಮ ಕೃತಂ ಪಾಪಂ ವ್ಯಾಧಿರೂಪೇಣ ಪೀಡ್ಯತೆ' ಎಂಬ ಉಕ್ತಿಯಂತೆ, ಈ ಜನ್ಮದಲ್ಲಿ ಬಂದ ರೋಗವು ಗುರುದೇವತಾ ಕೃಪೆಯಿಂದ ಮಾತ್ರ ಹೋಗುವವು. ಕರ್ಮನಾಶದಿಂದ ನಿರೋಗತ್ವ ಪ್ರಾಪ್ತಿಯಾಯಿತು.

**ಕಳೆದಲ್ಲಿಯೇ ಹುಡುಕು :**

ಅಬ್ಬಿಗೇರಿ ರೋಣ ತಾಲೂಕಿನ ಒಂದ ಗ್ರಾಮ. ಅಲ್ಲಿಯ ಒಬ್ಬ ಹೆಣ್ಣುಮಗಳು ಅಬ್ಬಿಗೇರಿಗೆ ಸಮೀಪದಲ್ಲಿದ್ದ ಶ್ರೀ ಬಯಲು ಬಸವೇಶ್ವರನಿಗೆ ಹರಕೆ ಹೊತ್ತು, ಒಂದು ಗಂಡು ಮಗುವನ್ನು ಪಡೆದಿದ್ದಳು. ಮಗು ದೊಡ್ಡದಾಗುತ್ತಾ ಬಂದರೂ ಆಕೆ ತನ್ನ ಹರಕೆಯನ್ನು ಮುಟ್ಟಿಸಿರಲಿಲ್ಲ. ಹರಕೆ ದೊಡ್ಡದಿದ್ದಿಲ್ಲ. ಕೇವಲ "ದೇವರಿಗೆ ತುಪ್ಪದ ದೀಪ ಹಚ್ಚುವದು ಅಷ್ಟೆ !"

ತನ್ನ ಕಾರ್ಯ ಕೈಗೂಡಿದ ನಂತರ, ಆಕೆ ದೇವರನ್ನೇ ಮರೆತು ಬಿಟ್ಟು ಇದರಿಂದ ಆ ಮಗುವಿಗೆ ಒಂದು ದೊಡ್ಡ ರೋಗ ಗಂಟು ಬಿದ್ದು, ಮಗು ದಿನೇ ದಿನೇ ಕ್ಷೀಣವಾಗುತ್ತ ಬಂತು. ಇದನ್ನು ನೋಡಿ ಆ ಹೆಣ್ಣುಮಗಳು ಯಾವಾಗಲೂ ಕಣ್ಣೀರು ಹಾಕಿ ಕಣ್ಣಿನ ದೃಷ್ಟಿಯನ್ನೇ ಕಳೆದುಕೊಂಡು ಬಿಟ್ಟಿದ್ದಳು.

ಇದರಿಂದ ಚಿಂತಾಕ್ರಾಂತಳಾದ ಆ ಹೆಣ್ಣು ಮಗಳು ಸಮೀಪದಲ್ಲಿರುವ ಕೋಡಿಕೊಪ್ಪದ ಶ್ರೀ ವೀರಪಜ್ಜನ ಮಹಿಮೆಯನ್ನು ಕೇಳಿ, ತನ್ನ ಕಣ್ಣಿನ ದೃಷ್ಟಿ ಪುನಃ ಬರುವದಕ್ಕಾಗಿ ಒಂದು ದಿನ ಚಕ್ಕಡಿಯಲ್ಲಿ ಪಕ್ಕದ ಮನೆಯವರನ್ನು ಕರೆದುಕೊಂಡು ಅಜ್ಜನಲ್ಲಿಗೆ ಬಂದು, ಆತನ ಪಾದಕ್ಕೆ ನಮಸ್ಕಾರ ಮಾಡಿ ಮುಂದೆ ಕುಳಿತಳು.

ಆಗ ಅಜ್ಜನವರು ತನ್ನಷ್ಟಕ್ಕೆ ತಾನೇ 'ಲೇ ಈರಾ ಬಯಲಾಗ ಬಯಲೇ ಕಾಡತದಪ, ಹೊಳೆದಾಟಿಂದ ಅಂಬಿಗರಮಿಂಡ ಅಂದ್ರ ಹ್ಯಾಂಗಪ್ಪ, ಕಳಕೊಂಡಲ್ಲಿಯೇ ಹುಡಿಕಬೇಕಪ" ಎಂದು ಅದೇ ತಾನೇ ಗಾಂಜಾ ಮಿಜ್ಜಿದ

ನೀರಿನಿಂದ ಆಕೆಯ ಕಣ್ಣಿಗೆ ಉಗ್ಗಿದ. ಅದರಿಂದ ಆಕೆಯ ಕಣ್ಣಿನಲ್ಲಿ ಉರಿ ಬಿದ್ದಿಂತಾಗಿ ಆಕೆ ಲಬಲಬ ಹೊಯ್ಯಕೊಳ್ಳುತ್ತ, ''ಅಯ್ಯೋ, ಅಜ್ಜ ! ನನ್ನ ಕಣ್ಣು ಹೋದವು'' ಎಂದು ಅಳುತ್ತ, ಕಣ್ಣು ತಿಕ್ಕಹತ್ತಿದಳು. ಆ ಮೇಲೆ ಕಣ್ಣು ಒರಿಸಿಕೊಂಡು ನೋಡುತ್ತಾಳೆ ತನ್ನ ಎದುರಿಗಿದ್ದ ಜಗತ್ತೇ ಸ್ಪಷ್ಟವಾಗಿ ಕಾಣಹತ್ತಿತ್ತು. ಆಕೆಗೆ ಎಲ್ಲಿಲ್ಲದ ಸಂತೋಷವಾಯಿತು. ಆ ಮೇಲೆ ಆಕೆ ಅಜ್ಜನ ಪಾದದ ಮೇಲೆ ಬಿದ್ದು, ಉರುಳಾಡ ಹತ್ತಿದಳು.

''ಲೇ ಈರಾ! ಬಯಲ ಬಸವಂಣಗ ತುಪ್ಪದ ದೀವಿಗೆ ಹಚ್ಚಿ ನಡಕೋಬೇಕಪ'' ಎಂದು ಅಂದ. ಅದೇ ಮೇರೆಗೆ ಆಕೆ ಊರಿಗೆ ಹೋದ ನಂತರ, ಪ್ರತಿದಿನ ಬಯಲು ಬಸವಣ್ಣನಿಗೆ ತುಪ್ಪದ ದೀವಿಗೆ ಹಚ್ಚಹತ್ತಿದಳು. ಇದರಿಂದ ಆಕೆಯ ಮಗನ ರೋಗ ನಿವಾರಣೆಯಾಗಿ ಬೆಳೆದು ದೊಡ್ಡವನಾದ. ಮುಂದೆ ಅವನ ವಂಶ ಶ್ರೀ ಹುಚ್ಚೀರಪ್ಪ ಹಾಗೂ ಶ್ರೀ ಬಸವಣ್ಣನ ಕೃಪೆಯಿಂದ ಪಲ್ಲವಿಸಿತು.

ವಿಶ್ವಾಸೋ ಫಲದಾಯಕಃ ಎಂಬಂತೆ ಆಕೆ ಶ್ರೀ ಬಸವಣ್ಣನಲ್ಲಿ ವಿಶ್ವಾಸವಿಟ್ಟೇ ಸಂತಾನ ಪಡೆದಿದ್ದಳು. ಮುಂದೆ ತನ್ನ ಸಂಸಾರದಲ್ಲಿ ಆತನನ್ನು ಮರೆತು ಬಿಟ್ಟಿದ್ದಳು. ಆಕೆ ಅಜ್ಜನಲ್ಲಿಗೆ ಬಂದ ನಂತರ, ಅಜ್ಜನು ಆಕೆಯಲ್ಲಿ ಪುನಃ ದೇವತಾ ನಿಷ್ಠೆ ಉಂಟಾಗುವಂತೆ ಮಾಡಿದ.

**ಬಯಲಿಗೆ ಬಿದ್ದ ಕಳವು :**

ಕೋಡಿಕೊಪ್ಪದ ಒಬ್ಬರ ಮನೆಯಲ್ಲಿ ಒಂದು ತಾಳೀಸರ ಕಳುವಾಯಿತು. ಕಳಕೊಂಡವರು ಶ್ರೀ ಅಜ್ಜನ ಹತ್ತಿರ ಹೋಗಿ, 'ತಾಳೀಸರ ಕಳವಾಗಿದೆ ಯಾರು ತಗೊಂಡಿದ್ದಾರೆ' ಎಂದು ಪ್ರಶ್ನೆ ಕೇಳಿದರು. ಆಗ ಅಜ್ಜ ''ಮೂಲಿಮನಿ ಬಡವ'' ಎಂದು ಎತ್ತೋ ನೋಡುತ್ತ ಹೇಳಿದ. ಇದನ್ನು ಕೇಳಿದ ಸಾಮಾನು ಕಳಕೊಂಡವರು ತಮ್ಮ ಮನೆಯ ಬಳಿಯಲ್ಲಿಯೇ ಮೂಲಿಮನಿ ಎಂಬುವವರನ್ನು ''ಅಜ್ಜ ನಿನ್ನ ಹೆಸರು ಹೇಳ್ಯಾನ ಅದಕs ನೀ ತಾಳೀಸರ ಕೊಡು, ನಿನ್ನ ಹೊರತು ಅದು ಎಲ್ಲಿಯೂ ಹೋಗಿಲ್ಲ'' ಎಂದು ಅವನಿಗೆ ಮುಂಬಾಲು ಬಿದ್ದರು.

ಇದರಿಂದ ಸಿಟ್ಟಿಗೆದ್ದ ಆ ಮೂಲಿಮನಿ ಎಂಬುವನು ನೇರವಾಗಿ ಡೋಣಿ ಕಲ್ಲಿಗೆ ಹೋಗಿ, ಅಲ್ಲಿ ಅಜ್ಜನನ್ನು ಬಡಿಯಹತ್ತಿದ, ಇತ್ತ ಅವನ ಮನೆಯಲ್ಲಿ ಹೆಂಡತಿಗೆ ಯಾರೋ ಬಡಿದಂತಾಗಿ ಚೀರುತ್ತ ಹೊರಗೆ ಓಡಿ ಬಂದಳು. ಇದನ್ನು ನೋಡಿದ ನೆರೆಮನೆಯವರು, ಡೋಣಿ ಕಲ್ಲ ಏರಿಗೆ ಹೋಗಿದ್ದ ಆಕೆಯ ಗಂಡನಿಗೆ ಅವನ ಹೆಂಡತಿಗೆ ಬೀಳುತ್ತಿರುವ ಪೆಟ್ಟುಗಳ ವಿಷಯವನ್ನು ಹೇಳಿದರು. ಅವನು ಗಾಬರಿಯಾಗಿ ಮನೆಗೆ ಬಂದು ನೋಡುತ್ತಾನೆ. ಅಜ್ಜನಿಗೆ ತಾನು ಬಡಿದ ಪೆಟ್ಟುಗಳು ಹೆಂಡತಿಯ ಮೈಮೇಲೆ ಮೂಡಿದ್ದವು. ಇದರಿಂದ ಅವನಿಗೆ ಬಹಳ ಪಶ್ಚಾತ್ತಾಪ ವಾಯಿತು.

ಕಳವು ಆದ ಮನೆಯವರು ಅವನ ಮನೆಗೆ ಬಂದು, ತಾಳೀಸರ ಕೊಡಬೇಕೆಂದು ಗಟ್ಟಿಯಾಗಿ ಕುಳಿತರು. ಇದನ್ನು ನೋಡಿದ ನೆರೆಮನೆಯವರೂ ಸಹ ಅಲ್ಲಿಗೆ ಬಂದರು. ಆಗ ಜಂತಿಯಿಂದ ಎಲ್ಲರ ಸಮಕ್ಷಮ ತಾಳೀಸರ ಕೆಳಗೆ ಬಿದ್ದಿತು. ಆಗ ಎಲ್ಲರಿಗೂ ಖಾತ್ರಿಯಾಯಿತು. ಅಜ್ಜ ಹೇಳಿದ್ದು, 'ಮೂಲಿಮನಿ ಬಡವ ಸರಕದ್ದಿದ್ದು', ಎಂದು ತಿಳಿಯಿತು. ಈ ಹಿಂದೆ ಬಂದಂತೆ, ಸರ್ವಜ್ಞ ಹಾಗೂ ಸರ್ವವ್ಯಾಪಕನಾದ ಅಜ್ಜನು, ಸತ್ಯವಾದುದನ್ನೇ ನುಡಿದಿದ್ದ.

**ಬೆಂಬಿಡದ ಪ್ರಾರಬ್ಧ ಕರ್ಮ :**

ಕೋಡಿಕೊಪ್ಪದ ಹತ್ತಿರವೇ ಕೋಚಲಾಪುರ ಎಂಬ ಒಂದು ಊರು. ಅಲ್ಲಿ ಬಳಗೊಂಡ ರುದ್ರಯ್ಯ ಎಂಬ ಒಬ್ಬ ಮಹೇಶ್ವರನಿದ್ದ. ಆತನು ದಿನಾಲೂ ತನ್ನ ಮನೆಯಿಂದ ರೊಟ್ಟಿ ತಂದು ಅಜ್ಜನಿಗೆ ಕೊಡುತ್ತಿದ್ದನು.

ಒಂದು ದಿನ ಬಂದಾಗ, ಅಜ್ಜ ಮಲಗಿದ್ದ. ಅದನ್ನು ನೋಡಿ ರುದ್ರಯ್ಯ "ಹ್ನೂ ಏಳಪಾ ರೊಟ್ಟಿ ತಿನ್ನಾಕ" ಎಂದ. ಅದಕ್ಕೆ ಅಜ್ಜ "ತಿನ್ನೊದು ಗಿನ್ನೊದು ಬ್ಯಾಡ ಆಗೈತಪ ಬಲಮಗ್ಗಲು ಭಾಳ ಬ್ಯಾನೆಪ, ಏಳಾಕ ಬರಲೊಲ್ಲದಪ" ಎಂದು ಪ್ರತ್ಯುತ್ತರ ನುಡಿದರು. ಅದಕ್ಕೆ ರುದ್ರಯ್ಯ 'ಅಗ್ಸಿದ್ದೇವು ಗಿಗ್ಸದ್ದೇವಕ ಹೋಗುದಿಲ್ಲಪಾ, ಬಾಳ ಬ್ಯಾನಪ ಬಂದದ್ದು ಉಣಬೇಕಪಾ, ನೋಡಪ' ಎಂದು ಅಂದು ಎಡಗೈ ಆಸರದ ಮೇಲೆ ಎದ್ದು ಕುಳಿತ. ಆಗ ರುದ್ರಯ್ಯ, "ಪ್ರಸಾದ ತಂದೀನಿ, ತಗೊಳ್ರಿಪಾ" ಎಂದು ಅಂದ. ಅದಕ್ಕೆ ಅಜ್ಜ, 'ತರೂದು, ಬರೂದು, ತಿನ್ನೂದು, ಗಟ್ಟಿರುತನಕಪಾ ಹೌದಿಲ್ಲಪ ನೋಡಪಾ, ಬಲಗೈ ಎತ್ತಾಕ ಬರವಲ್ಲದಪ' ಎಂದು ಅನ್ನುತ್ತ, ಅಜ್ಜ ರುದ್ರಯ್ಯ ಕೊಟ್ಟ ರೊಟ್ಟಿಯನ್ನು ಎಡಗೈಯಿಂದಲೇ ತಿಂದನು.

ಈ ಸೂಚನೆ ನೋಡಿದ ರುದ್ರಯ್ಯನಿಗೆ ಬಹಳ ಅನುಮಾನವಾಯಿತು. ಮುಂದೆ ಒಂದೇ ವಾರದಲ್ಲಿ ಅವನಿಗೆ ಅರ್ಧಾಂಗವಾಯು ಹೊಡೆಯಿತು. 'ಬಂದದ್ದು ಉಣಬೇಕ್ರಪ' ಎಂದು ಅಂದದ್ದು ಕೇಳಿದ ಅವನು ಯಾವ ಔಷಧೋಪಚಾರ ಮಾಡಿಸಲಿಲ್ಲ, ತಾಳ್ಮೆಯಿಂದ ಕೆಲ ಕಾಲ ಆ ರೋಗವನ್ನು ಅನುಭವಿಸಿದ, ಒಂದು ದಿನ ಅಜ್ಜನನ್ನು ಸ್ಮರಿಸುತ್ತ ಶಿವಾಧೀನನಾದ.

ಹೀಗೆ, ಪ್ರಾರಬ್ಧ ಕರ್ಮಫಲ ಬಂದಿತ್ತು, ಅದು ಬಿಟ್ಟಿದ್ದಲ್ಲ. ಆದರೆ ರುದ್ರಯ್ಯನು ಅಜ್ಜನ ಸೇವಾ ಮಾಡಿದ ಫಲದಿಂದ ರೋಗ ನೆಟ್ಟಗಾಗದಿದ್ದರೂ, ಆ ರೋಗದ ಬಾಧೆ ಅವನಿಗಾಗಲಿಲ್ಲ, ಸಾಯುವವರೆಗೂ ಚಿತ್ತ ಶಾಂತಿ ಪಡೆದಿದ್ದ. ಇದೇ ಆತನ ಸೇವಾ ಫಲ.

**ಮಾಡಿದ್ದುಣ್ಣೋ ಮಾರಾಯಾ :**

ಕೋಡಿಕೊಪ್ಪದ ಹತ್ತಿರ ಇರುವ ಒಂದು ಊರು ಕೋಚಲಾಪುರ. ಅಲ್ಲಿ ಒಬ್ಬ ರೈತ ದಿನಾಲೂ ಹೊಲಕ್ಕೆ ಹೋಗುವಾಗ, ದಾರಿಯಲ್ಲಿದ್ದ ಶ್ರೀ ಹುಚ್ಚೀರಪ್ಪಜ್ಜನ

ಎದುರಿಗೆ ತನ್ನ ಬುತ್ತಿಯಲ್ಲಿಯ ಎರಡು ರೊಟ್ಟಿಗಳನ್ನು ಇಟ್ಟು ಹೋಗುತ್ತಿದ್ದ. ಇದು ಅವನ ನಿತ್ಯ ಕ್ರಮ. ಅವನಿಗೆ ಮನೆಯಲ್ಲಿ ಗಯ್ಯಾಳಿ ಹೆಂಡತಿ ಇದ್ದಳು. ಇವಳಿಂದ ಆತ ತಾನು ಅಜ್ಜನಿಗೆ ದಿನಾಲು ರೊಟ್ಟಿಕೊಡುವದು ಗೊತ್ತಾಗಬಾರದೆಂದು ಅತೀ ಎಚ್ಚರಿಕೆ ವಹಿಸಿದ್ದ. ಆದರೂ ಒಂದು ದಿನ ಈ ವಿಷಯ ಅವನ ಹೆಂಡತಿಗೆ ಹೇಗೋ ತಿಳಿಯಿತು.

ಆಗ ಆಕೆ ತನ್ನ ಗಂಡನಿಗೆ, ''ನಿನಗೂ ಕುಚ್ಚಿ ಎರೀ ಬೇಕು ಮತ್ತ ಅಡಿವ್ಯಾಗ ಇರುವ ಆ ಹುಚ್ಚಗೂ ಕುಚ್ಚಿ ಹಾಕಬೇಕು. ಅಂವಗ ಸೆಗಣಿ ತಿಂದು ತಿಂದು ದಡ್ಡ ಬಿದ್ದೈತೆ'' ಎಂದು ಬಹಳ ಜಗಳಾಡಿದಳು. ಆಕೆಯ ಗಂಡ 'ಮಹಾತ್ಮರಿಗೆ ಹೀಗೆಲ್ಲ ಅನ್ನಬಾರದು' ಎಂದು ಬಹಳ ಹೇಳಿದ ಆದರೆ ಅದೆಲ್ಲ 'ಬೋರ್ಗಲ್ಲ ಮೇಲೆ ನೀರು ಸುರಿದಂತೆ' ವ್ಯರ್ಥವಾಯಿತು.

ಮರುದಿನ ಎಂದಿನಂತೆ ಆ ರೈತ ಹೊಲಕ್ಕೆ ಹೋಗುವಾಗ, ಅಜ್ಜನಿಗೆ ಎರಡು ರೊಟ್ಟಿ ಕೊಡಲು ತನ್ನ ಬುತ್ತಿಗಂಟು ಬಿಚ್ಚ ಹತ್ತಿದ. ಅದನ್ನು ನೋಡಿ ಅಜ್ಜ, ''ಅದು ಅದs ಅಗೈತಿ'' ಎಂದು ತನ್ನಷ್ಟಕ್ಕೆ ತಾನೇ ಹೇಳಿಕೊಂಡ. ರೈತ ಇದನ್ನು ಕೇಳಿ, ತನ್ನ ಬುತ್ತಿ ಗಂಟು ಬಿಚ್ಚಿ ನೋಡಿದಾಗ, ಅದೆಲ್ಲ ಬರಿ ಸೆಗಣಿಯೇ ಆಗಿತ್ತು. ಆಗ ರೈತನಿಗೆ ಅನ್ನಕ್ಕೆ ಸೆಗಣಿ ಎಂದು ಹೆಂಡತಿ ಹೇಳಿದ್ದು ನೆನಪಿಗೆ ಬಂದಿತು.

ಮುಂದೆ ಕೆಲವು ದಿನಗಳು ಹೋದ ನಂತರ, ಆ ರೈತನ ಮಗುವಿಗೆ ಯಾವುದೋ ರೋಗ ಪ್ರಾಪ್ತವಾಗಿ ಉಳಿಯುವ ಭರವಸೆ ಕಾಣಲಿಲ್ಲ. ಮಗುವಿಗೆ ಅಜ್ಜನ ಅಂಗಾರ ತಂದು ಹಚ್ಚಲು ಯಾರೋ ಹೇಳಿದರು. ಆಗ ರೈತ ಅಲ್ಲಿಗೆ ಹೋದ. ಆಗ ಅಜ್ಜ ತನ್ನ ಎದುರಿಗೆ ಒಂದು ಸಣ್ಣ ತೆಗ್ಗು ತೋಡಿ, ಅದರಲ್ಲಿ ಒಂದು ಕಡ್ಡಿ ಹಾಕಿ ಮುಚ್ಚಿಬಿಟ್ಟ, ಇದನ್ನು ನೋಡಿದ ರೈತನಿಗೆ ದುಗುಡ ಆಯಿತು. ಬೇಗನೇ ತಿರುಗಿ ಮನೆಗೆ ಬಂದ. ಅಷ್ಟರೊಳಗೆ ಮಗು ಅಸುನೀಗಿತ್ತು.

ಅದಕ್ಕಾಗಿಯೇ ಶ್ರೀ ಬಸವಣ್ಣನವರು ''ಶರಣರೊಡನೆ ಮರೆತು ಸರಸವಾಡಿದರೆ, ಸುಣ್ಣಕಲ್ಲು ಉಡಿಯೊಳಗಿಟ್ಟುಕೊಂಡು ನೀರು ಮುಳುಗಿದಂತೆ'' ಎಂದು ಹೇಳಿದರು, ಸರಸವಾಡುವದೇ ಅಪಾಯಕಾರಿಯಾಗಿರುವಾಗ, ಇನ್ನು ವಿರಸವಾಡುವದು ಎಷ್ಟೊಂದು ಅಪಾಯಕಾರಿ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ.

**ಅಷ್ಟಸಿದ್ಧಿಗಳಿಂದ ಸೇವೆ :**

ಒಂದು ದಿನ ಶ್ರೀ ಹುಚ್ಚೀರಪ್ಪಜ್ಜ ಅಂತರ್ಮುಖಿನಾಗಿದ್ದಾನೆ. ಜನರು ಆತನ ಸುತ್ತಲೂ ನೆರೆದಿದ್ದಾರೆ. ಅಜ್ಜ ಇದ್ದಕ್ಕಿದ್ದಂತೆ ''ಲೇ ಚಿಂತೀ ಮರೆತು ಕುಂತ್ಯಾ ಮಗನೆ'' ಎಂದು ಕೂಗಿದ. ಅಲ್ಲಿ ಕುಳಿತ ಜನರು ತಮ್ಮ ಸುತ್ತಲೂ ಚಿಂತಪ್ಪನನ್ನು ಹುಡುಕಿದರು. ಚಿಂತಪ್ಪ ಕಾಣಲಿಲ್ಲ. ನರೇಗಲ್ಲಿನಲ್ಲಿರುವ ಕಟುಗರ ಚಿಂತಪ್ಪ ಮೊದಲಿನಿಂದಲೂ ಅಜ್ಜನ ನಿಷ್ಠಾವಂತ ಭಕ್ತ, ಅಜ್ಜನ ದಿವ್ಯ ಶಕ್ತಿ ಜನರಿಗೆ ಗೊತ್ತಾಗುವದಕ್ಕಿಂತ ಮೊದಲೇ ಆತನು ಅಜ್ಜನನ್ನು ಸರಿಯಾಗಿ ತಿಳಿದುಕೊಂಡು ಭಯ, ಭಕ್ತಿಯಿಂದ ನಡೆದುಕೊಳ್ಳುತ್ತಿದ್ದ.

ಹೀಗೆ ಅಜ್ಜ ಕೂಗಿದ್ದು ತನ್ನ ಅಂಗಡಿಯಲ್ಲಿ ವ್ಯಾಪಾರದಲ್ಲಿ ಮುಳುಗಿದ ಚಿಂತಪ್ಪನಿಗೆ ಹೃದಯದಲ್ಲಿ ಕೂಗಿದಂತಾಯಿತು. ಅದನ್ನು ಕೇಳಿದ ಚಿಂತಪ್ಪ ಒಮ್ಮೆಲೆ ಬೆಚ್ಚಿ ಬಿದ್ದು ಬಂದೆ! ಯಜ್ಜಾ! ನಂದು ತಪ್ಪಾತು ಎಂದು ಅಂದು ಎದ್ದು ನಿಂತು ಅಜ್ಜನತ್ತ ಕೈಮುಗಿದು ತನ್ನ ಎರಡು ಗಲ್ಲಗಳನ್ನು ಬಡಿದುಕೊಂಡು ಅಲ್ಲಿಯೇ ಇದ್ದ ಗಾಂಜಾವನ್ನು ಒಂದು ತೊಲಿಯಷ್ಟು ತೆಗೆದುಕೊಂಡು ಡೋಣಿ ಕಲ್ಲ ಏರಿಯ ಕಡೆಗೆ ಓಡಿ ಬಂದನು.

ಶ್ರೀ ವೀರಪ್ಪಜ್ಜ ಚಿಂತಪ್ಪನನ್ನು ಕೂಗಿದ್ದು ಡೋಣಿಕಲ್ಲ ಏರಿಯಲ್ಲಿ ಅದನ್ನು ಚಿಂತಪ್ಪ ಕೇಳಿದ್ದು ಹೃದಯದಲ್ಲಿ ಅದೂ ನರೇಗಲ್ಲಿನ ತನ್ನ ಅಂಗಡಿಯಲ್ಲಿ.

ಒಮ್ಮೆ ಶಿಶುನಾಳ ಶರೀಫ ಸಾಹೇಬರಿಗೂ ಹೀಗೇ ಆಯಿತು. ಗುರು ಗೋವಿಂದ ಭಟ್ಟರು ತಮ್ಮ ಅಂತ್ಯಾವಸ್ಥೆಯಲ್ಲಿ ತಮ್ಮ ಪರಮಶಿಷ್ಯ ಶರೀಫರನ್ನು ಕರೆದಾಗ ಶರೀಫರು ಅಲ್ಲಿರಲಿಲ್ಲ. ಆ ಕೂಗು ಎಲ್ಲಿಯೋ ಇದ್ದ ಅವರಿಗೆ ಕೇಳಿಸಿತು. ಶ್ರೀದೇವಿಪುರಾಣದಲ್ಲಿ ಯಥಾಪಿಂಡಾಂಡ ತಥಾಬ್ರಹ್ಮಾಂಡ ಎಂದು ಬರುವದು. ಅಂದರೆ, ಪಿಂಡಾಂಡದಲ್ಲಿರುವದೇ ಬ್ರಹ್ಮಾಂಡದಲ್ಲಿ ಇರುತ್ತದೆ. ಇದನ್ನು ಚಿದಾನಂದ ಅವಧೂತರೇ ಹೇಳಿದ್ದಾರೆ.

ಜಗತ್ತೆಲ್ಲ ಒಂದೇ ಆತ್ಮತತ್ವದಿಂದ ಕೂಡಿದೆ. ಯಾರೂ ವಿಶ್ವಾತ್ಮ ಭಾವನೆವುಳ್ಳವರೋ ಅವರಿಗೆ ಈ ಅನುಭವವಾಗುತ್ತದೆ.

ಚಿಂತಪ್ಪನು ಅಜ್ಜನಿದ್ದಲ್ಲಿಗೆ ಬಂದವನೇ ಆತನ ಪಾದಕ್ಕೆ ಎರಗಿ ಅಲ್ಲಿಯೇ ಕುಳಿತು ಅಜ್ಜನ ಹತ್ತಿರ ಇದ್ದ ಮಗಿಯೊಳಗಿನ ನೀರನ್ನು ತೆಗೆದುಕೊಂಡು ತನ್ನಲ್ಲಿದ್ದ ಗಾಂಜಾವನ್ನು ಸರಿಯಾಗಿ ಮಿಜ್ಜಿ ಅದನ್ನು ಅಲ್ಲಿಯೇ ಬಿದ್ದಿದ್ದ ಗೇಣುದ್ದದ ಚಿಲುಮೆಯಲ್ಲಿ ತುಂಬಿ ಅದನ್ನು ಅಜ್ಜನಿಗೆ ಕೊಟ್ಟು ತನ್ನ ಹತ್ತಿರವಿದ್ದ ಬೆಂಕಿಪೊಟ್ಟಣದಿಂದ ಕಡ್ಡಿ ಕೆರೆದು ಹಚ್ಚಹತ್ತಿದನು. ಕಡ್ಡಿ ಪಟ್ಟಣ ಖಾಲಿ ಆಯಿತು. ಗಾಳಿಯ ಮೂಲಕ ಅದು ಹತ್ತಲಿಲ್ಲ. ಆಗ ಚಿಂತಪ್ಪನು ಜನರಲ್ಲಿ ಕಡ್ಡಿಪೆಟ್ಟಿಗೆ ಕೇಳಿದನು. ಯಾರಲ್ಲಿಯೂ ಇರಲಿಲ್ಲ.

ಆಗ ಸರ್ವಕರ್ತೃತ್ವ ಶಕ್ತಿಶಾಲಿಯಾದ ಅಜ್ಜ ಅಲ್ಲಿಯೇ ಬಿದ್ದಿದ್ದ ಒಣ ಕುಳ್ಳನ್ನು ತೆಗೆದುಕೊಂಡು ಚಿಲುಮೆಯ ಮೇಲೆ ಇಟ್ಟು ಶಂಭೋ ಹರ ಹರ ಮಹಾದೇವ ಎಂದು ಒಂದು ಜೂರಿ ಎಳೆದು ಬಿಟ್ಟ. ಏನಾಶ್ಚರ್ಯ! ಚಿಲುಮೆಯ ಮೇಲೆ ಗೇಣೆತ್ತರ ಉರಿ ಕಾಣಿಸಿಕೊಂಡಿತು. ಇದನ್ನು ನೋಡಿದ ಚಿಂತಪ್ಪನೇ ಮೊದಲಾದ ಅಲ್ಲಿ ಕುಳಿತವರೆಲ್ಲರೂ ಒಬ್ಬರ ಮುಖ ಒಬ್ಬರು ಸೋಜಿಗದಿಂದ ನೋಡಹತ್ತಿದರು.

ಶ್ರೀ ಹುಚ್ಚೀರಪ್ಪಜ್ಜನಿಗೆ ಆಣೆಮಾಡಿ ಅಷ್ಟಸಿದ್ಧಿಗಳು ಕೈಕಟ್ಟಿಕೊಂಡು ಆತನ ಸೇವೆಗೆ ಸಿದ್ಧವಾಗಿನಿಂತಿದ್ದವು. ಅವುಗಳಲ್ಲಿ ಪ್ರಾಪ್ತಿಯೂ ಒಂದು. ಸಿದ್ಧಪುರುಷರಿಗೆ ಯಾವುದರ ಅಗತ್ಯವಾಗುವದೋ ಅದು ಅಲ್ಲಿ ತಾನೇ ಸಿದ್ಧಿಸುವದು. ಇದು ಪ್ರಾಪ್ತಿಯ ಮಹಿಮೆ.

### ನ್ಯಾಯದಾನ :

ಗಜೇಂದ್ರಗಡದ ಒಬ್ಬ ಬ್ರಾಹ್ಮಣ ಹೆಣ್ಣು ಮಗಳು ತನ್ನ ಗಂಡನ ಅಕಾಲಿಕ ಮರಣ ಹೊಂದಿದ ಆಘಾತವನ್ನು ತಾಳಲಾರದೇ ತವರು ಮನೆಯಾದ ನರೇಗಲ್ಲಿನಲ್ಲಿದ್ದಳು. ಈಕೆಗೆ ಯಾವ ಮಕ್ಕಳೂ ಆಗಿರಲಿಲ್ಲ. ಗಂಡನ ತಮ್ಮ ಇಂತಹ ಪ್ರಸಂಗ ನೋಡಿ ತನ್ನ ಸ್ವಾರ್ಥ ಈಡೇರಿಕೆಗಾಗಿ ಇವಳಿಗೆ ಈಕೆಯ ಗಂಡನ ಪಾಲು ಕೊಡಲು ನಿರಾಕರಿಸಿದನು. ಆಗ ಗುರುಹಿರಿಯರಿಂದ ಹೇಳಿಸಿದರೂ ಪ್ರಯೋಜನವಾಗದೇ ಕೊನೆಗೆ ಈಕೆಯು ನ್ಯಾಯಕ್ಕಾಗಿ ಕೋರ್ಟಿಗೆ ದಾವಾ ಮಾಡಿದಳು.

ತನ್ನ ನ್ಯಾಯ ಏನಾಗುವದೋ ಎಂದು ಚಿಂತಿಸುತ್ತ ಈ ವಿಷಯದ ಪರಿಹಾರಕ್ಕಾಗಿ ಈ ಈರಪ್ಪಜ್ಜನನ್ನಾದರೂ ಕೇಳಿ ಬರಬೇಕೆಂದು ಮನಸ್ಸು ಮಾಡಿದಳು. ಒಂದು ದಿನ ಮಡಿಯಿಂದ ಅಡಿಗೆಮಾಡಿಕೊಂಡು ಜೊತೆಗೆ ಒಬ್ಬ ಮಹಿಳೆಯನ್ನು ಕರೆದುಕೊಂಡು ಇಬ್ಬರು ಆತನಿದ್ದಲ್ಲಿಗೆ ಹೋದರು. ಆತನ ಎದುರಿಗೆ ತಾವು ತಂದುದನ್ನು ಇಟ್ಟು, ನಮಸ್ಕರಿಸಿ ಸ್ವಲ್ಪ ಅಂತರದ ದೂರದಲ್ಲಿ ಕುಳಿತರು.

ಆಗ ಎಲ್ಲ ಬಲ್ಲ ಹುಚ್ಚೀರಪ್ಪಜ್ಜ ತನ್ನೆದುರಿಗೆ ಕೈಯಿಂದಲೇ ಎರಡು ಮಣ್ಣಿನ ಗುಂಪಿಗಳನ್ನು ಮಾಡಿ ಅವುಗಳ ತಲೆಯ ಮೇಲೆ ಅಲ್ಲಿಯೇ ಬಿದ್ದಿದ್ದ ಬೇವಿನ ಒಣಗಿದ ಕಡ್ಡಿಗಳನ್ನು ಪ್ರತಿಯೊಂದಕ್ಕೂ ಚುಚ್ಚಿ ಮೌನನಾದನು. ಮತ್ತೆ ನಗಹತ್ತಿದನು. ಇದರ ಅರ್ಥ ಹೆಣ್ಣು ಮಕ್ಕಳಿಗೆ ಆಗಲಿಲ್ಲ. ಅಷ್ಟರಲ್ಲಿ ತನ್ನ ಎರಡೂ ಗುಂಪುಗಳ ಮೇಲೆ ಚುಚ್ಚಿದ ಕಡ್ಡಿಗಳನ್ನು ಬಾಗಿಸುತ್ತಾ ಒಂದಕ್ಕೊಂದು ತಳಕು ಬೀಳುವ ಹಾಗೆ ಮಾಡಿದ. ಹೀಗೆಲ್ಲ ಮಾಡಿದ್ದು ಅವರಿಗೆ ಏನೆಂದು ಹೊಳೆಯಲಿಲ್ಲ. ಅವರು ಹಾಗೆ ಮನೆಗೆ ಹಿಂದಿರುಗಿದರು. ಮುಂದೆ ಒಂದು ವಾರದೊಳಗೆ ಆಕೆಯ ಮೈದುನ ಬಂದು ಆಕೆಯೊಡನೆ ರಾಜಿಯಾಗಿ ನ್ಯಾಯ ಮುಗಿಸಿಕೊಂಡು ಆಕೆಯ ಗಂಡನ ಪಾಲನ್ನು ಆಕೆಗೆ ಕೊಟ್ಟುಬಿಟ್ಟ. ಆಗ ಆಕೆಗೆ ಅನಾಥೋದೇವ ರಕ್ಷಕಃ ಎಂಬಂತೆ ಅಜ್ಜ ಅನಾಥರಕ್ಷಕ ಎಂಬುದು ಸತ್ಯವಾದುದನ್ನು ನೋಡಿ ಮಹಾ ಸಂತೋಷವಾಯಿತು.

### ಸಂತಾನ ಪ್ರಾಪ್ತಿ :

ಕೋಡಿಕೊಪ್ಪದ ಹಿರೇಮಠದ ಮಲ್ಲೇಶಯ್ಯನಿಗೆ ಕೇವಲ ಮೂರು ಹೆಣ್ಣು ಮಕ್ಕಳಿದ್ದರು. ಗಂಡು ಮಕ್ಕಳಿಲ್ಲದೆ ಅವರ ಇಚ್ಛೇ ಈಡೇರಿದ್ದಿಲ್ಲ. ಅವರೀರ್ವರೂ ದಂಪತಿಗಳು ಅಜ್ಜನ ಪಾದಗಳನ್ನು ನಂಬಿ ಹರಕೆ ಹೊತ್ತರು.

ಅವರ ಹೆಂಡತಿ ಬಹಳ ಭಕ್ತಿವಂತಳು. ನಿತ್ಯ ಸ್ನಾನಮಾಡಿ ಮಡಿಯಿಂದ ಬಿಸಿರೊಟ್ಟಿಮಾಡಿ ಮೊದಲಿಗೆ ಎರಡು ರೊಟ್ಟಿಗಳಿಗೆ ಪಲ್ಯಹಚ್ಚಿ ಅದನ್ನು ಅಜ್ಜನಿದ್ದಲ್ಲಿಗೆ ತೆಗೆದುಕೊಂಡು ಹೋಗಿ ತಾಯಿ ತನ್ನ ಮಗುವಿಗೆ ತಿನ್ನಿಸುವಂತೆ ತಾನೇ ಅಜ್ಜನಿಗೆ ಉಣಿಸಿಬರುತ್ತಿದ್ದಳು. ಈ ಸೇವೆಯ ಫಲವಾಗಿ ಅವರಿಗೆ ಒಂದು ವರ್ಷ ತುಂಬುವದರೊಳಗಾಗಿ ಒಂದು ಗಂಡು ಮಗು ಜನಿಸಿತು. 'ಶಿವಯೋಗೇನ ಸಂತೃಪ್ತಿ ತಪ್ತೋ ಭವತಿ ಶಂಕರಃ' ಎಂಬ ಶಾಸ್ತ್ರ ಸುಳ್ಳಾದೀತೆ ?

ಮೊಮ್ಮಗನನ್ನು ಕರುಣಿಸಿದ್ದು

ಗದಗ ಬೆಟಗೇರಿಯಲ್ಲಿ ಸಬ್‌ಜಾನ್ ಎಂಬ ಮುಸಲ್ಮಾನ ಪಾತರದವಳಿದ್ದಳು. ಆಕೆಗೆ ಒಬ್ಬಳೇ ಮಗಳು ಮತ್ತೆ ಮಕ್ಕಳೇಆಗಲಿಲ್ಲ. ಅನೇಕ ದೇವರಿಗೆ ನಡೆದುಕೊಂಡರೂ ಏನೂ ಪ್ರಯೋಜನವಾಗಲಿಲ್ಲ.

ಶ್ರೀ ಹುಚ್ಚೀರಪ್ಪಜ್ಜನ ಮಹಿಮೆಯನ್ನು ಕೇಳಿ ಆಕೆಯು ಅಜ್ಜನಿಗೆ ವರ್ಷಕ್ಕೊಮ್ಮೆ ಬಂದು ಒಂದು ತಿಂಗಳವರೆಗೂ ಅನ್ನಸಂತರ್ಪಣೆಮಾಡಿ ಹೋಗುತ್ತಿದ್ದಳು. ಒಮ್ಮೆ ಆಕೆ ಬಂದು ಅನ್ನಸಂತರ್ಪಣೆ ಮಾಡಿ ಹೋಗುವಾಗ ಪದ್ಧತಿಯಂತೆ ಅಜ್ಜನಿಗೆ ಕೈಮುಗಿದು ಅಡ್ಡಬಿದ್ದು ಎದ್ದು ಕುಳಿತಳು. ಆಗ ಶ್ರೀ ವೀರಪ್ಪಜ್ಜನು ''ಲೇ ಈರಾ! ಇದ್ದದ್ದು ಒಂದೇ ಆಪ, ಇಲ್ಲದ್ದು ಎಲ್ಲಿಂದ ಬರಬೇಕಪ್ಪ ? ಆ ಒಂದರೊಳಗ ಬಾಳಪ ! ಬಾಳಿಗೆ ಒಂದೇ ಗೊನಿ ಅಲ್ಲೇನಪ ?'' ಎಂದು ಹೇಳಿದನು. ಇದನ್ನು ಕೇಳಿದ ಪಾತರದವಳು ಸಂತೋಷ ಪಟ್ಟು ಗದುಗಿಗೆ ಹೋದಳು. ಒಂದು ವರ್ಷ ತುಂಬುವದರೊಳಗೆ ಆಕೆಯ ಮಗಳಿಗೆ ಗಂಡು ಮಗು ಜನಿಸಿತು. ಅದಕ್ಕೆ 'ಹುಚ್ಚವೀರ ಮಹಮ್ಮೂದ' ಎಂದು ಹೆಸರಿಟ್ಟಳು.

ಅಜ್ಜ ಹೇಳಿದಂತೆ ತನಗಾಗದ್ದಿರೂ ತನ್ನ ಮಗಳಿಗೆ ಗಂಡು ಸಂತಾನವಾಯಿತಲ್ಲ ಇದೇ ಆಕೆಗೆ ಸಂತೋಷ. ಈಗಲೂ ಆ ಮುಸಲ್ಮಾನ ಮನೆತನದವರು. ಅಜ್ಜನಿಗೆ ಶಿಷ್ಯರಾಗಿ ನಡೆದುಕೊಳ್ಳುತ್ತಿರುವರು.

ನಿಜವಾದ ಸ್ವಾತಿ ಮಳೆಯ ಭವಿಷ್ಯ :

ಈ ಹಿಂದೆ ವಿಶೇಷ ಮಳೆಯಾಗಿ ಹಳ್ಳಬಂದು ಹಿರೇಕೆರೆಗೆ ಅದು ಕೂಡುವ ಜಾಗೆಯಲ್ಲಿ ಶ್ರೀ ವೀರಪ್ಪಜ್ಜ ಸಂಪೂರ್ಣ ಹುಗಿದು ಹೋಗಿದ್ದು ನೆನಪಿರಬಹುದು. ''ಆಗ ಹುಗಿದುಹೋಗಿದ್ದ ವೀರಪ್ಪಜ್ಜನನ್ನು ಹೊರತಂದು ಕುಳ್ಳಿರಿಸಿದಾಗ ಆತನು ಸಮಾಧಿಯಿಂದ ಎಚ್ಚೆತ್ತು ''ಇನ್ನೂ ಐತಿ ಬರತೈತಿ ಉಪವಾಸ ಹನ್ನೊಂದು ದಿನಗಳ ಕೆಡುವತೈತಿ ಬಾಳದೂರ ಐತಿ'' ಎಂದು ಅಂದದ್ದು ವಾಚಕರು ಸ್ಮರಿಸಬೇಕು.

ಆಗ ನುಡಿದ ಭವಿಷ್ಯ ಸತ್ಯವಾಗುವ ಕಾಲ ಪ್ರಾಪ್ತವಾಯಿತು. ಕ್ರಿ.ಶ. ೧೯೭೬ನೇ ಇಸ್ವಿ ನಳನಾಮ ಸಂವತ್ಸರ ಶ್ರಾವಣ ಮಾಸದಲ್ಲಿ ಜಲಪ್ರಳಯವೆಂಬಂತೆ ಸ್ವಾತಿ ಮಳೆ ಬಂತು 'ಅಖಂಡ ಹನ್ನೊಂದು ದಿನಗಳ ಕಾಲ ಮುಗಿಲು ಕಪ್ಪು ಮುಸುಗಿದ್ದು, ಸೂರ್ಯನ ಮುಖವೇ ಕಾಣಲಿಲ್ಲ. ಒಂದೇ ಸವನೇ ಧಾರಾಕಾರ ಮಳೆ ಬಿದ್ದಿತು. ಹಳ್ಳ ಕೊಳ್ಳಗಳೆಲ್ಲ ಮೈತುಂಬಿ ಹರಿಯಹತ್ತಿದವು. ಹೊಳೆಗಳು ಪಾತ್ರ ತುಂಬಿ ಗಾತ್ರ ಹಿಗ್ಗಿ ಹರಿಯಹತ್ತಿದವು. ಊರಿನಲ್ಲಿ ಯಾವಮನೆಯೂ ಸೋರದೇ ಉಳಿಯಲಿಲ್ಲ. ಮಣ್ಣಿನ ಮನೆಗಳು ಬಿದ್ದು ಅಲ್ಲಿದ್ದ ಜನ ಬೀದಿಪಾಲಾದರು.

ಯಾರ ಮನೆಯಲ್ಲಿಯೂ ಅಡಿಗೆ ಮಾಡಿಕೊಳ್ಳಲು ಸಾಧ್ಯವಾಗದೇ ಹೋಗಿರುವಾಗ ಅಶನಕ್ಕೆ ಗಂಡಾಂತರ ಪ್ರಾಪ್ತವಾಯಿತು. ದನಕರುಗಳನ್ನಂತೂ

ಕೇಳುವವರಾರು? ಬಹಳ ದನಗಳು ಅಸುದೊರೆದು ನಾಶವಾದವು. ಹಕ್ಕಿ ಪಕ್ಕಿಗಳಂತೂ ಲೆಕ್ಕವಿಲ್ಲದಷ್ಟು ಗಿಡಮರಗಳಿಂದ ಬಿದ್ದು ನಶಿಸಿ ಹೋದವು.

ಹಡೆದ ಬಾಣಂತಿಯರ, ಚಿಕ್ಕ ಚಿಕ್ಕ ಕೂಸುಗಳನ್ನಂತೂ ದೇವರೇ ಬಲ್ಲ. ಎಷ್ಟೋ ಜನರು ತಮ್ಮ ಮನೆ ತೊಲಿ, ಕಂಬ, ಜಂತಿ ಹಿರಿದು ಅಡಿಗೆ ಮಾಡಿಕೊಳ್ಳಬೇಕಾಯಿತು. ಕೊಯ್ಲಿಗೆ ಬಂದ ಜೋಳದ ತೆನೆಗಳಲ್ಲಿ ಮೊಳಕೆ ಹಾಯ್ದವು. ಇಷ್ಟೇ ಅಲ್ಲ ಕಾಳಿನ ಹಗೆಯಲ್ಲಿ ನೀರು ಹೊಕ್ಕು ಅದರಲ್ಲಿಯ ಕಾಳುಗಳು ಕೆಟ್ಟು ದುರ್ನಾತ ಹಿಡಿಸಿದವು. ಈ ಮಳೆಗೆ ಹುಚ್ಚ ಸ್ವಾತಿ ಮಳೆ ಎಂದು ಹೆಸರು ಬಂದಿತಲ್ಲದೇ ನದಿಗಳೂ ಕೂಡಾ ಹುಚ್ಚು ಹೊಳೆಯಾಗಿ ಹರಿದವು. ಇದನ್ನೆಲ್ಲ ಕಂಡಂತೆ ಜನರಿಗೆ ಹುಚ್ಚು ಹಿಡಿದಿದ್ದರೆ ಆಶ್ಚರ್ಯವಿಲ್ಲ.

ಇಂಥದರಲ್ಲಿ ನಮ್ಮ ಕಥಾನಾಯಕ ಶ್ರೀ ವೀರಪ್ಪಜ್ಜ ಡೋಣಿಕಲ್ಲ ಏರಿ ಬಿಟ್ಟ ಬಯಲಿನಲ್ಲಿ ಹಾಗೆಯೇ ಕುಳಿತಿದ್ದನಲ್ಲದೆ ಎಷ್ಟೂ ಸರಿದಿರಲಿಲ್ಲ. ಆತನಿಗೆ ಬಾಹ್ಯ ಪ್ರಜ್ಞೆ ಇದ್ದರಲ್ಲವೇ ಸರಿಯುವದು ? ಸುಖ ದುಃಖಗಳು ಶರೀರಕ್ಕೆ ತಿಳಿಯುವದಿಲ್ಲ. ಏಕೆಂದರೆ ಅದು ಜಡ. ಶರೀರದೊಡನೆ ಮನಸ್ಸು ಸಹಕೃತವಾದರೆ ಮಾತ್ರ ಸುಖದುಃಖಗಳ ಅನುಭವವಾಗುವದು. ಮನಸ್ಸನ್ನು ಶರೀರದಿಂದ ಬಿಡುಗಡೆ ಮಾಡಿಕೊಂಡ ಯೋಗಿಗಳಿಗೆ ಸುಖವೂ ಇಲ್ಲ, ದುಃಖವೂ ಇಲ್ಲ.

ಯಾವಾಗ ಮಳೆ ಪ್ರಾರಂಭವಾಯಿತೋ ಆಗ್ಗೆ ಶ್ರೀ ಹುಚ್ಚೀರಪ್ಪ ಸಮಾಧಿಸ್ಥನಾಗಿ ಬಿಟ್ಟ. ಈ ಸಮಾಧಿಯನ್ನು ಶ್ರೀ ಹುಚ್ಚೀರಪ್ಪಜ್ಜ ಸಾಧನೆಯಿಂದ ಹೊಂದಿದ್ದಲ್ಲ. ಆತನು ಬಯಸಿದಾಗ ಅದು ತನ್ನಿಂದ ತಾನೇ ಲೋಹಚುಂಬಕದಂತೆ ಅಂದರೆ ಚುಂಬಕ ಲೋಹವನ್ನು ಎಳೆದುಕೊಳ್ಳುವಂತೆ ಸಹಜವಾಗಿ ಪ್ರಾಪ್ತವಾಗುತ್ತಿತ್ತು.

ಏಕೆಂದರೆ, ಅಷ್ಟಾಂಗ ಯೋಗದಲ್ಲಿಯ ಯಮ–ನಿಯಮ–ಆಸನ–ಪ್ರಾಣಾಯಾಮ–ಪ್ರತ್ಯಾಹಾರ ಈ ಐದು ಬಹಿರಂಗ ಸಾಧನೆಗಳು ಯೋಗಸಿದ್ಧನಾದ ಶ್ರೀ ವೀರಪ್ಪಜ್ಜನಿಗೆ ಇವುಗಳ ಸಾಧನೆಯ ಅವಶ್ಯಕತೆ ಇರಲಿಲ್ಲ. ಧ್ಯಾನ, ಧಾರಣೆ ಇವು ಯೋಗದ ಆಂತರಿಕ ಸಾಧನೆಗಳು.

ಹೃದಯ ಪುಂಢರೀಕ ಇಲ್ಲವೆ ನಾಶಿಕಾಗ್ರದಲ್ಲಿ ಚಿತ್ತವನ್ನು ವೃತ್ತಿ ರೂಪದಿಂದ ಬಂಧಿಸಿದರೆ ಅದೇ ಧಾರಣೆಯಾಗುವುದು. ಯಾವ ವಿಧವಾದ ಪ್ರತ್ಯಯಾಂತರ ವಿಲ್ಲದೇ ಧ್ಯೇಯವನ್ನು ವಸ್ತುವಿನಲ್ಲಿ ಅವಲಂಬಿಸಿರುವ ಪ್ರತ್ಯಯವು ಅವಿಚ್ಛಿನ್ನವಾಗಿ ಹರಿಯುತ್ತಿದ್ದರೆ, ಅದು ಧ್ಯಾನವಾಗುವದು. ಇಂತಹ ನಿರಂತರ ಧ್ಯಾನ ಧ್ಯೇಯ ವಸ್ತುವಿನೊಂದಿಗೆ ಒಂದಾಗಿ ತನ್ನ ಸ್ವರೂಪವನ್ನು ಕಳೆದುಕೊಂಡರೆ ಅದೇ ಸಮಾಧಿ ಎನಿಸುವದು ಎಂದು ಯೋಗಶಾಸ್ತ್ರ ವಿವರಿಸುತ್ತದೆ.

**ಭಾವಚಿತ್ರ, ವಿಫಲ :**

ದಿನೇ ದಿನೇ ಶ್ರೀ ಹಠಯೋಗಿ ವೀರಪ್ಪಜ್ಜನವರ ಹೆಸರು ದಿವ್ಯ ಪುರುಷ ಎಂದು ಜನಮನದಲ್ಲಿ ಪ್ರಚಾರವಾಯಿತು. ಇಂತಹ ವ್ಯಕ್ತಿಯ ಒಂದು ಭಾವಚಿತ್ರ ಇದ್ದರೆ,

ಮುಂದಿನ ಪೀಳಿಗೆಗೆ ಹಾಗೂ ಇಂದಿನವರಿಗೂ ಆರಾಧನೆ ಅನುಕೂಲವಾಗುವದು ಎಂದು ನರೇಗಲ್ಲಿನ ಫೋಟೋಗ್ರಾಫರ ಶ್ರೀ ವೀರುಪಾಕ್ಷಪ್ಪ ಬಡಿಗೇರ ಹಾಗೂ ಶ್ರೀ ಚಿಂತಪ್ಪ ಕೂಡಿ ಚರ್ಚಿಸಿ ಒಂದು ನಿರ್ಧಾರಕ್ಕೆ ಬಂದರು. ಆದರೆ, ಅವರು ಎಣಿಸಿದಂತೆ ಆತನ ಭಾವಚಿತ್ರ ತೆಗೆಯುವದು ಅಷ್ಟು ಸುಲಭದ ಕಾರ್ಯವಾಗಿರಲಿಲ್ಲ ಏಕೆಂದರೆ, ಶ್ರೀ ಅಜ್ಜನು ನೆರಳು–ನೀರು–ಅನ್ನ–ಭೂಷಣ–ವಸ್ತ್ರ ಇದಾವುದನ್ನು ಬಯಸದೇ ಸರ್ವಸಂಗಪರಿತ್ಯಾಗಿ ಎಂಬುದು ಸರ್ವ ವಿದಿತವಾಗಿತ್ತು

ಹೀಗಿರುವ ವ್ಯಕ್ತಿಯ ಭಾವಚಿತ್ರ ಹೇಗಾದರೂ ತೆಗೆಯಲು ಒಂದು ಯೋಜನೆ ಹಾಕಿದರು. ಅದೇನೆಂದರೆ, ಪ್ರತಿದಿನ ತನ್ನ ನಿತ್ಯದ ಕಾರ್ಯಕ್ರಮದಲ್ಲಿ ಕಟುಗರ ಚಿಂತಪ್ಪನ ಅಂಗಡಿಗೆ ಬಂದಾಗ ಗಾಂಜಾ ಸೇದುವಾಗ ಮರೆಯಲ್ಲಿ ನಿಂತು ಫೋಟೊ ತೆಗೆಯುವಂತೆ ನಿರ್ಧರಿಸಿದರು.

ಒಂದು ದಿನ ಇದರ ಬಗ್ಗೆ ಚಿಂತಪ್ಪ ಎಲ್ಲವನ್ನು ಪೂರ್ವಯೋಜನೆ ಸಿದ್ಧತೆ ಮಾಡಿದ್ದನು. ಶ್ರೀ ಅಜ್ಜನು ಬಂದ ತಕ್ಷಣ ಆತನಿಗೆ ತನ್ನ ಅಂಗಡಿ ಮುಂದಿರುವ ಕಟ್ಟೆಯ ಮೇಲೆ ಕಂಬಳಿ ಹಾಸಿ ಕೂಡ್ರಿಸಿದನು. ಅದರ ಮೇಲೆ ಕುಳಿತ ಅಜ್ಜನ ಪರ್ಯಾಣದಲ್ಲಿರುವದನ್ನು ತಿನ್ನುತ್ತ ಅಂಗಿಗೆ ಒರೆಸುತ್ತ ಇದ್ದನು. ಅಷ್ಟರಲ್ಲಿ ಸಮೀಪದಲ್ಲಿಯೇ ಇನ್ನೊಬ್ಬರ ಮನೆಯ ಒಳಗಿನ ಭಾಗದಲ್ಲಿ ಕ್ಯಾಮರಾ ತಯಾರ ಮಾಡಿಕೊಂಡು ಶ್ರೀ ವೀರುಪಾಕ್ಷಪ್ಪ ಬಡಿಗೇರ ನಿಂತಿದ್ದ.

ಆಗ ಚಿಂತಪ್ಪ ಆತನಿಗೆ ಗಾಂಜಾ ಮಿದ್ದಿ ಚಿಲುಮೆಯಲ್ಲಿ ಹಾಕಿ ಆತನ ಕೈಗೆ ಇತ್ತ ಮತ್ತು ತಾನು ಕಡ್ಡಿ ಪೆಟ್ಟಿಗೆ ಹುಡುಕುವ ನೆಪದಿಂದ ಅತ್ತಿತ್ತ ಗೋಣು ಅಲ್ಲಾಡಿಸುತ್ತ ಏನೋ ಸೂನ್ನೆಮಾಡಿದ ಅಷ್ಟರಲ್ಲಿ ಎಲ್ಲ ಸಿದ್ಧತೆಯಲ್ಲಿರುವ ಫೋಟೋಗ್ರಾಫರ ತನ್ನ ಗುರಿ ನೋಡಿ ಗುಂಡಿ ಒತ್ತಿದ ಸಪ್ಪು ಬಂದ ಕಡೆಗೆ ಶ್ರೀ ಹುಚ್ಚೀರಪ್ಪಜ್ಜನ ಲಕ್ಷ್ಯ ಹೋಯಿತು. ತಕ್ಷಣವೇ ಶ್ರೀ ಅಜ್ಜ ''ಸಿಕ್ಕಲೇ ಈರಾ ! ಸಿಕ್ಕೆಲೆ ಈರಾ ಸಿಗಬಾರದಿತ್ತು, ಸಿಕ್ಕಲೇ ಈರಾ'' ಎಂದು ಚೀರುತ್ತಾ ಧಿಢೀರನೆ ಕಟ್ಟೆಯಿಂದ ಇಳಿದು ಭರಭರನೇ ಸಮೀಪದಲ್ಲಿಯೇ ಇರುವ ಹರಿಜನ ಕೇರಿಯೊಳಗೆ ಹೋದನು.

ಇತ್ತ ಭಾವಚಿತ್ರ ತೆಗೆದ ವೀರೂಪಾಕ್ಷಪ್ಪ ಫೋಟೋ ತೆಗೆದೆ ಎಂಬ ಆನಂದಾತಿರೇಕದಲ್ಲಿ ಮೆರೆದು ಮುಂದೆ ಎರಡು ಮೂರು ದಿವಸಗಳಲ್ಲಿ ಆ ಫಿಲ್ಮನ್ನು ತೊಳೆದು ನೋಡಲು ಅತ್ಯಂತ ವಿಸ್ಮಯ ಅವನಿಗೆ ಕಾದಿತ್ತು. ಅದೇನೆಂದರೆ ''ಭಾವ ಚಿತ್ರವೇ ಮೂಡಿರಲಿಲ್ಲ'' ಇದನ್ನು ಕಂಡು ಈ ವಿದ್ಯೆಯಲ್ಲಿ ಬಹಳ ವರ್ಷಗಳಿಂದ ನುರಿತವನಾದ ಬಡಿಗೇರನಿಗೆ ದಿಗ್ಭ್ರಮೆಯಾಯಿತು.

ಈ ಸುದ್ದಿಯನ್ನು ಚಿಂತಪ್ಪನಿಗೂ ಅಂದೇ ತಿಳಿಸಿದ ಅದಕ್ಕೆ ಇದು ಆಶ್ಚರ್ಯವೂ ಗಾಭರಿಯನ್ನು ಉಂಟುಮಾಡುವ ಘಟನೆಯೂ ಎಂದು ಅವರಿಗೆ ಅನಿಸದೇ ಇರಲಿಲ್ಲ, ಏಕೆಂದರೆ, ಆತನ ಇಚ್ಛೆಗೆ ವಿರುದ್ಧ ಹೋದವರಿಗೆ ಯಾವಗತಿ ಆಗಿದೆ ಎಂದು ಜಗಜ್ಜಾಹೀರವಾಗಿದ್ದು ಇವರಿಗೆ ತಲೆಯಲ್ಲಿ ಸುಳಿಯಹತ್ತಿತ್ತು

ಅದರಂತೆಯೆ ಭಾವಚಿತ್ರ ನಿರ್ಮೋಹಿಯಾದ ಶ್ರೀ ವೀರಪ್ಪಜ್ಜನಿಗೆ ಒತ್ತಾಯದಿಂದ ಮನಸ್ಸಿನ ವಿರುದ್ಧವಾದುದ್ದನ್ನು ಈ ಇಬ್ಬರೂ ಕೆಲವೇ ದಿನಗಳಲ್ಲಿ ಅನನ್ಯಗತಿಕವಾಗಿ ಮರಣವನ್ನಪ್ಪಿದರು. ಹಾಗೂ ಅಜ್ಜನ ಶಾಪ ಮನೆತನಕ್ಕೂ ತಗುಲಿತೆಂದು ಜನ ಅಂದುಕೊಳ್ಳುವದು ಇಂದಿನ ಪೀಳಿಗೆ ಸ್ಮರಿಸುತ್ತದೆ.

**ಪಾತರದವಳಿಗೆ ಭಾಗ್ಯ ಕರುಣಿಸಿದ್ದು :**

ಇಲಕಲ್ಲದ ಒಬ್ಬ ಮುಸಲ್ಮಾನ ಅಮೀರಭಿ ಎನ್ನುವ ಪಾತರದವಳು ನರೇಗಲ್ಲಿಗೆ ಬಂದು ವಾಸಿಸುತ್ತಿದ್ದಳು. ಇಲ್ಲಿ ನಂಬಿ ಬಂದ ಅವಳಿಗೆ ನಿರಾಶೆ ಕಾದಿತ್ತು. ಬಡತನ ಬೆಂಬಿಡದೆ ಒಪ್ಪತ್ತಿನ ಊಟಕ್ಕೆ ಆಕೆಗೆ ಅಭಾವವಾಯ್ತು ಇನ್ನು ಆಕೆ ಗದುಗಿನ ಅವಳಿ ನಗರವಾದ ಬೆಟಗೇರಿಗೆ ಹೋಗಬೇಕೆಂದು ವಿಚಾರಮಾಡಿದಳು. ಏಕೆಂದರೆ ಅಲ್ಲಿ ಆಕೆಯ ಬಂಧುಗಳಿದ್ದರು. ಆದರೆ ಆಕೆಯದು ಶ್ರೀ ಹುಚ್ಚೀರಪ್ಪಜ್ಜನಲ್ಲಿ ಅನನ್ಯ ದೈವಭಕ್ತಿ ಆತನಲ್ಲಿಗೆ ಹೋಗಿ ಆತನ ಅಭಿಪ್ರಾಯ ತಿಳಿಯಬೇಕೆಂದು ಆತನ ಪ್ರೀತಿಯ ವಸ್ತುವಾದ ಗಾಂಜಾ ಚೀಟು, ಬಾಳೆಹಣ್ಣು ತೆಗೆದುಕೊಂಡು ಮಡಿಯಿಂದ ಡೋಣಿಕಲ್ಲ ಏರಿಗೆ ಹೋದಳು. ಅಜ್ಜ ಎಂದಿನಂತೆ ತನ್ನ ತನ್ಮಯಾನಂದದಲ್ಲಿ ಕುಳಿತಿದ್ದಾನೆ. ಆತನ ಸುತ್ತುವರಿದು ಅನೇಕ ಭಕ್ತರು ನೆರೆದಿದ್ದಾರೆ. ಆತ ತನ್ನಷ್ಟಕ್ಕೆ ತಾನು ''ಏನ ವಂಕಿ ! ಏನ ಸರಿಗಿ ! ಏನ ಮಹಡಿ ಮನಿ ! ಏನ ಕಿಲಾರಿ ಎತ್ತು ! ಏನ ಚಕ್ಕಡಿ ! ಅಬಬಬ'' ಎಂದು ಗೊಣಗಿದ.

ಆಗ ಅಜ್ಜನ ಹತ್ತಿರವಿದ್ದವರು ''ಅಜ್ಜ ಈ ಮಾತನ್ನು ಯಾರಿಗೆ ಹೇಳಿಕೊಂಡ?'' ಎಂದು ಸುತ್ತಲೂ ನೋಡಿದರು. ದೂರದಿಂದ ಯಾರೋ ಒಬ್ಬ ಹೆಣ್ಣುಮಗಳು ನರೇಗಲ್ಲ ಮಾರ್ಗದಿಂದ ಬರುವದು ಅವರ ಕಣ್ಣಿಗೆ ಬಿತ್ತು. ಸ್ವಲ್ಪ ಹೊತ್ತಿನಲ್ಲಿ ಆ ಹೆಣ್ಣುಮಗಳು ಬಂದು ತಾನು ತಂದ ಪದಾರ್ಥಗಳನ್ನು ಅಜ್ಜನ ಮುಂದೆ ಇಟ್ಟು ಆತನಿಗೆ ಅಡ್ಡಬಿದ್ದು ಆತನ ಎದುರಿಗೆ ತನ್ನ ದುಃಖವನ್ನೆಲ್ಲ ತೋಡಿಕೊಳ್ಳಹತ್ತಿದಳು.

ಇದನ್ನು ನೋಡಿದ ಅಲ್ಲಿದ್ದ ಜನರು ಆ ಹೆಣ್ಣುಮಗಳಿಗೆ 'ತಂಗೀ' ನೀ ಏನ ಚಿಂತಿ ಮಾಡಬ್ಯಾಡ ನಿಮ್ಮ ಮನಸಿನ್ಯಾಗ ಏನೈತಿ ಅದು ಆಗ್ಯೆತಿ. ಯಾಕೆಂದರೆ, ಅಜ್ಜ ಆಗಲೇ ''ಏನ ವಂಕಿ ! ಏನ ಸರಿಗಿ ! ಏನ ಮಹಡಿ ಮನಿ ! ಏನ ಚಕ್ಕಡಿ ! ಏನ ಕಿಲಾರಿ ಎತ್ತು ! ಎಂದು ತನ್ನಷ್ಟಕ್ಕೆ ಹೇಳಿಕೊಂಡಿದ್ದ. ಇದರ ಮೇಲೆ ನಿನ್ನ ಕಷ್ಟ ಪರಿಹಾರ ಆಗಿ ನೀನು ಸಿರಿವಂತಳಾಗ್ತೀದಿ ಇನ್ನು ನೀನು ಹೋಗು'' ಎಂದು ಹೇಳಿದರು.

ಇದನ್ನೆಲ್ಲ ಕೇಳಿದ ಅಮೀರಬಿಗೆ ಹಿಡಿಸಲಾರದಷ್ಟು ಆನಂದವಾಗಿ ಆಕೆ ಅಜ್ಜನ ಪಾದಕ್ಕೆ ಮತ್ತೊಮ್ಮೆ ಮಣಿದು ಅಲ್ಲಿಯ ಧೂಳನ್ನು ಭಕ್ತಿಯಿಂದ ತನ್ನ ಮೈಗೆ ಹಚ್ಚಿಕೊಂಡು ಹೊರಟು ಹೋದಳು.

ಮೂರನೇ ದಿನ ಅಮೀರಬಿ ಬೆಟಗೇರಿಗೆ ಹೊರಟು ಅಲ್ಲಿಯ ಜಕಾತಿಕಟ್ಟಿ ಹತ್ತಿರ ಇಳಿದಾಗ ಆಕೆಯ ಕಣ್ಣಿಗೆ ಕಿಲಾರಿ ಎತ್ತುಗಳನ್ನು ಹೂಡಿದ ಕೆಲವು ಚಕ್ಕಡಿಗಳು

ಕಂಡವು. ಅವುಗಳನ್ನು ನೋಡಿದ ಕೂಡಲೇ ಅಜ್ಜನು ಹೇಳಿದ ಮಾತು ಆಕೆಗೆ ನೆನಪಾಯಿತು. ಭಾವ ಪರವಶಳಾದಳು. ಆ ಎತ್ತು ಚಕ್ಕಡಿಗಳ ಮಾಲೀಕರಾದ ಹುಂಡೇಕಾರ ಶ್ರೀ ಪರೂತಗೌಡರು ಅಲ್ಲಿಯೇ ತಮ್ಮ ಗುಮಾಸ್ತ ಶ್ರೀ ಪ್ರಭಯ್ಯನವರು ಕುರ್ತಕೋಟಿಮಠ ಅವರೊಡನೆ ಮಾತನಾಡುತ್ತ ನಿಂತಿದ್ದರು.

ತಮ್ಮ ಸಮೀಪದಲ್ಲಿಯೇ ಈ ಹೆಣ್ಣುಮಗಳು ಏನೋ ವಿಚಾರ ಮಾಡುತ್ತಿರುವ ದನ್ನು ನೋಡಿ ಆಕೆಗೆ ತಮ್ಮಿಂದ ಏನೋ ಆಗಬೇಕಾಗಿದೆ ಎಂದು ಭಾವಿಸಿ ಆಕೆಯ ಹತ್ತಿರ ಹೋಗಿ ಆ ಬಗ್ಗೆ ವಿಚಾರಿಸಿದರು. ಆಗ ಅವರಿಗೆ ಆಕೆ ನರೇಗಲ್ಲ ಗ್ರಾಮದ ಒಬ್ಬ ಮುಸಲ್ಮಾನ ಪಾತ್ರದವಳೆಂದೂ, ಯೋಗ್ಯ ಆಶ್ರಯಕ್ಕಾಗಿ ಇಲ್ಲಿಗೆ ಬಂದಿರುವದಾಗಿಯೂ ತಿಳಿಯಿತು. ಇದು ದೈವ ಸಂಕಲ್ಪವೆಂದು ಭಾವಿಸಿದ ಅವರು ಆಕೆಯನ್ನು ಕರೆದುಕೊಂಡು ತಮ್ಮ ಮನೆಗೆ ಹೋದರು. ಅಂದಿನಿಂದ ಅಮೀರಬಿ ಅವರ ಉಪ ಪತ್ನಿಯಾದಳು. ಅಜ್ಜ ಹೇಳಿದಂತೆ ಆಕೆಗೆ ಮಹಡಿ ಮನೆ ದೊರೆಯಿತು. ತನ್ನ ಮೈತುಂಬ ವಂಕಿ– ಸರಿಗಿ ಮೊದಲಾದ ಬಂಗಾರ ದಾಗೀನುಗಳೂ ಆದವು. ಅಮೀರಬಿ ಅಜ್ಜನ ಮಾತು ವರವಾದುದನ್ನು ಕಂಡು ಅಜ್ಜನನ್ನು ಮರೆಯಲಿಲ್ಲ, ತನ್ನ ಜೀವಮಾನವನ್ನೆಲ್ಲ ಅಜ್ಜನ ಸೇವೆಗೆ ಮುಡುಪಾಗಿಟ್ಟಳು.

**ಶ್ರೀ ಹಠಯೋಗಿ ಬ್ರಹ್ಮೀಭೂತನಾದ :**

ಜಲಪ್ರಳಯದಂತೆ ಬಂದ ಸ್ವಾತಿಮಳೆಯು ಸರಿಯಿತು. ನಮ್ಮ ಕಥಾ ನಾಯಕನೂ ತನ್ನ ಸಮಾಧಿಯಿಂದ ಬಹಿರ್ಮುಖನಾದನು. ಅದೇನು ಈಶ್ವರ ಇಚ್ಛೆಯೋ ಆತನ ಸೇವೆಗೆ ಬಸಯ್ಯ ಎಂಬ ಘಟ್ಟಿಗನು ಎಲ್ಲಿಂದಲೋ ಬಂದು ನಿಂತನು. ಅಜ್ಜನ 'ಭಿಕ್ಷಾವೃತ್ತಿ'ಯನ್ನು ಆತನೇ ವಹಿಸಿಕೊಂಡನು.

ಅಜ್ಜನಿಗೆ ಮೊದಲು ಉಣ್ಣಿಸಿ ಹಿಂದಿನಿಂದ ತಾನು ಉಣ್ಣುವನು. ಅಜ್ಜನ ಸೇವೆಯನ್ನು ಅವನು ಹೇಸದೇ–ಹೆದರದೆ ನಿರಾಲಸಿಗನಾಗಿ ಎಲ್ಲವನ್ನೂ ಪೂರೈಸು ತ್ತಿದ್ದನು. ''ಅಜ್ಜನಿಗೆ ಅಂತ್ಯಕಾಲದಲ್ಲಿ ಒಳ್ಳೇ ಶಿಷ್ಯ ಸಿಕ್ಕ'' ಎಂದು ಜನರು ಮಾತನಾಡಿಕೊಳ್ಳುತ್ತಿದ್ದರು.

**ಅಜ್ಜನು ಶಿವಾಧೀನನಾದದ್ದು :**

ಕೆಲವು ದಿನಗಳ ಮೇಲೆ ಶ್ರೀ ಹುಚ್ಚೀರಪ್ಪಜ್ಜ ಇದ್ದಕ್ಕಿದ್ದಂತೆ ಆಹಾರ ಪಾನೀಯಗಳನ್ನು ಸಂಪೂರ್ಣವಾಗಿ ತ್ಯಜಿಸಿಬಿಟ್ಟ. ಮೊದಲೇ ಅವುಗಳನ್ನು ತೊರೆಯುತ್ತ ಬಂದಿದ್ದರೂ ಭಕ್ತರ ಸಂತೋಷಕ್ಕಾಗಿ ಅವರ ಆಗ್ರಹಕ್ಕಾಗಿ ಏನೋ ಸ್ವಲ್ಪು ತೆಗೆದುಕೊಳ್ಳುತ್ತಿದ್ದ. ಈಗ ಅದೂ ಕೂಡ ನಿಂತುಹೋಯಿತು. ಇದರಂತೆ ಕೆಲವು ದಿನಗಳು ಸರಿದವು. ವಾರಗಳು ಉರುಳಿದವು, ತಿಂಗಳುಗತಿಸಿದವು. ಅಜ್ಜ ಅನ್ನ ನೀರುಗಳನ್ನು ಮಾತ್ರ ಮುಟ್ಟಲಿಲ್ಲ. ಇದರಿಂದ ಅಜ್ಜನ ಸ್ಥೂಲ ಶರೀರದಲ್ಲಿದ್ದ ರಕ್ತ–

ಮಾಂಸಗಳು ಕ್ಷೀಣಿಸಿ ಕೇವಲ ಅಸ್ತಿಪಂಜರವಷ್ಟೇ ಉಳಿಯಿತು. ಆದರೂ ಮುಖದಲ್ಲಿ ಆತನ ಆತ್ಮ ಜ್ಯೋತಿಯ 'ಶಾಂತಕಳೆ' ಕುಂದಿರಲಿಲ್ಲ. ಕಣ್ಣುಗಳು ಎಂದಿನಂತೆ ತೇಜಃ ಪುಂಜವಾಗಿಯೇ ಇದ್ದವು. ಆತನನ್ನು ನೋಡಿದರೆ ಒಂದು ಹಸುಗೂಸನ್ನು ಕಂಡಂತೆ ಆಗುತ್ತಿತ್ತು. ಅಜ್ಜನು ತನ್ನಷ್ಟಕ್ಕೆ ತಾನು ನಗುವನು. ಒಮ್ಮೊಮ್ಮೆ ಆತನು ಭಾವಾವಿಷ್ಠನಾದಾಗ ಆತನ ಶರೀರದಲ್ಲಿ ಕಂಪನವಾಗುತ್ತಿತ್ತು. ಒಂದೊಂದ ಸಲ ಆತನು ನಿಶ್ಚೇಷ್ಟಿತನಾಗಿ ಬಿದ್ದು ಬಿಡುವನು. ಇವೆಲ್ಲ ಜೀವನ್ಮುಕ್ತರ ಲಕ್ಷಣಗಳು ಶ್ರೀ ರಾಮಕೃಷ್ಣ ಪರಮಹಂಸರಿಗೆ ಆಗಾಗ್ಗೆ ಹೀಗೆಯೇ ಆಗುತ್ತಿತ್ತು.

ಇದನ್ನೆಲ್ಲ ಕಂಡ ಅಜ್ಜನ ಸೇವಕ ಬಸಯ್ಯ ಊರೊಳಗೆ ಹೋಗಿ ಅಲ್ಲಿಯ ಪ್ರಮುಖರಿಗೆ ಅಜ್ಜನ ಇತ್ತೀಚಿನ ಸ್ಥಿತಿಗತಿಗಳನ್ನು ತಿಳಿಸಿಬಿಟ್ಟ. ಊರ ಹಿರಿಯರಾದ ಹಿರೇಗೌಡ್ರು, ಬಸನಗೌಡ್ರು, ಹಳೇಮನಿ ರುದ್ರಗೌಡ್ರು, ಕೋಡಿಕೊಪ್ಪ ಮಠದ ಬಸವರಾಜ ಶಾಸ್ತ್ರಿಗಳು, ಅವರ ಅಣ್ಣಂದಿರಾದ ಮಲ್ಲಯ್ಯನವರು ಮತ್ತು ತೋಟಯ್ಯನವರು ಹೀಗೆ ಇನ್ನೂ ಅನೇಕ ಪ್ರಮುಖರು ಕೂಡಿ ಅಜ್ಜನ ಬಗ್ಗೆ ಮುಂದೆ ಏನು ಮಾಡಬೇಕು? ಎಂಬ ಬಗ್ಗೆ ವಿಚಾರ ಮಾಡಹತ್ತಿದ್ದರು. ಕಡೆಗೆ ಅಜ್ಜನನ್ನು ಈ ಸ್ಥಿತಿಯಲ್ಲಿ ಆ ಅಡವಿಯಲ್ಲಿ ಬಿಡದೆ ಊರಲ್ಲಿ ತರಬೇಕೆಂದು ಸರ್ವರೂ ಮನಃ ಪೂರ್ವಕವಾಗಿ ತೀರ್ಮಾನಿಸಿದರು. ಆದರೆ ಬಾಹ್ಯಪ್ರಜ್ಞೆ ಇಲ್ಲದ ಆತನನ್ನು ಊರಲ್ಲಿ ತರುವದಾದರೂ ಹೇಗೆ ? ತಂದರೂ ಆತನಿಗೆ ಎಲ್ಲಿ ವ್ಯವಸ್ಥೆ ಮಾಡಬೇಕು? ಎಂಬ ಬಗ್ಗೆ ಆ ಹಿರಿಯರಲ್ಲಿ ಮತ್ತೆ ಜಿಜ್ಞಾಸೆ ಪ್ರಾರಂಭವಾಯಿತು. ವಿಚಾರಾಂತ್ಯದಲ್ಲಿ ಆತನನ್ನು ಹೊರಸಿನ ಮೇಲೆ ತರಬೇಕೆಂದೂ ನಂತರ ಆತನನ್ನು ಊರಿನ ಶ್ರೀ ಬಸವಣ್ಣದೇವರ ಗುಡಿಯಲ್ಲಿ ಇರಿಸಬೇಕೆಂದೂ ನಿರ್ಣಯವಾಯಿತು.

ಊರ ಹಿರಿಯರೆಲ್ಲ ಡೋಣಿಕಲ್ಲ ಏರಿಗೆ ಕೆಲವರ ಮೇಲೆ ಹೊರಸು ಹೊರಸಿಕೊಂಡು ಹೋದರು. ಅಲ್ಲಿ ನೋಡುತ್ತಾರೆ. ಅಜ್ಜ ಅಂಗಾತವಾಗಿ ಮಲಗಿದ್ದಾನೆ. ಶರೀರ ಬಿಸಿ ಇದ್ದರೂ ಅದರಲ್ಲಿ ಮಿಸುಗು ಇರಲಿಲ್ಲ. ಆ ಮೇಲೆ ಕೆಲವು ಘಟ್ಟಿಗರು ಅಜ್ಜನನ್ನು ಹೊರಿಸಿನ ಮೇಲೆ ಹಾಕಲು ಆತನನ್ನು ಮೇಲಕ್ಕೆ ಎತ್ತಹತ್ತಿದರು. ಇದರಿಂದ ಅಜ್ಜನ ಮೂಗಿನ ಹೊರಳಿಗಳಲ್ಲಿ ಮೊದಲು ಇಲ್ಲದ ಉಸಿರಾಟ ಈಗ ಪ್ರಾರಂಭವಾಯಿತು. ಅಜ್ಜ ಕಣ್ಣುಗಳನ್ನು ತೆರೆದು ತನ್ನ ಸುತ್ತಲೂ ಇದ್ದ ಜನರನ್ನು ನೋಡಿ ಎಲ್ಲಿಯೂ ಒಯ್ಯಬೇಡಿರಿ ಎಂದು ತನ್ನ ಬಲಹಸ್ತದಿಂದ ಸಂಜ್ಞೆ ಮಾಡಿ ಹೇಳಿದನು. ಆದರೆ, ಕೂಡಿದ ಜನ ಕೇಳಬೇಕಲ್ಲ ? ಎಲ್ಲರೂ ಜಯ ನಮಃ ಪಾರ್ವತೀ ಪತಿ ಹರ ಹರ ಮಹಾದೇವ ಎಂದು ಜಯಘೋಷ ಮಾಡುತ್ತ ಅಜ್ಜನನ್ನು ಎತ್ತಿ ಹೊರಸಿನ ಮೇಲೆ ಹಾಕಿ ಆಗಾಗ್ಗೆ ಜಯಘೋಷ ಮಾಡುತ್ತ ಊರ ಹಾದಿಹಿಡಿದರು.

ಊರು ಅಂದಾಜು ಅಲ್ಲಿಗೆ ಎರಡು ಕಿಲೋ ಮೀಟರ ಇರಬಹುದು. ಹೀಗೆ ಅಜ್ಜನನ್ನು ಅಲ್ಲಿಗೆ ಒಯ್ಯುವಾಗ ಆಕಾಶದಿಂದ ಒಂದೊಂದೇ ಮಳೆಯ ಹನಿಗಳು ಪುಷ್ಪ ವೃಷ್ಟಿಯಂತೆ ಅಜ್ಜನ ಮೇಲೆ ಬೀಳಹತ್ತಿದ್ದವು. ನೋಡಿದರೆ ಆಕಾಶದಲ್ಲಿ ದಟ್ಟ ಮೋಡಗಳು ಇರಲಿಲ್ಲ. ಕೇವಲ ಬಿಳಿಯ, ನೀಲಿ ಮುಗಿಲು.

ಪ್ರಕೃತಿ ಮಾತೆ ಅಜ್ಜನ ವಿಯೋಗಕ್ಕಾಗಿ ಕಣ್ಣೀರು ಹಾಕುತ್ತಿರಬಹುದೇ? ಅಥವಾ ಆಕಾಶ ಗಂಗೆ ಅಜ್ಜನ ಈ ಅಂತ್ಯಾವಸ್ಥೆಯ ಯಾತ್ರೆಯಲ್ಲಿ ಭೂಶುದ್ಧಿಗಾಗಿ ಜಲಸಿಂಚನ ಗೈದು ತನ್ನ ಪಾಲಿನ ಸೇವೆ ಮಾಡುತ್ತಿರಬಹುದೇ? ಎಂದೆನಿಸಿತು. ಹೀಗೆ ಹೊರಸು ಹೊತ್ತವರು ಮತ್ತು ಕೂಡಿದ ಜನಸ್ತೋಮ ಜಯ ನಮಃ ಪಾರ್ವತೀ ಪತಿ ಹರ ಹರ ಮಹಾದೇವ ಎಂದು ಬಾರಿ ಬಾರಿಗೂ ಜಯಘೋಷ ಮಾಡುತ್ತ ಶ್ರೀ ಬಸವಣ್ಣ ದೇವರ ಗುಡಿಗೆ ಬಂದು, ಅಲ್ಲಿ ಹೊರಸನ್ನು ಇಳುವಿದರು.

ಅಜ್ಜನ ಪಾರ್ಥಿವ ಶರೀರವೇನೋ ಗುಡಿಗೆ ಬಂದಿತು. ಆದರೆ ಆತನ ಭಾವ ಮಾತ್ರ ಆತನು ತಪಸ್ಸು ಗೈದ ಡೋಣಿಕಲ್ಲ ಏರಿಯಲ್ಲಿಯೇ ಉಳಿಯಿತು. ಕೋಡಿಕೊಪ್ಪದ ಅಧಿದೈವ ಶ್ರೀ ಹುಚ್ಚೀರಪ್ಪಜ್ಜನವರನ್ನು ಶ್ರೀ ಬಸವಣ್ಣ ದೇವರ ಗುಡಿಗೆ ಕರೆದುಕೊಂಡು ಬಂದಿದ್ದಾರೆ ! ಎಂಬ ಸುದ್ದಿ ಊರಲ್ಲೆಲ್ಲ ಹರಡುತ್ತಿರುವಂತೆ ಅಬಾಲವೃದ್ಧರಾದಿಯಾಗಿ ಎಲ್ಲರೂ ಶ್ರೀ ಬಸವಣ್ಣ ದೇವರ ಗುಡಿಯ ಮುಂದೆ ದುಃಖತಪ್ತರಾಗಿ ಕೂಡಹತ್ತಿದ್ದರು. ಜನರಿಗೆ ಅಜ್ಜನ ಮುಖ ಕಾಣುವಂತೆ ಹೊರಸಿನ ಮೇಲೆ ತೆಕ್ಕೆಗೆ ಆಶ್ರಯಿಸಿ ಮಲಗಿಸಲಾಯಿತು. ಆಗ ಸಾಯಂಕಾಲ ಕ್ರಮೇಣ ಕತ್ತಲು ಕವಿಯ ಹತ್ತಿದ್ದರಿಂದ, ಕೂಡಿದ ಜನರು ಕರಗಹತ್ತಿ ಕೇವಲ ಅಜ್ಜನ ಹತ್ತಿರ ಮೂರುನಾಲ್ಕು ಜನರು ಮಾತ್ರ ಉಳಿದರು. ಅದರಲ್ಲಿ ಶ್ರೀ ಬಸವರಾಜ ಶಾಸ್ತ್ರಿಗಳೂ ಒಬ್ಬರು.

ಶ್ರೀ ಅಜ್ಜನಿಗೆ ಬಾಹ್ಯ ಪ್ರಜ್ಞೆ ಡೋಣಿ ಕಲ್ಲ ಏರಿಯಲ್ಲಿಯೇ ಇದ್ದಾಗ ಹೋದದ್ದು ಮರಳಿ ಬರಲೇ ಇಲ್ಲ. ಆದರೆ ಉಸಿರಾಟ ಮಾತ್ರ ಮಂದಗತಿಯಿಂದ ಸಾಗಿಯೇ ಇತ್ತು. ಈಗ್ಗೆ ನಾಲ್ವತ್ತೈದು ವರ್ಷಗಳ ಹಿಂದೆ ಇದೇ ಶ್ರೀ ಬಸವಣ್ಣ ದೇವರ ಗುಡಿಯಿಂದ ಬೆಳಗಿನ ಜಾವದಲ್ಲಿ ಅಜ್ಜನು ಹೊರಟು ಹೋಗಿದ್ದ. ಈಗಲೂ ಅದೇ ಶ್ರೀ ಬಸವಣ್ಣ ದೇವರ ಗುಡಿಯಲ್ಲಿ ಈಗ ಬೆಳಗಿನ ಜಾವಪ್ರಾಪ್ತವಾಯಿತು. ಇದೊಂದು ಯೋಗಾಯೋಗವೆಂದೇ ಹೇಳಬೇಕು.

ಶ್ರೀ ಬಸವರಾಜ ಶಾಸ್ತ್ರಿಗಳು ಅಜ್ಜನ ಹೊರಸಿನ ಹತ್ತಿರ ಭಕ್ತಿ ಭಾವದಿಂದ ನಿಂತಿದ್ದಾರೆ. ಸುತ್ತಲೂ ನೀರವ ನಿಃಶಬ್ದ. ಆಗ ಅಜ್ಜನು ಕುಡಿಯಲು ನೀರುಬೇಕೆಂಬ ಹಾಗೆ ಕೈಯನ್ನು ಬಾಯಿಗೆ ಒಯ್ದು ಸೂನ್ನೆ ಮಾಡಿದ. ಆಗ ಅಲ್ಲಿಯೇ ಇದ್ದ ಶಾಸ್ತ್ರಿಗಳು ಸಮೀಪದಲ್ಲಿಯೇ ಇದ್ದ ಒಬ್ಬರ ಮನೆಯಿಂದ ನೀರು ತಂದು ಕೊಡಲು ಹೇಳಿದರು. ಆಗ ಅಲ್ಲಿದ್ದವನೊಬ್ಬ ಒಬ್ಬರ ಮನೆಯಿಂದ ಒಂದು ಚರಿಗೆಯಲ್ಲಿ ನೀರು ತಂದು ಬಾಯಿಗೆ ಹೊಯ್ದ ಆಶ್ಚರ್ಯವೆಂದರೆ ಆಗ ಅಜ್ಜನು ಬಾಯಿಯನ್ನು ಬಿಗಿಯಾಗಿ ಮುಚ್ಚಿ ಆ ಚರಿಗೆಯನ್ನೇ ನೋಡುತ್ತಿದ್ದ. ಇದು ಯಾಕೆಂದು ಯಾರಿಗೂ ಅರ್ಥವಾಗಲಿಲ್ಲ. ಆಗ ಶಾಸ್ತ್ರಿಗಳೇ ಮುಂದಾಗಿ ಆತನಿಗೆ ಮಗಿ ಇಲ್ಲವೆ ಪರ್ಯಾಣದಲ್ಲಿ ಹಾಕಿ ಕುಡಿಸಿರಿ ಎಂದು ಹೇಳಿದರು. ಅವರ ಮಾತಿನಂತೆಯೇ ಕುಂಬಾರ ಮನೆಗೆ ಹೋಗಿ ಒಂದು ಪರ್ಯಾಣವನ್ನು ತಂದು ಅದರಲ್ಲಿ ಆ ಚರಗೆಲ್ಲಿದ್ದ ನೀರು ಹಾಕಿ ಬಾಯಿಗೆ ಹೊಯ್ದರು. ಆಗ ಅಜ್ಜ ತಕ್ಷಣವೇ ಬಾಯಿ ತೆಗೆದು ನೀರು ಹಾಕಿದಂತೆಲ್ಲ

ಗುಟುಗುರಿಸುತ್ತಿದ್ದ, ಹೀಗೆಯೇ ಎಷ್ಟೋ ಅಗಾಧ ಪ್ರಮಾಣದ ನೀರನ್ನು ಕುಡಿದದ್ದು ಅಲ್ಲಿದ್ದವರು ನೋಡಿ ಅತೀ ವಿಸ್ಮಯಗೊಂಡರು. ಎಂದೂ ಈ ರೀತಿ ನೀರು ಕುಡಿದಿರಲಿಲ್ಲವೆಂದು ಅಲ್ಲಿದ್ದ ಅವರ ಶಿಷ್ಯ ಬಸಯ್ಯನು ಉದ್ಗರಿಸಿದನು. ಇಂತಹ ಅರೆಪ್ರಜ್ಞಾವಸ್ಥೆಯಲ್ಲಿಯೂ ಕೂಡಾ ತನ್ನ ಏಕಾಂತಕ್ಕೆ ಭಂಗವಾಗದಂತೆ ಎಚ್ಚರ ವಹಿಸಿದ್ದನ್ನು ಕಂಡು ಎಲ್ಲರೂ ಸಂತೋಷಪಟ್ಟರು.

ಸ್ವಲ್ಪ ಸಮಯ ಸರಿದಿರಬೇಕು ಅಜ್ಜನ ಚಟುವಟಿಕೆ ತೀವ್ರವಾಗ ಹತ್ತಿತು. ಆಗ ಅಜ್ಜನ ''ಬ್ರಹ್ಮರಂಧ್ರದಿಂದ ಬಹುದೊಡ್ಡ ಶಬ್ದವಾಗಿ ಆತನ ಪ್ರಾಣೋತ್ಕ್ರಮಣ ವಾಯಿತು. ಅವರೊಡನೆ ಅಜ್ಜನ ಆತ್ಮಜ್ಯೋತಿ ಹೊರಬಂದು, ಅನಂತದಲ್ಲಿ ಲೀನವಾಯಿತು. ಇದೆಲ್ಲ ಕ್ಷಣಾರ್ಧದಲ್ಲಿ ನಡೆದು ಹೋಯಿತು. ಇದನ್ನು ಪ್ರತ್ಯಕ್ಷ ನೋಡಿದ ಬಸವರಾಜ ಶಾಸ್ತ್ರಿಗಳು ಮೂಕವಿಸ್ಮಿತರಾದರು. ಅಂದು ಚೈತ್ರ ಬಹುಳ ಅಮವಾಸ್ಯೆ ದಿನಾಂಕ : ೨೩–೩–೧೯೨೫ನೇ ಇಸ್ವಿ.

**ಶ್ರೀ ಹುಚ್ಚೀರಪ್ಪಜ್ಜನವರ ಅಂತ್ಯಯಾತ್ರೆ :**

ಹಠಯೋಗಿ ಶ್ರೀ ಹುಚ್ಚೀರಪ್ಪಜ್ಜನವರು ಡೋಣಿಕಲ್ಲ ಏರಿಯಲ್ಲಿದ್ದಾಗಿನ ತಮ್ಮ ಕೊನೆಗಾಲದಲ್ಲಿ ನಾಲ್ವತ್ತು ದಿನಗಳ ನಿರಶನ ಕೈಕೊಂಡಾಗ ಸಂಪೂರ್ಣ ಬಾಹ್ಯ ಪ್ರಜ್ಞೆಯನ್ನೇ ಕಳೆದುಕೊಂಡು ಕೇವಲ ಬ್ರಾಹ್ಮೀ ಸ್ಥಿತಿಯಲ್ಲಿದ್ದರು. ಮಂಡೂಕೋಪ ನಿಷತ್ತಿನಲ್ಲಿ ಇದನ್ನೇ ಪರಂತಕಾಲವೆಂದು ಕರೆದಿರುವರು. ಪರಂತಕಾಲವೆಂದರೆ ಅವಸ್ಥಾತ್ರಯಗಳನ್ನು ಮತ್ತು ನಾಲ್ಕನೆಯದಾದ ತುರೀಯವನ್ನು ದಾಟಿದ ಕಾಲವದು. ಮೊದಲಿನ ಮೂರು ಅವಸ್ಥೆಗಳಂತೂ ಅವರಿಗೆ ಇದ್ದೇ ಇರಲಿಲ್ಲ. ಈಗ ನಾಲ್ಕನೆಯದಾದ ತುರೀಯವನ್ನು ಅವರು ದಾಟಿದ್ದರು.

ಶರೀರ ಧಾರಣೆಗೆ ಕಾರಣವಾದ ಪ್ರಾರಬ್ಧ ಕರ್ಮ ಕ್ಷಯಿಸುತ್ತಲೇ ದೇಹಾವಸಾನ ಪ್ರಾಪ್ತವಾಗುತ್ತದೆ. ಆಗ ಯೋಗಿಗಳು ತಮ್ಮ ಪ್ರಾಣವನ್ನು ಕ್ರಮವಾಗಿ ನಾಭಿಯಲ್ಲಿಯ ಮಣಿಪೂರಕ, ಹೃದಯದಲ್ಲಿಯ ಅನಾಹುತ, ಕಂಠದಲ್ಲಿಯ ವಿಶುದ್ಧಿ ಇವುಗಳ ಮೂಖಾಂತರ ಎರಡೂ ಹುಬ್ಬುಗಳ ಮಧ್ಯದಲ್ಲಿರುವ ಆಜ್ಞಾ ಚಕ್ರಕ್ಕೆ ತಂದು ನಿಲ್ಲಿಸುವರು.

ಆಗ ಕಣ್ಣು–ಕಿವಿ–ಮೂಗು–ಬಾಯಿ ಈ ಮೊದಲಾದ ದ್ವಾರಗಳೆಲ್ಲ ಮುಚ್ಚಿ ಹೋಗುವವು. ಇಲ್ಲಿ ಮುಹೂರ್ತಕಾಲ ಪ್ರಾಣವಾಯು ಬ್ರಹ್ಮರಂಧ್ರವನ್ನು ಭೇದಿಸಿಕೊಂಡು ಹೋಗಿ ಅನಂತದಲ್ಲಿ ಲೀನವಾಗುವದು. ಅಂದರೆ ಆತ್ಮವು ಆನಂದ ಘನವಾದ ಬ್ರಹ್ಮ ಸ್ವರೂಪವನ್ನು ಪಡೆಯುವದು. ಇದು ಎಲ್ಲರಿಗೂ ಸಾಧ್ಯವಿಲ್ಲ ಮುಕ್ತಾತ್ಮರಾದ ಯೋಗಿಗಳಿಗೆ ಮಾತ್ರ ಸಾಧ್ಯ. ಹೀಗೆ ಗದುಗಿನ ಮುಪ್ಪಿನ ಶ್ರೀ ತೋಂಟದಾರ್ಯಸ್ವಾಮಿಗಳು ಬ್ರಹ್ಮರಂಧ್ರವನ್ನು ಭೇದಿಸಿಕೊಂಡು ಹೋಗುವದರ ಮೂಲಕ ಲಿಂಗಾಂಗಸಾಮರಸ್ಯವನ್ನು ಪಡೆದರೆಂಬುದನ್ನು ನೆನೆಯಬಹುದು.

ಅದೇ ಮೇರೆಗೆ ನಮ್ಮ ಚರಿತ್ರೆ ನಾಯಕ ಹಠಯೋಗಿ ಶ್ರೀಹುಚ್ಚೀರಪ್ಪಜ್ಜ ಬ್ರಹ್ಮ ಸ್ವರೂಪವನ್ನು ಪಡೆದದ್ದು ಇದೇ ರೀತಿಯಲ್ಲಿ. ಶ್ರೀ ಹುಚ್ಚೀರಪ್ಪಜ್ಜ ಈ ರೀತಿ ಶಿವಸಾಯುಜ್ಯವನ್ನು ಹೊಂದಿದ ಕೂಡಲೇ ಆತನ ದಿವ್ಯ ಕಳೆಬರವನ್ನು ಸ್ನಾನ ಮಾಡಿಸಿ, ಭಸ್ಮ ಲೇಪನ ಮಾಡಿ, ರುದ್ರಾಕ್ಷಿ ಮಾಲೆಗಳಿಂದಲೂ, ಹೂಮಾಲೆ, ಪತ್ರಿಗಳಿಂದಲೂ ಅಲಂಕರಿಸಿದರು. ಶ್ರೀ ಬಸವಣ್ಣದೇವರ ಗುಡಿಯ ಮುಂದಿನ ಅಂಕಣದಲ್ಲಿ ಹಾಕಿ ಎತ್ತರದ ಮಂಟಪದ ಮೇಲೆ, ಆತನನ್ನು ಮೂರ್ತಗೊಳಿಸಿ ವಿದ್ಯುಕ್ತವಾಗಿ ಪೂಜಿಸಿದರು.

ಶ್ರೀ ಹುಚ್ಚೀರಪ್ಪಜ್ಜನು ಶೀವಾಧೀನನಾದನು ಎಂಬ ವಾರ್ತೆಯನ್ನು ಭಗವಾನ್ ಸೂರ್ಯನಾರಾಯಣನೇ ಎಲ್ಲಾ ಕಡೆಗೂ ಹರಡಿದನೋ ಏನೋ ಎಂಬಂತೆ ಬೆಳಗಾಗುತ್ತಲೇ ಸ್ಥಳ–ಪರಸ್ಥಳದವರಿಗೆ ಈ ದಾರುಣವಾರ್ತೆ ಬೇಗೆಯಂತೆ ಹಬ್ಬಿ ಜನರು ತಂಡೋಪತಂಡವಾಗಿ ಅಜ್ಜನ ಕೊನೆಯ ದರ್ಶನಕ್ಕೆ ತೆಂಗಿನಕಾಯಿ, ಭಸ್ಮ ಘಟ್ಟ, ಹೂಮಾಲೆಗಳನ್ನು ಹಿಡಿದುಕೊಂಡು ಬರಹತ್ತಿದರು.

ಹೀಗೆ ಅಜ್ಜನ ಅಂತ್ಯಯಾತ್ರೆಗೆ ಆಗಮಿಸಿದ ಹಿರಿಯರೆಲ್ಲ ಅಜ್ಜನ ಸಮಾಧಿ ಎಲ್ಲಿ ಮಾಡುವದು? ಎಂದು ತಮ್ಮ ತಮ್ಮಲ್ಲಿ ಚರ್ಚಿಸಹತ್ತಿದರು. ಆಗ ನರೇಗಲ್ಲಿನ ಒಬ್ಬ ಪ್ರಮುಖರಾದ ಶ್ರೀ ಬಂದನಗೌಡ ಸಂಕನಗೌಡ್ರ ಅವರು ''ಯಾವ ಸ್ಥಾನ ಅಖಂಡ ಮೂವತ್ತು ವರ್ಷಗಳವರೆಗೆ ಅಜ್ಜನ ತಪೋಭೂಮಿಯಾಗಿತ್ತೋ ಅಲ್ಲಿಯೇ ಅಜ್ಜನ ಸಮಾಧಿಕಾರ್ಯ ಜರುಗಲಿ'' ಎಂದು ಅಭಿಪ್ರಾಯಪಟ್ಟರು. ಆದರೆ, ಅದೇ ನರೇಗಲ್ಲಿನ ಇನ್ನೊಬ್ಬ ಪ್ರಮುಖರಾದ ಶ್ರೀ ಕೊಟ್ರಪ್ಪ ಜೋಳದ ಅವರು ''ಕೋಡಿಕೊಪ್ಪದಲ್ಲಿರುವ ಶ್ರೀ ನಿ. ಪ್ರ. ಅನ್ನದಾನಮಹಾಸ್ವಾಮಿಗಳವರ ಮಠದ ಆವರಣದಲ್ಲಿ ಸಮಾಧಿ ಕಾರ್ಯನೆರವೇರಲಿ'' ಎಂದು ಪ್ರತಿವಾದ ಹೂಡಿದರು.

ಇದನ್ನು ಗಮನಿಸಿದ ಕೋಡಿಕೊಪ್ಪದ ಹಿರಿಯರು ಅಲ್ಲಿ ಕೂಡಿದವರಿಗೆ ಹೀಗೆ ವಾದ–ವಿವಾದ ಮಾಡಲಿಕ್ಕ ಈಗ ಸಮಯವಿಲ್ಲ, ನಮ್ಮೆಲ್ಲರಿಗೆ ಪರಮ ಪೂಜ್ಯರಾದ ಶ್ರೀ ಹಾಳಕೇರಿ ಅನ್ನದಾನ ಮಹಾಸ್ವಾಮಿಗಳವರ ಅಪ್ಪಣೆ ಎಲ್ಲಿ ಆಗುವದೋ ಅಲ್ಲಿ ಸಮಾಧಿ ಕಾರ್ಯ ಜರುಗುವಂತೆ ತಾವೆಲ್ಲ ಒಪ್ಪಿಗೆ ನೀಡಬೇಕು. ಎಂದು ಎಲ್ಲರಿಗೂ ಭಿನ್ನವಿಸಿದರು. ಇದಕ್ಕೆ ಎಲ್ಲರಿಂದಲೂ ಒಪ್ಪಿಗೆ ದೊರೆಯಿತು.

ಆ ನಂತರ ಅಲ್ಲಿಂದ ಇಬ್ಬರನ್ನು ಹಾಳಕೇರಿ ಅಜ್ಜನವರ ಕಡೆಗೆ ಕಳಿಸಿ ಕೊಡಲಾಯಿತು. ಹೀಗೆ ಹೋದವರಿಗೆ ಪೂಜ್ಯ ಅಜ್ಜನವರು ''ಹುಚ್ಚೀರಪ್ಪಜ್ಜನ ಸಮಾಧಿ ನಮ್ಮ ಮಠದ ಎದುರಿಗೆ ಇರುವ ಪಟಾಂಗಣದಲ್ಲಿ ಉತ್ತರಾಭಿಮುಖವಾಗಿ ಆಗಲಿ. ಆಗ ನಾವೂ ಅಲ್ಲಿಗೆ ಬರುತ್ತೇವೆ'' ಎಂದು ಅಪ್ಪಣೆ ದಯಪಾಲಿಸಿದರು. ಈ ವಿಷಯವನ್ನು ಅಲ್ಲಿಗೆ ಹೋಗಿ ಬಂದವರು ಕೋಡಿಕೊಪ್ಪದ ಎಲ್ಲ ಜನರಿಗೆ ತಿಳಿಸಿದರು.

ಆ ಬಳಿಕ ನೆರೆದ ಜನರು ಅಜ್ಜನವರ ಅಪ್ಪಣೆಯಂತೆ, ಅವರ ಮಠದ ಎದುರಿಗಿನ ಆವರಣದಲ್ಲಿ ವಿದ್ಯುಕ್ತವಾಗಿ ಸಮಾಧಿ ರಚಿಸಿದರು. ಸಾಯಂಕಾಲ ನಾಲ್ಕು

ಘಂಟೆಯಾಗಿರಬಹುದು. ಪುಷ್ಪಮಾಲೆಗಳಿಂದ ಅಲಂಕೃತವಾಗಿ ಉಚ್ಚ್ಛಾಯ ಶ್ರೀ ಬಸವಣ್ಣದೇವರ ಗುಡಿಯ ಎದುರಿಗೆ ಇಡಲ್ಪಟ್ಟಿದೆ. ಅದರ ಎರಡೂ ಬದಿಗಳಲ್ಲಿ ಬಾಳಿಗಿಡ ಹಾಗೂ ಕಬ್ಬಿನ ಗಳಗಳನ್ನು ಕಟ್ಟಲಾಗಿದೆ.

ನೆರೆದ ಜನ ಸಮೂಹ ಒಕ್ಕೊರಲಿನಿಂದ ಜಯ ನಮಃ ಪಾರ್ವತೀ ಪತಿ ಹರ ಹರ ಮಹಾದೇವ ಎಂದು ಆಗಾಗ ಜಯಘೋಷ ಮಾಡುತ್ತಿರುವಂತೆ ಅಜ್ಜನ ಮಹಾಲಿಂಗ ಕಾಯಕ್ಕೆ ಅಂತಿಮ ಪೂಜೆಯನ್ನು ಸಲ್ಲಿಸಿ, ಅದನ್ನು ಎತ್ತಿ ತಂದು ಉಚ್ಚ್ಛಾಯದಲ್ಲಿ ಮುರ್ತಗೊಳಿಸಿದರು. ಆ ಮೇಲೆ ಅಜ್ಜನ ಅಂತ್ಯ ಯಾತ್ರೆಯ ಮೆರವಣಿಗೆ ಒಳ್ಳೇ ವೈಭವದಿಂದ ಅಜ್ಜನ ಸಮಾಧಿ ಸ್ಥಾನದ ಕಡೆಗೆ ಸಾಗಿತು.

ಈ ರೀತಿ ಕೈವಲ್ಯೋತ್ಸವಕ್ಕೆ ಬ್ಯಾಂಡ, ಭಜಂತ್ರಿ, ಕರಡಿಮಜಲು, ಡೊಳ್ಳುಗಳು ಸಾಲು ಸಾಲಾಗಿ ಬಾರಿಸತೊಡಗಿದವು. ಭಜನಾ ಮೇಳಗಳು, ಭಕ್ತಿ ಗೀತೆಗಳನ್ನು ಹಾಡಹತ್ತಿದರು. ಆಗಾಗ್ಗೆ ಜನಸ್ತೋಮದಿಂದ ಜಯ ನಮಃ ಪಾರ್ವತೀ ಪತಿ ಹರ ಹರ ಮಹಾದೇವ ಎಂಬ ಘೋಷಣೆ ದಿಕ್ತಟಗಳನ್ನು ತುಂಬಿ ಪ್ರತಿಧ್ವನಿಸಹತ್ತಿತು. ಹೀಗೆ ಸಾಗಿದ ಮೆರವಣಿಗೆಗೆ ಶ್ರೀ ಮ. ನಿ. ಪ್ರ. ಅನ್ನದಾನ ಮಹಾಸ್ವಾಮಿಗಳ ಮಠವನ್ನು ತಲುಪಿದಾಗ ಸಾಯಂಕಾಲ ಆರು ಘಂಟೆಯಾಗಿತ್ತು.

ಅಷ್ಟರಲ್ಲಿ ಪೂಜ್ಯ ಅಜ್ಜನವರು ಹಾಳಕೇರಿಯಿಂದ ಆಗಲೇ ತಮ್ಮ ಮಠಕ್ಕೆ ಆಗಮಿಸಿದ್ದರು. ಅವರ ಸಾನಿಧ್ಯದಲ್ಲಿ ಶ್ರೀ ಹುಚ್ಚೀರಪ್ಪಜ್ಜನವರ ಮಹಾಲಿಂಗ ಕಾಯವನ್ನು ಉಚ್ಚ್ಛಾಯದಿಂದ ತಂದು ಸಮಾಧಿಯ ತ್ರಿಕೋಣದಲ್ಲಿ ಮುರ್ತಗೊಳಿಸಿದರು. ನೆರೆದ ಭಕ್ತಸಾಗರ ಮತ್ತೊಮ್ಮೆ ''ಜಯ ನಮಃ ಪಾರ್ವತೀ ಪತಿ ಹರಹರ ಮಹಾದೇವ''. ''ಜಯ ನಮಃ ಶ್ರೀ ಹಠಯೋಗಿ ಹುಚ್ಚೀರಪ್ಪಜ್ಜವರ ಮಹಾರಾಜಕೀ ಜೈ'' ಎಂದು ಭಾವೋದ್ವೇಗದ ಜಯಘೋಷ ಗಗನಕ್ಕೆ ಮುಟ್ಟುವಂತೆ ಘೋಷಿಸಿತು.

ತದನಂತರ ಪೂಜ್ಯ ಹಾಳಕೇರಿ ಶ್ರೀ ಅನ್ನದಾನ ಮಹಾಸ್ವಾಮಿಗಳ ಸಮಕ್ಷಮದಲ್ಲಿ 'ಹಠಯೋಗಿ ಶ್ರೀ ವೀರಪ್ಪಜ್ಜನವರ ಅಂತ್ಯೇಷ್ಠಿ ವಿಧಿಗಳು (ಕ್ರಿಯೆಗಳು) ಒಳ್ಳೇ ವಿದ್ಯುಕ್ತವಾಗಿ ನೆರವೇರಿದವು. ಅಂದು ಕ್ರೋಧಿನಾಮ ಸವಂತ್ಸರ ಚೈತ್ರ ಬಹುಳ ಅಮವಾಸ್ಯೆ ಅಂದರೆ, ದಿನಾಂಕ ೨೩-೩-೧೯೨೫ ನೇ ಇಸ್ವಿ ಗುರುವಾರ.

ಹೀಗೆ ಪೂಜ್ಯರು, ಜಗದ್ವಂದ್ಯರು, ಪ್ರಾತಃ ಸ್ಮರಣೀಯರಾದ ಶ್ರೀ ವೀರಪ್ಪಜ್ಜನು ಎಪ್ಪತ್ತನೆಯ ವರ್ಷದಲ್ಲಿ ಆತನ ಪುಣ್ಯಶರೀರ ಸಮಾಧಿಯಲ್ಲಿ ನಿಕ್ಷೇಪವಾದರೂ ಚಿಜ್ಯೋತಿ ಸ್ವರೂಪನಾದ ಆತನು ಎಂದೆಂದಿಗೂ ನಂದದ ನಂದಾ ದೀವಿಗೆಯಾಗಿ ತನ್ನ ಭಕ್ತರ ಹೃದಯ ಸಿಂಹಾಸನದಲ್ಲಿ ಅನಭಿಷಕ್ತಯೋಗಿ ಸಾಮ್ರಾಟನಾಗಿ ಚಿರಸ್ಥಾಯಿಯಾಗಿ ಬೆಳಗುತ್ತಿರುವನು.

**ಪುಣ್ಯತಿಥಿ ಆಚರಣೆ :**

ಶ್ರೀ ಹಠಯೋಗಿ ಶ್ರೀ ವೀರಪ್ಪಜ್ಜನವರು ಶಿವಸಾಯುಜ್ಯ ಸೇರಿದ ಮೇಲೆ ಆತನ ಪರಮ ನಿಷ್ಠ ಭಕ್ತೆ ಶ್ರೀ ಅಮೀರವ್ವ ತಮ್ಮ ಯಜಮಾನ ಶ್ರೀ ಪರೂತಗೌಡ

ಹಾಗೂ ಕೆಲವು ಸಂಗಡಿಗರೊಂದಿಗೆ ಎಲ್ಲ ಆಹಾರ ಸಾಮಗ್ರಿ ಜೊತೆಗೆ ಬಂದು ಪಾರ್ಥಿವ ಶರೀರ ಅಂತ್ಯಕ್ರಿಯೆ ಜರುಗಿ, ಶ್ರೀ ಅನ್ನದಾನ ಮಹಾಸ್ವಾಮಿಗಳ ಮಠದ ಹೊರ ಅಂಗಳದಲ್ಲಿಯೇ ಪ್ರಥಮ ಆತ್ಮಶಾಂತಿ ಪುಣ್ಯತಿಥಿಯನ್ನು ಸಕಲ ವೈಭವದಿಂದ, ಧರ್ಮಸಂಪ್ರದಾಯದಂತೆ ಆಚರಿಸಿ ತಿಥಿ ಆಚರಣೆಯನ್ನು ಸ್ಥಾಪಿಸುವ ಮೂಲಕ ಸಂಪ್ರದಾಯ ಪ್ರಾರಂಭಿಸಿದರು.

ಮುಂದಿನ ವರ್ಷ ಇದೇ ತಿಥಿಯನ್ನು ನರೇಗಲ್ಲಿನ ಕಂತಿಮಲ್ಲಯ್ಯನ ಗುಡಿಯಲ್ಲಿ ಎಲ್ಲ ಜನರೂ ಕೂಡಿ ಭಯಭಕ್ತಿಯಿಂದ ಆಚರಿಸಿದರು. ಅಷ್ಟರಲ್ಲಿ ಬರಬರುತ್ತ ಜನಸಂದಣಿ ಅಧಿಕವಾಗಹತ್ತಿತು ಮತ್ತು ಕೆಲವರು ಈ ಕಾರ್ಯವನ್ನು ಯಾವ ಸ್ಥಾನದಲ್ಲಿ ಮೂವತ್ತು ವರ್ಷ ಕುಳಿತು ತಪ್ಪಸ್ಸು ಮಾಡಿದ್ದಾನೋ, ಆ ಡೋಣಿಕಲ್ಲ ಏರೆಯ ಪ್ರದೇಶದಲ್ಲಿ ಮಾಡಬೇಕೆಂದು ಸೂಚನೆ ಮಂಡಿಸಿದರು. ಇದು ಎಲ್ಲರಿಗೂ ಒಪ್ಪಿಗೆ ಆಯಿತು. ಅದರಂತೆ, ಮರುವರ್ಷ ಅದೇ ಡೋಣೀಕಲ್ಲ ಏರಿ ಜಾಗೆಯಲ್ಲಿ ಅತೀ ವೈಭವದಿಂದ ತಿಥಿ ಆಚರಿಸಿದರು. ಹೀಗೆ ಪ್ರತಿ ವರ್ಷ ಆತನ ಆರಾಧನೆಗೆ ಜನರು ಬರುವದು ಅಧಿಕವಾಗಹತ್ತಿತು. ಇದರಿಂದ, ಒಂದು ಸುತ್ತ್ಯಾರ್ಹ ಪುಣ್ಯ ಕಾರ್ಯ ಪ್ರಾರಂಭವಾದುದು ಎಲ್ಲ ಜನರಿಗೆ ಅತೀವ ಸಂತೋಷವನ್ನು ಉಂಟು ಮಾಡಿತ್ತು

## ಹಠಯೋಗಿ ಶ್ರೀ ಹುಚ್ಚೀರಪ್ಪಜ್ಜನವರ ರಥೋತ್ಸವ

ಡೋಣೆಕಲ್ಲ ಏರಿ ಕ್ರಮೇಣ ಯಾತ್ರಾ ಸ್ಥಳವಾಯ್ತು, ಜನರು ಹಣ್ಣು, ಕಾಯಿ ಮುಂತಾದವುಗಳನ್ನು ತೆಗೆದುಕೊಂಡು ಬರಹತ್ತಿದರು. ನರೇಗಲ್ಲ ಪ್ರಮುಖರು ಮತ್ತು ಪರೂತಗೌಡ, ಅಮೀರವ್ವ ಮುಂತಾದವರು ಇರುವಾಗ ಒಬ್ಬ ಭಕ್ತ ಇದೇ ಪುಣ್ಯತಿಥಿಯನ್ನು ಅಜ್ಜನ ಜಾತ್ರೆಯನ್ನಾಗಿ ಏಕೆ ಮಾಡಬಾರದು ಎಂದು ಸಲಹೆಯನ್ನು ಕೊಟ್ಟನು. ಅದು ಎಲ್ಲರಿಗೂ ಒಪ್ಪಿಗೆಯಾಯ್ತು, ಕ್ರಮೇಣ ಪುಣ್ಯತಿಥಿಯೇ ಜಾತ್ರೆಯಾಗಿ ಮಾರ್ಪಟ್ಟರೂ, ಮುಂದೆ ಜಾತ್ರೆಯನ್ನು ಮಾಘ ಶುದ್ಧ ದಶಮಿಗೆ ಮಾಡುವದೆಂದು ನಿರ್ಧರಿಸಲಾಯಿತು.

ಮುಂದೆ ಭಕ್ತ ಪರೂತಗೌಡರು ಜಾತ್ರೆಗೆ ಗದುಗಿನ ಶ್ರೀ ವೀರನಾರಾಯಣ ದೇವಸ್ಥಾನದ ಜೋಡು ತೇರುಗಳನ್ನು ತಂದು ಜಾತ್ರೆ ನೆರವೇರಿಸಿದರು. ಹೀಗೆ ಪರ ಊರಿಂದ ತೇರು ತಂದು ಜಾತ್ರೆ ಮಾಡುವದು ಭಾರವಾಗಹತ್ತಿದ್ದರಿಂದ ಅಜ್ಜನಿಗೆ ಸ್ವಂತ ತೇರೇ ಆಗಬೇಕೆಂದು ವಿಚಾರ ಬಂದಿತು. ಆಗ ಮತ್ತೊಬ್ಬ ಭಕ್ತ ಮುಂದೆ ಬಂದು ತೇರಿಗಿಂತಲೂ ಅಜ್ಜನ ಗದ್ದುಗೆ ಹಾಗೂ ಮಠ ಅವಶ್ಯ ಮಾಡಬೇಕೆಂದು ಸೂಚಿಸಿದನು. ಅಷ್ಟರಲ್ಲಿ ಅಲ್ಲಿಯೇ ಇದ್ದ ಶ್ರೀ ಕಲ್ಲನಗೌಡ ಉದ್ದಣ್ಣವರ ಎಂಬ ಜಂಗಮ ಭಕ್ತ ಮಠ ಕಟ್ಟುವುದಕ್ಕಾಗಿ ಅದೇ ಸ್ಥಳದಲ್ಲಿಯೇ ಇರುವ ತನ್ನ ಹೊಲದಲ್ಲಿ ೧೦ ಗುಂಟೆ ಹೊಲವನ್ನು ಸನ್ ೧೯೭೭ನೇ ಇಸ್ವಿಯಂದು ದಾನಪತ್ರ ಮಾಡಿಕೊಟ್ಟುಬಿಟ್ಟನು.

ಇದು ಎಲ್ಲ ಭಕ್ತರಿಗೂ ಮಠ ಹಾಗೂ ಗದ್ದುಗೆ ಕಟ್ಟಲು ಪ್ರೇರಣೆ ಯಾಯ್ತು. ಆಗ ನರೇಗಲ್ಲಿನ ಪ್ರಸಿದ್ಧ ವೈದ್ಯರಾದ ಶ್ರೀ ಚನ್ನಯ್ಯನವರು ಚನ್ನಪ್ಪಮಠ ಅವರು ದಾನದ ಭೂಮಿಯಲ್ಲಿ ಒಂದು ಶುಭ ಮುಹೂರ್ತದಲ್ಲಿ ಒಡ್ಡರು ಹಾಗೂ ವಿಶ್ವಕರ್ಮ ಸಮಾಜದ ಕುಶಲ ಕರ್ಮಿಗಳನ್ನು ಕೈಕೆಳಗೆ ತೆಗೆದುಕೊಂಡು ವಿಶಿಷ್ಟ ಗುಪ್ತ ತಂತ್ರಾಧಾರಿತ ಪ್ರಾಣ ಹಾಗೂ ಶಕ್ತಿ ಆಹ್ವಾನಯೋಗಾತ್ಮಕ ಒಂದು ಪವಿತ್ರ ವಸ್ತುವನ್ನು ಆ ಗದ್ದುಗೆಯಲ್ಲಿ ಪ್ರತಿಷ್ಠಾಪಿಸಿ, ಗದ್ದುಗೆಯನ್ನು ಪೂರ್ಣ ನಿರ್ಮಿಸಿದರು. ಮುಂದೆ ಆ ಗದ್ದುಗೆಯ ಶುದ್ಧೀಕರಣ–ಅಭಿಷೇಕಾದಿ ಶಾಸ್ತ್ರಾಧಾರ ಕ್ರಿಯೆಗಳನ್ನು ಯೋಗ್ಯ ಜನರಿಂದ ಮಾಡಿಸಿದರು.

ಗದ್ದುಗೆ ರಚನೆಯಾದ ನಂತರ ಜಕ್ಕಲಿಯ ದೊಡ್ಡ ಮೇಟಿ ಶ್ರೀ ಅಂದಾನಪ್ಪನವರು, ಹೊಸಪೇಟೆಯ ಮನಸಾಲಿ ರಾಚಪ್ಪನವರು, ನರೇಗಲ್ಲಿನ ಬಂದನಗೌಡ ಸಂಕನಗೌಡ್ರ ಅವರು ಗದ್ದುಗೆ ಕಟ್ಟಡ ಮಾಡಿಸಿ ಅದರ ಮೇಲ್ಛಾವಣಿ ಎಷ್ಟೇ ಕಷ್ಟಪಟ್ಟು ಹಾಕಿಸಿದರೂ ನಿಲ್ಲಲಿಲ್ಲ. ಹೀಗೆ ಬಯಲೊಳಗಿರುವದೇ ಅಜ್ಜನಿಗೆ ಬೇಕಾಗಿರುವದೆಂದು ಅದನ್ನು ಅಲ್ಲಿಗೇ ಕೈಬಿಟ್ಟು ಮುಂದಿನ ಮಠವನ್ನು ಕಬ್ಬಿಣ ಡರಾಸುಗಳಿಂದ ಭದ್ರವಾಗಿ ಕಟ್ಟಿಸಿದರು.

ನೆಲಕ್ಕೆ ನಿಡಗುಂದಿಯ ಅನಗೌಡ್ರ ಪಾಟೀಕಲ್ಲು ಹೊಂದಿಸಿದರು. ಸಾರ್ವಜನಿಕರ ಹಣದಿಂದ ತೇರು ನಿರ್ಮಿಸಲಾಯಿತು. ಅದರ ಕಲಶ ಸ್ಥಾಪನೆಯ ಖರ್ಚನ್ನು ಬಸವಣ್ಣೆಪ್ಪ ಲಕ್ಷ್ಮೇಶ್ವರರವರು ವಹಿಸಿಕೊಂಡರು. ಇನ್ನು ಬರು ಹೋಗುವ ಜನರಿಗೆ ನೆರಳನ್ನು ನರೇಗಲ್ಲಿನ ಹಲಗೇರಿ ಮಲ್ಲೇಶಪ್ಪ ಹಾಗೂ ಅವರ ಬಂಧುಗಳು ನಿರ್ಮಿಸಿಕೊಟ್ಟರು. ಇದೆಲ್ಲ ಆದ ನಂತರ ಜನರಿಗೆ ಕುಡಿಯುವ ನೀರಿನ ಕೊರತೆ ಕಂಡು ಸುಪ್ರಸಿದ್ಧ ದಾನವೀರ ಬಸರೀಗಿಡದ ವೀರಪ್ಪನವರು ಮಠದ ಮಗ್ಗುಲಿಗೆ ಭಾವಿ ತೋಡಿಸಿದರು. ಮತ್ತೊಬ್ಬ ಭಕ್ತಪ್ರೇಮಚಂದ ಶೇಟಜೀಯವರು ಅಲ್ಲಿಯೇ ಮಠದ ಸಮೀಪ ಕೆರೆ ಕಟ್ಟಿಸಿದರು. ಹೀಗೆ ಅನೇಕ ಜನರು ಪ್ರತ್ಯಕ್ಷ ಹಾಗೂ ಅಪ್ರತ್ಯಕ್ಷ ಸಹಾಯ ಮಾಡಿದ್ದರಿಂದ ಅಜ್ಜನ ಜಾತ್ರೆಗೆ ಬರಲು ಅನುಕೂಲತೆಗಳು ಉಂಟಾದವು.

ಮುಂದೆ ಅಜ್ಜನ ಜಾತ್ರೆಗೆ ಹ್ಯಾಂಡಬಿಲ್ಲು ಮುದ್ರಣಕ್ಕೆ ಆತನ ಫೋಟೋದ ಅವಶ್ಯಕತೆ ಬಿತ್ತು. ಆಗ ಕಲಾನಿಪುಣರು, ಪ್ರಸಿದ್ಧ ವೈದ್ಯರು, ಸರ್ವ ವಿದ್ಯಾಪಾರಂಗತರೂ ಆದ ಮತ್ತು ಶ್ರೀ ಚನ್ನಯ್ಯ ಚನ್ನಪ್ಪಮಠದ ಸಹೋದರರೂ ಆದ ಶ್ರೀ ಶಿವಮೂರ್ತಯ್ಯನವರು ಚಪ್ಪಮಠ ಅವರು ತಮ್ಮ ಹಸ್ತಕುಶಲತೆಯಿಂದ ಶ್ರೀ ವೀರಪ್ಪಜ್ಜನವರ ಕಿಟ್ಟದಗೊಂಬೆಮಾಡಿ ಅದಕ್ಕೆ ಬಣ್ಣಮಾಡಿ, ವೇಷಭೂಷಣಗಳನ್ನು ತೊಡಿಸಿ ತಾವೇ ಸ್ವತಃಫೋಟೋಹೊಡೆದು, ಅದರ ಪ್ರತಿಚಿತ್ರದಿಂದಲೇ ಬ್ಲಾಕ್ ಮಾಡಿಸಿಕೊಟ್ಟರು. ಇದರಿಂದ ಜಾತ್ರೆಯ ಪ್ರಚಾರ ಹೆಚ್ಚಾಯಿತು. ಅನಂತರ ಜಾತ್ರೆಯನ್ನು ವೈದ್ಯ ಶಿವನಗೌಡ ಪಾಟೀಲರವರು

ಮಾಡಿದರು. ಕೆಲವೊಮ್ಮೆ ಎಷ್ಟೇ ವಿಘ್ನಗಳು ಬಂದರೂ ಅವುಗಳನ್ನು ಲೆಕ್ಕಿಸದೇ ನರೇಗಲ್ಲಿನ ಮುಖಂಡರಾದ ದಿವಂಗತ ಬಂದನಗೌಡ ಸಂಕನಗೌಡ್ರ ಅವರು ಆಜೀವ ಪರ್ಯಂತ ಜಾತ್ರೆ ನಡೆಸಿಕೊಂಡು ಬಂದರು. ಇದು ಸ್ಮರಿಸುವಂತಹದು.

ಶ್ರೀ ವೀರಪ್ಪಜ್ಜನ ಜಾತ್ರೆಯಲ್ಲಿ ಜಾತಿ–ಮತ–ಪಂಥಗಳ ಭೇದ ಇಲ್ಲ. ಎಲ್ಲರೂ ಇಲ್ಲಿ ತನು–ಮನ–ಧನಗಳನ್ನು ಸಲ್ಲಿಸುತ್ತಾ ಬಂದುದರಿಂದ ಜಾತ್ರೆ ಇಂದು ನಾವೆಲ್ಲರೂ ನೋಡುತ್ತಿರುವಂತೆ ಸೌಹಾರ್ದಯುತವಾಗಿ ಸಾಗಿದೆ.

ಬಾಳೇಹೊನ್ನೂರಿನ ಶ್ರೀ ರಂಭಾಪುರಿಪೀಠದ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ವೀರಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳವರ ಅಡ್ಡಪಲ್ಲಕ್ಕಿ ಮಹೋತ್ಸವ ಸನ್ ೧೯೫೪ರಲ್ಲಿ ನರೇಗಲ್ಲ ನಗರದಲ್ಲಿ ವಿಜೃಂಭಣೆಯಿಂದ ಜರುಗಿತು. ಧರ್ಮಸಮಾರಂಭದ ನಂತರ ತಾವು ನೆಲೆಸಿದ ಮುಕ್ತಿಮಂದಿರ ಕ್ಷೇತ್ರಕ್ಕೆ ದಯಮಾಡಿಸಿದರು. ಆಗ ಜಗದ್ಗುರುಗಳವರು ಶಿವಪೂಜೆಮಾಡಿ ರಾತ್ರಿ ಪವಡಿಸಿದಾಗ ಸ್ವಪ್ನದಲ್ಲಿ ''ಹರಕು ಬಟ್ಟೆ ಧರಿಸಿಕೊಂಡ ವ್ಯಕ್ತಿ ಕಾಣಿಸಿಕೊಂಡರು. ಆಗ ಸನ್ನಿಧಿಯವರು ನೀನಾರು? ಎಂದು ಪ್ರಶ್ನಿಸಿದರು. ಆಗ ನಾನು ಹುಚ್ಚವೀರಾ ಎಂದು ಹೇಳಿದಂತಾಯ್ತು ಆಗ ಜಗದ್ಗುರುಗಳಿಗೆ ಹುಚ್ಚವೀರಜ್ಜನ ಜೀವನದ ಸಮಗ್ರ ಚಿಂತನ ಕಣ್ಣೆದುರಿಗೆ ಗೋಚರಿಸಿತು. ಉನ್ನತ ಮೌಲ್ಯಗಳನ್ನು ಹೋಂದಿದ ಆಧ್ಯಾತ್ಮಿಕದ ಉತ್ತುಂಗ ಶಿಖರ ಏರಿದ ದೊಡ್ಡಮನುಷ್ಯ. ಅವನು ನೆಲಸಿದ ಪುಣ್ಯತಾಣಕ್ಕೆ ಸನ್ನಿಧಿಹೋಗಿ ಬರಬೇಕಾಗಿತ್ತು, ಕಾರ್ಯಕ್ರಮದ ಒತ್ತಡದಿಂದ ಹೋಗಲು ಸಾಧ್ಯವಾಗಲಾರದ್ದಕ್ಕೆ ವಿಷಾದಿಸಿ. ಕೂಡಲೇ ನರೇಗಲ್ಲ ಭಕ್ತ ಸಮೂಹಕ್ಕೆ ನಿರೂಪಕೊಟ್ಟು ಕೋಡಿಕೊಪ್ಪಕ್ಕೆ ಬರುವದಾಗಿ ತಿಳಿಸಿದರು. ಅದೇ ಪ್ರಕಾರ ಸನ್ನಿಧಿ ದಯಮಾಡಿಸಿ ಸ್ವತಃ ಹೂಹಾರ ಹಾಕಿ ಪೂಜೆಸಲ್ಲಿಸಿದರು. ಅಲ್ಲದೇ ಮತ್ತೆ ಮಾಸಪರ್ಯಂತರ ತಮ್ಮ ಲಿಂಗಾನುಷ್ಠಾನವನ್ನು ಸಹಮಾಡಿದರು. ಇಲ್ಲಿಗೆ ಬಂದು ಹೋದ ದಿನದಿಂದ ಶ್ರೀ ಜಗದ್ಗುರುಗಳಲ್ಲಿ ವೈರಾಗ್ಯ ಭಾವಬಲಿಯತೊಡಗಿತು. ಮೈಮೇಲೆ ತಟ್ಟಿನ ಹೊದಿಕೆ ಕೊರಳಲ್ಲಿ ರುದ್ರಾಕ್ಷಿ, ಮತ್ತು ಮೈತುಂಬ ಭಸ್ಮ ಧರಿಸಿದ್ದನ್ನು ಕಾಣಬಹುದು. ಇಂಥ ಸ್ಥಳಕ್ಕೆ ಇಂದಿನ ಜಗದ್ಗುರು ಪ್ರಸನ್ನ ರೇಣುಕ ವೀರಸೋಮೇಶ್ವರ ಶಿವಾಚಾರ್ಯ ಭಗವತ್ಪಾದರು ಸನ್ ೧೯೯೩ ನೇ ಡಿಸೆಂಬರ ೧೦, ರಂದು ದಯಮಾಡಿಸಿದ್ದನ್ನು ನಾವಿಲ್ಲಿ ಸ್ಮರಿಸಬಹುದು.

### ಗದ್ದುಗೆ ಮಹಿಮೆ (೨)

ಶ್ರೀ ಗೊಡಚಿ ವೀರಭದ್ರೇಶ್ವರ ದೇವಸ್ಥಾನದ ಧರ್ಮದರ್ಶಿಗಳು, ತೊರಗಲ್ಲ ಸಂಸ್ಥಾನದ ರಾಜರಿಗೆ ಆಪ್ತಕಾರ್ಯದರ್ಶಿಗಳಾಗಿದ್ದರು. ಅಧಿಕ ಸಂಖ್ಯೆಯ ಭಕ್ತಾದಿಗಳನ್ನು ಹೊಂದಿದ ಶ್ರೀ ವೀರಭದ್ರ ದೇವಸ್ಥಾನ ಒಳ್ಳೆಸಂಪದ್ಭರಿತವಾಗಿತ್ತು.

ಇದರಿಂದಾಗಿ ತೊರಗಲ್ಲ ಸಂಸ್ಥಾನಿಕರ ಮಕ್ಕಳಿಗೆ ಧರ್ಮದರ್ಶಿಗಳ ಮೇಲೆ ಸಂಶಯ ಬಂದದ್ದರಿಂದ ಅವರ ವಿಷಯವಾಗಿ ಅನೇಕ ರೀತಿಯ ಅಪಪ್ರಚಾರಗಳು ಪ್ರಾರಂಭವಾದವು. ಇಷ್ಟೇ ಅಲ್ಲ ಊರವರು ಸಹ ಧರ್ಮದರ್ಶಿಗಳಿಗೆ ಸಾಮಾಜಿಕ ಬಹಿಷ್ಕಾರ ಹಾಕಿದ್ದರಿಂದ ಧರ್ಮದರ್ಶಿಗಳು ಊರ ಹೊರಗಿನ ತಮ್ಮ ಹೊಲದಲ್ಲಿ ಇರಹತ್ತಿದರು. ಒಂದು ದಿನ ರಾತ್ರಿ ಧರ್ಮದರ್ಶಿಗಳು ಮಲಗಿದ್ದಾಗ, ಅವರಿಗೆ ಸ್ವಪ್ನ ದೃಷ್ಟಾಂತವಾಯಿತು. ಅದರಲ್ಲಿ ಹರುಕು ಬಟ್ಟೆ ಹಾಕಿಕೊಂಡ ಒಬ್ಬ ವ್ಯಕ್ತಿ ಕಾಣಿಸಿಕೊಂಡು, ''ಕೋಡಿಕೊಪ್ಪಕ್ಕೆ ಬಾ, ಬರುವಾಗ ಹೊಲದ ಮಣ್ಣು ತಗೊಂಡ ಬಾ'' ಎಂದು ಹೇಳಿದಂತಾಯಿತು. ಆದರೆ, ಧರ್ಮದರ್ಶಿಗಳಿಗೆ ಕೋಡಿಕೊಪ್ಪ ಎಲ್ಲಿದೆ? ಎಂಬುದೇ ಗೊತ್ತಿರಲಿಲ್ಲ.

ಒಂದು ಸಲ ಧರ್ಮದರ್ಶಿಗಳು ನರಗುಂದದಲ್ಲಿ ತಮ್ಮ ಒಬ್ಬ ಶ್ರೀಮಂತ ಸ್ನೇಹಿತನ ಭೇಟ್ಟಿಗೆ ಹೋದಾಗ, ಮಾತಿನ ಸಂದರ್ಭದಲ್ಲಿ ಕೋಡಿಕೊಪ್ಪದ ಪ್ರಸ್ತಾಪ ಬಂದಿತು. ಅದಕ್ಕೆ ಅವರ ಸ್ನೇಹಿತರು, 'ಕೋಡಿಕೊಪ್ಪ ರೋಣ ತಾಲೂಕಿನ ನರೇಗಲ್ಲ ಗ್ರಾಮದ ಹತ್ತಿರ ಇದೆ' ಎಂದು ಹೇಳಿದರು.

ಹೀಗೆ, ಧರ್ಮದರ್ಶಿಗಳಿಗೆ ಕೋಡಿಕೊಪ್ಪದ ಮಾಹಿತಿ ದೊರೆತ ಕೂಡಲೇ ಅವರು ತಮ್ಮ ಹೊಲದ ಮಣ್ಣು ತೆಗೆದುಕೊಂಡು ಕೋಡಿಕೊಪ್ಪಕ್ಕೆ ಬಂದು ಮಠದಲ್ಲಿ ಗದ್ದುಗೆಯ ದರ್ಶನ ಮಾಡಿಕೊಂಡು, ತಾವು ತಂದ ಹೊಲದ ಮಣ್ಣನ್ನು ಆ ಗದ್ದುಗೆಯ ಮುಂದೆ ಸುರುವಿ ಹೊರಟು ಹೋದರು.

ಇದಾದ ಸ್ವಲ್ಪೇ ದಿನಗಳಲ್ಲಿ ಶ್ರೀ ಅಜ್ಜನ ಕರೆ ಸ್ವಪ್ನದಲ್ಲಿ ಆಗಿ, ಬರಲು ಹೇಳಿದರು. ಅದರಂತೆ ಕೆಲವರೊಂದಿಗೆ ಧರ್ಮದರ್ಶಿಗಳು ಮಠಕ್ಕೆ ಬಂದರು. ಅಂದು ಅಜ್ಜನ ಗದ್ದುಗೆಯ ಮೇಲೆ ಎರಡು ಬೆಕ್ಕುಗಳು ಜಗಳಾಡುತ್ತಿದ್ದ ದೃಶ್ಯ ಇವರ ಕಣ್ಣಿಗೆ ಬಿತ್ತು, ಹಾಗೆ, ತಾವು ಗದ್ದುಗೆಗೆ ನಮಸ್ಕರಿಸಿ, ಕೆಲಕಾಲ ಕುಳಿತು ಮರಳಿ ಊರಿಗೆ ಹೋದರು.

ಈ ಸೂಚನೆಯಂತೆ ಅವರ ಬಗ್ಗೆ ತಪ್ಪು ತಿಳಿದುಕೊಂಡವರೆಲ್ಲ ತಮ್ಮ ತಮ್ಮಲ್ಲಿ ಜಗಳಾಡಿ ಇವರೊಂದಿಗೆ ರಾಜಿ ಆದರು, ಮತ್ತು ತೊರಗಲ್ಲ ಸಂಸ್ಥಾನಿಕರ ಮಕ್ಕಳು ಸಂಧಾನ ಮಾಡಿಕೊಂಡರು. ಊರವರು ಕೂಡಾ ಬಹಿಷ್ಕಾರ ಹಿಂದಕ್ಕೆ ಪಡೆದುಕೊಂಡರು. ಎಲ್ಲ ಜನ ಮೊದಲಿನಂತೆ ಸ್ನೇಹದಿಂದ ಇರಹತ್ತಿದರು. ಅಜ್ಜ ತರಲು ಹೇಳಿದ ಹೊಲದ ಮಣ್ಣಿನ ಪ್ರಭಾವ, ಅದು ಎತ್ತರದ ಗುಡ್ಡದಂತಿದ್ದ ಪ್ರದೇಶ. ಇಂದು ತೋಟವಾಗಿ ಪ್ರಫುಲ್ಲಿತ ಹಸಿರು ಸಸಿಯನ್ನು ನೀಡಹತ್ತಿದೆ ಎಂದು ಜನ ಸ್ಮರಿಸಿಕೊಳ್ಳುತ್ತಾರೆ.

## ಗದ್ದುಗೆಯ ಮಹಿಮೆ (೪)

ನಿಡಗುಂದಿಯ ಶ್ರೀ ಅನ್ನದಾನೇಶ್ವರ ಹೈಸ್ಕೂಲಿನ ಶಿಕ್ಷಕರ ಮಗ ಆಗಲೇ ಎಂಟು ಹತ್ತು ವರ್ಷದವನಾಗಿದ್ದರೂ ತನ್ನ ಬಲಗೈ ಹೆಬ್ಬೆರಳು ಚೀಪುವಚಟ ಹೋಗಿರಲಿಲ್ಲ. ಚಟಬಿಡಸಲು ಸಾಕಷ್ಟು ಪ್ರಯತ್ನ ಮಾಡಿದರೂ ಸಫಲವಾಗಲಿಲ್ಲ. ಕಡೆಗೆ ಅವರು ಮಗನನ್ನು ಶ್ರೀ ಹುಚ್ಚೀರಪ್ಪಜ್ಜನ ಮಠಕ್ಕೆ ಕರೆದುಕೊಂಡು ಬಂದು, ಮಗನ ಹೆಬ್ಬೆರಳು ಚೀಪುವಚಟ ದೂರಮಾಡಬೇಕೆಂದು ಶ್ರೀ ಅಜ್ಜನಿಗೆ ಬೇಡಿಕೊಂಡು, ಆತನ ಅಂಗಾರವನ್ನು ಮಗನಿಗೆ ಹಚ್ಚಿ ಮರಳಿ ಹೋದರು. ಎಂಥಾ ಮಹಿಮೆ! ಮಾರನೆಯ ದಿನ ಬೆಳಗಿನಿಂದ ಆ ಮಗು ಬೆರಳು ಚೀಪುವದನ್ನೇ ಬಿಟ್ಟುಬಿಟ್ಟ.

## ಗದ್ದುಗೆಯ ಮಹಿಮೆ (೫)

ಗದುಗಿನ ಒಬ್ಬ ಮುಸಲ್ಮಾನ ಹುಡುಗನ ಕಾಲಿಗೆ ಹುಣ್ಣಾಯಿತು. ದಿನ ನಿತ್ಯ ಡಾಕ್ಟರು, ದವಾಖಾನೆ ಚಿಕಿತ್ಸೆ ಮಾಡಿದರೂ ಎಳ್ಳಷ್ಟೂ ಗುಣವಾಗಲಿಲ್ಲ. ಬದಲಿಗೆ ಉಲ್ಬಣವಾಗಹತ್ತಿತ್ತು. ಮುಂಬೈಗೆ ತೋರಿಸಿ ಬಂದರು, ಅಲ್ಲಿ ಅವರು ಕಾಲು ಕತ್ತರಿಸಲು ಹೇಳಿದರು. ಬಡವನಾದುದರಿಂದ, ಹಾಗೇ ಬಂದ.

ಗೆಳೆಯನು ಇವನನ್ನು ಕಾಣಲು ಬಂದ. ಇವನ ರೋಗ ನೋಡಿ ಹೋದ. ಅಂದೇ ಗೆಳೆಯನ ಕನಸಿನಲ್ಲಿ ಶ್ರೀ ಹುಚ್ಚೀರಪ್ಪಜ್ಜ ಬಂದು, ಅವನ ಮಿತ್ರರೋಗಿಯನ್ನು ಮಠಕ್ಕೆ ಕರೆದುಕೊಂಡು ಬರಲು ಹೇಳಿದ. ಇದರಿಂದ ಘಾಬರಿಯಾದ ಹುಡುಗ ಈ ವಿಷಯವನ್ನು ಅವರ ಮನೆಯಲ್ಲಿ ತಿಳಿಸಿದ. ನಂಬಲಿಲ್ಲ. ಆದರೂ ಗೆಳೆಯನೇ ಆ ಹುಡುಗನಿಗೆ ತಿಳುವಳಿಕೆ ಹೇಳಿ, ಏನಾಗುವದೋ ನೋಡೋಣವೆಂದು ಪರೀಕ್ಷಿಸಲು, ಆ ಹುಡುಗನನ್ನು ಒಂದು ಸಲ ಮಠಕ್ಕೆ ಜಟಕಾ ಬಂಡಿ ಮೇಲೆ ಕರೆತಂದು ಶ್ರೀ ಅಜ್ಜನ ಅಂಗಾರ, ಗದ್ದಿಗೆ ತೊಳೆದ ನೀರು ತಗೊಂಡು ಆತನ ಮೇಲೆ ಭಾರ ಹಾಕಿ ತಿರುಗಿ ಊರಿಗೆ ಹೋದರು. ಅಮವಾಸ್ಯೆ ಬರುವದರೊಳಗಾಗಿ ಅವನ ಕಾಲಿನ ಮಾಯದ ಹುಣ್ಣು ಮಾಯುವ ಲಕ್ಷಣ ಹೊಂದಿತ್ತು. ದಿನಾ ಗದ್ದುಗೆ ತೊಳೆದು ನೀರು ಹಾಕುವದು, ಅಂಗಾರ ಹಚ್ಚಿಕೊಳ್ಳುವದು ಮಾಡಿದ. ಐದು ಅಮವಾಸ್ಯೆ ಮಠಕ್ಕೂ ಬಂದ ಆ ಹುಡುಗನ ಕಾಲಿನ ಹುಣ್ಣು ಸಂಪೂರ್ಣ ಗುಣವಾಗಿತ್ತು. ಈ ಘಟನೆಯಿಂದ ಅವರೆಲ್ಲ ಆಶ್ಚರ್ಯ ಹೊಂದಿದರು. ಹಾಗೆಯೇ ಆನಂದವೂ ಆಗಿತ್ತು. ಗದ್ದುಗೆಗೆ ಹರಕೆ ಸಲ್ಲಿಸಿ, ತಮ್ಮ ಭಾರ ಮಟ್ಟಿಸಿದ್ದಾರೆ. ಈಗಲೂ ಅತ್ಯಂತ ಭಕ್ತಿಯಿಂದ ನಡೆದುಕೊಳ್ಳುತ್ತಾರೆ.

### ಉಪಸಂಹಾರ

''ದುರ್ಲಭಂ ತ್ರಯಮೇ ವೇತತ್ ಧೈವಾನುಗ್ರಹ ಹೇತುಕಂ।
ಮನುಷ್ಯತ್ವಂ ಮುಮುಕ್ಷತ್ವಂ ಮಹಾಜನಾಶ್ರಯಃ॥

ಹೀಗೆ, ಪೂಜ್ಯ ಶ್ರೀ ಶಂಕರಾಚಾರ್ಯರು ಹೇಳಿದಂತೆ, ಮಾನವ ಜನ್ಮ ಪ್ರಾಪ್ತವಾಗುವದು. ಅದರಲ್ಲಿ ಮುಮುಕ್ಷುಗಳಾಗುವದು ಮತ್ತು ಮಹಾಜನ ಸಂಶ್ರಯದಲ್ಲಿರುವದು. ದೈವಾನುಗ್ರಹ ಹೇತುಕವಾಗಿದೆ. ನಮ್ಮ ಚರಿತ್ರೆನಾಯಕನಾದ ಶ್ರೀ ಹುಚ್ಚೀರಪ್ಪಜ್ಜನವರು ಮಾನವರಾಗಿ ಜನ್ಮತಾಳಿ, ಮುಮುಕ್ಷಗಳಾಗಿ, ಕೊನೆಗೆ ಮಹಾಜನ ಸಂಶ್ರಯದಿಂದ ಮಹಾ ದೇವನೇ ಆಗಿಬಿಟ್ಟರು.

ಭಗವಂತನಲ್ಲಿ ತಾದಾತ್ಮ್ಯ ಹೊಂದಿದವರನ್ನು ಭಕ್ತರು ಎಂದು ಕರೆಯಲಾಗುತ್ತದೆ. ಏಕೆಂದರೆ ಭಕ್ತ ಭಗವಂತನಲ್ಲಿ ಏಕರಸವಾಗಿ ಬೆರೆಯಲು ಭಕ್ತಿಯೆ ವಿನಃ ಬೇರೆ ಉಪಾಯವೇ ಇಲ್ಲ. ಅದಕ್ಕಾಗಿ ಶ್ರೀ ಬಸವಣ್ಣನವರು, 'ವೇದಪ್ರಿಯ ಶಿವನೆಂಬರು ವೇದಪ್ರೀಯನಲ್ಲವಯ್ಯಾ, ನಾದಪ್ರೀಯ ಶಿವನೆಂಬರು, ನಾದಪ್ರೀಯ ಶಿವನಲ್ಲವಯ್ಯಾ. ವೇದನೋದಿದ ಬ್ರಹ್ಮಂಗೆ ಶಿವಹೋಯಿತು. ನಾದವ ನುಡಿಸಿದ ರಾವಣಂಗೆ ಅರಿಯಾಯುಷ್ಯವಾಯಿತು. ಆದ ಕಾರಣ, ಶಿವನು ವೇದಪ್ರೀಯನೂ ಅಲ್ಲ, ನಾದಪ್ರೀಯನೂ ಅಲ್ಲ, ಕೇವಲ ಭಕ್ತಪ್ರೀಯ ನಮ್ಮ ಕೂಡಲಸಂಗಮದೇವ' ಎಂದು ಹೇಳಿದರು.

ಶ್ರೀ ಹುಚ್ಚೀರಪ್ಪಜ್ಜನವರು ಸ್ವಯಂ ಶಿವನೇ ಆಗಿ ಬಿಟ್ಟರು. ಆದರೆ ಭಕ್ತಿಯ ಮೂಲಕ ಹೀಗಾದರೆಂಬ ಬಗ್ಗೆ ಅವರ ಚರಿತ್ರೆಯಲ್ಲಿ ಯಾವ ಉಲ್ಲೇಖವೂ ಇಲ್ಲ. ಶ್ರೀ ಶಂಕರಾಚಾರ್ಯರು ''ಸ್ವಸ್ವರೂಪಾನು ಸಂಧಾನಂ ಭಕ್ತರಿತ್ಯಭಿಧೀಯತೆ'' ಎಂದು ಹೇಳಿರುವರು. ಅಂದರೆ ಸ್ವಸ್ವರೂಪದ ಅನುಸಂಧಾನವೇ ಭಕ್ತಿ, ಮವೈವಾಂಶೋ ಜೀವಲೋಕೋ ಜೀವ ಲೋಕಃ ಸನಾತನಃ'' ಎಂದು ಗೀತೆಯಲ್ಲಿ ಹೇಳಿದೆ. ಅಂದರೆ ಜೀವಾತ್ಮನು ಪರಮಾತ್ಮನ ಅಂಶವೇ ಆಗಿದ್ದಾನೆ.

ಅಗ್ನಿ ಹಾಗೂ ಅದರ ಕಿಡಿಗಳಲ್ಲಿ ಹೇಗೆ ಭೇದವಿಲ್ಲವೋ ಹಾಗೆ ಶಿವ–ಜೀವರಲ್ಲಿ ಯಾವ ಭೇದವಿಲ್ಲ, ಕಿಡಿಗೆ ಅವಕಾಶ ಸಿಕ್ಕರೆ ಅದು ಮಹಾ ಅಗ್ನಿಯೇ ಆಗುವಂತೆ ಜೀವನು ಅವಕಾಶ ಸಿಕ್ಕರೆ ಶಿವನಾಗುವನು. ಶ್ರೀ ಹುಚ್ಚೀರಪ್ಪಜ್ಜನವರು ನೆಲೆಸಿದ ಡೋಣಿ ಕಲ್ಲಏರಿ ಶ್ರೀ ಮೊಗ್ಗೆಯ ಮಾಯ ದೇವರು ''ಶರಣಂ ಶಾಂಭವ ಯೋಗಿ ಇರ್ದನೆಲನೇ ಕ್ಷೇತ್ರಂ ಪವಿತ್ರಂ ಪರಂ'' ಎಂದು ಹೇಳುವಂತೆ ಸುಕ್ಷೇತ್ರವಾಗಿ ಪರಿಣಮಿಸಿದೆ. ಅಲ್ಲಿ ಆತನು ಗದ್ದಿಗೆಯ ರೂಪದಲ್ಲಿ ನೆಲೆಸಿದ್ದರಿಂದ ಅದು ಅತ್ಯಂತ ಜಾಗ್ರತ ಸ್ಥಾನವಾಗಿ ಭಕ್ತರು ಮನೋಭೀಷ್ಠಗಳನ್ನು ಪೂರೈಸುತ್ತಿದೆ.

ಶ್ರೀ ಅಜ್ಜನ ವಾಕ್ಯದ ಪರಿಣಾಮರ್ಥವನ್ನು ತನ್ನ ಗದ್ದುಗೆ ಮಹಿಮೆಯಿಂದ ಉಳಿಸಿ ಹೋಗಿದ್ದಾನೆ. ಪಾರ್ಥಿವ ಶರೀರ ಬೇರೆ ಕಡೆಗೆ ನಿಕ್ಷೇಪವಾಗಿದ್ದರೂ, ಡೋಣಿ ಕಲ್ಲ ಏರಿಯಲ್ಲಿಯ ಶ್ರೀ ಅಜ್ಜನ ಮಠದಲ್ಲಿರುವ ಯೋಗ ಶರೀರ ಗದ್ದುಗೆ ಪ್ರಭಾವವೇ ಇದಕ್ಕೆ ಸಾಕ್ಷಿಯಾಗಿದೆ. ಇದು ದೇಹಾತೀತ ಸ್ಥಿತಿಯಲ್ಲಿದ್ದ ಅಜ್ಜನ 'ಸಂಕಲ್ಪ ಸಿದ್ಧಿಯ' ಪರಿಣಾಮ.

## ಪರಮಹಂಸ ಶ್ರೀ ವೀರಪ್ಪಜ್ಜ ಕೋಡಿಕೊಪ್ಪ ಇವರ ಸ್ತೋತ್ರ

ಯೋಗಿಪುಂಗವ ನಿತ್ಯಪರಶಿವ ? ಯೋಗಸಾಧಕ ಸಾಧುಜನಸಂ? ಯೋಗ ದಶವಿಧ ದಿವ್ಯನಾದ ವೀನೋದ ಚಿದ್ಬ್ರಹ್ಮಾ ॥ ರಾಗ ವರ್ಜಿತ ಯೋಗಿವೃತ ದಿವ್ಯಾಗಮ ಶೃತಿನುತ್ಯ ಬಹುವಿಧ । ರೋಗಪರಿಹರ ಸಲಹು ಶ್ರೀಗುರು ವೀರಯೋಗೀಶಾ ॥ ೧ ॥

ಈಶ ಮಹಿಮಾಗಾರ ನವನಿಧಿ ? ಕೋಶ ದುಷ್ಪ್ರಾರಬ್ಧ ಮೂಲ ವಿ । ನಾಶ ವಿಷಸರ್ಪಾಗ್ನಿ ವೃಶ್ಚಿಕ ಚೋರ ಭೀತಿಹರಾ ॥ ಕ್ಲೇಶ ಬಂಧನ ದೂರ ವೀರಮ । ಹೇಶನಿಗಮ ವಿಚಾರವರ ಜಗದೀಶ ಸಂತತ ಸಲಹು ಶ್ರೀಗುರು ವೀರಯೋಗೀಶಾ ॥ ೨ ॥

ಭೂತನಾಥ ಬ್ರಹ್ಮತತ್ವಾ । ಶೀತ ಭಸ್ಮವಿಲೇಪಿತಾಂಗ ಪುರಾತನಪ್ರಿಯ ಭಕ್ತ ಹೃತ್ವಿಮಲಾಬ್ಜ ಸನ್ನಿಲಯಾ ॥ ತ್ರಿಬಾಧಾನಾಶ ಶರಣ । ವ್ರಾತರಕ್ಷಣ ಕುತ್ಸಿತಗ್ರಹ । ಭೀತಿಹರ ಗುರು ಸಲಹು ಶ್ರೀ ಗುರು ವೀರಯೋಗೀಶಾ ॥ ೩ ॥

ಶರಣ ಸಂಕುಲ ಪಾಲಭಕ್ತಾ । ಮರ ಮಹೀರುಹ ಮೃತ್ಯುಭಯ । ಸಂಹರ ಜಿತೇಂದ್ರಿಯ ಸರ್ವಪಾಪವಿದೂರ ಶಿವಸಾರಾ ॥ ಮರಣ ಸಂಕಟ ಪಾಶ ದುಷ್ಟಜ್ವರ ಮಹಿಧ್ರು ಹ್ರಾದಿನಿ । ಸಚ್ಚರಿತ ಮದ್ಗುರು ಸಲಹು ಶ್ರೀಗುರು ವೀರಯೋಗೀಶಾ ॥ ೪ ॥

ಘೋರ ಭವಸಂತಮಸ ಭಾಸ್ಕರ । ಧೀರಮಾಯಾ ಭ್ರಾಂತಿಹರ ಗಂಭೀರ ಘನ ಯೋಗೀಂದ್ರ ಹೃದ್ವಿಮಲಾಬ್ಜಸನ್ನಿಲಯಾ ॥ ಚಾರುಸುಂದರ ವಕ್ತ್ರತತ್ವ ವಿಚಾರಶೀಲ ಮಹಾತ್ಮಾ ವಿಶ್ವಾ । ಕಾರ ಶಂಕರ ಸಲಹು ಶ್ರೀ ಗುರು ವೀರಯೋಗೀಶಾ ॥ ೫ ॥

ಕ್ರೂರ ಘೋರ ವ್ಯಾಧಿ ದುಸ್ಸಂಸಾರ ಬಂಧನ ದುಃಖಹೀನಾ । ಚಾರು ದುಶ್ಶೀಲಾದಿ ನೀಚವ್ಯಸನ ವಿಧ್ವಂಸಾ ॥ ಪಾರಮಾರ್ಥ ವಿಚಾರ ಮಂತ್ರಾಕಾರ ವೇದಾಂತಜ್ಞ ದಿವ್ಯಶ । ರೀರ ಗುರುವರ ಸಲಹು ಶ್ರೀ ಗುರು ವೀರಯೋಗೀಶಾ ॥೬॥

ನಿರಘದಿ ಜ. ಲಿಂಗೈಕ್ಯ ನಿಶ್ಚಲ । ನಿರವಯವ ನಿರ್ಮಾಯನಿಸುಗುಣಾ । ಭರಣ ತತ್ವಜ್ಞಾನ ಸಾಗರ ನಿತ್ಯನಿರವದ್ಯಾ । ವರಮಹೇಶ್ವರ ದಿವ್ಯಪಾದ । ಸ್ಮರಣ ಘನರುದ್ರಾಕ್ಷಮಾಲಾ । ಧರ ಮಹಾಪ್ರಭು ಸಲಹು ಶ್ರೀ ಗುರು ವೀರಯೋಗೀಶಾ ॥೭॥

ದುಷ್ಟಮರ್ದನ ಭೃತ್ಯನುತಿ । ಸಂತುಷ್ಟ ನಿತ್ಯಾನಂದ ಮಲಹರ । ಶಿಷ್ಯ ಜನ ಪರಿಪಾಲ ಮೃತ್ಯುಂಜಯ ಮಹಾಶಾಂತ ॥ ಅಷ್ಟಮದ ವಿಧ್ವಂಸ ಪರಿಭವ । ಕಷ್ಟಹರ ಕರುಣಾ ಪಯೋನಿಧಿ । ವೃಷ್ಟಿಕರ ಗುರು ಸಲಹು ಶ್ರೀ ಗುರು ವೀರಯೋಗೀಶಾ ॥ ೮ ॥

ಪರಮ ಪರಮಾರಾಧ್ಯ ಪಮುಚಾ । ಕ್ಷರಮಯ ಪ್ರಣವಾತ್ಯಚಿತ್ಸುಖ । ಭರಿತ ಭವಸಂಸಾರ ತಾಪಾರಣ್ಯ ವಾಯುಸಖಾ ॥ ಗಿರಿಸುತಾ ಧವರೂಪ ಮಹಿಮಾ । ಕರ ನಿರಂಜನ ಜಂಗಮ ಶ್ರೀ ಕರ ಸುಖಪ್ರದ ಸಲಹು ಶ್ರೀ ಗುರು ವೀರಯೋಗೀಶಾ ॥ ೯ ॥

ನಿರುಪಮಿತ ನಿಷ್ಕಾಮ ಕಾಮದ । ದುರಿತ ಭುಜಕುತಾರ ವಿಶ್ವಾ । ಭರಣ ದುರ್ಗಣನಾಶ ನಿರುಪದ್ರವ ಮಹಾದೇವಾ ॥ ಪರಮ ಪಾವನಮೂರ್ತಿ ಹಿಮಕರ ಕಿರಣ ಭೂಷಣ ಭಕ್ತವಂದಿತ । ಚರಣ ಗುರುವರ ಸಲಹು ಶ್ರೀಗುರು ವೀರಯೋಗೀಶಾ ॥ ೧೦ ॥

ಅಕ್ಷರಾತ್ಮಕ ಧುರಿತ ಗಜ ಹ । ರ್ಯಕ್ಷ ಶಿವಯೋಗೀಂದ್ರ ಶರಣಾ ॥ ಧ್ಯಕ್ಷ ವರನಿಟಿಲಾಕ್ಷ ಯೋಗಾನಂದ ಸಾನಂದಾ ॥ ಇಕ್ಷು ಕೋದಂಡಾರಿ ರೂಪವಿ । ಚಕ್ಷಣ ಪ್ರದನಿತ್ಯ ಸುಖಕರ ಯಕ್ಷವಂದಿತ ಸಲಹು ಶ್ರೀ ಗುರು ವೀರಯೋಗೀಶಾ ॥ ೧೧ ॥

ಕ್ಷುದ್ರಜನ ಸಂಹಾರ ಕುಲಹರ । ಭದ್ರಕಾಯ ಗುಣಾಢ್ಯ ಕುಶಲದ । ರುದ್ರಗಣ ನುತಿಲೋಲ ಪರಶಿವ ಸಚ್ಚಿದಾನಂದಾ ॥ ಅದ್ರಿವಾಸ ಮಹೇಶ ಬಹುದಾ । ರಿದ್ರ್ಯ ದುಃಖವಿನಾಶ ಗುರುವರ ಚಿದ್ರಮಣ ಸಲಹು ಶ್ರೀ ಗುರು ವೀರಯೋಗೀಶಾ ॥ ೧೨ ॥

ಜನನ ಮರಣ ವಿದೂರ ಭವಹರ । ಮುನಿವರೇಣ್ಯ ಮಲತ್ರಯಾಪಹ । ಘನವಿರಕ್ತ ಶುಭಾಂಗ ಪಾಪಧ್ವಂಸ ಲೋಕೇಶಾ ॥ ದಿನಕರಾದಿ ಸುರಾಭಿನತಪದ । ವನಜ ಪರಮಾರಾಧ್ಯ ಭಿಕ್ಷಾಟನೆ ಸುಖಪ್ರಿಯ ಸಲಹು ಶ್ರೀಗುರು ವೀರಯೋಗೀಶಾ ॥ ೧೩ ॥

ಸರ್ವಶಾಸ್ತ್ರಾರ್ಥಜ್ಞ ವಂದಿತ । ಸರ್ವತೋಮುಖ ವಿಶ್ವಮಯಭವ । ಸರ್ವಸಾಕ್ಷೀಭೂತ ದುರ್ಭಯನಾಶ ಪರಮೇಶಾ ॥ ಸರ್ವಜನ ಸಂಪ್ರಾರ್ಥಿತ ಪ್ರದ । ಗರ್ವನಾಶ ಮಹೋತ್ಸವಪ್ರದ । ಶರ್ವ ಸಂತತ ಸಲಹು ಶ್ರೀ ಗುರು ವೀರಯೋಗೀಶಾ ॥ ೧೪ ॥

ಭಾಳಲೋಚನ ಭಜಕನುತ ಕರು । ಣಾಲವಾಲ ಸದಾಶಿವಾಶ್ರಿತ । ಲೋಲ ಸುಜನಪ್ರೇಮ ಪರತರ ಚಿತ್ಕಲ ಬ್ರಹ್ಮಾ ॥ ಕಾಲ ಮಾಯಾತೀತ ಸತ್ಯ ಸುಶೀಲ ಭವರೋಗೈಕ್ಯ ವೈದ್ಯವಿಶಾಲ ಕೀರ್ತಿದ ಸಲಹು ಶ್ರೀ ಗುರು ವೀರಯೋಗೀಶಾ ॥ ೧೫ ॥

ರಂಗ ಸನ್ನುತ ಪಾದಕಿಲ್ಬಿಷ । ಭಂಗ ಕಲ್ಯಾಣಪ್ರದ ಶ್ರೀ ಮಂಗಲಾತ್ಮಕ ರೂಪ ಜಗದಾಧಾರ ಸುವಿಲಾಸಾ ॥ ಜಂಗಮೋತ್ತಮ ತುಂಗ ಮಹಿಮಾ । ಮಂಗಲಪ್ರದ ಲಿಂಗಕರ ಸಾರಂಗಧರ ಸುಖ ಸಲಹು ಶ್ರೀ ಗುರು ವೀರ ಯೋಗೀಶಾ ॥ ೧೬ ॥

ಸಾಮ ಗಾನ ವಿಲೋಲ ಸುಕವಿಪ್ರೇಮ । ವಿಶ್ವಾತೀತ ಭೂಧರಧಾಮ ಕರುಣಾಕರ ದಿಗಂಬರ ಸಾಧು ಸಂಪೂಜ್ಯಾ ॥ ಸೋಮಮುಖ ಸಂಜಾತ ಶರಣ । ಸ್ತೋಮಪಾಲಕ ಸಾತ್ವಿಕಪ್ರಿಯ ಕಾಮನಾಶಕ ಸಲಹು ಶ್ರೀಗುರು ವೀರಯೋಗೀಶಾ ॥ ೧೭ ॥

ಕುಜನ ಗರ್ವವಿಭಂಗ ಭಕ್ತ । ವ್ರಜವಿನೋದ ಪ್ರಮಥನುತ ಪಂ । ಕಜನಿಭಾನನ ಪುಣ್ಯವಿಗ್ರಹ ಸಿಂಧು ಗಂಭೀರಾ ॥ ಅಜನಿವಾಸ ಮಹಾ ಫಲಪ್ರದ । ವೃಜನ ಮೂಲಧ್ವಂಸಿ ವೃಷಭ ಧ್ವಜಶಿವಪ್ರದ ಸಲಹು ಶ್ರೀಗುರು ವೀರಯೋಗೀಶಾ ॥ ೧೮ ॥

ಪಾಪಹರ ಸರ್ವಜ್ಞ ಭವಪರಿ ತಾಪನಾಶಕ ಭೂಪ ಶೇವಿತ । ಗೋಪ ದುಃಖವಿದೂರ ದುಷ್ಟಾಚಾರ ವಿಧ್ವಂಸಾ ॥ ಕೋಪ ವಿಷ ಮತ್ತೇಭ ವರಹರಿ । ಪಾಪಸಂಕಟ ಮೂಲ ಖಂಡನ । ಶ್ರೀ ಪನತಪದ ಸಲಹು ಶ್ರೀಗುರು ವೀರಯೋಗೀಶಾ ॥ ೧೯ ॥

ಕಾಲಭೈರವ ಪೂಜ್ಯ ಮಾಯಾ । ಮೂಲವಿಚ್ಛೇದಕ ಮಹಾಗಣ । ಲೋಲ ಬಂಧನ ನಾಶ ಲೀಲಾಕಾಶ । ಪರಮೇಶಾ ॥ ಶೂಲಧರ ಪಾದಾಬ್ಜ ಸನ್ನುತ । ಶೀಲ ತಾಪಸವಂದ್ಯ ಜಂಗಮ । ಜಾಲಪಾಲಕ ಸಲಹು ಶ್ರೀಗುರು ವೀರಯೋಗೀಶಾ ॥ ೨೦ ॥

ಭಕ್ತನಿಕರಾಭೀಷ್ಟ ದಾಯಕ । ಭಕ್ತವತ್ಸಲ ದೀನಬಾಂಧವಾ । ಭಕ್ತ ಜನಸಂತಾನ ವರ್ಧನ ಪುಣ್ಯ ಫಲದಾತಾ । ಭಕ್ತಲಾಲಿತ ನಿತ್ಯ ಸದ್ಗುರು । ಭಕ್ತಸೇವಿತ ಪಾದ ಪದ್ಮ ವಿರಕ್ತನತಪದ ಸಲಹು ಶ್ರೀಗುರು ವೀರಯೋಗೀಶಾ ॥ ೨೧ ॥

ಪರಕುಮಂತ್ರ ವಿನಾಶ ಮದಹರ । ಪರಕು ಮಂತ್ರ ಧ್ವಂಸ ನಿರುಪಮ । ಪರಕು ತಂತ್ರ ಕುತರ್ಕ ಘೋರಾರಣ್ಯ ಬಡಬಾಗ್ನಿ । ಪರಮ ಪರಮಾತ್ಮೈಕ್ಯ ಸತ್ಯಾಚರಣ ತಾರಕಮಂತ್ರ ಬೋಧಕ । ಶರಣ ಗುರುವರ ಸಲಹು ಶ್ರೀ ಗುರು ವೀರಯೋಗೀಶಾ ॥ ೨೨ ॥

ಸುಮಶರಾರಿ ಪದಾಂಬುಜಾತ । ಭ್ರಮರ ನಿಗಮಾಭೇದ್ಯ ಭಕ್ತ । ಶ್ರಮ ನಿವಾರಣ ಮುಕ್ತಿದಾಯಕ ಸರ್ವದೋಷಹರಾ ॥ ಕಮಲ ರಿಪುಧರ ಗರ್ಭಜಾತ । ಪ್ರಥಮಪತಿ ಶಿವಭಕ್ತ ಕಲ್ಪದ್ರುಮ ಪರಮಗುರುವರ ಸಲಹು ಶ್ರೀಗುರು ವೀರಯೋಗೀಶಾ ॥ ೨೩ ॥

ನಿತ್ಯ ಜಂಗಮ ಬೋಧಕರ ಗುರು । ಕೃತ್ಯಾಪಾಲನ ಧೀರ । ವಿಬುಧ ಸ್ತುತ್ಯ ನಿಗಮಾಗಮ ವಿಚಾರ ಸಲಕ ಜನೋದ್ಧಾರಾ ॥ ಮೃತ್ಯುಹರ ಸುಗುಣಾ ಭಿರಾಮ ವಿ ॥ ನುತ್ಯ ಗಿರಿಶಾರಾಧನಪ್ರಿಯ । ಸತ್ಯ ಸದ್ಗುರು ಸಲಹು ಶ್ರೀ ಗುರು ವೀರಯೋಗೀಶಾ ॥ ೨೪ ॥

ದೀನಜನ ಪರಿಪಾಲ ಸಮ್ಯ । ಜ್ಞಾನದಾಯಕ ಪರಮ ಮುನಿಜನ । ಮಾನ ಸಾಬ್ಜದ್ಯುಮಣಿ ಚರಗುರು ಸಾರ್ವಭೌಮೇಂದ್ರಾ । ದೀನಪಾಲದಿ ಗೀಶ ಮಿತ ಸ್ವಾನುಭವ ಸಂಪನ್ನ ಶಂಭು । ಧ್ಯಾನ ತತ್ಪರ ಸಲಹು ಶ್ರೀಗುರು ವೀರಯೋಗೀಶಾ ॥ ೨೫ ॥

ಮಾರಿ ಮಸಣಿ ಬ್ರಹ್ಮ ರಾಕ್ಷಸ । ಘೋರ ಭೂತ ಪಿಶಾಚ ಡಾಕಿನಿ । ವೀರ ಶಾಕಿನಿ ಮೃತ್ಯು ದುಷ್ಟ ಮೃಗಾದಿ ಭೀತಾಳ । ಕ್ರೂರ ಭಯವಧ್ವಂಸ ಭಕ್ತೋ । ಧ್ಧಾರ ಘನ ಸಂಜೀವನ ಪ್ರದ । ಧೀರ ಗುರುವರ ಸಲಹು ಶ್ರೀಗುರು ವೀರಯೋಗೀಶಾ ॥ ೨೬ ॥

ಪರಮ ಜಂಗಮ ಪೂಜ್ಯಘನ ಸ । ದ್ಗುರುವರೇಣ್ಯ ಫಲಪ್ರದ ಭೂತಿ ದಾಯಕ ಶ್ರೀ । ಕರ ಸುಖಪ್ರದ ಭೂತಿದಾಯಕ ರುದ್ರ ಭದ್ರಾಂಗಾ ॥ ಸುರಗಣಾರ್ಚಿತ ಶಂಕರೋತ್ಸವ । ಭರಿತ ಶಿವಲಿಂಗಾಂಗ ಸಮರಸ । ನಿರುತ ಭವಹರ ಸಲಹು ಶ್ರೀಗುರು ವೀರಯೋಗೀಶಾ ॥ ೨೭ ॥

ಸರ್ವಪಾಪ ವಿಮೋಚನ ಪ್ರಭು । ದುರ್ವಿಕಾರ ಭ್ರಾಂತಿಪರಿಹರ । ನಿರ್ವಿಕಾರಾನಮದ ಭಕ್ತಾಧೀನ ಖಗಯಾನಾ ॥ ದುರ್ವಿಪತ್ಪರಿಹಾರ ದುರ್ಜನ । ಗರ್ವಭಂಗ ತಪೋಧನಾಡ್ನೆ । ಸರ್ವದಾ ಗುರು ಸಲಹು ಶ್ರೀ ಗುರು ವೀರಯೋಗೀಶಾ ॥ ೨೮ ॥

ದುಷ್ಟ ತಾಪತ್ರಯ ನಿವಾರಕ । ಕಷ್ಟ ದಃಖ ವ್ಯಾಧಿ ಪರಿಹರ । ಶಿಷ್ಟಜನ ಸಂತೋಷಕಾರಕ ಯತಿಕುಲಶ್ರೇಷ್ಠಾ ॥ ವೃಷ್ಟಿವರ್ಧನ ಪುಣ್ಯ ಕೀರ್ತನ । ಇಷ್ಟಸಿದ್ಧಿಪ್ರದ ಮಹೇಶ್ವರ । ತುಷ್ಟಿಕರ ಗುರು ಸಲಹು ಶ್ರೀಗುರು ವೀರಯೋಗೀಶಾ ॥ ೨೯ ॥

ಜಯ ನಮಃ ಕಲಿಭೀಮ ಭೀಮ ವಿ । ಜಯ ನಮೋ ಘನ ಸೋಮ ಸೋಮ ವಿ । ಜಯ ನಮೋ ಗುರುರಾಜ ರಾಜ ವಿಲಾಸ ಗುಣಕೋಶಾ ॥ ಜಯ ನಮೋ ಜಿತಕಾಮ ಕಾಮ । ವಿಜಯ ನಮಃ ಸುರಧಾಮ ಧಾಮ ವಿ । ಜಯ ನಮೋ ಜಯ ಸಲಹು ಶ್ರೀ ಗುರು ವೀರಯೋಗೀಶಾ ॥ ೩೦ ॥

ಅಕ್ಷಯ ಪ್ರದ ಸುಜನ ತತಿ ಸಂ । ರಕ್ಷತಿ ಶ್ರೀಕಾಂತ ಕಾಂತ ವಿಲಕ್ಷಣ ಬ್ರಹ್ಮಾಂಡ ಪಾಲಕ ಸರ್ವ ಮಂತ್ರಾಂಗಾ । ದಕ್ಷವರ್ಗ ವಿಭಂಗದೇವಾ । ಧ್ಯಕ್ಷ ಸದ್ಗುರು ಶರಣ ವಿರ್ಜರ ವೃಕ್ಷ ಶುಭಕರ ಸಲಹು ಶ್ರೀಗುರು ವೀರಯೋಗೀಶಾ ॥ ೩೧ ॥

ವಿಜಯಜಯ ಪಂಚಾಕ್ಷರೀಮಯ । ವಿಜಯ ಜಯ ಪಂಚಾಸ್ಯ ಸನ್ಮಯ ವಿಜಯ ಜಯ ಪಮಚಾತ್ಮ ಚಿನ್ಮಯ ವಿಜಯ ಜಯದೇವಾ । ವಿಜಯ ಜಯ ಪಂಚಾಮೃತಾಭಯ । ವಿಜಯ ಜಯ ಪಂಚ ಪ್ರಭಾಮಯ । ವಿಜಯ ಜಯ ಜಯ ಸಲಹು ಶ್ರೀ ಗುರು ವೀರಯೋಗೀಶಾ ॥ ೩೨ ॥

ತ್ರಾಹಿ ಮಂಗಳ ಕೀರ್ತಿ ಗುರುವರ । ತ್ರಾಹಿ ಜಂಗಮ ಮೂರ್ತಿ ಶಿವಹರ । ತ್ರಾಹಿ ಭಕ್ತ ಮನೋರಥ ಪ್ರಧಪಾಹಿ ಸಿದ್ಧಿಕರಾ ॥ ತ್ರಾಹಿ ಲೋಕಾರಾಧ್ಯ ಶಂಕರ । ತ್ರಾಹಿ ಭಕ್ತಾಘಾಘ ಸಂಹರ । ತ್ರಾಹಿ ಚರಪತಿ ಸಲಹು ಶ್ರೀಗುರು ವೀರಯೋಗೀಶಾ ॥ ೩೩ ॥

ವಿಜಯ ಕರುಣಾಕರ ಮಹೇಶ್ವರ । ವಿಜಯ ಯೋಗೀಶ್ವರ ಸುಧಾಕರ । ವಿಜಯ ಗಿರಿಜಾವರ ಮನೋಹರ ಭಜಕ ಮಂದಾರಾ ॥ ವಿಜಯ ಸುಖ ಸಂತೋಷ ನಾಯಕ । ವಿಜಯಗುರುವರ ಮೋಕ್ಷದಾಯಕ । ವಿಜಯಜಯ ಜಯ ಸಲಹು ಶ್ರೀ ಗುರು ವೀರಯೋಗೀಶಾ ॥ ೩೪ ॥

ವಿಜಯವರ ಗಿರ್ವಾಣಪೂಜಿತ । ಭಜಯ ನರಪತಿ ವೃಂದವಂದಿತ । ವಿಜಯಧನ ಧ್ಯಾನಯುರಾರೋಗ್ಯಭಿವೃದ್ಧಿಕರಾ ॥ ವಿಜಯ ನಿತ್ಯಾನಂದ ವಿಗ್ರಹ । ವಿಜಯ ಕಲಶಪ್ರದ ಶುಭೋದಯ । ವಿಜಯ ಗುರುವರ ಸಲಹು ಶ್ರೀ ಗುರು ವೀರಯೋಗೀಶಾ ॥ ೩೬ ॥

ಮಂಗಲಂ ಶ್ರೀ ಜಂಗಮಾರ್ಯಗೆ । ಮಂಗಲಂ ಶ್ರೀ ಮೋಕ್ಷಧಾಮಗೆ ಮಂಗಲಂ ಶ್ರೀ ಪರಶಿವನ ಪರಾವತಾರಂಗೆ ಮಂಗಲಂ ಚಿಜ್ಯೋತಿ ರೂಪಗೆ ಮಂಗಲಂ ಯತಿವಂಶ ಚಂದ್ರಗೆ ಮಂಗಲಂ ಜಯ ಮಂಗಲಂ ಶುಭ ಮಂಗಲಂ ಜಯತು ॥

ಮುದದಿ ಮೂವತ್ತಾರು ಪದ್ಯವ ಚದುರ ಮೂರಾವರ್ತಿ ಪಠಿಸಲು ಪದುಳ ದಿಂದಷ್ಟೋತ್ತರ ಶತಂಗಳ ಜಪವದಾಗುವದು ವಿದಿತವಿದು ಕಾಮ್ಯಾರ್ಥಮಿವುದು ಸದಮಲಾತ್ಮರು ಜಪಿಸಲವರಿಗೆ ಪದುಳದಿಂ ಧರ್ಮಾರ್ಥ ಕಾಮ ಸುಮೋಕ್ಷ ವಾಗುವದು ॥

ಶ್ರೀ ಹುಚ್ಚೀರಪ್ಪಜ್ಜನವರ ಸೇವಕ<br>ಶ್ರೀ ಬಸವಾರ್ಯರು.

ಪರಿಷ್ಕರಣ ಮಾಡಿದವರು :<br>ಶ್ರೀ ಪಿ. ಎಸ್. ಹುಂಡೇಕಾರ, ನರೇಗಲ್ಲ

*

## ಎಡೆಯೂರು ಕ್ಷೇತ್ರಸ್ಥ ನಿರಂಜನ ಜಗದ್ಗುರು ಶ್ರೀ ತೋಂಟದ ಸಿದ್ಧಲಿಂಗೇಶ್ವರ

ಮೈಸೂರು ರಾಜ್ಯದ ತುಮಕೂರ ಜಿಲ್ಹೆಯ ಕುಣಿಗಲ್ಲ ತಾಲೂಕಿನಲ್ಲಿರುವ ಶ್ರೀ ಎಡೆಯೂರ ವೀರಶೈವ ಸುಕ್ಷೇತ್ರಗಳಲ್ಲಿ ಒಂದು. ವೀರಶೈವರ ಅಷ್ಟಾವರಣದಲ್ಲಿ ಬರುವ ಜಂಗಮ ತತ್ವಕ್ಕೆ ಅಧಿಷ್ಠಾನರಾಗಿರುವ ಶ್ರೀ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರರೇ ಈ ಕ್ಷೇತ್ರದ ಆರಾಧ್ಯ ದೈವ.

ಶ್ರೀ ಸಿದ್ಧಲಿಂಗೇಶ್ವರರು ತಾವು ರಚಿಸಿದ ''ಷಟಸ್ಥಲ ಜ್ಞಾನ ಸಾರಾಮೃತ''ದಲ್ಲಿ ಹೇಳಿದಂತೆ ಅವರ ಗುರುಪರಂಪರೆ ಅನಾದಿ ಗಣೇಶ್ವರನಿಂದ ಆರಂಭವಾಗುತ್ತದೆ. ಅಂದರೆ ಅನಾದಿ ಗಣೇಶ್ವರನಿಂದ ಶ್ರೀ ಸಿದ್ಧಲಿಂಗೇಶ್ವರರು ಹದಿನಾರನೆಯವರಾಗುತ್ತಾರೆ.

**ಧರ್ಮಗ್ಲಾನಿ :**

ಹನ್ನೆರನಡನೇ ಶತಮಾನದ ಕಲ್ಯಾಣ ಕ್ರಾಂತಿಯ ನಂತರ ವೀರಶೈವ ಧರ್ಮಕ್ಕೆ ಬಂದ ಗ್ಲಾನಿಯನ್ನು ವಿಜಯನಗರದ ಪ್ರೌಢದೇವರಾಯನ ಕಾಲದ ನೂರೊಂದು ವಿರತರು ದೂರಮಾಡಿದ ಮೇಲೆ ಹದಿನೈದನೇ ಶತಮಾನದಲ್ಲಿ ಆಗಿಹೋದ ವಿರುಪಾಕ್ಷರಾಯನ ಕಾಲದಲ್ಲಿ ಆಗಿನ ರಾಜಕೀಯ ಅಸ್ಥಿರತೆಯಿಂದಾಗಿ ವೀರಶೈವ ಮತಕ್ಕೆ ಪುನಃ ಗಾಢಾಂಧಕಾರ ಪ್ರಾಪವಾಗುತ್ತದೆ.

ಜಾತಿಸೂತಕವ ಶಿವಭಕ್ತರೊಳು ಕಲ್ಪಿಸುತೆ ।
ಪೂತವಹ ಜಂಗಮಂ ಕಂಡೊಡೆಂ ವಂದಿಸದೆ ।
ಪ್ರೀತಿಯಿಂ ಪಾದೋದಕ ಪ್ರಸಾದವ
ಎಂಜಲೆಂದಾ ದೂಷಿಸುತಮನ್ಯ ॥

ಜಾತಿಯಂಗನೆಯರುಚ್ಛಿಷ್ಟಮಂ ಭುಂಜಿಸಿಯ ।
ನೀತಿಯಿಂ ಪರಮತವ ನೆಮ್ಮಿ ನರಕಕ್ಕಿಳಿವ ।
ಪಾತಕರ ನಲ್ಲದೆಲ್ಲಿಯು ಕಾಣೆ
ಶಿವಭಕ್ತರುಗಳ ಪರಿಭಾವಿಸಿದೊಡೆ ॥ (ಶ್ರೀ ಸಿದ್ದೇಶ್ವರ ಮಹಾಪುರಾಣ)

**ಅವತಾರ :**

ಹೀಗೆ ದಿಕ್ಕು ಕಾಣದ ಜನತೆಗೆ ಮಾರ್ಗದರ್ಶನ ಮಾಡಲು ಸಿದ್ಧಪುರುಷರಾದ ಒಬ್ಬ ಮಹಿಮರ ಅವತಾರ ಅನಿವಾರ್ಯವಾಗಿರುವಾಗ ಶ್ರೀ ತೋಂಟದ

---

* ಕರ್ನಾಟಕ ಬಂದು – ೧೯೬೬

ಸಿದ್ಧಲಿಂಗೇಶ್ವರರು ಉದಯ ರವಿಯಂತೆ ಮೂಡಿ ಬರುತ್ತಾರೆ. ತಮ್ಮ ಪ್ರಭಾವದಿಂದ ಆಕರ್ಷಿತರಾದ ೭೦೦ ವಿರತರೊಡನೆ ಲೋಕೋದ್ಧಾರ ಮಾಡಿದ ನಂತರ

ಎಲ್ಲಿ ನೋಡಿದಡಲ್ಲಿ ಷಟಸ್ಥಲ ಬ್ರಹ್ಮಿಗಳ ।
ಉಲ್ಲಾಸ ಅವರಾಟಕೂಟ ಮಾಟಗಳು ।
ಮತ್ತೆಲ್ಲಿ ನೋಡಿದಡಲ್ಲಿ ಷಟಸ್ಥಲ
ಬ್ರಹ್ಮಿಗಳ ಕೊಂಡಾಟ ಅವರಪೂಜೆ ॥

ಎಲ್ಲಿ ನೋಡಿದಡಲ್ಲಿ ಷಟಸ್ಥಲ ಬ್ರಹ್ಮಿಗಳ ।
ಸೊಲ್ಲವರ ಕೀರ್ತಿಯವರುಗಳ ಸಂದಣಿ ಬಳಿ ।
ಕಲ್ಲಿನೋಡಿದಡಲ್ಲಿ ಷಟಸ್ಥಲ ಬ್ರಹ್ಮ
ಮಯವೆಲ್ಲ ಜಗದೊಳು ನೋಡಲು ॥ (ಶ್ರೀ ಸಿದ್ಧೇಶ್ವರ ಮಹಾ ಪುರಾಣ)

### ವಾಙ್ಮಯ ಸೇವೆ :

ಈ ರೀತಿ ವೀರಶೈವ ಮತದ ಸರ್ವಾಂಗೀಣ ಉನ್ನತಿಯಾಗುತ್ತದೆ. ಶ್ರೀ ಸಿದ್ಧಲಿಂಗೇಶ್ವರರು ಕೇವಲ ಮಹಿಮಾನ್ವಿತರಷ್ಟೇ ಆಗಿರದೆ; ಅನುಭಾವಿಗಳಾದ ಶ್ರೇಷ್ಠ ವಚನಕಾರರೂ ಆಗಿದ್ದರೆಂಬುದಕ್ಕೆ ಅವರು ರಚಿಸಿದ ''ಷಟಸ್ಥಲ ಜ್ಞಾನ ಸಾರಾಮೃತ ಗ್ರಂಥದಿಂದ ತಿಳಿಯ ಬಹುದಾಗಿದೆ.

### ಲೋಕೋದ್ಧಾರ :

ಹೀಗೆ ಬಹುಮುಖ ಪ್ರತಿಭೆಯನ್ನು ಪಡೆದ ಶ್ರೀ ಸಿದ್ಧಲಿಂಗೇಶ್ವರರು ಮೆಟ್ಟಿದ ಧರೆ ಪಾವನವಾಯಿತು. ಕಗ್ಗೆರೆ, ಎಡೆಯೂರ, ಹೊಳಲುಗುಂದ ತುಮಕೂರ, ಹುಲಿಯೂರ, ಹೆಬ್ಬೂರ, ಹೆರೂರ, ಉಳಿವೆ. ಕಾರ್ಕಳ ಮುಂತಾದ ಸ್ಥಾನಗಳು ಇಂದಿಗೂ ಪುಣ್ಯ ಕ್ಷೇತ್ರಗಳಾಗಿ ಕಂಗೊಳಿಸುತ್ತಿರುವದು ಈ ಮಾತಿಗೆ ನಿದರ್ಶನವಾಗಿವೆ.

### ವ್ಯಕ್ತಿತ್ವ ಪ್ರಭಾವ :

ಶ್ರೀ ಸಿದ್ಧಲಿಂಗೇಶ್ವರ ಪ್ರಭಾವ ಮುದ್ರೆ ಎಷ್ಟೊಂದು ಜ್ವಾಜ್ವಲ್ಯಮಾನ ವಾಗಿತ್ತೆನ್ನಲಿಕ್ಕೆ ಅವರನ್ನು ಕುರಿತು ರಚಿತವಾದ ಗ್ರಂತ ಭಾಂಡಾರವೆ ಸಾಕ್ಷಿಯಾಗಿದೆ.

ಶ್ರೀ ವೀರಕ್ತ ತೋಂಟದಾರ್ಯ ಗುಬ್ಬಿಯ ಶಾಂತೇಶರಂಥ ವೀರಶೈವ ಕವಿಶ್ರೇಷ್ಠರೇ ಮಾತ್ರವಲ್ಲದೆ ಪರಮ ವೈಷ್ಣವರಾದ ಹೇರಂಭ ಕವಿಗಳೂ ಈ ಮಾತಿಗೆ ನಿರ್ದಶನವಾಗಿದ್ದಾರೆ. ಇದಲ್ಲದೆ ''ಚನ್ನಬಸವ ಪುರಾಣ'' ''ಗುರುರಾಜ ಚಾರಿತ್ರ್ಯ''ಗಳಲ್ಲಿಯೂ ಸಹ ಶ್ರೀ ಸಿದ್ದಲಿಂಗೇಶ್ವರರ ಚಾರಿತ್ರ್ಯ ಉಕ್ತವಾಗಿದೆಯಲ್ಲದೆ ಅವರನ್ನು ಉದ್ದೇಶಿಸಿ ಬರೆದ ''ತೋಂಟದಾರ್ಯರಗಳೆ''ಯಲ್ಲಿ ಅವರು ಗೈದ ಮಹಿಮಾಶಯಗಳೆಲ್ಲ ತುಂಬಿವೆ. ಶ್ರೀ ಸಿದ್ಧಲಿಂಗೇಶ್ವರರ ನಂತರ ಬಂದ ಅನೇಕ ವಚನಕಾರರಂತೂ ಶ್ರೀ ಸಿದ್ಧಲಿಂಗೇಶ್ವರ ಮುದ್ರಿಕೆಯನ್ನೇ ಭಕ್ತಿಪುರಸ್ಸರವಾಗಿ ತಮ್ಮ

ವಚನದಲ್ಲಿ ಅಂಗೀಕರಿಸಿದ್ದಾರೆ. ಶ್ರೀ ಸಿದ್ದೇಶ್ವರರನ್ನು ಕುರಿತು ಮಾಡಿದ ಪ್ರಸಿದ್ಧ ಕವಿಗಳಾದ ಎಡೆಯೂರ ಷಡಕ್ಷರ ಕವಿಗಳ ಸ್ತೋತ್ರಗಳಂತೂ ತುಂಬಾ ಪ್ರಸಿದ್ಧವಿವೆ.

ಶ್ರೀ ಸಿದ್ಧಲಿಂಗೇಶ್ವರರ ಅವತಾರ ಕಾರಣದಿಂದಾಗಿ ಕನ್ನಡ ಸಾಹಿತ್ಯ ವಾಹಿನಿಗೆ ಮಹಾಪೂರ ಬಂದಿತೆಂಬುದನ್ನು ಅವರ ಶಿಷ್ಯ ಪ್ರಶಿಷ್ಯರಿಂದ ರಚಿತವಾದ ''ಶೂನ್ಯ ಸಂಪಾದನೆ''ಗಳಂಥ ಲೋಕೋತ್ತರ ಗ್ರಂಥಗಳಿಂದಲು ಅರಿಯಬಹುದಾಗಿದೆ.

**ಅವತಾರ ಸಮಾಪ್ತಿ :**

ಶ್ರೀ ಸಿದ್ಧಲಿಂಗೇಶ್ವರರ ಅವತಾರ ಕಾರಣವು ಅವರ ಇಚ್ಛೆಯಂತೆ ಪೂರ್ತಿಯಾದ ನಂತರ.

ಈ ತೆರದೊಳಖಿಳ ಲೋಕಂಗಳೆಲ್ಲ ಸುವಿ ।
ಖ್ಯಾತವಹ ಷಟಸ್ಥಲ ಬ್ರಹ್ಮಮಯವಾಗೆ ಚಿ ।
ಜ್ಯೋತಿ ಸ್ವರೂಪನೆನಿಸುವ
ತೋಂಟದಾರ್ಯನುರ ಸಂತಸಂಗೊಂಡು ಬಳಿಕಂ ॥

ಪ್ರೀತಿಯಿಂ ಬೋಳಬಸವಾರ್ಯ ಮುಂತಾದ ಸು ।
ತ್ರೂತ್ತರಹ ವಿರತರೆಲ್ಲರಂ ಕರೆದು ಸಂತೈಸಿ ।
ಭೂತಳದೊಳಾನೆನ್ನ ಸ್ವಾತಂತ್ರ್ಯದಿಂ
ಬಂದಲೀಲೆ ಸೌಖ್ಯವನ್ನಿತ್ತುದು ॥

ಎಂದೆಲ್ಲರೊಡನೆ ನಿರವಿಸೆಯ ಖಂಡಿತ ಚಿದಾ ।
ನಂತ ಸ್ವರೂಪನಾದ್ಯಂತ ವರ್ಜಿತ ಜಗ ।
ದ್ವಂದಿತನನಾಮಯ ನತರ್ಕ್ಯನದ್ವಯ
ನಪ್ರಮೇಯ ನಗಣಿತ ಮಹಿಮನ ॥

ಸಂದಿಲ್ಲದ ವಿರಳ ಬ್ರಹ್ಮ ತೋಂಟದಯತೀ ।
ಶಂ ದಿವಿಜರುಘೆ ಎನಲನಾದಿ ಭಕ್ತನ ಹೃದಯ
ಮಂದಿರದೊಳಗೆ ಮೂರ್ತಿಗೊಂಡು
ಸಂತಸದೊಳೆ ಸಂ ಜಗವ ರಕ್ಷಿಸುತ್ತ ॥ (ಶ್ರೀ ಸಿದ್ಧೇಶ್ವರ ಪುರಾಣ)

ಅನಾದಿ ಜಂಗಮ ಮೂರ್ತಿಯಾದ ತಾವು ಪರಶಿವ ಹೃದಯಸ್ಥ ಅನಾದಿ ಭಕ್ತನ ಹೃದಯಂತರಾಳದಿಂದ ಪ್ರಾರಂಭದಲ್ಲಿ ಹೇಗೆ ಆವಿರ್ಭೂತರಾದರೋ ಹಾಗೆ ಅವತಾರ ಸಮಾಪ್ತಿಯ ಕಾಲದಲ್ಲಿಯೂ ಕೂಡಾ ಅನಾದಿ ಭಕ್ತನ ಹೃದಯ ಮಂದಿರದಲ್ಲಿ ಪುನಃ ಮೂರ್ತಗೊಂಡರು.

**ಶ್ರೀ ಎಡೆಯೂರ ಕ್ಷೇತ್ರ :**

ಎಡೆಯೂರ ಶ್ರೀ ಸಿದ್ಧಲಿಂಗೇಶ್ವರರು ನಿರ್ವಿಕಲ್ಪ ಸಮಾಧಿ ಹೊಂದಿದ ಪವಿತ್ರ ಸ್ಥಳ. ಈ ಕಾರಣದಿಂದ ಅದು ಜಂಗಮ ಕ್ಷೇತ್ರ, ಜಂಗಮವು ಶಿವಲಿಂಗದ ಚೈತನ್ಯ ಸ್ವರೂಪ. ಅಂತೆಯೇ ಅದನ್ನು ಚರಲಿಂಗವೆಂದು ಭಾವಿಸಲಾಗಿದೆ.

ಶಿವಲಿಂಗದ ತೃಪ್ತಿಗೆ ಜಂಗಮ ಲಿಂಗದ ತೃಪ್ತಿಯೇ ಮುಖ್ಯ, ಅಂತೆಯೇ ''ಶಿವಯೋಗಿನಿ ಸಂತೃಪ್ತೇ ತೃಪ್ತೋ ಭವತಿ ಶಂಕರಃ'' ಎಂಬ ಉಕ್ತಿ ಇದನ್ನು ಸಮರ್ಥಿಸುತ್ತದೆ.

**ತೋಂಟದಾರ್ಯ ಅಭಿಧಾನ ಪ್ರಾಪ್ತಿ :**

ಭಕ್ತನಿಗೆ ಜಂಗಮ ಸೇವೆ ಅಗತ್ಯವಾಗಿರುವಂತೆ ಜಂಗಮ ಮೂರ್ತಿಗೆ ಭಕ್ತೋದ್ಧಾರ ಕಾರ್ಯವೂ ಅನಿವಾರ್ಯವಾಗಿರುತ್ತದೆ. ''ಸರ್ವಲೋಕೋಪಕಾರಾಯಯೋ ದೈವಃ ಪರಮೇಶ್ವರಃ ಚರತ್ಯ ತಿಥಿರೂಪೇಣ ನಮಸ್ತೇ ಜಂಗಮಾತ್ಮನೆ'' ಎಂಬುದು ಜಂಗಮ ತತ್ವದ ಗುರುತರವಾದ ಹೊಣೆಗಾರಿಕೆಯನ್ನು ನಿರ್ದೇಶಿಸುತ್ತದೆ. ಶ್ರೀ ಸಿದ್ಧೇಶ್ವರ ಪುರಾಣದಲ್ಲಿಯಂತೂ ಈ ಮಾತು ಮೇಲಿಂದ ಮೇಲೆ ಬರುತ್ತದೆ.

ಶ್ರೀ ಸಿದ್ಧಲಿಂಗೇಶ್ವರರಿಗೆ ''ತೋಂಟದಾರ್ಯ'' ಎಂಬ ಅಭಿಮಾನ ಪ್ರಾಪ್ತವಾಗಲು ಶ್ರೀ ಸಿದ್ಧಲಿಂಗೆಶ್ವರರಲ್ಲಿದ್ದ ಭಕ್ತೋದ್ಧಾರದ ಉತ್ಕಟ ಅಭಿಲಾಷೆಯೇ ಕಾರಣವೆಂಬುದು ತಾನೇ ವಿದಿತವಾಗುತ್ತದೆ.

ಭಕ್ತ ನಂಬಿಯಣ್ಣ ಬಿನ್ನಹ ಮಾಡಿದ ನಂತರ ಆತ ಮರಳಿ ಬರುವವರೆಗೂ ಶ್ರೀ ಸಿದ್ಧಲಿಂಗೇಶ್ವರರು ಸ್ವಸ್ಥಾನ ಬಿಟ್ಟು ಕದಲುವದಿಲ್ಲ. ಸಮಯವನ್ನು ವರ್ಥ್ಯ ಕಳೆಯದೆ ಲಿಂಗಪೂಜೆ ಲೋಲುಪರಾದಾಗ್ಗೆ ಮೈಮೇಲೆ ಹುತ್ತೇರಿದರೂ ಬಾಹ್ಯ ಪ್ರಜ್ಞೆಗೆ ಬರುವದಿಲ್ಲ, ಪುನಃ ಆರು ತಿಂಗಳ ನಂತರ ಆತ ಬಂದು ಬಿನ್ನವಿಸಿದಾಗಲೇ ಶ್ರೀ ಸಿದ್ಧಲಿಂಗೇಶ್ವರರು ಬಹಿರ್ಮುಖರಾಗಬೇಕಾಯಿತು. ಪ್ರಪಂಚದ ಆಧ್ಯಾತ್ಮಿಕ ಇತಿಹಾಸದಲ್ಲಿಯೇ ಇಂಥ ದೃಷ್ಟಾಂತ ಸಿಕ್ಕುವದು ವಿರಳ ಎಂದು ಹೇಳಿದರೆ ಅತ್ಯುಕ್ತಿಯನಿಸಲಿಕ್ಕಿಲ್ಲ.

**ಶಿವಯೋಗ ತೇಜಸ್ಸು :**

ಶ್ರೀ ಸಿದ್ಧಲಿಂಗೇಶ್ವರರ ಶಿವಯೋಗ ಶಕ್ತಿಯ ಸನ್ನಿಧಾನ ಕತೃತ್ವ ಶಕ್ತಿಯಿಂದ ಎಡೆಯೂರ ಜಾಗ್ರತ ಕ್ಷೇತ್ರವಾಗಿದೆ. ತಮ್ಮ ಅವತಾರಕಾಲದಲ್ಲಿ ಮಹಾಸ್ವಾಮಿ ಭಕ್ತೋದ್ಧಾರ ಕಾರ್ಯವನ್ನು ಮಾಡಿದಂತೆ ಈಗಲೂ ತಮ್ಮ ಶಿವಯೋಗ ಶಕ್ತಿಯಿಂದ ಭಕ್ತೋಧ್ಧಾರ ಕಾರ್ಯವನ್ನು ಅವಿಚ್ಛಿನ್ನವಾಗಿ ಮಾಡುತ್ತಿರುವರೆಂಬುದನ್ನು ಸರಳ ಹೃದಯದ ಶ್ರದ್ಧಾವಂತರಿಗೆ ಅನುಭವ ವೇದ್ಯವಾದ ವಿಷಯ.

**ರಥೋತ್ಸವ :**

ಶ್ರೀ ಸಿದ್ಧಲಿಂಗೇಶ್ವರನಲ್ಲಿ ಶ್ರದ್ಧಾಭಕ್ತಿಗಳಿಂದ ನಡೆದುಕೊಳ್ಳುತ್ತಿರುವ ಭಕ್ತ ಕೋಟಿಯನ್ನು ಕಾಣುವದಾದರೆ ಚೈತ್ರ ಶುದ್ಧ ಸಪ್ತಮಿಯಂದು ನಡೆಯುವ ಮಹಾರಥೋತ್ಸವಕ್ಕೇನೇ ಹೋಗಬೇಕು. ಲಕ್ಷೋಪ ಲಕ್ಷ ಜನ ಭಕ್ತಿ ಭಾವ

ಭರಿತರಾಗಿ ಅಲ್ಲಿಗೆ ಆಗಮಿಸುತ್ತಾರೆ. ಅಲ್ಲಿ "ಹರಕೆ" ಸಲ್ಲಿಸುವದಕ್ಕಾಗಿ "ತಲೆಬೋಳು" ಕೊಡುವ ಪದ್ಧತಿಯುಂಟು, ಆ ಕೂದಲು ಸರಕಾರಿ ಲೀಲಾವಿನಲ್ಲಿ ಆರೇಳು ಸಹಸ್ರ ರೂಪಾಯಿಗಳಿಗೆ ಮಾರಾಟವಾಗುತ್ತದೆ.

**ಸಮತಾ ದೃಷ್ಟಿ :**

ಶ್ರೀ ಸಿದ್ಧಲಿಂಗೇಶ್ವರರು ವೀರಶೈವರ ನಿರಂಜನ ಜಂಗಮ ಸಾರ್ವಭೌಮರಾಗಿದ್ದರೂ ಅವರ ಭಕ್ತಕೋಟಿಯಲ್ಲಿ ಸಕಲ ಮತೀಯರೂ ಉಂಟು. ಬಡವ-ಬಲ್ಲಿದರೂ ಉಂಟು. ಪಾದಚಾರಿಗಳಾಗಿ ಹರಕು ಬಟ್ಟೆಯಿಂದ ಬರುವ ಬಡವರಾದಿಯಾಗಿ ರಾಜವೈಭವದಿಂದ ಕಾರಿನಲ್ಲಿ ಬರುವ ಧನಿಕರವರಿಗೂ ಎಲ್ಲರೂ ಸಿದ್ಧಲಿಂಗೇಶನ ಭಕ್ತರೆ. ಶ್ರೀ ಕ್ಷೇತ್ರದಲ್ಲಿರುವಷ್ಟು ಕಾಲ ಯಾತ್ರಿಕರ ಭಾವನೆಯಲ್ಲಿ ಯಾವದೇ ಊಚ-ನೀಚ ಭಾವನೆ ಅಪ್ಪಿತಪ್ಪಿ ಸಹ ಬರುವುದಿಲ್ಲ. ಶ್ರೀ ಸಿದ್ಧಲಿಂಗೇಶ್ವರರು ಸಮತಾಭಾವವನ್ನು ತಮ್ಮ ಭಕ್ತಂಗೆ ಪರ್ಯಾಯವಾಗಿ ಬೋಧಿಸುತ್ತಿರುವರೋ ಏನೋ ಎಂದೆನಿಸುತ್ತದೆ.

**ಉತ್ಸವ ಸೇವೆ :**

ಯಾತ್ರೆಯ ನಂತರ ಮುಂದೆ ಹದಿನೈದು ದಿನಗಳವರೆಗೆ ಮಹಾಸ್ವಾಮಿಯ ವಾಹನ ಸೇವೆ ನಡೆಯುತ್ತಿದೆ. ಅವೆಲ್ಲ ಉತ್ಸವಗಳು ಚಿಕ್ಕ ಜಾತ್ರೆಗಳಾಗಿ ಪರಿಣಮಿಸುತ್ತವೆ. ಅವುಗಳಲ್ಲಿ ತಿಪಟೂರಿನಲ್ಲಿರುವ ಗುರುಗದ ಹಳ್ಳಿ ವೇ.ಕೈ. ವಾಸಿ ರುದ್ರಪ್ಪನವರ ಮಕ್ಕಳು ಜಿ. ಆರ. ಕರಿಸಿದ್ದಾರಾಧ್ಯರು ತಯಾರು ಮಾಡಿಸಿ ಒಪ್ಪಿಸಿರುವ ಹುತ್ತದ ಮಾಹನ ಸೇವಾ ಹಾಗೂ ಗದುಗಿನ ಸಿದ್ಧರಾಮಪ್ಪನವರು ಮಾನ್ವಿಯವರ ಬೆಳ್ಳಿ ಪಲ್ಲಕ್ಕಿ ಸೇವೆಗಳು ಅತ್ಯಂತ ಚೇತೋಹಾರಿ ಯಾಗಿರುತ್ತವೆ. ವಿದ್ಯುದ್ಧೀಪಗಳಿಂದ ಹೆಚ್ಚು ಆಕರ್ಷಿತವಾದ ಈ ಉತ್ಸವಗಳಿಗೆ ಪರಸ್ಥಲಗಳ ಭಕ್ತರು ಜಾತ್ರೆಗೆ ಬರುವಂತೆಯೇ ಹೆಚ್ಚು ಪ್ರಮಾಣದಲ್ಲಿ ಆಗಮಿಸುತ್ತಾರೆ.

**ಪ್ರಸಾದ ವಿನಿಯೋಗ :**

ಯಾತ್ರೆಯ ಪ್ರಸಂಗದಲ್ಲಿ ಪ್ರಸಾದ ಸಂತರ್ಪಣೆ ದೊಡ್ಡ ಪ್ರಮಾಣದಲ್ಲಿ ೪-೬ ದಿನಗಳ ವರೆಗೆ ನಡೆಯುತ್ತದೆಯಲ್ಲದೆ ವರ್ಷಂಪ್ರತಿಯೂ ನಿತ್ಯದಾಸೋಹ ಇದ್ದೇ ಇರುತ್ತದೆ. ಇತ್ತೀಚೆಗೆ ಶ್ರೀ ಸಿದ್ಧಲಿಂಗೇಶ್ವರ ಹೈಸ್ಕೂಲ ಪ್ರಾರಂಭವಾಗಿದ್ದು ಅದರಲ್ಲಿಯ ವ್ಯವಸ್ಥೆಯೂ ಮಹಾಸ್ವಾಮಿಯ ಸನ್ನಿಧಾನದಲ್ಲಿ ನಡೆಯುತ್ತಿದೆ.

**ನಿಷ್ಕಾಮ ಸೇವೆ :**

ಈಗ್ಗೆ ಹತ್ತು ಹದಿನಾರು ವರ್ಷಗಳ ಹಿಂದೆ ಬಂದು ಹೋಗುವವರಿಗೆ ಶ್ರೀ ಎಡೆಯೂರ ಕ್ಷೇತ್ರದಲ್ಲಾದ ತೀವ್ರ ಬದಲಾವಣೆಗಳು ಗಮನಕ್ಕೆ ಬಂದು;

ಕುತೂಹಲ ಕೆರಳುವದು ಸ್ವಾಭಾವಿಕ. ಮೊದಲು ಅದೊಂದು ''ಏಕಾಂತ ನಿವಾಸ''. ಸ್ವಾಮಿಯ ಜಾಗೃತ ಸ್ಥಾನವೆಂದಿಷ್ಟೇ ಜನಗಳ ಗ್ರಹಿಕೆ. ಆದರೆ ಈಗದು ಎಲ್ಲರೀತಿಯಿಂದಲೂ ಆಧುನಿಕ ಸೌಕರ್ಯ ಹೊಂದಿದೆಯಲ್ಲದೆ ಯಾತ್ರಾರ್ಥಿಗಳಿಗೆ ಹಾಗೂ ಕ್ಷೇತ್ರ ಸಂದರ್ಶಕರಿಗೆ ಎಲ್ಲ ರೀತಿಯ ಸೌಲಭ್ಯ ಸಲಕರಣೆಗಳನ್ನು ನೀಡಲು ಸಿದ್ಧವಾಗಿದೆ. ಈ ಎಲ್ಲ ಮಾರ್ಪಾಡುಗಳ ಸಂಪೂರ್ಣ ಶ್ರೇಯಸ್ಸು ಗದುಗಿನ ಪ್ರಸಿದ್ಧ ಕಾಂಟ್ರ್ಯಾಕ್ಟರರಾದ ಶ್ರೀಯುತ ವೀರಪ್ಪಣ್ಣಾ ಅಂಗಡಿ (ವ್ಹಿ ಎಲ್. ಅಂಗಡಿ) ಅವರಿಗೆ ಸಲ್ಲುತ್ತಿದೆ.

ಶ್ರೀ ಸಿದ್ಧಲಿಂಗೇಶ್ವರರಿಗೆ ಅಪಾರ ಭಕ್ತ ಪರಿವಾರವಿದೆ. ಆದರೆ ಆ ಎಲ್ಲಭಕ್ತರಿಂದಲೂ ಈ ಸರ್ವಾರ್ಪಣ ಬುದ್ಧಿ ಸಾಧ್ಯವಿಲ್ಲ. ಸ್ವಾತಿಯ ಮಳೆಹನಿಗಳು ಎಲ್ಲಿಯೇ ಬಿದ್ದರೂ ಸಮುದ್ರದಲ್ಲಿ ಬಿದ್ದ ಮಳೆ ಹನಿಗಳು ಮಾತ್ರ ಮುತ್ತಾಗುವಂತೆ ಸಮರ್ಪಣ ಮನೋಭಾವವಿದ್ದ ಭಕ್ತರಿಂದಷ್ಟೇ ಇಂಥ ಅನುಪಮ ಸೇವೆ ಸಲ್ಲುತ್ತದೆ ಇದು ಹೊಗಳಿಕೆಯಲ್ಲ ಯಥಾರ್ಥ ನಿರೂಪನೆ ಮಾತ್ರ. ಮಹಾಸ್ವಾಮಿಯ ಭಕ್ತರಾದ ನಾವು ನಮ್ಮ ಗುರುವಿಗೆ ತನು–ಮನ–ಧನದಿಂದ ನಿರ್ವಂಚನೆಯ ಸೇವೆಯನ್ನು ಅವಿ ಶ್ರಾಂತವಾಗಿ ಸಲ್ಲಿಸುತ್ತಿರುವ ಶ್ರೀ ವೀರಪ್ಪಣ್ಣನವರನ್ನು ಕೃತಜ್ಞತೆಯಿಂದ ಸ್ಮರಿಸುವೆ ಹೋದರೆ ಅದು ಗುರು ದ್ರೋಹವೇ ಆದೀತು.

**ಅತಿರುದ್ರ :**

ಈ ಒಳಗಾಗಿ ಸಲ್ಲಿಸಿದ ಶ್ರೀ ವೀರಪ್ಪಣ್ಣನ ಸೇವೆಯಲ್ಲಿ ಕೆಲ ದಿನಗಳ ಹಿಂದೆ ನವಿಲುಗುಂದ ಗವಿ. ಮಠಾಧ್ಯಕ್ಷ ಶ್ರೀ ನಿ. ಪ್ರ. ಬಸವಲಿಂಗ ಮಹಾಸ್ವಾಮಿಗಳವರ ನೇತೃತ್ವದ ಕೆಳಗೆ ೩–೪ ತಿಂಗಳವರೆಗೆ ಜರುಗಿದ ''ಅತಿರುದ್ರ'' ಸೇವೆಯು ಮುಖ್ಯ ಆರಾಧನೆಗೆ ಕನಿಷ್ಟ ೨೫–೩೦ ಸಾವಿರ ರೂಪಾಯಿಗಳು ವಿನಿಯೋಗವಾಗಿರಬೇಕು. ಶ್ರೀ ವೀರಪ್ಪನವರು ಸ್ವತಃ ಕೈತುಂಬ ಹಣ ದೊರಕಿಸುವ ಉದ್ಯುಮದಲ್ಲಿದ್ದರೂ ಅವರೊಬ್ಬರಿಂದಲೇ ಈ ಎಲ್ಲ ಕಾರ್ಯಗಳು ಹೇಗೆ ತಾನೆ ಸಾಧ್ಯ ? ಮಹಾಸ್ವಾಮಿಯ ಸೇವೆಯೆಂದರೆ ಸಾಕು ಅವರಿಗೆ ತಮ್ಮ ಮನೆಯ ಕಡೆಯ ಲಕ್ಷ್ಯವೇ ಹಾರಿಹೋಗುತ್ತದೆ. ಉದಾರಿಗಳಾದ ಕೊಡುಗೈ ದೊರೆಗಳಲ್ಲಿ ಸ್ವತಃ ನಿರಭಿಮಾನದಿಂದ ಅಲೆದಾಡಿ ಶ್ರೀ ಸಿದ್ಧಲಿಂಗೇಶ್ವರರ ಸೇವೆಯನ್ನು ಅವರು ಪೂರ್ತಿಗೊಳಿಸುತ್ತಾರೆ.

**ಸರ್ವಾರ್ಪಿತ ಜೀವ :**

ಶ್ರೀ ವೀರಪ್ಪನವರ ಕಾರ್ಯದಲ್ಲಿ ತುಂಬ ಸಹಾಯಕರಾದ ಎಡೆಯೂರಿನ ಶ್ರೀ ನಂಜಪ್ಪನವರನ್ನು ನೆನೆಯದೆ ಹೋದರೆ ಈ ಲೇಖನಪೂರ್ತಿಗೊಳ್ಳುವದಿಲ್ಲ ಮಹಾಸ್ವಾಮಿಗೆ ಸಮರ್ಪಿತವಾದ ಮಹಾ ಜೀವ ಅದು.

## ಆದರ್ಶ ಅರ್ಚಕರು :

ಕೊನೆಯದಾಗಿ ಶ್ರೀ ಸಿದ್ಧಲಿಂಗೇಶ್ವರರಲ್ಲಿ ಅರ್ಚನ ಸೇವೆ ಸಲ್ಲಿಸುತ್ತಿರುವ ಅರ್ಚಕರ ಬಗ್ಗೆ ಬರೆಯುವದು ತುಂಬಾ ಅಗತ್ಯ. ಶ್ರೀ ಕ್ಷೇತ್ರದಲ್ಲಿ ಅರ್ಚಕರು ಮಹಾಸ್ವಾಮಿಗೆ ಅರ್ಚನ ಸೇವೆ ಸಲ್ಲಿಸುವಾಗ ಸಂಪೂರ್ಣ ತಾದಾತ್ಮ್ಯ ಹೊಂದುತ್ತಾರೆ. ವೇದ ಮಂತ್ರಗಳ ಘೋಷಣೆಯೊಡನೆ ನಡೆಯುವ ಆ ವಿದ್ಯುಕ್ತ ಪೂಜೆ ಕೂಡಿದ ಸಮಸ್ತ ಭಕ್ತ ಸ್ತೋಮವನ್ನೆಲ್ಲ ಭಾವಪರವಶರನ್ನಾಗಿ ಮಾಡುತ್ತದೆ.

ಈ ದಿಸೆಯಲ್ಲಿ ಮಹಾಸ್ವಾಮಿಯ ಅರ್ಚನ ಸೇವೆಯಲ್ಲಿಯೇ ತಮ್ಮ ಆಯುಷ್ಯವನ್ನು ಕಳೆದ ಲಿಂಗೈಕ್ಯ ಸಿದ್ಧಲಿಂಗ ಶಾಸ್ತ್ರಿಗಳವರ ಪುತ್ರ ಶ್ರೀ ಮರಿತೋಂಟದಾರ್ಯರು ಹಾಗೂ ಒಡೆಯರು ತುಂಬಾ ಅಭಿನಂದನೀಯರು ಅರ್ಚಕರ ಮಿತಿ ಮೀರಿದ ಹಣದಾಸೆಯಿಂದ ಅನೇಕ ಕ್ಷೇತ್ರಗಳು ಹದಗೆಟ್ಟು ಹೋಗಿರುತ್ತವೆ. ಆದರೆ ಶ್ರೀ ಎಡೆಯೂರ ಕ್ಷೇತ್ರದ ಅರ್ಚಕರು ಈ ಮಾತಿಗೆ ಹೊರತಾಗಿದ್ದಾರೆ ಅರ್ಚನ ಸೇವೆ ಅವರಿಗೆ ಉದರಂಭರಣಕ್ಕಾಗಿರದೆ ಜೀವನ ಸಾರ್ಥಿಕ್ಯಕ್ಕಾಗಿ ಇದೆ ಎಂದೇ ಅವರ ಭಾವನೆ.

■■

*

# ಶ್ರೀ ಜಗದ್ಗುರು ತೋಂಟದಾರ್ಯಪೀಠದ ಉಜ್ವಲ ಪರಂಪರೆ*

ಪೀಠಿಕೆ :

ಜೀವನವು ಸುಖ – ದುಃಖಗಳ ಒಂದು ಸಮ್ಮಿಶ್ರಣ. ಜೀವನಗತಿಯ ಏರುಪೇರುಗಳ ಪ್ರತೀಕವೇ ಮಾನವನ ಸ್ಥಿತಿ. ಈ ದ್ವಂದ್ವಭಾವವನ್ನು ತಾಳಿದ ಜೀವನದಲ್ಲಿ ಏಕೋನ್ಮುಖತೆ ಅಸಂಭವ. ಈ ಕಾರಣದಿಂದ ಕತ್ತಲೆಯ ನಂತರ ಬೆಳಕು, ಬೆಳಕಿನ ನಂತರ ಕತ್ತಲೆ, ಇದು ಪ್ರಾಕೃತಿಕ ಸಂದೇಶ.

''ಯದಾಯದಾಹಿಃ ಧರ್ಮಸ್ಯ ಗ್ಲಾನಿರ್ಭವತಿ ಭೂತಲೇ ತದಾತದಾವತಾರೋಯಂ ಮಹೇಶಸ್ಯ ವರಾನನೆ'' ಎಂಬುದು ಪಾರಮೇಶ್ವರಾಗಮದ ಶ್ಲೋಕ. ಈ ಶ್ಲೋಕವು ಪರಿವರ್ತನಶೀಲ ಜಗತ್ತಿನ ಸಂಕೇತವಾಗಿ ಹೇಳಲ್ಪಟ್ಟಿದೆ. ಹದಿನೈದನೇ ಶತಮಾನ, ಮ್ಲೇಂಛರ ದಬ್ಬಾಳಿಕೆಯಿಂದ ಭಾರತೀಯ ಸಂಸ್ಕೃತಿ ಜರ್ಝರಿತವಾದ ಕಾಲ. ಸಂತಪ್ತ ಜೀವಿಗಳನ್ನು ಎತ್ತಿ ಹಿಡಿಯಲು ದೈವೀಶಕ್ತಿಯ ಆಗಮನ ಆಗ ಅನಿವಾರ್ಯವಾಗಿತ್ತು. ವೀರಶೈವ ಸಮಾಜ ಪುರುಷನಿಗೆ ಅಷ್ಟಾವರಣವೇ ಅಂಗ, ಪಂಚಾಚಾರವೇ ಪ್ರಾಣ, ಷಟಸ್ಥಲವೇ ಆತ್ಮ. ಅಷ್ಟಾವರಣದಲ್ಲಿ ಬರುವ ಸೇವ್ಯಸೇವಕ ವಸ್ತುಗಳಾದ ಗುರು–ಲಿಂಗ–ಜಂಗಮ; ಇವು ''ಏಕಮೂರ್ತಿತ್ರಯೋ ಭಾಗಃ'' ಎಂಬಂತೆ ಒಂದೇ ಪರವಸ್ತುವಿನ ಮೂರು ಭಾಗಗಳಾಗಿವೆ.

''ಸರ್ವಲೋಕೋಪಕಾರಾಯ ಯೋದೇವಃ ಪರಮೇಶ್ವರಃ ಚರತ್ಯತಿಥಿ ರೂಪೇಣ ನಮಸ್ತೇ ಜಂಗಮಾತ್ಮನೇ''. ಇದು ಅಷ್ಟಾವರಣಾಂತರ್ಗತ ಜಂಗಮ ಲಕ್ಷಣವನ್ನು ಕುರಿತು ಸೂಚ್ಯವಾಗಿ ಹೇಳಿದ ಮಾತು.

ಉಪಕಾರವೆಂದರೆ ದುಃಖದಲ್ಲಿದ್ದವರಿಗೆ ನೆರವಾಗುವದು. ಈ ದುಃಖಕ್ಕೆ ಆತ್ಮವಿಸ್ಮೃತಿಯೇ ಮೂಲ ಕಾರಣ. ಅಜ್ಞಾನ ಮೂಲಕವಾಗಿ ಬರುವ ಈ ದುಃಖವನ್ನು ಹೋಗಲಾಡಿಸಲು ಗುರುವಿನ ಅವಶ್ಯಕತೆ ಅನಿವಾರ್ಯ. ಆದ್ದರಿಂದ ಗುರುವಿಗೆ ''ಜ್ಞಾನದಾತಾ ಗುರುಃ'' ಎಂದು ಹೇಳಲಾಗುತ್ತದೆ. ಇಂತಹ ಗುರುಪರಂಪರೆಯಲ್ಲಿ ಪರಮ ಗುರುವಾದ ನಿರಂಜನ ಜಗದ್ಗುರು ತೋಂಟದಾರ್ಯರ ಉಜ್ವಲಪರಂಪರೆ ನಿತ್ಯಸ್ಮರಣೀಯವಾಗಿದೆ.

ಅವತಾರ :

ಪರಶಿವ ಶಿವಾಚಕ್ರಸ್ಥ ನಿರಂಜನ ಗಣೇಶ್ವರನ ಅಪರಾವತಾರಿಯಾದ ಶ್ರೀ ಜಗದ್ಗುರು ತೋಂಟದ ಸಿದ್ಧಲಿಂಗ ಶಿವಯೋಗಿಗಳು ಮಣಿಹವನು ಪೂರೈಸಲು

* ೪೭ನೇ ಕನ್ನಡ ಸಾಹಿತ್ಯ ಸಮ್ಮೇಳನದ ಗದಗ–ಬೆಟಗೇರಿ ಸ್ಮರಣ ಸಂಚಿಕೆ 'ಪ್ರಸಾರ' ಪುಟ–೪೧ ರಿಂದ ೪೪ ರವರೆಗೆ

ಅವನಿಗೆ ಅವತರಿಸಿ, ತಮ್ಮ ಅದ್ವಿತೀಯ ಶಿವಾನುಭವ ಮಹಿಮೆಯಿಂದ, ಶಿವಯೋಗ ಶಕ್ತಿಯ ಪ್ರಭಾವದಿಂದ, ಮಹಿಮಾನ್ವಿತವಾದ ಶಿಷ್ಯಸಮೂಹವು ಕೂಡಿ ಬಸವಾದಿ ಪ್ರಮಥರ ಧರ್ಮಕ್ರಾಂತಿಗಿಂತಲೂ ಹೆಚ್ಚಾಗಿ ಧರ್ಮಕ್ರಾಂತಿಯನ್ನು ಮಾಡಿ ವೀರಶೈವ ಸಮಾಜವನ್ನು, ಇತರ ಜನಾಂಗವನ್ನು ಉದ್ಧರಿಸಿ ದ್ವಿತೀಯ ಪ್ರಭುದೇವರೆಂಬ ತಮ್ಮ ಬಿರುದನ್ನು ಸಾರ್ಥಕಪಡಿಸಿ ಜಗದ್ವಂದ್ಯರಾಗಿ ಬೆಳಗಿದರು.

**ತೋಂಟದಾರ್ಯ ಅಭಿಧಾನ**

ಶ್ರೀ ಸಿದ್ಧಲಿಂಗೇಶನು ತನ್ನ ಅವತಾರ ಕಾಲದಲ್ಲಿ ತುಮಕೂರು ಜಿಲ್ಲೆಯ ನಾಗಿಣಿ ತೀರದ ಕಗ್ಗೇರಿಯ ಕ್ಷೇತ್ರಕ್ಕೆ ಆಗಮಿಸುವನು. ಆ ಕ್ಷೇತ್ರದ ಹೂದೋಟದಲ್ಲಿ ಕೆಲಕಾಲದ ವರೆಗೂ ಶಿವಯೋಗ ಸಮಾಧಿಯಲ್ಲಿರುವನು. ಆಗ ತನ್ನ ಮೇಲೆ ಹುತ್ತ ಬೆಳೆದರೂ ಎಚ್ಚರವಿಲ್ಲದೇ ಲಿಂಗಾನಂದ ಪರವಶವಾಗಿರುವನು.

ಅನಿತರೊಳು ತನ್ನಯ ಕರಸ್ಥಲದ ಲಿಂಗದೊಳು ।
ಮನಭಾವ ಕರಣಂಗಳೇಕೀಕರಿಸಿ ನೋಡು– ।
ತ ನಿಮಿಷೇಷಣದಿಂದ ತಾನೆ ತಾನಾಗಿ ಬೇರಿಲ್ಲದ ಚಲತ್ವದಿಂದೆ ॥

ಶ್ರೀ ಸಿದ್ಧೇಶ್ವರ ಪುರಾಣ

ಮೇಲ್ಕಂಡ ರೀತಿಯಲ್ಲಿ ಲಿಂಗಾಂಗಯೋಗದಲ್ಲಿ ಒಪ್ಪಿರ್ದನು

ಹರುಷದಿಂ ಸೇವಿಸುತ್ತಿರ್ದನುದಿನದೊಳಂ ।
ಕರಮೆಸೆವ ಕಗ್ಗೆರೆಯ ಪುಷ್ಪವಾಟಿಯೊಳು ಗುರು– ।
ವರನೊಲವಿನಿಂ ಪುತ್ತಿನಲ್ಲಿತೋಂಟದಾರ್ಯನೆನಿಪ್ಪ ಪೆಸರಾದುದು ।

ಶ್ರೀ ಸಿದ್ಧೇಶ್ವರ ಪುರಾಣ

**ನಿರಂಜನ ಜಗದ್ಗುರುತ್ವ :**

ಹೀಗೆ ನಿರಂಜನ ಶೂನ್ಯಸಿಂಹಾಸನವನ್ನಲಂಕರಿಸಿದ ಗುರುಪರಂಪರೆಯಲ್ಲಿ ಬಂದು ಪ್ರಭುದೇವರೇ ಮುಂತಾದವರು ಮಹಾಮಹಿಮಾಶಾಲಿಗಳೂ ಶಿವಯೋಗಿ ಪುಂಗವರೂ ಆಗಿದ್ದರು. ಹನ್ನೆರಡನೆಯ ಶತಮಾನದಲ್ಲಿ ಪ್ರಭುದೇವರು ಶೂನ್ಯ ಸಿಂಹಾಸನವನ್ನೇರಿ ಬಸವಾದಿ ಪ್ರಮಥರಿಗೆ ಷಟಸ್ಥಲದ ತತ್ವವನ್ನು ಬೋಧಿಸಿ ಅವರ ಕಡೆಯಿಂದ ಸಮಾಜೋದ್ಧಾರ ಕಾರ್ಯವನ್ನು ಮಾಡಿಸಿದಂತೆ ೧೫ನೆಯ ಶತಮಾನದಲ್ಲಿ ಅದೇ ನಿರಂಜನ ಶೂನ್ಯಸಿಂಹಾಸನವನ್ನೇರಿ, ಸಿದ್ಧಲಿಂಗೇಶ್ವರನು ದ್ವಿತೀಯ ಪ್ರಭುದೇವರೆನಿಸಿಕೊಂಡು ಸಹಸ್ರಾರು ವಿರಕ್ತರಿಗೂ ಏಳನೂರು ಚರಾಧಿಕಾರಿಗಳಿಗೂ ಷಟಸ್ಥಲ ತತ್ವವನ್ನು ಬೋಧಿಸಿ, ಅವರಿಂದ ವೀರಶೈವ ಸಮಾಜದ ಉದ್ಧಾರವನ್ನು ಮಾಡಿಸಿ ತಾನೂ ಮಾಡಿ, ವಿರಾಜಿಸಿದನು.

ಉಜ್ಜಲ ಶಿಷ್ಯಪರಂಪರೆ :

ಸಿದ್ಧಲಿಂಗಯತಿಗೆ ಉಜ್ಜಲಯುಕ್ತವಾದ ಶಿಷ್ಯಪರಂಪರೆಯ ಸಂಖ್ಯೆಯು ಅತ್ಯಧಿಕವಾಗಿರುವದು. ಎಡೆಯೂರಲ್ಲಿ ಗುರುವಿನ ಸ್ಮಾರಕವಾಗಿ ಕಟ್ಟಿಸಿದ ಸಿದ್ಧಲಿಂಗೇಶ್ವರನ ಶಿವಯೋಗಮಂಟಪದ ಪ್ರಾಕಾರದಲ್ಲಿ ಸುಮಾರು ಹದಿನೈದುನೂರರಲ್ಲಿ ಬರೆದ ಶಿಲಾಶಾಸನವಿದೆ.

''ಇಂತಪ್ಪ ಅನಾದಿ ಜಂಗಮವೇ ಜಗದ್ಧಿತಾರ್ಥವಾಗಿ ಚರಿಸಿದ ಕ್ರಮ ವೆಂತೆಂದೊಡೆ: ಜ್ಞಾನಕ್ರಿಯಾಸ್ವರೂಪನುಂ ಸರ್ವಾಂಗಲಿಂಗಿ ಷಟಸ್ಥಲಜ್ಞಾನಿ ಸರ್ವಾಚಾರ ಸಂಪನ್ನ.........''

ಈ ಶಾಸನದಲ್ಲಿ ಅಲ್ಲದೇ ಶ್ರೀ ಸಿದ್ಧೇಶ್ವರಪುರಾಣ, ಚನ್ನಬಸವಪುರಾಣ ಇವುಗಳಲ್ಲಿ ಅನೇಕ ಶಿಷ್ಯರ ಹೆಸರುಗಳು ಉಕ್ತವಾಗಿವೆ. ಈ ಶಿಷ್ಯಕೋಟಿಯಲ್ಲಿ ಗೂಳೂರ ಸಿದ್ಧವೀರಣಾಚಾರ್ಯ, ಘನಲಿಂಗದೇವರು ವಚನಕಾರರಾಗಿ ಪ್ರಸಿದ್ಧಿ ಪಡೆದಿರುವರು. ಗೂಳೂರ ಸಿದ್ಧವೀರಣಾಚಾರ್ಯ ''ವಿರಚಿತ ಶೂನ್ಯ ಸಂಪಾದನೆಯು'' ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದಲ್ಲಿಯ ಪದ್ಧತಿಯಂತೆ ಜಂಗಮಾಧಿಕಾರ – ಪ್ರಧಾನ ಕಾಲದಲ್ಲಿ ಕೊಡುವ ಶಿವಾನುಭವಶಾಸ್ತ್ರ ಗ್ರಂಥಗಳಲ್ಲಿ ಸಿದ್ಧೇಶ್ವರರ ವಚನದಂತೆ ಇದೂ ಮುಖ್ಯವಾಗಿದೆ.

ಶ್ರೀಮನ್ ನಿರಂಜನ ಜಗದ್ಗುರು ಅನಾದಿ ತೋಂಟದಸಿದ್ಧಲಿಂಗೇಶ್ವರನು ಜಂಗಮಪೀಠಾಧಿಕಾರದ ಪರಂಪರೆ ಬೆಳೆಸಿದನು. ಆತನಿಂದ ಹಿಡಿದು, ಇದುವರೆಗೂ ಆಗಿ ಹೋಗಿರುವ ಜಂಗಮಪೀಠಾಧಿಕಾರಿಗಳ ವಿಷಯವಾಗಿ ವಿಸ್ತಾರವಾದ ವಿವರಣೆಯು ಗದಗ ಶ್ರೀ ಜಗದ್ಗುರುತೋಂಟದಾರ್ಯಸಂಸ್ಥಾನಮಠ ಸ್ಥಳಪುರಾಣವಾದ ಶ್ರೀ ಅರ್ಧನಾರೀಶ್ವರ ಪುರಾಣದಲ್ಲಿ ಉಲ್ಲೇಖಿತವಾಗಿದೆ.

೧. ಎಡೆಯೂರ ಅನಾದಿ ತೋಂಟದಸಿದ್ಧಲಿಂಗೇಶ್ವರ ೨. ಬೋಳಬಸವ ಸ್ವಾಮಿಗಳು ೩. ಗೂಳೂರ ಸಿದ್ಧವೀರಸ್ವಾಮಿಗಳು. ೪. ಉದ್ಧನಾರ್ಯರು. ೫. ಹರಿಹರ ಸ್ವಾಮಿಗಳು. ೬. ಭಿಕ್ಷುಕದ ಬಸವಲಿಂಗ ಸ್ವಾಮಿಗಳು. ೭. ಕಟಗಿಹಳ್ಳಿ ರಾಚೋಟಿ ಸ್ವಾಮಿಗಳು. ೮. ಕೌದಿ ಮಹಾಂತ ಸ್ವಾಮಿಗಳು. ೯. ಅರ್ಧನಾರೀಶ್ವರ ಸ್ವಾಮಿಗಳು, ೧೦. ಈಸೂರ ನಂದೀಶ್ವರ ಸ್ವಾಮಿಗಳು. ೧೧. ಉಗ್ಗದ ತೋಂಟದ ಸ್ವಾಮಿಗಳು. ೧೨. ಸದಾಶಿವ ಸ್ವಾಮಿಗಳು. ೧೩. ಹಂಪಸಾಗರದ ಮಹಾಂತಸ್ವಾಮಿಗಳು. ೧೪. ವೃದ್ಧ ತೋಂಟದಾರ್ಯ ಸ್ವಾಮಿಗಳು. ೧೫. ಮೃತ್ಯುಂಜಯ ಸ್ವಾಮಿಗಳು ೧೬. ಸಿದ್ಧೇಶ್ವರ ಸ್ವಾಮಿಗಳು. ೧೭. ಗುರುಬಸವ ಸ್ವಾಮಿಗಳು.

ಹೀಗೆ ಕ್ರಮವಾಗಿ ನಿರಂಜನ ಜಗದ್ಗುರು ಪೀಠಾಧಿಕಾರ ಹೊಂದಿ ವಿರಾಜಿಸಿರುವರು. ಇವರೆಲ್ಲರಿಗೂ ಶ್ರೀ ಜಗದ್ಗುರುತೋಂಟದಾರ್ಯ ಸಂಸ್ಥಾನ ಮಠದ ಪದ್ಧತಿಯಂತೆ ತೋಂಟದಾರ್ಯ ಅಥವಾ ತೋಂಟದಸ್ವಾಮಿಗಳು ಎಂಬ

ಅಭಿದಾನ ಪ್ರಾಪ್ತವಾಗಿರುವದು. ಅಂದಿನ ಪರಂಪರೆಯಿಂದ ಇಂದಿನ ಸ್ವಾಮಿಗಳವರೆಗೂ ನಡೆದು ಬಂದಿದೆ ಮತ್ತು ಅನಾದಿ ಸಿದ್ಧಲಿಂಗೇಶ್ವರನು ಬೋಳಬಸವ ಸ್ವಾಮಿಗಳಿಗೆ ಕೊಟ್ಟ ಶಿವಾನುಭವಶಾಸ್ತ್ರ ಸಂಪಾದನೆಯ ಸಂಪ್ರದಾಯವು ಅನಾದಿ ತೋಂಟದಸಿದ್ಧಲಿಂಗನ ಕಾಲದಿಂದ ಇಲ್ಲಿಯವರೆಗೂ ಪ್ರಾಪ್ತವಾಗಿರುವದು.

ಈ ಪೀಠಾಧಿಕಾರಿಗಳೆಲ್ಲರೂ ಮಹಿಮಾಶಾಲಿಗಳೂ ಶಿವಯೋಗನಿಷ್ಠರೂ ಸಮಾಜೋದ್ಧಾರ ತತ್ಪರರೂ ಆಗಿ ಅನೇಕ ಮಹತ್ಕಾರ್ಯ ಮಾಡಿರುವರು. ತೋಂಟದ ಸಿದ್ಧಲಿಂಗೇಶನ ಜಂಗಮಪೀಠದ ಮಠಗಳಲ್ಲಿ ಬೃಹತ್ ಮಠಗಳಾಗಿ, ಸಂಸ್ಥಾನ ಮಠಗಳೆಂದು ಪರಿವರ್ತನೆ ಹೊಂದಿರುವವು. ಅವು ಮುಖ್ಯವಾಗಿ ಮೂರು ೧. ಎಡೆಯೂರು ೨. ಡಂಬಳ ೩. ಗದಗ.

### ತೋಂಟದ ಜಗದ್ಗುರುಗಳವರ ದಿವ್ಯಪ್ರಭಾವ

ಸಿದ್ಧಲಿಂಗೇಶ್ವರ ಯತಿಯಿಂದ ಎಂಟನೆಯ ಪೀಠಾಧಿಕಾರಿಗಳಾದ ಕೌದಿ ಮಹಾಂತಸ್ವಾಮಿಗಳು ಮತ್ತು ಒಂಭತ್ತನೆಯ ಪೀಠಾಧಿಕಾರಿಗಳಾದ ಅರ್ಧನಾರೀಶ್ವರ ಸ್ವಾಮಿಗಳು ಈ ಉಭಯಸ್ವಾಮಿಗಳ ಕಾಲದಲ್ಲಿ ಇವರು ಮಹಿಮಾತಿಶಯಕ್ಕೆ ವಶರಾಗಿ, ಇವರಲ್ಲಿ ಅನನ್ಯ ಭಕ್ತಿಯಿಂದ ನಡೆದುಕೊಂಡ ವೀರಶೈವರಾದ ಕೆಳದಿಅರಸರು ಅತ್ಯಂತ ಪ್ರಸಿದ್ಧಿಯನ್ನು ಪಡೆದಿರುವರು. ವೀರಶೈವ ಪಂಡಿತರಾದ ಮೌನಪ್ಪಯ್ಯ ಪಂಡಿತ, ಮರಿತೋಂಟದಾರ್ಯ ಮೊದಲಾದವರಿಂದ ''ವೀರಶೈವಾಚಾರ ಕೌಸ್ತುಭ'', ''ವೀರಶೈವಾನಂದಚಂದ್ರಿಕೆ'' ಮೊದಲಾದ ಶ್ರೇಷ್ಠ ಗ್ರಂಥಗಳನ್ನು ಈ ಅರಸರು ಬರೆಯಿಸಿ, ವೀರಶೈವ ಧರ್ಮೋದ್ಧಾರ ಕಾರ್ಯದಲ್ಲಿ ಭಾಗಿಗಳಾಗಿರುವದು ಸರ್ವವಿದಿತವು. ಈ ಧಾರ್ಮಿಕ ಕಾರ್ಯದ ಪ್ರೋತ್ಸಾಹಕ್ಕೆ ಮೇಲೆ ಹೇಳಿದ ಉಭಯಸ್ವಾಮಿಗಳ ಕೃಪಾಶೀರ್ವಾದವೇ ಕಾರಣವು ಮತ್ತು ಕೆಳದಿಬಸಪ್ಪನಾಯಕನು ತನ್ನ ನಾಮದಿಂದ ಅಂಕಿತವಾದ ರತ್ನಖಚಿತವಾದ ಸುವರ್ಣಪಾದುಕೆಗಳನ್ನು ಸ್ವಾಮಿಗಳಿಗೆ ಸಮರ್ಪಿಸಿದನು. ಬಸಪ್ಪನಾಯಕನ ತಾಯಿಯವರಾದ ಮಲ್ಲಾಂಬಿಕೆಯವರು ತಾವೇ ಮಾಡಿದ ತಮ್ಮ ನಾಮದಿಂದ ಅಲಂಕೃತವಾದ ಸೂಜಿಕಲೆ (ಕಸೂತಿ)ಯಿಂದ ಕೂಡಿದ ರೇಷ್ಮೆಯ ಕಂಥೆಯೊಂದನ್ನು ಭಕ್ತಿಕಾಣಿಕೆಯಾಗಿ ಸ್ವಾಮಿಗಳ ಶ್ರೀಪಾದಸನ್ನಿಧಿಗೆ ಸಮರ್ಪಿಸಿರುವರು. ಭಕ್ತಿಯಿಂದ ಅರ್ಪಿಸಿದ ಈ ಬಗೆಯ ವಸ್ತುಗಳು ಈಗಲೂ ಗದುಗಿನ ತೋಂಟದಾರ್ಯಮಠದಲ್ಲಿ ಕಾದಿಡಲ್ಪಟ್ಟಿವೆ. ಇದಲ್ಲದೇ ಸಂಸ್ಥಾಮಠದ ರಥೋತ್ಸವಾದಿ ಕಾರ್ಯಗಳು ಅವಿಚ್ಛಿನ್ನವಾಗಿ ನಡೆಯತಕ್ಕ ವ್ಯವಸ್ಥೆಯನ್ನು ಮಾಡಿರುವದಲ್ಲದೆ ಮಠಕ್ಕೆ ಬುನಾದಿ ಶಾಸನಗಳನ್ನೂ ಕೊಟ್ಟಿರುವರು. ಇದರಂತೆ ಇನ್ನೂ ಅನೇಕ ಅರಸರು, ದೇಸಾಯಿ, ದೇಶಪಾಂಡೆಯವರು ಕೊಟ್ಟ ಭಕ್ತಿಕಾಣಿಕೆಗಳು ಗದಗ ಸಂಸ್ಥಾನ ಮಠದಲ್ಲಿ ಈಗಲೂ ನೋಡಲು ಸಿಗುತ್ತವೆ. ಇವಕ್ಕೆಲ್ಲ ಮುಖ್ಯ ಕಾರಣವು ತೋಂಟದಾರ್ಯ ಜಂಗಮ

ಪೀಠಾಧಿಕಾರಿಗಳಾದ ಮಹಾಸ್ವಾಮಿಗಳವರ ಶಿವಯೋಗ ತೇಜಸ್ಸೇ ಮುಖ್ಯವೆಂಬುದು ಗಮನಾರ್ಹವಾಗಿದೆ.

ಗದಗ ಶ್ರೀ ಜಗದ್ಗುರು ಪೀಠದಲ್ಲಿ ಷೋಡಶ ಕಲಾಯುಕ್ತ ಚಂದ್ರಮನಂತೆ ೧೬ನೇ ಪೀಠದ ಜಗದ್ಗುರುಗಳವರು ವಿರಾಜಮಾನರಾಗಿದ್ದರು, ಅವರ ಕಾಲದಲ್ಲಿ ಸಂಸ್ಥಾನಮಠವು ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿತ್ತು, ಶ್ರೀಗಳವರು ಹತ್ತುಸಾವಿರ ರೂ.ಗಳ ನಿಧಿಯಿಂದ ಒಂದು ಸಂಸ್ಕೃತ ಪಾಠಶಾಲೆಯನ್ನು ತೆಗೆದು, ಅದು ಸಂಸ್ಥಾನ ಮಠದಲ್ಲಿ ಅವಿಚ್ಛಿನ್ನವಾಗಿ ನಡೆಯುವಂತೆ ಮಾಡಿದರು ಮತ್ತು ಶ್ರೀ ತೋಂಟದಾರ್ಯ ಮುದ್ರಣಾಲಯವನ್ನು ಸ್ಥಾಪಿಸಿ ಅದನ್ನು ಮುಂದೆ ಕೆ.ಎಲ್.ಇ. ಸೊಸಾಯಿಟಿಯವರ ವಶಕ್ಕೆ ಒಪ್ಪಿಸಿದರು.

ಭರದಿಂದ ಬೆಳೆಯುತ್ತಿರುವ ಗದುಗಿಗೆ ವಿದ್ಯಾರ್ಥಿಗಳ ಉಚ್ಚಶಿಕ್ಷಣಕ್ಕೋಸ್ಕರ ಕಾಲೇಜಿನ ಅವಶ್ಯಕತೆ ತುಂಬಾ ಇತ್ತು. ಇದನ್ನು ಅನುಲಕ್ಷಿಸಿ ಸಂಸ್ಥಾಮಠದ ಹದಿನೇಳನೇ ಪೀಠದ ಜಗದ್ಗುರುಗಳವರು ಒಂದು ಲಕ್ಷ ಇಪ್ಪತ್ತೈದು ಸಹಸ್ರ ರೂಪಾಯಿಗಳನ್ನು ಕೆ.ಎಲ್.ಇ. ಸಂಸ್ಥೆಗೆ ದಯಪಾಲಿಸಿ ''ಶ್ರೀ ಜಗದ್ಗುರುಗಳವರು ತೋಂಟದಾರ್ಯ ಆರ್ಟ್ಸ್ ಮತ್ತು ಸೈನ್ಸ್ ಕಾಲೇಜ'' ಮೈತಾಳಿ ನಿಲ್ಲಲಿಕ್ಕೆ ಕಾರಣೀಭೂತರಾದರು.

ಈ ಮಹಾಸ್ವಾಮಿಗಳ ಕಾಲದಲ್ಲಿ ಸಂಸ್ಥಾನಮಠದ ಮೂಲ ಕರ್ತೃಗಳ ಚರಿತ್ರೆ ಗ್ರಂಥವಾದ ''ಶ್ರೀ ಸಿದ್ಧೇಶ್ವರ ಪುರಾಣ'' ಮುದ್ರಣವಾಯಿತಲ್ಲದೆ, ಸಂಸ್ಥಾನಮಠದ ವಂಶಾವಳಿ ಗ್ರಂಥವಾದ ''ಶ್ರೀ ಮದರ್ಧನಾರೀಶ್ವರ ಪುರಾಣ''ವೂ ರಚಿಸಲ್ಪಟ್ಟಿತು.

ಹೀಗೆ ಶ್ರೀ ಜಗದ್ಗುರು ತೋಂಟದಾರ್ಯಪೀಠದ ಮೂಲ ಕರ್ತೃಗಳಿಂದ ಹಿಡಿದು ಹದಿನೇಳನೇ ಪೀಠ ಕೊನೆಗೊಳ್ಳುವವರೆಗೂ ಸಮಾಜಕ್ಕೆ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಲಾಭಗಳು ಅತ್ಯಧಿಕವಾಗಿ ಸಂದಿವೆ ಎಂಬುದನ್ನು ನಾವು ಮೇಲ್ಕಂಡ ವಿವರಣೆಯಿಂದ ಮನಗಾಣಬಹುದಾಗಿದೆ. ೧೮ನೇ ಪೀಠದ ಜಗದ್ಗುರುಗಳವರು ಪೂರ್ವದ ಉಜ್ವಲ ಪರಂಪರೆಯ ಪರಮಾದರ್ಶವನ್ನು ಮುಂದುವರಿಸುವದು ಅಪೇಕ್ಷಣೀಯವಾಗಿದೆ.

■■

*

# ಮುಮುಕ್ಷುಗಳ ಪುಣ್ಯಕ್ಷೇತ್ರಂ

**ಸಂಸ್ಕೃತಿತ್ರಯಗಳ ಸಂಗಮ :**

ಗದಗ–ಬೆಟಗೇರಿ ನಗರದ ಮಧ್ಯದಲ್ಲಿ ಹೃದಯದಂತೆ ಒಪ್ಪುತ್ತಿರುವ ''ಶ್ರೀ ನಿರಂಜನ ಜಗದ್ಗುರು ತೋಂಟದಾರ್ಯಮಠ''ವು ನಗರದಲ್ಲಿಯ ದ್ವೈತಾದ್ವೈತ ಸಂಸ್ಕೃತಿಗಳೊಡನೆ ವೀರಶೈವ ಸಂಸ್ಕೃತಿಯ ಮಧ್ಯಬಿಂದುವಾಗಿ ಕಂಗೊಳಿಸುತ್ತಿದೆ.

ದೇಹ–ಪ್ರಾಣ–ಆತ್ಮಗಳು ಕೂಡಿ ಒಂದು ದೇಹವಾಗಿರುವಂತೆ ಯಾವದೇ ಮತ ಸಿದ್ಧಾಂತದಲ್ಲಿಯೂ ಸಹ ಸಾಮಾಜಿಕ ನೈತಿಕ ಮತ್ತು ತಾತ್ವಿಕ ವಿಭಾಗಗಳಿರುತ್ತವೆ.

ಸಾಮಾಜಿಕ ವಿಭಾಗದಲ್ಲಿ ''ಅಷ್ಟಾವರಣ'', ನೈತಿಕ ವಿಭಾಗದಲ್ಲಿ ''ಪಂಚಾಚಾರ'' ಮತ್ತು ತಾತ್ವಿಕ ವಿಭಾಗದಲ್ಲಿ ''ಷಟ್‌ಸ್ಥಲ''. ಈ ದೃಷ್ಟಿಯಿಂದ ವೀರಶೈವ ಸಮಾಜ ಪುರುಷನಿಗೆ ಅಷ್ಟಾವರಣವೇ ಲಿಂಗ, ಪಂಚಾಚಾರವೇ ಪ್ರಾಣ ಮತ್ತು ಷಟ್‌ಸ್ಥಲವೇ ಆತ್ಮವಾಗಿರುತ್ತದೆ.

**ಅಷ್ಟಾವರಣಗಳು :**

ಗುರು–ಲಿಂಗ–ಜಂಗಮ–ಭಸ್ಮ–ರುದ್ರಾಕ್ಷ–ಮಂತ್ರ–ಪಾದೋದಕ–ಪ್ರಸಾದ ಇವು ಎಂಟು ಅಷ್ಟಾವರಣಗಳು. ಇವುಗಳಲ್ಲಿ ಗುರು–ಲಿಂಗ–ಜಂಗಮ ಇವು ಉಪಾಸ್ಯ ವಸ್ತುಗಳು. ಭಸ್ಮ–ರುದ್ರಾಕ್ಷ –ಮಂತ್ರ ಇವು ಉಪಾಸನಾ ಸಾಧನಗಳು. ಪಾದೋದಕ–ಪ್ರಸಾದ ಇವು ಉಪಾಸನಾ ಫಲಗಳು.

**ಪಂಚಾಚಾರಗಳು :**

ಸದಾಚಾರ–ಲಿಂಗಾಚಾರ–ಶಿವಾಚಾರ–ಗಣಾಚಾರ ಮತ್ತು ಭೃತ್ಯಾಚಾರ ಇವು ಐದು ಪಂಚಾಚಾರಗಳು. ವ್ಯಕ್ತಿ ಸಮಾಜದ ಒಂದು ಘಟಕವಾದ ಕಾರಣದಿಂದ ಅವನು ತನ್ನ ಆತ್ಮ ಕಲ್ಯಾಣದೊಡನೆ ಸಮಾಜ ಕಲ್ಯಾಣ ಸಾಧಿಸುವದೇ ಈ ಆಚಾರಗಳ ಗುರಿ.

**ಷಟ್‌ಸ್ಥಲಗಳು :**

ಭಕ್ತ–ಮಹೇಶ–ಪ್ರಸಾದಿ–ಪ್ರಾಣಲಿಂಗ–ಶರಣ ಮತ್ತು ಐಕ್ಯ ಇವು ಆರು ಷಟ್‌ಸ್ಥಲಗಳು. ಶಿವಾಂಶಿಕನಾದ ಜೀವನು ಪುನಃ ಶಿವನಲ್ಲಿ ತಾದಾತ್ಮ್ಯ

* ೪೨ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಗದಗ–ಬೆಟಗೇರಿ ಸಂಸ್ಮರಣಾ ಗ್ರಂಥದಿಂದ.

ಹೊಂದುವದೇ ಈ ಷಟ್‌ಸ್ಥಲಗಳ ಉದ್ದೇಶ. ದೀಕ್ಷೆಯಿಂದ ಶುದ್ಧಾಂಗನಾದ ಜೀವನು ಅಂದರೆ, ಅಂಗನು ಸಾಧನೆಯಿಂದ ಒಂದೊಂದೇ ಮೆಟ್ಟಲುಗಳನ್ನೇರುತ್ತ ಲಿಂಗಭಾವವನ್ನೇ ಹೊಂದುವನು. ಇದೇ ಲಿಂಗಾಂಗ ಸಾಮರಸ್ಯ.

**ಗುರು :**

ಅಷ್ಟಾವರಣದಲ್ಲಿ ಬರುವ ಉಪಾಸ್ಯವಸ್ತುಗಳಾದ ಗುರು–ಲಿಂಗ–ಜಂಗಮ ಗಳಲ್ಲಿ ''ಗುರು''ವು ನಮ್ಮ ಅರುಹಿನ ಕುರುಹಾದ ಲಿಂಗವನ್ನು ಹಸ್ತಮಸ್ತಕ ಸಂಯೋಗದಿಂದ ನಮ್ಮ ಕರಸ್ಥಲಕ್ಕೆ ಕೊಡುವದರಿಂದ ಆತನು ನಮಗೆ ''ದೀಕ್ಷಾಮೂರ್ತಿ''ಯೆಂದು ಪೂಜ್ಯನಾಗಿದ್ದಾನೆ.

**ಲಿಂಗ :**

ಹೀಗೆ ಗುರುವಿನಿಂದ ಪ್ರಾಪ್ತವಾದ ''ಇಷ್ಟಲಿಂಗ''ವು ನಮ್ಮ ಸ್ವಸ್ವರೂಪದ ಕುರುಹಾಗಿರುವದರಿಂದ ಅದು ನಮ್ಮ ನಿತ್ಯಾನುಸಂಧಾನಕ್ಕಾಗಿ ''ಪೂಜಾಮೂರ್ತಿ''.

**ಜಂಗಮ :**

ಇನ್ನು ''ಜಂಗಮ''ವು ನಮಗೆ ''ಭೋಗಮೂರ್ತಿ''. ಏಕೆಂದರೆ ''ಲಿಂಗ''ವು ''ಚರ'', ''ಅಚರ'' ಎಂಬ ಎರಡು ವಿಧವಾಗಿದೆ. ''ಅಚರ''ದಲ್ಲಿ ಶಿವನು ಕೇವಲ ಮಂತ್ರ ಸಂಸ್ಕಾರದಿಂದ ನೆಲೆಸಿರುವನು. ''ಚರ'' ಆ ಸದಾಶಿವನು ಸದಾಕಾಲವೂ ಸನ್ನಿಹಿತನಾಗಿರುವನು. ಅಂತೆಯೇ ''ಚರ'' ನಾಮಕನಾದ ''ಜಂಗಮ'' ವೀರಶೈವರಿಗೆ ಸಾಕಾರ ''ಶಿವ''. ಶಿವಯೋಗದಿಂದ ಶಿವನಲ್ಲಿ ಲೀನಮನಸ್ಕನಾಗಿರುವದರಿಂದ ಈ ಶಿವಯೋಗಿಯ ತೃಪ್ತಿಯೇ ಶಿವನ ತೃಪ್ತಿಯೆಂದು ವೀರಶೈವಶಾಸ್ತ್ರಗಳು ಘಂಟಾಘೋಷವಾಗಿ ಹೇಳುತ್ತವೆ. ಈ ಕಾರಣದಿಂದ ಈತನು ಲಿಂಗಕ್ಕೆ ಚೈತನ್ಯ ಸ್ವರೂಪ. ಜಂಗಮ ನಿಷ್ಠೆಯಿಲ್ಲದೆ ಮಾಡುವ ಇಷ್ಟಲಿಂಗ ಪೂಜೆ ಶ್ರೀ ಬಸವಣ್ಣನವರು ಹೇಳುವಂತೆ ''ಎರೆದರೆ ನೆನೆಯದ ಮರೆದರೆ ಬಾಡದ ಹುರುಳಿಲ್ಲದ ಲಿಂಗಾರ್ಚನೆ'' ಯಾಗಿರುತ್ತದೆ.

**ಶ್ರೀ ನಿರಂಜನ ಜಗದ್ಗುರು ತೋಂಟದ ಬೋಳಬಸವ ಮಹಾಸ್ವಾಮಿಗಳವರು :**

ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗೇಶನಿಂದ ಸಂಪ್ರಾಪ್ತವಾದ ಪೀಠವನ್ನು ಶ್ರೀ ಬೋಳಬಸವೇಶ್ವರರು ಆರೋಹಣ ಮಾಡಿದ ನಂತರ ತಮ್ಮ ಗುರುಗಳಂತೆ ಅವರು ಶಿಷ್ಯಸ್ತೋಮದೊಡನೆ ನಾಡಿನಾದ್ಯಂತ ಸಂಚರಿಸಿ ಷಟ್‌ಸ್ಥಲ ಸಿದ್ಧಾಂತವನ್ನು ಪ್ರಚಾರಗೊಳಿಸಿ ಕೆಲಕಾಲ ಬಿಜ್ಜಾವರದ ಭಕ್ತರ ಕೋರಿಕೆಯ ಮೇರೆಗೆ ಅಲ್ಲಿಯೇ ನಿಂತರು.

ಮುಂದೆ ತೋಂಟದ ಗೌಡನೆಂಬ ಅಲ್ಲಿಯ ಅರಸು ಶಿವಾಧೀನನಾದ ಮೇಲೆ ಶ್ರೀ ಬೋಳಬಸವೇಶ್ವರರು ಭಕ್ತರನ್ನೆಲ್ಲ ಕರೆದು, ತಮ್ಮ ಭಕ್ತ ತೋಂಟದ ಗೌಡನನ್ನು ಕೈಲಾಸದ ಮಹಾದ್ವಾರದಲ್ಲಿ ತಡೆಹಿಡಿಯಲಾಗಿದ್ದು ತಾವೀಗ ಅಲ್ಲಿಗೆ ಹೋಗಬೇಕಾಗಿದೆ ಎಂದು ಹೇಳಿ ಹಾಗೆಯೇ ಮದ್ದಗಿರಿಗೆ ದಯಮಾಡಿಸಿ, ಪಂಡಿತಾಗ್ರೇಸರ ಗೂಳೂರು ಸಿದ್ಧವೀರಾರ್ಯರಿಗೆ ತಮ್ಮ ಪೀಠವನ್ನಿತ್ತು ತಮ್ಮ ಇಷ್ಟ ಲಿಂಗದಲ್ಲಿ ಬಯಲಾದರು.

**ಶ್ರೀ ನಿರಂಜನ ಜಗದ್ಗುರು ತೋಂಟದಸಿದ್ಧವೀರ ಮಹಾಸ್ವಾಮಿಗಳವರು :**

ಷಟ್‌ಸ್ಥಲಾಚಾರ್ಯಪೀಠವನ್ನು ಸ್ವೀಕರಿಸಿದ ನಂತರ ಶ್ರೀ ಸಿದ್ಧವೀರ ಮಹಾಸ್ವಾಮಿಗಳವರು ಸಾಹಿತ್ಯ ಪ್ರಪಂಚದಲ್ಲಿಯೇ ವಿಖ್ಯಾತ ಗ್ರಂಥವೆನಿಸಿದ ''ಶೂನ್ಯ ಸಂಪಾದನೆ''ಯನ್ನು ರಚಿಸಿ ವೀರಶೈವ ಸಾಹಿತ್ಯಕ್ಕೆ ಮಹದುಪಕಾರ ಮಾಡಿದರು. ಅದರಂತೆ ''ಕ್ಷೇತ್ರಜ್ಞ ಸುಮನೋವಾದ'', ''ಶಂಕರಲಿಂಗ ಶತಕ'' ಮುಂತಾದ ಅಮೋಘ ಕೃತಿಗಳನ್ನು ರಚಿಸಿ ತಮ್ಮ ಉದ್ದಾಮ ಪಾಂಡಿತ್ಯವನ್ನು ಸಾರ್ಥಕ್ಯಗೊಳಿಸಿದರು.

ಮುಂದೆ ತಮ್ಮ ಅಧಿಕಾರವನ್ನು ಶ್ರೀ ಉದ್ಧನಾರ್ಯ ಮಹಾಸ್ವಾಮಿಗಳವರಿಗೆ ದಯಪಾಲಿಸುವಾಗ ಷಟ್‌ಸ್ಥಲ ಜ್ಞಾನಸಾರಾಮೃತದೊಡನೆ ''ಶೂನ್ಯ ಸಂಪಾದನೆ'' ಯನ್ನೂ ಆಶೀರ್ವದಿಸಿ ಗೂಳೂರಲ್ಲಿ ಲಿಂಗಾಂಗ ಸಾಮರಸ್ಯವನ್ನು ಹೊಂದಿದರು.

**ಕವಿ ಕುಲಲಲಾಮ ಶ್ರೀ ವಿರಕ್ತ ತೋಂಟದಾರ್ಯರು :**

ನಿರಂಜನ ಜಗದ್ಗುರು ತೋಂಟದ ಸಿದ್ಧವೀರ ಮಹಾಸ್ವಾಮಿಗಳವರಿಂದ ಜಂಗಮ ಸ್ಥಲ ಸ್ವೀಕರಿಸಿದವರೇ ''ವಿರಕ್ತ ತೋಂಟದಾರ್ಯ''ರು.

ಈ ಕವಿ ಕುಲಲಲಾಮರು ''ಶ್ರೀ ಸಿದ್ಧೇಶ್ವರ ಮಹಾಪುರಾಣ'', ''ಚಿದಾನಂದ ಸಿಂಧು'', ''ಪಾಲ್ಕುರಿಕೆಯ ಸೋಮನಾರಾಧ್ಯ ಪುರಾಣ'' ಮುಂತಾದ ಮಹಾಕೃತಿಗಳನ್ನು ರಚಿಸಿದ ಮೇಲೆ ''ಶ್ರೀ ಸಿದ್ಧಲಿಂಗೇಶ್ವರ ಶತಕ'', ''ಕರ್ನಾಟಕ ಶಬ್ದಮಣಿ ಮಂಜರಿ'' ಮುಂತಾದ ಕೆಲವು ಮಹತ್ವದ ಕೃತಿಗಳನ್ನು ವಿರಚಿಸಿದರು. ಅದರಂತೆ ''ಮನೋವಿಜಯ'', ''ಶತಕತ್ರಯ'' ಮತ್ತು ''ಪಂಚಪ್ರಕಾಶ ಗದ್ಯ ಗ್ರಂಥ''ಗಳಿಗೆ ಕನ್ನಡ ವ್ಯಾಖ್ಯಾನ ಬರೆದರು.

**ಶ್ರೀನಿರಂಜನ ಜಗದ್ಗುರು ತೋಂಟದ ಉದ್ಧನಾರ್ಯ ಮಹಾಸ್ವಾಮಿಗಳವರು :**

ಜಗದ್ಗುರು ತೋಂಟದಾರ್ಯ ಪೀಠವನ್ನಲಂಕರಿಸಿದ ಶ್ರೀ ಉದ್ಧನಾರ್ಯ ಮಹಾಸ್ವಾಮಿಗಳವರು ಕೇವಲ ಕನ್ನಡನಾಡು ಮಾತ್ರವಲ್ಲದೆ ತೆಲಗು, ತಮಿಳು ನಾಡುಗಳಲ್ಲಿಯೂ ತಮ್ಮ ಶಿಷ್ಯ ಸಮುದಾಯದೊಡನೆ ಸಂಚರಿಸಿ ತಿರುವಣ್ಣಾ ಮಲೆಯಲ್ಲಿ ಕೆಲಕಾಲವಿದ್ದು ವೀರಶೈವ ಸಿದ್ಧಾಂತವನ್ನು ಎಲ್ಲ ಕಡೆಗೂ ಮೆರೆಸಿದರು.

ನಂತರ ಭದ್ರರಾಜಪುರಕ್ಕೆ ದಯಮಾಡಿಸಿದ ಮಹಾಸ್ವಾಮಿಗಳವರು ತಮ್ಮ ಪೀಠವನ್ನು ಶ್ರೀ ಹರಿಹರ ಮಹಾಸ್ವಾಮಿಗಳವರಿಗೆ ಅನುಗ್ರಹಿಸಿ, ತಮ್ಮ ಇಷ್ಟಲಿಂಗದಲ್ಲಿ ಅದೃಶ್ಯತೆಯನ್ನು ಹೊಂದಿದರು.

**ಶ್ರೀ ನಿರಂಜನ ಜಗದ್ಗುರು ತೋಂಟದ ಶ್ರೀ ಹರಿಹರ ಮಹಾಸ್ವಾಮಿಗಳವರು :**

ಶೂನ್ಯ ಪೀಠಾರೋಹಣ ಮಾಡಿದ ಶ್ರೀ ಹರಿಹರ ಮಹಾಸ್ವಾಮಿಗಳವರು ''ಪರಾ ಜಂಗಮ'' ಸ್ಥಿತಿಯನ್ನು ಹೊಂದಿ ತಮ್ಮ ಮಹಿಮಾತಿಶಯದಿಂದ ಭಕ್ತಾದಿಗಳನುದ್ಧರಿಸಿ, ತಮ್ಮ ಶಿಷ್ಯ ಭಿಕ್ಷುಕದ ಶ್ರೀ ಬಸವಲಿಂಗ ಮಹಾಸ್ವಾಮಿ ಗಳವರಿಗೆ ತಮ್ಮ ತರುವಾಯದ ಅಧಿಕಾರವನ್ನು ಕೊಟ್ಟು, ಹಿರೇಹಡಗಲಿಯಲ್ಲಿ ಲಿಂಗಾಂಗ ಸಮರಸವನ್ನೈದಿದರು.

**ಶ್ರೀ ನಿರಂಜನ ಜಗದ್ಗುರು ತೋಂಟದ ಭಿಕ್ಷುಕದ ಶ್ರೀ ಬಸವಲಿಂಗ ಮಹಾಸ್ವಾಮಿಗಳವರು:**

ಶ್ರೀ ಭಿಕ್ಷುಕದ ಶ್ರೀ ಬಸವಲಿಂಗ ಮಹಾಸ್ವಾಮಿಗಳವರು ಪರಮ ವೈರಾಗ್ಯಶಾಲಿಗಳಾದುದರಿಂದ ಭಿಕ್ಷಾನ್ನದಿಂದಲೇ ತಮ್ಮ ಲಿಂಗಾರ್ಪಿತ ಮಾಡಿಕೊಳ್ಳುತ್ತಿದ್ದರು.

ತಮ್ಮ ಭಕ್ತರಲ್ಲಿ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ನೆಲೆಗೊಳಿಸಿದ ಶ್ರೀ ಬಸವಲಿಂಗ ಮಹಾಸ್ವಾಮಿಗಳವರು ತಮ್ಮ ಪರಂಪರಾಗತ ಪೀಠವನ್ನು ಕಟ್ಟಿಗೆಹಳ್ಳಿ ರಾಚೋಟಿ ಮಹಾಸ್ವಾಮಿಗಳವರಿಗೆ ದಯಪಾಲಿಸಿ, ರುದ್ನೂರಲ್ಲಿ ಭೃಂಗಕೀಟ ನ್ಯಾಯದಂತೆ ತಮ್ಮ ಕರದಿಷ್ಟ ಲಿಂಗದಲ್ಲಿ ಬೆರೆತರು.

**ಶ್ರೀ ನಿರಂಜನ ಜಗದ್ಗುರು ತೋಂಟದ ಕಟಗಿಹಳ್ಳಿ ಶ್ರೀ ರಾಚೋಟಿ ಮಹಾಸ್ವಾಮಿಗಳವರು:**

ಶ್ರೀ ನಿರಂಜನ ಜಗದ್ಗುರುಪೀಠಕ್ಕೆ ಬಂದ ಶ್ರೀ ಕಟಗಿಹಳ್ಳಿ ರಾಚೋಟಿ ಮಹಾಸ್ವಾಮಿಗಳವರು ತಮ್ಮ ಶಿವಯೋಗ ಸಾಮರ್ಥ್ಯದಿಂದ ಮಹಾಮಹಿಮಾ ಶಾಲಿಗಳಾದ ಪ್ರಯುಕ್ತ ಅನೇಕ ಸಂಸ್ಥಾನಿಕರು ಶ್ರೀಗಳವರ ಪ್ರಭಾವದಿಂದ ಆಕರ್ಷಿತರಾಗಿ ಶ್ರೀ ಮಠಕ್ಕೆ ಅನೇಕ ದಾನ–ದತ್ತಿಗಳನ್ನು ಅರ್ಪಿಸಿ ಕೃತಾರ್ಥರಾದರು. ಈಗಲೂ ಆ ಎಲ್ಲ ಕಾಗದ ಪತ್ರಗಳು ಗದಗ ಸಂಸ್ಥಾನ ಮಠದಲ್ಲಿವೆ.

ಕೂಡ್ಲಿ ಗ್ರಾಮದ ಹಿರೇಮಠದಲ್ಲಿಯ ಒಂದು ಗಂಡು ಮಗು ಬಹುಕಾಲ ತಾಯಿಯ ಸ್ತನಪಾನವಿಲ್ಲದೆ ಅದರಂತೆ ವಯೋವೃದ್ಧೆಯ ಕಾಲದಲ್ಲಿಯೂ ಸಹ ಅನ್ನೋದಕಗಳ ಮೇಲಿನ ಆಸೆಯಿಲ್ಲದೆ ಯಾವಾಗಲೂ ಬಾಹ್ಯ ವ್ಯಾಪಾರ ತ್ಯಜಿಸಿ ಅಂತರ್ಮುಖಿಯಾಗಿರುವದನ್ನು ಕಂಡ ಆ ಮಗುವಿನ ತಾಯಿ ತಂದೆಗಳು ದುಃಖಾರ್ತರಾಗಿ ಶಿವನಲ್ಲಿ ಮೊರೆಯಿಡುತ್ತಿದ್ದರು.

ಶಿವಕಾರುಣ್ಯದಿಂದ ಅಕಸ್ಮಾತ್ ಕೂಡ್ಲಿ ಗ್ರಾಮಕ್ಕೆ ಶ್ರೀ ನಿರಂಜನ ಜಗದ್ಗುರು ಕಟ್ಟಿಗೆಹಳ್ಳಿ ರಾಚೋಟಿ ಸ್ವಾಮಿಗಳವರ ಆಗಮನವಾಯಿತು. ಶ್ರೀಗಳು ದಯಮಾಡಿಸಿದ ವಾರ್ತೆ ತಿಳಿಯುತ್ತಲೇ ಆ ಮಗುವಿನ ಮಾತಾ ಪಿತೃಗಳು ತಮ್ಮ ಮಗುವಿನೊಡನೆ ಹೋಗಿ, ಮಗುವನ್ನು ಶ್ರೀಗಳವರ ಪಾದಕ್ಕೆ ಅಡ್ಡ ಕೆಡವಿ ಅದರ ಸ್ಥಿತಿ–ಗತಿಗಳನ್ನೆಲ್ಲ ದುಃಖದಿಂದ ವಿವರಿಸಿದರು. ಪೂಜ್ಯ ಶ್ರೀಗಳು ಮಗುವಿನತ್ತ ಕರುಣಾಪೂರ್ಣ ದೃಷ್ಟಿಯನ್ನು ಬೀರಿ, ಮಂದಹಾಸದಿಂದ ಆ ದಂಪತಿಗಳಿಗೆ ''ಈ ಮಗು ನಮ್ಮದು, ಈಗ ಸಂದಿದೆ. ನಿಮಗೆ ಬೇರೆ ಮಕ್ಕಳಾಗುವವು, ಚಿಂತಿಸಬೇಡಿ'' ಎಂದು ಅಪ್ಪಣೆಗೈದು ಆಶೀರ್ವದಿಸಿ, ಅವರನ್ನು ಕಳಿಸಿಕೊಟ್ಟು ಮಗುವಿನೊಡನೆ ತಿಳಿವಳ್ಳಿ ಗ್ರಾಮಕ್ಕೆ ಹಿಂತಿರುಗಿದರು.

ವೈರಾಗ್ಯವೇ ಅಭಿವೃದ್ಧಿಗೊಂಡಂತೆ ಬೆಳೆಯುತ್ತಿರುವ ಮಗುವಿನ ಉಚಿತ ಶಿಕ್ಷಣವನ್ನು ಶ್ರೀಗಳವರು ತಮ್ಮ ಮಠದಲ್ಲಿಯೇ ಕೊಟ್ಟು ''ಬೃಂಗಕೀಟನ್ಯಾಯ''ದಂತೆ ತಮ್ಮ ಸ್ವರೂಪವನ್ನೇ ಹೋಲುತ್ತಿರುವ ಆ ಸತ್‌ಶಿಷ್ಯನಿಗೆ ತಮ್ಮ ಉತ್ತರಾಧಿಕಾರ ಕೊಡುವದನ್ನು ನಿಶ್ಚೈಸಿದರು.

ಈ ತಮ್ಮ ಸಂಕಲ್ಪಕ್ಕನುಸಾರವಾಗಿ ಜಗದ್ಗುರು ರಾಚೋಟಿ ಸ್ವಾಮಿಗಳವರು ಸಂಬಂಧಪಟ್ಟ ತಮ್ಮ ಮಠಗಳನ್ನೆಲ್ಲ ತಮ್ಮ ಉತ್ತರಾಧಿಕಾರಿಗೆ ತೋರಿಸಿಕೊಂಡು ಬರುವ ಉದ್ದೇಶದಿಂದ ಉಳಿದ ಮಠಗಳಿಗೆ ಹೋಗಿ ಬಂದಂತೆ, ಗದುಗಿನ ತಮ್ಮ ಮಠಕ್ಕೂ ಶಿಷ್ಯಸಮೇತ ಆಗಮಿಸಿದರು.

**ಶಿವಾನುಭವ ಚರ :**

ಶ್ರೀ ಸಿದ್ಧಲಿಂಗೇಶನಿಗೆ ಶಿವಾನುಭವ ಚರಮೂರ್ತಿಗಳು ಅನುಚರರಾಗಿದ್ದಂತೆ, ಆತನ ಪೀಠ ಪರಂಪರೆಯ ಎಲ್ಲ ಶ್ರೀಗಳಲ್ಲಿಯೂ ಆ ಶಿವಾನುಭವ ಚರಮೂರ್ತಿಗಳು ಅನುಯಾಯಿಗಳಾಗಿಯೇ ಇರುತ್ತ ಬಂದಿರುವದು ಅನೂಚಾನವಾಗಿ ನಡೆದುಕೊಂಡು ಬಂದ ಒಂದು ಸತ್ಸಂಪ್ರದಾಯ.

ವ್ಯವಹಾರಿಕವಾಗಿ ಈ ಶಿವಾನುಭವ ಚರಮೂರ್ತಿಗಳು ನಿರಂಜನ ಜಗದ್ಗುರು ಪೀಠವನ್ನಲಂಕರಿಸಿದ ಪೂಜ್ಯಪಾದರಿಗೆ ವಿಧೇಯರಾಗಿರುತ್ತಿದ್ದರೂ ತಾತ್ವಿಕವಾಗಿ ಉಭಯತರಲ್ಲಿ ಸಮಾನತ್ವವೇ ಇರುವದೆಂಬುದು ಶಾಸ್ತ್ರಸಿದ್ಧವಾದ ಮಾತು. ಏಕೆಂದರೆ ''ಶಿವಯೋಗ'' ಹಾಗೂ ''ಶಿವಾನುಭವಗಳ'' ಗುರಿ ಒಂದೇ ಆಗಿರುವದರಿಂದ ಅಲ್ಲಿ ಯಾವುದೇ ತರತಮಕ್ಕೂ ಅವಕಾಶವಿರುವದಿಲ್ಲ.

**ಶಿವಾನುಭವದ ಅವಶ್ಯಕತೆ :**

ಐಹಿಕ ಜೀವನದ ಸುಖಲೋಲುಪ್ತತೆಯೇ ಜೀವನದ ಧ್ಯೇಯವಲ್ಲ, ಶಿವನು ತಾನೆಂಬ ಅನುಭವವೇ ಶಿವಾನುಭವ. ಈ ಶಿವಾನುಭವದ ಪರಿಜ್ಞಾನದಿಂದ ಸಂಸಾರ

ಭೋಗಲಾಲಸೆಯ ತೋರಿಕೆಯ ಸುಖದಭ್ರಾಂತಿ ಅಳಿದು ಹೋಗಿ, ಅವಿರಳಾನಂದಮಯ ಸ್ಥಿತಿ ಪ್ರತಿಯೊಬ್ಬ ವೀರಶೈವನ ಪರಮಗುರಿ. ಈ ಶಿವಾನುಭವ ಮಾರ್ಗದಲ್ಲಿ ಭಕ್ತಕೋಟಿಯನ್ನು ಮುನ್ನಡೆಸಲು ದೀಕ್ಷಾಬದ್ಧರಾದವರೇ ''ಶಿವಾನುಭವ ಚರಮೂರ್ತಿ''ಗಳು. ಇಂಥವರ ಸಂಖ್ಯೆ ಶ್ರೀ ಸಿದ್ಧಲಿಂಗೇಶನ ಕಾಲದಲ್ಲಿ ಮೂರು ಸಾವಿರದವರೆಗೆ ಏರಿತ್ತೆಂಬುದು ಗಮನಾರ್ಹ ಈ ಕಾರಣದಿಂದಲೇ ಆತನು ''ಚರಕುಲ ಚಕ್ರವರ್ತಿ''ಯೆಂಬ ಗೌರವಕ್ಕೆ ಪಾತ್ರನಾದ.

**ಮಠಗಳ ಸ್ಥಾಪನೆ :**

ಶ್ರೀ ಸಿದ್ಧಲಿಂಗೇಶ, ಭಕ್ತೋದ್ಧಾರದ ತನ್ನ ಸಂಚಾರ ಕಾಲದಲ್ಲಿ ಈ ಶಿವಾನುಭವ ಚರಮೂರ್ತಿಗಳನ್ನು ಕರೆದೊಯ್ದು ಜ್ಞಾನಕೇಂದ್ರಗಳಂತಿರುವ ಮಠಗಳನ್ನು ಅಲ್ಲಲ್ಲಿ ಸ್ಥಾಪಿಸುವದರ ಮೂಲಕ ಜ್ಞಾನಜ್ಯೋತಿಗಳಂತಿರುವ ಈ ಶಿವಾನುಭವ ಚರಮೂರ್ತಿ ಗಳನ್ನು ಆಯಾ ಮಠಗಳಲ್ಲಿ ನೆಲೆಗೊಳಿಸಿ ತನ್ನ ಜಗದ್ಗುರುತ್ವವನ್ನು ಸಾರ್ಥಕಗೊಳಿಸಿದ.

**ಜಗದ್ಗುರುತ್ವ :**

ಜಗತ್ತು ಪರಮಾತ್ಮನಿಂದ ಅಭಿವ್ಯಕ್ತವಾಗಿರುವಾಗ ಅಲ್ಲಿ ದುಃಖವೆಂಬುದೇ ಇಲ್ಲ, ಆದರೆ ನಮಗೆ ದುಃಖಾನುಭವವಾಗಲು ನಮ್ಮಲ್ಲಿರುವ ಭ್ರಮೆಯೇ ಕಾರಣ. ಭ್ರಮೆಯೆಂದರೆ ಮಿಥ್ಯಾಜ್ಞಾನ, ಈ ಭ್ರಮೆ ನಿರಸನವಾದ ನಂತರ ಈ ಜಗತ್ತು ಉಪನಿಷತ್ತುಗಳು ಹೇಳುವಂತೆ, ಈಶಾವಾಸ್ಯಮಯವಾಗಿ ತೋರುವದು.

ಇಂಥ ಜಗದ್ರೂಪವಾದ ದುಃಖವನ್ನು ತಾನು ಮತ್ತು ತನ್ನ ಶಿಷ್ಯರಾದ ಶಿವಾನುಭವ ಚರಮೂರ್ತಿಗಳ ಮೂಲಕ ನಿವಾರಣೆ ಮಾಡಿದ ಕಾರಣ ಶ್ರೀ ಸಿದ್ಧಲಿಂಗ; ''ಜಗದ್ಗುರು'' ಎಂಬ ಅರ್ಹತೆಯನ್ನು ಹೊಂದಿದ.

**ಮಹಾಶಿವಯೋಗಿ ಶ್ರೀ ಕರಿಬಸವಚರವರ್ಯರು :**

ಹೀಗೆ ನಿರಂಜನ ಜಗದ್ಗುರು ತೋಂಟದಾರ್ಯಪೀಠದ ಚರವರ್ಯರಲ್ಲಿ ಒಬ್ಬರಾದ ಶ್ರೀ ಕರಿಬಸವ ಮಹಾಶಿವಯೋಗಿಗಳು ಘನ ವೈರಾಗ್ಯಶಾಲಿ ಗಳಾಗಿದ್ದರಿಂದ ಅವರು ಹಿಮಾಲಯದ ಗುಹೆಗಳಲ್ಲಿ ಬಹುಕಾಲ ಶಿವಯೋಗ ಸಾಧನೆ ಮಾಡಿದರು.

ಆ ನಂತರ ವಿದ್ಯಾಕೇಂದ್ರವಾದ ಭೂಕೈಲಾಸವೆನಿಸಿದ ಶ್ರೀ ಕಾಶೀಕ್ಷೇತ್ರದಲ್ಲಿ ಅನೇಕ ವರ್ಷ ಶಾಸ್ತ್ರಚಿಂತನೆಯಲ್ಲಿಯೇ ತೊಡಗಿದರು.

ಆ ಮೇಲೆ ತಮ್ಮ ತಾಯಿನಾಡಾದ ಕನ್ನಡ ದೇಶಕ್ಕೆ ಆಗಮಿಸಿ, ತಾವು ಸಂಚರಿಸಿದ ಭೂಮಿಯನ್ನೆಲ್ಲ ಪಾವನಗೊಳಿಸುತ್ತ ಈಗ ಗದುಗು ಎಂದು ಕರೆಯಲ್ಪಡುವ ಆಗಿನ ''ಕೃತುಪುರ''ಕ್ಕೆ ಚಿತ್ತೈಸಿದರು.

ಈಗ ಮಠವಿರುವ ಪ್ರದೇಶ ಆಗ ಬಿದರು ಫಳಿಯಿಂದ ಕೂಡಿದ ಕಾಡಾಗಿತ್ತು. ಪರಾಜಂಗಮಸ್ಥಿತಿಯಲ್ಲಿದ್ದ ಶ್ರೀ ಕರಿಬಸವ ಶಿವಯೋಗಿಗಳು ವಿಶೇಷವಾಗಿ ಯಾರ ಕಣ್ಣಿಗೂ ಬೀಳದೆ ಬಿದರುಫಳಿ ಮಧ್ಯದಲ್ಲಿದ್ದ ಗುಹೆಯೊಂದರಲ್ಲಿ ಯಾವಾಗಲೂ ಲಿಂಗಾನುಷ್ಠಾನದಲ್ಲಿಯೇ ಮಗ್ನರಾಗಿರುತ್ತಿದ್ದರು. ಕೊನೆಗೆ ಈ ಮಹಾಶಿವಯೋಗಿಗಳು ಅಲ್ಲಿಯೇ ಜೀವಂತ ಶಿವಸಮಾಧಿ ಹೊಂದಿದ ಮೇಲೆ ಯಾರೋ ಭಕ್ತರಿಂದ ಗುಹೆಯ ಮೇಲ್ಭಾಗದಲ್ಲಿ ಗದ್ದುಗೆ ರಚಿಸಲ್ಪಟ್ಟಿತು. ಆದರೆ ಅದು ನಿರ್ಜನ ಪ್ರದೇಶವಾದ ಪ್ರಯುಕ್ತ ಬಹುಕಾಲ ಅಜ್ಞಾತವಾಗಿಯೇ ಉಳಿಯಿತು.

ಗದುಗಿನ ಮೊದಲಿನ ಹೆಸರೇ ಕೃತಪುರ. ಕೃತಮುನಿ ಇಲ್ಲಿ ತಪಸ್ಸನ್ನಾಚರಿಸಿದ ಕಾರಣ ಈ ಊರಿಗೆ ಆತನ ಹೆಸರು ಪ್ರಾಪ್ತವಾಯಿತು. ಈಗ ಕಿಲ್ಲೆ ಎಂದು ಕರೆಯಲ್ಪಡುವ ಭಾಗವೇ ಮೊದಲಿನ ಊರು. ಕಾರಣಾಂತರದಿಂದ ಕೃತಪುರ ದೊರೆಯ ಕಣ್ಣುಗಳೆರಡೂ ಹೋದವು. ರಾಜವೈದ್ಯರ ಎಲ್ಲ ಪ್ರಯತ್ನಗಳೂ ನಿಷ್ಫಲವಾದವು. ಯಾವದು ಮಾನವ ಶಕ್ತಿಗೆ ನಿಲಕುವದಿಲ್ಲವೋ ಅದನ್ನು ದೈವೀ ಶಕ್ತಿಯ ಮೇಲೆ ಹಾಕುವದೊಂದು ಲೋಕಾರೂಢಿ. ಅದೇ ಮೆರೆಗೆ ಅರಸು ಅನೇಕ ದೈವಗಳ ಮೇಲೆ ಹರಕೆ ಹೊತ್ತರೂ ಒಂದೂ ಫಲಿಸಲಿಲ್ಲ.

ಕೊನೆಗೊಬ್ಬರು ಚಿಂತಾಕ್ರಾಂತನಾದ ಅರಸನಿಗೆ ''ಕಿಲ್ಲೆಯ ಪೂರ್ವದಲ್ಲಿರುವ ಬಿದರು ಫಳಿಯಲ್ಲಿ ಒಂದು ಗದ್ದುಗೆಯಿದೆ ಅದಕ್ಕೆ ಶರಣು ಹೊಕ್ಕರೆ ಕಳೆದು ಹೋದ ಕಣ್ಣುಗಳು ಮರಳಿ ಬರಬಹುದು'' ಎಂದು ಹೇಳಿದರು. ದೊರೆಗೆ ಹೋದ ಜೀವ ಬಂದಂತಾಯಿತು. ಮಾರನೇ ದಿನವೇ ಅರಸು ಸ್ನಾನ ತೀರಿಸಿಕೊಂಡು ಮಡಿಯ ವಸ್ತ್ರವನ್ನುಟ್ಟು, ಪೂಜೋಪಕರಣಗಳೊಡನೆ ''ಗದ್ದುಗೆಯ ದರ್ಶನಕ್ಕೆ ಬಂದನು. ನಂತರ ಗದ್ದುಗೆಯನ್ನು ವಿಧಿವತ್ತಾಗಿ ಪೂಜಿಸಿದ; ದೊರೆ ಕಳೆದು ಹೋದ ತನ್ನ ಕಣ್ಣುಗಳನ್ನಿತ್ತು ಕಾಪಾಡಬೇಕೆಂದು ಗದ್ದುಗೆಗೆ ಅನನ್ಯವಾಗಿ ಪ್ರಾರ್ಥಿಸಿಕೊಂಡನು.

ಮಾರನೇ ದಿನ ಪ್ರಾತಃಕಾಲ ತನ್ನ ಕಿಲ್ಲೆ ಬಳಿಯಲ್ಲಿರುವ ಶ್ರೀ ತ್ರಿಕೂಟೇಶ್ವರ ದೇವಸ್ಥಾನದ ಘಂಟಾನಿನಾದದಿಂದ ಎಚ್ಚರವಾದ ಅರಸನಿಗೆ ಅರಮನೆಯ ಗಾವಾಕ್ಷದ ಮೂಲಕ ಶ್ರೀ ತ್ರಿಕೂಟೇಶ್ವರ ದೇವಾಲಯದ ಗೋಪುರದ ಮೇಲಿನ ಹೊಂಗಳಸ ಉದಯ ರವಿಯ ಕಿರಣಗಳಿಂದ ಪ್ರಕಾಶಮಾನವಾಗಿ ಹೊಳೆಯುವದು ಕಂಡಿತು.

ದೊರೆ ತನ್ನನ್ನೇ ತಾನು ನಂಬದಾದ, ಹೊನ್ನಿನ ದರ್ಪಣದಲ್ಲಿ ತನ್ನ ಮುಖವನ್ನು ನೋಡಿಕೊಂಡ. ಅರಸನಿಗೆ ಅರಳಿದ ಬಿಳಿದಾವರೆಯಂತಿರುವ ತನ್ನ ನೇತ್ರದ್ವಯವನ್ನು ಕಂಡು ಗದ್ದುಗೆಯ ಮೇಲಿನ ಭಕ್ತಿ ಪರವಶತೆಯಿಂದ ಆನಂದಾಶ್ರುಗಳು ಹನಿಹನಿಯಾಗಿ ಉದುರಿದವು. ತಕ್ಷಣವೇ ಸ್ನಾನ ತೀರಿಸಿಕೊಂಡ ಅರಸು, ಪೂಜಾ ಸಾಹಿತ್ಯದೊಡನೆ ಮತ್ತೆ ಗದ್ದುಗೆಯ ದರ್ಶನಕ್ಕೆ ರಾಜಪರಿವಾರ

ಸಹಿತ ಬಂದು ಭಕ್ತಿ ಭಾವದಿಂದ ಗದ್ದುಗೆಗೆ ನಮಸ್ಕರಿಸಿ ಸುತ್ತುವರಿದ. ತನ್ನ ಕಣ್ಣಿಗೆ ಕಾಣುವಷ್ಟು ಭೂಮಿಯನ್ನು ಗದ್ದುಗೆಗೆ ಭಕ್ತಿ ಕಾಣಿಕೆಯಾಗಿ ಸಲ್ಲಿಸಿ ಕೃತಾರ್ಥನಾದನು.

**ಕಣ್ಣಿನ ಮಾನೆ :**

ಈ ಭೂ ಕಾಣಿಕೆ ಅಂದಿನಿಂದ ಇಂದಿನವರೆಗೆ ಗದಗ "ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ"ದ ವಶದಲ್ಲಿದ್ದು "ಕಣ್ಣಿನ ಮಾನೆ" ಎಂದು ಪ್ರಸಿದ್ಧವಾಗಿದೆ. ಹಿಂದಿನಿಂದ ಗದ್ದುಗೆಯ ಮೇಲ್ಭಾಗದಲ್ಲಿ ಶಿಲಾಮಂಟಪ ಮತ್ತು ಗದ್ದುಗೆಯ ಹಿಂಭಾಗದಲ್ಲಿ ಶಿಲಾಮಠಗಳು ಶ್ರೀ ಜಗದ್ಗುರು ತೋಂಟದಾರ್ಯಪೀಠ ಪರಂಪರೆಯವರಿಂದ ಒಳ್ಳೇ ಭವ್ಯವಾಗಿ ಕಟ್ಟಿಸಲ್ಪಟ್ಟವು.

**ಗದಗು :**

ಮೊದಲು ಅಜ್ಞಾತವಾಗಿದ್ದ "ಗದ್ದುಗೆ" ಹೀಗೆ ರಾಜಪೂಜಿತವಾದ ನಂತರ ಅದರ ಮಹಿಮಾತಿಶಯಗಳು ಹೆಚ್ಚಾಗಿ ಬೆಳಕಿಗೆ ಬಂದು ಬರಹೋಗುವ ಭಕ್ತರ ಸಂಖ್ಯೆಯು ಅಧಿಕವಾಯಿತು. ಇದರಿಂದ "ಕೃತಪುರ" ಎಂಬ ಹೆಸರು ಕಡಿಮೆಯಾಗಿ "ಗದ್ದುಗೆ" ಶಬ್ದದ ರೂಪಾಂತರವಾದ "ಗದುಗು" ಎಂಬ ಜನತೆಯ ನೆಚ್ಚಿನ ಹೆಸರೇ ರೂಢಿಯಲ್ಲಿ ಬಲವಾಗಿ ಬಂದು ಸ್ಥಿರವಾಗಿ ಉಳಿಯಿತು. ಬಹುತರ ಯಾವದೇ ಊರಿಗೆ ಒಂದು ಹೆಸರು ಬರಲಿಕ್ಕೆ ಅದರದೇ ಆದ ಒಂದು ಇತಿಹಾಸವಿರುವಂತೆ ಮುಂದೆ ಆ ಹೆಸರಿನ ಬದಲಾವಣೆಯಾಗಲಿಕ್ಕೆ ಯಾವುದೋ ಒಂದು ಚರಿತ್ರಾರ್ಹ ಘಟನೆಯೂ ಕಾರಣವಾಗಿರುತ್ತದೆ.

ಉದಾಹರಣೆಗೆ ಶ್ರೀ ಸಿದ್ಧಲಿಂಗೇಶನ ಕ್ಷೇತ್ರ "ಎಡೆಯೂರ"ನ್ನು ಮೊದಲು "ಕೂಡಗಿಹಳ್ಳಿ" ಎಂಬುದಾಗಿ ಕರೆಯುತ್ತಿದ್ದರು ಎಂಬುದನ್ನು ಇದೇ ಲೇಖದಲ್ಲಿ ಆತನ ಚರಿತ್ರೆ ನಿರೂಪಿಸುವಾಗ ತಿಳಿಸಿದೆ. ಇತಿಹಾಸದಲ್ಲಿ ಇಂತಹ ಬದಲಾವಣೆ ಗಳಾಗುವದೇನು ಹೊಸದಲ್ಲ.

ಇಂಥ ಅಘಟಿತ ಘಟನಾ ಸಾಮರ್ಥ್ಯವುಳ್ಳ ಮಹಾಮಹಿಮಾನ್ವಿತ ಶಿವಯೋಗ ಸಮಾಧಿಯಾದ "ಗದ್ದುಗೆ"ಯಿರುವ ತಮ್ಮ ಪ್ರಾಚೀನಮಠವಿದ್ದ ಗದುಗಿಗೆ ಹಿಂದೆ ಹೇಳಿದಂತೆ ಶ್ರೀ ಜಗದ್ಗುರು ಕಟಗಿಹಳ್ಳಿ ರಾಚೋಟಿ ಮಹಾಸ್ವಾಮಿಗಳವರು ದಯಮಾಡಿಸಿದಾಗ ಶ್ರೀಗಳಾದ ಮಾನ್ವಿಯವರೇ ಮುಂತಾದ ಅನೇಕ ಸದ್ಭಕ್ತ ಮಹಾಶಯರು ಭೂ ಕಾಣಿಕೆಯೇ ಮೊದಲಾದ ದಾನ ದತ್ತಿಗಳನ್ನು ಸಲ್ಲಿಸಿ ಧನ್ಯರಾದರು. ಆ ಮೇಲೆ ಶ್ರೀ ಜಗದ್ಗುರುಗಳು ಶಿಷ್ಯನೊಡನೆ ತಮ್ಮ ಸ್ವಸ್ಥಾನವಾದ ತಿಳವಳ್ಳಿಗೆ ದಯಮಾಡಿಸಿ ತಮ್ಮ ಶಿಷ್ಯೋತ್ತಮನಾದ ಮಹಾಂತೇಶನಿಗೆ ಷಟ್‌ಸ್ಥಲೋಪದೇಶ ಮಾಡಿ ಶಿವ ಸಮಾಧಿಸ್ಥರಾದರು.

**ಶ್ರೀ ನಿರಂಜನ ಜಗದ್ಗುರು ತೋಂಟದ ಕೌದೀಮಹಾಂತ ಸ್ವಾಮಿಗಳವರು :**

ಸ್ವಭಾವತಃ ಪರಮ ವೈರಾಗ್ಯಶಾಲಿಗಳಾದ ಶ್ರೀ ಮಹಾಂತಸ್ವಾಮಿಗಳವರು ಒಂದೆಡೆ ಹೆಚ್ಚು ಕಾಲ ನಿಲ್ಲದೆ ಸಂಚಾರದಲ್ಲಿರುವಾಗ ಅವರಿಗೆ ಲಿಂಗದಾಣತಿಯಂತೆ ಪಂಪಾ ಸರೋವರ ಕಾಣಬೇಕೆಂಬ ಲವಲವಿಕೆಯುಂಟಾಯಿತು.

ಮಾರ್ಗದಲ್ಲಿ ''ಹಗರಿ'' ಎಂಬುದೊಂದು ಹಳ್ಳಿ, ಅದರ ತೀರದಲ್ಲಿ ನಿಂತು ಹೀಗೆ ಆಲೋಚಿಸುತ್ತಿರುವಾಗ ಶ್ರೀ ಗಂಗಾಮಾತೆ ಪೂರ್ವದಲ್ಲಿ ಭಗೀರಥನೊಡನೆ ಸಾಗಿದಂತೆ ಈಗ ಈ ಶಿವಯೋಗಿಯೊಡನೆ ಹೊರಟಳೋ ಏನೋ ಎಂಬಂತೆ ಹಗರಿಯ ಹಳ್ಳ ಶ್ರೀಗಳವರ ಮುಂಭಾಗದಲ್ಲಿ ಜುಳು ಜುಳು ನಿನಾದದೊಡನೆ ಪ್ರವಹಿಸುತ್ತ ಮುಂದೆ ಸಾಗಿತು. ತಮಗೆ ಗಂಗಾಮಾತೆ ಮಾರ್ಗದರ್ಶನ ಮಾಡುತ್ತಿರುವಳೆಂದು ಭಾವಿಸಿದ ಶ್ರೀಗಳವರು ಹಗರಿಯ ಪ್ರವಾಹದೊಡನೆಯೇ ಸಾಗಿ ನೇರವಾಗಿ ಪಂಪಾ ಸರೋವರವನ್ನೇ ತಲುಪಿದರು.

ಶ್ರೀಗಳು ಪಂಪಾಸರೋವರದ ತೀರದಲ್ಲಿ ಲಿಂಗಾನುಷ್ಠಾನದಲ್ಲಿ ಕಾಲಕಳೆಯುತ್ತಿರುವಾಗ ಅಚರಲಿಂಗವಾದ ಶ್ರೀ ಪಂಪಾ ವಿರೂಪಾಕ್ಷನು ತನಗೆ ಚೈತನ್ಯ ಸ್ವರೂಪನಾದ ಚರಲಿಂಗವೆನಿಸಿದ ಜಂಗಮ ಮೂರ್ತಿ ಶ್ರೀ ಮಹಾಂತಸ್ವಾಮಿಗಳವರಿಗೆ ದರ್ಶನ ಕೊಟ್ಟು ಅಲ್ಲಿಯ ''ಶ್ರೀ ಮಹಾಂತಲಿಂಗ'' ಅಭಿಧಾನದಿಂದ ನೆಲೆಸಿದನು. ಈಗ ಆ ಲಿಂಗ ಅಲ್ಲಿ ದರ್ಶನೀಯವೆನಿಸಿದೆ.

ತದನಂತರ ಶ್ರೀ ಮಹಾಂತಸ್ವಾಮಿಗಳು ಅಲ್ಲಿಂದ ಅದೇ ಹಗರಿಯ ತೀರ ಹಿಡಿದು ಹಿಂದಿರುಗುತ್ತಿರುವಾಗ ಹಗರಿಯ ದಡದಲ್ಲಿ ರಮ್ಯವಾದ ವನಶ್ರೀಯೊಂದು ದೃಷ್ಟಿಗೆ ಗೋಚರಿಸಿತು. ಶ್ರೀಗಳು ಆ ವನದ ಮಧ್ಯದಲ್ಲಿ ಹಾಯ್ದು ಹೋಗುತ್ತಿರುವಾಗ ಪಕ್ಕದಲ್ಲಿದ್ದ ಒಂದು ಚಿಕ್ಕ ಗುಡಿಸಲಿನಿಂದ ಓರ್ವ ವ್ಯಕ್ತಿ ಬಂದು ಶ್ರೀಗಳವರಿಗೆ ದಂಡವತ್ತ ಪ್ರಣಾಮ ಮಾಡಿದನು.

ಹಿಂದೆ ಯಾರೋ ಬಂದಂತಾಗಿ ಹೊರಳಿ ನೋಡಿದ ಶ್ರೀಗಳು ಸಾಷ್ಟಾಂಗವೆರಗಿದವನನ್ನುದ್ದೇಶಿಸಿ ''ತಮ್ಮಾ ! ಯಾರು ನೀನು ಮೇಲಕ್ಕೇಳು'' ಎಂದು ವಾತ್ಸಲ್ಯದಿಂದ ಕೇಳಿದರು. ಆ ವ್ಯಕ್ತಿ ಕೂಡಲೇ ಎದ್ದು ನಿಂತು ಶ್ರೀಗಳವರ ಅಲೌಕಿಕ ಶಿವತೇಜಸ್ಸನ್ನು ಕಂಡು ಅವನಿಗೆ ಶರೀರದಲ್ಲಿ ಭಕ್ತಿ ಕಂಪನವುಂಟಾಯಿತು.

ಅವನ ಗದ್ಗದಿತ ಕಂಠದಿಂದ ''ಮಹಾತ್ಮರೇ ನಾನು ಈ ವನದ ಆಚೆಗೆ ಒಂದು ಮೈಲಿನ ಮೇಲಿರುವ ಬಾಚಿಗೊಂಡನಹಳ್ಳಿಯ ದುಷ್ಕೃತ್ ಕರ್ಮ ಪರಿಪಾಕದ ಫಲವಾಗಿ ನನಗೆ ಕುಷ್ಠರೋಗ ಆವತರಿಸಿದ್ದರಿಂದ ಊರವರು ಮತ್ತು ಮನೆಯವರು ನನ್ನನ್ನು ಹೊರದೂಡಿ ಈ ನಾಡಿನ ಮಧ್ಯ ಈ ಗುಡಿಸಲಿನಲ್ಲಿ ಇಟ್ಟರು. ಮನುಷ್ಯನ ಸುಖ ಜೀವನಕ್ಕೆ ಹಣವೇ ಕಾರಣವೆಂದು ತಿಳಿದ ನಾನು ನಾನಾ ರೀತಿಯಲ್ಲಿ ದುಡ್ಡನ್ನು ಗಳಿಸಿ ಧನಿಕನೂ ಆದೆ. ಮಡದಿ ಮಕ್ಕಳನ್ನು ಯಾವ ಕೊರತೆಯೂ ಬಾರದಂತೆ

ರಕ್ಷಿಸುವಲ್ಲಿಯೇ ನನ್ನ ಆಯುಷ್ಯದ ಬಹುಭಾಗ ಹೋಯಿತು. ಆದರೆ ಈಗ ಆದದದ್ದೇನು? ನಾನು ರೋಗಗ್ರಸ್ತನಾದ ಕೂಡಲೇ ಅದೇ ಸತಿಸುತರು ನನ್ನನ್ನು ಹೆಣದಂತೆ ತಿರಸ್ಕರಿಸಿ ದೂರೊಗೆದರು. ಈ ನನ್ನ ಆಪತ್ಕಾಲದಲ್ಲಿ ನಾನು ಗಳಿಸಿದ ಹಣ ನನ್ನನ್ನು ರಕ್ಷಿಸಲಿಲ್ಲ. ಆದರೆ ಅದನ್ನು ಗಳಿಸುವಲ್ಲಿ ಮಾಡಿದ ಪಾಪ ಮಾತ್ರ ಈ ರೋಗರೂಪದಲ್ಲಿ ನನ್ನನ್ನು ಬೆಂಬತ್ತಿ ಕಾಡಿತು. ರೋಗದ ಮೂಲಕ ಹೀಗೆ ವನವಾಸಿಯಾದ ನಂತರ ಕೃತಾಪರಾಧಗಳ ಬಗ್ಗೆ ಪರಿತಪಿಸುತ್ತ ನಿತ್ಯ ಪರಮಾತ್ಮನ ಧ್ಯಾನ ಮಾಡುವದೇ ನನ್ನ ಜೀವನ ಕ್ರಮವಾಯಿತು. ಪಶ್ಚಾತ್ತಾಪದಿಂದ ಪಾಪ ಪರಿಹಾರವಾಗುವದೆಂದು ಬಲ್ಲವರು ಹೇಳುತ್ತಾರೆ. ಅಂತೆಯೇ ಇಂದು ನಾನು ಗುಡಿಸಲಿನಲ್ಲಿ ರೋಗದ ಬಾಧೆಯಿಂದ ಬಳಲುತ್ತ ಏಳಲಾಗದೆ ಬಿದ್ದುಕೊಂಡಿರುವಾಗ ಗುಡಿಸಲಿನಲ್ಲಿ ಯಾರದೋ ನೆರಳು ಬಿದ್ದಂತಾಯಿತು. ಬಹುಶಃ ನನ್ನ ಮಗನ ಹೊರತು ಈ ಕಡೆಗೆ ಯಾರೂ ಸುಳಿಯುತ್ತಿರಲಿಲ್ಲ. ಪ್ರತಿದಿನ ನನ್ನ ಹೊಟ್ಟೆಗೆ ಏನಾದರೂ ಕೊಡಲಿಕ್ಕೆ ಬರುತ್ತಿರುವ ಅವನು ನಾಯಿಗೆ ಇಟ್ಟಂತೆ ತಂದ ಅಡಿಗೆಯನ್ನು ನನಗೆ ತೋರಿಸಿ ದೂರದಲ್ಲಿಟ್ಟು ಹೋಗುತ್ತಿದ್ದನು. ಆದರೆ ಅವನು ಬರುವ ವೇಳೆ ಇದಲ್ಲ ಯಾರು ಬಂದಿರಬೇಕೆಂದು ಎದ್ದು ಬಂದು ಹೊರಗೆ ನೋಡಿದೆ. ಆಗ ತಮ್ಮ ದರ್ಶನವಾಗಿ ಆ ಪರಶಿವನೇ ನನ್ನ ಮೊರೆಯನ್ನು ಕೇಳಿ ಬಂದಿರಬೇಕೆಂದು ಭಾವಿಸಿದೆ''. ಎಂದು ತನ್ನ ಆತ್ಮ ನಿವೇದನೆಯನ್ನು ಒಂದುಳಿಯದಂತೆ ಹೇಳಿದನು.

ಶ್ರೀಗಳವರಿಗೆ ಕರುಣೆ ಉಕ್ಕಿ ಬಂದಿತು. ಆ ಭಕ್ತನನ್ನು ಕೃಪಾದೃಷ್ಟಿಯಿಂದ ನೋಡಿ, ಈಗ ನೀನು ಆರೋಗ್ಯವಾಗಿಯೇ ಇರುವೆ, ರೋಗವೇ ಇಲ್ಲ'' ಎಂದು ಹೇಳಿದರು. ಆಗ ಭಕ್ತನು ತನ್ನ ದೇಹವನ್ನು ನೋಡಿಕೊಂಡಾಗ ರೋಗದ ಯಾವ ಲಕ್ಷಣವೂ ಇರಲಿಲ್ಲ. ಅವನ ಆನಂದಕ್ಕೆ ಕೊನೆಯೇ ಇಲ್ಲದಾಯಿತು. ಆಗ ಅವನು ಶ್ರೀಗಳನ್ನು ಕುರಿತು ''ಗುರುವೆ, ಈ ಸ್ವಾರ್ಥಮಯ ಪ್ರಪಂಚದಲ್ಲಿ ಎಲ್ಲರೂ ಕೈಬಿಟ್ಟಾಗ ನೀನೇ ನನ್ನನ್ನು ಎತ್ತಿಹಿಡಿದು ಉದ್ಧರಿಸಿದೆ. ಇನ್ನು ಮುಂದೆ ಎಂದೂ ನನ್ನನ್ನು ಕೈ ಬಿಡಬೇಡ ತಂದೆ'' ಎಂದು ಪುನಃ ಪಾದಕ್ಕೆರಗಿ ಅಂಗಲಾಚಿ ಬೇಡಿಕೊಂಡ. ಗುರುಗಳಿಗೆ ಅವನ ಕಳಕಳಿಯ ಪ್ರಾರ್ಥನೆಯನ್ನು ಮೀರಿ ಹೋಗುವದಾಗಲಿಲ್ಲ. ಅವರೆಷ್ಟೇ ಪ್ರಬಲ ವಿರಾಗಿಗಳಾಗಿದ್ದರೂ ಭಕ್ತನ ಭಕ್ತಿಪಾಶಕ್ಕೆ ಅವರು ಮಣಿಯಲೇ ಬೇಕಾಯಿತು. ಮುಂದೆ ಆ ಭಕ್ತನಿಂದ ಗುರುಗಳಿಗಾಗಿ ಅದೇ ಸ್ಥಳದಲ್ಲಿ ಶಿವಯೋಗ ಮಂಟಪ ಹಾಗೂ ಮಠಗಳು ನಿರ್ಮಾಣವಾದವು. ಶ್ರೀಗಳೂ ಅಲ್ಲಿಯೇ ಸ್ಥಾಯಿಯಾಗಿ ನೆಲೆಸಿದರು.

**ಆದರ್ಶ ಗುರುತ್ವ :**

ಒಂದು ದಿನ ಮಹಾಸ್ವಾಮಿಗಳವರು ಎಂದಿನಂತೆ ಬಹಿರ್ದಿಶೆಗೆ ಹೋಗಿ ಬಂದು ಮಠದ ಹತ್ತಿರದ ಹಗರಿಹಳ್ಳದಲ್ಲಿ ತಮ್ಮ ಹಸ್ತ ತೊಳೆಯುತ್ತಿದ್ದರು. ಆಗ ಅಲ್ಲಿಗೆ

ಬಟ್ಟೆ ಒಗೆಯಲು ಬಂದ ಮಹಿಳೆಯರು ಕಠೋರಬ್ರಹ್ಮ ಚರ್ಯದಿಂದ ಪುಟವಿಟ್ಟ ಚಿನ್ನದಂತೆ ಹೊಳೆಯುತ್ತಿದ್ದ ಶ್ರೀಗಳವರ ಅಂಗ ಕಾಂತಿಯನ್ನು ಕಂಡು ಕಾಮ ಚೇಷ್ಟೆಗಳನ್ನು ಮಾಡುತ್ತ ತಮ್ಮಲ್ಲಿ ಪರಸ್ಪರ ಮೋಹಕನುಡಿಗಳನ್ನಾಡಹತ್ತಿದರು.

ಇದನ್ನಾಲಿಸಿದ ಶ್ರೀಗಳು ತುಂಬಾ ಖೇದಪಟ್ಟು ''ಗುರುದರ್ಶನದಿಂದ ಭಕ್ತರಲ್ಲಿ ಭಕ್ತಿ–ಜ್ಞಾನ–ವೈರಾಗ್ಯಗಳುಂಟಾಗಬೇಕು. ಅದಕ್ಕೆ ಬದಲಾಗಿ ಇವರಿಗೆ ಈ ಕಾಮ–ಮೋಹಕಗಳೇಕೆ?'' ಎಂದು ವಿಷಾದಿಸಿ ಹಾಗೆಯೇ ಹಗರಿ ಹಳ್ಳದ ಆಚೆ ದಡದಲ್ಲಿದ್ದ ರುದ್ರಭೂಮಿಗೆ ತೆರಳಿ ತಮ್ಮ ಮೊದಲಿನ ವೇಷ–ಭೂಷಣಗಳನ್ನೆಲ್ಲ ತೆಗೆದುಹಾಕಿ ಅಲ್ಲಿಯೇ ಚಿತಾಭಸ್ಮ ಲೇಪಿಸಿಕೊಂಡು ಪಕ್ಕದಲ್ಲಿ ಬಿದ್ದ ಕೌದಿಯನ್ನು ಹೊದೆದುಕೊಂಡು ಮತ್ತೆ ಅದೇ ಮಹಿಳೆಯರಿದ್ದ ಸ್ಥಾನಕ್ಕೆ ವಿಕಟವಾಗಿ ನಗಹತ್ತಿದರು.

ಇದರಿಂದ ಹೇಯಗೊಂಡ ಆ ಹೆಣ್ಣು ಮಕ್ಕಳು ಶ್ರೀಗಳವರನ್ನು ಪರಿಪರಿಯಾಗಿ ಹೀಯಾಳಿಸಲು ಶ್ರೀಗಳವರಿಗೆ ಆಗ ಸಂತೃಪ್ತಿ ಉಂಟಾಯಿತು. ಎಲ್ಲಿಯವರೆಗೆ ಭಕ್ತನಿಗೆ ಸಂಸಾರದಲ್ಲಿ ಹೇಯ ಭಾವನೆ ಬರುವದಿಲ್ಲವೋ ಅಲ್ಲಿಯ ವರೆಗೆ ಆ ಭಕ್ತ ಮುಕ್ತನೇ ಆಗುವದಿಲ್ಲ. ಅದಕ್ಕಾಗಿಯೇ ವೀರಶೈವ ಸಿದ್ಧಾಂತದಲ್ಲಿ ಸ್ಥಲಕಟ್ಟುಗಳನ್ನು ಹೇಳುವಾಗ ''ಗುರು ಕಾರುಣ್ಯಸ್ಥಲ''ಕ್ಕೆ ಪೂರ್ವದಲ್ಲಿ ''ಸಂಸಾರ ಹೇಯಸ್ಥಲ'' ಹೇಳಲ್ಪಟ್ಟಿದೆ.

ಹೀಗೆ ಕಾಮ–ಮೋಹಗಳ ಮೇಲೆ ವಿಜಯ ಸಾಧಿಸಲು ಅಂದು ತಾವು ಧರಿಸಿದ ವೇಷವೇ ಕಾರಣವಾದ್ದರಿಂದ ಶ್ರೀಗಳವರು ಅದನ್ನೇ ತಮ್ಮ ನಿತ್ಯದ ಲಾಂಛನವನ್ನಾಗಿ ಅಂಗೀಕರಿಸಿಕೊಂಡರು. ಅಂದಿನಿಂದ ಶ್ರೀ ಮಹಾಂತ ಶ್ರೀಗಳವರು ಕೌದೀ ಮಹಾಂತ ಶ್ರೀಗಳೆಂದೇ ಪ್ರಖ್ಯಾತರಾದರು.

ಶ್ರೀ ನಿರಂಜನ ಜಗದ್ಗುರು ತೋಂಟದಾರ್ಯ ಪೀಠ ಪರಂಪರೆಯ ಮಠ ಈ ಹಿಂದೆ ಹೇಳಿದಂತೆ ಗದುಗಿನಲ್ಲಿದ್ದುದರಿಂದ ಸಂಪೂರ್ಣ ಗದಗ–ಬೆಟಗೇರಿಯವರಿಗೆ ಶ್ರೀ ಮಠದಲ್ಲಿ ತುಂಬಾ ಭಕ್ತಿ–ವಿಶ್ವಾಸಗಳು ಅತ್ಯಂತ ನಿಷ್ಠೆಯುಳ್ಳದ್ದಾಗಿದ್ದಿತು.

ಈ ಮೊದಲು ಲಿಂಗೈಕ್ಯ ಕಟಗೆಹಳ್ಳಿ ರಾಚೋಟಿ ಸ್ವಾಮಿಗಳವರೊಡನೆ ಗದುಗಿಗೆ ಆಗಮಿಸಿ ಹೋಗಿದ್ದ ಅವರ ಉತ್ತರಾಧಿಕಾರಿ ಶ್ರೀ ಮಹಾಂತ ದೇಶಿಕರು ಮಹಾ ವೈರಾಗ್ಯಶಾಲಿಗಳಾದ ಪ್ರಯುಕ್ತ ''ಕೌದೀ ಮಹಾಂತಸ್ವಾಮಿ''ಗಳೆಂದೇ ಪ್ರಸಿದ್ಧರಾಗಿರುವದನ್ನು ಕೇಳಿ ತಿಳಿದ ಮಾನ್ವಿ ಮನೆತನದ ವಯೋವೃದ್ಧ ಲಿಂಗಮ್ಮನವರು ಗುರುಗಳ ದರ್ಶನ ತೆಗೆದುಕೊಳ್ಳಬೇಕೆಂಬ ಉತ್ಕಟೇಚ್ಛೆಯಿಂದ ಅವರಿರುವ ಬಾಚಿಗೊಂಡನಹಳ್ಳಿಗೆ ಪಾದಚಾರಿಯಾಗಿಯೇ ಮನೆಯಲ್ಲಿಯ ಓರ್ವ ಮಗುವನ್ನು ಜತೆಮಾಡಿಕೊಂಡು ಹೊರಟರು.

ಈಗಿನಂತೆ ಆಗ ವಾಹನ ಸೌಕರ್ಯಗಳಿರಲಿಲ್ಲ, ಸ್ವಂತ ವಾಹನ ಕಟ್ಟಿಕೊಂಡು ಹೋಗಬೇಕೆಂದರೆ ದಾರಿದ್ರ್ಯದ ಮೂಲಕ ಅದೂ ಸಾಧ್ಯವಿರಲಿಲ್ಲ. ಪಯಣ ಗತಿಯಿಂದ ಹೊರಟ ಲಿಂಗಮ್ಮನವರು ಮಾರ್ಗದಲ್ಲಿ ಸಿಂಗಟಾಲೂರು ಕ್ಷೇತ್ರ

ಮುಟ್ಟಿದರು. ಆಗ ಶ್ರೀ ವೀರಭದ್ರದೇವರ ಜಾತ್ರೆಯ ಸಮಯವಾದ್ದರಿಂದ ಯಾತ್ರಿಕರು ಸಂಭ್ರಮದಿಂದ ಎಲ್ಲಿ ನೋಡಿದಲ್ಲಿ ಇಳಿದುಕೊಂಡಿದ್ದರು.

ಭಕ್ತೆ ಲಿಂಗಮ್ಮನು ಪರಮ ಆಚಾರಸ್ಥಳಾದ್ದರಿಂದ ತನ್ನೊಡನೆ ದಾರೀ ಬುತ್ತಿಯನ್ನು ತಂದಿರದೆ ಅಡಗೀ ಪಾತ್ರೆಗಳನ್ನು ಮಾತ್ರ ತಂದಿದ್ದಳು. ಪದ್ಧತಿಯಂತೆ ಲಿಂಗಮ್ಮ ತನ್ನ ಸ್ನಾನ ಪೂಜಾದಿಗಳನ್ನು ತೀರಿಸಿಕೊಂಡು ಬಂದು ಗಿಡದ ಕೆಳಗೆ ಮೂರು ಗುಂಡುಗಳನ್ನು ಹೂಡಿ ಒಲೆಯ ಮೇಲೆ ಗುಗ್ಗರಿ ಕುದಿಯ ಹಾಕಿದ್ದಳು.

ಬಳಿಯಲ್ಲಿಯೇ ಇಳಿದುಕೊಂಡ ಯಾತ್ರಿಕರ ಮಕ್ಕಳು ಕರ್ಚಿಕಾಯಿ ತಿನ್ನುವದನ್ನು ನೋಡಿ ಲಿಂಗಮ್ಮನೊಡನೆ ಬಂದ ಬಾಲಕ ತನಗೂ ಕರ್ಚಿಕಾಯಿಬೇಕೆಂದು ಲಿಂಗಮ್ಮನನ್ನು ಕಾಡಹತ್ತಿದ. ಲಿಂಗಮ್ಮನು ತನ್ನ ಬಾಲಕನಿಗೆ ''ಹಾಗೆ ಹೆರವರನ್ನು ಯಾಚಿಸುವದು ಒಳ್ಳೆಯದಲ್ಲ'' ಎಂದು ಗದರಿಸುತ್ತಿರುವಾಗ ಓರ್ವ ಜಂಗಮ ಮೂರ್ತಿಗಳು ಬಂದು ''ಅಮ್ಮಾ ! ಮಗುವಿಗೇಕೆ ಸಿಟ್ಟು ಮಾಡುತ್ತಿರುವೆ?'' ಎಂದು ಕೇಳಿದರು. ಅದಕ್ಕೆ ಲಿಂಗಮ್ಮನು ''ಅವನಿಗೆ ಕರ್ಚಿಕಾಯಿ ಬೇಕಂತೆ'' ಎಂದು ಹೇಳಿದಳು. ಆಗ ಆ ಜಂಗಮ ಮೂರ್ತಿ ಒಲೆಯ ಕಡೆಗೆ ನೋಡಿ ''ಒಲೆಯ ಮೇಲೆ ಏನಿದೆ? ಎಂದು ಕೇಳಿದರು. ಲಿಂಗಮ್ಮನು ''ಗುಗ್ಗರಿ ಮಹಾಸ್ವಾಮಿ'' ಎಂದು ವಿನಯದಿಂದ ಹೇಳಿದಳು. ''ಆಗಲಿ ಅವನ್ನೇ ಮಗುವಿಗೆ ಕೊಡಮ್ಮ, ಅದಕ್ಕೆ ಹಸಿವೆಯಾಗಿರಬೇಕು'' ಎಂದು ಹೇಳಿದಾಗ ಲಿಂಗಮ್ಮನು ''ಛೇ ! ಸ್ವಾಮಿ ಜಂಗಮಾರ್ಪಣವಾಗದೆ ಮಗುವಿಗೆ ಕೊಡಲಾರೆ'' ಎಂದು ನಿಷ್ಠುರವಾಗಿ ಹೇಳಲು ಆಗ ಜಂಗಮ ಮೂರ್ತಿಗಳು ಲಿಂಗಮ್ಮನ ಜಂಗಮ ನಿಷ್ಠೆಯನ್ನು ಕಂಡು ''ಆಗಲಿ, ಅಮ್ಮಾ ಮೊದಲು ನನಗೆ ಗುಗ್ಗರಿ ಕೊಡು. ನಂತರ ಅದನ್ನೇ ಮಗುವಿಗೆ ಕೊಡು'' ಎಂದು ಆಕೆಗೆ ಹೇಳಿ ಅಲ್ಲಿಂದ ಮರೆಯಾದರು.

ಲಿಂಗಮ್ಮ ಮಗುವಿಗೆ ಕೊಡಲಿಕ್ಕೆಂದು ಗಡಿಗೆಯ ಬಾಯಿ ತೆರೆದಾಗ ಅಲ್ಲಿ ಗುಗ್ಗರಿ ಬದಲು ಕರ್ಚಿಕಾಯಿಗಳಿದ್ದವು. ಆಕೆಗೆ ಆಶ್ಚರ್ಯವೇ ಆಶ್ಚರ್ಯ. ಕರ್ಚಿಕಾಯಿಗಳನ್ನು ತೆಗೆದುಕೊಂಡಂತೆ ಅವು ಒಂದರ ಹಿಂದೊಂದು ಬೇಕಾದಷ್ಟು ಬಂದವು. ಹೀಗೆ ಜಂಗಮ ಮಹಿಮೆಯಿಂದ ಆನಂದಾಶ್ಚರ್ಯ ಚಕಿತಳಾದ ಲಿಂಗಮ್ಮ ಮುಂದಕ್ಕೆ ಪಯಣ ಬೆಳಸಿ ಬಾಜಗೊಂಡನಹಳ್ಳಿಯನ್ನು ಮುಟ್ಟಿದಳು. ಲಿಂಗಮ್ಮ ಶ್ರೀ ಮಠದಲ್ಲಿ ಹೋಗಿ ಗುರುಗಳ ದರ್ಶನ ಪಡೆದಾಗ ಆಕೆಗೆ ದಿಗ್ಭ್ರಮೆಯಾಯಿತು. ಏಕೆಂದರೆ ಸಿಂಗಟಾಲೂರಿನಲ್ಲಿ ದರ್ಶನ ಕೊಟ್ಟ ಜಂಗಮ ಮೂರ್ತಿಗಳವರೇ ಶ್ರೀ ಮಠದಲ್ಲಿದ್ದ ಗುರುಗಳಾಗಿದ್ದರು.

ಹೇಮರಡ್ಡಿ ಮಲ್ಲಮ್ಮನ ಭಕ್ತಿ ಪಾರಮ್ಯದಿಂದ ಆಕೆಯ ಕುಲದ ದಾರಿದ್ರ್ಯವೇ ವಿಚ್ಛೇದಗೊಂಡಂತೆ ಗದುಗಿನ ಮಾನ್ವಿ ಮನೆತನದ ಲಿಂಗಮ್ಮನ ಭಕ್ತ್ಯಾತಿಶಯದಿಂದ ಶ್ರೀ ಜಗದ್ಗುರು ತೋಂಟದಾರ್ಯರ ಕೃಪೆ ಪ್ರಾಪ್ತವಾಗಿ ಆ ಮನೆತನದ ದಾರಿದ್ರ್ಯ ದೋಷವೇ ನಾಶವಾಯಿತು.

ಒಂದು ದಿನ ತ್ರಿಕಾಲಜ್ಞಾನಿಗಳಾದ ಕೌದೀ ಮಹಾಂತಸ್ವಾಮಿಗಳವರು ತಮ್ಮ ಬೆಳಗಿನ ಅನುಷ್ಠಾನ ಪೂರೈಸಿ ಹಗರೀ ತೀರದಲ್ಲಿ ವಿಹಾರಾರ್ಥ ಹೊರಟಾಗ ಒಂದು ವಿಶಾಲ ವೃಕ್ಷದಡಿಯಲ್ಲಿ ಕಾರ್ತಿಕೇಯನಂತೆ ಕಂಗೊಳಿಸುವ ಎಂಟು ವರ್ಷದ ಮಗುವನ್ನು ಕಂಡು ''ಇದು ಶಿವೇಚ್ಛೆಯಂತೆ ದೊರಕಿದೆ'' ಎಂದು ಸಂತಸಪಟ್ಟು ತಮ್ಮೊಡನೆ ಆ ಮಗುವನ್ನು ಕರೆದುಕೊಂಡು ತಮ್ಮ ಮಠಕ್ಕೆ ಹೊರಟು ಹೋದರು.

ಮಧ್ಯಾನ್ಹ ಸಮಯವಾಗಿರಬಹುದು. ಇನ್ನು ಮೇಲೆ ಶ್ರೀಗಳು ತಮ್ಮ ಸ್ನಾನಕ್ಕೆ ದಯಮಾಡಿಸುವವರಿದ್ದರು. ಆಗ ಇಳಿ ವಯಸ್ಸಿನ ಒಬ್ಬ ಭಕ್ತ ಮಠದೊಳಗೆ ಪ್ರವೇಶಿಸುವದನ್ನು ಕಂಡರು.

ಹಣೆಯ ಮೇಲೆ ಭಸ್ಮ ತ್ರಿಪುಂಡ್ರ, ಕೊರಳಲ್ಲಿ ಲಿಂಗಸಜ್ಜಿಕೆ, ಕಂಠದಲ್ಲಿ ಒಂದು ರುದ್ರಾಕ್ಷಿ, ಹೀಗೆ ಒಪ್ಪುತ್ತಿರುವ ಪ್ರಶಾಂತ ಮುಖದ ಭಕ್ತ ಬಂದು ಶ್ರೀಗಳವರಿಗೆ ಸಾಷ್ಟಾಂಗವರೆಗಿದ.

ಶ್ರೀಗಳು ಅವನ ಬಗ್ಗೆ ವಿಚಾರಿಸಿದಾಗ ಅವನು ತನ್ನ ಹೆಗಲ ಮೇಲಿನ ಅಳಿಲು ಬಣ್ಣದ ಕಂಬಳಿಯನ್ನು ಸರಿಪಡಿಸುತ್ತ ''ಮಹಾಸ್ವಾಮಿ ! ವ್ಯಾಪಾರದ ಕಾಯಕವನ್ನಿಟ್ಟು ಕೊಂಡ ನಾನೊಬ್ಬ ಭಕ್ತ. ಬಂದ ಪ್ರಾಪ್ತಿಯಲ್ಲಿ ನಿತ್ಯವೂ ಗುರು–ಲಿಂಗ–ಜಂಗಮ ದಾಸೋಹ ನಡೆಸುತ್ತಿರುವೆನಾದ್ದರಿಂದ ನನಗೆ ''ಕೋರೀಶೆಟ್ಟಿ'' ಎಂಬುದಾಗಿಯೇ ಕರೆಯುವರು. ವ್ಯಾಪಾರಕ್ಕಾಗಿ ಊರೂರು ಅಲೆದಾಡುವಾಗ ನನಗೆ ನಿತ್ಯದ ಸಮಯಾಚಾರಕ್ಕೆ ಒಮ್ಮೊಮ್ಮೆ ಗುಣಮೂರ್ತಿಗಳೇ ಸಿಕ್ಕುವದು ದುರ್ಲಭವಾಗಿ ಆಚಾರಕ್ಕೆ ತೊಂದರೆಯಾಗುತ್ತಿತ್ತು. ಒಮ್ಮೆ ಮಲೆನಾಡ ಕಡೆಗೆ ಹೋದಾಗ ಅಲ್ಲಿ ಪ್ರಸಿದ್ಧವಾಗಿರುವ ಅರಳೆಲೆಮಠದ ಪಟ್ಟದ ಸ್ವಾಮಿಗಳವರನ್ನು ಪಾದೋದಕ ಪ್ರಸಾದ ವಿನಿಯೋಗಾರ್ಥ ಒಬ್ಬ ಬಾಲ ಜಂಗಮ ಮೂರ್ತಿಯನ್ನು ಕರುಣಿಸಬೇಕೆಂದು ಬೇಡಿಕೊಂಡೆ. ಅದಕ್ಕೆ ಆ ಮಹಾಸ್ವಾಮಿಯವರು ಈ ತೇಜೋಮಯ ಬಾಲಕನನ್ನು ನನಗೆ ಅನುಗ್ರಹಿಸಿದರು. ಅಂದಿನಿಂದ ಈ ಬಾಲ ಗಣವರನನ್ನು ನನ್ನ ಇಷ್ಟಲಿಂಗದೋಪಾದಿ ಹೆಗಲುಗದ್ದುಗೆಯ ಮೇಲೆ ಧರಿಸಿಕೊಂಡು ಸೇವೆ ಮಾಡುತ್ತ ಬಂದಿರುವೆ. ಇಂದು ಈ ಗ್ರಾಮಕ್ಕೆ ವ್ಯಾಪಾರಕ್ಕೋಸ್ಕರ ಬಂದು ಹಗರಿ ಹಳ್ಳದಲ್ಲಿ ಸ್ನಾನಾದಿ ನಿತ್ಯ ಕ್ರಿಯೆಗಳನ್ನು ತೀರಿಸಿಕೊಂಡು ಈ ಬಾಲ ಗುರುವರನನ್ನು ಅಲ್ಲಿಯೇ ವೃಕ್ಷದಡಿಯಲ್ಲಿ ಮೂರ್ತಗೊಳಿಸಿ ನನ್ನ ನಿತ್ಯದ ಕಾಯಕವಾದ ವ್ಯಾಪಾರಕ್ಕೆಂದು ಊರಲ್ಲಿ ಹೋದೆ. ಮರಳಿ ಬಂದು ನೋಡುತ್ತೇನೆ ಗುರುಮೂರ್ತಿಯೇ ಕಾಣಲಿಲ್ಲ, ಬಹಳ ಖೇದವಾಯಿತು. ಚಿಂತಾಕ್ರಾಂತನಾಗಿ ಸುತ್ತಲೂ ನೋಡುತ್ತಿರುವಾಗ ತಮ್ಮ ಕರುಣೆಯಿಂದ ಆ ಅಡವಿಯಲ್ಲಿ ಒಂದು ಕಾಲುದಾರಿ ಕಂಡಿತು. ಆ ಮಾರ್ಗ ಹಿಡಿದು ಬರುತ್ತಲೇ ಈ ಮಠದಲ್ಲಿ ನನ್ನ ಬಾಲಗುರುವಿನೊಡನೆ ಸಾಕ್ಷಾತ್ ಶಿವಸ್ವರೂಪರಾದ ತಮ್ಮ ದರ್ಶನ ಲಾಭವಾಯಿತು.

ಕೋರೀಶೆಟ್ಟಿಯಿಂದ ಸಾದ್ಯಾಂತ ವೃತ್ತಾಂತವನ್ನು ಕೇಳಿ ತಿಳಿದ ಶ್ರೀ ಜಗದ್ಗುರು ಮಹಾ ಸನ್ನಿಧಿಯವರು ಒಳ್ಳೇದು ಈ ವರೆಗೆ ಈ ಮಗು ನಮ್ಮದಾಗಿಯೇ ನಿನ್ನಲ್ಲಿತ್ತು ಈಗ ನಮ್ಮ ವಸ್ತು ನಮಗೆ ಸಂದಿದೆ. ಇನ್ನು ಮೇಲೆ ನೀನಿನ್ನು ಸಧ್ಯ ಎಲ್ಲಿಯೂ ಹೋಗಬೇಡ. ನಿನ್ನ ಗುರುವಿನೊಡನೆ ಸೇವೆ ಮಾಡಿಕೊಂಡು ಇಲ್ಲಿಯೇ ಇರು. ಇನ್ನು ಮುಂದೆ ಈತನೇ ನಮ್ಮ ಪೀಠದ ಉತ್ತರಾಧಿಕಾರಿ. ಜಗದ್ಗುರುವಿನ ಎಲ್ಲ ಲಕ್ಷಣಗಳೂ ಈತನಲ್ಲಿವೆ'' ಎಂದು ಹೇಳಿ ಕೋರೀಶೆಟ್ಟಿಯನ್ನು ಆತನ ಬಾಲ ಗುರುವಿನೊಡನೆ ನಮ್ಮ ಸನ್ನಿಧಿಯಲ್ಲಿಯೇ ಇಟ್ಟುಕೊಂಡು ವಿರಕ್ತಾಶ್ರಮವನ್ನು ಅನುಗ್ರಹಿಸಿದರು.

ವೀರಶೈವವು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವಾದ್ದರಿಂದ ಬಾಲ ಶಿವಯೋಗಿ ತನ್ನ ಗುರುಗಳಿಂದ ಷಟ್‌ಸ್ಥಲ ಬ್ರಹ್ಮೋಪದೇಶ ಪಡೆದ ನಂತರ ತಾನು ಶರಣ ಸತಿ–ಲಿಂಗ ಪತಿ ಭಾವದಿಂದ ತನ್ನ ಆಚರಣೆ ಇಟ್ಟುಕೊಂಡಿದ್ದರಿಂದ ಗುರುಗಳಾದ ಶ್ರೀ ಕೌದೀ ಮಹಾಂತ ಶಿವಯೋಗೀಶ್ವರರು ತಮ್ಮ ಶಿಷ್ಯೋತ್ತಮನಿಗೆ ''ಅರ್ಧನಾರೀಶ್ವರ''ನೆಂಬ ಅನ್ವರ್ಥಕ ನಾಮವನ್ನಿಟ್ಟರು ಅಂದಿನಿಂದ ಶ್ರೀ ಅರ್ಧನಾರೀಶ್ವರರು ಶಕ್ತಿ ವಿಶಿಷ್ಟ ಪರಮಾತ್ಮನಂತೆ ಭಕ್ತರಿಗೆ ಕಂಗೊಳಿಸುತ್ತಿದ್ದರು.

ಮುಂದೆ ಒಂದು ಶುಭದಿನದಲ್ಲಿ ಶ್ರೀ ಜಗದ್ಗುರು ಕೌದೀ ಮಹಾಂತ ಸ್ವಾಮಿಗಳವರು ತಮ್ಮ ಶಿಷ್ಯನಿಗೆ ಜಗದ್ಗುರು ಪಟ್ಟಾಧಿಕಾರವನ್ನು ವಹಿಸಿಕೊಟ್ಟು ತಮ್ಮ ಕರದಿಷ್ಟಲಿಂಗದಲ್ಲಿ ಬಯಲಾದರು.

**ಶ್ರೀ ನಿರಂಜನ ಜಗದ್ಗುರು ತೋಂಟದ ಅರ್ಧನಾರೀಶ್ವರ ಮಹಾಸ್ವಾಮಿಗಳವರು :**

ಬಾಜಿಗೊಂಡನಹಳ್ಳಿಯಲ್ಲಿ ತಮ್ಮ ಗುರುಗಳು ಶೂನ್ಯಸ್ಥಲವನ್ನು ಹೊಂದಿದ ಮೇಲೆ ಶ್ರೀ ಅರ್ಧನಾರೀಶ್ವರರು ಕೆಲವುಕಾಲ ಅಲ್ಲಿಯೇ ಇದ್ದು ತಮ್ಮನ್ನು ಮಾತೃವಾತ್ಸಲ್ಯದಿಂದ ಸೇವಿಸುತ್ತಿದ್ದ ಕೋರೀಶೆಟ್ಟಿಗೆ ಒಂದು ದಿವಸ ''ಇಂದು ಪ್ರಯಾಣ ಮಾಡಬೇಕು'' ಎಂದು ಅಪ್ಪಣೆ ಮಾಡಿ ಅಂದೇ ಕೋರೀಶೆಟ್ಟಿಯೊಡನೆ ಸಂಚಾರ ಹೊರಟರು.

ಶ್ರೀಗಳವರು ಮತ್ತು ಕೋರೀಶೆಟ್ಟಿ ಹಗರಿ ಹಳ್ಳವನ್ನು ದಾಟಿ ಆಚೆಯ ದಡ ತಲ್ಪಿರಬೇಕು, ಅಷ್ಟರಲ್ಲಿ ಬಹುಕಾಲ ಸಂಚಾರ ಹೋಗಿದ್ದ ಲಿಂಗೈಕ್ಯ ಶ್ರೀ ಕೌದೀ ಮಹಾಂತ ಶ್ರೀಗಳವರ ಅಸಂಖ್ಯಾತ ಶಿಷ್ಯರು ಮಠದಲ್ಲಿ ಗುರುಗಳನ್ನು ಕಾಣದೇ ಹುಡುಕುತ್ತ ಹಗರಿ ಹಳ್ಳಕ್ಕೆ ಬರುತ್ತಲೇ ಹಗರಿ ಹಳ್ಳದಲ್ಲಿ ಪ್ರವಾಹ ಏಕಕಾಲಕ್ಕೆ ಬಂದು ವಿರಕ್ತ ಸಮೂಹದ ಪ್ರಯಾಣವನ್ನು ತಡೆಗಟ್ಟಿತು. ಆಗ ಶಿವೇಚ್ಛೆಯಿಲ್ಲವೆಂದು ಭಾವಿಸಿದ ಶಿಷ್ಯ ಸಮೂಹ ಮಠಕ್ಕೆ ಹಿಂದಿರುಗಿತು.

ಇತ್ತ ಕೋರೀಶೆಟ್ಟಿಯು ಗುರುಗಳನ್ನು ತನ್ನ ಸ್ಕಂದ ಪ್ರದೇಶದಲ್ಲಿ ಯಥಾಪ್ರಕಾರ ಕುಳ್ಳಿರಿಸಿಕೊಂಡು ಕಾವಿವಸ್ತ್ರದಿಂದ ಆಚ್ಛಾದಿತವಾದ ತಾಳೆ ಎಲೆ ಛತ್ರವನ್ನು ಗುರುಗಳ ಮೇಲೆ ಹಿಡಿದು ಗುರುಗಳನ್ನು ತನ್ನ ಇಷ್ಟ ಲಿಂಗದೋಪಾದಿ

ಸೇವಿಸುತ್ತ ಪಥಕ್ರಮದಲ್ಲಿ ಡಂಬಳ ಪುರದ ಹೊರವಲಯದ ಉದ್ಯಾನವನ್ನು ತಲ್ಪಿದನು.

ನಿಸರ್ಗ ಸೌಂದರ್ಯದ ನೆಲೆವೀಡಾದ ಆ ವನದಲ್ಲಿಯ ಒಂದು ಬಿಲ್ವವೃಕ್ಷದಡಿಯಲ್ಲಿ ಒಂದು ಮೃದುತಲ್ಪವನ್ನು ಮಾಡಿ ಗುರುಗಳನ್ನು ಅದರ ಮೇಲೆ ಮೂರ್ತಗೊಳಿಸಿ ತಾನು ಗುರುಗಳ ಶಿವಪೂಜಾ ಸಿದ್ಧತೆಗೆ ತೊಡಗಿದನು. ಶಿವಾರ್ಚನೆಯಾದ ನಂತರ ತಾನು ಊರಲ್ಲಿ ಹೋಗಿ ವ್ಯವಹಾರ ಮುಗಿಸಿಕೊಂಡು ಬಂದು ಲಿಂಗಾರ್ಪಿತಾದಿ ಕಾರ್ಯಗಳನ್ನು ನೆರವೇರಿಸಿದನು. ಇದು ಅವನು ನಿತ್ಯವೂ ಸಲ್ಲಿಸುತ್ತಿದ್ದ ಸೇವೆ.

ಒಮ್ಮೆ ಶ್ರೀಗಳು ಯಥಾಪ್ರಕಾರ ಬಿಲ್ವವೃಕ್ಷದಡಿಯಲ್ಲಿ ವಿಶ್ರಾಂತಿ ತೆಗೆದು ಕೊಳ್ಳುತ್ತಿರುವಾಗ ಓರ್ವ ತೇಜಸ್ವಿಯಾದ ಅಲೌಕಿಕ ಪುರುಷನು ಬಂದು ದೀರ್ಘದಂಡಪ್ರಣಾಮ ಮಾಡಿ ''ಗುರುವೆ ! ನನ್ನ ಆಲಯ ಪಕ್ಕದಲ್ಲಿಯೇ ಇದೆ. ಭಕ್ತನಿದ್ದಲ್ಲಿ ತಾವು ಇರುವದು ಸಹಜ. ತಾವು ಅಲ್ಲಿಗೆ ದಯಮಾಡಿಸಬೇಕು'' ಎಂದು ಹೇಳಿ ತಾನು ಅವರ ಶಿವಪೂಜಾ ಗಂಟನ್ನು ತೆಗೆದುಕೊಂಡು ಮುಂದೆ ಹೊರಟನು.

ಶ್ರೀಗಳು ಭಕ್ತನೊಡನೆ ಮುಂದೆ ಹೋಗುವಷ್ಟರಲ್ಲಿ ಉನ್ನತವಾದ ಗೋಪುರವಿದ್ದ ದೇವಾಲಯ (ದೊಡ್ಡ ಬಸಪ್ಪನ ದೇವಾಲಯ) ಕಣ್ಣಿಗೆ ಬಿದ್ದಿತು. ಆ ದೇವಾಲಯದಲ್ಲಿ ಆ ಭಕ್ತನು ಗುರುಗಳೊಡನೆ ಪ್ರವೇಶಿಸಿ ಶಿವಪೂಜಾ ಗಂಟನ್ನು ಇಳುಹಿ ಮೃದುವಾದ ಗದ್ದುಗೆಯನ್ನು ಹಾಕಿ ತಾನು ಬಸವಾಕಾರ ತಳೆದು ಶಿಲಾಮೂರ್ತಿಯಾಗಿ ವಿರಾಜಿಸಿದನು. ಆಗ ಶ್ರೀ ಅರ್ಧನಾರೀಶ್ವರರಿಗೆ ತಮ್ಮನ್ನು ಕರೆ ತಂದವನು ಜಂಗಮ ಪ್ರಾಣಿಯಾದ ಅನಾದಿ ಭಕ್ತ ಶ್ರೀ ಬಸವೇಶನೆಂದು ತಿಳಿದು ಸಂತಸಪಟ್ಟರು.

ಇತ್ತ ಕೋರೀಶೆಟ್ಟಿಯು ಎಂದಿನಂತೆ ತನ್ನ ಕಾಯಕ ಮುಗಿಸಿಕೊಂಡು ಬಂದು ಬಿಲ್ವ ದಡಿಯಲ್ಲಿ ನೋಡುತ್ತಾನೆ ಅಲ್ಲಿ ಗುರುಗಳಿರಲಿಲ್ಲ, ಹಾಗೆ ಅತ್ತಿತ್ತ ನೋಡುತ್ತಿರುವಾಗ ಅವನಿಗೆ ಎತ್ತರವಾದ ಗೋಪುರವುಳ್ಳ ಶ್ರೀ ಬಸವೇಶನಾಲಯವು (ದೊಡ್ಡ ಬಸಪ್ಪ) ದೃಷ್ಟಿಗೆ ಬಿದ್ದಿತು. ಒಳಹೊಕ್ಕು ನೋಡುತ್ತಾನೆ, ತನ್ನ ಗುರುಗಳು ಶಿವಧ್ಯಾನದಲ್ಲಿ ಪರವಶರಾಗಿ ಕುಳಿತಿದ್ದರು. ಆಗ ಕೋರೀಶೆಟ್ಟಿಯು ಶ್ರೀ ಅರ್ಧನಾರೀಶ್ವರರು ಧ್ಯಾನ ಯೋಗದಿಂದ ಬಹಿರ್ಮುಖರಾಗುವದನ್ನೇ ನಿರೀಕ್ಷಿಸುತ್ತ ಅವರ ಪಾದ ಸನ್ನಿಧಿಯಲ್ಲಿಯೇ ಕುಳಿತುಕೊಂಡನು.

ಈ ಸ್ಥಿತಿಯಲ್ಲಿ ಕೆಲ ಸಮಯ ಕಳೆದಿರಬಹುದು ಆಗ ಗುರುಗಳ ಅನ್ವೇಷಣೆಯಲ್ಲಿದ್ದ ಅವರ ಶಿಷ್ಯರಾದ ವಿರತ ಸಮೂಹ ಬಾಚಿಗೊಂಡನಹಳ್ಳಿಯಿಂದ ಡಂಬಳಪುರದ ಉಪವನದ ಮಧ್ಯದಲ್ಲಿದ್ದ ಶ್ರೀ ಬಸವಾಲಯಕ್ಕೆ ಬಂದು ಬಿಟ್ಟಿತು.

ದೇವಾಲಯದಲ್ಲಿದ್ದ ಧ್ಯಾನಾಸಕ್ತ ಗುರುಗಳು ಕಣ್ಣಿಗೆ ಬೀಳುತ್ತಲೇ ಶಿಷ್ಯರೆಲ್ಲರೂ ಏಕಕಂಠದಿಂದ ಗುರುಗಳನ್ನು ಕುರಿತು ಜಯಘೋಷ ಮಾಡಿದರು. ಈ ಹರ್ಷಾರವದಿಂದ ಗುರುಗಳು ಧ್ಯಾನ ಸಮಾಧಿಯಿಂದ ಬಹಿರ್ಮುಖಿರಾಗಲು ಶಿಷ್ಯರೆಲ್ಲರೂ ಶ್ರೀ ಅರ್ಧನಾರೀಶ್ವರರ ಕಣ್ಣಿಗೆ ಬಿದ್ದರು.

ಅವರೆಲ್ಲರಿಗೆ ಇಷ್ಟಾರ್ಥವೇನೆಂದು ಕೇಳಲು ಅವರೆಲ್ಲರೂ ತಮಗೆ ''ಶಿವಾನುಭವ ಚರಂತಿಕೆ'' ದಯಪಾಲಿಸಬೇಕೆಂದು ಬೇಡಿಕೊಳ್ಳಲು ಅವರೆಲ್ಲರಿಗೆ ''ಶಿವಾನುಭವ ಚರಂತಿಕೆ''ಯನ್ನು ಅನುಗ್ರಹಿಸಿ ''ಷಟ್‌ಸ್ಥಲೋಪದೇಶದಿಂದ ಲೋಕವನ್ನುದ್ಧರಿಸಿರಿ'' ಎಂದು ಬೀಳ್ಕೊಟ್ಟರು.

ಹೀಗೆ ಗುರುಗಳಿಂದ ಆಜ್ಞಪ್ತರಾದ ಶಿಷ್ಯರು ತಮ್ಮ ಶಿವಯೋಗ ಬಲದಿಂದ ಅತ್ಯಂತ ಪ್ರಭಾವಶಾಲಿಗಳಾಗಿ ಉರವಕೊಂಡ, ಸೊಂಡೂರ, ಮೈಸೂರ ಮುಂತಾದ ಅನೇಕ ಕಡೆಗಳಲ್ಲಿ ತಮ್ಮ ಮಠಗಳನ್ನು ಸ್ಥಾಪಿಸಿ ಲೋಕ ವಿಖ್ಯಾತರಾದರು. ಅನೇಕ ರಾಜ ಮಹಾರಾಜರೂ ಕೂಡ ಈ ಮಠಗಳಿಗೆ ಜಹಗೀರುಗಳನ್ನು ಹಾಕಿಕೊಟ್ಟಿದ್ದು, ಅವೆಲ್ಲ ಈಗಲೂ ಆಯಾ ಮಠಗಳ ಸ್ವಾಧೀನದಲ್ಲಿವೆ.

**ಅನ್ನದಾನ ಚರ :**

ಈ ರೀತಿ ಶಿಷ್ಯರೆಲ್ಲರ ನಿರ್ಗಮನವಾದ ನಂತರ ಪರಮಗುರು ಶ್ರೀ ಅರ್ಧನಾರೀಶ್ವರರು ಕೋರೀಶೆಟ್ಟಿಯನ್ನು ನೋಡಿ ಕರುಣೆಯಿಂದ ''ನಿನಗೆ ಗುರುಸೇವೆಯ ಮೂಲಕ ಜಂಗಮ ಲಕ್ಷಣ ಪ್ರಾಪ್ತವಾಗಿದೆ'' ಎಂದು ಹೇಳಿ ಕಠೋರ ಬ್ರಹ್ಮಚರ್ಯ ಪರಿಪಾಲಿಸಿದ ಆತನಿಗೆ ಷಟ್‌ಸ್ಥಲ ಬ್ರಹ್ಮೋಪದೇಶಮಾಡಿ ಕಾವಿ ವಸ್ತ್ರದಿಂದ ಆಚ್ಛಾದಿತವಾದ ತಾಳೀಗರಿಯ ಛತ್ರ, ಕೋರೀಟೊಪ್ಪಿಗಿ ಅಳಿಲಬಣ್ಣದ ಕಂಬಳಿ ಮತ್ತು ಶಿವಾನುಭವ ಶಾಸ್ತ್ರ ಗ್ರಂಥ ಇವೇ ಮೊದಲಾದ ಚಿನ್ಹೆಗಳುಳ್ಳ ''ಅನ್ನದಾನ ಚರಂತಿಕೆ''ಯನ್ನು ಕೊಟ್ಟು ಕಳಿಸಿದರು.

ಅದೇ ಮೇರೆಗೆ ಶ್ರೀ ಅನ್ನದಾನ ಚರಮೂರ್ತಿಗಳೆನಿಸಿದವರು ಮೃಡಗಿರಿಗೆ ಹೋಗಿ ಅನೇಕ ಮಹತ್ವಗಳನ್ನು ಮಾಡಿ ಅಲ್ಲಿಯ ಭಕ್ತರಿಂದ ತಮಗೆ ಕಟ್ಟಿಸಿ ಕೊಡಲಾದ ಮಠದಲ್ಲಿ ಬಂದ ಭಕ್ತರಿಗೆ ''ಅನ್ನದಾಸೋಹ''ವನ್ನಿಟ್ಟ ಮೂಲಕ ಅವರು ಶ್ರೀ ಅನ್ನದಾನ ಮಹಾಸ್ವಾಮಿಗಳೆಂದು ಪ್ರಸಿದ್ಧರಾದರು.

ಶಿವಾನುಭವ ತತ್ತ್ವೋಪದೇಶದಿಂದ ಮನಸ್ಸಿನ ಮೇಲಾಗುವಷ್ಟೇ ಪರಿಣಾಮ ಪ್ರಸಾದ ಸೇವನೆಯಿಂದಲೂ ಆಗುವದು. ಪ್ರಸಾದದಿಂದ ಪದಾರ್ಥದ ಗುಣ ಅಳಿದು ಹೋದಂತೆ ಪ್ರಸಾದ ಸೇವನೆಯಿಂದ ಅಂಗಗುಣಗಳೆಲ್ಲ ಲಿಂಗಗುಣಗಳಾಗುವವು. ಇದೇ ಅನ್ನದಾಸೋಹದ ಮುಖ್ಯ ತತ್ತ್ವ.

ಆದಕ್ಕಾಗಿಯೇ ಮೂಲಕರ್ತೃ ಶ್ರೀ ಸಿದ್ಧಲಿಂಗೇಶ ''ಶಿವಾನುಭವಚರ''ವನ್ನು ಹೆಚ್ಚಾಗಿ ಬಳಕೆಯಲ್ಲಿ ತಂದಂತೆ ಆತನಿಂದ ಒಂಭತ್ತನೆಯವರಾದ ಶ್ರೀ ಅರ್ಧನಾರೀಶ್ವರರು

ಅನ್ನದಾನಚರನನ್ನು ಪ್ರಾರಂಭಿಸಿ ಅದರ ಪ್ರವರ್ತಕರೆನಿಸಿದರು. ಶಿವಾನುಭವ ಚರದಲ್ಲಿ ''ಜ್ಞಾನ'' ಪ್ರಾಧಾನ್ಯವಿದ್ದರೆ ಅನ್ನದಾನಚರದಲ್ಲಿ ''ಕ್ರಿಯೆ'' ಪ್ರಾಧಾನ್ಯವಿದೆ. ಈ ಎರಡರ ಗುರಿ ಕೇವಲ ಭಕ್ತೋದ್ಧಾರವೇ ಆಗಿದೆ.

ಹೀಗೆ ಶ್ರೀ ನಿರಂಜನ ಜಗದ್ಗುರು ತೋಂಟದ ಅರ್ಧನಾರೀಶ್ವರ ಮಹಾಸ್ವಾಮಿಗಳವರು ತಮ್ಮ ಶಿಷ್ಯಂದಿರರಾದ ವಿರತ ಸಮೂಹಕ್ಕೆ ಮತ್ತು ಸದ್ಭಕ್ತನಾದ ಕೋರೀಶೆಟ್ಟಿಗೆ ಶಿವಾನುಭವಚರ ಹಾಗೂ ಅನ್ನದಾನ ಚರಗಳನ್ನು ದಯಪಾಲಿಸಿದ ನಂತರ ಅಂದಿನ ದಿನವೇ ಸಾಯಂಕಾಲ ಸಮಯಕ್ಕೆ ಮತ್ತೊಬ್ಬ ತೇಜಸ್ವಿ ವ್ಯಕ್ತಿ ಬಂದು ಶ್ರೀಗಳವರಿಗೆ ಸಾಷ್ಟಾಂಗವೆರಗಿ ಭಕ್ತಿಯಿಂದ ಕೈ ಜೋಡಿಸಿ ಎದ್ದು ನಿಂತು ''ಗುರುವೆ ಇನ್ನು ಮುಂದೆ ತಾವು ಎಲ್ಲಿಯೂ ದಯಮಾಡಿಸದೆ ಈ ಡಂಬಳ ಗ್ರಾಮವನ್ನೇ ತಮ್ಮ ಸುಕ್ಷೇತ್ರವನ್ನಾಗಿ ಮಾಡಿಕೊಳ್ಳಬೇಕು. ಈ ಬಸವೇಶನಾಲಯದ ಬಳಿಯಲ್ಲಿಯೇ ಒಂದು ಗವಿಯಿದೆ. ತಮ್ಮ ಪೂಜಾನುಷ್ಠಾನ ಗಳನ್ನು ಪೂರೈಸಲಿಕ್ಕೆ ಅದು ಯೋಗ್ಯವಾಗಿದೆ. ತಮಗೆ ಯಾವ ಕೊರತೆಯೂ ಬಾರದಂತೆ ಶ್ರದ್ಧೆಯಿಂದ ನಾನು ತಮ್ಮ ಸೇವೆ ಮಾಡುವೆನು'' ಎಂದು ಹೇಳಿದನು.

ಶ್ರೀಗಳು ಅದಕ್ಕೆ ಒಪ್ಪಿಗೊಂಡು ಆ ಗವಿಯಲ್ಲಿಯೇ ತಮ್ಮ ಪೂಜಾನುಷ್ಠಾನ ಪ್ರಾರಂಭಿಸಿದರು. ಅದರಲ್ಲಿಯೇ ಅನೇಕ ದಿನಗಳು ಉರುಳಿದವು.

ಹೀಗಿರುತ್ತಿರಲು ಡಂಬಳ ಸಂಸ್ಥಾನದ ದೊರೆ ಶೀನಪ್ಪ (ಶ್ರೀನಿವಾಸ) ನಾಯಕನಿಗೆ ಪುರಾಕೃತ ಕರ್ಮವಶಾತ್ ಕುಷ್ಠರೋಗ ಪ್ರಾಪ್ತವಾಗಿ ಆತನ ರಾಜ್ಯೈಶ್ವರ್ಯ ಎಷ್ಟಿದ್ದರೂ ಜೀವನದಲ್ಲಿ ಆತನಿಗೆ ಜಿಗುಪ್ಸೆಯುಂಟಾಯಿತು. ಇಹಪರಗಳ ಗತಿಗೆ ಕಾರಣವಾದ ಶರೀರವೇ ರೋಗಗ್ರಸ್ತವಾದ ಮೇಲೆ ಇಹದ ಸೌಖ್ಯಕ್ಕೆ ಎರವಾದಂತೆ ಪರದ ಸದ್ಗತಿಗೂ ದೂರನಾಗಬೇಕಾಗುವದೆಂದು ಭಾವಿಸಿದ ಅರಸನಿಗೆ ಅಪಾರ ದುಃಖ ಉಂಟಾಯಿತು.

''ವಾರಣಾಸಿಯಲ್ಲಿ ಮರಣವಾದರೆ ಮೋಕ್ಷವಾಗುವದೆಂದು'' ಭಾವಿಸಿದ ಅರಸು ತನ್ನ ಶೇಷಾಯುಷ್ಯವನ್ನು ಕಾಶೀಯಲ್ಲಿಯೇ ಕಳೆಯಬೇಕೆಂದು ಸಂಕಲ್ಪ ಮಾಡಿ ಒಂದು ದಿನ ಶುಭ ಮುಹೂರ್ತದಲ್ಲಿ ಕಾಶಿಗೆ ಪ್ರಯಾಣ ಬೆಳಿಸಿದನು. ಪ್ರಯಾಣದಲ್ಲಿ ಅರಸು ಒಂದೆಡೆ ಬೀಡಾರ ಮಾಡಿದ್ದನು. ಆಗ ಅವನಿಗೆ ಬೆಳಗಿನ ಜಾವದಲ್ಲಿ ಒಂದು ಸ್ವಪ್ನವಾಯಿತು.

ಸ್ವಪ್ನದಲ್ಲಿ ಅರಸನ ಕುಲದೈವವಾದ ಶ್ರೀ ಆಂಜನೇಯಸ್ವಾಮಿ ಪ್ರತ್ಯಕ್ಷನಾಗಿ ಅರಸನಿಗೆ ''ಅರಸ, ಕಾಶೀಗೇಕೆ ಹೊರಟಿರುವೆ ? ಸಾಕ್ಷಾತ್ ಶ್ರೀ ವಿಶ್ವನಾಥನೇ ಶಿವಯೋಗಿಯ ರೂಪದಲ್ಲಿ ಡಂಬಳದ ಶ್ರೀ ದೊಡ್ಡಬಸವೇಶ್ವರಾಲಯದ ಹತ್ತಿರದ ಗವಿಯಲ್ಲಿ ಲಿಂಗ ತಪಸ್ಸಿಗೆ ಕುಳಿತಿದ್ದಾನೆ. ನಾನೇ ನಿನಗಾಗಿ ಆ ಮಹಾ ಶಿವಯೋಗಿಯನ್ನು ಅಲ್ಲಿ ನಿಲ್ಲಿಸಿಕೊಂಡು ಸ್ವತಃ ಸೇವೆಯನ್ನು ಶ್ರದ್ಧೆಯಿಂದ

ಮಾಡುತ್ತಿದ್ದೇನೆ. ನೀನು ಇನ್ನು ಮುಂದಕ್ಕೆ ಪ್ರಯಾಣ ಮಾಡದೆ ಊರಿಗೆ ಮರಳಿ ಆ ಮಹಾಸ್ವಾಮಿಗೆ ಶರಣಾಗತನಾಗು. ಅದರಿಂದ ನಿನಗೆ ಕಳೆದುಹೋದ ಆರೋಗ್ಯ ಪುನಃ ಪ್ರಾಪ್ತವಾಗಿ ನಿನ್ನ ಜೀವನವೇ ಪಾವನವಾಗುವದು'' ಎಂದು ಅಪ್ಪಣೆಗೈದು ಅದೃಶ್ಯನಾದನು.

ಸ್ವಪ್ನ ತಿಳಿದೆದ್ದ ಅರಸು ಆನಂದಿತನಾಗಿ ಊರಿಗೆ ಹಿಂದಿರುಗಿದ. ನಂತರ ಶ್ರೀ ಬಸವೇಶ್ವರ ದೇವಾಲಯ ಹತ್ತಿರದ ಗವಿಗೆ ಹೋಗಿ ಅಲ್ಲಿದ್ದ ಮುಳ್ಳು ಕಂಟಿಗಳನ್ನೆಲ್ಲ ಆಳುಗಳಿಂದ ತೆಗೆಸಿ ಸ್ವಚ್ಛಗೊಳಿಸಿ ಪ್ರತಿ ದಿವಸ ಪ್ರಾತಃ ಕಾಲಕ್ಕೆ ತಾನೇ ಬಂದು ರಾಜಾಂಗಳ ಉಡುಗುವ ಸೇವೆಯನ್ನು ಕೈಕೊಂಡನು.

ಹೀಗೆಯೇ ಕೆಲದಿನ ಕ್ರಮಿಸಿದ ಮೇಲೆ ಅರಸು ಎಂದಿನಂತೆ ಗವಿಗೆ ಬಂದು ತಾನು ಕೈಕೊಂಡ ಸೇವೆ ಮುಗಿಸಿ ನಿಂತಾಗ ಅದೇ ಅರುಣೋದಯವಾಗುವದರಲ್ಲಿತ್ತು. ಪೂರ್ವ ದಿಗಂತದಲ್ಲಿ ಇನ್ನೂ ಸೂರ್ಯ ಮೂಡುವ ಮುನ್ನವೇ ಭಾಸ್ಕರ ತೇಜದಿಂದ ಗವಿಯ ಮುಂಭಾಗದಲ್ಲಿ ಶಿವಯೋಗಿ ಸಾರ್ವಭೌಮ ಶ್ರೀ ಅರ್ಧನಾರೀಶ್ವರರು ಪ್ರಕಟವಾದರು. ದೊರೆಗೆ ಶಿವಯೋಗಿಯ ತೇಜಸ್ಸನ್ನು ನೋಡುವದಾಗಲಿಲ್ಲ. ನತಮಸ್ತಕನಾದ ಅರಸು ಶಿವಯೋಗಿಯ ಎದುರಿಗೆ ದಂಡವತ್ ಪ್ರಣಾಮ ಮಾಡಿದ. ಭೋಗ, ಯೋಗ ಶಕ್ತಿಗೆ ತಲೆಬಾಗಿತು.

ಪರಮಗುರು ಶ್ರೀ ಅರ್ಧನಾರೀಶ್ವರರು ಧರಣಿಗೊರಗಿದ ದೊರೆಯನ್ನು ನೋಡಿ ''ಮಗನೇ ! ಏಳು ಯಾರು ನೀನು?'' ಎಂದು ಕೇಳಿದರು. ಅಮೃತ ಸಿಂಚನದಂತಿದ್ದ ಗುರುಗಳ ವಾತ್ಸಲ್ಯಪೂರ್ಣ ಮಾತನ್ನು ಕೇಳಿ ಅರಸು ಭಕ್ತಿ ಕಂಪಿತನಾಗಿ ಎದ್ದು ನಿಂತಾಗ ಅವನ ಶರೀರದಲ್ಲಿದ್ದ ಕುಷ್ಠರೋಗ ಮಾಯವಾಗಿ ಅವನ ಶರೀರವು ಪುಟವಿಟ್ಟ ಚಿನ್ನದಂತೆ ಹೊಳೆಯ ಹತ್ತಿತ್ತು.

ಇದರಿಂದ ಅರಸನಿಗೆ ಪರಮಾಶ್ಚರ್ಯವಾಯಿತು. ಮಹಾಸ್ವಾಮಿಯನ್ನು ಕುರಿತು ಅವನು ''ಕರುಣಾಕರ ! ಇಂದು ನಾನು ಧನ್ಯನಾದೆ. ಇದು ನನಗೆ ಎರಡನೇ ಜನ್ಮ, ಪೂರ್ವಪುಣ್ಯ ವಶಾತ್ ಈ ಡಂಬಳ ಸಂಸ್ಥಾನಕ್ಕೆ ನಾನು ಒಡೆಯನಾಗಿದ್ದರೂ ಪ್ರಾರಬ್ಧ ಕರ್ಮದಿಂದ ಮಹಾರೋಗಕ್ಕೆ ತುತ್ತಾಗಿ ಇಹದಲ್ಲಿಯೇ ನರಕಯಾತನೆಯನ್ನು ಅನುಭವಿಸುತ್ತಿದ್ದೆ. ಆತ್ಮಹತ್ಯೆ ಮಹಾ ಪಾಪವೆಂದು ತಿಳಿದು ಅದಕ್ಕೆ ಮನಸ್ಸು ಮಾಡಲಿಲ್ಲ. ಕಡೆಗೆ ಕಾಶಿಗಾದರೂ ಹೋಗಿ ನನ್ನ ಕೊನೆಯ ದಿನಗಳನ್ನು ಅಲ್ಲಿ ಕಳೆಯಬೇಕೆಂದು ನಿರ್ಧರಿಸಿ ಹೊರಟು ಬಿಟ್ಟೆ. ಮಾರ್ಗದಲ್ಲಿ ವಸತಿ ಮಾಡಿರುವಾಗ ಒಂದು ರಾತ್ರಿ ನನ್ನ ಮನೆಯ ಕುಲದೈವ ಶ್ರೀ ಮಾರುತಿ ತನ್ನ ದರ್ಶನ ಕೊಟ್ಟು ಡಂಬಳಕ್ಕೆ ಹಿಂದಿರುಗಿ ಶ್ರೀ ವಿಶ್ವನಾಥ ಸದೃಶರಾದ ತಮಗೆ ಮೊರೆಹೋಗಲು ಸೂಚಿಸಿದ. ಆ ಮೇರೆಗೆ ಮಾಡಿದ ನನ್ನ ಸೇವೆಯಿಂದ ನನ್ನ ಕರ್ಮತ್ರಯಗಳೆಲ್ಲ ನಾಶವಾಗಿರಬೇಕು. ಅಂತೆಯೇ ತಮ್ಮ ದರ್ಶನಲಾಭ

ದೊರೆಯಿತು. ಇಂದಿನಿಂದ ನೀನೇ ನನ್ನ ಕುಲದೈವ, ನನ್ನದೆನ್ನುವದು ಏನೇನೂ ಇಲ್ಲ. ನನ್ನ ಸಮಸ್ತ ರಾಜ್ಯೈಶ್ವರ್ಯವನ್ನು ನಿನ್ನ ಪಾದಕ್ಕೆ ಅರ್ಪಿಸಿದ್ದೇನೆ. ನಾನು ಕೇವಲ ನಿನ್ನ ಚರಣದಾಸ. ನನಗೋಸ್ಕರ ಇನ್ನು ನೀನು ಇಲ್ಲಿಯೇ ನೆಲಸಬೇಕು. ನಿನಗಾಗಿ ಮಠವನ್ನು ಈ ಕೂಡಲೇ ನಿರ್ಮಿಸಲು ಪ್ರಾರಂಭಿಸುವೆ'' ಎಂದು ಅರಿಕೆ ಮಾಡಿಕೊಂಡ.

**ಡಂಬಳ ಕ್ಷೇತ್ರ :**

ಆ ಮೇರೆಗೆ ದೊರೆ ತನ್ನ ಅರಮನೆಯ ಬಹು ಭಾಗವನ್ನು ಕೊಡಲು ಅದರ ಸಾಮಗ್ರಿಗಳಿಂದ ಎಷ್ಟೂ ವಿಳಂಬ ಮಾಡದೇ ಮಠವನ್ನ ಸಿದ್ಧಗೊಳಿಸಿದರು. ಮಠಕ್ಕಿರುವ ಬೃಹದಾಕಾರದ ಗವಾಕ್ಷಗಳನ್ನು ಈಗಲೂ ನಾವು ನೋಡಬಹು ದಾಗಿದೆ. ಮಠವು ಕಟ್ಟಿಸಿದ ನಂತರ ಶ್ರೀ ಜಗದ್ಗುರು ಅರ್ಧನಾರೀಶ್ವರರು ಅರಸನ ಪ್ರಾರ್ಥನೆಯಂತೆ ಮಠಕ್ಕೆ ಬಂದು ಅಲ್ಲಿಯೇ ನೆಲೆಸಿದರು. ಮಠದ ವಿನಿಯೋಗಾರ್ಥ ಅರಸನಿಂದ ಅನೇಕ ದಾನ-ದತ್ತಿಗಳು ಕೊಡಲ್ಪಟ್ಟವು.

ಶ್ರೀ ಅರ್ಧನಾರೀಶ್ವರರ ಘನವಾದ ಈ ಮಹಿಮೆ ದಿಗಂತ ಶೃತವಾಗುತ್ತಲೇ ಕೆಳದಿ, ಸ್ವಾದಿ, ಇಕ್ಕೇರಿ, ಹಾಗಲವಾಡಿ ಮತ್ತು ಹರಪನಹಳ್ಳಿ ಮುಂತಾದ ಅವನಿಪಾಲರು ಬಂದು ಗುರುದರ್ಶನದಿಂದ ಪುನೀತರಾಗಿ ಭಕ್ತಿ ಕಾಣಿಕೆಯೆಂದು ಅನೇಕ ಉಂಬಳಿಗಳನ್ನು ಹಾಕಿಕೊಟ್ಟರು. ಅಂದಿನಿಂದ ಶಿವಯೋಗಿ ಸಾರ್ವಭೌಮನಾದ ಶ್ರೀ ಅರ್ಧನಾರೀಶ್ವರ ಇಳೆರಾಜಪೂಜಿತ ಚರಣನಾದ.

**ಪಂಡಿತವರೇಣ್ಯ ಮರಿತೋಂಟದಾರ್ಯರು :**

ಹೀಗೆ ಶ್ರೀ ಅರ್ಧನಾರೀಶ್ವರರ ಅಪಾರ ಮಹಿಮೆಯಿಂದ ಪ್ರಭಾವಿತರಾದ ಆರ್ತ ಅರ್ಥಾರ್ಥಿ ಭಕ್ತಸ್ತೋಮ ಹರಿದು ಬಂದಂತೆ ಮಹಾಸ್ವಾಮಿಯ ಅನುಭಾವ ಸಂಪತ್ತಿಗೆ ಆಕರ್ಷಿತರಾಗಿ ಜ್ಞಾನ-ಜಿಜ್ಞಾಸುಗಳು ಪರಾಗಕ್ಕೆರಗುವ ಭೃಂಗಗಳಂತೆ ಸ್ವಾಮಿಯ ಪದತಲದಲ್ಲಿ ಬಂದು ಸೇರಿದರು. ಇಂಥವರಲ್ಲಿ ವಿರತಾಗ್ರಗಣ್ಯರೂ ಪ್ರಖಂಡ ಪಂಡಿತರೂ ಆದ ಶ್ರೀ ಮರಿತೋಂಟದಾರ್ಯ ನಕ್ಷತ್ರಗಳಮಧ್ಯ ಚಂದ್ರಮನಂತೆ ಒಪ್ಪುತ್ತಿದ್ದರು.

ಕೆಳದಿ ಭೂಪಾಲನು ಒಮ್ಮೆ ಶ್ರೀ ಅರ್ಧನಾರೀಶ್ವರರ ದರ್ಶನಕ್ಕೆ ಬಂದಾಗ ತನಗೆ ಕ್ರಿಯಾಮೂರ್ತಿಗಳು ಬೇಕೆಂದು ಗುರುಗಳನ್ನು ಕೇಳಿ ಪಂಡಿತಾಗ್ರೇಸರ ಶ್ರೀ ಮರಿತೋಂಟದಾರ್ಯನನ್ನು ಕೆಳದಿ ಸಂಸ್ಥಾನಕ್ಕೆ ಕರೆದುಕೊಂಡು ಹೋದನು. ಹೀಗೆ ಗುರುಗಳಿಂದ ಆಜ್ಞಪ್ತರಾದ ಶ್ರೀ ಮರಿತೋಂಟದಾರ್ಯರು ಕೆಳದಿ ಸಂಸ್ಥಾನದಲ್ಲಿದ್ದುಕೊಂಡು ''ವೀರಶೈವಾನಂದ ಚಂದ್ರಿಕೆ'', ''ವೀರಶೈವ ಪ್ರದೀಪಿಕೆ'' ಮತ್ತು ''ಸಿದ್ಧಾಂತ ಶಿಖಾಮಣಿಯ ತತ್ವ ಪ್ರದೀಪಿಕೆ''ಯೆಂಬ ಸಂಸ್ಕೃತ ವ್ಯಾಖ್ಯೆ ಇವೇ

ಮೊದಲಾದ ಮಹತ್ವದ ಗ್ರಂಥಗಳನ್ನು ಸಂಸ್ಕೃತದಲ್ಲಿ ರಚಿಸಿ ವೀರಶೈವ ಸಂಸ್ಕೃತ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು.

ಶ್ರೀಮರಿ ತೋಂಟದಾರ್ಯರಿಂದ ನಿತ್ಯವೂ ಶಾಸ್ತ್ರ ಪುರಾಣ ಕೇಳಿ ತಿಳಿದ ಕೆಳದಿ ನೃಪರು ಭಕ್ತಿಪ್ರೇರಿತರಾಗಿ ತಮ್ಮ ಅರಮನೆಯ ಸಮಸ್ತಪರಿವಾರದೊಡನೆ ಶ್ರೀಗುರು ದರ್ಶನಾರ್ಥವಾಗಿ ಡಂಬಳಕ್ಕೆ ಹೊರಡಲು ಸಿದ್ಧರಾಗಿರುವಾಗ ಇದ್ದಕ್ಕಿದ್ದಂತೆ ಶ್ರೀ ಅರ್ಧನಾರೀಶ್ವರರು ಕೆಳದಿಯ ಅರಮನೆಯ ಮುಂಭಾಗದಲ್ಲಿ ಪ್ರಕಟವಾದರು.

ನೂರಾರು ಮೈಲುಗಳ ಆಚೆಗಿರುವ ಗುರುದೇವ ಸ್ಮರಣೆ ಮಾತ್ರದಿಂದ ದರ್ಶನ ಕೊಟ್ಟದ್ದು ಆತನ ಸರ್ವಾಂತರ್ಯಾಮಿತ್ವಕ್ಕೆ ಸಾಕ್ಷಿಯಾಗಿದೆಯೆಂದು ರಾಜ ಪರಿವಾರದವರು ಭಕ್ತಿಕಂಪಿತರಾದರು. ಗುರುಸೇವೆ ರಾಜವೈಭವದಿಂದ ನಡೆಯಿತು. ಒಂದು ಲಕ್ಷ ತೊಂಭತ್ತು ಸಾವಿರ ಗಣಾಧೀಶ್ವರರಿಗೆ ಭಾರೀ ಭೋಜನವಾಗಿ ಕೆಳದಿ ಪ್ರತಿ ಕಲ್ಯಾಣವಾಯಿತು.

ಗುರು ಅರ್ಧನಾರೀಶ್ವರರು ಕೆಳದಿ ನೃಪರ ಸೇವೆಯಿಂದ ಸಂತುಷ್ಟರಾಗಿ ಅವರಿಂದ ಬೀಳ್ಕೊಂಡು ಹೊರಡುವಾಗ ಕೆಳದಿನಾಯಕ ಸೋಮಶೇಖರನ ಮಗ ವೀರಭದ್ರ ನಾಯಕನ ಪತ್ನಿ ಮಲ್ಲಾಂಬೆಯನ್ನು ಕರೆದು ಆಕೆಯ ಮಸ್ತಕದ ಮೇಲೆ ತನ್ನ ವರದ ಹಸ್ತವನ್ನಿಟ್ಟು ''ಮಗು ! ಈ ಭಸಿತ ಘಟ್ಟಿಯನ್ನು ನೀನು ಪ್ರತಿದಿನ ಲಿಂಗಪೂಜಾ ಕಾಲದಲ್ಲಿ ಧರಿಸು. ಈ ಘಟ್ಟಿ ಪೂರ್ತಿತವಾಗುವದರೊಳಗಾಗಿ ನಿನ್ನ ಕರ್ಮ ದೋಷವೆಲ್ಲ ವಿಚ್ಛೇದಗೊಂಡು ಗಂಡು ಮಗುವಿನ ತಾಯಿಯಾಗುವೆ. ಆತನಿಗೆ ''ಬಸವಾ'' ಎಂದು ನಾಮಕರಣ ಮಾಡು. ಡಂಬಳಕ್ಕೆ ಹೊರಟ ನಿಮಗೆ ಮಾರ್ಗಾಯಾಸವಾಗಬಾರದೆಂದೇ ನಾನು ಬಂದೆ'' ಎಂದು ತನ್ನಲ್ಲಿದ್ದ ಭಸ್ಮಘಟ್ಟೆಯನ್ನು ಮಹಾರಾಣಿಗೆ ಆಶೀರ್ವದಿಸಿ ಅಲ್ಲಿಯೇ ಅಂತರ್ಧಾನ ಹೊಂದಿದರು.

ಮಹಾರಾಣಿ ಮಲ್ಲಾಂಬೆಯ ಉದರದಲ್ಲಿ ಜನಿಸಿದ ಸುಪುತ್ರನೇ ತುಂಬಾ ಪ್ರಸಿದ್ಧಿಗೆ ಬಂದ ''ಬೂದಿ ಬಸಪ್ಪನಾಯಕ''. ಗುರು ಅರ್ಧನಾರೀಶ್ವರರು ಅನುಗ್ರಹಿಸಿದ ಭಸ್ಮದಿಂದ ಜನ್ಮ ತಾಳಿದ ಕಾರಣ ''ಬಸಪ್ಪ ನಾಯಕ''ನಿಗೆ ಬೂದಿ ಬಸಪ್ಪನಾಯಕನೆಂಬ ಹೆಸರು ರೂಢವಾಯಿತು.

ಕೆಳದಿ ನೃಪರು ಶ್ರೀಅರ್ಧನಾರೀಶ್ವರರ ಲಿಂಗ ಪೂಜಾವಿನಿಯೋಗಾರ್ಥ ಅನೇಕ ಗ್ರಾಮಗಳನ್ನು ಜಹಗೀರ ರೂಪದಿಂದ ಒಪ್ಪಿಸಿದ್ದಲ್ಲದೆ ತಮ್ಮ ಸೀಮೆಯಿಂದ ಪರಸ್ಥಲಕ್ಕೆ ಹೋಗುವ ಯಾಲಕ್ಕಿ, ಮೆಣಸು ಮುಂತಾದ ಸರಕುಗಳಿಗೆ ಕಟ್ಟಲ್ಪಡುವ ಸುಂಕದ ಆದಾಯವನ್ನು ಸಹ ಸಲ್ಲಿಸಿ ಕೃತಾರ್ಥರಾದರು.

ಅದರಂತೆ ಹರಪನಹಳ್ಳಿ ದೊರೆಯು ಡಂಬಳ ಮಠಕ್ಕೆ ಅಂಕಲಿ, ಮದ್ಲಾಪೂರ, ನೀಲಗುಂದ ಮೊದಲಾದ ಐದು ಗ್ರಾಮಗಳನ್ನು ಸೇವಾರ್ಥವಾಗಿ ಹಾಕಿ ಕೊಟ್ಟನು.

ಇದಲ್ಲದೆ ಡಂಬಳದ ದೊರೆ ಶೀನಪ್ಪನಾಯಕನು ತೊರೆನೀರಲಗಿ ಎಂಬ ಗ್ರಾಮವನ್ನು ಶ್ರೀ ಡಂಬಳ ಕ್ಷೇತ್ರದಲ್ಲಿ ಮಾಘ ಶುದ್ಧ ಪೌರ್ಣಿಮೆಯಿಂದ ನಡೆಯುವ ರಥೋತ್ಸವದ ವಿನಿಯೋಗಾರ್ಥ ಸಮರ್ಪಿಸಿ ಧನ್ಯನಾದನು. ಒಮ್ಮೆ ಶ್ರೀಗಳು ಈಸೂರಿಗೆ ದಯಮಾಡಿಸಿದ್ದರು. ಅಲ್ಲಿಯ ಮಾಹೇಶ್ವರ ಮನೆತನದವರಿಂದ ಸಲ್ಲಿಸಲ್ಪಟ್ಟ ಯೋಗಲಕ್ಷಣ ಲಕ್ಷಿತವಾದ ಮಗುವನ್ನು ಸ್ವೀಕರಿಸಿ ತಮ್ಮ ಸುಕ್ಷೇತ್ರ ಡಂಬಳಕ್ಕೆ ಹಿಂದಿರುಗಿದರು.

ಮುಂದೆ ಕೆಲಕಾಲಾನಂತರ ಶ್ರೀ ಅರ್ಧನಾರೀಶ್ವರರು ತಮ್ಮ ಶಿಷ್ಯ ನಂದೀಶ್ವರ ಸ್ವಾಮಿಗಳಿಗೆ ಷಟ್‌ಸ್ಥಲ ಬೋಧಾಧಿಕಾರವನ್ನು ಒಪ್ಪಿಸಿ ತಮ್ಮ ಶೂನ್ಯ ಪೀಠದಲ್ಲಿ ಅವರನ್ನು ಮೂರ್ತಗೊಳಿಸಿ, ತಮ್ಮ ಲಕ್ಷಣಗಳನ್ನೆಲ್ಲ ಅವರಿಗಿತ್ತು ತಮಗಾಗಿ ಡಂಬಳದ ದೊರೆಯಿಂದ ನಿರ್ಮಿಸಲಾದ ಧ್ಯಾನಮಂದಿರದ ಗುಹೆಯನ್ನು ಪ್ರವೇಶಿಸಿ ಶಿವ ಸಮಾಧಿಸ್ಥರಾದರು. ದೇಹಾವಸಾನದ ನಂತರ ದುರ್ಗಂಧ ಉಂಟಾಗುವದು ಶರೀರ ಧರ್ಮ. ಆದರೆ ಷಟ್‌ಸ್ಥಲಾಚರಣೆಯಿಂದ ಶರೀರವು ಮಹಾಲಿಂಗ ವಾಗುವದರ ಮೂಲಕ ಅದು ಸುಗಂಧಮಯವಾಗುವದು ಪ್ರಸಾದ ಧರ್ಮ.

ಇಂದಿಗೂ ಡಂಬಳದಲ್ಲಿ ಶ್ರೀ ಅರ್ಧನಾರೀಶ್ವರರ ಗದ್ದುಗೆ ಬಾಗಿಲ ಬಳಿ ನಿಂತಾಗ ಮನಸ್ಸಿಗೆ ಅಲ್ಹಾದಕರವಾದ ಪರಿಮಳವು ಘ್ರಾಣೇಂದ್ರಿಯಕ್ಕೆ ತಾಕಿ ತಾಪತ್ರಯಗಳ ತಿರುಗಣಿಯಲ್ಲಿ ಸಿಕ್ಕ ತಪ್ತ ಹೃದಯಕ್ಕೆ ಶಾಂತಿ–ನೆಮ್ಮದಿ ಗಳುಂಟಾಗುವದು ಡಂಬಳ ಕ್ಷೇತ್ರಕ್ಕೆ ಆಗಮಿಸಿ ಹೋದ ಭಕ್ತಾದಿಗಳಿಗೆಲ್ಲ ಅನುಭವವೇದ್ಯ ವಿಷಯ.

ಇಂತಹ ಮಹಾಸಿದ್ಧಿಯನ್ನು ಸಾಧಿಸಿ ಅಭಿನವ ಸಿದ್ಧಲಿಂಗನೆನೆಸಿದ್ದಾರೆ ಶ್ರೀ ಅರ್ಧನಾರೀಶ್ವರ. ಈ ಕಾರಣದಿಂದ ಡಂಬಳ ದ್ವಿತೀಯ ಎಡೆಯೂರ ಕ್ಷೇತ್ರ.

**ಶ್ರೀ ನಿರಂಜನ ಜಗದ್ಗುರು ತೋಂಟದ ಈಸೂರ ನಂದೀಶ್ವರ ಮಹಾ ಸ್ವಾಮಿಗಳವರು :**

ಶ್ರೀ ಜಗದ್ಗುರು ತೋಂಟದ ಅರ್ಧನಾರೀಶ್ವರ ಮಹಾಸ್ವಾಮಿಗಳವರಿಂದ ಷಟ್‌ಸ್ಥಲಾಚಾರ್ಯ ಪಟ್ಟವನ್ನು ಸ್ವೀಕರಿಸಿದ ನಂತರ ಈಸೂರ ನಂದೀಶ್ವರ ಮಹಾ ಸ್ವಾಮಿಗಳವರು ಕೆಲದಿನ ಡಂಬಳದಲ್ಲಿಯೇ ಶಿವಯೋಗಾನಂದದಲ್ಲಿದ್ದು ಲೋಕ ವನ್ನುದ್ಧರಿಸಲು ಅಲ್ಲಲ್ಲಿ ಸಂಚರಿಸುತ್ತ ಕೆಳದಿಗೆ ಬಂದು ತಲುಪಿದರು.

ಆಗ ಕೆಳದಿಯ ಭೂಪಾಲಕನಾಗಿದ್ದ ಬೂದಿಬಸಪ್ಪನಾಯಕನು ಹರ್ಷಪುಳಕಿತ ನಾಗಿ ಶ್ರೀ ಗುರುಗಳ ಪಾದಕ್ಕೆ ಶ್ರೀ ರುದ್ರದಿಂದ ಅಭಿಷೇಕ ಮಾಡಿ ಒಂದು ಲಕ್ಷ ತೊಂಬತ್ತಾರು ಗಣಾಧೀಶ್ವರರನ್ನು ಸಂತೃಪ್ತಗೊಳಿಸಿದನು.

ಶ್ರೀ ಜಗದ್ಗುರುಗಳವರ ಪಾದಧೂಳಿ ಮಿಶ್ರಿತವಾದ ಮೂರು ಭಸ್ಮಘಟ್ಟಿಗಳನ್ನು ತಯಾರಿಸಿದ ಬಸಪ್ಪನಾಯಕನು ಒಂದನ್ನು ತನ್ನಲ್ಲಿಟ್ಟುಕೊಂಡು ಉಳಿದವುಗಳಲ್ಲಿ ಒಂದನ್ನು ಡಂಬಳ ಹಾಗೂ ಮೃಡಗಿರಿಗೆ ಕಳಿಸಿಕೊಟ್ಟನು.

ಆ ನಂತರ ಬಸಪ್ಪನಾಯಕನಿಂದ ನಿರೂಪ ತೆಗೆದುಕೊಂಡ ಶ್ರೀ ಜಗದ್ಗುರು ಈಸೂರು ನಂದೀಶ್ವರ ಮಹಾಸ್ವಾಮಿಗಳವರು ತಮ್ಮ ಸ್ವಗ್ರಾಮವಾದ ಈಸೂರಿಗೆ ದಯಮಾಡಿಸಿ ಅಲ್ಲಿರುವ ''ಹೋರೀ'' ಎಂಬ ಹೊಳೆಯ ದಡದಲ್ಲಿರುವ ಗವಿಯಲ್ಲಿ ಬಹುಕಾಲ ಅನುಷ್ಠಾನ ಪೂರೈಸಿದರು.

ಆ ಮೇಲೆ ಶ್ರೀಗಳವರು ಲಿಂಗದಾಣತಿಯಂತೆ ಅಣ್ಣಿಗೇರಿಗೆ ದಯಮಾಡಿಸಿ ಅಲ್ಲಿಯೇ ಸಮೀಪದಲ್ಲಿರುವ ''ಮಜ್ಜಗಿಗುಡ್ಡ'' ಎಂಬ ಗ್ರಾಮದ ಬಳಿಯಲ್ಲಿರುವ ಗವಿಯಲ್ಲಿ ಕೆಲದಿನ ಅನುಷ್ಠಾನ ಪೂರೈಸುತ್ತಿರುವಾಗ ಅಣ್ಣಿಗೇರಿಯ ವಿರೂಪಾಕ್ಷಲಿಂಗನು ಭಕ್ತ ವೇಷದಿಂದ ಶ್ರೀಗಳಲ್ಲಿಗೆ ಬಂದು ತನ್ನ ಆಲಯಕ್ಕೆ ಅವರನ್ನು ಬಿಜಯಂಗೈಸಿ ಹಾಗೆಯೇ ಆಲೂರ ದೇಶಪಾಂಡೆಯವರಾದ ನಾಗಪ್ಪಯ್ಯನ ಕನಸಿನಲ್ಲಿ ಹೋಗಿ ''ಈ ಊರ ಪೂರ್ವ ದಿಕ್ಕಿನಲ್ಲಿ ಒಂದು ಮಣ್ಣಿನ ಮರಡಿಯಿದೆ. ಅದನ್ನು ಅಗಿಸಿದರೆ ಅಲ್ಲಿ ನನ್ನ ಶಿವಾಲಯವಿದೆ (ವಿರೂಪಾಕ್ಷಲಿಂಗ). ಅದರಲ್ಲಿ ಜಂಗಮ ಮೂರ್ತಿಗಳಿದ್ದು ನೀನು ಆ ಪರಮ ಗುರುಗಳ ಆಜ್ಞಾನುಸಾರ ನಡೆದುಕೊಳ್ಳಬೇಕು'' ಎಂದು ಆತಣತಿಯನ್ನಿತ್ತನು.

ಸ್ವಪ್ನದಿಂದ ತಿಳಿದೆದ್ದ ದೇಶಪಾಂಡೆ ಮಾರನೇ ದಿನವೇ ಆ ಮರಡಿಯನ್ನು ಆಗಿಸಲು ಅಲ್ಲಿ ಈಗ ನಾವು ನೋಡುತ್ತಿರುವ ಶ್ರೀ ವಿರೂಪಾಕ್ಷ ದೇವಸ್ಥಾನವು ದೃಗ್ಗೋಚರವಾಯಿತು. ಅದರಲ್ಲಿ ಪ್ರವೇಶಿಸಿ ನೋಡಲು ನಿರ್ಗುಣನಾದ ಪರಶಿವನ ಸಾಕಾರರೂಪವೋ ಏನೋ ಎಂಬಂತೆ ಶಿವತೇಜಸ್ಸಿನಿಂದ ಉಕ್ಕುವ ಶ್ರೀ ನಂದೀಶ್ವರ ಮಹಾಸ್ವಾಮಿಗಳವರು ದೃಷ್ಟಿಗೋಚರವಾದರು.

ಆಗ ದೇಶಪಾಂಡೆಯವರು ಶ್ರೀ ಮಹಾಸ್ವಾಮಿಗಳವರನ್ನು ಉತ್ಸವದಿಂದ ಊರೊಳಗೆ ಬರಮಾಡಿಕೊಂಡ ಮೇಲೆ ಆ ಊರ ದೇಸಾಯಿಯವರು ಶ್ರೀ ಜಗದ್ಗುರು ನಂದೀಶ್ವರ ಮಹಾಸ್ವಾಮಿಗಳವರಿಗೆ ಮಠವನ್ನು ಕಟ್ಟಿಸಿಕೊಟ್ಟು ಲಿಂಗಪೂಜಾ ವಿನಿಯೋಗಾರ್ಥವಾಗಿ ಭೂ ಕಾಣಿಕೆ ಮೊದಲಾದವುಗಳನ್ನು ಹಾಕಿಕೊಟ್ಟರು.

ಒಮ್ಮೆ ದೇಸಾಯಿಯವರ ಮನೆಗೆ ಅವರ ಗುರುಸ್ವಾಮಿಯವರು ಬಂದಿದ್ದರು. ದೇಸಾಯಿಯವರಿಗೆ ಪ್ರತಿದಿನ ಸಾಯಂಕಾಲದಲ್ಲಿ ಮಠಕ್ಕೆ ಹೋಗಿ ಗುರುದರ್ಶನ ತೆಗೆದುಕೊಂಡು ಬರುವದು ರೂಢಿ. ಆ ಮೇರೆಗೆ ದೇಸಾಯಿಯವರು ಮಠಕ್ಕೆ ಹೊರಟಾಗ ಅವರ ಗುರುಸ್ವಾಮಿಯವರೂ ದೇಸಾಯಿಯವರೊಡನೆ ಮಠಕ್ಕೆ ಹೋದರು. ಶ್ರೀ ನಂದೀಶ್ವರ ಮಹಾಸ್ವಾಮಿಗಳವರ ನಿರಾಡಂಬರ ವ್ಯಕ್ತಿತ್ವವನ್ನು ನೋಡಿದ ಗುರುಸ್ವಾಮಿಯವರು ಶ್ರೀಗಳಿಗೆ ನಮಿಸದೆ ಹಾಗೇ ದೇಸಾಯಿಯವರ ಕೂಡ ಮನೆಗೆ ಮರಳಿದರು. ಆ ಮೇಲೆ ಸ್ನಾನ ತೀರಿಸಿಕೊಂಡು ಗುರುಸ್ವಾಮಿಗಳು ಪೂಜೆಗೋಸ್ಕರ ತಮ್ಮ ಲಿಂಗದ ಕರಡಿಗೆಯನ್ನು ತೆಗೆದು ನೋಡಿದಾಗ ಅದರಲ್ಲಿ

ಲಿಂಗವೇ ಇರಲಿಲ್ಲ. ಗಾಬರಿಗೊಂಡು ಗುರುಸ್ವಾಮಿಯವರು ಲಿಂಗದ ವಿಷಯವನ್ನು ದೇಸಾಯಿಯವರಿಗೆ ತಿಳಿಸಿದರು. ಅದಕ್ಕೆ ದೇಸಾಯಿಯವರು "ಮಠಕ್ಕೆ ಹೋದಾಗ ಶ್ರೀ ಶಿವಯೋಗೀವರ್ಯರಿಗೆ ನಮಿಸಲೇ ಇಲ್ಲ. ಅದರ ಕಹಿಫಲದಿಂದ ಲಿಂಗ ಅದೃಶ್ಯವಾಗಿದೆ" ಎಂದು ಗುರುಸ್ವಾಮಿಯವರಿಗೆ ಹೇಳಿ, ಅವರನ್ನು ಕರೆದುಕೊಂಡು ಮಠಕ್ಕೆ ಬಂದು ಕಳೆದು ಹೋದ ಲಿಂಗದ ವಿಷಯವನ್ನು ಶ್ರೀಗಳವರಲ್ಲಿ ಅರಿಕೆ ಮಾಡಿಕೊಂಡರು.

ಆಗ ಶ್ರೀ ನಂದೀಶ್ವರ ಮಹಾಸ್ವಾಮಿಗಳವರು ಮಂದಸ್ಮಿತರಾಗಿ ಪಟ್ಟದ ಸ್ವಾಮಿಯವರನ್ನು ನೋಡುತ್ತ "ಹೌದು ! ಅವನಲ್ಲಿರಲು ಒಲ್ಲೆನೆಂದು ಹೇಳಿ ಲಿಂಗಯ್ಯ ನಮ್ಮಲ್ಲಿ ಬಂದಿದ್ದಾನೆ" ಎಂದು ತಮ್ಮ ಆಸನದ ಬುಡದಲ್ಲಿದ್ದ ಗುರುಸ್ವಾಮಿಯ ಲಿಂಗವನ್ನು ಆತನ ಕೈಗಿತ್ತರು.

**ಶ್ರೀ ರಾಚೋಟಿ ಮರಿದೇವರು :**

ಈ ರೀತಿ ಅನಂತ ಪವಾಡಗಳ ಮೂಲಕ ಧರ್ಮ ಜಾಗೃತಿ ಮಾಡುತ್ತ ತಮ್ಮ ಲಿಂಗಾನಂದದಲ್ಲಿ ಶ್ರೀ ನಂದೀಶ್ವರ ಮಹಾಸ್ವಾಮಿಗಳಿರುವಾಗ ತಮ್ಮಲ್ಲಿ ಅತಿ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದ ತಮ್ಮ ಮರಿದೇವರಾದ ರಾಚೋಟಿ ದೇವರನ್ನು ಶ್ರೀಗಳವರು ಒಂದು ದಿನ ಶ್ರೀ ವಿರೂಪಾಕ್ಷಲಿಂಗ ದೇವಸ್ಥಾನದ ಮೇಲ್ಭಾಗದಲ್ಲಿ ಕರೆದುಕೊಂಡು ಹೋಗಿ ಉತ್ತರ ದಿಕ್ಕಿನ ಕಡೆಗೆ ನೋಡಲು ಹೇಳಿದರು. ಆಗ ರಾಚೋಟಿ ದೇವರಿಗೆ ಪಂಚಮುದ್ರೆಗಳಿಂದ ಕೂಡಿದ ಅಸಂಖ್ಯಾತ ಜಂಗಮ ಮೂರ್ತಿಗಳು ಬರುತ್ತಿರುವದು ಕಾಣಿಸಿತು. ಅದರಂತೆ ದಕ್ಷಿಣ ದಿಕ್ಕಿನ ಕಡೆಗೆ ನೋಡಲು ಗುರುಗಳು ತಿಳಿಸಿದರು. ಆಗ ಅವರಿಗೆ ಚತುರಂಗ ಬಲದೊಡನೆ ರಾಜ ವೈಭವವೇ ಬರುತ್ತಿರುವದು ಕಾಣಿಸಿತು. ಈ ಉಭಯಗಳಲ್ಲಿ ಯಾವುದುಬೇಕು ಎಂದು ಮರಿದೇವರಿಗೆ ಶ್ರೀಗಳು ಕೇಳಿದರು. "ರಾಜವೈಭವ ಬೇಕು" ಎಂದು ಮರಿದೇವರು ಹೇಳಲು "ಆಗಲಿ ನಿನ್ನ ಅಪೇಕ್ಷೆ ಈಡೇರುವದು. ನೀನಿನ್ನು ಹೊರಡು ಎಂದು ಹೇಳಿ ಶ್ರೀ ರಾಚೋಟಿ ದೇವರನ್ನು ಸಂಚಾರಾರ್ಥವಾಗಿ ಕಳಿಸಿಕೊಟ್ಟರು.

ಇತ್ತ ಬೂದಿ ಬಸಪ್ಪನಾಯಕನಿಗೆ ಪ್ರಪಂಚದಲ್ಲಿ ಆಸ್ತೆ ಕಡಿಮೆಯಾಗಿ ವೈರಾಗ್ಯ ಬಲಿತು ಮೋಕ್ಷಾಪೇಕ್ಷೆಯ ದಾಹ ಹೆಚ್ಚಾಯಿತು. ಹಾಗೆಯೇ ಅವನು ತನ್ನ ಮಿತ ಪರಿವಾರದೊಡನೆ ಡಂಬಳಕ್ಕೆ ಬಂದು ಶ್ರೀ ಅರ್ಧನಾರೀಶ್ವರರ ಗದ್ದುಗೆಯ ದರ್ಶನ ಪಡೆದುಕೊಂಡು ಅಲ್ಲಿಂದ ನೇರವಾಗಿ ಅಣ್ಣಿಗೇರಿಗೆ ಬಂದು ಶ್ರೀ ಈಸೂರು ನಂದೀಶ್ವರ ಮಹಾಸ್ವಾಮಿಗಳವರ ದರ್ಶನ ತೆಗೆದುಕೊಂಡು ತಾನು ಮುಕ್ತನಾಗಬೇಕೆಂಬ ಬಯಕೆಯನ್ನು ಗುರುಗಳಲ್ಲಿ ನಿವೇದಿಸಿದನು.

ಶ್ರೀಗಳವರು ಬಸಪ್ಪನಾಯಕನಿಗೆ ಕಪೋತಗುಡ್ಡದಲ್ಲಿ ಅನುಷ್ಠಾನ ಕೈಕೊಂಡ ಮೃಡಗಿರಿಯ ಅನ್ನದಾನ ಚರವರ್ಯರನ್ನು ಕಂಡಲ್ಲಿ ಆತನ ಇಷ್ಟಾರ್ಥ ನೆರವೇರುವ ದೆಂದು ತಿಳಿಸಿದರು.

ಆ ಮೇರೆಗೆ ಅರಸು ಶ್ರೀಶೈಲ ಪರ್ವತಕ್ಕೆ ಸಮವಾದ ಕಪೋತ ಪರ್ವತಕ್ಕೆ ಬರಲಾಗಿ, ಅಲ್ಲಿ ಶ್ರೀ ಅನ್ನದಾನ ಮಹಾಸ್ವಾಮಿಗಳವರ ದರ್ಶನವಾಯಿತು. ಅರಸನಿಂದ ಆತನ ಮೋಕ್ಷಾಪೇಕ್ಷೆಯನ್ನು ಅರಿತ ಚರವರೇಣ್ಯರು ಅರಸನಿಗೆ ಲೌಕಿಕವನಲ್ಲಗಳೆದು ಪಾರಮಾರ್ಥವನ್ನು ಸಾಧಿಸುವದಕ್ಕಿಂತ ಭವಪ್ರಪಂಚವನ್ನೇ ಶಿವಪ್ರಪಂಚವನ್ನಾಗಿ ಪರಿವರ್ತಿಸುವದು ಶ್ರೇಯಸ್ಕರವೆಂದು ಹೇಳಿ ಮರಳಿ ಕೆಳದಿಯ ರಾಜಧಾನಿಗೆ ಹೋಗುವಂತೆ ಅವರನ್ನು ಒಪ್ಪಿಸಿ ಕಳಿಸಿದರು. ಅರಸನು ಅನೇಕ ಪಂಡಿತರ ನೆರವಿನಿಂದ ಮತ ಗ್ರಂಥಗಳನ್ನೆಲ್ಲ ಪುನಃ ಸಂಸ್ಕರಿಸಿ ಸಮಾಜೋಪಯುಕ್ತವಾದ ಅನೇಕ ಮಹತ್ಕಾರ್ಯಗಳನ್ನು ಮಾಡಿ ಪುನೀತನಾದನು.

ಆದರೂ ಇಹದ ಬಾಳಿನಲ್ಲಿ ಅರಸನಿಗೆ ಎಷ್ಟೂ ಅಭಿರುಚಿ ಇರಲಿಲ್ಲ. ಅವನ ಮೋಕ್ಷಾಪೇಕ್ಷೆ ತೀವ್ರವಾಯಿತೇನೋ ಎಂಬಂತೆ ಬಹುಕಾಲ ಸಂಚಾರ ಹೊರಟ ಶ್ರೀ ರಾಚೋಟಿ ಮರಿದೇವರು ಆಕಸ್ಮಿಕವಾಗಿ ಕೆಳದಿಗೆ ಆಗಮಿಸಿದರು. ಅರಸನಿಗೆ ಮಹಾನಂದವಾಯಿತು. ತನಗೆ ತಲೆ ಶೂಲಿಯಂತಿದ್ದ ರಾಜ್ಯ ಭಾರವನ್ನೆಲ್ಲ ಶ್ರೀ ರಾಚೋಟಿ ದೇವರ ಪಾದಕ್ಕೆ ಸಲ್ಲಿಸಿ ತನ್ನ ಮಾತಾಪಿತೃ ಹಾಗೂ ಮಡದಿ ಮಕ್ಕಳೊಡನೆ ಕೈವಲ್ಯ ಪದವಿಯನ್ನು ಹೊಂದಿದನು.

ಮುಂದೆ ರಾಜವೈಭವ ಪ್ರಾಪ್ತವಾಗುವದೆಂಬ ತಮ್ಮ ಗುರುಗಳ ಭವಿಷ್ಯವಾಣಿಯನ್ನು ನೆನೆದು ಶ್ರೀ ರಾಚೋಟಿ ದೇವರು ಕೆಲಕಾಲ ರಾಜ್ಯಭಾರ ಮಾಡಿ ತದನಂತರ ಅದನ್ನು ಬೇರೊಬ್ಬರಿಗೆ ವಹಿಸಿಕೊಟ್ಟು, ತಾವು ಗುರು ಸನ್ನಿಧಿಗೆ ದಯಮಾಡಿಸಿದರು.

ಶ್ರೀ ನಂದೀಶ್ವರಸ್ವಾಮಿಗಳವರು ತಾವು ಲಿಂಗದಲ್ಲಿ ಸಮರಸವಾಗುವ ಕಾಲ ಸಮೀಪಿಸಿದ್ದು ತಿಳಿದು, ತಮ್ಮಲ್ಲಿದ್ದ ತೋಂಟದಾರ್ಯ ದೇಶಿಕ ಮೂರ್ತಿಗಳಿಗೆ ತಮ್ಮ ಸಂಪ್ರದಾಯವನ್ನು ಪ್ರಚಾರಗೊಳಿಸುವ ಗುರೂತ್ತಮರನ್ನಾಗಿ ನಿಯಮಿಸಿ ತಮ್ಮ ಪೀಠವನ್ನಿತ್ತು 'ಉರಿಯುಂಡ ಕರ್ಪುರ'ದಂತೆ ತಮ್ಮ ಇಷ್ಟಲಿಂಗದಲ್ಲಿ ಬಯಲಾದರು.

### ಶ್ರೀ ನಿರಂಜನ ಜಗದ್ಗುರು ಉಗ್ಗದ ತೋಂಟದಾರ್ಯರು :

ಷಟ್‌ಸ್ಥಲಾಚಾರ್ಯ ಪಟ್ಟವನ್ನು ಸ್ವೀಕರಿಸಿದ ತೋಂಟದಾರ್ಯರು ಭಕ್ತೋದ್ಧಾರಕ್ಕಾಗಿ ದೇಶಾಟನ ಮಾಡುತ್ತ ಮತತತ್ವಗಳ ಪ್ರಚಾರ ಮಾಡಿ ಪುನಃ ತಮ್ಮ ಗುರುಸ್ಥಾನವಾದ ಅಣ್ಣಿಗೇರಿಗೆ ಬಂದರು. ಪ್ರತಿದಿನವೂ ಸ್ಪರ್ಶಿಸಲಸಾಧ್ಯವಾದ ಉಷ್ಣೋದಕದಿಂದ ಸ್ನಾನ ಮಾಡುತ್ತಿದ್ದ ಈ ಶ್ರೀಗಳಿಗೆ ಅವರ ಶಿಷ್ಯರು ಉಗ್ಗಕಟ್ಟಿ ನೀರು ಹಣಿಸುತ್ತಿದ್ದರಿಂದ ಇವರು ಉಗ್ಗದ ತೋಂಟದಾರ್ಯರೆಂದೇ ಪ್ರಸಿದ್ಧರಾದರು. ಈ ಸ್ನಾನದ ಸಲಿಲವು ಮಠದ ಹಿಂಭಾಗದಲ್ಲಿ ಪ್ರವಾಹ ರೂಪದಿಂದ ಹರಿಯುವದನ್ನು ಕಂಡ ಶ್ರದ್ಧಾವಂತ ಭಕ್ತರು ತಮ್ಮ ರೋಗ ರುಜಿನಗಳನ್ನು ಕಳೆದುಕೊಂಡು ಉದ್ಧಾರವಾದರು. ಮುಂದೆ ಶ್ರೀ ಉಗ್ಗದ ತೋಂಟದಾರ್ಯರು ತಮ್ಮ ಶೂನ್ಯ ಸಿಂಹಾಸನದ ಅಧಿಕಾರವನ್ನು ಸದಾಶಿವ ಸ್ವಾಮಿಗಳವರಿಗೆ ಅನುಗ್ರಹಿಸಿ ತಮ್ಮ ನಿಜೇಷ್ಟ ಲಿಂಗದಲ್ಲಿ ಬಯಲಾದರು.

ಶ್ರೀ ನಿರಂಜನ ಜಗದ್ಗುರು ತೋಂಟದ ಸದಾಶಿವ ಮಹಾಸ್ವಾಮಿಗಳವರು :

ತಮ್ಮ ಗುರುಗಳಿಂದ ಅಧಿಕಾರ ಪಡೆದುಕೊಂಡ ಶ್ರೀ ಸದಾಶಿವ ಮಹಾಸ್ವಾಮಿಗಳವರು ತಮ್ಮ ಹಿಂದಿನ ಗುರು ಪರಂಪರೆಯಂತೆ ಲೋಕಸಂಚಾರ ಕೈಕೊಂಡು ಷಟ್‌ಸ್ಥಲ ತತ್ತ್ವಗಳನ್ನೆಲ್ಲ ಜನಮನದಲ್ಲಿ ಬಿತ್ತಿ ತಮ್ಮ ಕರ್ತೃ ಸ್ಥಾನವಾದ ಡಂಬಳಕ್ಕೆ ಬಂದು ಅಲ್ಲಿದ್ದ ವಿರತ ಸಮೂಹಕ್ಕೆ ಷಟ್‌ಸ್ಥಲ ಬಹೋಪದೇಶವನ್ನು ಮಾಡಿ ಶಿವಾನುಭವ ಚರಂತಿಗೆಯನ್ನು ಅವರೆಲ್ಲರಿಗೆ ಅನುಗ್ರಹಿಸಿ ಲೋಕಹಿತಾರ್ಥವಾಗಿ ಅವರನ್ನೆಲ್ಲ ಕಳಿಸಿಕೊಟ್ಟರು.

ಹೀಗೆ ಶ್ರೀಗಳು ಡಂಬಳದಲ್ಲಿರುವಾಗ ಕೊಪ್ಪಳ ಪರ್ವತದ ಗವಿಯಲ್ಲಿ ಲಿಂಗಾನುಷ್ಠಾನದಲ್ಲಿದ್ದ ಸಿದ್ಧಪ್ಪನೆಂಬ ಮಹಾ ಶಿವಶರಣನು ಶ್ರೀಗಳವರ ದರ್ಶನಕ್ಕೆ ಬಂದನು. ಆತನು ಗವಿಯಲ್ಲಿಯೇ ಇರುತ್ತಿದ್ದರಿಂದ ಆತನಿಗೆ ''ಗವಿಸಿದ್ಧಪ್ಪ''ನೆಂಬ ಹೆಸರೇ ಸ್ಥಿರವಾಯಿತು.

ಆತನ ಶಿವಯೋಗ ಸಿದ್ಧಿಯಿಂದ ಪ್ರಭಾವಿತರಾದ ಹೈದ್ರಾಬಾದ ನವಾಬರು ಆತನಿಗೆ ಹಿರೇಬಗ್ಗನಾಳ ಮುಂತಾದ ಐದು ಗ್ರಾಮಗಳನ್ನು ಉಂಬಳಿ ಹಾಕಿ ಕೊಟ್ಟಿದ್ದರು.

ಈ ಗವಿಸಿದ್ಧಪ್ಪನು ತನಗೆ ಓರ್ವ ಕ್ರಿಯಾಮೂರ್ತಿ ಬೇಕೆಂದು ಶ್ರೀಗಳವರನ್ನು ಭಿನ್ನವಿಸಲಾಗಿ ಕಾಶೀಯಿಂದ ಷಟ್‌ಶಾಸ್ತ್ರ ಕೋವಿದರಾಗಿ ಬಂದಿದ್ದ ಶ್ರೀ ಚನ್ನಬಸವ ದೇಶಿಕಮೂರ್ತಿಗಳನ್ನು ಆತನೊಡನೆ ಕಳಿಸಿಕೊಟ್ಟರು. ಈ ಚೆನ್ನಬಸವ ಮಹಾಸ್ವಾಮಿಗಳವರ ಸನ್ನಿಧಾನದಲ್ಲಿ ಶ್ರೀ ಗವಿಸಿದ್ಧಪ್ಪ ಶರಣರು ಗುರು–ಲಿಂಗ–ಜಂಗಮ ದಾಸೋಹ ನಡೆಸುತ್ತ ಬಂದರು.

ಕೊನೆ ಕೊನೆಗೆ ಶ್ರೀ ಗವಿಸಿದ್ಧಪ್ಪನವರಿಗೆ ತಮ್ಮ ಗುರುಗಳಾದ ಶ್ರೀ ಜಗದ್ಗುರು ತೋಂಟದ ಸದಾಶಿವ ಮಹಾಸ್ವಾಮಿಗಳವರನ್ನೇ ಕರೆದುಕೊಂಡು ಬರಬೇಕೆಂಬ ಉತ್ಕಟೇಚ್ಛೆಯುಂಟಾಗಿ ಡಂಬಳಕ್ಕೆ ಹೋಗಿ ಆ ಮೇರೆಗೆ ಪ್ರಾರ್ಥಿಸಿಕೊಂಡು ಅವರನ್ನೂ ತಮ್ಮೊಡನೆ ಕೊಪ್ಪಳಕ್ಕೆ ಕರೆತಂದರು. ನಂತರ ಶ್ರೀ ಜಗದ್ಗುರು ತೋಂಟದ ಸದಾಶಿವ ಮಹಾಸ್ವಾಮಿಗಳವರು ಭಕ್ತೋತ್ತಮನಾದ ಮಹಾಶಿವಶರಣ ಶ್ರೀ ಗವಿಸಿದ್ಧಪ್ಪನ ಭಕ್ತಿಯಲ್ಲಿಯೇ ಲಿಂಗಾನಂದದಿಂದ ನೆಲಸಿದರು.

ತಮ್ಮ ಭಕ್ತಿಯೋಗದಿಂದ ಶ್ರೀ ಗವಿಸಿದ್ಧಪ್ಪ ಶರಣರು ಅನಂತ ಮಹಿಮೆಗಳನ್ನು ಮಾಡುತ್ತ ಮತ ತತ್ತ್ವಗಳ ಸತ್ವವನ್ನು ಪ್ರಪಂಚಕ್ಕೆ ಬೀರಿ ಯೋಗ ಸಮಾಧಿಸ್ಥರಾದರು.

ಈ ಭಕ್ತ ವಿಯೋಗದಿಂದ ಪೂರ್ಣ ವೈರಾಗ್ಯ ತಳೆದ ಶ್ರೀ ಸದಾಶಿವಸ್ವಾಮಿಗಳವರು ''ಇನ್ನು ಕಲಿ ಪ್ರಾಬಲ್ಯವಾಗುವದರಿಂದ ಅಷ್ಟಾವರಣಗಳ ಮಹತ್ವ ಜನತೆಗೆ ಗೊತ್ತಾಗುವದಿಲ್ಲ, ಜಗತ್ತಿನ ನೈತಿಕ ಸ್ಥಿತಿಯೂ ಅಧೋಗತಿಗಿಳಿದು ಧರ್ಮಗ್ಲಾನಿಯಾಗು

ವದು'' ಎಂದು ಮುಂತಾಗಿ ಭವಿಷ್ಯ ನುಡಿದು ತಮ್ಮ ಉತ್ತರಾಧಿಕಾರವನ್ನು ತಮ್ಮ ಛಾಯಾನುವರ್ತಿಗಳಾದ ಶ್ರೀ ಮಹಾಂತ ದೇಶಿಕರಿಗೆ ಅನುಗ್ರಹಿಸಿ ಕೊಪ್ಪಳದಲ್ಲಿಯೇ ಶೂನ್ಯ ಸ್ಥಲವನ್ನು ಹೊಂದಿದರು. ಈಗಲೂ ಕೊಪ್ಪಳ ಗವಿಮಠದಲ್ಲಿ ಶಿವಶರಣ ಗವಿಸಿದ್ಧಪ್ಪನವರ ಗದ್ದುಗೆಗೆ ಹೋಗುವಾಗ ಮೊದಲು ಹತ್ತುವ ಗದ್ದುಗೆಯೇ ಜಗದ್ಗುರು ತೋಂಟದ ಸದಾಶಿವ ಸ್ವಾಮಿಗಳವರದು.

**ಶ್ರೀ ನಿರಂಜನ ಜಗದ್ಗುರು ತೋಂಟದ ಮಹಾಂತ ಸ್ವಾಮಿಗಳು :**

ನಿರಂಜನ ಜಗದ್ಗುರು ತೋಂಟದಾರ್ಯಪೀಠವನ್ನು ಹೊಂದಿದ ನಂತರ ಶ್ರೀ ಮಹಾಸ್ವಾಮಿಗಳವರು ಡಂಬಳ ರಥೋತ್ಸವಕ್ಕೆ ದಯಮಾಡಿಸಿ ಅಲ್ಲಿರುವ ವಿರತ ಮೂರ್ತಿಗಳಿಗೆ ಷಟ್‌ಸ್ಥಲೋಪದೇಶ ಪೂರ್ವಕ 'ಶಿವಾನುಭವ ಚರಾಧಿಕಾರ' ಅನುಗ್ರಹಿಸಿ ಮುಂದೆ ಲಿಂಗದಾಣತಿಯಂತೆ ಹಂಪಸಾಗರಕ್ಕೆ ದಯಮಾಡಿಸಿದರು.

ಪಾಲ್ಕುರಿಕೆಯ ಸೋಮನಾಥ್ಯರಂತೆ ಅರವತ್ತುನಾಲ್ಕು ಶೀಲಗಳನ್ನು ಆಚರಿಸುತ್ತಿರುವ ಶ್ರೀ ಮಹಾಂತ ಶಿವಯೋಗೀಶ್ವರರ ಪ್ರಭಾವದಿಂದ ಆಕರ್ಷಿತನಾದ ಹರಪನಹಳ್ಳಿಯ ದೊರೆ ಪುಟ್ಟರಸನು ಮಹಾಸ್ವಾಮಿಗಳವರ ದರ್ಶನಕ್ಕೆ ಆನೆ–ಕುದುರೆ ಮುಂತಾದ ವೈಭವದೊಡನೆ ಬಂದನು.

ಗುರುದರ್ಶನಕ್ಕೆ ಭಾಕ್ತಿಕ ಮನಸ್ಸು ಕಾರಣವಲ್ಲದೆ ರಾಜಸತ್ತೆಯಲ್ಲ. ಶ್ರೀಗಳವರ ಸೇವಕರು ಗುರುದರ್ಶನಕ್ಕೆ ಈಗ ಸಮಯವಿಲ್ಲೆಂದು ಹೇಳಿದರೂ ಅರಸು ಕೇಳಲಿಲ್ಲ. ಕೊನೆಗೆ ಅರಸನು ಮಠವನ್ನು ಪ್ರವೇಶಿಸದಂತೆ ಮಹಾದ್ವಾರವನ್ನು ಹಾಕಲಾಯಿತು. ಇದರಿಂದ ಅರಸನ ಈರ್ಷೆ ಇನ್ನೂ ಹೆಚ್ಚಾಗಿ ತನ್ನ ಆನೆ ಹಾಗೂ ಸೈನಿಕರ ಮೂಲಕ ಬಾಗಿಲ ಕೀಳಲು ಪ್ರಯತ್ನಿಸಿದನು.

**ಶ್ರೀ ಜಟ್ಟಿ ಪರ್ವತ ಮರಿದೇವರು :**

ಮಠದಲ್ಲಿ ನಡೆದ ಈ ಕೋಲಾಹಲ ಶಬ್ದವು ಮಠದ ಹತ್ತಿರ ಇರುವ ತುಂಗಭದ್ರಾ ನದಿಯಲ್ಲಿ ಶ್ರೀಗಳ ಬಟ್ಟೆ ಒಗೆಯಲಿಕ್ಕೆ ಹೋದ ಭೀಮನಿಗೆ ಸಮಾನ ಪರಾಕ್ರಮವುಳ್ಳ ಜಟ್ಟಿಪರ್ವತ ಮರಿದೇವರಿಗೆ ಕೇಳಿಸಿದ ಕೂಡಲೆ ಅವರು ಕೃದ್ಧರಾಗಿ ರೋಷಾವೇಶದಿಂದ ಮಠಕ್ಕೆ ಬಂದು ಆನೆಯಿಂದ ಆನೆ, ಕುದುರೆಯಿಂದ ಕುದುರೆ, ಮನುಷ್ಯರಿಂದ ಮನುಷ್ಯ ಹೀಗೆ ಹೊಡೆದು ಅರಸನ ಸೇನಾಬಲವನ್ನೆಲ್ಲ ನಾಶಗೊಳಿಸಲು ಅರಸನು ಪ್ರಾಣ ಭೀತಿಯಿಂದ ಪಲಾಯನ ಸೂತ್ರವನ್ನು ಪಠಿಸಿದನು.

ಮುಂದೆ ಅರಸನು ತನ್ನ ಊರಿಗೆ ಹೋದ ಮೇಲೆ ಅವನ ಅಂಗಾಂಗವೆಲ್ಲ ಉರಿಯ ಹತ್ತಿ ಕೇವಲ ಎಂಟುದಿನಗಳಲ್ಲಿ ಅಸುನೀಗಿದನು. ಅದರಂತೆ ಕೆಲವೇ ದಿನಗಳಲ್ಲಿ ಅವನ ವಂಶಸ್ಥರೆಲ್ಲ ಅಳಿದು ಹೋಗಿ ಅವನ ರಾಜ್ಯವೆಲ್ಲ ಬ್ರಿಟಿಷ್ ಸರಕಾರದಿಂದ ಖಾಲಸಾ ಆಗಿ ಹೋಯಿತು.

ಜಟ್ಟಿಪರ್ವತ ಮರಿದೇವರು ಶಿವನಿಗೆ ನಂದೀಶ್ವರನಿದ್ದಂತೆ ಮಹಾಸ್ವಾಮಿಯ ಸೇವೆ ಮಾಡುತ್ತಿದ್ದರು. ಪರಮ ಆಚಾರಸ್ಥರಾದ ಶ್ರೀ ಮಹಾಂತ ಶಿವಯೋಗಿಗಳು ಯಾವ ವಾಹನವನ್ನು ಏರದೆ ಶ್ರೀ ಜಟ್ಟಿ ಪರ್ವತ ಮರಿದೇವರ ಹೆಗಲಗದ್ದಿಗೆ ಏರಿಯೇ ನಿರ್ಧಿಷ್ಟ ಸ್ಥಳಕ್ಕೆ ಹೋಗುತ್ತಿದ್ದರು. ಒಮ್ಮೆ ಜಟ್ಟಿ ಪರ್ವತಮರಿದೇವರು ಗುರುಗಳು ತಮ್ಮ ಹೆಗಲಗದ್ದುಗೆಯ ಮೇಲೆ ಮೂರ್ತಗೊಳಿಸಿಕೊಂಡು ಹೊರಟಿದ್ದರು. ಆಗ ಬೆಳಗಿನ ಜಾವವಾಗಿರಬಹುದು. ಶ್ರೀ ಜಟ್ಟಿ ಪರ್ವತಮರಿದೇವರು ಒಂದು ಹಳ್ಳಿಗೆ ಬಂದು ತಲ್ಪಿದರು.

ಇವರನ್ನು ನೋಡಿದ ಹಳ್ಳಿಯವರು ಮಾರ್ಗದಲ್ಲಿ ಬಲಿಷ್ಠವಾದ ಕೋಣನ ಉಪದ್ರವವಿರುವದರಿಂದ ಹೋಗಕೂಡದೆಂದು ಬಹುವಾಗಿ ಬೇಡಿಕೊಂಡರು. ಆದರೂ ಮರಿದೇವರು ಅದನ್ನು ಲೆಕ್ಕಿಸದೆ ಗುರುಗಳೊಡನೆ ಮುಂದಕ್ಕೆ ಸಾಗಿದರು.

ಮರಿದೇವರು ಕೆಲ ದೂರ ಮಾರ್ಗಕ್ರಮಿಸುವಷ್ಟರಲ್ಲಿ ಕೋಣವು ಇವರನ್ನು ನೋಡಿ ಅಬ್ಬರಿಸುತ್ತ ಮೇಲೇರಿ ಬಂದಿತು. ಆಗ ಮರಿದೇವರು ಗುರುಗಳನ್ನು ತಮ್ಮ ಹೆಗಲಮೇಲಿಂದ ಒಂದು ಗಿಡದ ನೆರಳಲ್ಲಿ ಕೂಡ್ರಿಸಿ ಕೋಣದ ಎರಡೂ ಕೊಂಬುಗಳನ್ನು ಹಿಡಿದು ಗಿಮಿಗಿಮಿ ತಿರುಗಿಸಿ ಕೈಬಿಟ್ಟ ಕೂಡಲೆ ಕೋಣವು ರಕ್ತಕಾರಿ ಮೃತಪಟ್ಟಿತು.

ಮತ್ತೊಮ್ಮೆ ಕಾರ್ಯಾರ್ಥವಾಗಿ ಮರಿದೇವರು ಮೈಸೂರಿಗೆ ಹೋಗಿದ್ದರು. ಆಗ ಅಲ್ಲಿಯ ಅರಮನೆಯ ಪಹಿಲವಾನರು ಜರದ ಪೇಟಾಸುತ್ತಿಕೊಂಡು ಮಾರ್ಗದಲ್ಲಿ ಹೊರಟ್ಟಿದ್ದರು. ಅವರ ವೈಶಿಷ್ಟ್ಯವೆಂದರೆ ಅವರು ಸುತ್ತಿದ ಜರದ ಪೇಟಾ ನೆಲದ ಮೇಲೆ ಎಳೆಯುತ್ತಿತ್ತು, ಅದನ್ನು ಯಾವನಾದರೂ ತುಳಿದರೆ ಆ ಪಹಿಲನವಾನರಿಂದ ಪೇಟಾ ತುಳಿದವನ ಪ್ರಾಣವೇ ಉಳಿಯುತ್ತಿರಲಿಲ್ಲ, ಇಂಥ ನರಮೇಧ ಬಹುಕಾಲ ನಡದೇ ಇತ್ತು, ಯಾವದಕ್ಕಾದರೂ ಕೊನೆಯುಂಟಲ್ಲವೇ? ನಮ್ಮ ಜಟ್ಟಿ ಪರ್ವತದೇವರು ಮೈಸೂರು ಅದೇ ಮಾರ್ಗದಗುಂಟ ಸಾಗಿದಾಗ ಗದ್ದಲದಲ್ಲಿ ಒಬ್ಬ ಪ್ರಸಿದ್ಧ ಪಹಿಲವಾನನ ಪೇಟಾ ನೋಡದೇ ತುಳಿದೇ ಬಿಟ್ಟರು.

ಇದರಿಂದ ರೊಚ್ಚಿಗೆದ್ದು ಪಹಿಲವಾನರು ಮೈಸೂರ ಮಹಾರಾಜರ ಸಮ್ಮುಖಕ್ಕೆ ಜಟ್ಟಿಪರ್ವತ ಮರಿದೇವರನ್ನು ಕರೆದೊಯ್ದು ತಮ್ಮೊಡನೆ ಪ್ರಾಣಾಂತಿಕವಾದ ಮಲ್ಲಯುದ್ಧ ಮಾಡಲೇಬೇಕೆಂದು ಹಠಹಿಡಿದರು. ಸ್ವತಃ ಅರಸರು ಪಹಿಲವಾನರಿಗೆ ವಿರಕ್ತರೊಡನೆ ಹೀಗೆ ಸೆಣೆಸಾಟ ತರವಲ್ಲವೆಂದು ಬಹಳ ಹೇಳಿದರು. ನೋಡದೇ ತುಳಿದುದು ಅಪರಾಧವಲ್ಲವೆಂದೂ ತಿಳಿಸಿದರು. ಆದರೂ ಪಹಿಲವಾನರು ಕೇಳಲಿಲ್ಲ.

ಸರಿ. ಪಹಿಲವಾನರೊಡನೆ ಮರಿದೇವರ ಮಲ್ಲಯುದ್ಧ ನಿಶ್ಚಿತವಾಯಿತು. ಆದರೆ ಮಲ್ಲಯುದ್ಧದ ಕ್ರಮವು ಮರಿದೇವರಿಗೆ ಗೊತ್ತಿಲ್ಲದ ಮೇಲೆ ಮಲ್ಲಯುದ್ಧ ನಡೆಯುವದಾದರೂ ಹೇಗೆ ? ಎಂಬ ಪ್ರಶ್ನೆ ಬಂದಿತು. ಕೊನೆಗೆ ಮಲ್ಲಯುದ್ಧ ಮುಷ್ಠಿ

ಯುದ್ಧವಾಗಿ ಪರಿಣಮಿಸಿತು. ಈ ಮುಷ್ಠಿಯುದ್ಧದ ಕ್ರಮವೆಂತೆಂದರೆ : ಮರಿದೇವರಿಗೆ ಪಹಿಲವಾನ ಮೊದಲ ಮೂರು ಸಲ ಗುದ್ದಬೇಕು. ಆ ನಂತರ ಮರಿದೇವರು ಪಹಿಲವಾನನಿಗೆ ಮೂರು ಸಲ ಗುದ್ದಬೇಕು ಎಂದು ಅರಸನ ಸಮ್ಮುಖದಲ್ಲಿ ತೀರ್ಮಾನ ಆಯಿತು.

ಅದರಂತೆ ಪಹಿಲವಾನ ಮರಿದೇವರಿಗೆ ಮೂರು ಸಲ ಒಳ್ಳೇ ರಭಸದಿಂದ ಮುಷ್ಠಿ ಪ್ರಹಾರ ಮಾಡಿದ. ಮರಿದೇವರಿಗೆ ಇದರಿಂದ ಕ್ಷಣಾರ್ಧ ಕಣ್ಣಿಗೆ ಕತ್ತಲು ಗೂಡಿಸಿದಂತಾಯಿತು. ಆ ಮೇಲೆ ಮರಿದೇವರ ಸರತಿ ಬಂದಿತು. ತಲೆಯ ಮೇಲೆ ಪೇಟಾ ತೆಗೆದಿಟ್ಟು ಕೂತ ಪಹಿಲವಾನನ ಮಸ್ತಕಕ್ಕೆ ಮರಿದೇವರು ಒಂದು ಸಲ ಗುದ್ದಿದರು. ಪಹಿಲವಾನನ ಎರಡೂ ಕಣ್ಣುಗಳು ಸಿಡಿದು ಬಿದ್ದವು. ನಂತರ ಮತ್ತೊಂದು ಸಲ ಗುದ್ದಿದರು. ಶಿರಸ್ಸು ದೇಹದ ಒಳಗೆ ಸೇರಿತು. ಮೂರನೇ ಪ್ರಹಾರಕ್ಕೆ ಅವಕಾಶವೇ ದೊರೆಯದೆ ಪಹಿಲವಾನ ಅಸುನೀಗಿದ್ದ.

ಇದು ಕಠೋರವಾಗಿ ಆಚರಿಸಿದ ಬ್ರಹ್ಮಚರ್ಯದ ಫಲ. ಹಂಪಸಾಗರದ ಮಠದಲ್ಲಿಯ ಬೃಹತ್ ಪ್ರಮಾಣದ ಕಲ್ಲಿನ ಬಾನೆಗಳು ಹಾಗೂ ಶ್ರೀ ಅರ್ಧನಾರೀಶ್ವರರ ಗದ್ದುಗೆಯ ಮುಂಭಾಗದಲ್ಲಿರುವ ಶಿಲೆಯ ನಂದೀಸ್ತಂಭ ಮೊದಲಾದವುಗಳು ಜಟ್ಟಿಪರ್ವತ ಮರಿದೇವರ ಶಕ್ತಿಸಾಮರ್ಥ್ಯದ ಸಂಕೇತಗಳಾಗಿ ಇಂದಿಗೂ ಉಳಿದಿವೆ.

ಶ್ರೀ ಮಹಾಂತ ಶ್ರೀಗಳವರ ಕಾಲದಲ್ಲಿ ಬ್ರಿಟಿಷ್ ಅಧಿಪತ್ಯ ಪ್ರಾರಂಭವಾದ್ದರಿಂದ ಇನಾಮದಾರರೆಲ್ಲ ಹಾಜರ ಆಗಬೇಕೆಂದು ಮತ್ತೂರ ಮಂಡೆಪ್ಪನೆಂಬ ಮಠದ ಸದ್ಭಕ್ತನು ಶ್ರೀಗಳವರಲ್ಲಿ ನೋಟೀಸ ನೀಡಿದ ಪ್ರಕಾರ ಹಾಜರ್ ಆಗಲಿಲ್ಲ. ಹೀಗಾಗಿ ಶ್ರೀ ಜಗದ್ಗುರು ತೋಂಟದಾರ್ಯ ಶಾಖಾ ಮಠಗಳೆಲ್ಲ ಸ್ವತಂತ್ರ ಮಠಗಳಾಗಿ ಆಯಾ ಮಠದ ಭೂಮಿಗಳನ್ನು ಅವರೇ ಉಪಭೋಗ ಮಾಡಲಿಕ್ಕೆ ಹತ್ತಿದರು.

ಶ್ರೀ ಮಹಾಂತ ಜಗದ್ಗುರುಗಳವರಿಗೆ ತಾವು ಇಷ್ಟಲಿಂಗದಲ್ಲಿ ಬೆರೆಯುವ ಕಾಲ ಸಮೀಪಿಸಿತೆಂದು ತಿಳಿದು ಮಹಾ ಶಿವಶರಣರಾದ ಯಲಬುರ್ಗಿ ಶೆಟ್ಟರ ಶರಭಣ್ಣನವರಲ್ಲಿ ಶಿವಾನುಭವ ಹೇಳಿಸಿಕೊಳ್ಳಲು ಹೋಗಿದ್ದ ತೋಂಟದಾರ್ಯ ದೇಶಿಕ ಮೂರ್ತಿಗಳನ್ನು ಕರೆಯ ಕಳುಹಿದರು.

ಶ್ರೀ ಶರಭಣ್ಣನವರು ಎಂದಿನಂತೆ ತಮ್ಮ ಪಾಠ ಮುಗಿಸಿದ್ದರು. ಶಿವಾನುಭವ ಹೇಳಿಸಿಕೊಳ್ಳಲಿಕ್ಕೆ ಬಂದ ಗುರು–ಜಂಗಮ ಮೂರ್ತಿಗಳು ವಯೋವೃದ್ಧರಾದ ಶೆಟ್ಟರಲ್ಲಿಗೆ ಬಂದು ಪಾದಕೊಟ್ಟು ಹೋಗುವದು ಪದ್ಧತಿ. ಆ ಪ್ರಕಾರ ಎಲ್ಲರ ಸರತಿಯೂ ಮುಗಿದು ತೋಂಟದಾರ್ಯ ಪೀಠದ ದೇಶಿಕ ಮೂರ್ತಿಗಳು ಶರಣರೆದುರಿನಲ್ಲಿ ಹೋಗಿ ನಿಂತರು. ಆಗ ಶರಣರು ದೇಶಿಕರನ್ನು ಹಾಗೇ ನಿಲ್ಲಿಸಿ

ತಾವು ಭಕ್ತಿಯಿಂದ ಕೈಜೋಡಿಸಿ ಎದ್ದುನಿಂತು ''ಮೂರ್ತಿಗಳೇ ! ತಾವಿನ್ನು ಜಗದ್ಗುರುಗಳಾಗುವಿರಿ'' ಎಂದು ಹೇಳಿ ದೀರ್ಘದಂಡ ನಮಸ್ಕಾರ ಮಾಡಿದರು.

ಅಷ್ಟರಲ್ಲಿಯೇ ಹಂಪಸಾಗರದಿಂದ ಬಂದ ಒಬ್ಬ ಅಶ್ವಾರೋಹಿಯು ಜಗದ್ಗುರು ಮಹಾ ಸನ್ನಿಧಿಯಿಂದ ಬಂದ ನಿರೋಪವನ್ನು ಶರಣರ ಕೈಯಲ್ಲಿ ಕೊಟ್ಟು ಶ್ರೀ ದೇಶಿಕ ಮೂರ್ತಿಗಳನ್ನು ತನ್ನೊಡನೆ ಕರೆದುಕೊಂಡು ಹೋದನು. ದೇಶಿಕ ಮೂರ್ತಿಗಳು ಬರುತ್ತಲೇ ಅವರಿಗೆ ತಮ್ಮ ಚಿನ್ಹಗಳನ್ನೆಲ್ಲ ಕೊಟ್ಟು ಷಟ್‌ಸ್ಥಲವನ್ನುದ್ಧರಿಸೆಂದು ಅವರನ್ನು ತಮ್ಮ ಪೀಠದಲ್ಲಿ ಮೂರ್ತಗೊಳಿಸಿ ತಾವು ತಮ್ಮ ನಿಜೇಷ್ಟಲಿಂಗದಲ್ಲಿ ಬಯಲಾದರು.

### ಶ್ರೀ ನಿರಂಜನ ಜಗದ್ಗುರು ವೃದ್ಧ ತೋಂಟದಾರ್ಯರು :

ಹಂಪಸಾಗರದಲ್ಲಿ ನಿರಂಜನ ಪಟ್ಟಾಧಿಕಾರ ಸ್ವೀಕರಿಸಿದ ಶ್ರೀ ತೋಂಟದಾರ್ಯ ಮಹಾಸ್ವಾಮಿಗಳವರು ಭಕ್ತಾನುಗ್ರಹಕ್ಕಾಗಿ ಸಂಚಾರ ಕೈಕೊಂಡು ತಮ್ಮ ಮಠಗಳನ್ನೆಲ್ಲ ನೋಡುತ್ತ ಬರುತ್ತಿರಲಾಗಿ ಗದುಗು ಮನವನ್ನು ತುಂಬಾ ಆಕರ್ಷಿಸಿದ್ದರಿಂದ ಅವರು ಗದುಗಿನಲ್ಲಿಯೇ ನೆಲೆನಿಂತರು.

ತಮ್ಮ ಗುರುಗಳಾದ ಶ್ರೀ ಮಹಾಂತ ಸ್ವಾಮಿಗಳವರು ಪರಮ ವೈರಾಗ್ಯಶೀಲರಾಗಿ ಯಾವಾಗಲೂ ಪರಾಜಂಗಮ ಸ್ಥಿತಿಯಲ್ಲಿ ಇರುತ್ತಿದ್ದದರಿಂದ ಪೀಠದ ಶಾಖಾಮಠಗಳಲ್ಲಿದ್ದ ವಿರತರು ಸ್ವತಂತ್ರರಾಗಿ ವರ್ತಿಸುತ್ತಿದ್ದಾರೆಂಬುದನ್ನು ಹಿಂದೆ ಹೇಳಿದೆಯಷ್ಟೇ ! ಪ್ರಸ್ತುತ ಶ್ರೀಗಳವರು ಆ ಎಲ್ಲ ಶಾಖಾ ಮಠಗಳನ್ನು ತಮ್ಮ ವಶಕ್ಕೆ ಪುನಃ ತೆಗೆದುಕೊಳ್ಳುತ್ತ ಪೀಠದ ಕಾರ್ಯವ್ಯಾಪ್ತಿಯನ್ನು ವಿಸ್ತಾರಗೊಳಿಸಹತ್ತಿದರು.

ಇಂಥ ಶಾಖಾ ಮಠಗಳಲ್ಲಿಯ ಒಬ್ಬರಾದ ಪೀಠದ ಚರಮೂರ್ತಿ ಮೃಡಗಿರಿಯ ಹೊಸಮಠದ ಶ್ರೀ ಅನ್ನದಾನ ಸ್ವಾಮಿಗಳೊಡನೆ ಕೋರ್ಟಿನಲ್ಲಿ ವ್ಯಾಜ್ಯವೇ ಪ್ರಾರಂಭವಾಯಿತು.

ಒಂದು ದಿನ ಪ್ರಾತಃಕಾಲ ಸಮಯ. ಪೂಜ್ಯ ಶ್ರೀಗಳವರು ಮಠದ ಹೊರಗಿನ ತೇರು ಬೀದಿಯಲ್ಲಿ ವಾಯು ವಿಹಾರಾರ್ಥ ಸೇವಾದವರೊಡನೆ ಶತಪಥ ಹಾಕುತ್ತಿದ್ದರು. ಆಗ ಒಬ್ಬ ಅಶ್ವಾರೋಹಿಗಳಾದ ಜಂಗಮ ಮೂರ್ತಿಗಳು ತಮ್ಮ ಕುದುರೆಯಿಂದ ಇಳಿದು ಶ್ರೀಗಳವರಿಗೆ ದಂಡವತ್ ಪ್ರಣಾಮ ಮಾಡಿದರು.

ಆಗ ಶ್ರೀಗಳು ಅವರಿಗೆ ಜಯವಾಗಲಿ ಎಂದು ಹರಸಿದಾಗ ಪಕ್ಕದಲ್ಲಿದ್ದ ನೌಕರರು ಶ್ರೀಗಳವರಿಗೆ ''ನಮಸ್ಕರಿಸಿದವರು ತಮ್ಮೊಡನೆ ಕೋರ್ಟಿನಲ್ಲಿ ವ್ಯಾಜ್ಯಮಾಡುತ್ತಿರುವ ಸ್ವಾಮಿಗಳು'' ಎಂದು ಹೇಳಿದರು. ಅದಕ್ಕೆ ಶ್ರೀಗಳು ''ಅದು ಶಿವನ ಅಪ್ಪಣೆ, ಶಿವೇಚ್ಛೆಯೇ ಹಾಗಿರಬೇಕು'' ಎಂದು ಅಪ್ಪಣೆಕೊಟ್ಟರು. ಆ ಮೇರೆಗೆ

ನ್ಯಾಯಾಲಯದಲ್ಲಿ ನಡೆದ ಆ ವ್ಯಾಜ್ಯದಲ್ಲಿ ಕೋರ್ಟ ನಿರ್ಣಯ ಮುಂಡರಗಿ ಹೊಸ ಮಠದ ಚರಮೂರ್ತಿಗಳಂತೆಯೇ ಆಯಿತು.

ನಮಸ್ಕರಿಸಿದವರು ವಿರೋಧಿಗಳಾಗಿರಬಹುದು. ಆದರೆ ಅವರು ನಮಸ್ಕರಿಸುವಲ್ಲಿ ಶ್ರೀಗಳನ್ನು ಗುರುಭಾವದಲ್ಲಿಯೇ ಕಂಡದ್ದರಿಂದ ಶ್ರೀಗಳು ತಮ್ಮ ಗುರುತ್ವ ಕಾಪಾಡಿಕೊಳ್ಳುವದು ಆಗ ಅವರ ಕರ್ತವ್ಯವೇ ಆಗಿತ್ತು. ಧರ್ಮವೆಂದರೆ ಕರ್ತವ್ಯ ಕರ್ಮವೇ ಹೊರತು ಬೇರೆಯಲ್ಲ. ತಮಗೆ ಆನತರಾದವರನ್ನು ಶ್ರೀಗಳು ಪೂರ್ವಗ್ರಹ ದೂಷಿತರಾಗಿ ವೈರಭಾವದಿಂದ ಕಂಡಿದ್ದರೆ ಅವರಲ್ಲಿ ಗುರುತ್ವವೇ ಉಳಿಯುತ್ತಿರಲಿಲ್ಲ. ಗುರುವಿನಲ್ಲಿ ಮುಖ್ಯವಾಗಿ ಇರಬೇಕಾದವುಗಳು ಭಕ್ತಿ–ಜ್ಞಾನ–ವೈರಾಗ್ಯಗಳೇ ಹೊರತು ರಾಗ–ದ್ವೇಷ–ಅಸೂಯೆಗಳಲ್ಲ.

ಜೀವನದಲ್ಲಿ ಬರುವ ಇಂಥ ಮಹತ್ವದ ಘಟನೆಗಳೇ ''ಮಹಾ ಪುರುಷ'' ಸ್ಥಿತಿಗೆ ಮುಟ್ಟಿಸುವ ಸಾಧನಗಳಾಗಿರುತ್ತವೆ. ಇಂಥವರೇ ಚಾರಿತ್ರಿಕ ಪುರುಷರು. ಮಾನ್ವಿಯವರು ಪೀಠದ ಪರಮಭಕ್ತರು. ಆದರೆ ಅವರಿಗೆ ಬಹುದಿನಗಳವರೆಗೆ ಗಂಡು ಸಂತಾನವೇ ಆಗಲಿಲ್ಲ. ಒಮ್ಮೆ ಅವರು ದರ್ಶನಕ್ಕೆ ಬಂದಾಗ ಶ್ರೀಗಳು ಅವರಿಗೆ ತಮ್ಮ ಕೈಯಲ್ಲಿಯ ದಂಡವನ್ನೇ ಆಶೀರ್ವದಿಸಿ ಅದನ್ನು ನಿತ್ಯವೂ ಪೂಜಿಸಲು ತಿಳಿಸಿದರು ಮುಂದೆ ಆ ಮನೆತನಕ್ಕೆ ಗಂಡು ಸಂತಾನವಾದ ಕೂಡಲೆ ಅದಕ್ಕೆ 'ದಂಡಪ್ಪ' ಎಂಬ ನಾಮಕರಣವಾಯಿತು.

ಮಠದ ಎದುರಿಗೆ ಇರುವದೇ ಶಹಪೂರಪೇಟೆ ಅಲ್ಲಿಯ ಒಬ್ಬ ಹೆಣ್ಣುಮಗಳು ಮಠಕ್ಕೆ ಸಿಹಿನೀರಿಗಾಗಿ ಬಂದಿದ್ದಳು. ಈಕೆ ಶ್ರೀಗಳವರ ಕಣ್ಣಿಗೆ ಬಿದ್ದ ಕೂಡಲೆ ಶ್ರೀಗಳು ಪಕ್ಕದಲ್ಲಿದ್ದವರಿಗೆ ''ಈ ಹೆಣ್ಣು ಮಗಳ ಮುಖದ ಮೇಲೆ ಅದೇಕೋ ವೈಧವ್ಯ ಲಕ್ಷಣ ಉಂಟಾಗಿದೆ'' ಎಂದು ಅಪ್ಪಣೆ ಕೊಡಿಸಿದರು. ಬಳಿಯಿದ್ದವರಿಗೆ ಆಶ್ಚರ್ಯ ಹಾಗಿದ್ದರೆ ಈಕೆ ನೀರಿಗೇಕೆ ಬರುತ್ತಿದ್ದಳು ಎಂದು ಸಂದೇಹ. ಸರಿ ! ಆ ಹೆಣ್ಣು ಮಗಳು ನೀರುಕೊಂಡು ಹಿಂದಿರುಗುವಾಗ ಒಬ್ಬರು ಆಕೆಯ ಹಿಂದೆಯೇ ಮನೆಗೆ ಹೋದರು. ಆಗ ಮನೆಯಲ್ಲಿ ಎಲ್ಲರೂ ವಿದ್ರಾವಕವಾಗಿ ಅಳುವ ಧ್ವನಿ ಕೇಳಿಸಿತು.

ಹೆಣ್ಣು ಮಗಳು ಹಾಗೂ ಆಕೆಯ ಹಿಂಬಾಲಕಿ ಮನೆಗೆ ಹೋದಾಗ ಆಕೆಯ ಗಂಡನ ತಲೆಗೆ ಬಾಗಿಲ ಬಡಿದುದರ ಪರಿಣಾಮವಾಗಿ ಅವನು ತಕ್ಷಣ ಮೃತನಾದ ನೆಂದು ತಿಳಿಯಿತು. ಇದರಿಂದ ಶ್ರೀಗಳವರ ತ್ರಿಕಾಲ ಜ್ಞಾನಶಕ್ತಿ ಭಕ್ತರಿಗೆಲ್ಲ ವಿದಿತವಾಗಿ ಅವರು ಶ್ರೀಗಳವರೊಡನೆ ತುಂಬಾ ಭಯ–ಭಕ್ತಿಯಿಂದ ನಡೆದುಕೊಳ್ಳಹತ್ತಿದರು.

ಹುಯಿಲಗೋಳದ ಶಾನಭೋಗರು ಗದುಗಿನ ಕೋಟಿ ವೀರಪ್ಪನವರ ಪರಮ ಸ್ನೇಹಿತರು. ಅವರಿಗೂ ಹಾಗೂ ಹುಯಿಲಗೋಳದ ಗೌಡರಿಗೂ ಚೆನ್ನಾಗಿರಲಿಲ್ಲ. ಗೌಡರಿಗೆ ಏನಾದರೊಂದು ಅಪಾಯ ತಟ್ಟುವಂತೆ ಒಂದು ಉಪಾಯ ಮಾಡಬೇಕೆಂದು ಯೋಚಿಸಿ ನೇರವಾಗಿ ಗದುಗಿಗೆ ಬಂದು ಕೋಟಿವೀರಪ್ಪನವರನ್ನು

ಕಂಡು ಶ್ರೀ ಜಗದ್ಗುರುಗಳವರ ಪಾಲ್ಕಿ ಉತ್ಸವವನ್ನು ಹುಯಿಲಗೋಳದಲ್ಲಿ ಏರ್ಪಡಿಸಿದರು.

ಪಾಲ್ಕಿ ಉತ್ಸವ ಯಥಾಪ್ರಕಾರ ಸಾಗಿರುವಾಗ ಒಂದು ಸಗಣಿಯ ಉಂಡೆ ಪಾಲ್ಕಿ ಮಧ್ಯದಲ್ಲಿ ಹಾಯ್ದು ಹೋಯಿತು. ಆಗ ಶಾನಭೋಗರು ಪಾಲ್ಕಿಯ ಪಕ್ಕದಲ್ಲಿಯೇ ಇದ್ದುದರಿಂದ ಅವರು ಶ್ರೀಗಳಿಗೆ ''ಮಹಾಸ್ವಾಮಿ ಯಾರೋ ದುರಾತ್ಮರು ಪಾಲ್ಕಿಗೆ ಸಗಣಿ ಒಗಿಸಿ ತಮಗೆ ಅಪಚಾರವೆಸಗಿದರು. ಬಹುಶಃ ಗೌಡರದೇ ಇರಬೇಕು'' ಎಂದು ಹೇಳಿದರು. ಶ್ರೀ ಜಗದ್ಗುರುಗಳು ಶಾನಭೋಗರಿಗೆ ''ಹಾಗೆ ಅಕೃತ್ಯ ಮಾಡಿದವನ ಕೈಗೆ ಹುಳ ಬೀಳುವದು'' ಎಂದು ಅಪ್ಪಣೆ ಕೊಡಿಸಿದರು.

ಈ ರೀತಿ ಉತ್ಸವ ಮುಗಿದು ಶ್ರೀಗಳು ಗದುಗಿಗೆ ಹಿಂದಿರುಗಿದರು. ಮುಂದೆ ನಾಲ್ಕೇ ದಿನಗಳಲ್ಲಿ ಹುಯಿಲಗೋಳ ಶಾನಭೋಗರು ಕೋಟಿ ವೀರಪ್ಪನವರೊಡನೆ ಶ್ರೀಗಳವರ ದರ್ಶನಕ್ಕೆಂದು ಮಠಕ್ಕೆ ಬಂದರು. ಆಗ ಕೈಗೆ ಅರಿವಿ ಸುತ್ತಲಾಗಿತ್ತು. ಮುಖ ಚಿಕ್ಕದು ಮಾಡಿಕೊಂಡು ನಿಂತಿದ್ದ ಶಾನಭೋಗರ ಪರವಾಗಿ ಕೋಟಿ ವೀರಪ್ಪನವರೇ ಶ್ರೀಗಳಲ್ಲಿ ಶಾನಭೋಗರಿಗೂ ಗೌಡರಿಗೂ ವೈಮನಸ್ಸು ತಮ್ಮ ಶಾಪದಿಂದ ನಾಶವಾಗಲಿಯೆಂದು ತಿಳಿದು ಸಗಣಿಯನ್ನು ಪಾಲ್ಕಿಗೆ ಒಗೆಸಿ ಇದು ಗೌಡರ ಕಾರ್ಯವೆಂದು ತಮ್ಮೆದುರು ಹೇಳಿದರು. ಆದರೆ ಸತ್ಯ ಮುಚ್ಚಲಿಕ್ಕಾಗುವದಿಲ್ಲ. ಈಗ ಈ ಶಾನಭೋಗರ ಕೈಗೆ ಹುಳ ಬಿದ್ದಿವೆ. ಅವರನ್ನು ಕ್ಷಮಿಸಿ ಕೃಪೆತೋರಬೇಕು'' ಎಂದು ಅತಿ ವಿನಯದಿಂದ ಬಿನ್ನವಿಸಿಕೊಂಡರು.

ಶ್ರೀಗಳು ವೀರಪ್ಪನವರಿಗೆ ''ಪಾಲ್ಕಿಯಲ್ಲಿದ್ದ ತೋಂಟದಾರ್ಯನೇ ಬೇರೇ ನಾನೇ ಬೇರೆ. ನನಗೆ ಈ ಶಾನುಭೋಗರ ವಿಷಯದಲ್ಲಿ ಸಹಾನುಭೂತಿಯಿದೆ. ಆದರೆ ತೋಂಟದಾರ್ಯನೇ ಅವರಿಗೆ ಕೃಪೆ ತೋರಬೇಕು ಎಂದು ಹೇಳಿ ಕಳಿಸಿಕೊಟ್ಟರು. ನಿರುಪಾಯರಾದ ಶಾನಭೋಗರು ಪರಿತಪಿಸುತ್ತ ಊರಿಗೆ ಹಿಂದಿರುಗಿದರು. ನ್ಯಾಯಕ್ಕೆ ಪಕ್ಷಪಾತವಿಲ್ಲ. ಅಪರಾಧ ಅದು ಎಲ್ಲಿದ್ದರೂ ಅಪರಾಧವೆ. ಕರ್ಮಭೋಗ ಯಾರಿಗೂ ತಪ್ಪಿದ್ದಲ್ಲ. ಸತ್ಕರ್ಮವಿದ್ದರೆ ಸತ್ಫಲ. ದುಷ್ಕರ್ಮವಿದ್ದರೆ ದುಷ್ಫಲ. ಇದು ತ್ರಿಕಾಲಾಬಾಧಿತ ಸತ್ಯ ಇದನ್ನು ಶ್ರೀಗಳವರು ತಮ್ಮ ಸ್ವಂತ ಆಚರಣೆಯಿಂದಲೂ ತೋರಿಸಿ ಕೊಟ್ಟರು.

ಮಠದ ಅಭಿಮಾನಿ ಭಕ್ತರಾದ ಕೋಟಿ ವೀರಪ್ಪನವರು ಎಷ್ಟೇ ಹೇಳಿದರೂ ಶ್ರೀಗಳು ದಾಕ್ಷಿಣ್ಯಕ್ಕೆ ಕಟ್ಟು ಬೀಳಲಿಲ್ಲ. ಇಷ್ಟೇ ಅಲ್ಲ. ''ಪಾಲ್ಕಿಯಲ್ಲಿದ್ದು ಉತ್ಸವ ಮಾಡಿಸಿಕೊಂಡ ತೋಂಟದಾರ್ಯನೇ ಬೇರೆ'' ಎಂದು ಹೇಳಿದ ಶ್ರೀಗಳವರ ಮಾತು ತುಂಬಾ ಗಮನಾರ್ಹವಾಗಿದೆ. ತಾವು ''ಕೇವಲ ತೋಂಟದಾರ್ಯನ ಪ್ರತೀಕ ಮಾತ್ರ. ಆಗುಹೋಗುಗಳೆಲ್ಲ ಅವನವೇ'' ಎನ್ನುವ ಶ್ರೀಗಳವರ ಮನೋಭಾವನೆ

ಭಗವದ್ಗೀತೆಯ ನಿಷ್ಕಾಮ ಕರ್ಮಯೋಗವನ್ನೇ ದೃಢಪಡಿಸುತ್ತದೆ. ಹೇಳಿ ಉತ್ಸವ ಮಾಡಿಸಿಕೊಳ್ಳುವ ಉತ್ಸವ ಪ್ರಿಯ ಗುರು – ಜಂಗಮ ಮೂರ್ತಿಗಳು ಇದರಿಂದ ಪಾಠ ಕಲಿತಲ್ಲಿ ಅವರಿಗೂ ಸಮಾಜಕ್ಕೂ ಕೂಡಿಯೇ ಕಲ್ಯಾಣವಾಗುವದರಲ್ಲಿ ಸಂದೇಹವಿಲ್ಲ.

ಪ್ರತಿದಿನವೂ ಸಾಯಂಕಾಲದಲ್ಲಿ ಮಠಕ್ಕೆ ಬರುವದು ಕೋಟಿ ವೀರಪ್ಪನವರಿಗೊಂದು ರೂಢಿ. ಒಂದು ದಿನ ಶ್ರೀ ವೀರಪ್ಪನವರು ಬಂದಿರಲಿಲ್ಲ. ಇದರಿಂದ ಶ್ರೀಗಳವರಿಗೆ ತುಂಬಾ ಕಳವಳ. ಇದೇ ಗುರು–ಜಂಗಮರ ಮುಖ್ಯ ಲಕ್ಷಣ. ಇವರಿಗೆ ಭಕ್ತ ಬಂಧುತ್ವವಿರಬೇಕೇ ಹೊರತು ರಕ್ತಬಂಧುತ್ವವಿರಕೂಡದು. ಶ್ರೀಗಳು ವೀರಪ್ಪನವರನ್ನು ಕರೆತರಲು ಮಠದಿಂದ ಒಬ್ಬರನ್ನು ಕಳಿಸಿಕೊಟ್ಟರು.

ಮಠದ ಮರಿದೇವರು ಕೋಟಿಯವರ ಮನೆಗೆ ಹೋದಾಗ ಮನೆಯವರೆಲ್ಲ ಬಹಳ ಚಿಂತಾಕ್ರಾಂತರಾಗಿ ಕುಳಿತ್ತಿದ್ದರು. ವಿಷಯವೇನೆಂದು ಅಲ್ಲಿದ್ದವರಿಗೆ ಮರಿದೇವರು ಕೇಳಿದಾಗ ಅವರು "ವೀರಪ್ಪನವರ ತಾಯಿ ತೋಟಮ್ಮ ಲಿಂಗೈಕ್ಯಳಾಗುವ ಸ್ಥಿತಿಯಲ್ಲಿದ್ದಾಳೆ" ಎಂದು ಹೇಳಿದರು. ಆಗ ಮರಿದೇವರು ಅಲ್ಲಿ ಹೆಚ್ಚು ಕಾಲ ನಿಲ್ಲದೆ ಮಠಕ್ಕೆ ಬಂದು ಶ್ರೀಗಳವರಿಗೆ ಇದ್ದ ಸಂಗತಿಯನ್ನೆಲ್ಲ ನಿವೇದಿಸಿದರು.

ಶ್ರೀಗಳು ಪುನಃ ಅದೇ ಮರಿಯನ್ನು ಕೋಟಿಯವರ ಮನೆಗೆ ಕಳಿಸಿ ವೀರಪ್ಪನವರಿಗೆ ಬರಹೇಳಿದರು. ವೀರಪ್ಪನವರು ಶ್ರೀಗಳವರ ನಿರೋಪ ಕೇಳಿದ ಕೂಡಲೆ ಮರಣೋನ್ಮುಖಳಾದ ತಾಯಿಯನ್ನು ಬಿಟ್ಟು ಹಾಗೇ ನೇರವಾಗಿ ಬಂದು ಗುರುಗಳ ದರ್ಶನ ತೆಗೆದುಕೊಂಡರು.

ವೀರಪ್ಪನವರ ಗುರುಭಕ್ತಿಯನ್ನು ನೋಡಿ ಶ್ರೀಗಳವರಿಗೆ ತುಂಬಾ ಸಂತೋಷವಾಯಿತು. "ಚಿಂತೆ ಮಾಡಬೇಡ ವೀರಪ್ಪ, ನಿನ್ನ ತಾಯಿ ನಾವು ಶಿವಾಧೀನರಾದ ಎರಡು ವರ್ಷಗಳ ಮೇಲೆ ಶಿವನಲ್ಲಿ ಐಕ್ಯಳಾಗುವಳು" ಎಂದು ಅಪ್ಪಣೆ ಕೊಟ್ಟರು. ಅದರಂತೆ ತೋಟಮ್ಮನವರು ಶ್ರೀಗಳವರು ಗತಿಸಿದ ಮೇಲೆ ಲಿಂಗೈಕ್ಯಳಾದಳು.

ಹೀಗೆ ಗುರು–ಭಕ್ತ ಬಾಂಧವ್ಯದ ಮಧುರ ಸಂಬಂಧವನ್ನು ಹುಲುಸಾಗಿ ಬೆಳೆಸಿದ ಶ್ರೀಗಳು ಬಹುಕಾಲ ಬಾಳಿ ಮುಪ್ಪಿನ ತೋಂಟದಾರ್ಯರೆಂದೇ ಪ್ರತೀತರಾದರು.

ತಮ್ಮ ತರುವಾಯದ ಪೀಠವನ್ನು ಶ್ರೀ ಮೃತ್ಯುಂಜಯಸ್ವಾಮಿಗಳಿಗೆ ನೀಡಿದ ನಂತರ ಭಕ್ತರನ್ನೆಲ್ಲ ಕರಿಸಿ "ನೀವೆಲ್ಲ ಹೆರವರ ಮಕ್ಕಳಾಗಬಾರದು. ಗುರುವಿನ ಮಕ್ಕಳಾಗಬೇಕು" ಎಂದು ಕಟ್ಟಪ್ಪಣೆ ಮಾಡಿ ಪರಾತ್ಪರ ಸ್ವರೂಪವನ್ನು ಹೊಂದಿದರು. ಆಗ ಅವರ ಪ್ರಾಣವಾಯು ಬ್ರಹ್ಮರಂಧ್ರದಿಂದ ಉತ್ಕ್ರಮಣವಾಯಿತು.

**ಶ್ರೀ ನಿರಂಜನ ಜಗದ್ಗುರು ಸಿದ್ಧೇಶ್ವರ ಮಹಾಸ್ವಾಮಿಗಳವರು :**

ನಿರಂಜನ ಜಗದ್ಗುರು ಪೀಠವನ್ನಲಂಕರಿಸಿದ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳ ವರು ಶ್ರೀ ಸಿದ್ಧಲಿಂಗೇಶನ ತರುವಾಯದಲ್ಲಿ ಬಂದ ಹದಿನಾರನೆಯವರು. ಇಲ್ಲಿಗೆ ಈ ಶಿವಯೋಗಿ ಚಂದ್ರಮನ ಷೋಡಶಕಲೆಗಳು ಕೂಡಿ ಬಂದವೋ ಏನೋ ಅನ್ನುವಂತೆ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳವರ ಕಾಲದಲ್ಲಿ ಪೀಠದ ಕೀರ್ತಿ ದಶ ದಿಕ್ಕುಗಳನ್ನು ಬೆಳಗಿತು.

ಶ್ರೀಗಳ ಕಾಲದಲ್ಲಿ ಅಷ್ಟೈಶ್ವರ್ಯಗಳು ಕೈಜೋಡಿಸಿಕೊಂಡು ನಿಂತಿದ್ದವೆಂಬಂತೆ ಆನೆ, ಕುದುರೆ, ಒಂಟೆ, ನಗಾರಿ, ನೌಬತ್ತು, ಪಾಲ್ಕಿ, ಮೇಣೆ ಮೂರು ಕುದುರೆ, ರಥ ಮೊದಲಾದವುಗಳೆಲ್ಲ ಗೌರವದ ಸಂಕೇತವಾಗಿ ಮೆರೆಯುತ್ತಿದ್ದವು.

ಅದರಂತೆ ಆನೆಯ ಅಂಬಾರಿ ಸಿಂಹಾಸನ ಮೊದಲಾದ ಬೆಳ್ಳಿಯ ಸಾಮಾನುಗಳು ಅವುಗೆ, ಕಿರೀಟ, ಪಾದ, ಲೆಂಡೆ, ಗೊಂಡೆ, ರಾಜಗೊಂಡೆ, ಪಂಚಕಲಶ, ಬೆತ್ತ ಮುಂತಾದ ಬಂಗಾರದ ವಸ್ತುಗಳು ಐಶ್ವರ್ಯದ ಪ್ರತೀಕಗಳಾಗಿ ಒಪ್ಪುತ್ತಿದ್ದವು. ಹನ್ನೊಂದು ಜನ ಶಿವಾನುಭವ ಚರಮೂರ್ತಿಗಳು ಅನೇಕ ಮರಿದೇವರೊಡನೆ ಏಕಾದಶ ರುದ್ರನಂತೆ ಶ್ರೀ ಜಗದ್ಗುರು ಸನ್ನಿಧಾನದಲ್ಲಿ ವಿರಾಜಿಸುತ್ತಿದ್ದರು.

ಸಮಾಜದ ಅನೇಕ ಪ್ರತಿಷ್ಠಿತ ಮಠಗಳಲ್ಲಿದ್ದುಕೊಂಡು ಪ್ರಕಾಶಕ್ಕೆ ಬಂದ ಬಹುತೇಕ ಸ್ವಾಮಿಗಳು ಶ್ರೀ ಜಗದ್ಗುರು ತೋಂಟದಾರ್ಯ ಮಠದಲ್ಲಿದ್ದು ಹೋದವರೇ ಎನ್ನುವದು ಅಭಿಮಾನದ ಸಂಗತಿ. ಸಂಸ್ಕೃತ ಪಂಡಿತರ ಅಗತ್ಯ ಸಮಾಜಕ್ಕೆ ತುಂಬಾ ಇದ್ದುದರಿಂದ ಶ್ರೀ ಜಗದ್ಗುರು ಮಹಾಸನ್ನಿಧಿಯ ಹತ್ತು ಸಹಸ್ರ ರೂಪಾಯಿಗಳನ್ನು ಲಿಂಗಾಯತ ಎಜ್ಯುಕೇಶನ್ ಅಸೋಯೇಶನ್ ಸಂಸ್ಥೆಗೆ ದಯಪಾಲಿಸಿ ಅಲ್ಲಿ ವ್ಯಾಜದಲ್ಲಿ ಸಂಸ್ಕೃತ ಪಾಠಶಾಲೆ ನಡೆಯುವಂತೆ ಏರ್ಪಡಿಸಿದರು.

ಈ ಪಾಠಶಾಲೆಯಲ್ಲಿ ಕ್ರಮವಾಗಿ ಪಂಡಿತ ವಂಶದವರಾದ ಕರವೀರಶಾಸ್ತ್ರಿಗಳು, ನೀಲಕಂಠಶಾಸ್ತ್ರಿಗಳು ಮತ್ತು ಒಕ್ಕಟಪ್ಪ ಶಾಸ್ತ್ರಿಗಳು, ದಡ್ಡಿ ಶಾಸ್ತ್ರಿಗಳು, ಚಂದ್ರಶೇಖರ ಶಾಸ್ತ್ರಿಗಳು, ರೇವಣಸಿದ್ಧಶಾಸ್ತ್ರಿಗಳು ಮತ್ತು ಕಲಿಗಣನಾಥಶಾಸ್ತ್ರಿಗಳು ಪ್ರಾಧ್ಯಾಪಕರಿದ್ದದ್ದರಿಂದ ಘನ ಬುಭುತ್ಸಗಳಾದ ಅನೇಕ ವಿದ್ಯಾರ್ಥಿಗಳನ್ನು ಅದು ತನ್ನೆಡೆಗೆ ಸೆಳೆದು ನಾಡಿನಾದ್ಯಂತ ಪ್ರಖ್ಯಾತವಾಯಿತು.

ಅದೇ ಮೇರೆಗೆ ಸಾಹಿತ್ಯಕ್ಕೆ ಪೋಷಕ ಸಂಗೀತ, ಕಲಾಭಿವೃದ್ಧಿಗೋಸ್ಕರ ಆಗಿನ ಕಾಲದ ಹೆಚ್ಚು ಪ್ರಚಾರದಲ್ಲಿ ದಕ್ಷಿಣಾದಿ ಸಂಗೀತದಲ್ಲಿ ತುಂಬಾ ಪರಿಣಿತವಾದ ಶ್ರೀ ಕರಿಬಸವ ಗವಾಯಿಗಳವರ ಮತ್ತು ಸಂಗೀತ ಶಾಲೆಯೂ ಶ್ರೀ ಮಠದಲ್ಲಿ ಸ್ಥಾಪಿಸಿ ಪ್ರಾಂರಭಿಸಲ್ಪಟ್ಟಿದ್ದರಿಂದ ಗದಗ ಸಂಸ್ಥಾನಮಠ ಸಂಗೀತ ಸಾಹಿತ್ಯಗಳ ಸಂಗಮ ಕ್ಷೇತ್ರವೆನಿಸಿತು.

ಹೀಗೆ ವಿದ್ವಜ್ಜನರಿಗೆ ಆಶ್ರಯದಾತರಾದ ಸಿದ್ಧೇಶ್ವರ ಸ್ವಾಮಿಗಳವರು ಸಮಸ್ತ ವೈಭವ ನಿರಂಜನ ಜಗದ್ಗುರು ಪೀಠದ ಪ್ರತಿಷ್ಠೆಯನ್ನು ಪ್ರತಿಪಾದಿಸುತ್ತಿದ್ದರೂ ಜಲಪತ್ರದ ಪದ್ಮದಂತೆ ನಿರ್ಲಿಪ್ತವಾದರು. ಅವರದು ತ್ಯಾಗಪೂರ್ವಕವಾದ ಭೋಗವಾದ್ದರಿಂದ ಅವರ ಜೀವನವೇ ಒಂದು ಮಹಾಯೋಗವಾಗಿತ್ತು.

ಶ್ರೀ ಜಗದ್ಗುರುಗಳವರು ಐದು–ಆರು ಘಂಟೆಗಳ ಕಾಲ ಜರುಗುವ ಪಾಲ್ಕಿ ಉತ್ಸವ ಹಾಗೂ ಸಭೆಗಳಲ್ಲಿ ಶಿಲಾ ಪ್ರತಿಮೆಯಂತೆ ನಿಶ್ಚಲರಾಗಿ ಕುಳಿತು ಬಿಡುತ್ತಿದ್ದರು. ಯೋಗಶಾಸ್ತ್ರದ ಮೇರೆಗೆ ಇದು ಮನಸ್ಸಿನ ಏಕಾಗ್ರತೆಯ ಲಕ್ಷಣ. ದೀರ್ಘಕಾಲದವರೆಗೂ ತುಂಬು ಬಾಳನ್ನು ಬಾಳಿದ ಶ್ರೀ ಜಗದ್ಗುರುಗಳವರು ಎಂದೂ ರೇಗಿ ಮಾತನಾಡಿದವರಲ್ಲ. ಅಥವಾ ಗಹಗಹಿಸಿ ನಕ್ಕವರಲ್ಲ. ನಿಸ್ತ ಸಮುದ್ರದಂತೆ ನಿರ್ವಿಕಾರ ಚಿತ್ತ ಶ್ರೀಗಳವರದು. ರಾಗ–ದ್ವೇಷಗಳನ್ನೇ ಅರಿಯದ ಶ್ರೀಗಳು ಎಲ್ಲರನ್ನು ಸಮಾನ ದೃಷ್ಟಿಯಲ್ಲಿ ಕಾಣುತ್ತಿದ್ದರು. ಆದರೂ ಜಗದ್ಗುರುಗಳವರ ಸಮ್ಮುಖದಲ್ಲಿ ಎಂಥ ಪ್ರತಿಷ್ಠಿತರೂ ನಿಂತು ಮಾತನಾಡುತ್ತಿರಲಿಲ್ಲ. ಅಂಥಹ ಮೇರು ಗಂಭೀರ ವ್ಯಕ್ತಿತ್ವ ಶ್ರೀಗಳವರದು.

ನೋಡಲು ಅಜಾನುಬಾಹು ವ್ಯಕ್ತಿತ್ವ ಹೊಂದಿದ ಅವರದು ಹಸುಮಗುವಿನಂತಹ ಹೃದಯ, ಕರುಣೆ ಹೊರಸೂಸುವ ಆ ತೇಜಃಪುಂಜ ಕಣ್ಣುಗಳು, ಕಾರ್ಯಕ್ಕೆ ಸಾಕ್ಷಿಯಂತಿದ್ದ ಸುವರ್ಣಮಯ ದೇಹ ಎಂಥವರನ್ನೂ ಅವರ ಸನ್ನಿಧಾನದಲ್ಲಿ ನತಮಸ್ತಕರನ್ನಾಗಿ ಮಾಡುತ್ತಿದ್ದವು.

ಇಪ್ಪತ್ತನೇ ಶತಮಾನದಲ್ಲಿ ಮಠೋದ್ಧಾರ ಕರೆನಿಸಿದ ಶ್ರೀ ಹಾನಗಲ್ಲ ಕುಮಾರ ಮಹಾ ಸ್ವಾಮಿಗಳ ಅವರ ಆ ಕಾರ್ಯಕ್ಕೆ ತಮ್ಮ ತಪಸ್ಸನ್ನೇ ಧಾರೆ ಎರೆದ ಅವರ ಸಹವರ್ತಿಗಳಾದ ಶ್ರೀ ಹಾವೇರಿ ಶಿವಯೋಗಿ ಮಹಾಸ್ವಾಮಿಗಳವರು ಶ್ರೀ ಜಗದ್ಗುರು ಸನ್ನಿಧಾನಕ್ಕೆ ಮೇಲಿಂದ ಮೇಲೆ ಒಂದು ಶಿಷ್ಯಭಾವದಲ್ಲಿ ಬರುತ್ತಿದ್ದರು. ಭವಾದಿಗಳನ್ನಲ್ಲಗಳೆದು ವೈರಾಗ್ಯ ಸಾಧಿಸುವದು, ಆದರೆ ವೈಭವದಲ್ಲಿದ್ದೂ ವಿರತ ಸಾರ್ವಭೌಮತ್ವದ ಹೆಗ್ಗಳಿಕೆ ಶ್ರೀ ಸಿದ್ಧೇಶ್ವರಸ್ವಾಮಿಗಳವರದು.

ಶ್ರೀ ಸಿದ್ಧಲಿಂಗೇಶ ತನ್ನ ಅನುಚರರೊಡನೆ ಸಂಚರಿಸಿದಂತೆ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳವರು ತಮ್ಮ ಯಾವತ್ತೂ ಪರಿವಾರ ಹಾಗೂ ನೂರಾರು ಭಕ್ತರ ಸಮೂಹದೊಡನೆ ಶ್ರೀ ಹಾನಗಲ್ಲ ಶ್ರೀಗಳವರ ಸಂಚಾಲಕತ್ವದಲ್ಲಿ ದಯಮಾಡಿಸಿದ್ದರು. ಶಿವಯೋಗ ಮಂದಿರದ ಸಾಧಕರು, ವಟುಗಳೂ ಸಹ ಅವರೊಡನೆ ಬಂದಿದ್ದರು. ಮುಂದೆ ಈ ಯಾತ್ರಿಕರ ಸಂಖ್ಯೆ ಶ್ರೀ ಎಡೆಯೂರ ಕ್ಷೇತ್ರ ತಲ್ಪುವದರೊಳಗಾಗಿ ಸಹಸ್ರಾರು ಸಂಖ್ಯೆಗೇರಿತು.

ಹೀಗೆ ತಮ್ಮ ಪೀಠದ ಸರ್ವಾಂಗೀಣ ಉನ್ನತಿಯನ್ನು ಗೈದ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳವರು ತಮ್ಮ ತರುವಾಯದ ಪೀಠವನ್ನು ಇಟಗಿಯ ಶ್ರೀ ಗುರುಬಸವ ದೇಶಿಕ ಮೂರ್ತಿಗಳಿಗಿತ್ತು ಲಿಂಗಾಂಗ ಸಾಮರಸ್ಯವನ್ನು ಹೊಂದಿದರು.

**ಶ್ರೀ ನಿರಂಜನ ಜಗದ್ಗುರು ತೋಂಟದ ಗುರುಬಸವ ಮಹಾಸ್ವಾಮಿಗಳವರು :**

ಹದಿನೇಳನೇ ಪೀಠವನ್ನು ಆರೋಹಿಸಿದ ಶ್ರೀ ಗುರುಬಸವ ಮಹಾಸ್ವಾಮಿಗಳು ನುರಿತ ಶಿವಾನುಭವಿಗಳು. ನಿರಾಡಂಬರ ಜೀವಿಗಳು. ''ಕಾಯಕವೇ ಕೈಲಾಸ'' ಎಂಬ ತತ್ತ್ವವನ್ನು ಸ್ವತಃ ತಮ್ಮ ಜೀವನದಲ್ಲಿ ಆಚರಿಸಿ ತೋರಿಸಿದರು. ಗದುಗಿನಲ್ಲಿ ಶ್ರೀ ಜಗದ್ಗುರು ತೋಂಟದಾರ್ಯ ಸಾಯಿನ್ಸ್ ಮತ್ತು ಆರ್ಟ್ಸ್ ಕಾಲೇಜ ಶ್ರೀಗಳವರ ಔದಾರ್ಯದಿಂದಲೇ ನಿರ್ಮಾಣವಾಯಿತು. ಮೂಲ ಕರ್ತೃಗಳ ಪುರಾಣವಾದ ಶ್ರೀ ''ಸಿದ್ಧೇಶ್ವರ ಪುರಾಣ'' ಮುದ್ರಣವಾಯಿತಲ್ಲದೆ ಶ್ರೀ ಮಠದ ಶ್ರೀ ಅರ್ಧನಾರೀಶ್ವರ ಪುರಾಣವು ಪಂ. ವೈ. ನಾಗೇಶ ಶಾಸ್ತ್ರಿಗಳವರು ಬಳ್ಳಾರಿ ಅವರಿಂದ ರಚಿಸಲ್ಪಟ್ಟಿತು. ತಮ್ಮ ತರುವಾಯದ ಅಧಿಕಾರವನ್ನು ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಅನುಗ್ರಹಿಸಿದ ಶ್ರೀಗಳು ಗದುಗಿನ ತಮ್ಮ ಮಠದಲ್ಲಿ ಲಿಂಗೈಕ್ಯರಾದರು.

**ಶ್ರೀ ನಿರಂಜನ ಜಗದ್ಗುರು ಶಿವಕುಮಾರ ಮಹಾಸ್ವಾಮಿಗಳವರು :**

ಪೀಠ ಪರಂಪರೆಯಲ್ಲಿ ಹದಿನೆಂಟನೆಯವರಾದ ಶ್ರೀ ಶಿವಕುಮಾರಸ್ವಾಮಿಗಳವರು ಕಾಶಿಯಲ್ಲಿ ಉಚ್ಚ ಶಿಕ್ಷಣ ಪಡೆದ ಸಂಸ್ಕೃತ ಪಂಡಿತರು. ಸ್ವಪ್ನದಲ್ಲಿ ಶ್ರೀ ಸಿದ್ಧಲಿಂಗೇಶ್ವರನ ಆಶೀರ್ವಾದ ನಂತರ ವಿರಕ್ತಾಶ್ರಮ ಪಡೆದ ಶ್ರೀ ಜಗದ್ಗುರುಗಳವರು ತಮ್ಮ ಪೀಠದ ಚಾರಿತ್ರಿಕ ಗ್ರಂಥವಾದ ಶ್ರೀ ಅರ್ಧನಾರೀಶ್ವರ ಪುರಾಣವನ್ನು ಮುದ್ರಣಗೊಳಿಸಿದರು.

ವೀರಶೈವ ಪ್ರಗತಿಶೀಲ ಯುವಕ ಸಂಘಕ್ಕೆ ''ಶ್ರೀ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗ ಕಲ್ಯಾಣ ಮಂಟಪ'' ಕಟ್ಟಲಿಕ್ಕೆ ಲಕ್ಷಾಂತರ ಬೆಲೆಬಾಳುವ ಜಾಗವನ್ನು ದಾನಮಾಡಿದ ಜಗದ್ಗುರುಗಳವರಿಂದ ಇನ್ನೂ ಸಮಾಜ ಸೇವೆ ಅಪೇಕ್ಷಣೀಯವಾಗಿದೆ.

■■

*

# ಬಾಚಿಗೊಂಡನಹಳ್ಳಿಯ ಕೌದಿ ಮಹಾಂತಸ್ವಾಮಿಗಳ ಮಠ ಸ್ಥಾಪನೆಯಾದ ಹಿನ್ನೆಲೆ*

'ಹಗರಿ' ಉತ್ತರ ವಾಹಿನಿಯಾಗಿ ಪ್ರವಹಿಸುವ ಒಂದು ವಿಶಾಲವಾದ ಹಳ್ಳ. ವರ್ಷಾಋತುವಿನಲ್ಲಂತೂ ಅದು ನದಿಯೋಪಾದಿಯಲ್ಲಿ ಹರಿಯುತ್ತದೆ. ಹಳ್ಳದ ರೇವೆಮಣ್ಣಿನಿಂದ ಫಲವತ್ತಾದ ಅದರ ಎರಡೂ ದಂಡೆಗಳು ಹಸಿರು ಮುರಿಯುವ ತೋಟ-ಪಟ್ಟಿಗಳಿಂದ ನಯನ ಮನೋಹರವಾಗಿ ಕಂಗೊಳಿಸುತ್ತಿವೆ. ಈ ಬನಗಳಲ್ಲಿರುವ ತರುಲತಾದಿಗಳು ತಮ್ಮಲ್ಲಿಗೆ ಬರುವ ಪಕ್ಷಿ ಸಂಕುಲದ ಕಿಲಿಕಿಲಿ ನಿನಾದದಿಂದ ಸಂತುಷ್ಟಗೊಂಡು ತಲೆಯನ್ನು ತೂಗಿಸುತ್ತಿರುವಂತೆ ಗಾಳಿಗೆ ತೊನೆದಾಡುತ್ತವೆ. ಹಳ್ಳದ ದಕ್ಷಿಣ ಭಾಗಕ್ಕೆ ಕೆಲವು ಅಂತರದಲ್ಲಿ ಒಂದು ಕಲ್ಲಿನ ಝುರಿ. ಅದು ಎರಡೂ ದಂಡೆಗಳನ್ನು ಕೂಡಿಸುವ ಸೇತುವೆಯಂತೆ ಕಾಣುತ್ತದೆ. ಮೇಲಿನಿಂದ ಹರಿದು ಬಂದ ನೀರು ಅಲ್ಲಿ ತಡೆದು ನಿಂತು ನಾಲ್ಕೈದು ಅಡಿಗಳ ಎತ್ತರದಿಂದ ಕೆಳಗೆ ಧುಮುಕಿ ಒಂದು ಪುಟ್ಟ ಜಲಪಾತವನ್ನೇ ನಿರ್ಮಿಸಿದೆ. ಇದರಿಂದ ಹೊರಡುವ ನಾದ ತರಂಗ ಪ್ರಣವ ಘೋಷವನ್ನೇ ಹೋಲುತ್ತಿದ್ದು, ಅದು ಪ್ರಾಪಂಚಿಕ ಸದ್ದು-ಗದ್ದಲಗಳನ್ನೆಲ್ಲ ಕೊಚ್ಚಿ ಹಾಕಿ ಕೇಳುಗರ ಸಂತಪ್ತ ಮನಸ್ಸಿಗೆ ಸಂತೃಪ್ತಿಯನ್ನು ತಂದು ಕೊಡುತ್ತಿದೆ. ಇಂಥ ಪ್ರಶಾಂತ ವಾತಾವರಣವನ್ನೇ ಯೋಗಿಗಳು ಅರಿಸಿಕೊಂಡು ಬರುವುದುಂಟು. ಅಂತೆಯೇ ಹಗರಿಯ ಎರಡೂ ದಂಡೆಗಳಲ್ಲಿ ಒಂದೊಂದು ವಿರಕ್ತಮಠಗಳು ತಲೆಯೆತ್ತಿ ನಿಂತಿವೆ.

ಪಶ್ಚಿಮ ದಂಡೆಯ ವಿರಕ್ತಮಠ ಹಳ್ಳಕ್ಕೆ ಅನತಿ ದೂರದಲ್ಲಿದ್ದು, ಹಚ್ಚ ಹಸಿರಾದ ಬನಸಿರಿಯಿಂದ ಸುತ್ತುವರಿದಿದೆ. ಅದರ ಪಕ್ಕದಲ್ಲಿ ಇರುವುದೇ 'ತಂಬ್ರಳ್ಳಿ'. ಅದು ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಳ್ಳಿ ತಾಲೂಕಿಗೆ ಸೇರಿದ ಒಂದು ಚಿಕ್ಕ ಗ್ರಾಮ. ಅದರಂತೆ ಪೂರ್ವದಂಡೆಯ ವಿರಕ್ತಮಠಕ್ಕೆ ಸ್ವಲ್ಪು ದೂರದಲ್ಲಿ ಇನ್ನೊಂದು ಗ್ರಾಮ 'ಬಾಚಿಗೊಂಡನಹಳ್ಳಿ'. ಇದು ಹೀಗೆ ಹಳ್ಳಕ್ಕೆ ದೂರವಿರಲು ಒಂದು ಕಾರಣವಿದೆ.

ತಂಬ್ರಳ್ಳಿ ಹತ್ತಿರ ಹರಿದು ಮುಂದೆ ಸಾಗಿದ ಹಗರಿಹಳ್ಳ ಕೆಲವು ಅಂತರ ಕ್ರಮಿಸಿದ ನಂತರ ಅದು ಪೂರ್ವಾಭಿಮುಖವಾಗಿ ಬಲಕ್ಕೆ ತಿರುಗುತ್ತದೆ. ಹೀಗೆ ಹಳ್ಳ ತನ್ನ ಗಡಿಯನ್ನು ಬದಲಿಸಿದಾಗ ಹಳ್ಳದ ನೀರು ಪಕ್ಕದ ಭೂಮಿಯಲ್ಲಿ ನುಗ್ಗುವದು ಸ್ವಾಭಾವಿಕ. ಇದರಿಂದ ಭೀತರಾದ ಜನರು ತಮ್ಮ ಗ್ರಾಮವನ್ನು ಹಳ್ಳದಿಂದ ಕೆಲಮಟ್ಟಿಗೆ ದೂರದಲ್ಲಿ ಕಟ್ಟಿಕೊಳ್ಳುವುದು ಅವರಿಗೆ ಅನಿವಾರ್ಯವಾಯಿತು.

---

* ಅಪ್ರಕಟಿತ ಲೇಖನ

ಹೀಗೆ ಊರು ಹಾಗೂ ಹಳ್ಳ ಇವುಗಳ ಮಧ್ಯದಲ್ಲಿಯ ಭೂಮಿ ಸಾಗುವಳಿ ಇಲ್ಲದೆ ಅಲ್ಲಿ ಗಿಡಗಂಟೆಗಳು ವಿಪುಲವಾಗಿ ಬೆಳೆದು, ಅದೊಂದು ಚಿಕ್ಕ ಕಾನನವೇ ಆಗಿ ಪರಿಣಮಿಸಿತು. ಇಂಥ ನಿರ್ಜನ ಪ್ರದೇಶದ ಮಧ್ಯದಲ್ಲಿ ಶಿಲಾನಿರ್ಮಿತವಾದ ಒಂದು ಪ್ರಶಾಂತವಾದ ಮಠ ತನ್ನ ಗತಕಾಲದ ಇತಿಹಾಸಕ್ಕೆ ಮೂಕಸಾಕ್ಷಿಯಾಗಿ ತಲೆಯೆತ್ತಿ ನಿಂತಿದೆ.

ಈ ಮಠ ನಿರ್ಮಾಣವಾಗುವ ಪೂರ್ವದಲ್ಲಿ ಇಲ್ಲಿ ಒಂದು ಗುಡಿಸಲನ್ನು ಕಟ್ಟಿ ಅದರಲ್ಲಿ ಒಬ್ಬ ಕುಷ್ಠರೋಗಿಯನ್ನು ಇಡಲಾಗಿತ್ತು. ಊಟದ ಸಮಯದಲ್ಲಿ ಮಾತ್ರ ಅವನ ಮನೆಯವರೊಬ್ಬರು ಸರತಿಯಂತೆ ಬಂದು ಅವನಿಗೆ ಆಹಾರವನ್ನು ಕೊಟ್ಟು ಹೋಗುತ್ತಿದ್ದರು. ಇನ್ನುಳಿದ ಸಮಯದಲ್ಲಿ ಅವನದು ಸಾಂಸರ್ಗಿಕರೋಗವೆಂಬ ಭಯದಿಂದ ಅಲ್ಲಿಗೆ ಒಬ್ಬರೂ ಬರುತ್ತಿರಲಿಲ್ಲ.

ಒಂದು ಪ್ರಾತಃಕಾಲ ಸಮಯ ಮೂಡಣ ದಿಕ್ಕಿನಲ್ಲಿ ಉದಯರವಿ ತನ್ನ ಹೊಂಬಣ್ಣದ ಕಿರಣಗಳನ್ನು ಪಸರಿಸುತ್ತ ಮೇಲೆಕ್ಕೇರಿ ಬರುತ್ತಿದ್ದಾನೆ. ಹಗರಿ ಹಳ್ಳದ ಮೇಲಿಂದ ಬೀಸುವ ಪಡುವಣ ದಿಕ್ಕಿನ ತಂಗಾಳಿ ಪ್ರಾಣಿಮಾತ್ರರನ್ನೆಲ್ಲ ಉಲ್ಲಸಿತರನ್ನಾಗಿ ಮಾಡುತ್ತಿದೆ. ಅಡವಿಯಲ್ಲಿ ಅಲೆಯುವ ಪಕ್ಷಿಗಳ ಉಲಿವು, ಜುಳು–ಜುಳು ಹರಿಯುವ ಹಳ್ಳದ ಮಧುರ ಧ್ವನಿಯೊಡನೆ ಮೇಳೈಸಿ ನಿಸರ್ಗದೇವತೆಯ ಮಂಜುಳಗಾನದಂತೆ ಕೇಳಿ ಬರುತ್ತಿದೆ.

ಆದರೆ ಆ ಗುಡಿಸಲಿನಲ್ಲಿ ಕುಷ್ಠರೋಗಿಗೆ ಇದಾವುದರ ಪರವೆಯೂ ಇಲ್ಲ. ಅವನ ಪಾಲಿಗೆ ಜಗತ್ತೇ ಶೂನ್ಯವಾಗಿದೆ. ಏಕೆಂದರೆ ದೇಹಧರಿಸಿ ಬಂದ ಪ್ರತಿ ಜೀವಿಗಳಿಗೆ ಇಹದಲ್ಲಿ ಸುಖ ಪರದಲ್ಲಿಯ ಗತಿಗೆ ದೇಹವೇ ಮೂಲ ಕಾರಣವಾಗಿದ್ದರಿಂದ, ಈಗ ಅದು ರೋಗಗ್ರಸ್ತವಾದ ಬಳಿಕ ಜೀವಿಗಳ ಪಾಲಿಗೆ ಜಗತ್ತೇ ಶೂನ್ಯವಾಗುವುದು ಸ್ವಾಭಾವಿಕ.

ಒಂದು ಘಳಿಗೆ ಹೊತ್ತು ಏರಿರಬಹುದು. ಕುಷ್ಠರೋಗಿ ಚಿಂತಾಕ್ರಾಂತನಾಗಿ ತನ್ನ ಗುಡಿಸಲಿನ ಒಳಗೆ ಕುಳಿತಿದ್ದಾನೆ. ಆಗ ಇದ್ದಕ್ಕಿದ್ದಂತೆ ಗುಡಿಸಲಿನಲ್ಲಿ ಯಾರದೋ ನೆರಳು ಬಿದ್ದಂತಾಯಿತು. ಕುಷ್ಠರೋಗಿಗೆ ತುಂಬಾ ಆಶ್ಚರ್ಯ. ಏಕೆಂದರೆ ಅವನಿಗೆ ಅವನ ಮನೆಯವರು ಆಹಾರ ತಂದುಕೊಡುವ ಸಮಯ ಹೊರತುಪಡಿಸಿ ಅವನಲ್ಲಿಗೆ ಯಾವ ಮಾನವ ಪಿಳ್ಳೆಯೂ ಬರುತ್ತಿರಲಿಲ್ಲ. ಇದರಿಂದ ಚಕಿತನಾದ ಕುಷ್ಠರೋಗಿ ಗುಡಿಸಲಿನಿಂದ ಹೊರಗೆ ಬಂದು ನೋಡಿದಾಗ ಕಾಷಾಯವಸ್ತ್ರ ಪರಿಧಾನಮಾಡಿದ ಒಬ್ಬ ಜಟಾಧಾರಿಗಳು ತಮ್ಮ ಪಾದಗಳಲ್ಲಿ ಆವುಗಳನ್ನು ಮೆಟ್ಟಿ, ಆಳೆತ್ತರದ ನಾಗಬೆತ್ತವನ್ನು ಕೈಯ್ಯಲ್ಲಿ ಹಿಡಿದು ತನ್ನ ಗುಡಿಸಲಿನ ಮುಂದೆಯೇ ಹಾಯ್ದು ಹೋಗುತ್ತಿರುವದು ಕಂಡಿತು.

ಇದರಿಂದ ಭಕ್ತಿಪುಲಕಿತನಾದ ಅವನು ಅವರ ಬೆನ್ನ ಹಿಂದೆಯೇ ಹೋದ. ಯಾರೋ ತಮ್ಮ ಬೆನ್ನ ಹಿಂದೆ ಬರುತ್ತಿರುವರೆಂದು ತಿಳಿದ ಆ ಜಟಾಧಾರಿಗಳು ಹೊರಳಿ ನೋಡಿದಾಗ ಅವರ ತೇಜೋಮಯ ಮುಖಮಂಡಲ ಅವನಿಗೆ ದೃಗ್ಗೋಚರವಾಯಿತು. ಹಣೆಯಲ್ಲಿ ಭಸ್ಮ, ತ್ರಿಪುಂಡ್ರ. ಕೊರಳಲ್ಲಿ ರುದ್ರಾಕ್ಷಿಮಾಲೆ ಇವುಗಳನ್ನು ನೋಡುತ್ತಲೇ ಅವರು ಅವನಿಗೆ ಅಪರ ಪರಶಿವನಾಗಿ ತೋರಿದರು. ಅವರನ್ನು ಕಾಣುತ್ತಲೇ ಯಕ್ಷ್ಮರೋಗಿ ದೀರ್ಘದಂಡ ಪ್ರಣಾಮಮಾಡಿ ಭಕ್ತ್ಯಾದಿಶಯದಿಂದ ನಡಗುತ್ತ ಎದ್ದುನಿಂತ. ಅವನ ಕಣ್ಣುಗಳಿಂದ ಆನಂದಭಾಷ್ಪಗಳು ಧಾರಾಕಾರವಾಗಿ ಉದುರುತ್ತಿದ್ದವು.

ಯೋಗಿಗಳು ಯಕ್ಷ್ಮರೋಗಿಯನ್ನು ಉದ್ದೇಶಿಸಿ ''ಯಾರು ನೀನು ? ಈ ಕಾಡಿನಲ್ಲಿರುವೆ'' ಎಂದು ಕೇಳಿದರು. ಅವರ ಗಂಭೀರ ಧ್ವನಿಯನ್ನು ಆಲಿಸಿದ ಅವನ ಮುಖದಿಂದ ಮಾತುಗಳೇ ಹೊರಡಲಿಲ್ಲ. ಆದರೂ ಅವನು ಸಾವರಿಸಿಕೊಂಡು ತಡವರಿಸುತ್ತ ಅವರಿಗೆ ''ಪೂಜ್ಯರೇ ! ನಾನೊಬ್ಬ ನತದೃಷ್ಟ ಕುಷ್ಠರೋಗಿ. ಇಲ್ಲಿಗೆ ಸಮೀಪದಲ್ಲಿರುವ ಬಾಚೆಗೊಂಡನ ಹಳ್ಳಿಯೇ ನನ್ನ ಊರು. ನನ್ನದು ಸಾಂಸರ್ಗಿಕ ರೋಗವೆಂದು ತಿಳಿದು, ಅಲ್ಲಿಯ ಗ್ರಾಮಸ್ಥರು ನನ್ನನ್ನು ಇಲ್ಲಿ ಗುಡಿಸಲು ಹಾಕಿ ಇಟ್ಟರು. ಊಟದ ಸಮಯಕ್ಕೆ ನಮ್ಮ ಮನೆಯವರಲ್ಲಿ ಒಬ್ಬರು ಬಂದು ನನಗೆ ಊಟಕ್ಕೆ ಕೊಟ್ಟು ಹೋಗುತ್ತಾರೆ. ನನಗೆ ಜೀವನವೇ ಬೇಸರಾಗಿದೆ. ಊರವರೂ ಮನೆಯವರೂ ನನ್ನಿಂದ ದೂರವಾದಂತೆ ಮರಣವೂ ನನ್ನಿಂದ ದೂರೇ ಉಳಿದಿದೆ. ಇಂದಿಗೆ ನನ್ನ ಕಾರ್ಯಕ್ಷಯವಾಗಿರಬೇಕು. ಅಂತೆಯೇ ನನಗೆ ತಮ್ಮ ದರ್ಶನವಾಗಿ ಮನಸ್ಸಿಗೆ ನೆಮ್ಮದಿಯುಂಟಾಗಿದೆ'' ಎಂದು ಹೇಳಿ ಮತ್ತೆ ನೆಲಕ್ಕೆ ಮೈಯಿಕ್ಕಿ ಕೈಜೋಡಿಸಿ ಎದ್ದು ನಿಂತ.

ಅವನ ದಯನೀಯ ಸ್ಥಿತಿಯನ್ನು ನೋಡಿ ಆ ಯೋಗಿಗಳಿಗೆ ಕರುಣಾರಸ ಉಕ್ಕೇರಿ ಅವನಿಗೆ ''ನಿನಗೇನೋ ಕುಷ್ಠರೋಗವಿದೆಯೆಂದು ಹೇಳುತ್ತಿರುವೆ. ಆದರೆ ಆ ರೋಗದ ಲಕ್ಷಣಗಳೇ ನಿನ್ನಲ್ಲಿ ಕಾಣುತ್ತಿಲ್ಲವಲ್ಲ'' ಎಂದು ಪ್ರಶ್ನಿಸಿದರು. ಆಗ ಆ ಕುಷ್ಠರೋಗಿ ತನ್ನ ದೇಹವನ್ನು ನೋಡಿಕೊಂಡ. ಏನಾಶ್ಚರ್ಯ ! ಅವನ ಕುಷ್ಠರೋಗ ಸಂಪೂರ್ಣ ಮಾಯವಾಗಿ ಅವನ ಶರೀರ ಮೊದಲಿನಂತೆ ಕಾಂತಿಯುಕ್ತವಾಗಿತ್ತು. ಇದರಿಂದ ಹರ್ಷ ಪುಳಕಿತನಾದ ಅವನು ಗದ್ಗದಿತ ಕಂಠದಿಂದ ಯೋಗಿಗಳನ್ನು ಕುರಿತು ''ಪೂಜ್ಯರೇ, ಇದು ನನಗೆ ಪುನರ್ಜನ್ಮ. ಇನ್ನು ಮುಂದೆ ನಾನು ತಮ್ಮ ದಾಸ. ದಯವಿಟ್ಟು ತಾವು ನನ್ನನ್ನು ಕೈಬಿಡದೇ ಕಾಪಾಡಬೇಕು'' ಎಂದು ಅಂಗಲಾಚಿ ಬೇಡಿಕೊಂಡ.

ಆಗ ಆ ಮಹಾತ್ಮರು ಅವನಿಗೆ ''ಪರಮಾತ್ಮನ ದಯೆಯಿಂದ ನೀನು ಪುನಃ ಆರೋಗ್ಯಭಾಗ್ಯವನ್ನು ಪಡೆದಿರುವೆ. ನೀನಿನ್ನು ನಿನ್ನ ಊರಿಗೆ ಹೋಗಿ ನಿನ್ನ ಮಡದಿ ಮಕ್ಕಳೊಡನೆ ಸುಖವಾಗಿ ಬಾಳು'' ಎಂದು ಅವನಿಗೆ ಹರಿಸಿ

ಹೊರಡಲುದ್ಯುಕ್ತರಾದರು. ಆಗ ಅವನು ಅವರನ್ನು ತಡೆದು "ಇನ್ನೆಲ್ಲಿ ನನಗೆ ಹೆಂಡರು ಮಕ್ಕಳು ಗುರುದೇವ! ಯಾರ ಸುಖಕ್ಕಾಗಿ ನಾನು ಮಾಡಬಾರದ ಅಕೃತ್ಯಗಳನ್ನು ಮಾಡಿ ಪಾಪಭಾಜನನಾದೆನೊ! ಅದರ ಫಲವಾಗಿ ಬಂದ, ಇಂಥ ದಾರುಣರೋಗವನ್ನು ನಾನೊಬ್ಬನೇ ಅನುಭವಿಸಬೇಕಾಯಿತಲ್ಲದೇ ಇದರಲ್ಲಿ ಯಾರೂ ಪಾಲುಗಾರರಾಗಲಿಲ್ಲ. ಇಷ್ಟೇ ಅಲ್ಲ, ಇದೀಗ ತಾವು ನೋಡುತ್ತಿರುವಂತೆ ಅದೇ ಹೆಂಡರು ಮಕ್ಕಳು ನನ್ನನ್ನು ಅಹನಿರ್ದಯದಿಂದ ಅಡವಿಗಟ್ಟಿದರು. ಯಾರಿಗೆ ಯಾರು? ಜಗತ್ತೇ ಸ್ವಾರ್ಥಮಯವಾಗಿದೆ. ಈವರೆಗೂ ಅವರು ನನ್ನವರೆಂದು ನಾನು ಭಾವಿಸಿದ್ದೇ ಶುದ್ಧ ಭ್ರಮೆ. ತಿಳಿದು ನೋಡಿದಲ್ಲಿ ಸಂಸಾರವೇ ಭ್ರಮಾತ್ಮಕವಾಗಿದೆ. ನನಗಿನ್ನು ಈ ಕುಟಿಲ ಪ್ರಪಂಚದಗೊಡವೆ ಸಾಕು. ತಾವೇ ನನ್ನ ಆಪ್ತ ಬಂಧುಗಳು. ದಯವಿಟ್ಟು ತಾವು ನನ್ನನ್ನು ಆ ಹಾಳು ಸಂಸಾರದ ದರಿಗೆ ನೂಕದೆ ತಮ್ಮ ಪಾದಸೇವೆಯನ್ನು ಕರುಣಿಸಿ ಕೈಹಿಡಿದು ಕಾಪಾಡಬೇಕು" ಎಂದು ಅತಿದೈನ್ಯದಿಂದ ಬೇಡಿಕೊಂಡ.

ಆಗ ಆ ಮಹಾತ್ಮರು ಮಮತೆಯಿಂದ ಅವನನ್ನು ಸಂತೈಸುತ್ತ ಅವನಿಗೆ "ಭಕ್ತೋತ್ತಮ! ಇದೀಗ ನಿನ್ನ ಒಳಗಣ್ಣ ತೆರೆ. ಹೀಗಾಗಲೆಂದೇ ಪರಶಿವನು ತನ್ನ ಭಕ್ತರಿಗೆ ಪರೀಕ್ಷಾರ್ಥವಾಗಿ ನಾನಾ ರೀತಿಯ ಕಷ್ಟಗಳನ್ನು ತಂದೊಡ್ಡುವನು. ಅಂತೂ ಆ ಪರಮಾತ್ಮನ ದಯೆಯಿಂದ ಈಗ ನಿನ್ನಲ್ಲಿ ವಿವೇಕೋದಯವಾಗಿದೆ. ನಮ್ಮಂಥ ಜಂಗಮ ಮೂರ್ತಿಗಳ ಸಂಚಾರವಾದರೂ ಶಿವಪ್ರೇರಣೆಯಿಂದ ನಿಮ್ಮಂಥವರಿಗಾಗಿಯೇ ಇರುತ್ತದೆ. ಭಕ್ತನು ಶಿವಾನುಗ್ರಹದಿಂದ ಯಾವದನ್ನು ಪಡೆಯಬೇಕಾಗಿದೆಯೋ ಅದನ್ನು ನೀನು ಈಗಾಗಲೇ ಪಡೆದಿರುವೆ. ಇದನ್ನೇ ನೀನು ಕೊನೆಯವರೆಗೂ ಘಟಕದಲ್ಲಿಟ್ಟುಕೊಂಡು ಸಂಸಾರಸ್ಥನಾದರೆ ನಿನಗದರಬಾಧೆಯಿಲ್ಲ. ಕೈಹಿಡಿದ ಮಡದೀ ಮಕ್ಕಳನ್ನು ಬಿಡುವುದು ಧರ್ಮವಲ್ಲ. ಆದರೆ ಅವರ ರಕ್ಷಣೆಯ ವಿಚಾರದಲ್ಲಿ ನಿನಗೆ ಕರ್ತವ್ಯಪ್ರಜ್ಞೆ ಇರಬೇಕಲ್ಲದೆ ವ್ಯಾಮೋಹವಿರಕೂಡದು. ಹೀಗೆ ವ್ಯಾಮೋಹ ನೀಗಿಕೊಂಡವನೇ ಜೀವನ್ಮುಕ್ತ. ನೀನಿನ್ನು ಹೊರಡು ನಿನ್ನ ಪಾಲಿನ ಕರ್ತವ್ಯ ಮಾಡು". ಎಂದು ಅಪ್ಪಣೆ ಕೊಟ್ಟು, ಪುನಃ ಹೊರಟು ನಿಂತಾಗ ಆ ಭಕ್ತನು ಮತ್ತೆ ಅವರಿಗೆ ಅಡ್ಡ ಬಂದು "ಪರಮಗುರುವೇ! ತಮ್ಮನ್ನು ಅಗಲಿ ಈ ಜಗತ್ತಿನಲ್ಲಿ ನಾನಿನ್ನು ಜೀವಿಸಲಾರೆ. ನನ್ನನ್ನು ಹಾಗೂ ನನ್ನಂತೆ ಇರುವ ಹತಭಾಗ್ಯರಾದ ಇನ್ನುಳಿದ ಇಲ್ಲಿಯ ಭಕ್ತರನ್ನು ಉದ್ಧರಿಸಲು ತಾವಿಲ್ಲಿ ನೆಲೆಸಬೇಕು. ಇಲ್ಲವೆ ತಮ್ಮೊಡನೆ ತಮ್ಮ ಸೇವಾರ್ಥವಾಗಿ ನನ್ನನ್ನು ಕರೆದೊಯ್ಯಬೇಕು" ಎಂದು ಅತಿದೈನ್ಯದಿಂದ ಪ್ರಾರ್ಥಿಸಿಕೊಂಡ.

ಆಗ ಆ ಯೋಗಿವರ್ಯರ ಮನಸ್ಸು ಕರಗಿತು. ಅವನ ನಿಶ್ಚಲ ಭಾವವನ್ನು ಕಂಡು ಅವರು ಆವನೆಡೆಗೆ ವಾತ್ಸಲ್ಯದ ನೋಟ ಬೀರುತ್ತ "ನಮ್ಮ ಸಂಚಾರದಲ್ಲಿ ನಿನ್ನನ್ನು ಕಟ್ಟಿಕೊಂಡು ನಾವು ಮಾಡುವುದೇನು? ಆಗಲಿ, ನಿನ್ನ ಭಕ್ತಿ ಪಾಶದಿಂದ

ಬಂಧಿತರಾದ ನಾವು ಇನ್ನು ಇಲ್ಲಿಯೇ ಇರುತ್ತೇವೆ. ಶಿವ ಸಂಕಲ್ಪವೇ ಹೀಗಿರಬೇಕು. ಆದರೆ ನಮಗೆ ಇಲ್ಲೊಂದು ಮಠವನ್ನು ಮಾತ್ರ ಶೀಘ್ರದಲ್ಲಿ ಕಟ್ಟಿಸಬೇಕು. ಏಕೆಂದರೆ ನಾವು ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗೇಶನ ಪರಂಪರೆಯ ಕಟ್ಟಿಗೆ ಹಳ್ಳರಾಚೊಟ್ಟಿ ಸ್ವಾಮಿಗಳ ಶಿಷ್ಯರಾದವರು ನಾವು. ನಮ್ಮದು ಅದರಲ್ಲಿ ಎಂಟನೇ ಪೀಠ. ಇನ್ನು ಮುಂದೆ ನಮ್ಮ ಪೀಠ ಪರಂಪರೆ ಇಲ್ಲಿಂದಲೇ ಮುಂದುವರೆಯುವುದು'' ಎಂದು ಅಪ್ಪಣೆ ದಯಪಾಲಿಸಿದರು. ಅದೇ ಮೇರೆಗೆ ಅಲ್ಲೊಂದು ಮಠ ಆ ಭಕ್ತನಿಂದ ತ್ವರಿತಗತಿಯಲ್ಲಿ ನಿರ್ಮಾಣವಾಯಿತು. ಈಗ ಅಲ್ಲಿ ಕಾಣುತ್ತಿರುವುದು ಅದೇ ಮಠ.

ಸಾಮಾನ್ಯವಾಗಿ ಅದು ತೋಂಟದಾರ್ಯಮಠವೇ ಆಗಿದ್ದರೂ ರೂಢಿಯಲ್ಲಿ ಅದು 'ಕೌದೀಮಹಾಂತಸ್ವಾಮಿಗಳವರಮಠ' ಎಂದೇ ಪ್ರಚಲಿವಾಗಿದೆ. ತೋಂಟದ ಈ ಮಹಾಂತಸ್ವಾಮಿಗಳಿಗೆ 'ಕೌದೀಮಹಾಂತಸ್ವಾಮಿ'ಗಳೆಂಬ ಹೆಸರು ಬರಲು ಸ್ವಾರಸ್ಯವಾದ ಒಂದು ವಿಶೇಷ ಕಾರಣವಿದೆ.

ಮಹಾಂತಸ್ವಾಮಿಗಳಿಗೆ ಇನ್ನೂ ಪ್ರಾಯ. ಖಡತರವಾದ ಬ್ರಹ್ಮಚರ್ಯದಿಂದಾಗಿ ಅವರದು ಪುಟವಿಟ್ಟ ಚಿನ್ನದಂತಹ ಮೈಬಣ್ಣ. ಬಂಧುರವಾದ ಮೈಕಟ್ಟು. ಆಕರ್ಷಕವಾದ ಮುಖಚರ್ಯೆ. ಒಮ್ಮೆ ಪ್ರಾತಃಕಾಲ ಸಮಯದಲ್ಲಿ ಅವರು ಬಹಿರ್ದೇಶಕ್ಕೆ ಹೋಗಿದ್ದರು. ಅದೇ ಸಮಯಕ್ಕೆ ಕೆಲವು ಯುವತಿಯರು ಅದೇ ತಾನೇ ಬಟ್ಟೆ ಒಗೆಯುವ ಹಳ್ಳಕ್ಕೆ ಬಂದಿದ್ದರು. ಕಠೋರ ಬ್ರಹ್ಮಚರ್ಯದಿಂದ ಪುಟವಿಟ್ಟ ಚಿನ್ನದಂತೆ ಹೊಳೆಯುತ್ತಿದ್ದ ಶ್ರೀಗಳವರ ಅಂಗ ಕಾಂತಿಯನ್ನು ಕಂಡು ಕಾಮಚೇಷ್ಟೆಗಳನ್ನು ಮಾಡುತ್ತ, ತಮ್ಮಲ್ಲಿ ಪರಸ್ಪರ ಮೋಹಕ ಮಾತುಗಳನ್ನಾಡುತ್ತಿದ್ದದು ಕೇಳಿ ಶ್ರೀಗಳು ತುಂಬಾ ಖೇದಪಟ್ಟು ''ಗುರುದರ್ಶನದಿಂದ ಭಕ್ತರಲ್ಲಿ ಭಕ್ತಿ–ಜ್ಞಾನ, ವೈರಾಗ್ಯವುಂಟಾಗ ಬೇಕು. ಅದರ ಬದಲಾಗಿ ಇವರಿಗೆ ಈ ಕಾಮ–ಮೋಹಗಳೇಕೆ ? ಎಂದು ವಿಷಾಧಿಸಿ, ಹಾಗೆಯೇ ಹಳ್ಳದ ಆಚೆ ದಡದಲ್ಲಿದ್ದ ರುದ್ರಭೂಮಿಗೆ ತೆರಳಿ ತಮ್ಮ ಮೊದಲಿನ ವೇಷ–ಭೂಷಣಗಳನ್ನೆಲ್ಲ ತೆಗೆದುಹಾಕಿ ಅಲ್ಲಿಯೇ ಚಿತಾಭಸ್ಮ ಲೇಪಿಸಿಕೊಂಡು ಪಕ್ಕದಲ್ಲಿ ಬಿದ್ದ ಕೌದಿಯನ್ನು ಹೊದೆದುಕೊಂಡು ಮತ್ತೆ ಅದೇ ಮಹಿಳೆಯರಿದ್ದ ಸ್ಥಾನಕ್ಕೆ ವಿಕಟವಾಗಿ ನಗತೊಡಗಿದರು. ಇದರಿಂದ ಹೇಯಗೊಂಡ ಆ ಹೆಣ್ಣು ಮಕ್ಕಳು ಶ್ರೀಗಳವರನ್ನು ಪರಿಪರಿಯಾಗಿ ಹಿಯಾಳಿಸಲು ಶ್ರೀಗಳಿಗೆ ಆಗ ಆನಂದವಾಯಿತು. ಹೀಗೆ ಕಾಮಮೋಹಗಳ ಮೇಲೆ ವಿಜಯ ಸಾಧಿಸಲು ಅಂದು ತಾವು ಧರಿಸಿದ ವೇಷವೇ ಕಾರಣವಾದ್ದರಿಂದ ಶ್ರೀಗಳವರು ಕೌದಿಯನ್ನೇ ತಮ್ಮ ನಿತ್ಯದ ಲಾಂಛನವನ್ನಾಗಿ ಮಾಡಿಕೊಂಡರು. ಅಂದಿನಿಂದ ಶ್ರೀ ಮಹಾಂತ ಶ್ರೀಗಳವರು ಕೌದೀಮಹಾಂತ ಶಿವಯೋಗಿಗಳೆಂದೇ ಪ್ರಸಿದ್ಧಿಯಾದರು.

■■

*

## ಶ್ರೀ ನಿರಂಜನ ಜಗದ್ಗುರು ತೋಂಟದ ಅರ್ಧನಾರೀಶ್ವರ*

ಡಂಬಳ ಬೃಹನ್ಮಠದಲ್ಲಿ ನೆಲಿಸಿ ಭಕ್ತವರನಾದ ಶ್ರೀ ತೋಂಟದ ಅರ್ಧನಾರೀಶ್ವರ, ನಿರಂಜನ ಜಗದ್ಗುರು ತೋಂಟದಾರ್ಯ ಪರಂಪರೆಯಲ್ಲಿ ಬರುವ ಒಂಭತ್ತನೆಯ ಪೀಠಾಧಿಪತಿ. ತಮ್ಮ ಗುರು ಶ್ರೀ ಕೌದೀಮಹಾಂತಸ್ವಾಮಿಗಳವರಿಂದ ಷಟ್‌ಸ್ಥಲಾಚಾರ್ಯ ಪಟ್ಟವನ್ನು ವಹಿಸಿಕೊಂಡಮೇಲೆ ತಮ್ಮ ಪರಂಪರೆಯ ಮೂಲಕರ್ತೃ ಶ್ರೀ ತೋಂಟದ ಸಿದ್ಧಲಿಂಗೇಶನಂತೆ ತೇಜೋಮಯವಾಗಿ ಬೆಳಗಿದ ಕಾರಣ ಅವರು ''ದ್ವಿತೀಯ ಸಿದ್ಧಲಿಂಗ''ನೆಂದು ಪ್ರಸಿದ್ಧರಾದರು.

ಶ್ರೀ ಅರ್ಧನಾರೀಶ್ವರ ಶಿವಯೋಗ ಶಕ್ತಿಯ ಪ್ರಭಾವ ಎಷ್ಟಿತ್ತೆಂದರೆ ಆ ಕಾಲದಲ್ಲಿ ಕನ್ನಡ ನಾಡಿನ ಪ್ರಸಿದ್ಧ ರಾಜಮನೆತನಗಳಾದ ಡಂಬಳ, ಕೆಳದಿ, ಸ್ವಾದಿ, ಇಕ್ಕೇರಿ ಹಾಗಲವಾಡಿ ಮತ್ತು ಹರಪನಹಳ್ಳಿ ಸಂಸ್ಥಾನಿಕರು ಶ್ರೀ ಅರ್ಧನಾರೀಶ್ವರರ ಶಿವಯೋಗ ಶಕ್ತಿಗೆ ಮಣಿದು, ಅವರ ದಾಸಾನು ದಾಸರಾದರು. ಭೋಗಜೀವನ ಯೋಗಜೀವನಕ್ಕೆ ತಲೆಬಾಗಿತು. ಈಗಲೂ ಈ ಸಂಸ್ಥಾನಿಕರು ಕೊಟ್ಟ ದಾನ ದತ್ತಿಗಳು ಸಂಸ್ಥಾಮಠದಲ್ಲಿವೆ. ಈ ಕಾರಣದಿಂದ ಡಂಬಳ ಬೃಹನ್ಮಠವು ''ಸಂಸ್ಥಾನಮಠ''ವೆಂಬ ಮನ್ನಣೆಗೆ ಪಾತ್ರವಾಯಿತಲ್ಲದೆ ಶ್ರೀ ಅರ್ಧನಾರೀಶ್ವರರು.......... ''ಶ್ರೀ ಮದ್ರಾಜಾಧಿರಾಜ ರಾಜಪೂಜಿತ....''ರಾದರು. ಇದನ್ನು ಸಂಸ್ಥಾನ ಮಠದಲ್ಲಿಯ ಕಾಗದ ಪತ್ರಗಳ ಒಕ್ಕಣೆಕೆಯಿಂದ ಅರಿಯಬಹುದು.

> ''.........ನಿರಂಜನ ಗಣೇಶ್ವರಪರಾವತಾರಭೂತ
> ಕಗ್ಗೆರೆ ಪುಷ್ಪವಾಟಿಕಾ ವಲ್ಮೀಕಸ್ಥಿತ ಎಡೆಯೂರ
> ವಿರಾಜಮಾನ ಶ್ರೀ ಮದನಾದಿ ತೋಂಟದ ಸಿದ್ಧೇಶ್ವರ
> ಪರಂಪಾನ್ವಯಾನುಗತ ಶ್ರೀ ಮದ್ದೊಂಬಲ ಮಹಾಸಂಸ್ಥಾನ
> ಬೃಹನ್ಮಠಾಧೀಷ್ಠಿತ.........ಶ್ರೀ ಮದ್ರಾಜಾಧಿರಾಜ ರಾಜಪೂಜಿತ......''
>
> (ಪ್ರವಾಸ ಕಾರ್ಯಕ್ರಮ ಪತ್ರಿಕಾ)

ಶ್ರೀ ಅರ್ಧನಾರೀಶ್ವರರ ಗುರುಗಳಾದ ಪರಮ ವೈರಾಗ್ಯಶಾಲಿ ಶ್ರೀ ಕೌದೀ ಮಹಾಂತ ಸ್ವಾಮಿಗಳವರು ಒಂದು ದಿನ ತಮ್ಮ ಬೆಳಗಿನ ಶಿವಪೂಜೆ ಪೂರೈಸಿಕೊಂಡು, ಬಾಚಿಗೊಂಡನ ಹಳ್ಳಿಯ ಪಕ್ಕದಲ್ಲಿ ಹರಿದ ಹಗರಿಹಳ್ಳದ ತೀರದ ನೋಟವನ್ನು ಅವಲೋಕಿಸುತ್ತ ಹೊರಟಿದ್ದರು. ಆಗ ಒಂದು ವೃಕ್ಷದ ಅಡಿಯಲ್ಲಿ ತೇಜಸ್ವಿಯಾದ ಎಂಟು ವರ್ಷದ ಬಾಲಕನೋರ್ವನು ಮಂಡಿಸಿರುವದು ಕಂಡು ಬಂದಿತು. ''ಇದು ಶಿವೇಚ್ಛೆಯಿಂದ ದೊರೆತಿದೆ'' ಎಂದು ಭಾವಿಸಿದ ಶ್ರಿ ಕೌದೀ ಮಹಾಂತ ಸ್ವಾಮಿಗಳು ಆ ಮಗುವಿನೊಡನೆ ತಮ್ಮ ಮಠಕ್ಕೆ ದಯಮಾಡಿಸಿದರು.

---

* ನಿರಂಜನ ಗ್ರಂಥದಿಂದ



ಗದುಗಿನ ಸಂಸ್ಥಾನಮಠದ ಮಹಾದ್ವಾರ



ಡಂಬಳ ಸಂಸ್ಥಾನಮಠದ ಮಹಾದ್ವಾರ



ತೋಂಟದ ಶ್ರೀ ಜ. ಸಿದ್ಧೇಶ್ವರ ಮಹಾಸ್ವಾಮಿಗಳು ತಮ್ಮ ಮೂಲ ಕರ್ತೃಸ್ಥಾನವಾದ
ಶ್ರೀ ಎಡೆಯೂರು ಕ್ಷೇತ್ರಕ್ಕೆ ದಿ. ೬-೧೨-೧೯೧೭ ರಂದು
ಶ್ರೀ ನಿ.ಪ್ರ. ಹಾನಗಲ್ಲ ಕುಮಾರ ಮಹಾಸ್ವಾಮಿಗಳೊಡನೆ ಪರಿವಾರದೊಂದಿಗೆ ದಯಮಾಡಿಸಿದರು.



ಎಡೆಯೂರಿಂದ ಜಗದ್ಗುರುಗಳ ಪುನರಾಗಮನ : ಮಾನ್ವಿಹಳ್ಳದಲ್ಲಿ ಗಣಾರಾಧನೆ.

೧. ಶ್ರೀ ಗುರುಬಸವ ಚರಮೂರ್ತಿಗಳು, ಇಟಗಿ, ೨. ಶ್ರೀ ಅನ್ನದಾನ (ಮೃತ್ಯುಂಜಯ) ಸ್ವಾಮಿಗಳು, ಮುಂಡರಗಿ,
೩. ಶ್ರೀ................., ೪. ಶ್ರೀ ಜ. ಸಿದ್ದೇಶ್ವರ ಸ್ವಾಮಿಗಳು, ೫. ಶ್ರೀ ಸಿದ್ದೇಶ್ವರ ಮೂರ್ತಿ,
೬. ಶ್ರೀ ರೇವಣಸಿದ್ಧ ಸನ್ನಿಧಿ ಚರಮೂರ್ತಿಗಳು, ೭. ಶ್ರೀ ಸಿದ್ಧಲಿಂಗ ಚರಮೂರ್ತಿಗಳು, ಅಣ್ಣೀಗೇರಿ, ೮. ಶ್ರೀ ಅನ್ನದಾನ ಮರಿದೇವರು.

ಮುಂದೆ ಕೆಲಹೊತ್ತಿನಲ್ಲಿ ಭಸ್ಮ ರುದ್ರಾಕ್ಷಿಗಳನ್ನು ಧರಸಿದ ಮಧ್ಯಮ ವಯಸ್ಸಿನ ಒಬ್ಬ ಭಕ್ತ ಮಠದಲ್ಲಿ ಪ್ರವೇಶಿಸಿ ಗುರುಗಳಿಗೆ ಅವರ ಪಕ್ಕದಲ್ಲಿದ್ದ ಮಗುವನ್ನು ತೋರಿಸಿ ''ಪೂಜ್ಯರೇ ! ನನ್ನ ಸಮಯಾಚಾರಕ್ಕಾಗಿ ಮಲೆನಾಡಿನಲ್ಲಿ ಪ್ರಸಿದ್ಧವಾದ ಅರಳೆಲೆಮಠದ ಪಟ್ಟದ ಸ್ವಾಮಿಯವರಿಂದ ಈ ಮಗುವನ್ನು ಪಡೆದುಕೊಂಡಿದ್ದೇನೆ. ಈತನೇ ನನ್ನ ಗುರು, ನನಗೆ ಕೋರಶೆಟ್ಟಿ ಎಂದೆನ್ನುವರು. ವ್ಯಾಪಾರವೇ ನನ್ನ ಕಾಯಕ. ಪ್ರಾಪ್ತಿಯ ಅರ್ಧ ಪಾಲು ಗುರುಲಿಂಗ – ಜಂಗಮ ದಾಸೋಹಕ್ಕಾಗಿ ವಿನಿಯೋಗವಾಗುವದರಿಂದ ಈ ಹೆಸರು ರೂಢಿಯಾಗಿದೆ'' ಎಂದು ನಮ್ರತೆಯಿಂದ ಬಿನ್ನವಿಸಿದ.

ಕೋರಿಶೆಟ್ಟಿ ಹೇಳಿದುದನ್ನೆಲ್ಲ ಗುರುಗಳು ಶಾಂತಚಿತ್ತರಾಗಿ ಕೇಳಿಕೊಂಡು ''ಇದು ನಮ್ಮ ವಸ್ತು, ಈ ವರೆಗೂ ನಿನ್ನಲ್ಲಿ ನಮ್ಮದಾಗಿಯೇ ಇತ್ತು ಜಗದ್ಗುರುವಿನಲ್ಲಿ ಇರಬೇಕಾದ ಎಲ್ಲ ಲಕ್ಷಣಗಳೂ ಈತನಲ್ಲಿವೆ'' ಎಂದು ಹೇಳಿ: ಆ ಕೋರಶೆಟ್ಟಿಯನ್ನು ಆ ಬಾಲ ವಟುವಿನೊಡನೆ ತಮ್ಮಲ್ಲಿಟ್ಟುಕೊಂಡು ಆ ಬಾಲಕನಿಗೆ ''ವಿರಕ್ತಾಶ್ರಮ''ವನ್ನು ದಯಪಾಲಿಸಿ ಷಟ್‌ಸ್ಥಲ ''ಬ್ರಹ್ಮೋಪದೇಶ'' ಮಾಡಿದರು.

ನಂತರ ಈ ಬಾಲವಟು ತನ್ನ ಆಚರಣೆಯನ್ನು ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತದಂತೆ ''ಶರಣ ಸತಿ ಲಿಂಗ ಪತಿ'' ಭಾವದಿಂದ ಇಟ್ಟುಕೊಳ್ಳಲು ಗುರುಗಳಾದ ಕೌದೀ ಮಹಾಂತ ಸ್ವಾಮಿಗಳವರು ಬಹಳ ಸಂತಸಪಟ್ಟು ಶಿಷ್ಯೋತ್ತಮನಿಗೆ ''ಅರ್ಧನಾರೀಶ್ವರ'' ಎಂಬ ಅನ್ವರ್ಥಕ ನಾಮಕರಣ ಮಾಡಿ ತಮ್ಮ ಷಟ್‌ಸ್ಥಲಾಚಾರ್ಯ ಪಟ್ಟವನ್ನು ಶ್ರೀ ಅರ್ಧನಾರೀಶ್ವರನಿಗೆ ಅನುಗ್ರಹಿಸಿದ ನಂತರ ಶ್ರೀ ನಿರಂಜನ ಜಗದ್ಗುರು ತೋಂಟದ ಅರ್ಧನಾರೀಶ್ವರ ಶಕ್ತಿ ವಿಶಿಷ್ಟ ಪರಮಾತ್ಮನಂತೆ ಕಂಗೊಳಿಸಹತ್ತಿದ.

ಇದಾದ ಮೇಲೆ ಗುರುಗಳಾದ ಕೌದೀ ಮಹಾಂತ ಸ್ವಾಮಿಗಳು ತಮ್ಮ ಇಷ್ಟಲಿಂಗದಲ್ಲಿ ಬಯಲಾದ ನಂತರ ಅವರ ಅಪಾರ ಶಿಷ್ಯಪರಿವಾರ ಕೇವಲ ಬಾಲಕ ನೋರ್ವನಿಗೆ ಅಧಿಕಾರ ಹೋಯಿತೆಂದು ಅಂತರಂಗದಲ್ಲಿ ಕರಬುತ್ತಿರುವದನ್ನು ಕಂಡ ಶ್ರೀ ಅರ್ಧನಾರೀಶ್ವರರು ''ಇನ್ನು ಇಲ್ಲಿ ಇರುವದು ತರವಲ್ಲ''ವೆಂದು ಊಹಿಸಿ ಅಂದಿನ ರಾತ್ರಿಯೇ ತಮ್ಮ ಆಪ್ತಶಿಷ್ಯ ಕೋರಶೆಟ್ಟಿಯೊಡನೆ ಹೊರಟು ಕೇವಲ ಒಂದು ಅಡಿಯಷ್ಟಿದ್ದ ಹಗರಿ ಹಳ್ಳವನ್ನು ದಾಟಿ ಮುಂದಕ್ಕೆ ಪ್ರಯಾಣ ಬೆಳಸಿದರು.

ಇದು ಹೇಗೋ ಗೊತ್ತಾಗಿ ಮಠದ ಶಿಷ್ಯ ಸಮೂಹ ಶ್ರೀ ಅರ್ಧನಾರೀಶ್ವರರನ್ನು ಬೆಂಬತ್ತಿದರು. ಆದರೆ ಅವರು ಬರುತ್ತಲೇ ಕೇವಲ ಒಂದು ಅಡಿಯಷ್ಟು ಮಾತ್ರ ಇದ್ದ ಹಗರಿಹಳ್ಳ ಪಾತ್ರ ಸೂಸಿ ಹರಿಯಹತ್ತಿತು. ಹೀಗೆ ಅನಿರೀಕ್ಷಿತ ವಿಘ್ನ ಒದಗಿದ್ದರಿಂದ ಶಿಷ್ಯರೆಲ್ಲರು ನಿರುಪಾಯರಾಗಿ ಮಠಕ್ಕೆ ಹಿಂದಿರುಗಿದರು.

ಕೋರಶೆಟ್ಟಿ ತನ್ನ ಹೆಗಲ ಗದ್ದುಗೆ ಮೇಲೆ ತನ್ನ ಗುರುಗಳನ್ನು ಮೂರ್ತಗೊಳಿಸಿ ಕಾವಿ ಅರಿವೆಯಿಂದ ಆಚ್ಛಾದಿತವಾದ ತಾಳೆಗರಿಯ ಛತ್ರಿಯನ್ನು ಗುರುಗಳ ಮೇಲೆ ಹಿಡಿದು ಪಥಕ್ರಮದಿಂದ ಡಂಬಳ ಗ್ರಾಮವನ್ನು ತಲ್ಪಿ ಶ್ರೀ ದೊಡ್ಡಬಸವೇಶ್ವರ ದೇವಾಲಯಕ್ಕೆ ಬಂದರು. ಶಿಷ್ಯರೆಲ್ಲ ಒಳಗೆ ಹೋಗಿ ನೋಡಿದಾಗ ಧ್ಯಾನಾಸಕ್ತ ಗುರುಗಳು ನೆಲದಿಂದ ಕೆಲ ಅಡಿ ಮೇಲಕ್ಕೆದ್ದು ಅಂತರಿಕ್ಷದಲ್ಲಿಯೇ ಸಮಾಧಿಸ್ಥರಾದದ್ದು ಗೋಚರಿಸಿತು.

ಇದರಿಂದ ಶಿಷ್ಯರೆಲ್ಲರ ಮೊದಲಿನ ಕಹಿ ಭಾವನೆಗಳು ದೂರಾಗಿ ಭಯ ಭಕ್ತಿಗಳು ಉಂಟಾದವು. ಅವರಿಗರಿಯದಂತೆ ಅವರ ಮುಖದಿಂದ ಹರ್ಷಾರವಗಳು ಹೊರಹೊರಟವು. ಇದರಿಂದ ಶ್ರೀ ಅರ್ಧನಾರೀಶ್ವರರು ಧ್ಯಾನ ಸಮಾಧಿಯಿಂದ ಎಚ್ಚತ್ತು ನೋಡಿದಾಗ ಶಿಷ್ಯರೆಲ್ಲರೂ ಆಗಮಿಸಿದ್ದು ತಿಳಿಯಿತು. ಅವರಲ್ಲಾದ ಮಾನಸಿಕ ಬದಲಾವಣೆಯಿಂದ ಸಂತುಷ್ಟರಾಗಿ ''ನಿಮ್ಮೆಲ್ಲರ ಕೋರಿಕೆ ಏನಿದೆ ?'' ಎಂದು ಕೇಳಿದರು. ಮುಂದೆ ಅವರ ಅಭೀಷ್ಟದಂತೆ ಅವರೆಲ್ಲರಿಗೆ ''ಶಿವಾನುಭವಚರ'' ದಯಪಾಲಿಸಿ ''ಷಟ್‌ಸ್ಥಲೋಪದೇಶದಿಂದ ಲೋಕವನ್ನುದ್ಧರಿಸಿ''ರೆಂದು ಉಪದೇಶಿಸಿ ಅವರನ್ನು ಬೀಳ್ಕೊಟ್ಟರು.

ಹೀಗೆ ಗುರುಗಳಿಂದ ''ಶಿವಾನುಭವ ಚರಂತಿಗೆ''ಯನ್ನು ಪಡೆದುಕೊಂಡ ಶಿಷ್ಯರು ಸೊಂಡೂರು, ಮೈಸೂರು, ಉರುವಕೊಂಡ ಮುಂತಾದವುಗಳಲ್ಲಿಗೆ ಹೋಗಿ ಮಠಗಳನ್ನು ಸ್ಥಾಪಿಸಿ ತಮ್ಮ ಶಿವಯೋಗ ತೇಜಸ್ಸಿನಿಂದ ವಿಖ್ಯಾತರಾದರು.

ಇದಾದ ಮೇಲೆ ಶ್ರೀ ಅರ್ಧನಾರೀಶ್ವರರು ಕೋರಶೆಟ್ಟಿಯನ್ನು ಕರುಣೆಯಿಂದ ನೋಡಿ ''ನಿನಗೆ ಗುರುಸೇವೆಯ ಮೂಲಕ ಜಂಗಮ ಲಕ್ಷಣ ಪ್ರಾಪ್ತವಾಗಿದೆ'' ಎಂದು ಹೇಳಿ ಕಠೋರ ಬ್ರಹ್ಮಚರ್ಯ ಪಾಲಿಸಿದ ಆತನಿಗೆ ''ಷಟ್‌ಸ್ಥಲ ಬ್ರಹೋಪದೇಶ'' ಮಾಡಿ ಕಾವಿವಸ್ತ್ರದಿಂದ ಆಚ್ಛಾದಿತವಾದ ತಾಳಗರಿ ಛತ್ರಿ, ಕೋರಿ ಟೊಪ್ಪಿಗೆ, ಅಳಿಲು ಬಣ್ಣದ ಕಂಬಳಿ, ಶಿವಾನುಭವ ಶಾಸ್ತ್ರ ಗ್ರಂಥ ಈ ಚಿನ್ಹೆಗಳುಳ್ಳ ''ಅನ್ನದಾನಚರ''ವನ್ನು ಕೊಟ್ಟು ಕಳಿಸಿದರು. ಅಂದಿನಿಂದ ಅನ್ನದಾನಚರ ಪ್ರಾರಂಭವಾಯಿತು.

ಶ್ರೀ ಅನ್ನದಾನ ಚರಮೂರ್ತಿಗಳು ಹಾಗೆಯೇ ವ್ಯಡಗಿರಿಗೆ ಹೋಗಿ ಗುರು ಅರ್ಧನಾರೀಶ್ವರ ಕೃಪಾಬಲದಿಂದ ಅನೇಕ ಮಹತ್ವಗಳನ್ನು ಮಾಡಿ, ಭಕ್ತರು ಭಕ್ತಿಯಿಂದ ಕಟ್ಟಿಸಿಕೊಟ್ಟ ಮಠದಲ್ಲಿ ನಿತ್ಯವೂ ಅನ್ನ ದಾಸೋಹವನ್ನಿಟ್ಟು ''ಅನ್ನದಾನ ಮಹಾಸ್ವಾಮಿ''ಗಳೆಂದು ಪ್ರಸಿದ್ಧರಾದರು.

''ಶಿವಾನುಭವ'' ತತ್ತ್ವೋಪದೇಶದಿಂದ ಮನಸ್ಸಿನ ಮೇಲಾಗುವಷ್ಟು ಪರಿಣಾಮ ''ಪ್ರಸಾದ'' ಸೇವನೆಯಿಂದಲೂ ಆಗುವದು. ಪ್ರಸಾದವಾದ ಬಳಿಕ ಪದಾರ್ಥದ ಮುನ್ನಿನ ಗುಣ ಅಳಿದು ಹೋಗುವಂತೆ ಪ್ರಸಾದ ಸೇವನೆಯಿಂದ

ಜೀವಭಾವವೆಲ್ಲ ನಷ್ಟವಾಗಿ ಶಿವಾಭಾವ ಉಂಟಾಗುವದು. ಇದೇ ''ಅನ್ನ ದಾಸೋಹ''ದ ಮುಖ್ಯ ತತ್ತ್ವ. ಶ್ರೀ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗೇಶ ''ಶಿವಾನುಭವ ಚರ''ವನ್ನು ಹೆಚ್ಚಾಗಿ ಬಳಕೆಯಲ್ಲಿ ತಂದಂತೆ ಆತನ ಪರಂಪರೆಯಲ್ಲಿ ಒಂಬತ್ತನೇ ಪೀಠದವರಾದ ಶ್ರೀ ಅರ್ಧನಾರೀಶ್ವರರು ''ಅನ್ನದಾನ ಚರ''ವನ್ನು ಪ್ರಾರಂಭಿಸಿ ಅದರ ಪ್ರವರ್ತಕರೆನಿಸಿದರು. ಈ ಪ್ರಕಾರ ಶಿಷ್ಯರೆಲ್ಲರನ್ನು ಬೀಳ್ಕೊಟ್ಟು ಏಕಾಂಗಿಯಾದ ಮೇಲೆ ಶ್ರೀ ಅರ್ಧನಾರೀಶ್ವರರಿಗೆ ವೈರಾಗ್ಯ ಬಲಿತು ಅವರು ಯಾವಾಗಲೂ ಶಿವಯೋಗದಲ್ಲಿಯೇ ಮಗ್ನರಾಗ ಹತ್ತಿದರು.

ಶ್ರೀ ಅರ್ಧನಾರೀಶ್ವರರಿದ್ದ ಡಂಬಳ ಸಂಸ್ಥಾನಕ್ಕೆ ದೊರೆ ಶೀನಪ್ಪ ನಾಯಕ. ಗಲತ್ಕುಷ್ಠದಿಂದ ಬಳಲುತ್ತಿದ್ದ ಶೀನಪ್ಪ ನಾಯಕನಿಗೆ ಜೀವನದಲ್ಲಿ ಜಿಗುಪ್ಸೆ ಹುಟ್ಟಿ ಕಾಶಿಗೆ ಹೋಗಿ ಅಲ್ಲಿ ಗಂಗಾನದಿಯೊಳಗೆ ದೇಹತ್ಯಾಗ ಮಾಡುವದನ್ನು ನಿಶ್ಚಯಿಸಿದ.

ಅದೇ ದಿನ ರಾತ್ರಿ ಶೀನಪ್ಪ ನಾಯಕನ ಕನಸಿನಲ್ಲಿ ಅವನ ಕುಲದೈವ ಆಂಜನೇಯ ಕಾಣಿಸಿಕೊಂಡು (ಒಂಟ ಆಲದಪ್ಪ) ಅರಸನಿಗೆ ''ವಿಶ್ವನಾಥನೇ ದೊಡ್ಡ ಬಸವಪ್ಪನ ದೇವಾಲಯಕ್ಕೆ ಸಮೀಪದಲ್ಲಿರುವ ಗುಹೆಯಲ್ಲಿದ್ದಾನೆ. ಆತನನ್ನು ಸೇವಿಸಿ ರೋಗಮುಕ್ತನಾಗು'' ಎಂದು ಸೂಚಿಸಿದ.

ಮಾರನೇ ದಿನವೇ ಅರಸು ಬೆಳಗಿನ ಝಾವದಲ್ಲಿ ಎದ್ದು ಸ್ನಾನ ತೀರಿಸಿಕೊಂಡು ದೊಡ್ಡ ಬಸವೇಶ್ವರ ದೇವಾಲಯದ ಹತ್ತಿರ ಗವಿಯನ್ನು ಸಂಶೋಧಿಸ ಹತ್ತಿದ. ಒಂದು ಗುಹೆಯಿಂದ ಘಂಟನಿನಾದದೊಡನೆ ಧೂಪದ ವಾಸನೆ, ಬರಹತ್ತಿತು. ಅದೇ ಶಿವಯೋಗಿಗಳ ಸ್ಥಾನವಾಗಿರಬೇಕೆಂದು ಊಹಿಸಿ ಪ್ರತಿದಿನ ಬೆಳಿಗ್ಗೆ ಅದರ ಮುಂದಿನ ರಜಾಂಗಣ ಉಡುಗಹತ್ತಿದ. ಒಂದು ದಿನ ಪ್ರಾತಃಕಾಲ ಅರಸು ರಜಾಂಗಣವನ್ನು ಉಡುಗುತ್ತಿದ್ದ. ಪೂರ್ವ ದಿಗಂತದಲ್ಲಿ ಅರುಣೋದಯವಾಗಿದೆ. ಆಗ ಗುಹೆಯಿಂದ ಉದಯ ರವಿಯಂತೆ ಕಂಗೊಳಿಸುವ ಶ್ರೀ ಅರ್ಧನಾರೀಶ್ವರ ಶಿವಯೋಗಿಗಳು ಹೊರಬಂದರು.

ಅರಸನಿಗೆ ಅವರನ್ನು ನೋಡುವದಾಗದೆ ಭಕ್ತಿ ಕಂಪಿತನಾಗಿ ನೆಲಕ್ಕೆ ಮೈಯಿಕ್ಕಿದ. ಶಿವಯೋಗಿಗಳು ಕರುಣೆಯಿಂದ ಅರಸನನ್ನು ಸಂತೈಸುತ್ತ ಬಂದ ಕಾರಣವನ್ನು ಕೇಳಿದರು. ಆಗ ಅರಸ ಎದ್ದು ನಿಂತಾಗ ಅವನ ರೋಗವೆಲ್ಲ ಮಾಯವಾಗಿತ್ತು. ಅರಸನಿಗಾದ ಆನಂದ ಅಷ್ಟಿಷ್ಟಲ್ಲ. ಅವನು ಗದ್ಗದಿತ ಕಂಠದಿಂದ ಶಿವಯೋಗಿವರ್ಯನಿಗೆ ''ಗುರುವೆ ! ನಾನು ಪೂರ್ವ ಪುಣ್ಯವಶಾತ್ ಈ ಡಂಬಳ ಸಂಸ್ಥಾನಕ್ಕೆ ದೊರೆಯಾಗಿರುವೆ. ನನ್ನ ಹೆಸರು ಶೀನಪ್ಪ ನಾಯಕ. ಆದರೆ ಪ್ರಾರಬ್ಧ ಕರ್ಮದಿಂದ ಮಹಾರೋಗಕ್ಕೆ ತುತ್ತಾದೆ. ಇದರಿಂದ ಜೀವನದಲ್ಲಿ ಹೇಯಹುಟ್ಟಿ ದೇಹತ್ಯಾಗಕ್ಕೆ ಮನಸ್ಸು ಮಾಡಿದಾಗ ಶ್ರೀ ಮಾರುತಿಯ ಆದೇಶದಂತೆ ತಮ್ಮ ಸೇವೆಗೆ ನಿಂತೆ. ಈಗ ನನಗೆ ಇದು ಎರಡನೇ ಜನ್ಮ ಇನ್ನು ಮುಂದೆ ತಾವೇ ನನ್ನ ಅಧಿದೈವ. ಈ

ಗ್ರಾಮವನ್ನೇ ತಮ್ಮ ಸ್ವಕ್ಷೇತ್ರವನ್ನಾಗಿರಿಸಿಕೊಳ್ಳಬೇಕು. ತಮ್ಮ ಯಾವತ್ತು ಸೇವೆಯನ್ನು ನಾನು ಪೂರೈಸುವೆ''. ಎಂದು ಹೇಳಿ ಪುನಃ ಗುರುಗಳ ಶ್ರೀಚರಣಕ್ಕೆ ಮಣಿದು ಊರಿಗೆ ಹಿಂದಿರುಗಿದ.

ತಕ್ಷಣವೇ ಮಠವನ್ನು ಕಟ್ಟಿಸಬೇಕಾಗಿದ್ದರಿಂದ ಆ ಕೂಡಲೇ ತನ್ನ ಅರಮನೆಯ ಬಹು ಭಾಗವನ್ನು ಕೆಡವಿ ಅದೇ ಕಲ್ಲು ಕಿಡಕಿ ಬಾಗಿಲುಗಳಿಂದ ಮಠವನ್ನು ಸಾಧ್ಯವಿದ್ದಷ್ಟು ತೀವ್ರ ಕಟ್ಟಿಸಿದ, ಇಂದಿಗೂ ಮಠಕ್ಕಿರುವ ವಿಶಾಲವಾದ ಅರಮನೆ ಕಿಡಕಿ ಬಾಗಿಲುಗಳನ್ನು ನೋಡಬಹುದು. ಆಮೇಲೆ ಅರಸು ಶ್ರೀಗಳ ಶಿವಪೂಜಾ ವಿನಿಯೋಗಾರ್ಥ ಅನೇಕ ದಾನ ದತ್ತಿಗಳನ್ನು ಹಾಕಿಕೊಟ್ಟ.

ಈ ರೀತಿ ಭೋಗಾಪೇಕ್ಷಿಗಳು ಶಿವಯೋಗಿ ಸನ್ನಿಧಿಗೈತಂದು ತಮ್ಮ ತಾಪ ತ್ರಯಗಳನ್ನು ನೀಗಿಕೊಂಡಂತೆ ಜ್ಞಾನಬುಭುತ್ಸುಗಳೂ ಶ್ರೀ ಅರ್ಧನಾರೀಶ್ವರರ ಅನುಭಾವ ಸಂಪತ್ತಿಗೆ ಹಾರೈಸಿ ತಮ್ಮ ಜ್ಞಾನತೃಷೆಯನ್ನು ಹಿಂಗಿಸಿಕೊಂಡರು. ಇಂಥವರಲ್ಲಿ ಪ್ರಕಾಂಡ ಪಂಡಿತ ಮರಿ ತೋಂಟದಾರ್ಯರು ಹಾಗೂ ಮೌನಪ್ಪಯ್ಯ ಪಂಡಿತರು ಮುಖ್ಯರು.

ಹೀಗೆ ದಿಗಂತ ವಿಶ್ರುತವಾದ ಅರ್ಧನಾರೀಶ್ವರನ ಮಹಿಮಾತಿಶುವನ್ನು ಕೇಳಿ ಕೆಳದಿಯ ಭೂಪಾಲರು ಅರ್ಧನಾರೀಶ್ವರನ ದರ್ಶನಕ್ಕೆ ಬಂದು ಕೆಲ ದಿನ ಇದ್ದು, ಮರಳಿ ಹೋಗುವಾಗ ಶ್ರೀ ಮರಿ ತೋಂಟದಾರ್ಯರನ್ನು ತಮಗೆ ಕ್ರಿಯಾ ಮೂರ್ತಿಗಳನ್ನಾಗಿ ಕರುಣಿಸಬೇಕೆಂದು ಬೇಡಿಕೊಂಡರು. ಆ ಮೇರೆಗೆ ಮರಿ ತೋಂಟದಾರ್ಯರು ಕೆಳದಿಯ ರಾಜಸ್ಥಾನ ಸೇರಿದ ನಂತರ ''ವೀರಶೈವಾನಂದ ಚಂದ್ರಿಕರ'', ''ವೀರಶೈವ ಪ್ರದೀಪಿಗೆ'', ಮತ್ತು ಸಿದ್ಧಾಂತ ಶಿಖಾಮಣಿಯ ''ತತ್ತ್ವ ಪ್ರದೀಪಿಕೆ'' ಮುಂತಾದ ಅಮೋಘ ಕೃತಿಗಳು ಅವರಿಂದ ರಚಿತವಾಗಿ ವೀರಶೈವ ಸಂಸ್ಕೃತ ವಾಙ್ಮಯ ಶ್ರೀಮಂತವಾಯಿತು.

ಕೆಳದಿಯ ರಾಜಮನೆತನಕ್ಕೆ ''ಗಂಡುಸಂತಾನ''ವೇ ಇರಲಿಲ್ಲ. ಪುತ್ರ ಕಾಮೇಷ್ಟಿಗೆ ಮಿಗಿಲಾದ ಜಗದ್ಗುರು ತೋಂಟದಾರ್ಯ ಪರಂಪರೆಯ ಜಂಗಮ ಲೀಲೆಯನ್ನು ಶ್ರೀ ಮರಿ ತೋಂಟದಾರ್ಯರಿಂದ ತಿಳಿದ ರಾಜಕುಟುಂಬವು ಗುರುದರ್ಶನೋತ್ಕಂಠಿತವಾಗಿ ಡಂಬಳಕ್ಕೆ ಹೊರಡಬೇಕೆನ್ನುವಷ್ಟರಲ್ಲಿ ''ಶ್ರೀ ಅರ್ಧನಾರೀಶ್ವರ''ನೇ ಕೆಳದಿಯ ರಾಜವೀಥಿಯಲ್ಲಿ ಕಾಣಿಸಿಕೊಂಡನು. ನೂರಾರು ಮೈಲುಗಳ ಆಚೆಗಿರುವ ಗುರುಪುಂಗುವ ಕೇವಲ ಸ್ಮರಣೆ ಮಾತ್ರದಿಂದ ದರ್ಶನ ಕೊಟ್ಟದ್ದನ್ನು ನೋಡಿ ಕೆಳದಿಯ ರಾಜಮನೆತನದ ಭಕ್ತಿ ಪ್ರವಾಹ ಎಲ್ಲೆಮೀರಿತು.

ರಾಜವೈಭವದಿಂದ ಗುರುಗಳಿಗೆ ರಾಜಾತಿಥ್ಯವಾಯಿತು. ಗುರುಗಳು ರಾಜ ಕುಟುಂಬವನ್ನು ಹರಿಸಿ ಮರಳುತ್ತಿರುವಾಗ ಮಕ್ಕಳಿಲ್ಲದೆ ಕೊರಗುತ್ತಿರುವ ವೀರಭದ್ರ

ನಾಯಕನ ಪತ್ನಿ ಮಲ್ಲಮಾಂಬೆಯನ್ನು ನೋಡಿ, ''ಮಗಳೆ ! ನಿನ್ನ ಮನದಳಿಲವನ್ನು ಬಲ್ಲೆ, ಗುರುತೋಂಟದ ಸಿದ್ಧಲಿಂಗನು ನಿನ್ನ ಅಭೀಷ್ಟವನ್ನು ಪೂರೈಸುವನು'' ಎಂದು ಹೇಳಿ ಆಕೆಗೆ ಭಸ್ಮಘಟ್ಟಿಯನ್ನು ಅನುಗ್ರಹಿಸಿ ಸ್ವಸ್ಥಾನಕ್ಕೆ ಹಿಂದಿರುಗಿದರು.

ಮಹಾರಾಣಿ ಮಲ್ಲಮಾಂಬೆಗೆ ಗುರುಗಳ ಆಶೀರ್ವಾದದಂತೆ ವರ್ಷ ತುಂಬವದರೊಳಗಾಗಿ ಪುತ್ರೋತ್ಸವವಾಯಿತು. ಆ ಮಗು ಗುರುಗಳ ಆಶೀರ್ವಾದದ ಭಸ್ಮಘಟ್ಟಿಯಿಂದ ಜನ್ಮವೆತ್ತಿದ ಕಾರಣ ಆ ಮಗುವಿಗೆ ''ಬೂದಿ ಬಸಪ್ಪನಾಯಕ''ನೆಂದು ನಾಮಕರಣವಾಯಿತು.

ಮುಂದೆ ಈತನ ಕಾಲದಲ್ಲಿ ಕೆಳದಿ ತುಂಬಾ ಪ್ರಸಿದ್ಧಿಗೆ ಬಂದಿತು.

ಕೆಳದಿಯ ಭೂಪಾಲರು ಈ ಅರ್ಧನಾರೀಶ್ವರರ ಲಿಂಗಪೂಜಾ ವಿನಿಯೋಗಕ್ಕೆ ಅನೇಕ ದಾನ-ದತ್ತಿಗಳನ್ನು ಹಾಕಿ ಕೊಟ್ಟರಲ್ಲದೆ ತಮ್ಮ ಸೀಮೆಯಿಂದ ಪರಸ್ಥಲಕ್ಕೆ ಹೋಗುವ ಯಾಲಕ್ಕಿ, ಶುಂಠಿ, ಮೆಣಸು ಮುಂತಾದ ಸರಕುಗಳಿಗೆ ಕಟ್ಟಲ್ಪಡುವ ಆದಾಯವನ್ನು ಸಹ ಭಕ್ತಿ ಕಾಣಿಕೆಯಾಗಿ ಅರ್ಪಿಸಿದರು.

ಸ್ವತಃ ಮಲ್ಲಮಾಂಬೆ ಹೆಣೆದ ಜರದ ಕಲಾಬತ್ತಿನ ಪೀತಾಂಬರ ಈಗಲೂ ಸಂಸ್ಥಾನಮಠದಲ್ಲಿದೆ. ಅದರಂತೆ ಮಲ್ಲಮಾಂಬೆ ವೀರಭದ್ರನಾಯಕ ಮೂರ್ತಿಗಳಿದ್ದ ಸುವರ್ಣದ ಹರಳು ಕೆತ್ತಿದ ಪಾದುಕೆಗಳೂ ಸಹ ಕೆಳದಿ ರಾಜ-ಮನೆತನದ ಭಕ್ತಿಯ ದ್ಯೋತಕವಾಗಿ ಈಗಲೂ ಸಂಸ್ಥಾನಮಠದಲ್ಲಿವೆ.

ಹೀಗೆ ಅರ್ಧನಾರೀಶ್ವರ ತ್ಯಾಗಿ-ಭೋಗಿಗಳೆಲ್ಲರ ಆರಾಧ್ಯ ದೈವನಾಗಿ ಭಕ್ತಿ ಜ್ಞಾನ ವೈರಾಗ್ಯಗಳು ಭಕ್ತಕೋಟಿಯಲ್ಲಿ ಪುನಃ ರಾರಾಜಿಸುವಂತೆ ಮಾಡಿ ಶಿವಾನುಭವ ಚರ, ಅನ್ನದಾನ ಚರಗಳಿಗೆ ಪುನಃ ಚೇತನವನ್ನು ಕೊಟ್ಟು ಪ್ರತಿಸಿದ್ಧಲಿಂಗನೆನಸಿ ಡಂಬಳ ಸಂಸ್ಥಾನಮಠದ ಶಿವಯೋಗ ಮಂಟಪದ ಗುಹೆಯಲ್ಲಿ ಶಿವ ಸಮಾಧಿಯನ್ನು ಹೊಂದಿದನು. ಆಶ್ಚರ್ಯವೆಂದರೆ ಗದ್ದುಗೆಯ ಬಾಗಿಲ ತೆರದಾಗ ಒಂದು ವಿಧವಾದ ಸುಗಂಧ ಮಯವಾದ ಪರಿಮಳ ಒಳಗಿಂದ ಬಂದು ದರ್ಶನಾರ್ಥಿಗಳ ಭಾವಮನಗಳನ್ನು ಪುನೀತವನ್ನಾಗಿ ಮಾಡುತ್ತಿದೆ.

ಈ ಗದ್ದುಗೆಯ ಸಾನಿಧ್ಯದಿಂದ ಡಂಬಳ ಪ್ರತಿ ಎಡೆಯೂರೆನಿಸಿ ಜಂಗಮ ಕ್ಷೇತ್ರವಾಗಿ ಮೆರೆದಿದೆ. ದೊರೆ ಶೀನಪ್ಪನಾಯಕನ ಸೇವಾರ್ಥವಾಗಿ ಈಗಲೂ ಮಾಘ ಶುದ್ಧ ಪೌರ್ಣಿಮೆಯಂದು ಮಹಾ ರಥೋತ್ಸವ ವೈಭವದಿಂದ ಜರಗುತ್ತದೆ.

■■

*

# ತ್ಯಾಗಜೀವಿ*

ಈಗ್ಗೆ ಹದಿನಾಲ್ಕು ವರುಷಗಳ ಹಿಂದಿನ ಮಾತು. ಆಗ ನಾನು ಶ್ರೀ ಸಿದ್ಧೇಶ್ವರ ಪುರಾಣ ಪ್ರವಚನಕ್ಕಾಗಿ ಸಂಶಿಯಲ್ಲಿ ಇದ್ದೆ. ಒಂದು ರಾತ್ರಿ ಪುರಾಣ ಸಾಗಿರುವಾಗ ಒಬ್ಬರು ಬಂದು ನನ್ನ ಮಂಚದ ಹತ್ತಿರ ಕುರ್ಚಿ ಹಾಕಿ 'ಸಿಂದಗಿ ಪಟ್ಟದ ದೇವರು ಬಂದರು' ಎಂದು ಹೇಳಿದರು. ಹೀಗೆ ಅವರು ಹೇಳುತ್ತಿರುವಂತೆಯೇ ಅವರ ಹಿಂದೆಯೇ ಅಷ್ಟು ಎತ್ತರವಲ್ಲದ, ಬಂಧುರ ಮೈಕಟ್ಟಿನ ಪಟ್ಟದ ದೇವರು ಮುಗುಳು ನಗೆ ಬೀರುತ್ತ ಆಗಮಿಸಿದರು. ನಾನು ಎಲ್ಲರೊಡನೆ ಎದ್ದು ನಿಂತು ಅವರನ್ನು ಸ್ವಾಗತಿಸಿ ಕುರ್ಚಿಯ ಮೇಲೆ ಅವರನ್ನು ಮೂರ್ತಗೊಳಿಸಿ ನಮಸ್ಕರಿಸಿ ಎದ್ದುನಿಂತೆ. ಪೂಜ್ಯರು ನನ್ನ ಬೆನ್ನ ಮೇಲೆ ವಾತ್ಸಲ್ಯದಿಂದ ಕೈಯಾಡಿಸುತ್ತ ''ಪೀಠ ಬಿಟ್ಟು ಏಕೆ ಎದ್ದೆ ? ಹೋಗು ! ಪ್ರವಚನ ಸಾಗಲಿ'' ಎಂದು ಅಪ್ಪಣೆ ಕೊಡಿಸಿದರು.

ಅದು ಅನಾದಿ ತೋಂಟದ ಸಿದ್ಧಲಿಂಗನ ಪುರಾಣ. ಅದನ್ನು ಶ್ರೀಗಳು ಒಳ್ಳೆ ಆಸಕ್ತಿಯಿಂದ ಆಲಿಸಿದರು. ನಾನು ಕೆಲ ಸಮಯದ ನಂತರ ಪುರಾಣವನ್ನು. ಅಷ್ಟಕ್ಕೇ ನಿಲ್ಲಿಸಿ ಉಳಿದ ಸಮಯವನ್ನು ಶ್ರೀಗಳವರ ಆಶೀರ್ವಚನಕ್ಕಾಗಿ ಕೊಟ್ಟು ಆ ಬಗ್ಗೆ ಶ್ರೀಗಳವರಲ್ಲಿ ವಿಜ್ಞಾಪಿಸಿಕೊಂಡೆ.

ಆಗ ಶ್ರೀಗಳವರು ಕೃಪಾದೃಷ್ಟಿಯಿಂದ ನನ್ನನ್ನು ನೋಡುತ್ತ ''ಮಹಾ ಸ್ವಾಮಿಯ ಪುರಾಣವೆಂದು ಕೇಳಲಿಕ್ಕೆ ಬಂದೆ. ನೀನು ನನಗೆ ಮಾತನಾಡಲು ಹೇಳಿ ಬಿಟ್ಟೆಯಲ್ಲ !'' ಎಂದು ತಮ್ಮ ಸಹಜ ಮಂದಹಾಸವನ್ನು ಬೀರುತ್ತ ನುಡಿದು ಆಶೀರ್ವಚನ ದಯಪಾಲಿಸಿದರು. ಶ್ರೀಗಳವರು ಹಾವೇರಿ ಶಿವಬಸವ ಮಹಾಸ್ವಾಮಿಗಳವರ ದೃಷ್ಟಾಂತಗಳನ್ನು ಕೊಟ್ಟು ''ಜಂಗಮ ಲಕ್ಷಣ ಹೀಗೆ ಇರಬೇಕು'' ಎಂದು ಶೃತಪಡಿಸಿದರು. ಒಬ್ಬ ಪಟ್ಟಾಧ್ಯಕ್ಷರ ಮುಖದಿಂದ ಜಂಗಮಮೂರ್ತಿಗಳ ಶ್ಲಾಘನೆ ಕೇಳಿ ನನಗೆ ತುಂಬಾ ಆಶ್ಚರ್ಯವಾಯಿತು. ನನಗೆ ಅವರ ಪರಿಚಯ ಆದದ್ದು ಅದೇ ಪ್ರಥಮ ಸಲ. ನಿಜಕ್ಕೂ ನಾನು ಅವರ ಸರಳ ಹೃದಯಕ್ಕೆ ಮಾರು ಹೋದೆ.

ಆನಂತರ ನನಗೆ ಅವರ ದರ್ಶನವಾದದ್ದು ಪಂಚಾಕ್ಷರ ಗವಾಯಿಗಳವರ ಪುಣ್ಯಾಶ್ರಮದಲ್ಲಿ. ಅದು ಕಲಬುರ್ಗಿ ಶ್ರೀ ಶರಣ ಬಸವೇಶ್ವರ ಪುರಾಣ ಮಂಗಲೋತ್ಸವದ ಸಂದರ್ಭ. ಪೂಜ್ಯ ಸಿಂದಗಿ ಪಟ್ಟಾಧ್ಯಕ್ಷರೇ ಅಂದಿನ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದರು. ಅಂದಿನ ಸಭೆಯಲ್ಲಿ ನಾನೂ ಒಬ್ಬ

---

* ಸಿಂದಗಿ ಪಟ್ಟಾಧ್ಯಕ್ಷರ ಅಭಿನಂದನಾ ಗ್ರಂಥದಿಂದ

ಉಪನ್ಯಾಸಕನಾಗಿದ್ದೆ. ಶ್ರೀಗಳು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ನಾನು ನನ್ನ ಉಪನ್ಯಾಸದಲ್ಲಿ ಪ್ರತಿಪಾದಿಸಿದ ವಿಷಯಗಳನ್ನೇ ಎತ್ತಿಕೊಂಡು ಮುಕ್ತ ಕಂಠದಿಂದ ನನ್ನನ್ನು ಪ್ರಶಂಸೆ ಮಾಡಿ ಪ್ರೋತ್ಸಾಹನೆ ನೀಡಿದರು.

ಮತ್ತೊಮ್ಮೆ ನೂತನ ಜಗದ್ಗುರುಗಳವರ ಪಟ್ಟಾಭಿಷೇಕ ಸಮಯ. ಆ ಪ್ರಸಂಗದಲ್ಲಿ ಒಂದು ಜಟಿಲ ಸಮಸ್ಯೆ ಉದ್ಭೂತವಾಯಿತು. ಆ ಸಮಸ್ಯೆ ಪರಿಹಾರಕ್ಕಾಗಿ ಹಿರಿಯ ಜಗದ್ಗುರುಗಳಾದ ಶ್ರೀ ಶಿವಕುಮಾರ ಪಟ್ಟಾಧ್ಯಕ್ಷರು ಸನ್ನಿಧಿಯವರ ಒಪ್ಪಿಗೆ ಪಡೆಯಬೇಕಾಗಿತ್ತು. ಮುಂದೆ ಶ್ರೀ ಸಿಂದಗಿ ಪಟ್ಟಾಧ್ಯಕ್ಷರು ನನ್ನನ್ನು ಕರೆಯಿಸಿ, ''ನೋಡು ತಮ್ಮಾ ! ಎಲ್ಲವೂ ಸರಿಯಾಗಿ ಸಾಗಿದೆ. ಇಂಥ ಸಮಯದಲ್ಲಿ ನಿಮ್ಮ ಜಗದ್ಗುರುಗಳು 'ಸಂಪ್ರದಾಯ'ವೆಂದು ಅದಕ್ಕೇ ಕಟ್ಟು ಬೀಳಬಾರದು. ಹೇಗಾದರೂ ಮಾಡಿ ನೀನು ನಿಮ್ಮ ಗುರುಗಳನ್ನು ಒಪ್ಪಿಸಿ ಈಗ ಬಂದಿರುವ ತೊಂದರೆಯನ್ನು ತಪ್ಪಿಸಿ ನನಗೆ ನಮ್ಮ ಪಾಠಶಾಲೆಗೆ ಬಂದು ತಿಳಿಸಬೇಕು. ನೀನು ಬರುವವರೆಗೂ ನಿನ್ನ ಹಾದಿಯನ್ನು ಕಾಯುತ್ತ ನಾನು ಅಲ್ಲಿಯೇ ಇರುತ್ತೇನೆ'' ಎಂದು ತಿಳಿಸಿ ತಮ್ಮ ಆಶ್ರಮದ ಕಡೆಗೆ ಅವರು ದಯಮಾಡಿಸಿದರು.

ಅದೇನೋ ನನ್ನ ಮೇಲೆ ಮಹಾಸ್ವಾಮಿಯ ಕೃಪೆ. ಹಿರಿಯ ಜಗದ್ಗುರುಗಳವರ ಭಿನ್ನಾಭಿಪ್ರಾಯವನ್ನು ಅವರಿಗೆ ಸರಿಯಾಗಿ ತಿಳಿಸಿ ಹೇಳುವುದರ ಮೂಲಕ ಅದನ್ನು ನಿವಾರಿಸಿ ಅವರ ಸಂಪೂರ್ಣ ಒಪ್ಪಿಗೆಯನ್ನು ಪಡೆದುಕೊಂಡು ನಾನು ಹಾಗೆಯೇ ನೇರವಾಗಿ ಆಶ್ರಮಕ್ಕೆ ಹೋಗಿ ಪಟ್ಟಾಧ್ಯಕ್ಷರಲ್ಲಿ ಶ್ರೀ ಜಗದ್ಗುರುಗಳವರು ಕೊಟ್ಟ ಒಪ್ಪಿಗೆಯನ್ನು ನಿವೇದಿಸಿಕೊಂಡೆ.

ಆಗ ಶ್ರೀ ಪಟ್ಟಾಧ್ಯಕ್ಷರಿಗೆ ಆದ ಆನಂದ ಅಷ್ಟಿಷ್ಟಲ್ಲ. ಅವರು ಆನಂದದ ಭರದಲ್ಲಿ ನನ್ನ ಎರಡೂ ಭುಜಗಳನ್ನು ಗಟ್ಟಿಯಾಗಿ ಹಿಡಿದು ಅಲ್ಲಾಡಿಸುತ್ತ ''ತಮ್ಮಾ! ಒಳ್ಳೆಯ ಕೆಲಸ ಮಾಡಿದೆ. ಬಹು ದೊಡ್ಡ ಸೇವೆ ನಿನ್ನಿಂದ ಸಲ್ಲಿತು. ಮಹಾಸ್ವಾಮಿ ನಿನಗೆ ಕೃಪೆ ಮಾಡಲಿ,'' ಎಂದು ಹೃದಯ ತುಂಬಿ ಹರಸಿದರು.

ನಂತರ ಶ್ರೀ ಪಟ್ಟಾಧ್ಯಕ್ಷರಿಗೆ ಗದುಗಿಗೆ ಆಗಮಿಸಿದಾಗಲೆಲ್ಲಾ ಶ್ರೀಮಠಕ್ಕೆ ಬಂದೇ ಹೋಗುತ್ತಿದ್ದರು. ಆದರೆ ನಾವು ಎಷ್ಟೇ ಬಿನ್ನವಿಸಿಕೊಂಡರೂ ಸ್ನಾನ ಪೂಜಾದಿಗಳನ್ನು ಮಾತ್ರ ಶ್ರೀಮಠದಲ್ಲಿ ತೀರಿಸಿಕೊಳ್ಳುತ್ತಿರಲಿಲ್ಲ. ಎಷ್ಟೇ ಹೊತ್ತಾದರೂ ಅವುಗಳಿಗಾಗಿ ತಮ್ಮ ಆಶ್ರಮಕ್ಕೇನೇ ದಯಮಾಡಿಸುತ್ತಿದ್ದರು.

ಒಮ್ಮೆ ನೂತನ ಜಗದ್ಗುರು ಸನ್ನಿಧಿಯವರು ಶ್ರೀ ಗೋಸಲ ಸಿದ್ಧೇಶ್ವರರ ಪವಿತ್ರ ಸ್ಥಾನವಾದ ಹರದನಹಳ್ಳಿಗೆ ದಯಮಾಡಿಸಿದ್ದರು. ಆಗ ನಾನೂ ಸನ್ನಿಧಿಯವರೊಡನೆ ಇದ್ದೆ. ಮರುಳುವಾಗ ಸನ್ನಿಧಿಯವರು ಹಾವೇರಿ ಪಾಠಶಾಲೆಗೆ ಇಳಿದರು. ಆಗ ಪೂಜ್ಯ ಪಟ್ಟಾಧ್ಯಕ್ಷರ ವಾಸ್ತವ್ಯ ಅಲ್ಲಿಯೇ ಇತ್ತು. ಒಂದೆರಡು ತಾಸು ಕಳೆದು ಸನ್ನಿಧಿಯವರು ಗದುಗಿಗೆ ಹೊರಟು ನಿಂತರು. ಆಗ ಪಾಠಶಾಲಾ ವಿದ್ಯಾರ್ಥಿಗಳು ಎರಡು ಚೀಲ ಒಣ ಮೆಣಸಿನಕಾಯಿಗಳನ್ನು ಕಾರಿನ ಲಗೇಜಿನಲ್ಲಿ ಹಾಕಿದರು. ಜಗದ್ಗುರುಗಳು ಪಟ್ಟದ

ದೇವರಿಗೆ ''ಇವು ನಮಗೆ ಬೇಡ, ತಮ್ಮ ಪಾಠಶಾಲಾ ಪ್ರಸಾದ ನಿಲಯಕ್ಕೇ ಇರಲಿ'' ಎಂದು ಎಷ್ಟೇ ಹೇಳಿದರೂ ಸಹ ಪಟ್ಟಾಧ್ಯಕ್ಷರು ಅವುಗಳನ್ನು ಹಾಕಿಸಿ ಕಳಿಸಿದರು. ಹೀಗೆ ಗದುಗಿನ ಸಂಸ್ಥಾನಮಠವು ಎಷ್ಟೇ ತಮ್ಮದೇ ಆಗಿದ್ದರೂ ಯಾವದೇ ಪ್ರತಿಫಲವನ್ನೂ ಗದುಗಿನ ಮಠದಿಂದ ಅವರು ಬಯಸಲಿಲ್ಲ. ನಿಸ್ಪ್ರಹ ಶಬ್ದಕ್ಕೆ ಅರ್ಥವನ್ನೇನಾದರೂ ಕಾಣಬೇಕಾಗಿದ್ದರೆ ನಾವು ಸಿಂದಗಿ ಪಟ್ಟಾಧ್ಯಕ್ಷರ ತ್ಯಾಗಮಯ ಜೀವನದಿಂದಲೇ ತಿಳಿಯಬೇಕು.

ಮತ್ತೊಮ್ಮೆ ಪೂಜ್ಯ ಪಟ್ಟಾಧ್ಯಕ್ಷರು ಎಂದಿನಂತೆ ಗದಗ ಸಂಸ್ಥಾನಮಠಕ್ಕೆ ಆಗಮಿಸಿದ್ದರು. ಅದು ಪ್ರಾತಃಕಾಲ ಸಮಯ, ಜಗದ್ಗುರು ಸನ್ನಿಧಿಯವರ ಲಿಂಗಾರ್ಚನೆ ಇನ್ನೂ ಮುಗಿದಿರಲಿಲ್ಲ. ಇದರಿಂದಾಗಿ ಪಟ್ಟಾಧ್ಯಕ್ಷರು ಪತ್ರಿವನದಲ್ಲಿ ಹೋಗಿ ಅಲ್ಲಿರುವ ಶಿಲಾ ಪೀಠದ ಮೇಲೆ ಮೂರ್ತಗೊಂಡರು. ಪಟ್ಟಾಧ್ಯಕ್ಷರು ಹೀಗೆ ಒಬ್ಬರೇ ಕುಳಿತಿರುವುದನ್ನು ನೋಡಿ ಹೊತ್ತು ಹೋಗುವುದಕ್ಕಾಗಿ ಅವರೊಡನೆ ಮಾತನಾಡಲು ನಾನೂ ಅಲ್ಲಿಗೆ ಹೋಗಿ ಅವರ ಪಾದದ ಸನ್ನಿಧಾನದಲ್ಲಿಯೇ ಕುಳಿತುಕೊಂಡೆ. ಹಾಗೆಯೇ ಅವರೊಡನೆ ಸಂಭಾಷಣೆ ಮಾಡುತ್ತ ಬುದ್ಧಿ ! ತಾವು ಬಹು ದೊಡ್ಡ ತ್ಯಾಗ ಮಾಡಿ ಪುಣ್ಯ ಕಟ್ಟಿಕೊಂಡಿರಿ. ಇಲ್ಲವಾದರೆ ನಮ್ಮ ಮಠ ಸಂಪೂರ್ಣವಾಗಿ ರಸಾತಳಕ್ಕೆ ಇಳಿಯುತ್ತಿತ್ತು ಎಂದು ವಿನಯಪೂರ್ವಕವಾಗಿ ಅವರಲ್ಲಿ ಅರಿಕೆ ಮಾಡಿಕೊಂಡೆ. ಅದಕ್ಕೆ ಅವರು ನನಗೆ ''ನೋಡು ತಮ್ಮಾ ! ನಮ್ಮ ಮಠಕ್ಕಾಗಿಯೇ ನಿಮ್ಮ ಸ್ವಾಮಿಯನ್ನು ಎಂ. ಎ. ದ ವರೆಗೆ ಓದಿಸಿದೆ. ನಿಜವಾಗಿಯೂ ನನಗೆ ನಿಮ್ಮ ಮಠಕ್ಕೆ ಅವರನ್ನು ಕೊಡಲು ಮನಸ್ಸು ಇರಲಿಲ್ಲ. ನಿನಗೆ ಗೊತ್ತಿರುವಂತೆ ಆ ಬಗ್ಗೆ ಹೇಳಲಿಕ್ಕೆ ಬಂದವರೊಡನೆ ನಿರ್ದಾಕ್ಷಿಣ್ಯವಾಗಿ ಜಗಳವಾಡಿದೆ. ಒಮ್ಮೆ ಭಕ್ತನೊಬ್ಬನ ಬಿನ್ನಹಕ್ಕಾಗಿ ಹಾನಗಲ್ಲ ತಾಲೂಕಿನ ಒಂದು ಹಳ್ಳಿಗೆ ಹೋಗಬೇಕಾಗಿತ್ತು, ಅದಕ್ಕಾಗಿ ಹಾನಗಲ್ಲಿಗೆ ಹೋಗಿ ಅಲ್ಲಿಂದ ಆ ಹಳ್ಳಿಗೆ ಹೋಗುವ ಬಸ್ಸನ್ನು ಹಿಡಿದೆ. ನಾನು ಬಸ್ಸನ್ನು ಏರಿ ಸೀಟಿಗಾಗಿ ಅತ್ತಿತ್ತ ನೋಡಿದಾಗ 'ಇಲ್ಲೇ ಸೀಟು ಇದೆ ಬಾ' ಎಂಬ ಗಂಭೀರ ಧ್ವನಿ ಕೇಳಿಸಿತು. ಅತ್ತ ನೋಡಿದಾಗ ಒಂದುನೂರಾ ಮೂವತ್ತೈದು ವರುಷ ಬಾಳಿ ಬದುಕಿದ ಜಟಾಧಾರಿಗಳಾದ ಪೂಜ್ಯ ಗುಬ್ಬಿ ಶ್ರೀಗಳವರು ಕಣ್ಣಿಗೆ ಬಿದ್ದರು. ಅವರಲ್ಲಿಗೆ ಹೋಗಿ ನಾನು ವಂದಿಸುತ್ತಿರುವಂತೆ ಅವರು ನನ್ನ ರಟ್ಟೆಯನ್ನು ಹಿಡಿದು ತಮ್ಮ ಪಕ್ಕದಲ್ಲಿಯೇ ಕುಳ್ಳಿರಿಸಿಕೊಂಡು, 'ಗದುಗಿನ ಮಠಕ್ಕೆ ನಿನ್ನ ಮಗನನ್ನು ಕೊಡುವುದಿಲ್ಲ ಎಂದು ಹಠ ಹಿಡಿದಿರುವಿಯಂತೆ ನಿಜವೇ?' ಎಂದು ನನ್ನನ್ನು ಕೇಳಿದರು. ಅದಕ್ಕೆ ನಾನು ಅವರಿಗೆ 'ಕೊಟ್ಟು ನಾನೇನು ಮಾಡಲಿ?' ನನ್ನ ಮಠಕ್ಕೆ ಯಾರು? ಎಂದು ಕೇಳಿದೆ. ಗುಬ್ಬಿ ಶ್ರೀಗಳವರ ಮುಖ ಗಂಭೀರವಾಯಿತು. ಅವರು ನನ್ನನ್ನು ಕುರಿತು ಸ್ವಲ್ಪ ಖಂಡಿತವಾಗಿಯೇ ಹೇಳಿದರು. 'ಆ ಹುಡುಗಾ ಯಾರು ಅಂತ ತಿಳಿದಿರುವಿ? ನಿನ್ನ ಮನೆಯಲ್ಲಿಯೇ ಹುಟ್ಟಿದ್ದಕ್ಕೆ ನಿನ್ನ ಮಗಾ ಅಂತೀದಿ ಏನು? ಅಂವಾ ಶ್ರೀ ಸಿದ್ಧಲಿಂಗನ ವಿರಕ್ತಶಿಷ್ಯರಲ್ಲಿ ಒಬ್ಬ ವಿರಕ್ತ ಈಗ

ಅವನು ಆ ಮಠಕ್ಕೆ ಕೊಡಲ್ಪಡಲಿಕ್ಕೆ ತೋಂಟದ ಸಿದ್ಧಲಿಂಗನ ಇಚ್ಛೆಯೇ ಕಾರಣ. ಇದಕ್ಕೆ ನೀನು ಅಡ್ಡ ಬಂದರೆ ಆ ಮಗಾ ನಿನಗೆ ದಕ್ಕುವದಿಲ್ಲ. ಇದ್ದ ಸಂಗತಿಯನ್ನು ನಾನು ತಿಳಿಸಿರುವೆ. ಇದರ ಮೇಲೆ ಮುಂದೆ ನಿನ್ನ ಇಚ್ಛೆ ಬಂದಂತೆ ಮಾಡು' ಎಂದು ಹೇಳಿ ಮೌನ ತಾಳಿದರು. ಇದನ್ನು ಕೇಳಿದ ನನಗೆ ಎದೆ ನಡುಗಿದಂಯಿತು. ಗುಬ್ಬಿ ಸ್ವಾಮಿಗಳು ನನಗೆ ತಿಳಿದು ಬಂದಂತೆ ತ್ರಿಕಾಲ ಜ್ಞಾನಿಗಳು. ಒಂದುನೂರಾ ಮೂವತ್ತೈದು ವರುಷ ಕಳೆದಿದ್ದರೂ ಅವರ ಹಲ್ಲುಗಳು ಬಿದ್ದಿಲ್ಲ. ಕಣ್ಣುಗಳು ಸರಿಯಾಗಿ ಕಾಣಿಸುತ್ತವೆ. ಕಿವಿಗಳು ಸರಿಯಾಗಿ ಕೇಳಿಸುತ್ತವೆ. ವೃದ್ಧಾಪ್ಯ ಅವರಿಗೆ ಸೋತಿದೆ. ಇಂಥವರ ಭವಿಷ್ಯವಾಣಿಯನ್ನು ನಿರಾಕರಿಸುವ ಧೈರ್ಯ ನನ್ನಲ್ಲಿ ಉಳಿಯಲಿಲ್ಲ. 'ಎಲ್ಲಿಯಾದರೂ ಮಗಾ ಬಾಳಿ ಬದುಕಲಿ' ಎಂಬ ನಿರ್ಧಾರವನ್ನು ಆಗ ಕೈಕೊಂಡುಬಿಟ್ಟೆ. ಮುಂದೆ ಗದಗ ಹುಬ್ಬಳ್ಳಿಯವರಿಗೆಲ್ಲ ಈ ನನ್ನ ಕೃತ ನಿಶ್ಚಯವನ್ನು ತಿಳಿಸಿಬಿಟ್ಟೆ'' ಎಂದರು. ಈ ಸುದೀರ್ಘವಾದ ರಹಸ್ಯ ವಿಚಾರವನ್ನು ಕೇಳಿದ ನನಗೆ ತುಂಬಾ ಸಂತೋಷವೆನಿಸಿದರೂ ಈ ದೆಸೆಯಲ್ಲಿ ಮಾಡಿದ ಪಟ್ಟಾಧ್ಯಕ್ಷರ ಮಹಾತ್ಯಾಗವನ್ನು ನೋಡಿ ನಾನು ಮೂಕವಿಸ್ಮಿತನಾದೆ.

ಈ ಸಲವೂ ನಾನು ಶ್ರಾವಣಮಾಸದಲ್ಲಿ ಸಿಂಗರಾಜ ಬಸವಪುರಾಣ ಪ್ರವಚನಕ್ಕೆ ಮತ್ತೆ ಸಂಶಿಗೆ ಹೋಗಿದ್ದೆ. ಬಿನ್ನಹಕ್ಕಾಗಿ ನಾನು ಯಾರ ಮನೆಗೆ ಹೋಗುತ್ತೇನೆಯೋ ಆ ಮನೆಯ ಶಿವಪೂಜಾ ಖೋಲಿಯಲ್ಲಿ ಶ್ರೀ ಸಿಂದಗಿ ಪಟ್ಟಾಧ್ಯಕ್ಷರ ಭಾವಚಿತ್ರವಿರುವುದನ್ನು ಕಂಡೆ. ಇದು ಭಕ್ತರ ಮೇಲಿದ್ದ ಪಟ್ಟದ್ದೇವರ ಪವಿತ್ರ ಪ್ರಭಾವಕ್ಕೆ ಒಂದು ನಿದರ್ಶನ. ಸಂಶಿಯಲ್ಲಿ ಪಟ್ಟಾಧ್ಯಕ್ಷರ ಶಿಷ್ಯರ ಮನೆಗಳಲ್ಲೆಲ್ಲ ಆಚಾರ–ವಿಚಾರಗಳು ಅವರ ಪವಿತ್ರ ಸ್ಮಾರಕಗಳಾಗಿ ಈಗಲೂ ಉಳಿದಿವೆ. ಭಕ್ತರಲ್ಲಿ ಗುರು–ಜಂಗಮ ಭೇದ ಇಲ್ಲದಿರುವದು ಪಟ್ಟಾಧ್ಯಕ್ಷರು ಭಕ್ತರಲ್ಲಿ ಬಿಟ್ಟು ಹೋದ ಬಹು ದೊಡ್ಡ ಕೊಡುಗೆ ಯಾಗಿದೆ.

ಉಪ್ಪಿನ ಬಸಪ್ಪನವರು ಪಟ್ಟಾಧ್ಯಕ್ಷರ ಆಪ್ತ ಶಿಷ್ಯರಲ್ಲಿ ಒಬ್ಬರು. ಮೊದಲು ಕೇವಲ ಸಾಮಾನ್ಯ ಸ್ಥಿತಿಯಲ್ಲಿದ್ದ ಅವರು ಪಟ್ಟಾಧ್ಯಕ್ಷರ ಅನುಗ್ರಹದಿಂದಾಗಿಯೇ ಇಂದು ಗಣ್ಯ ಶ್ರೀಮಂತರೆನಿಸಿದ್ದಾರೆ. ಇದನ್ನು ಅವರೇ ನನಗೆ ಒಳ್ಳೇ ಭಾವ ಪೂರ್ಣವಾಗಿ ಹೇಳಿದರು.

ಮೊದಲ ಸಲ ಅವರ ಮನಗೆ ಬಿನ್ನಹಕ್ಕಾಗಿ ಹೋದಾಗ ಅವರ ಶಿವಪೂಜಾ ಖೋಲಿಯಲ್ಲಿ ಕಾವಿ ಅರಿವೆಯ ಗುಂಪನ್ನು ನೋಡಿ ಮನೆಯವರಿಗೆ ಅದೇನೆಂದು ಕೇಳಿದೆ. ಅದಕ್ಕೆ ಅವರು ''ಅವು ಲಿಂಗೈಕ್ಯ ಸಿಂದಗಿ ಪಟ್ಟಾಧ್ಯಕ್ಷರ ಮಡಿ ಬಟ್ಟೆಗಳು'' ಎಂದು ಹೇಳಿದರು.

ತಮ್ಮ ಗುರುಗಳು ಮರಳಿಬಾರದ ದಾರಿಯಲ್ಲಿ ಹೋಗಿದ್ದರೂ ಆ ಬಟ್ಟೆಗಳನ್ನು ಈಗಲೂ ಕಾದಿಟ್ಟಿರುವ ಅವರ ಮುಗ್ಧ ಭಕ್ತಿಯನ್ನು ನೋಡಿ ನನ್ನ ಹೃದಯ ಕಿವಿಚಿ ದಂತಾಯಿತು. ಭಕ್ತರ ಮೇಲಿದ್ದ ಪಟ್ಟಾಧ್ಯಕ್ಷರ ದಿವ್ಯ ಪ್ರಭಾವಕ್ಕೆ ಇದಕ್ಕಿಂತಲೂ ಬೇರೆ ನಿದರ್ಶನ ಇನ್ನೇನು ಬೇಕು ?

■■

*

## ಶ್ರೀ ಹಾಳಕೇರಿ ಅನ್ನದಾನಸ್ವಾಮಿಗಳ ಪುರಾಣ ಪ್ರವಚನಗಳು*

**ಶ್ರೀಗಳ ವ್ಯಕ್ತಿತ್ವ :**

ಹಾಳಕೇರಿ ನಿರಂಜನ ಪೀಠಕ್ಕೆ ಉಜ್ವಲವಾದ ಪರಂಪರೆಯಿದೆ. ಅದರ ಘನತೆಯನ್ನು ಅಚ್ಚಳಿಯದಂತೆ ಕಾಯ್ದುಕೊಂಡು ಬಂದ ಶ್ರೇಯಸ್ಸು ಲಿಂಗೈಕ್ಯ ಶ್ರೀಮದನ್ನದಾನ ಮಹಾಸ್ವಾಮಿಗಳವರಿಗೆ ಸಲ್ಲುತ್ತದೆ.

ಅವರ ಸ್ಮರಣೆಯಾಗುತ್ತಲೇ ಅವರ ದಿವ್ಯ ವ್ಯಕ್ತಿತ್ವ ನಮ್ಮ ಕಣ್ಣ ಮುಂದೆ ಬಂದು ನಿಲ್ಲುತ್ತದೆ. ಅವರ ಘನವಾದ ವ್ಯಕ್ತಿತ್ವಕ್ಕೆ ಮಾನದಂಡದಂತಿರುವ ಗೋದೀಬಣ್ಣದ ಆ ಆಜಾನುಬಾಹು ಶರೀರ, ವಾತ್ಸಲ್ಯ ತುಂಬಿದ ಆ ನೇತ್ರದ್ವಯಗಳು, ಮನಸ್ಸಿನ ಏಕಾಗ್ರತೆಯನ್ನು ಸೂಚಿಸುವಂತಿರುವ ಅವರ ನೇರವಾದ ನಾಸಾದಂಡ, ಎಂಥವರನ್ನು ತಮ್ಮವರನ್ನಾಗಿಸುವ ಆ ಗಂಭೀರ ಧ್ವನಿ, ಇವುಗಳು ಭಕ್ತರನ್ನು ದರ್ಶನಮಾತ್ರದಿಂದ ಭಕ್ತಿ ಪುಲಕಿತರನ್ನಾಗಿ ಮಾಡುತ್ತಿದ್ದವು.

ಮೈಮೇಲೆ ಪಾದದವರೆಗೂ ಇಳಿಬಿದ್ದ ಕಾವಿಬಣ್ಣದ ಮಹಾಲಿಂಗ ಕಪನಿ, ಪುಸ್ತಕದ ಮೇಲೆ ಅದೇ ಬಣ್ಣದ ಪಾವುಡ. ಹಣೆಯ ಮೇಲೆ ಭಸ್ಮ ಪ್ರಪುಂಡ್ರ, ಕೊರಳಲ್ಲಿ ರುದ್ರಾಕ್ಷ ಕಂಠಮಾಲೆ, ಪಾದಗಳಲ್ಲಿ ಹಾವುಗೆಗಳು, ಹಸ್ತದಲ್ಲಿ ಆಳೆತ್ತರದ ನಾಗಬೆತ್ತ ಈ ಎಲ್ಲ ಶಿವಲಾಂಛನಗಳಿಂದ ಕೂಡಿದ ಅಜ್ಜ ಅವರು ಶ್ರದ್ಧಾಳು ಭಕ್ತರಿಗೆ ಸಾಕ್ಷಾತ್ ಅಪರ ಪರಶಿವನಾಗಿ ತೋರುತ್ತಿದ್ದರು.

**ಈ ನಾಡಿನ ದೇವರು :**

ಇದೀಗ ಲಿಂಗೈಕ್ಯ ಅನ್ನದಾನಮಹಾಸ್ವಾಮಿಗಳವರ ಶತಮಾನೋತ್ಸವ ಸಂಭ್ರಮದಿಂದ ಜರುಗಲಿದೆ. ಪೂಜ್ಯ ಅಜ್ಜ ಅವರ ವಿಯೋಗದಿಂದ ಪರಿತಪಿಸುತ್ತಿದ್ದ ಭಕ್ತ ವಾರಿಧಿಗೆ ಇದೊಂದು ಚಂದ್ರೋದಯ.

ಶತಮಾನೋತ್ಸವದ ಅಂಗವಾಗಿ 'ಅನ್ನದಾನ ಜ್ಯೋತಿ' ದಿನಾಂಕ : ೯–೨–೮೯ ರಂದು ಹಾಳಕೇರಿಮಠದಿಂದ ಹೊರಡುವ ಪೂರ್ವದಲ್ಲೆ ಒಂದು ಪ್ರಕಟಣೆ ಹೊರಟಿತು. ಅದರಲ್ಲಿ ಲಿಂಗೈಕ್ಯ ಅಜ್ಜ ಅವರನ್ನು ಕುರಿತು ''ಈ ನಾಡಿನ ದೇವರಾದ'' ಎಂಬ ಒಂದು ಮಾತನ್ನು ಬರೆಯಲಾಗಿದ್ದು, ಆ ಮಾತು ಸಮಸ್ತ ಭಕ್ತ ಕೋಟಿಯ ಅಂತರಂಗದ ಭಾವನೆಯನ್ನೇ ಬಿಚ್ಚಿ ಇಟ್ಟಂತಾಗಿದೆ. ಇಷ್ಟೇ ಅಲ್ಲ ಅದು ಅವರ ದಿವ್ಯ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯೇ ಆಗಿದೆ.

---

* ಅಪ್ರಕಟಿತ ಲೇಖನ

ವೀರಶೈವ ಸಿದ್ಧಾಂತದಂತೆ ''ಇಷ್ಟಲಿಂಗ'' ಭಕ್ತನ ಸ್ವರೂಪ, ಅದನ್ನು ಪ್ರಧಾನ ಮಾಡಿದ 'ಗುರು' ಭಕ್ತನ ನೂತನ ಜನ್ಮಕ್ಕೆ ಕಾರಣನಾಗುವದರಿಂದ ಅವನು ತಂದೆ. ಅಂತೆಯೇ ವೀರಶೈವರು ಗುರುಕರಂಜಾತರು. ಇನ್ನು ಈ ಇಷ್ಟಲಿಂಗಕ್ಕೆ ಚೇತನ ಸ್ವರೂಪನಾದ ಜಂಗಮನೇ ದೇವರು.

ಜಂಗಮನೇ ದೇವರೆನ್ನುವ ಬಗೆಗೆ ಮೈಲಾರ ಶರಣರು ''ಐ ವರಧಿ ದ್ಯೆ ಜಂಗಮ ದೇವ'' ನೆಂದೂ ಮುಪ್ಪಿನ ಷಡಕ್ಷರ ಕವಿಗಳು ''ಶಿವಯೋಗಿ ಸಾಕ್ಷಾತ್ ಶಿವನಾದ ಕಾರಣ ಅವನಿ ಭೋಗಗಳವರೆ ತೃಣಗಾಂಬವು'' ಎಂದು ತಮ್ಮ ತಮ್ಮ ಕೃತಿಗಳಲ್ಲಿ ವಿವರಿಸಿದ್ದಾರೆ. ಅದರಂತೆ ಸಿದ್ಧಾಂತ ಶಿಖಾಮಣಿಯು ''ಜಂಗಮ ಮಹಾತ್ಮ್ಯೆ'' ಸ್ಥಳದಲ್ಲಿ ''ಶಿವಯೋಗಿ'' ಎಂಬ ಪದವನ್ನು ಜಂಗಮ ಶಬ್ದಕ್ಕೆ ಪರ್ಯಾಯವಾಗಿ ಉಪಯೋಗಿಸಿದುಂಟು. ಅಂದರೆ ಶಿವಯೋಗಿ ಪದಕ್ಕೆ ಜಂಗಮನೇ ವಾಚ್ಯನಾಗಿದ್ದಾನೆ ಎಂಬುದು ಅದರ ಅಭಿಮತ ''ಶಿವಯೋಗೇನ ಸಂತೃಪ್ತೇತೃಪ್ತೋಭವತ ಶಂಕರಃ'' ಎಂಬುದಂತೂ ತುಂಬಾ ಪ್ರಸಿದ್ಧವಿದೆ. ಹೀಗೆ ಮೇಲ್ಕಂಡ ಪ್ರಮಾಣಗಳು ''ಜಂಗಮನೇ ಶಿವ'' ನೆಂಬುದನ್ನು ಬಲವಾಗಿ ಪ್ರತಿಪಾದಿಸುತ್ತವೆ.

ಆದರೆ ಪೂಜ್ಯ ಅಜ್ಜ ಅವರು ಮೊದಲು ಹೇಳಿದಂತೆ ''ಈ ನಾಡಿನ ದೇವರು'' ಆದದ್ದು ಮೇಲ್ಕಂಡ ಸೈದ್ಧಾಂತಿಕ ವಿಚಾರಗಳಿಂದಲ್ಲ, ಅವರು ತಮಗಾದ ನಿರಾಭಾರಿ ಚರಪಟ್ಟಾಧಿಕಾರದ ಪವಿತ್ರ ಸಂಸ್ಕಾರವನ್ನು ತಮ್ಮ ಪ್ರತ್ಯಕ್ಷ ಆಚರಣೆಯಲ್ಲಿ ತಂದರು. ಧರ್ಮ, ಬಾಹ್ಯ ಹಾಗೂ ಅಭ್ಯಂತರ ಎಂದು ಎರಡು ವಿಧವಾಗಿದೆ. ಅಂದರೆ ಬಾಹ್ಯದಲ್ಲೆ ಪಡೆದುಕೊಂಡು ಧಾರ್ಮಿಕ ಸಂಸ್ಕಾರ ಅಂತರಂಗಕ್ಕೆ ಇಳಿದು ಬರಬೇಕು. ಈ ಕಾರಣದಿಂದಲೇ ''ಧರ್ಮಂ ಚರ'' ಎಂದು ಹೇಳಲಾಗುತ್ತದೆ.

ಇಷ್ಟೇ ಅಲ್ಲ ಪೂಜ್ಯ ಅಜ್ಜ ಅವರು ''ಜಂಗಮ ತತ್ತ್ವವಿರುವದೇ ಭಕ್ತರಿಗಾಗಿ'' ಎಂಬ ಮೂಲಭೂತ ತತ್ತ್ವವನ್ನು ನಂಬಿ ಭಕ್ತರಬದುಕಿನೊಡನೆ ಸ್ಪಂದಿಸಿದರು. ಸಂವೇ ದನಾಶೀಲರಾದ ಅವರು ಭಕ್ತರ ಸುಖದುಃಖಗಳಲ್ಲಿ ಪಾಲುಗಾರರಾದರು. ಯಾವ ಭಕ್ತನನ್ನು ಕೇಳಿದರೂ ಅವರೆಲ್ಲರ ಮುಖದಿಂದ ಬರುವ ಒಂದೇ ಒಂದು ಮಾತು ಅದು ''ಅಜ್ಜಾ ಅವರು ನಮ್ಮ ಮೇಲೆ ಬಹಳ ಪ್ರೀತಿ'', ಹೀಗಾಗಿ ಅವರು ಪ್ರತಿ ಭಕ್ತನಿಗೆ ಒಬ್ಬ ''ಆಪ್ತ ಹಿತಚಿಂತಕ''ರಾದರು. ಇದೇ ಅವರು ''ಈ ನಾಡಿನ ದೇವರಾಗಲಿಕ್ಕೆ'' ಕಾರಣವಾಯಿತು.

**ಲಿಂಗಪೂಜಾನುಷ್ಠಾನ :**

ಪೂಜ್ಯ ಅಜ್ಜ ಅವರು ಹಾಳಕೇರಿ ಪೀಠವನ್ನು ವಹಿಸಿಕೊಂಡ ಕೂಡಲೇ ಮೊದಲು ಮಾಡಿದ ಕಾರ್ಯ ಸಮಾಜ ಸೇವೆಯಲ್ಲ, ತಮ್ಮ ವೈಯಕ್ತಿಕ ಆತ್ಮೋನ್ನತಿ. ಮೊದಲು ತನ್ನನ್ನು ತಾನು ತಿದ್ದಿಕೊಂಡು ಅನಂತರ ಜಗತ್ತನ್ನು ತಿದ್ದಬೇಕೆನ್ನುವದು ಶ್ರೀ ಅಜ್ಜ ಅವರು ಹಾಕಿಕೊಟ್ಟ ಮೇಲ್ಪಂಕ್ತಿ. ಇದನ್ನೇ ಗೀತೆ ''ಉದ್ಧರೇದಾತ್ಮ

ದಾತ್ಮಾನಂ'' ಎಂದು ಹೇಳುತ್ತದೆ. ಈ ದೃಷ್ಟಿಯಿಂದ ಪೂಜ್ಯ ಅಜ್ಜ ಅವರ ಜೀವನದ ಪೂರ್ವಾರ್ಧ ಕೇವಲ ಲಿಂಗ ಪೂಜಾನುಷ್ಠಾನದಲ್ಲೆ ಕಳೆದು ಹೋಗಿದೆ. ಕೋಡಿಕೊಪ್ಪ, ಶಾಂತೇಶ್ವರ ಜಾಲಿಹಾಳ ಮುಂತಾದವುಗಳಲ್ಲಿ ಮಾಡಿದ ಅವರ ಘೋರ ಅನುಷ್ಠಾನದಿಂದ ಅವರ ಮನಸ್ಸು ಶಿವಾಕಾರವಾಗಿ ಕೊನೆಗೆ ಶಿವನೇ ತಾವಾದರು.

ಲೋಕದಲ್ಲಿ ಅನ್ನದಾನ, ಗೋದಾನ, ಭೂದಾನ, ಹಿರಣ್ಯದಾನ ಮುಂತಾದವುಗಳನ್ನು ಮಾಡಿದವರುಂಟು. ಆದರೆ ತಮ್ಮ ತಪಃ ಶಕ್ತಿಯನ್ನೇ ಲೋಕ ಹಿತಾರ್ಥವಾಗಿ ಧಾರೆಯರೆದವರು ವಿರಳ, ಅಂಥವರಲ್ಲಿ ಪೂಜ್ಯ ಅಜ್ಜ ಅವರು ಅಗ್ರಗಣ್ಯರು.

**ಪುರಾಣಗಳ ಮೂಲಕ ಜನಜಾಗೃತಿ :**

ಇನ್ನೊಂದು ವಿಶೇಷ ಪೂಜ್ಯ ಅಜ್ಜ ಅವರು ಎಲ್ಲಿಯೇ ಅನುಷ್ಠಾನ ಕೈಕೊಳ್ಳಲಿ ಅಲ್ಲಿ, 'ಪುರಾಣ' ನಡೆಯಲೇಬೇಕು. ಏಕೆಂದರೆ ಜನಜಾಗೃತಿಗೆ ಪುರಾಣ ಪ್ರವಚನಗಳೇ ಪ್ರಬಲ ಸಾಧನಗಳೆಂದು ನಂಬಿದವರವರು. 'ಪುರಾಣ'ಗಳೆಂದರೆ 'ಕಾವ್ಯ'ಗಳೆ, ಅವುಗಳು 'ಚಂಪೂ' ಆಗಿರಬಹುದು. ಇಲ್ಲವೇ 'ಷಟ್ಪದಿ' ಅಥವಾ ಸಾಂಗತ್ಯ ವಾಗಿರಬಹುದು. ಆದರೆ ಎಲ್ಲ ಕಾವ್ಯಗಳೂ ಪುರಾಣಗಳಲ್ಲ. ಕಾವ್ಯೊದ್ದೇಶವನ್ನು ಕುರಿತು ಮಮ್ಮಟ ತನ್ನ ಕಾವ್ಯ ಪ್ರಕಾಶದಲ್ಲಿ ಕೀರ್ತಿ, ಧನ, ಲೋಕವ್ಯವಹಾರ, ಅಮಂಗಳನಿವಾರಣೆ, ಪರಮಾನಂದ, ಕಾಂತಾಸಮ್ಮಿತದ ಉಪದೇಶ, ಇವು ಆರು ಕಾವ್ಯ ಪ್ರಯೋಜನಗಳೆಂದು ಅವನ ಅಭಿಪ್ರಾಯ. ಇದರಲ್ಲಿ ಮೊದಲಿನ ಮೂರು ಲೌಕಿಕವಾದರೆ, ಕೊನೆಯ ಮೂರು ಪಾರಮಾರ್ಥಿಕವಾಗಿವೆ. ಕೀರ್ತಿ, ಧನ ಮತ್ತು ಲೋಕ ವ್ಯವಹಾರ ಇವುಗಳ ಆಮಿಷಕ್ಕೆ ಬಲಿಯಾದ ಕವಿ ಪ್ರಪಂಚಕ್ಕೆ ಸನ್ಮಾರ್ಗದರ್ಶನ ಮಾಡಿಸಲಾರ.

ಏಕೆಂದರೆ, ಈ ಜಗತ್ತು ಸತ್ವ, ರಜ, ತಮಗಳಿಂದ ಕೂಡಿಕೊಂಡು ತ್ರಿಗುಣಾತ್ಮಕವೆನಿಸಿದೆ. ಅಂದರೆ ಮೂರರಲ್ಲಿ ಎರಡು ಭಾಗ 'ದೋಷ' ಒಂದು ಭಾಗ 'ಗುಣ' ಹೀಗಿರುತ್ತದೆ. ಈ ರೀತಿ ಗುಣ ದೋಷಗಳಿಂದ ಕೂಡಿಕೊಂಡ ಈ ಜಗತ್ತಿನಲ್ಲಿಯ ಪ್ರತಿಯೊಂದು ವ್ಯಕ್ತಿಯಲ್ಲಿಯೂ ಈ ಗುಣದೋಷಗಳು ಆಯಾ ಪ್ರಮಾಣದಲ್ಲಿ ಇದ್ದೇ ಇರುತ್ತವೆ.

ಮೇಲೆ ಹೇಳಿದಂತೆ ಕಾರ್ಯವಶನಾದ ಕವಿ ಸ್ವಯೋಜನಾರ್ಥವಾಗಿ ತನಗೆ ಆಶ್ರಯದಾತರಾದವರನ್ನು, ಅವರು ಹೇಗಿದ್ದರೂ ಅವರನ್ನು ಇಂದ್ರ, ಚಂದ್ರ ಎಂದು ಹೇಳಬೇಕಾಗುತ್ತದೆ. ಇದರಿಂದ ಮೇಲೆ ಹೇಳಿದಂತೆ ಮಮ್ಮಟ ಕೊನೆಯ ಮೂರು ಪ್ರಯೋಜನಗಳು ಮಾತ್ರ ಇಲ್ಲೆ ಸಫಲವಾಗುವದಿಲ್ಲ. ಕಾವ್ಯ ಲಕ್ಷಣಗಳಿಂದ ಕೂಡಿಕೊಂಡು ಗುಣಮಟ್ಟದಲ್ಲಿ ಅದು ಎಷ್ಟೇ 'ಪ್ರೌಢಕಾವ್ಯ'ವಾಗಿದ್ದರೂ ಅದು 'ಸತ್ಕಾವ್ಯ' ವೆನಿಸುವುದಿಲ್ಲ.

'ಕವಿತ್ವ' ಒಂದೇ ಜನ್ಮದಲ್ಲಿ ಸಾಧಿಸಿದ ಸಿದ್ಧಿಯಲ್ಲ. ಅದು ಅನಂತ ಜನ್ಮಾಂತರಗಳಲ್ಲಿ ಅರ್ಜಿಸಿದ ಪುಣ್ಯದ ಫಲ. ಅದರಲ್ಲಿ 'ಸತ್ಕಾವ್ಯ' ನಿರ್ಮಾಣಕ್ಕೆ

ಉಮೇಶನೊಲ್ಮೆಯೇ ಮುಖ್ಯ ಎಂಬುದನ್ನು ಮಹಾಕವಿ ಷಡಕ್ಷರಿ ತನ್ನ ಶಬರ ಶಂಕರ ವಿಳಾಸದಲ್ಲಿ

> ''ಬಹುತರ ಜನ್ಮಕೋಟಿಗಳೊಳಾರ್ಜಿಸಿದುತ್ತಮ ಪುಣ್ಯದೇಳ್ಗೆಯಿಂ
> ಮಹಿಯೊಳಿ 'ಸತ್ಕವಿತ್ವ' ದಿ ವಿಚಾರಣೆ ಸಾಗು ನಮದೀ ಗಾಮದ್ಯತಾ
> ಮಹಸುಖಮಂಲಸತ್ಕವಿಗೆ ಸಾರ್ಚುಗು ಮುಜ್ವಳ ಕೀರ್ತಿಯಂಸದಾ''
> ಮಹಿತ ಪದಾರ್ಥಮಂ ಕುಡುಗುಮೀಶ್ವರನೊಲ್ಮೆಯನುಂಟು ಮಾಡುಗುಂ ॥

ಎಂದು ವಿಶದಪಡಿಸುತ್ತಾನೆ. ಈ ಕವಿಯ ದೃಷ್ಟಿಯಲ್ಲಿ ಶಿವಪರವಾದ ಕಾವ್ಯವೇ 'ಸತ್ಕಾವ್ಯ' ಅಂತೆಯೇ ಅವನು

> ''ಅದರಿಂದ ಮಹಿತಮಹಿಮಾ
> ಸ್ಪದನಂ ಶಿವನಂತದೀಯ ಶರಣಾವ್ರಜಮಂ ॥
> ಪಡೆದು ಮುದವೊದವೆ ಬಲ್ಲಂ
> ದದೆನುಹಿಪಂ ನುಹಿಸನುಳಿದ ಸುರರಂ ನರರಂ ॥
>
> – ಷಡಕ್ಷರಿ ದೇವ

ಎಂದು ಪ್ರತಿಜ್ಞೆಗೈದಿದ್ದಾನೆ. ಇಂಥ ಮಹಾ ಆದರ್ಶವನ್ನು ಹಾಕಿ ಕೊಟ್ಟವರಲ್ಲಿ ಹರಿಹರನೇ ಮೊದಲಿಗ.

> ''ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಪದ್ಯಮಂ
> ತನಗಿಂದ್ರ, ಚಂದ್ರ, ರವಿ, ಕರ್ಣ ದಧೀಚಿ, ಬಲೀಂದ್ರನೆಂದು - ತಾ
> ನನವರತ ಪೊಗಳ್ದುಂ ಕೆಡಬೇಡಲೆ ಮಾನವನೀನಹರ್ನಿಶಂ
> ನನೆಪೂಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಪಂಪೆಯಾಳ್ದನಂ ॥

ಈ ಮಹಾ ಉದ್ದೇಶ ಮುಂದಿನ ಕವಿಗಳ ಮೇಲೆ ಎಷ್ಟು ಪ್ರಭಾವ ಬೀರಿತೆಂಬುದನ್ನು ಮನಗಾಣಬಹುದಾಗಿದೆ.

ಈ ರೀತಿ ಶಿವಕವಿಗಳು ಹಿಡಿದ ಮಾರ್ಗವೇ ಶಿವತತ್ತ್ವಪದ ಅವರ ಕಾವ್ಯೋದ್ದೇಶ ಜನತೆಯನ್ನು ಈ ಮಾರ್ಗದಲ್ಲಿ ಕೊಂಡೊಯ್ಯುವುದು. ಏಕೆಂದರೆ ತಮ್ಮ ಮೂಲಗುರಿಯತ್ತ ಸಾಗುವ ಜನತೆಗೆ ದಾರಿಯೇ ತಪ್ಪಿದೆ. ಅದಕ್ಕಾಗಿಯೇ ದಾಸವರೇಣ್ಯರಾದ ಪುರಂದರದಾಸರು ''ದಾರಿ ಯಾವುದಯ್ಯ ವೈಕುಂಠಕ್ಕೆ'' ಎಂದು ಕೇಳಿರಬೇಕು. ಏಕೆಂದರೆ ಶರಣರು ''ಎನಗೆ ಸುತ್ತಿದ ಮಾಯಾ ಪ್ರಪಂಚ'' ಎಂದು ಹೇಳಿದಂತೆ ಇದು ''ಮಾಯಾ ಪ್ರಪಂಚ'' ಮಾಯೆ ''ಎಂದರೆ ಶ್ರೀ ನಿಜಗುಣರು ಹೇಳುವಂತೆ'' ಅಲ್ಲದುದರಲ್ಲೆ ಅಹುದೆಂಬ ಕ್ಷಣವೇ ಮಾಯೆ''.

ಈ ಜಗತ್ತು ಪಂಚವಿಷಯಗಳಿಂದ ಕೂಡಿಕೊಂಡಿದೆ. ಅಂತೆಯೇ ಇದನ್ನು ''ಪ್ರಪಂಚ'' ಎಂದು ಕರೆಯುತ್ತದೆ. ಈ ವಿಷಯಗಳ ಆಕರ್ಷಣೆ ಎಷ್ಟು ಬಲವತ್ತರವಾಗಿದೆ ಎಂದರೆ ''ವಿಷಯವೆಂಬ ಹಸಿರು ಪರಿಸದಿರಯ್ಯ ಪಶುವೇನು ಬಲ್ಲದು ಹಸಿರೆಂದೆಳೆಸುವದಾ'' ಎಂದು ಶ್ರೀ ಬಸವಣ್ಣನವರೇ ಹೇಳಬೇಕಾಯಿತು.

ವಿಷಯಗಳ ಪ್ರಾರಂಭದಲ್ಲೆ ಹಿತವಾಗಿ ತೋರಿ ಪರಿಣಾಮದಲ್ಲಿ ವಿಷವಾಗಿ ಬಿಡುತ್ತದೆ. ಆದರೂ ಜೀವಿಗಳಿಗೆ ವಿಷಯ ವ್ಯಾಮೋಹ ಬಿಟ್ಟಿಲ್ಲ. ಇದೇ ''ಮಾಯೆ''ಯ ಪರಿಣಾಮ.

ಅಗ್ನಿಕುಂಡದಿಂದ ಹಾರಿ ಬಂದ ಕಿಡಿಗಳಂತೆ ಸಕಲ ಜೀವಿಗಳು ಪರಮಾತ್ಮನ ಅಂಶೀಭೂತರೇ ಆಗಿದ್ದಾರೆ. ಅಗ್ನಿ ಹಾಗೂ ಅದರ ಕಿಡಿಗಳಂತೆ ಅಂಶಿ ಹಾಗೂ ಅಂಶಗಳಲ್ಲಿ ಭೇದವಿಲ್ಲ. ಕಿಡಿ ಚಿಕ್ಕದಾಗಿರಬಹುದು. ಆದರೆ ಅದಕ್ಕೆ ಒಂದು ಅವಕಾಶ ಸಿಕ್ಕರೆ ಅದೇ ಒಂದು ಅಗ್ನಿ ಜ್ವಾಲೆಯಾಗಿ ಪರಿಣಮಿಸುವದು. ಅದರಂತೆ ಶಿವನ ಅಂಶನಾದ ಜೀವನಿಗೆ ಒಂದು ಅವಕಾಶ ಸಿಕ್ಕಲ್ಲಿ ಅವನೇ ಶಿವನಾಗಬಲ್ಲ.

ಆದರೆ ಜೀವಾತ್ಮನು ದೇಹ ಧರಿಸಿ ಬಂದ ನಂತರ ದೇಹವೇ ತಾನಂಭಾವ ಉಂಟಾಗಿ ಅವನಿಗೆ ಆತ್ಮ ವಿಸ್ಮೃತಿಯಾಗಿ ಬಿಡುತ್ತದೆ. ಅದಕ್ಕಾಗಿಯೇ ಶ್ರೀ ನಿಜಗುಣರು ''ಆರು ನಾನೆಂದು ವಿಚಾರಿಸು'' ಎಂದು ಹೇಳಬೇಕಾಯಿತು. ಹೀಗೆ ಎಲ್ಲಿಯವರೆಗೆ ಜೀವನಿಗೆ ಸ್ವರೂಪಕನ'' ಉಂಟಾಗುವದಿಲ್ಲವೋ ಅಲ್ಲಿಯವರೆಗೆ ಜೀವನಿಗೆ ಜನ್ಮಾಂತರಗಳಲ್ಲಿ ಪರಿಭ್ರಮಣ ಮಾಡುವದು ತಪ್ಪುವದಿಲ್ಲ.

ಅದಕ್ಕಾಗಿಯೇ ಶ್ರೀ ಬಸವಣ್ಣನವರು ''ಹಿಂದೆ ನಾನಾ ಯೋನಿಗಳಲ್ಲಿ ಬಂದೆನೆಂಬ ಹೇಯವಿಲ್ಲ ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿಯಿಲ್ಲ'' ಎಂದು ಜೀವಕೋಟಿಯನ್ನು ಎಚ್ಚರಿಸಬೇಕಾಯಿತು.

ಏಕೆಂದರೆ 'ಮುಕ್ತಿ'ಯೆ ಮಾನವನ ಪರಮನಂತವ್ಯ. ಆದರೆ ಈ 'ಮುಕ್ತಿ' ಮಾನವನ ಅಲ್ಪಶಕ್ತಿಯಿಂದ ಸಾಧಿಸುವಂತಿಲ್ಲ. ಅದಕ್ಕಾಗಿಯೇ ಶಿವಶರಣರು ''ಎನಗೆ ಸುತ್ತಿದ ಮಾಯಾ ಪ್ರಪಂಚವ ಅಯ್ಯಾ ಬಿಡಿಸೊ ನಿಮ್ಮ ಧರ್ಮ'' ಎಂದು ಮಾನವ ಶಕ್ತಿಯ ಅಚೆಗಿರುವ ದೇವಿಶಕ್ತಿಗೆ ಶರಣು ಹೋಗಬೇಕಾಯಿತು.

ಈ ರೀತಿ ಪರಮಾತ್ಮನಿಗೆ ''ಅನ್ಯಥಾ ಶರಣಂ ನಾಸ್ತಿ'' ಎಂದು ಶರಣು ಹೋಗುವುದನ್ನೇ ''ಭಕ್ತಿ'' ಎಂದು ಕರೆದರು. ಭಕ್ತಿಯೆಂದರೆ ''ಪೂಜ್ಯೇಷು ಅನುರಾಗಃ ಭಕ್ತಿಃ'' ಎಂದು ಭಕ್ತಿಸೂತ್ರ ಹೇಳುವ ಹಾಗೆ ಸರ್ವಾತ್ಮನು ದೇವರನ್ನೇ ಅವಲಂಬಿಸುವರು. ಈ ಭಕ್ತಿ ಶಿವಾನುಗ್ರಹವಿದ್ದವರಲ್ಲಿ ಮಾತ್ರ ಫಲಿಸುತ್ತದೆ. ಅದಕ್ಕಾಗಿ ಶ್ರೀ ಮೊಗ್ಗೆಯ ಮಾಯೆ ದೇವರು ''ಭಕ್ತಿ ಶಿವಪ್ರಸಾದದ ಜನನಿ'' ಎಂದೇ ಹೇಳಿರುವರು.

ಮಾನವನಿಗೆ ಅವನ ಪ್ರಲಯೋ ಮಾರ್ಗದಲ್ಲಿ 'ಹಣ'ದ ಅವಶ್ಯಕತೆ ಇರುವಂತೆ, ಅವನ ಶ್ರೇಯೋ ಮಾರ್ಗದಲ್ಲಿ ''ಭಕ್ತಿ''ಯೇ ಮುಖ್ಯವಾಗಿರುತ್ತದೆ. ''ಭಕ್ತಿ ಸಂಪದವ ಕೊಡು ಬೇಗನೆ'' ಎಂದು ಶರಣರು ಹಾಡಿದ್ದಾರೆ. ನಿಜಗುಣರು ''ಕರುಣಿಸೆನಗಿದನೆ ಬೇಡುವೆ ನಭವ ಬೇರೊಂದು ವರವನೊಲ್ಲೆನು ಮುಕ್ತಿ ದೊರೆವ ಸಾಧನವಾ'' ಎಂದು ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಶಿವನಲ್ಲಿ ಕೇಳಿಕೊಂಡಿದ್ದಾರೆ. ಶ್ರೀ ಶಂಕರಾಚಾರ್ಯರೂ ಕೂಡಾ ''ಮೋಕ್ಷ ಕಾರಣ ಸಾಮಗ್ರ್ಯಾಂ ಭಕ್ತಿ ದೇವ

ಗರೀಯಸಿ'' ಎಂದು ಭಕ್ತಿಯನ್ನು ಮೋಕ್ಷದಾಯಕವಾದ ಸಾಮಗ್ರಿಯೆಂದೇ ಹೇಳಿಕೊಂಡಿದ್ದಾರೆ. ಈ ಕಾರಣದಿಂದ ಭಕ್ತಿ ಮಾನವನ ಪರಮ ಪುರುಷಾರ್ಥವಾಗಿದೆ.

ಇಂಥ 'ಭಕ್ತಿ' ಯಾವ ಕಾವ್ಯದ ಮೂಲಕ ನಮ್ಮಲ್ಲಿ ಜಾಗೃತವಾಗುವದೋ ಅದೇ 'ಸತ್ಕಾವ್ಯ' ಅದನ್ನು 'ಪುರಾಣ'ವೆಂದು ಕರೆಯಲಾಗಿದೆ. ಕಾವ್ಯವೆಂದ ಮೇಲೆ ಅಲ್ಲಿ ನವರಸಗಳಿರುವದು ಸ್ವಾಭಾವಿಕ. ಆದರೆ ಪುರಾಣಗಳಲ್ಲಿ 'ಭಕ್ತಿ ರಸ'ಕ್ಕೇನೇ ಪ್ರಾಧಾನ್ಯತೆ. ಉಳಿದ ರಸಗಳಿಗೆ ಇಲ್ಲಿ ಗೌಣಸ್ಥಾನ. ಏಕೆಂದರೆ ಉಳಿದ ರಸಗಳಲ್ಲಿ 'ವಿಕಾರ'ಕ್ಕೆಡೆಯಿದೆ. ಆದರೆ 'ಭಕ್ತಿ ರಸ'ದಲ್ಲಿ ಮಾತ್ರ 'ವಿಚಾರ'ಕ್ಕೆ ಆಸ್ಪದವಿದೆ. ಈ ದೃಷ್ಟಿಯಿಂದ ಪುರಾಣ ರಚಿಸುವ ಕವಿ ಶಾಸ್ತ್ರಜ್ಞನೇ ಇರಬೇಕಾಗುತ್ತದೆ. ಎಂದು ಮಹಾಕವಿ ಷಡಕ್ಷರ ದೇವನೇ ಸ್ವತಃ ಹೇಳಿಕೊಂಡಿದ್ದಾನೆ.

'ಶಾಸ್ತ್ರ'ಗಳು ಶಾಸನ ರೂಪದಲ್ಲಿ ಹೇಳಿದರೆ, ಪುರಾಣಗಳು ಅವೇ ಶಾಸ್ತ್ರೀಯ ವಿಚಾರಗಳನ್ನು 'ಕಾಂತಾ ಸಮ್ಮಿತ' ವಾಗಿ ಹೇಳುತ್ತವೆ. ಈ ಕಾರಣದಿಂದಲೇ ''ಇತಿಹಾಸ ಪುರಾಣಾಭ್ಯಾಂ ವೇದಾರ್ಥ ಉಪಬೃಹ್ಮಣೀತೆ'' ಎಂದು ಗೌರವಿಸಲಾಗಿದೆ. ಅಂದರೆ ಪುರಾಣಗಳು ವೇದದ ಅರ್ಥಗಳೇ ಎಂದು ಸ್ಪಷ್ಟ ಅಭಿಪ್ರಾಯ.

ಕಿವಿಗಳು, ಜ್ಞಾನೇಂದ್ರಿಯಗಳು. ಅವುಗಳ ಮೂಲಕ ಒಳ್ಳೆಯದನ್ನೇ ಕೇಳಬೇಕೆಂದು ವೇದ ''ಭದ್ರುಂಕರ್ಣೇ'' ಎಂದು ಹೇಳುತ್ತದೆ. ನವವಿಧ ಭಕ್ತಿಗಳಲ್ಲಿ ''ಶ್ರವಣ ಭಕ್ತಿ'' ಯೂ ಒಂದಾಗಿದೆ. ಈ ಶ್ರವಣಕ್ಕಾಗಿ ಮಹರ್ಷಿ ವೇದವ್ಯಾಸರು ಹದಿನೆಂಟು ಪುರಾಣಗಳನ್ನು ರಚಿಸಿದರು.

ಶ್ರೀ ಅಥಣಿ ಶಿವಯೋಗಿಗಳು ಸಹ ಯಾವಾಗಲೂ ಪುರಾಣ ಶ್ರವಣದಲ್ಲಿ ಕಾಲಕ್ಷೇಪ ಮಾಡುತ್ತಿದ್ದರು. ಅಂದರೆ ಒಂದು ಪುರಾಣಮಂಗಲಗೊಳ್ಳುತ್ತಿದ್ದರೆ ಮತ್ತೊಂದು ಪುರಾಣ ಪ್ರಾರಂಭವಾಗುತ್ತಿತ್ತು.

ಹೀಗೆ ಜನಮನದಲ್ಲಿ ಭಕ್ತಿ, ಜ್ಞಾನ ವೈರಾಗ್ಯಗಳು ಉಂಟಾಗಲೇಂದೇ ಪೂಜ್ಯ ಅಜ್ಜ ಅವರು ತಮ್ಮ ಮಠಗಳು ಎಲ್ಲೆಲ್ಲಿ ಇವೆಯೇ ಅಲ್ಲಲ್ಲಿ ಪುರಾಣ ಪ್ರವಚನಗಳನ್ನು ಅತ್ಯಂತ ವಿಜೃಂಭಣೆಯಿಂದ ಪ್ರತಿ ವರ್ಷ ನಡೆಸುತ್ತಿದ್ದರು. ಆ ಸಂದರ್ಭದಲ್ಲಿ ತಮ್ಮ ಹೆಸರಿಗೆ ತಕ್ಕಂತೆ 'ಅನ್ನದಾನ'ವೂ ಅತಿ ದೊಡ್ಡ ಪ್ರಮಾಣದಲ್ಲಿ ಜರಗುತ್ತಿತ್ತು.

ಇಂಥ ಪುರಾಣ ಪ್ರವಚನಗಳ ಸಂದರ್ಭದಲ್ಲಿ ಜಾಲಿಹಾಳ (ಬೇಲೂರ)ದ ಪುರಾಣ ಸಮಾರಂಭ ಮಾತ್ರ 'ನಭೂತೋ ನಭವಿಷ್ಯತಿ' ಎಂದು ಹೇಳಬಹುದು.

ಈ ರೀತಿ ಪುರಾಣ ಪ್ರವಚನಗಳಲ್ಲಿ ಭಾಗವಹಿಸಿದ ಮಹನೀಯರ ಹೆಸರುಗಳನ್ನು ಕೆಳಗೆ ಕಾಣಿಸಿದಂತೆ ಕೊಡಲಾಗಿದೆ.

೧. ಷ.ಬ್ರ. ಶಂಭುಲಿಂಗ ಶಿವಾಚಾರ್ಯರು, ಬಿಜಾಪೂರ

೨. ಶ್ರೀ ನಿ.ಪ್ರ. ಮೃಂತ್ಯುಂಜಯ ಮಹಾಸ್ವಾಮಿಗಳು, ಕಿರೀಟಮಠ, ಸೊಲ್ಲಾಪೂರ

೩. ಷ. ಬ್ರ. ಹರಕುಣಿ ಪಟ್ಟಾಧ್ಯಕ್ಷರು

೪. ಷ. ಬ್ರ. ಹರನಾಳ ಪಟ್ಟಾಧ್ಯಕ್ಷರು

೫. ಶ್ರೀ ನಿ. ಪ್ರ. ಪ್ರಭುರಾಜೇಂದ್ರ ಮಹಾಸ್ವಾಮಿಗಳು, ಅಮ್ಮಿನಗಡ

೬. ಶ್ರೀ ನಿ. ಪ್ರ. ಶಾಂತಸ್ವಾಮಿಗಳು (ಸಜ್ಜಲಗುಡ್ಡದಲ್ಲಿ ಸಮಾಧಿಸ್ಥರಾದವರು)

೭. ಶ್ರೀ ನಿ. ಪ್ರ. ಗಂಗಾಧರಸ್ವಾಮಿಗಳು, ಸವದತ್ತಿ

೮. ಪಂ. ನಾಗಭೂಷಣ ಶಾಸ್ತ್ರಿಗಳು, ಶಾಸ್ತ್ರಿಮಠ ಗದಗ

೯. ಪಂ. ಗೌರಿನಾಥ ಶಾಸ್ತ್ರಿಗಳು ಇಲಾಳ.

೧೦. ಪಂ. ರಾಜಶೇಖರ ಶಾಸ್ತ್ರಿಗಳು (ಗದಗ)

೧೧. ಪಂ. ಗಂಗಾಧರ ಶಾಸ್ತ್ರಿಗಳು, ಹಳ್ಳಿಮಠ ಹುಬ್ಬಳ್ಳಿ

೧೨. ಶ್ರೀಯುತ ಲಿಂಗಪ್ಪ ಮಾಸ್ತರರು, ಜಿಗಳೂರ

೧೩. ವೇ. ಸಿದ್ಧರಾಮಯ್ಯನವರು, ಸಂಗನಾಳ

೧೪. ವೇ. ಚನ್ನಬಸವಯ್ಯನವರು, ಮುಗಳಿ

೧೫. ವೇ. ಸಿದ್ಧಲಿಂಗಯ್ಯನವರು, ಹೊಸಮಠ, ಬೂದಿಹಾಳ

೧೬. ವೇ. ಅನ್ನದಾನಯ್ಯ ಮಾಸ್ತರರು, ನಿಡಗುಂದಿ

೧೭. ವೇ. ರುದ್ರಯ್ಯನವರು, ಗೂಡೂರ

ಇನ್ನೂ ಕೆಲವು ಪುರಾಣಿಕರು ಇರಬಹುದು. ಆದರೆ ಅವರ ಹೆಸರು ನನ್ನ ಜ್ಞಾಪಕದಲ್ಲಿ ಇಲ್ಲ. ದಯವಿಟ್ಟು ಈ ಬಗ್ಗೆ ಕ್ಷಮಿಸಬೇಕಾಗಿ ವಿನಂತಿ.

**ನಾನು ಪುರಾಣಿಕನಾದದ್ದೇ ಅಜ್ಜ ಅವರಿಂದ :**

ಈಗ್ಗೆ ಸುಮಾರು ನಾಲ್ಕು ದಶಕಗಳ ಹಿಂದಿನ ಮಾತು. ಆಗ ಜಕ್ಕಲಿಯಲ್ಲಿ ಅಜ್ಜ ಅವರ ಮಠ ನೂತನವಾಗಿ ಕಟ್ಟಲು ಪ್ರಾರಂಭವಾಗಿತ್ತು, ಅದೇ ಸಂದರ್ಭದಲ್ಲಿ 'ನಾಲವತ್ತವಾಡ ವೀರೇಶ್ವರ ಶರಣರ ಪುರಾಣವೂ ಪ್ರಾರಂಭವಾಗಿತ್ತು ಶ್ರೀ ನಿ. ಪ್ರ. ಶಾಂತಸ್ವಾಮಿಗಳು ಪುರಾಣ ಪ್ರವಚನಕಾರರು, ಶ್ರೀ ಜಕ್ಕಲಿ ಬಸಟ್ಟೆಪ್ಪಾ ಮಾಸ್ತರರು ಪುರಾಣ ಪಾಠಕರು. ಪುರಾಣ ಮಂಗಲಕ್ಕೆ ಪೂಜ್ಯ ಅಜ್ಜ ಅವರೇ ದಯಮಾಡಿಸಿದ್ದರು. ಅವರ ದರ್ಶನಕ್ಕೆ ಸುತ್ತಲಿನ ಎಲ್ಲ ಗ್ರಾಮದವರೂ ಹೆಚ್ಚು ಸಂಖ್ಯೆಯಲ್ಲಿ ಆಗಮಿಸಿದ್ದರು. ಪದ್ಧತಿಯಂತೆ ಅಂದು ಅನ್ನ ಸಂತರ್ಪಣೆ, ಪುರಾಣ, ಮೆರವಣಿಗೆಗಳಾದ ನಂತರ ರಾತ್ರಿ ಪುರಾಣ ಮಂಗಲ ಕಾರ್ಯಕ್ರಮ ಪ್ರಾರಂಭವಾಯಿತು.

ಪೂಜ್ಯ ಅಜ್ಜ ಅವರು ಗುರುಮಠದ ಹೊಸ್ತಲಿಗೆ ಪಾದಕೊಟ್ಟು ಕುರ್ಚ್ಯಾಸನದಲ್ಲಿ ಬಾಗಿಲ ಒಳಗೆ ಮೂರ್ತ ಮಾಡಿದ್ದರು. ನಾನು ಬಾಗಿಲ ಹೊರಗೆ ಅಲ್ಲಿಯೇ ಕುಳಿತುಕೊಂಡಿದ್ದೆ. ಪುರಾಣ ಮಂಗಲಗೊಂಡು ಜನ ಇನ್ನೇನು

'ಏಳಬೇಕೆನ್ನುವಷ್ಟರಲ್ಲಿ ಪುರಾಣ ಪಾಠಕರಾದ ಶ್ರೀ ಬಸಟ್ಟೆಪ್ಪ ಮಾಸ್ತರರು ''ಏಳಬೇಡಿ ಬೂದ್ಯಾಳ ಸಿದ್ಧಲಿಂಗಯ್ಯನವರ ಭಾಷಣವಿದೆ'' ಎಂದು ಹೇಳಿ ಜನರನ್ನು ಪುನಃ ಕೂಡ್ರಿಸಿದರು.

ಅನಿರೀಕ್ಷಿತವಾಗಿ ಸಭೆಯಲ್ಲಿ ನನ್ನ ಹೆಸರು ಪ್ರಸ್ತಾಪವಾದದ್ದು ನೋಡಿ ಅಪ್ರತಿಭನಾದೆ. ಬಸಟ್ಟೆಪ್ಪನವರದು ವಿನೋದೀ ಸ್ವಭಾವ, ಮೊದಲೇ ಅವರು ನಾಜೂಕಕಾರರು.

ನನ್ನನ್ನು ಭಾಷಣಕ್ಕಾಗಿ ಕರೆದಾಗ ನಾನು ಎದ್ದಿರಲಿಲ್ಲ. ಏಕೆಂದರೆ ನಾನು ಗದಗಿನಿಂದ ಬೂದ್ಯಾಳಿಗೆ ಬಂದು ಬಹಳ ದಿನಗಳಾಗಿರಲಿಲ್ಲ. ಕನ್ನಡ ಪರಿಚಯ ಬಹಳ ಜನರಿಗೆ ಇರಲಿಲ್ಲ. ಮೇಲೆ ಶಿವಲಿಂಗಪ್ಪನವರು ಹೊರಳಿ ನೋಡಿದಾಗ ಅವರ ಹಿಂದೆಯೇ ಇದ್ದ ನಾನು ಅವರ ಕಣ್ಣಿಗೆ ಬಿದ್ದೆ. ಸರಿ ಅವರು ನನ್ನನ್ನು ರಟ್ಟೇ ಹಿಡಿದು ಎದ್ದು ನಿಲ್ಲಿಸಿ ಬಿಟ್ಟರು.

ಕಣ್ಣೆದುರಿಗೆ ಅಪಾರ ಜನಸ್ತೋಮ, ಅದರಲ್ಲೆ ಪೂಜ್ಯ ಅಜ್ಜ ಅವರ ಸಾನ್ನಿಧ್ಯ. ಈ ಹಿಂದೆ ಭಾಷಣ ಮಾಡಿದ ಅನುಭವವೂ ನನಗೆ ಇರಲಿಲ್ಲ. ಆಗಿನ್ನೂ ನಾನು ಚಿಕ್ಕವನು. ಕೇವಲ ೨೩–೨೪ ವರುಷ ವಯಸ್ಸಾಗಿರಬಹುದು.

ಇನ್ನೇನುಭಾಷಣ ಪ್ರಾರಂಭವಾಗಬಹುದೆಂದು ಜನ ನನ್ನನ್ನು ಕುತೂಹಲದಿಂದ ನೋಡುತ್ತಿದ್ದರು. ಉಪಾಯವಿಲ್ಲದೆ ನನ್ನ ಆರಾಧ್ಯ ದೈವ ಅನಾದಿ ಸಿದ್ಧಲಿಂಗನ ಮೇಲೆ ಭಾರ ಹಾಕಿ ಭಾಷಣ ಪ್ರಾರಂಭಿಸಿದೆ. ಭಾಷಣ ಮುಂದುವರೆದಂತೆ ಸಭಿಕರು ಮೇಲಿಂದ ಮೇಲೆ ಕರತಾಡನಗಳಿಂದ ನನ್ನ ಭಾಷಣದ ವಿಚಾರಗಳನ್ನು ಸ್ವಾಗತಿಸಿದರು. ನನಗೂ ಉತ್ಸಾಹ ತುಂಬಿ ಬಂದಂತಾಗಿತ್ತು ಕನಿಷ್ಠ ಒಂದು ಗಂಟೆಯಾದರೂ ನಾನು ಮಾತನಾಡಿರಬೇಕು. ಭಾಷಣದ ನಂತರ ನಮ್ಮ ಊರವರು ನಮ್ಮ ಬಳಿ ಬಂದು ''ನಮ್ಮ ಊರಿಗೆ ಮರ್ಯಾದೆ ತಂದೆ'' ಎಂದು ನನ್ನನ್ನು ಬಹಳ ಪ್ರಶಂಸಿಸಿದರು. ಅನಂತರ ನಾನು ಎಲ್ಲರೊಡನೆ ಊರ ಹಾದಿ ಹಿಡಿದೆ.

ಒಂದು ಕೂಗಳತೆ ಹೋಗಿರಬೇಕು ಯಾರೋ ನನ್ನ ಹೆಸರುಗೊಂಡು ಕೂಗಿದಂತಾಯಿತು. ಅದನ್ನು ಕೇಳಿ ನಮ್ಮ ಊರವರೊಡನೆ ಅಲ್ಲಿಯೇ ನಿಂತೆ. ಆಗ ಕರೆಯಲಿಕ್ಕೆ ಬಂದವರು ನನಗೆ :''ಅಜ್ಜಾ ಅವರ ಅಪ್ಪಣೆಯಾಗಿದೆ ಮಠಕ್ಕೆ ಬರಬೇಕು'' ಎಂದು ಹೇಳಿ ಹೋದರು ನಂತರ ನಾನು ಎಲ್ಲರೊಡನೆ ಮಠಕ್ಕೆ ಹೋಗಿ ಅಜ್ಜಾ ಅವರಿಗೆ ಸಾಷ್ಟಾಂಗ ಹಾಕಿ ಎದ್ದು ನಿಂತೆ. ಅಜ್ಜಾ ಅವರು ಅಲ್ಲಿ ಕುಳಿತವರಿಗೆ ''ಬೂದ್ಯಾಳ ಸಿದ್ಧಲಿಂಗಯ್ಯನವರು ಬಂದರೆ'' ಎಂದು ಕೇಳಿದರು ಅಲ್ಲಿದ್ದವರು ನನ್ನನ್ನು ತೋರಿಸಿ. ''ಇವರೇ ಬೂದ್ಯಾಳ ಸಿದ್ಧಲಿಂಗಯ್ಯನವರು'' ಎಂದು ಅಜ್ಜ ಅವರಿಗೆ ಅರಿಕೆ ಮಾಡಿಕೊಂಡರು.

ಆಗ ಅಜ್ಜಾ ಅವರು ನನ್ನನ್ನು ವಾತ್ಸಲ್ಯದಿಂದ ನೋಡುತ್ತ ''ನೀನೇ ಏನೋ ಭಾಷಣ ಮಾಡಿದವ ? ಆಗಲಿ ಸಾಷ್ಟಾಂಗ ಹಾಕು'' ಎಂದು ಅಪ್ಪಣೆ ಮಾಡಿದರು. ನಾನು ಪುನಃ ಸಾಷ್ಟಾಂಗ ಹಾಕಿ ಇನ್ನೇನು ಏಳುವದರಲ್ಲಿದ್ದೆ. ಅಷ್ಟರಲ್ಲಿ ಶ್ರೀ ಅಜ್ಜಾ ಅವರು ನನಗೆ ''ಪುರಾಣ ಪ್ರವಚನಗಳ ಮೂಲಕ ಸಮಾಜ ಸೇವೆ ಮಾಡುತ್ತೇನೆ ಎಂದು ಅನ್ನು'' ಎಂದು ಹೇಳಿದರು. ಅದನ್ನು ಕೇಳಿ ಅನುಮಾನಿಸುತ್ತಿರುವಾಗ ಪುನಃ ಅಜ್ಜವರು ನನಗೆ ''ಶಿವನು ಆ ಶಕ್ತಿ ನಿನಗೆ ಕೊಟ್ಟಿದ್ದಾನೆ ಅದನ್ನು ವ್ಯರ್ಥಗೊಳಿಸಬೇಡ. ಶಿವನಿದ್ದಾನೆ. ಒಪ್ಪಿಕೊ ಎಂದು ಹೇಳಿದರು. ಅದಕ್ಕೆ ನಾನು ''ಆಗಲಿ ಬುದ್ಧಿ ತಮ್ಮ ಕೃಪೆಯಿದ್ದಂತಾಗಲಿ'' ಎಂದು ಹೇಳಿ ಕೈಮುಗಿದುಕೊಂಡು ಎದ್ದು ನಿಂತೆ. ಶ್ರೀ ಅಜ್ಜ ಅವರ ಅಪ್ಪಣೆಯಂತೆ ಅಂದಿನಿಂದ ಇಂದಿನವರೆಗೆ ಪುರಾಣ ಪ್ರವಚನದ ಸೇವೆ ಅವಿಚ್ಛಿನ್ನವಾಗಿ ಸಾಗಿಯೇ ಇದೆ. ಈಗಾಗಲೇ ನಾಲ್ಕನೇ ದಶಕ ಮುಗಿಯಲಿದೆ. ಪೂಜ್ಯ ಅಜ್ಜಾ ಅವರು ಪುರಾಣ ಪ್ರವಚನದ ಒಂದು ಪವಿತ್ರ ಕಾಯಕ ನನಗೆ ಕೊಟ್ಟು, ನನ್ನ ಜೀವನವನ್ನೇ ಪಾವನಗೊಳಿಸಿದರು. ''ನನ್ನ ಪಾಲಿಗೆ ಶ್ರೀ ಅಜ್ಜಾ ಅವರೇ ಸಿದ್ಧಲಿಂಗ'' ನೆಂದು ನನ್ನ ನಂಬಿಕೆ.

ಮುಂದೆ ಬೂದ್ಯಾಳ ಬಿಟ್ಟು ಮಕ್ಕಳ ಶಿಕ್ಷಣಕ್ಕಾಗಿ ಗದಿಗ್ಗೆ ಬಂದು ಅಲ್ಲಿ 'ಕರ್ನಾಟಕ ಬಂಧು ಪತ್ರಿಕೆಯ ಸಂಪಾದಕನಾದೆ' ಆದರೂ ಪ್ರತಿ ಅಮವಾಸ್ಯ ಹಾಳಕೇರಿಗೆ ಹೋಗಿ ಅಜ್ಜಾ ಅವರ ದರ್ಶನ ತೆಗೆದುಕೊಳ್ಳುವದು ನನ್ನ ಪದ್ಧತಿ. ಒಮ್ಮೆ ಅಮಾವಾಸ್ಯೆಗೆ ಹಾಳಕೇರಿಗೆ ಮರುಳುವಾಗ ಆಶೀರ್ವಾದಕ್ಕಾಗಿ ಅಜ್ಜಾ ಅವರಲ್ಲಿ ಹೋಗಿ ನಿಂತೆ. ಅಜ್ಜಾ ಅವರು ನನ್ನನ್ನು ನೋಡಿ ''ಊರಿಗೆ ಹೋಗಬೇಕೆನು? ಆಗಲಿ ನಾಳೆಗೆ ದೇವೀ ಪುರಾಣ'' ಎಂದು ಹೇಳಿದರು. ಅದಕ್ಕೆ ನಾನು ''ನಾಳೆಯಿಂದ ದೇವೀಪುರಾಣ ಪ್ರಾರಂಭವಾಗುತ್ತಿದ್ದರೂ ನಾನು ದೇವೀ ಪುರಾಣ ಹೇಳಿಲ್ಲ. ಅಂಥ ಆಮಂತ್ರಣವನ್ನೂ ಹಿಡಿದಿಲ್ಲ''ವೆಂದು ಅರಿಕೆ ಮಾಡಿಕೊಂಡೆ. ಅದಕ್ಕೆ ಅಜ್ಜಾ ಅವರು ನನಗೆ ''ಓಹೋ ನೀನು ಪಕ್ಕಾ ಶಿವಭಕ್ತ'' ದೇವೀ ಪುರಾಣ ಹ್ಯಾಂಗ ಹೇಳೀಪಾ ಅಲ್ಲಾ ದೇವೀ ಅಂದರೆ ಯಾರು? ಆಕಿ ಎಲ್ಲರಿಗೂ ತಾಯಿ ನಮ್ಮದು ಶಕ್ತಿ ವಿಶಿಷ್ಟಾದ್ವೈತ'' ಎಂದು ನನ್ನನ್ನು ಛೇಡಿಸಿದರು.

ಮುಂದಿನ ವರುಷದಿಂದ ಹೇಳಿದರಾಯಿತು ಎಂದು ನಿಶ್ಚಯಿಸಿ ಗದಿಗ್ಗೆ ಬಂದೆ. ಮೂರನೇ ದಿನವೇ ಅಸುಂಡಿಯವರು ದೇವೀ ಪುರಾಣ ಆಮಂತ್ರಣ ಕೊಡಲಿಕ್ಕೆ ಬಂದರು. ಆಮಂತ್ರಣ ಸ್ವೀಕರಿಸಿ ಅಲ್ಲಿಗೆ ಪ್ರವಚನಕ್ಕೆ ಹೋದೆ. ಅಜ್ಜಾ ಅವರು ಹಾಗೆ ಅಪ್ಪಣೆ ಮಾಡಿರದಿದ್ದರೆ ಆಮಂತ್ರಣ ಸ್ವೀಕರಿಸುತ್ತಿರಲಿಲ್ಲ. ಅಜ್ಜಾ ಅವರ ತ್ರಿಕಾಲ ಜ್ಞಾನ ನನ್ನನ್ನು ಅಚ್ಚರಿಗೊಳಿಸಿತು. ಈ ಸರ್ವಜ್ಞತ್ವವೇ ಅವರ ಶಿವಸ್ವರೂಪ ವೆಂಬುದಕ್ಕೆ ಪ್ರತ್ಯಕ್ಷ ಪ್ರಮಾಣವಾಗಿದೆ.

■■

# ವೀರಶೈವದರ್ಶನ*

ಆತ್ಯಂತಿಕ ದುಃಖನಿವೃತ್ತಿ ಮತ್ತು ಪರಮಾನಂದಪ್ರಾಪ್ತಿ ಇವು ಸಮಸ್ತ ಮನುಕುಲದ ಅಂತರಂಗದ ಹಸಿವು. ಈ ಉದ್ದೇಶ ಸಾಧನೆಗಾಗಿ ಈ ಹಿಂದೆ ಅನೇಕ ಪ್ರಯತ್ನಗಳು ಆಗಿ ಹೋಗಿವೆ. ಅವುಗಳ ಪರಿಣಾಮವೇ "ದರ್ಶನ" ಈ ದರ್ಶನವನ್ನು ಕುರಿತು "ದೃಶ್ಯತೇ ಅನೇನೇತಿ ದರ್ಶನಂ" ಎಂದು ವಿಶ್ಲೇಷಿಸಲಾಗಿದೆ. ಅಂದರೆ ಯಾವುದರ ಸಹಾಯದಿಂದ ನೋಡಲ್ಪಡುವದೋ ಅದು ದರ್ಶನ. ಇಲ್ಲಿ ನೋಡಲ್ಪಡುವದು ವಸ್ತುವಿನ ಸತ್ಯಭೂತವಾದ ತಾತ್ವಿಕ ಸ್ವರೂಪವನ್ನು. ಈ ವಿಚಾರವಾಗಿ ಸ್ವತಂತ್ರ ಸಿದ್ಧಲಿಂಗೇಶ್ವರ ಎಂಬ ಅನುಭಾವಿಗಳು ಹೇಳಿದ ಒಂದು ವಚನ ಇಲ್ಲಿ ಉಲ್ಲೇಖನೀಯವಾಗಿದೆ.

ನಾನೆಲ್ಲಿಂದ ಬಂದೆ ?
ಎನಗೀ ದೇಹ ಬಂದ ಪರಿಯಾವುದು ?
ಇನ್ನು ಮುಂದೆ ಗತಿಯಾವುದು ?
ಎಂಬ ನಿತ್ಯ ನಿತ್ಯ ವಿಚಾರ ಹುಟ್ಟದವರಿಗೆ
ಎಂದೆಂದಿಗೂ ಬಳಲಿಕೆ ಬಿಡದು
ನಿಜಗುರು ಸ್ವತಂತ್ರ ಸಿದ್ದಲಿಂಗೇಶ್ವರಾ
ನೀವು ಬರಿಸಿದ ಭವಾಂತರದಲ್ಲಿ
ಬರುತಿಹರಾಗಿ
ನಾನು ಕಂಡು ಮರಗುತಿರ್ದೆನು

– ಶ್ರೀ ಸ್ವತಂತ್ರ ಸಿದ್ಧಲಿಂಗೇಶ್ವರರು

ಹೀಗೆ ಮಾನವನಿಗೆ ಎಲ್ಲಿಯವರೆಗೆ ಇಂತಹ ವಿಚಾರ ಹುಟ್ಟುವದಿಲ್ಲವೋ ಅಲ್ಲಿಯವರೆಗೆ ಅವನ "ಆತ್ಯಂತಿಕ ದುಃಖ ನಿವೃತ್ತಿ" ಆಗುವದಿಲ್ಲ. ಅದಕ್ಕಾಗಿಯೇ "ತರತಿಶೋಕಾನ್ ಆತ್ಮವಿತ್" ಎಂದು ಜ್ಞಾನಿಗಳು ಹೇಳಿರುವರು. 'ಆತ್ಮವಿತ್' ಎಂದರೆ ಆತ್ಮವನ್ನು ತಿಳಿದವನು. ಅಂದರೆ ತನ್ನ ಸ್ವಸ್ವರೂಪಾನುಭವ ಉಳ್ಳವನು. ಇಂಥ ಆತ್ಮಜ್ಞಾನದ ಮೂಲಕ ಮೇಲೆ ಹೇಳಿದ ಮಾನವನ ಮೂಲಗುರಿ ಸಾಧಿಸಿಕೊಡುವದೇ ದರ್ಶನದ ಉದ್ದೇಶವಾಗಿದೆ. ಇಂಥ ದರ್ಶನಗಳು ಅನೇಕ ವಿಧವಾಗಿವೆ. ಆದರೆ ಈ ಎಲ್ಲ ದರ್ಶನಗಳಿಗೂ 'ಶ್ರುತಿ'ಗಳೇ ಆಧಾರ. ಏಕೆಂದರೆ ಶ್ರುತಿಗಳಲ್ಲಿ ಎಲ್ಲ ದರ್ಶನಗಳ ಬೀಜಭೂತ ತತ್ತ್ವಗಳು ಅಡಕವಾಗಿವೆ.

---

* ಮಲ್ಲಾಡಿ ಹಳ್ಳಿ ಅನಾಥ ಸೇವಾಶ್ರಮ ಬೃಹತ ಲೋಕದರ್ಶನದಲ್ಲಿ ಪ್ರಕಟಗೊಂಡಿದೆ.

ಈ ದರ್ಶನಗಳಲ್ಲಿ ''ಅದ್ವೈತ'', ''ದ್ವೈತ'', ''ವಿಶಿಷ್ಟಾದ್ವೈತ'' ಮತ್ತು ''ಶಿವಾದ್ವೈತ'' ಅಥವಾ ''ಶಕ್ತಿವಿಶಿಷ್ಟಾದ್ವೈತ'' ಎಂಬ ನಾಲ್ಕು ವೇದಾಂತ ಮತಗಳು ಪ್ರಮುಖವಾದವುಗಳು. ಈ ಮತಗಳ ಸಿದ್ಧಾಂತಕ್ಕನುಗುಣವಾಗಿಯೇ ಪ್ರಸ್ಥಾನತ್ರಯಗಳಿಗೆ ಭಾಷ್ಯ ಬರೆದವರು ಆಚಾರ್ಯರೆನಿಸಿರುವರು.

ಈ ಯಾವತ್ತು ಸಿದ್ಧಾಂತಗಳಲ್ಲಿ ಜೀವ, ಜಗತ್ತು, ಈಶ್ವರ, ಇವುಗಳ ಕುರಿತು ಸಾಕಷ್ಟು ಚಿಂತಿಸಲಾಗಿದೆ. ಅದ್ವೈತಮತದಲ್ಲಿ ''ಬ್ರಹ್ಮ ಸತ್ಯ ಜಗನ್ಮಿಥ್ಯ ಜೀವೋ ಬ್ರಹ್ಮೈವನಾಪರಃ'' ಎಂಬುದು ಮುಖ್ಯ ಸಿದ್ಧಾಂತ. ಇದರ ಮೇರೆಗೆ ಬ್ರಹ್ಮಸತ್ಯವಾಗಿದ್ದು ಜಗತ್ತು ಮಿಥ್ಯವಾಗಿದೆ.

ಜೀವನು ಪರಮಾತ್ಮನ ಅಂಶೀಭೂತನಾಗಿದ್ದರೂ ಅವಿದ್ಯಾಪ್ರಭಾವದಿಂದ ತನ್ನ ಆತ್ಮವಿಸ್ಮೃತಿಯನ್ನು ಹೊಂದಿ ದುಃಖಭಾಜನನಾಗಿರುವನು. ಬ್ರಹ್ಮ ಜ್ಞಾನೋದಯವಾಗುತ್ತಲೇ ಈ ಅವಿದ್ಯಾಕಲ್ಪಿತ ಜೀವ–ಪ್ರಪಂಚವು ಮಂಜಿನಂತೆ ಕರಗಿ ಹೋಗುತ್ತದೆ. ಆಗ ಜೀವನಿಗೆ ತಾನು ಕೇವಲ ಸಚ್ಚಿದಾನಂದ ಸ್ವರೂಪನೆಂಬ ಅರಿವು ಉಂಟಾಗುವದು. ಇದೇ ಈ ಸಿದ್ಧಾಂತದಲ್ಲಿಯ ಜೀವನ್ಮುಕ್ತಿ.

ದ್ವೈತಮತದಲ್ಲಿಯೂ ಬ್ರಹ್ಮಸತ್ಯವಾಗಿದೆ. ಅದರಂತೆ ಆತನಿಂದ ಹೊರಬಂದ ಪ್ರಪಂಚವೂ ಆತನಷ್ಟೇ ಸತ್ಯವಾಗಿದೆ. ಆದರೆ ಜೀವದೇವರಲ್ಲಿ ಮಾತ್ರ ಭೇದವಿದೆ. ಶ್ರೀಹರಿಗೆ ಸಮಸ್ತ ಜೀವರುಗಳೂ ಆಧೀನ ಮತ್ತು ದಾಸರು. ಇಲ್ಲಿ ಜೀವರಿಗೆ ಆಗುವ ಸ್ವರೂಪಾನಂದವೇ ಮೋಕ್ಷ.

ವಿಶಿಷ್ಟಾದ್ವೈತಮತದಲ್ಲಿ ಪ್ರಕೃತಿ, ಜೀವ, ಪದಾರ್ಥ ಇವೆಲ್ಲ ಪರಮಾತ್ಮನ ಶರೀರದ ಅಂಗಗಳು. ಇದರಿಂದಾಗಿ ಜೀವನು ಶರೀರವೆನಿಸಿರುವನು. ಪರಮಾತ್ಮನು ಶರೀರಿ ಎನಿಸಿರುವನು. ಈ ಕಾರಣದಿಂದ ಜೀವ–ದೇವರಲ್ಲಿ ಸಹಜವಾಗಿಯೇ ಭೇದವಿರುತ್ತದೆ. ಆದರೂ ಮುಕ್ತದೆಸೆಯಲ್ಲಿ ಅವರು ಒಬ್ಬರಿಂದ ಒಬ್ಬರು ಅಗಲಲಾರರು. ಹೀಗೆ ಅವರಿಗೆ ವಿಯೋಗ ಇಲ್ಲದಿದ್ದರೂ ಅವರಲ್ಲಿ ಸಾಮರಸ್ಯ ಮಾತ್ರ ಇಲ್ಲ. ಏಕೆಂದರೆ ಪರಮಾತ್ಮನ ಲಕ್ಷ್ಮೀಪತಿತ್ವ ಮುಂತಾದ ಅಂಶಗಳಿಂದಾಗಿ ಅವರು ಕೆಲಮಟ್ಟಿಗೆ ಬೇರೆಯಾಗಿಯೇ ಇರುವರು. ಈ ಜೀವ ವಿಶಿಷ್ಟತೆಯೇ ಈ ಸಿದ್ಧಾಂತದ ವೈಶಿಷ್ಟ್ಯ.

ಇನ್ನು ಶಿವಾದ್ವೈತ ಅಥವಾ ಶಕ್ತಿವಿಶಿಷ್ಟಾದ್ವೈತ ಮತದಲ್ಲಿ ಶಿವ–ಜೀವರಿಗೆ ಭೇದಾಭೇದವಿದೆ. ಲಿಂಗಾಂಗಪದ ವಾಚ್ಯರಾದ ಶಿವ–ಜೀವರಲ್ಲಿ ಉಪಾಸನಾ ದೃಷ್ಟಿಯಿಂದ ಭೇದವೂ, ಸಾಮರಸ್ಯದ ದೃಷ್ಟಿಯಿಂದ ಅಭೇದವೂ ಇರುವದು. ಇದರಿಂದ ವೀರಶೈವ ಮತವು ದ್ವೈತಾದ್ವೈತವೆಂದೂ ಮತ್ತು ಶಕ್ತಿವಿಶಿಷ್ಟಾದ್ವೈತವೆಂದೂ ಕರೆಯಲ್ಪಡುತ್ತದೆ.

ದ್ವೈತಾದ್ವೈತಮತೇ ಶುದ್ಧೇ ವಿಶಿಷ್ಟಾದ್ವೈತ ಸಂಜ್ಞಕೇ ।
ವೀರಶೈವ ಸಿದ್ಧಾಂತೇ ಸರ್ವಶ್ರುತಿ ಸಮನ್ವಯಃ ॥

– ಶ್ರೀಕರಭಾಷ್ಯ

ಶಿವ–ಜೀವೈಕ್ಯತೆಯೇ ಈ ಸಿದ್ಧಾಂತದ ಪರಮ ಲಕ್ಷ್ಯ. ಇದಕ್ಕಿರುವ ವೀರಶೈವ ಎಂಬ ಪದವೇ ಶಿವ – ಜೀವೈಕ್ಯ ಬೋಧಕವಾಗಿದೆ.

ವಿಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯ ಬೋಧಿತಾ ।
ತಶ್ಯಾಂ ರಮಂತೇ ಯೇ ಶೈವಾಃ ವೀರಶೈವಾಸ್ತು ತೇ ಮತಾಃ ॥

-ಸಿದ್ಧಾಂತ ಶಿಖಾಮಣಿ

ವೀರಶೈವ ಮತದಲ್ಲಿ ಷಟ್‌ಸ್ಥಲ ಸಿದ್ಧಾಂತದಂತೆ ಬಂಧ–ಬಂಧಕಾರಣ–ಮೋಕ್ಷ–ಮೋಕ್ಷೋಪಾಯ ಎಂಬ ನಾಲ್ಕು ವಿಷಯಗಳು ಇರುತ್ತವೆ.

ಜೀವನು ಆಣವಾದಿ ಮಲಗಳಿಂದ ಬಂಧಿತನಾಗುವದೇ ಬಂಧ. ಮಲತ್ರಯಂಗಳೇ ಬಂಧಕಾರಣ. ಜೀವನು ತನ್ನ ಜೀವಗುಣಗಳನ್ನು ಕಳೆದುಕೊಂಡು, ಪುನಃ ಶಿವನಲ್ಲಿ ಬೆರೆಯುವುದೇ ಮೋಕ್ಷ. ಮೋಕ್ಷೋಪಾಯವೆಂದರೆ ಜೀವನು ಲಿಂಗದೀಕ್ಷೆಯಿಂದ ಮಲತ್ರಯರಹಿತನಾಗಿ ಷಟ್‌ಸ್ಥಲ ರೀತ್ಯಾ ಸಾಧನೆಗೈಯ್ಯುವುದು.

ಲಿಂಗ : ಸೃಷ್ಟಿ, ಸ್ಥಿತಿ, ಲಯಗಳಿಗೆ ಯಾವುದು ಆಧಾರಭೂತವಾಗಿದೆಯೋ ಅದು ಲಿಂಗವೆಂದು ಕರೆಯಲ್ಪಡುತ್ತದೆ.

ಲೀಯತೇ ಗಮ್ಯತೆಯತ್ರ ಯೇನ ಸರ್ವಚರಾಚರಂ ।
ತಸ್ಮಾಲಿಂಗಂ ಪರಬ್ರಹ್ಮಕಾರಣಂ ನಿತ್ಯಮವ್ಯಯಂ ॥

– ಸಿದ್ಧಾಂತ ಶಿಖಾಮಣಿ

ಈ ಲಿಂಗವು ಪರಶಿವ ಅಥವಾ ಪರಬ್ರಹ್ಮವಾಚ್ಯಾಗಿದೆ. ಏಕೆಂದರೆ ಲಿಂಗ ಶಬ್ದದಂತೆ ಶಿವ ಶಬ್ದವು ಜಗತ್ತಿಗೆ ಆಧಾರ ಸ್ವರೂಪವೆಂದೇ ಹೇಳಲ್ಪಟ್ಟಿದೆ.

"ಶೇರತೇ ಅಸ್ಮಿನ್‌ಭುವನಾನಿ ಇತಿ ಶಿವಃ"

ಅದೇ ಮೇರೆಗೆ ಚರಾಚರಾತ್ಮಕವಾದ ಜಗತ್ತೆಲ್ಲ ಅಲ್ಲಿ ಅಡುಗುವದೋ ಅದು ಶಿವ ಎಂದು ಕರೆಯಲ್ಪಟ್ಟಿದೆ.

"ಶೇತೇ ಅಸ್ಮಿನ್ ಸರ್ವಮಿತಿ ಶಿವಃ"

ಇದೇ ರೀತಿಯಲ್ಲಿ ತೈತ್ತರೀಯ ಶ್ರುತಿಯೂ ಸಹ ಪರಬ್ರಹ್ಮವನ್ನು ಕುರಿತು ಲಿಂಗ ಮತ್ತು ಶಿವ ವಿಷಯಕವಾಗಿ ಮೇಲೆ ತಿಳಿಸಿದಂತೆ ಹೇಳಿದೆ.

"ಯತೋವಾ ಇಮಾನಿ ಭೂತಾನಿ ಜಾಯಂತೇ ಏನ ಜಾತಾನಿ ।
ಜೀವಂತಿ ಯತ್ಪ್ರಯಂತ್ಯಭಿಸಂವಿಶಂತಿ ತದ್ವಿಜಿಜ್ಞಾಸಸ್ವ ತದ್ಬ್ರಹ್ಮ ॥

ಇದರಿಂದ ಲಿಂಗ, ಪರಶಿವ ಎಂಬ ಪದಗಳು ಒಂದೇ ಪರವಸ್ತುವನ್ನು ಕುರಿತು ಹೇಳಿದ ಸಮಾನಾರ್ಥ ಸೂಚಕ ಶಬ್ದಗಳು.

ಶಕ್ತಿ : ನಿರ್ಗುಣನೂ, ನಿರಾಕಾರನೂ ಆದ ಪರಶಿವನಿಂದ ಪ್ರಪಂಚೋತ್ಪತ್ತಿಯಾಗಲು ''ಏಕೋಽಹಂ ಬಹುಸ್ಯಾಂ ಪ್ರಜಾಯೇಯ'' ಎಂಬ ಛಾಂದೋಗ್ಯ ಶ್ರುತಿಗನುಸಾರವಾಗಿ ಪರಶಿವಗತ ಶಕ್ತಿಯೇ ಕಾರಣವಾಗಿದೆ.

ಈ ಶಿವ-ಶಕ್ತಿಗಳಲ್ಲಿರುವ ಅವಿನಾಭಾವ ಸಂಬಂಧವನ್ನು ಕುರಿತು ಶ್ರೀ ನಿಜಗುಣರು–

''ಇಂಗಡಲೊಳಿಂಪು ಬೆಳದಿಂಗಳೊಳು ತಂಪು ಕುಸು ।
ಮಂಗಳೊಳು ಕಂಪು ಬೆರೆದಂತೆ ಪರಮನೊಳು ।
ಪಿಂಗದಗಸುತೆಗೆ ಬೆರೆದಂತೆ ಪರಮನೊಳು ।
ಪಿಂಗದಗಸುತೆಗೆ ನತನಪ್ಪೆಂ ॥

ಎಂದು ತಮ್ಮ ಪುರಾತನ ತ್ರಿವಿಧಿಯಲ್ಲಿ ಬಹುಸ್ವಾರಸ್ಯವಾಗಿ ಸ್ತೋತ್ರ ಮಾಡಿದ್ದಾರೆ. ಅದರಂತೆ ಶ್ರೀ ಮದ್ರೇಣುಕ ಭಗವತ್ಪಾದರೂ ಸಹ ತಮ್ಮ ಸಿದ್ಧಾಂತ ಶಿಖಾಮಣಿಯಲ್ಲಿ

ನ ಶಿವೇನ ವಿನಾ ಶಕ್ತಿರ್ನ ಶಕ್ತಿ ರಹಿತಃ ಶಿವಃ ।
ಪುಷ್ಪಗಂಧವದನ್ಯೋನ್ಯಂ ಮಾರುತಾಂಬರಯೋರಿವ ॥
ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತು ಪ್ರಕಾಶಿನೀ ।
ತಥಾ ಶಕ್ತಿರ್ವಿನುರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿರಾ ॥

ಎಂದು ಮನೋಜ್ಞವಾಗಿ ನಿರೂಪಿಸಿದ್ದಾರೆ.

ಶ್ರೀ ರುದ್ರದಲ್ಲಿಯೂ ''ಓಂ ನಮಃ ಸೋಮಾಯಚ'' ಎಂದು ಬಂದಿದೆ. ಅದರಂತೆ ಕೈವಲ್ಯೋಪನಿಷತ್ತಿನಲ್ಲಿಯೂ ''ಉಮಾಸಹಾಯಂ ಪರಮೇಶ್ವರಂ ಪ್ರಭುಂ'' ಎಂದು ಹೇಳಲಾಗಿದೆ. ಅದೇ ಮೇರೆಗೆ ಮಹಾಕವಿ ಕಾಳಿದಾಸರ

ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।
ಜಗತಃ ಪಿತರೌವಂದೇ ಪಾರ್ವತೀ ಪರಮೇಶ್ವರೌ ॥

ಎಂಬ ಮಂಗಲ ಸ್ತೋತ್ರವಂತೂ ತುಂಬಾ ಪ್ರಸಿದ್ಧವಿದೆ. ಅಂದರೆ ಜಗನ್ಮಾತಾ ಪಿತೃಗಳಾದ ಪಾರ್ವತೀ ಪರಮೇಶ್ವರರು ಶಬ್ದ ಹಾಗೂ ಅದರ ಅರ್ಥಗಳಂತೆ ಅವಿನಾಭಾವ ಸಂಬಂಧದಿಂದ ಇರುವರು. ಎಂಬುದೇ ಅದರ ತಾತ್ಪರ್ಯ.

ಹೀಗೆ ಶಿವನು ಶಕ್ತಿವಿಶಿಷ್ಟನೆಂದಾಕ್ಷಣ ಅವನ ಅಖಂಡ ಪರಿಪೂರ್ಣತೆಗೆ ಚ್ಯುತಿ ಬರುವದಿಲ್ಲ. ಏಕೆಂದರೆ ಶಿವನಿಗೆ ಎರಡು ಅವಸ್ಥೆ. ಒಂದು ಕೈವಲ್ಯ ಇನ್ನೊಂದು ಲೀಲೆ. ಲೀಲಾವಸ್ಥೆಯಲ್ಲಿ ಆತನಿಂದ ಜಗನ್ನಿರ್ಮಾಣವಾಗುವದು. ಅದರಂತೆ ಕೈವಲ್ಯಾವಸ್ಥೆಯಲ್ಲಿ ಸರ್ವ ಚರಾಚರ ಪ್ರಪಂಚವು ಪರಶಿವ ಬ್ರಹ್ಮದಲ್ಲಿ ಲಯವನ್ನು ಹೊಂದುವದು.

ಇದನ್ನೇ ಕುರಿತು ಶಿವಶರಣರು ಲೀಲೆಯಾದೊಡೆ ಉಮಾಪತಿ. ಲೀಲೆ ತಪ್ಪಿದೊಡೆ ಸ್ವಯಂಭು–ಎಂದು ಹೇಳಿರುವರು. ಹೀಗೆ ಪರಶಿವಗತ ಶಕ್ತಿಯು ಆತನಲ್ಲಿ ಅವಿನಾಭಾವ ಸಂಬಂಧದಿಂದ ಇರುವದರಿಂದ ಪರಶಿವ ಬ್ರಹ್ಮವು ಸವಿಶೇಷವೆನಿಸಿದೆ. ಅಂತೆಯೇ ಸತ್–ಚಿತ್–ಆನಂದ ಸ್ವರೂಪನಾದ ಪರಬ್ರಹ್ಮವು ಅಸ್ಮಿ–ಪ್ರಕಾಶೇ–ನಂದಾಮಿ ಎಂಬ ಅನುಭವದಿಂದ ಕೂಡಿಕೊಂಡಿರುತ್ತದೆ. ಈ ಅನುಭವವೇ ವಿಮರ್ಶಾಶಕ್ತಿಯು.

ಇಲ್ಲಿ ''ಅಸ್ಮಿ'' ಎಂದರೆ ಇರುತ್ತೇನೆ, ಇದು ಸದ್ರೂಪ. ''ಪ್ರಕಾಶೇ'' ಎಂದರೆ ತಿಳಿಯುತ್ತೇನೆ, ಇದು ಚಿದ್ರೂಪ. ನಂದಾಮಿ ಎಂದರೆ ಆನಂದಿಸುತ್ತೇನೆ, ಇದು ಆನಂದ ಸ್ವರೂಪ. ಈ ಅನುಭವ ರೂಪದ ''ವಿಮರ್ಶೆಶಕ್ತಿ'' ಪರಶಿವ ಬ್ರಹ್ಮದಲ್ಲಿ ಇಲ್ಲದೆ ಹೋಗಿದ್ದರೆ ಅದು ಜಡವೆನಿಸುತ್ತಿತ್ತು, ರತ್ನಾದಿಗಳಿಗೆ ಪ್ರಕಾಶವಿದ್ದರೂ ಅದರ ಅನುಭವ ಅವಕ್ಕಿಲ್ಲ, ಅಂತೆಯೇ ಅವು ಅಚೇತನವೆನಿಸುವವು. ಆದರೆ ಶಿವನು ಚೇತನ ಶಬ್ದವಾಚ್ಯನಾಗಿದ್ದಾನೆ. ಆದ್ದರಿಂದ ಅವನು ತನ್ನ ವಿಮರ್ಶೆಶಕ್ತಿಯ ಸ್ಫುರಣದಿಂದ ಸೃಷ್ಟಿ ಕಾರ್ಯಕ್ಕೆ ಉನ್ಮುಖನಾಗಿ ಸೃಷ್ಟಿ–ಸ್ಥಿತಿ–ಲಯ ತಿರೋಧಾನ ಮತ್ತು ಅನುಗ್ರಹ ಎಂಬ ಪಂಚಕೃತ್ಯಗಳನ್ನು ಕಾರಣಾಂತರದ ಅಪೇಕ್ಷೆಯಿಲ್ಲದೆ ನೆರವೇರಿಸುತ್ತಿರುವನು.

ನಾಮ ರೂಪಾತ್ಮಕವಾದ ಈ ಜಗತ್ತನ್ನು ಕುರಿತು ಕೆಲವು ವಾದಗಳಿವೆ. ಅವೇ ವಿವರ್ತವಾದ ಮತ್ತು ಪರಿಣಾಮವಾದವೆಂದು ಹೇಳಲ್ಪಡುತ್ತಿವೆ. ವಿವರ್ತವಾದವೆಂದರೆ ಹಗ್ಗವನ್ನೇ ಭ್ರಾಂತಿಯಿಂದ ಹಾವನ್ನಾಗಿ ಭಾವಿಸುವದು. ಪರಿಣಾಮವಾದ ಇದಕ್ಕೆ ತೀರ ಭಿನ್ನವಾಗಿದೆ. ಈ ಪರಿಣಾಮವಾದದಲ್ಲಿ ಎರಡು ವಿಧ. ಒಂದು ವಿಕೃತ ಪರಿಣಾಮ, ಇನ್ನೊಂದು ಅವಿಕೃತ ಪರಿಣಾಮ. ವಿಕೃತ ಪರಿಣಾಮವೆಂದರೆ ಹಾಲು ಹೋಗಿ ಮೊಸರು ಆಗುವದು. ಅಂದರೆ ಮೊದಲಿನ ವಸ್ತು ತನ್ನ ಸ್ವರೂಪವನ್ನು ಸಂಪೂರ್ಣ ಕಳೆದುಕೊಳ್ಳುವದು.

ಇನ್ನು ಅವಿಕೃತ ಪರಿಣಾಮವೆಂದರೆ ವಸ್ತುವು ತನ್ನ ಮೊದಲಿನ ಸ್ವರೂಪ ಕಳೆದುಕೊಳ್ಳದೆ ಬೇರೆ ರೂಪಧಾರಣ ಮಾಡಿಕೊಳ್ಳುವದು. ಅಂದರೆ ಸುವರ್ಣಕಟಕ ನ್ಯಾಯದಂತೆ ಎಂದು ಹೇಳಬಹುದು. ಇಲ್ಲಿ ಬಂಗಾರವು ಆಭರಣವಾಗಿ ಮಾರ್ಪಟ್ಟರೂ ಮೊದಲಿನ ಅದರ ಸ್ವರೂಪವಾದ ಸುವರ್ಣಕ್ಕೆ ಭಂಗಬರುವದಿಲ್ಲ.

ಈ ದೃಷ್ಟಿಯಿಂದ ವೀರಶೈವಸಿದ್ಧಾಂತವು ಅವಿಕೃತ ಪರಿಣಾಮವನ್ನೇ ಅಂಗೀಕರಿಸಿದೆ. ಏಕೆಂದರೆ ಪರಶಿವನು ಜಗದಾಕಾರನಾದರೂ ಆತನ ಶಿವಸ್ಥಿತಿಗೆ ಭಂಗವಿಲ್ಲ. ಊರ್ಣನಾಭಿಯು ತನ್ನ ಎಳೆಯಿಂದ ಬಲೆಯನ್ನು ಹೆಣೆದು ತನ್ನ ಕಾರ್ಯ ಪೂರೈಸಿದ ನಂತರ ಪುನಃ ಅದನ್ನು ತನ್ನಲ್ಲಿ ಅಡಗಿಸಿಕೊಳ್ಳುವಂತೆ ಶಿವನು ತನ್ನ ವಿಮರ್ಶೆ ಶಕ್ತಿಯಿಂದ ಸೃಷ್ಟಿಯನ್ನು ಮಾಡಲೂ ಬಲ್ಲ; ನಂತರ ಅದನ್ನು ತನ್ನಲ್ಲಿ ಲಯಗೊಳಿಸಲೂ ಬಲ್ಲ. ಶರಣರ ಅಭಿಪ್ರಾಯವು ಇದನ್ನೇ ಸಮರ್ಥಿಸುತ್ತದೆ.

> ಶಿವನು ತನ್ನ ವಿನೋದಕ್ಕೆ ರಚಿಸಿದನು ಅನಂತ ವಿಶ್ವವನು, ವಿಶ್ವಕ್ಕೆ ಹೊರಗಾಗಿರ್ದನೆ ? ಇಲ್ಲ. ವಿಶ್ವಮಯ ತಾನಾದನು, ವಿಶ್ವಮಯ ತಾನಾದೊಡೆ ವಿಶ್ವದ ಉತ್ಪತ್ತಿ-ಸ್ಥಿತಿ-ಲಯಕ್ಕೆ ಒಳಗಾದನೇ ? ಇಲ್ಲ. ಅದೇನು ಕಾರಣವೆಂದಡೆ ಅಜಾತನಾಗಿ ಆತನಿಗೆ ಉತ್ಪತ್ತಿ ಇಲ್ಲ............ನಮ್ಮ ಉರಿಲಿಂಗ ಪೆದ್ದಪ್ರಿಯ ವಿಶ್ವೇಶ್ವರನು ಜಗವಾಗಲೂ ಬಲ್ಲ, ಜಗವಾಗದಿರಲೂ ಬಲ್ಲನಯ್ಯ.
>
> –ಶ್ರೀ ಉರಿಲಿಂಗ ಪೆದ್ದಿಗಳು

ಈ ಕಾರಣದಿಂದ ಪರಶಿವನು ''ಸಹಕಾರಿಕಾರಣ'' ಅಥವಾ ''ಉಪಾದಾನಕಾರಣ'' ನಾಗಿರದೆ ''ಅಭಿನ್ನನಿಮಿತ್ತೋಪಾದಾನಕಾರಣ'' ನಾಗಿದ್ದಾನೆ.

ಹೀಗೆ ಶಿವಶಕ್ತಿಯಿಂದುಂಟಾದ ಮಾಯೆಯು ತತ್ಕಾರ್ಯವಾದ ಜಗತ್ತು ವೀರಶೈವ ಸಿದ್ಧಾಂತದಂತೆ ಮಿಥ್ಯವಲ್ಲ.

> ''ಯಂ ಶಿವಂ ಪರಂ ಬ್ರಹ್ಮಪ್ರಾಪ್ನೋತೀತ ಸ್ವಭಾವತಃ ।
> ಮಾಯೆತಿ ಪ್ರೋಚ್ಯತೇ ಲೋಕೇ ಬ್ರಹ್ಮನಿಷ್ಠಾ ಸನಾತನೀ'' ॥
>
> –ಸಿದ್ಧಾಂತಾಗಮ

ತತ್ತ್ವಗಳು : ಮೇಲೆ ತಿಳಿಸಿದಂತೆ ಪರಶಿವನಿಂದ ಆದಿಶಕ್ತಿ, ಅದರಿಂದ ಮಾಯೆ. ಈ ಮಾಯೆಯಿಂದ ನಿರ್ಮಿತವಾದ ಈ ಸೃಷ್ಟಿಕಾರ್ಯ ಮುಂದುವರಿಯಲಿಕ್ಕೆ ಕಾರಣವಾಗಿರುವವು.

ಶರಣರು ಇಲ್ಲಿಯ ಮೂವತ್ತಾರು ತತ್ತ್ವಗಳನ್ನು ಅಂಗೀಕರಿಸಿರುವರು. ಇದನ್ನು ಅವರ ವಚನದಿಂದಲೇ ಅರಿಯಬಹುದು. ''ಆತ್ಮತತ್ತ್ವ ಇಪ್ಪತ್ತೈದು. ವಿದ್ಯಾತತ್ತ್ವ ಹತ್ತು, ಶಿವತತ್ತ್ವ ಒಂದು. ಅದೆಂತೆಂದೊಡೆಃ ಭೂತಾದಿ ಪಂಚಕಂಗಳೈದು, ಶ್ರೋತ್ರಾದಿ ಜ್ಞಾನೇಂದ್ರಿಯಗಳೈದು, ಶಬ್ದಾದಿ ವಿಷಯಂಗಳೈದು, ಇಂತು ಆತ್ಮತತ್ತ್ವ ಇಪ್ಪತ್ತೈದು ಕರ್ಮಸಾದಾಖ್ಯ, ಕರ್ತೃಸಾದಾಖ್ಯ, ಮೂರ್ತಿಸಾದಾಖ್ಯ, ಅಮೂರ್ತಿಸಾದಾಖ್ಯ, ಶಿವಸಾದಾಖ್ಯ, ನಿವೃತ್ತಿಕಲೆ, ಪ್ರತಿಷ್ಠಾಕಲೆ, ವಿದ್ಯಾಕಲೆ, ಶಾಂತಿಕಲೆ, ಶಾಂತಾತೀತಕಲೆ ಇಂತು ವಿದ್ಯಾತತ್ತ್ವ ಹತ್ತು, ಶಿವತತ್ತ್ವ ಒಂದು, ಇಂತು ಮೂವತ್ತಾರು ತತ್ತ್ವಗಳೊಡನೆ ಶಿವತತ್ತ್ವವೇ ತತ್‌ಪದ, ಆತ್ಮತತ್ತ್ವವೇ ತ್ವಂಪದ, ವಿದ್ಯಾತತ್ತ್ವವೇ ಅಸಿಪದ, ಆಕಾರದಲ್ಲಿ ತತ್ತ್ವದ ಐಕ್ಯವಾಗಿತ್ತು, ಉಕಾರದಲ್ಲಿ ತ್ವಂಪದ ಐಕ್ಯವಾಯಿತ್ತು, ಮಕಾರದಲ್ಲಿ ಅಸಿಪದ ಐಕ್ಯವಾಯಿತ್ತು, ಅಕಾರ ಉಕಾರ ಮಕಾರ ಏಕಾರ್ಥವಾಗಿ ಷಟ್‌ಸ್ಥಲ ಬ್ರಹ್ಮವೆಂಬ ಮಹಾಜ್ಯೋತಿರ್ಮಯ ಲಿಂಗವಾಯಿತ್ತು, ಈ ಷಟ್‌ಸ್ಥಲ ಬ್ರಹ್ಮವೆಂಬ ಜ್ಯೋತಿರ್ಮಯ ಲಿಂಗದಲ್ಲಿ ತ್ವಂಪದ, ಅಸಿಪದವೇ ನಿಕ್ಷೇಪವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ''

–ಶ್ರೀ ಬಸವಣ್ಣನವರು

ಜೀವಾತ್ಮ : ಜೀವನು ಪರಬ್ರಹ್ಮದ ಅಂಶವೇ ಆಗಿದ್ದಾನೆಂದು ''ಅಂಶೋನಾನಾ ವ್ಯಪದೇಶಾತ್'' ಎಂದು ಬ್ರಹ್ಮಸೂತ್ರ ತಿಳಿಸುತ್ತದೆ. ಅದರಂತೆ ನನ್ನ ಅಂಶವೇ

ಜೀವರುಗಳೆಂದು ''ಮಮೈವಾಂಶೋ ಜೀವಲೋಕೇ ಜೀವಭೂತ ಸನಾತನಃ'' ಎಂಬುದಾಗಿ ಭಗವದ್ಗೀತೆ ಶೃತಪಡಿಸುತ್ತದೆ. ಇದೇರೀತಿ ಅಗ್ನಿಕುಂಡದಿಂದ ಹಾರಿಬಂದ ಅಗ್ನಿಕಣಗಳು ಪುನಃ ಅಲ್ಲಿಯೇ ಲಯವನ್ನು ಹೊಂದುವಂತೆ ಪರಶಿವನಿಂದ ಬಂದ ಜೀವಾತ್ಮರು ಪುನಃ ಅಲ್ಲಿಯೇ- ಲಯವನ್ನು ಹೊಂದುವರೆಂದು ಮುಂಡಕಶ್ರುತಿ ಹೇಳುತ್ತಿದೆ.

''ಯಥಾ ಸುದೀಪ್ತಾತ್ ಪಾವಕಾದ್ವಿಸ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಃ ।
ತಥಾಕ್ಷರಾ ದ್ವಿವಿಧಾಃ ಸೌಮ್ಯಭಾವಾಃ ಪ್ರಜಾಯಂತೇ ತತ್ರಚೈವಾಪಿಯಂತಿ ॥''

ಇದೇ ಮೇರೆಗೆ ಪರಶಿವಗತ ವಿಮರ್ಶೆಶಕ್ತಿಯ ವಿಕಾಸರೂಪ ಅನಾದಿ ಮಾಯೆಯ ಸಂಬಂಧದಿಂದ ಪರಶಿವನ ಅಂಶವು ಜೀವನೆನಿಸಿಕೊಳ್ಳುವದೆಂದು ಸಿದ್ಧಾಂತ ಶಿಖಾಮಣಿಯೂ ಸಹ ಅಭಿಪ್ರಾಯಪಡುತ್ತದೆ.

''ಅನಾದ್ಯವಿದ್ಯಾ ಸಂಬಂಧದಂಶೋಜೀವನಾಮಕಃ ।''

ಈ ಎಲ್ಲ ಪ್ರಮಾಣೋಕ್ತಿಗಳಿಂದ ಜೀವನು ಶಿವನ ಅಂಶವೇ ಆಗಿರುವನು.

**ಶಕ್ತಿ ವಿಶಿಷ್ಟತೆ :**

''ಶಕ್ತಿಶ್ಚ ಶಕ್ತಿಶ್ಚ ಶಕ್ತೀ । ತಾಭ್ಯಾಂ ವಿಶಿಷ್ಟೇ ಜೀವಬ್ರಹ್ಮಣೇ ।
ತಯೋಃ ಅದ್ವೈತಂ ಶಕ್ತಿ ವಿಶಿಷ್ಟಾದ್ವೈತಂ ॥''

ಶಿವಗತ ಶಕ್ತಿಯು 'ಸೂಕ್ಷ್ಮ ಚಿದ ಚಿದಾತ್ಮಕ ಶಕ್ತಿ'ಯೆಂದೂ. 'ಸ್ಥೂಲ ಚಿದ ಚಿದಾತ್ಮಕ ಶಕ್ತಿ' ಎಂದೂ ಎರಡು ವಿಧ. ಚಿತ್ತ ಎಂದರೆ ಚೇತನ. ಅಚಿತ್ ಎಂದರೆ ಜಡ. ಶಿವಾಂಶ ಸಂಭೂತನಾದ ಜೀವನು ಸ್ಥೂಲ ಚಿಚ್ಛಕ್ತಿಯುಳ್ಳವನು. ಸೂಕ್ಷ್ಮ ಚಿದಚಿಚ್ಛಕ್ತಿಯುಳ್ಳವನು ಪರಶಿವನು. ಇದರಿಂದಾಗಿ ಜೀವಾತ್ಮ ಕಿಂಚಿಜ್ಞಾತಾಧರ್ಮ ವುಳ್ಳವನು. ಶಿವನು ಸರ್ವಜ್ಞತಾ ಧರ್ಮವುಳ್ಳವನು.

ಮಲತ್ರಯ : ಶಿವನಲ್ಲಿಯ ಇಚ್ಛಾ-ಜ್ಞಾನ-ಕ್ರಿಯಾ ಶಕ್ತಿಗಳ ಸಂಕೋಚ ಸ್ಥಿತಿಯೇ ಆಣವ-ಮಾಯಾ-ಕಾರ್ಮಿಕಾದಿ ಮಲತ್ರಯಗಳೆನಿಸಿವೆ. ಶಿವನ ಸರ್ವತ್ರ ಪರಿಪೂರ್ಣ ವೃತ್ತಿಗೆ ಕಾರಣವಾದ ಇಚ್ಛಾಶಕ್ತಿ ಸಂಕೋಚಗೊಂಡಾಗ ಅದು ಅನುಭಾವದ ''ಆಣವಮಲ''ವೆನಿಸುವದು. ಇನ್ನು ಶಿವನ ಜ್ಞಾನ ಶಕ್ತಿ ಸಂಕೋಚಗೊಂಡಾಗ ಕಿಂಚಿತ್ ಜ್ಞಾನಭಾವದ ''ಮಾಯಾಮಲ'' ವೆನಿಸುವುದು. ಅದೇ ಮೇರೆಗೆ ಶಿವನ ಸರ್ವಕರ್ತೃತ್ವಶಕ್ತಿ ಸಂಕುಚಿತಗೊಂಡಾಗ ಅದು ಕಿಂಚಿತ್ ಕರ್ತೃತ್ವಭಾವದ ''ಕಾರ್ಮಿಕಮಲ'' ವೆನಿಸುವುದು. ಈ ಮಲತ್ರಯಗಳೇ ''ಜೀವ''ನನ್ನು ಆವರಿಸಿ ಅವನ ಸಕಲ ದುಃಖಗಳಿಗೆ ಕಾರಣವಾಗಿರುವವು.

ಜೀವತ್ವಂ ದುಃಖ ಸರ್ವತ್ವಂ ತದಿದಂ ಮಲ ಕಲ್ಪಿತಂ ।
ನಿರಸ್ಯತೇ ಗುರುರ್ಬೋಧಾತ್ ಜ್ಞಾನಶಕ್ತಿಃ ಪ್ರಕಾಶತೇ ।

ದೀಕ್ಷೆ : ಹೀಗೆ ದುಃಖರೂಪಿ ಅಜ್ಞಾನ ನಿವೃತ್ತಿಯಾಗಬೇಕಾದರೆ ಜ್ಞಾನಪ್ರಕಾಶಕನಾದ ಶ್ರೀ ಗುರುವಿನಲ್ಲಿಯೇ ಶಿಷ್ಯನು ಹೋಗಬೇಕಾಗುತ್ತದೆ. ಆಗ ಗುರು ತನ್ನ ಬಳಿಗೆ ಬಂದ ಶಿಷ್ಯನ ಶಕ್ತಿಪಾತಾದಿ ಲಕ್ಷಣಗಳನ್ನು ಗಮನಿಸಿ ಅವನಿಗೆ ಕ್ರಿಯಾ, ಮನು, ವೇಧಾ ಎಂಬ ತ್ರಿವಿಧ ದೀಕ್ಷೆಯನ್ನು ಅನುಗ್ರಹಿಸುವನು.

''ದೀಯತೆ ಜ್ಞಾನಸಂಬಂಧಃ ಕ್ಷೀಯತೇ ಚ ಮಲತ್ರಯಂ ।
ದೀಯತೆ ಕ್ಷೀಯತೇ ಯಸ್ಮಾತ್ಸಾದೀಕ್ಷೇತಿ ನಿಗದ್ಯತೇ'' ॥

ಇದರಿಂದ ಮಲತ್ರಯಾತ್ಮಕ ಮೂರು ಶರೀರಗಳು ನಷ್ಟವಾಗಿ ಅವು ಲಿಂಗರೂಪ ಶರೀರಗಳಾಗುವವು. ಆಗ ದೀಕ್ಷಿತನಾದ ಜೀವನು ಅಂಗ ಪದವಾಚ್ಯನಾಗುವನು.

ಷಟ್‌ಸ್ಥಲ : ಸೃಷ್ಟಿ, ಸ್ಥಿತಿ, ಲಯ, ಅನುಗ್ರಹ, ತಿರೋಧಾನ ಎಂಬ ಪಂಚಕೃತ್ಯಗಳಿಗೆ ಯಾವದು ಆಧಾರ ಭೂತವಾಗಿದೆಯೊ ಅದು ''ಸ್ಥಲ''ವೆಂದು ಕರೆಯಲ್ಪಡುತ್ತದೆ.

''ಸ್ಥೀಯತೇ ಲೀಯತೇ ಯತ್ರ ಜಗದೇತಚ್ಚರಾಚರಂ ।
ತದ್ಬ್ರಹ್ಮಸ್ಥಲ ಮಿತ್ಯುಕ್ತಂ ಸ್ಥಲತತ್ತ್ವ ವಿಶಾರದೈಃ ॥''

ಶಿವನು ತನ್ನ ಇಚ್ಛಾರೂಪವಿಮರ್ಶೆಶಕ್ತಿ ಸ್ಫುರಣದಿಂದ 'ಅಧಿಕಾಂಶ', 'ನ್ಯೂನಾಂಶ' ಎಂದು ಎರಡು ತೆರನಾದನು. ಅಧಿಕಾಂಶವೇ 'ಲಿಂಗಸ್ಥಲ'. 'ನ್ಯೂನಾಂಶವೇ' 'ಅಂಗಸ್ಥಲ' ವೆನಿಸಿತು.

''ಸ್ವಶಕ್ತಿಕ್ಷೋಭಮಾತ್ರೇಣ ಸ್ಥಲಂದ್ವಿವಿಧಂ ಭವೇತ್ ।
ಏಕಂ ಲಿಂಗಸ್ಥಲಂ ಪ್ರೋಕ್ತಂ ಅನ್ಯದಂಗಸ್ಥಲಂ ಸ್ಮೃತಂ ॥''

-ಶಿವಾನುಭವಸೂತ್ರ

ಇದರಲ್ಲಿ 'ಲಿಂಗಸ್ಥಲ'ವೇ ಉಪಾಸ್ಯ. 'ಅಂಗಸ್ಥಲ'ವೇ ಉಪಾಸಕಗಳಾದವು. ಈ ಕಾರಣದಿಂದ ಉಪಾಸ್ಯವಾದ 'ಲಿಂಗ' ತತ್ತ್ವಕ್ಕೂ ಉಪಾಸಕನಾದ 'ಅಂಗ' ತತ್ತ್ವಕ್ಕೂ ಎಷ್ಟೂ ಭೇದವಿಲ್ಲ. ಅದಕ್ಕಾಗಿಯೇ ''ನಾರುದ್ರೋರುದ್ರ ಮರ್ಚಯೇತ್'' ಎಂದು ಹೇಳಲಾಗುತ್ತದೆ. ಮೇಲೆ ತಿಳಿಸಿದಂತೆ ಅಂಗ–ಲಿಂಗವೆಂದು ಎರಡು ತೆರನಾದಂತೆ, ಸ್ಥಲಗತ 'ಶಕ್ತಿ'ಯು ಕಲೆ–ಭಕ್ತಿ ಎಂದು ಎರಡು ವಿಧವಾಯಿತು. ಕಲೆ ಲಿಂಗವನ್ನಾಶ್ರಯಿಸಿತು. ಭಕ್ತಿ ಅಂಗವನ್ನಾಶ್ರಯಿಸಿತು.

ಲಿಂಗಗತಶಕ್ತಿ ''ಪ್ರವೃತ್ತ್ಯೋನ್ಮುಖ'', ಅಂಗಗತಶಕ್ತಿ ''ನಿವೃತ್ತ್ಯೋನ್ಮುಖ''. 'ಶಕ್ತಿ' ಪ್ರಪಂಚದ ಸೃಷ್ಟಿಗೆ ಕಾರಣವಾದರೆ 'ಭಕ್ತಿ' ಪ್ರಪಂಚದ ಲಯಕ್ಕೆ ಕಾರಣವಾಗುವುದು. ಅದಕ್ಕಾಗಿಯೇ ಶ್ರೀ ಬಸಣ್ಣನವರು ''ಕೊಲುವನೆಂಬುವ ಭಾಷೆ ಭಕ್ತನದು'' ಎಂದು ಹೇಳಿರುವರು. ಈ ಶಕ್ತಿ–ಭಕ್ತಿಗಳೇ ಲಿಂಗಾಂಗ ಸ್ಥಲಗಳಾಗಿ ಉಪಾಸ್ಯೋಪಾಸಕಗಳೆನಿಸಿದವು.

''ಲಿಂಗ'' ತತ್ತ್ವ, ಇಷ್ಟ–ಪ್ರಾಣ–ಭಾವ ಎಂದು ಮೂರುವಿಧ ಲಿಂಗಗಳಾದವು. ಒಂದನೆಯದಾದ 'ಭಾವಲಿಂಗ' ನಿಷ್ಕಲ ಭಾವಗ್ರಾಹ್ಯ. ಎರಡನೆಯದಾದ 'ಪ್ರಾಣಲಿಂಗ' ಸಕಲ ನಿಷ್ಕಲ ಮನೋಗ್ರಾಹ್ಯ. ಅದರಂತೆ ಮೂರನೆಯದಾದ ಇಷ್ಟಲಿಂಗ ಸಕಲ ಚಕ್ಷುಗ್ರಾಹ್ಯ. ಈ ಮೂರು ಲಿಂಗಗಳು ಪರಶಿವನ ಸತ್–ಚಿತ್–ಆನಂದ ರೂಪಗಳಾಗಿರುವವಲ್ಲದೆ ಏಕತ್ವಬೋಧಕವಾದ ''ತತ್ತ್ವಮಸಿ' ಮಹಾವಾಕ್ಯದಲ್ಲಿ ಸಮನ್ವಯವಾಗಿರುವವು.

ಈ ಲಿಂಗತ್ರಯಗಳೇ ಮುಂದೆ ಒಂದೊಂದರಲ್ಲಿ ಎರಡೆರಡು ತೆರನಾದವು. ಅವು ಕ್ರಮವಾಗಿ ಆಚಾರಲಿಂಗ ಗುರುಲಿಂಗ–ಶಿವಲಿಂಗ–ಜಂಗಮಲಿಂಗ–ಪ್ರಸಾದಲಿಂಗ– ಮಹಾಲಿಂಗ ಎಂದು ಷಡ್ರೂಪ ಹೊಂದಿದವು.

ಇದೇ ಮೇರೆಗೆ ''ಅಂಗ'' ಪದವಾಚ್ಯನಾದ ಜೀವನೂ ತ್ಯಾಗಾಂಗ–ಭೋಗಾಂಗ –ಯೋಗಾಂಗ ಎಂದು ಮೂರು ವಿಧವಾದನು. ಏಕೆಂದರೆ ತ್ಯಾಗಪೂರ್ವಕವಾದ ಭೋಗವೇ ಯೋಗವೆನಿಸುವದು. ಆಮೇಲೆ ಮೇಲೆ ಹೇಳಿದ ಷಡ್ಲಿಂಗಗಳ ಅನುಸಂಧಾನಕ್ಕಾಗಿ ಅಂಗನು ಭಕ್ತ ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂದು ಆರು ಪ್ರಕಾರವಾದನು. ಇದರಂತೆ 'ಶಿವನಿಷ್ಠ ಶಕ್ತಿ'ಯೂ 'ಲಿಂಗಸ್ಥಲ'ವನ್ನಾಶ್ರಯಿಸಿ 'ಕಲೆ' ಎಂತಲೂ ಅಂಗಸ್ಥಲವನ್ನಾಶ್ರಯಿಸಿ 'ಭಕ್ತಿ' ಎಂತಲೂ ಎರಡು ವಿಧವಾಯಿತು.

'ಕಲೆ' ಎಂದರೆ ಜೀವನನ್ನು ಆವರಿಸಿರುವ ಕತ್ತಲೆಯನ್ನು ಕಳೆಯುವ ಶಕ್ತಿ ಇದು ಕ್ರಮವಾಗಿ ನಿವೃತ್ತಿಕಲೆ, ಪ್ರತಿಷ್ಠಾಕಲೆ, ವಿದ್ಯಾಕಲೆ, ಶಾಂತಿಕಲೆ, ಶಾಂತತೀತೋತ್ತರ ಕಲೆ, ಹೀಗೆ ಆರು ವಿಧವಾಯಿತು. ಆದರಂತೆ ಲಿಂಗದಲ್ಲಿ ಬೆರೆಯಬೇಕೆಂಬ ಭಕ್ತಿಯು ತನ್ನ ಉತ್ಕಟೇಚ್ಛೆಯಿಂದ ಕ್ರಮವಾಗಿ ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾನಭಕ್ತಿ, ಅನುಭವಭಕ್ತಿ, ಆನಂದಭಕ್ತಿ, ಸರ್ವರಸಭಕ್ತಿ ಎಂದು ಆರು ರೀತಿಯಲ್ಲಿ ಪರಿಣಮಿಸಿತು.

ವೀರಶೈವಸಿದ್ಧಾಂತವೆಂದರೆ ಭಕ್ತಿಯ ವಿಕಾಸವೇ ಆಗಿದೆ. ಕೆಳಗೆ ಕಾಣಿಸಿದ ಶ್ರೀಮದಲ್ಲಮಪ್ರಭುಗಳ ವಚನದಲ್ಲಿ ಸಂಪೂರ್ಣ ಷಟ್‌ಸ್ಥಲ ಸಿದ್ಧಾಂತವನ್ನೇ ಕಾಣಬಹುದು.

> ''ವಿಶ್ವಾಸದಿಂದ ಭಕ್ತನಾಗಿ, ಆ ವಿಶ್ವಾಸದೊಳಗಿನ ನಿಷ್ಠೆಯಿಂದ ಮಹೇಶ್ವರನಾಗಿ, ಆ ನಿಷ್ಠೆಯೊಳಗಿನ ಸಾವಧಾನದಿಂ ಪ್ರಸಾದಿಯಾಗಿ, ಆ ಸಾವಧಾನದೊಳಗಿನ ಸ್ವಾನುಭಾವದಿಂ ಪ್ರಾಣಲಿಂಗಿಯಾಗಿ, ಆ ಸ್ವಾನುಭಾವ ದೊಳಗಿನ ಅರಿವಿನಿಂ ಶರಣನಾಗಿ, ಆ ಅರಿವು ನಿಜದಲ್ಲಿ ಸಮರಸ ಭಾವಸ್ಯೆದಿದ ನಿರ್ಭಾವದ ಪದದೊಳುನಿಂದ ಭೇದವೇ ಐಕ್ಯಸ್ಥಲ ಕಾಣಾ ಗುಹೇಶ್ವರಾ''

ಈ ರೀತಿ ಭಕ್ತಿ–ಭಕ್ತಿಗಳಲ್ಲಿಯ ನಿವೃತ್ತಾದಿ ಆರು ಕಲೆಗಳು, ಆಚಾರಾದಿ ಆರು ಲಿಂಗಗಳನ್ನು ಆಶ್ರಯಿಸಿದವು. ಅದೇ ಮೆರೆಗೆ ಶ್ರದ್ಧಾದಿ ಆರು ಭಕ್ತಿಗಳು, ಭಕ್ತಾದಿ

ಆರು ಸ್ಥಲಗಳನ್ನು ಆಶ್ರಯಿಸಿದವು. ಇದರಿಂದಾಗಿ ಭಕ್ತ ಶ್ರದ್ಧಾಭಕ್ತಿಯಿಂದ ಆಚಾರಲಿಂಗದಲ್ಲಿ, ಮಹೇಶ ನಿಷ್ಠಾಭಕ್ತಿಯಿಂದ ಗುರುಲಿಂಗದಲ್ಲಿ, ಪ್ರಸಾದಿ ಅವಧಾನ ಭಕ್ತಿಯಿಂದ ಶಿವಲಿಂಗದಲ್ಲಿ, ಪ್ರಾಣಲಿಂಗಿ ಅನುಭವಭಕ್ತಿಯಿಂದ ಜಂಗಮಲಿಂಗದಲ್ಲಿ, ಶರಣ ಆನಂದಭಕ್ತಿಯಿಂದ ಪ್ರಸಾದಲಿಂಗದಲ್ಲಿ, ಐಕ್ಯ ಸಮರಸಭಕ್ತಿಯಿಂದ ಮಹಾಲಿಂಗದಲ್ಲಿ ಬೆರೆದರು.

'ಲಿಂಗಾಂಗ ಸಾಮರಸ್ಯ'ವೆಂದರೆ ಆರು ಅಂಗಸ್ಥಲ, ಆರು ಲಿಂಗಸ್ಥಲ ಅದರಂತೆ ಷಡ್ವಿಧಭಕ್ತಿ ಮತ್ತು ಷಡ್ವಿಧಶಕ್ತಿ ಇವೇ ಮುಂತಾದುವುಗಳು ಒಂದುಗೂಡುವದು. ಹೀಗೆ ಇವೆಲ್ಲವುಗಳಲ್ಲಿ ಒಂದು ಸ್ವಭಾವ ಉಂಟಾದಾಗ 'ಸಾಮರಸ್ಯ' ಘಟಿಸುವದು.

''ಸಮಾನಃ ರಸಃ ಯಸ್ಯ ತಸ್ಯ ಭಾವಃ ಸಾಮರಸ್ಯಂ ।''

ಎಂದು ಅನುಭವಿಗಳು ಇದನ್ನೇ ಹೇಳುವರು.

ಪ್ರತಿ ಮತದಲ್ಲಿಯೂ ಸಾಮಾಜಿಕ ವಿಭಾಗ, ನೈತಿಕವಿಭಾಗ ಮತ್ತು ತತ್ತ್ವವಿಭಾಗ ಎಂದು ಮೂರು ವ್ಯವಸ್ಥೆಗಳು ಇರುತ್ತವೆ. ಸಾಮಾಜಿಕ ವಿಭಾಗದಲ್ಲಿ ''ಅಷ್ಟಾವರಣ'' ನೈತಿಕವಿಭಾಗದಲ್ಲಿ ''ಪಂಚಾಚಾರ'' ತತ್ತ್ವವಿಭಾಗದಲ್ಲಿ ''ಷಟ್‌ಸ್ಥಲ'' ಹೀಗೆ ಇರುತ್ತವೆ. ಇದರಿಂದ ವೀರಶೈವ ಸಮಾಜ ಪುರುಷನಿಗೆ ಅಷ್ಟಾವರಣವೇ ಅಂಗ, ಪಂಚಾಚಾರವೇ ಪ್ರಾಣ, ಷಟ್‌ಸ್ಥಲವೇ ಆತ್ಮವಾಗಿರುತ್ತದೆ. ತತ್ತ್ವ ನೀತಿಯ ಮೂಲಕ ಸಮಾಜದಲ್ಲಿ ಅಳವಡಬೇಕೆಂಬುದೇ ಈ ವ್ಯವಸ್ಥೆಯ ಉದ್ದೇಶ. ವೀರಶೈವನು ಅಷ್ಟಾವರಣ ಸಂಪನ್ನನೂ, ಪಂಚಾಚಾರ ಪರಾಯಣನೂ ಆಗಿರಬೇಕಾಗಿರುತ್ತದೆ.

ಅಷ್ಟಾವರಣ ಸಂಪನ್ನಃ ಪಂಚಾಚಾರ ಪರಾಯಣಃ ।
ವೈದಿಕಂ ಕರ್ಮ ಕುರ್ವೀತ ಜ್ಞಾನೈಕ ಫಲಸಾಧನಂ ॥

**ಅಷ್ಟಾವರಣ** : ಅಷ್ಟಾವರಣವೆಂದರೆ ಗುರು–ಲಿಂಗ–ಜಂಗಮ–ಭಸ್ಮ–ರುದ್ರಾಕ್ಷ–ಮಂತ್ರ–ಪಾದೋದಕ – ಪ್ರಸಾದ. ಇವುಗಳಲ್ಲಿ ಗುರು–ಲಿಂಗ–ಜಂಗಮ ಇವು ಸೇವ್ಯ ವಸ್ತುಗಳು. ಭಸ್ಮ–ರುದ್ರಾಕ್ಷ – ಮಂತ್ರ ಇವು ಸೇವಾ ಸಾಧನಗಳು. ಪಾದೋದಕ–ಪ್ರಸಾದ ಇವು ಸೇವಾ ಫಲಗಳು.

**ಪಂಚಾಚಾರ** : ಪಂಚಾಚಾರವೆಂದರೆ ಲಿಂಗಾಚಾರ, ಶಿವಾಚಾರ, ಸದಾಚಾರ, ಗಣಾಚಾರ, ಭೃತ್ಯಾಚಾರ. 'ಲಿಂಗಾಚಾರ'ವೆಂದರೆ ಸಾಧಕನು ತಾನು ಗುರುವಿನಿಂದ ದೀಕ್ಷಾ ಮುಖಾಂತರ ಲಿಂಗಧಾರಕನಾಗಿ, ಅದರಂತೆ ತನ್ನ ಬಂಧುವರ್ಗವನ್ನೆಲ್ಲ ಮಾಡಿ ವ್ಯವಹರಿಸುವದು. 'ಶಿವಾಚಾರ' ವೆಂದರೆ ಸಮಸ್ತ ಪ್ರಪಂಚವನ್ನೆ ಶಿವಮಯವನ್ನಾಗಿ ಭಾವಿಸುವುದು. 'ಸದಾಚಾರ' ವೆಂದರೆ ತಾನು 'ಕಾಯಕ' ನಿಷ್ಠನಾಗುವದು. ಈ ಕಾಯಕದಲ್ಲಿ ಸಾಧಕನಿಗೆ ಅಹಂ ಕರ್ತತ್ವಾಭಿಮಾನವಿರು ವುದಿಲ್ಲ. 'ಗಣಾಚಾರ' ಎಂದರೆ ತನ್ನ ಮತ ತತ್ತ್ವಗಳನ್ನು ತ್ರಿಕರಣ ಪೂರ್ವಕವಾಗಿ

ಪಾಲಿಸುವದು ಮತ್ತು ಅವುಗಳನ್ನು ರಕ್ಷಿಸುವದು. 'ಭೃತ್ಯಾಚಾರ'ವೆಂದರೆ ಸಮಾಜವನ್ನೆ ಶಿವನ ಅಭಿವ್ಯಕ್ತಿ ಎಂದು ಭಾವಿಸಿ ತಾನು ಅದರ ಸೇವಕನೆಂಬ ಸೇವಾ ಭಾವನೆಯನ್ನು ಬೆಳಸಿಕೊಳ್ಳುವದು. ವೀರಶೈವ ಸಿದ್ಧಾಂತದ ತತ್ತ್ವತ್ರಯಗಳಾದ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಇವುಗಳನ್ನು ಸ್ಥಲಾಭಾವದ ಮೂಲಕ ಇಲ್ಲಿ ಅತ್ಯಂತ ಸಂಕ್ಷೇಪವಾಗಿ ವಿವರಿಸಲಾಗಿದೆ.

ಉಪಸಂಹಾರ : ದೇಹಾತ್ಮಾಭಾವನೆಯೇ ಜಗತ್ತಿನ ಸರ್ವ ಅನರ್ಥಗಳ ಮೂಲ ಕಾರಣವಾಗಿದೆ. ವೀರಶೈವ ಸಿದ್ಧಾಂತದಂತೆ ಲಿಂಗಧಾರಣೆಯಿಂದ ಜೀವ–ಭಾವ ನಷ್ಟವಾಗಿ ಶಿವಭಾವ ಉಂಟಾಗುವದು. ಆಗ ಅಂಗನ ದೇಹೇಂದ್ರಿಯಗಳೇ ಲಿಂಗದ ದೇಹೇಂದ್ರಿಯಗಳಾಗುವವು. ದೇಹಗುಣಗಳೇ ಬೇರೆ. ಅವಕ್ಕೆ ಅರಿಷಡ್ವರ್ಗ ವೆನ್ನುವರು. ಆತ್ಮಗುಣಗಳೇ ಬೇರೆ, ಅವಕ್ಕೆ ಸತ್ಯ, ಶಾಂತಿ ಮುಂತಾದವುಗಳಿಗೆ ಧರ್ಮಲಕ್ಷಣಗಳೆಂದು ಹೇಳುವರು. ಲಿಂಗಭೋಗೋಪಭೋಗದಿಂದ ಅಂಗನ ಪ್ರಾಕೃತಿಕ ಶರೀರ ಹೋಗಿ ಅವನು ಪ್ರಸಾದಕಾಯನಾಗುವನು. ಉಪನಿಷತ್ತುಗಳು ಹೇಳುವ "ಆತ್ಮಕ್ರೀಡಃ" "ಆತ್ಮರತಃ" ಎಂಬ ಆತ್ಮಜ್ಞಾನಿಯ ಲಕ್ಷಣವು ಲಿಂಗ ಭೋಗೋಪಭೋಗಿಯಾದ ವೀರಶೈವನಲ್ಲಿ ಅಭಿವ್ಯಕ್ತವಾಗುವದು.

"ಲಿಂಗ" ಹೊರಗಿನಿಂದ ಬಂದುದಲ್ಲ. ಈಶ್ವರನು ಸರ್ವರ ಹೃದಯದಲ್ಲಿ ಪ್ರಕಾಶಿಸುತ್ತಿದ್ದಾನೆಂದು ಗೀತೋಪನಿಷತ್ತುಗಳು ಹೇಳುತ್ತಿವೆ. ಇದರಂತೆ ಶಿಷ್ಯನ ಹೃದಯಾಕಾಶದಲ್ಲಿ ಬೆಳಗುವ ಅರಿವೇ ಕುರುಹಾಗಿ ಗುರುವಿನ ಮೂಲಕ ಕರಸ್ಥಲಕ್ಕೆ ಬಂದಿದೆ. ಬಾಹ್ಯದಲ್ಲಿ ಜರಗುವ ಇಷ್ಟಲಿಂಗೋಪಾಸನೆಯಿಂದ ಅಂತರಂಗದಲ್ಲಿ ಪ್ರಾಣಲಿಂಗ ಹಾಗೂ ಭಾವಲಿಂಗಗಳು ಅರಳುವುವು. ಹೀಗೆ ಭಾವವು ದೈವೀ ಪ್ರಜ್ಞೆಯಿಂದ ಕೂಡಿಕೊಳ್ಳಬೇಕೆಂಬುದೇ ಧರ್ಮಾಚರಣೆಯ ಮೂಲೋದ್ದೇಶ.

ಆಕಾಶದಲ್ಲಿ ಹಾರಾಡುವ ಪಟಕ್ಕೆ ನೆಲದ ಮೇಲೆ ಅದರ ಸೂತ್ರ ಹಿಡಿದು ನಿಲ್ಲಬೇಕಾಗಿರುವಂತೆ ಜ್ಞಾನ ಕ್ರೀಯಾ ಮುಖವಾಗಲೇಬೇಕಾಗುತ್ತದೆ. ಇಲ್ಲವಾದರೆ ಅದು ಜ್ಞಾನವೆಂದು ಹೇಳಲ್ಪಡುವದಿಲ್ಲ.

> ಜ್ಞಾನವೇ ಕ್ರಿಯೆ, ಕ್ರಿಯಯೇ ಜ್ಞಾನ, ಪರಸ್ತ್ರೀ ಭೋಗಿಸಬಾರದೆಂಬುದು
> ಜ್ಞಾನ ಅಂತು ಆಚರಿಸುವದೇ ಕ್ರಿಯೆ ಅಂತು ಆಚರಿಸದಿದ್ದರೆ ಅದು ಅಜ್ಞಾನ
> ನೋಡಾ ಕೂಡಲ ಚನ್ನ ಸಂಗಮದೇವಾ
>
> –ಶ್ರೀ ಚನ್ನಬಸವಣ್ಣನವರು

ಈ ರೀತಿ ಶರಣರು ಕ್ರಿಯೆ–ಜ್ಞಾನಗಳಿಗೆ ಸಮಾನ ಪ್ರಾಶಸ್ತ್ಯ ಕೊಟ್ಟಿರುವದರಿಂದ ವೀರಶೈವವು "ಸಮಸಮುಚ್ಚಯ"ವೆಂದು ಕರೆಯಲ್ಪಟ್ಟಿದೆ.

ಮೇಲೆ ತಿಳಿಸಿದಂತೆ ಜಗತ್ತು ವೀರಶೈವರಿಗೆ ಮಿಥ್ಯವಲ್ಲ. ಅದು ಕರ್ತಾರನ ಕಮ್ಮಟ. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು. ಅಲ್ಲಿ ಸಲ್ಲುವ ರೀತಿಯಲ್ಲಿ ಇಲ್ಲಿ ಬಾಳಬೇಕೆಂದು ವೀರಶೈವ ಸಿದ್ಧಾಂತ ಬೋಧಿಸುತ್ತದೆ.

'ಶರೀರವನ್ನು ವೀರಶೈವರು ತುಚ್ಛವೆಂದು ಕಾಣುವದಿಲ್ಲ. ಅದು ಕೂಡಲಸಂಗನ ಒಲಿಸಲು ಬಂದ ಪ್ರಸಾದಕಾಯ. ಅದರಂತೆ ವಿಷಯಗಳೂ ವೀರಶೈವರಿಗೆ ತ್ಯಾಜ್ಯವಲ್ಲ. ಅವು ಶಿವಪ್ರಸಾದ ರೂಪವಾದವುಗಳು, ''ಇಳೆ ನಿನ್ನ ದಾನ, ಬೆಳೆ ನಿನ್ನದಾನ'' ಎಂದೇ ಶರಣರು ಹೇಳಿರುವರು.

ವೀರಶೈವನು ಸರ್ವತ್ರ ಶಿವಭಾವ ಇಟ್ಟುಕೊಂಡಿರುವದರಿಂದ ಅವನಿಗೆ ಯಾರಲ್ಲಿಯೂ ಲಿಂಗಭೇದವಾಗಲಿ, ಜಾತಿ ಭೇದವಾಗಲಿ ಕಾಣುವದಿಲ್ಲ. ಅದರಂತೆ ವೀರಶೈವನು ಕೈಕೊಳ್ಳುವ 'ಕಾಯಕ'ದಲ್ಲಿ ಯಾವದರಲ್ಲೂ ಮೇಲು–ಕೀಳು ಎಂಬ ಭಿನ್ನ ಭಾವನೆಗಳಿರುವದಿಲ್ಲ. ಅವೆಲ್ಲ ಶಿವನ ಆರಾಧನೆಗಳೆನ್ನುವಷ್ಟು ಪವಿತ್ರವಾಗಿರುತ್ತವೆ.

ಹೀಗೆ 'ವೀರಶೈವ ದರ್ಶನ' ವಿಶ್ವಧರ್ಮದ ತಿರುಳುಗಳನ್ನೆಲ್ಲ ಗರ್ಭೀಕರಿಸಿ ಕೊಂಡು ಮಾನವನ ಅಭ್ಯುದಯ ಶ್ರೇಯಸ್ಸುಗಳನ್ನು ಸಾಧಿಸಿಕೊಡುವ ವಿಶಿಷ್ಟ ಕೊಡುಗೆಯಾಗಿದೆ ಎಂದು ಹೇಳಬಹುದು.

■■

*

# ಮುನ್ನುಡಿ

ಶ್ರೀ ನಿ. ಪ್ರ. ಮಲ್ಲಿಕಾರ್ಜುನ ದೇಶಿಕೇಂದ್ರ ಮಹಾಸ್ವಾಮಿಗಳವರ ಪ್ರಥಮ ಪರಿಚಯ ನನಗೆ ಆದದ್ದು ಈಗ್ಗೆ ಸುಮಾರು ಒಂದು ವರ್ಷದ ಹಿಂದೆ. ಆಗ ನಾನು ಹುನಗುಂದ ತಾಲೂಕ ಹಾವರಗಿ ಗ್ರಾಮಕ್ಕೆ ಶ್ರೀ ಸಿದ್ಧಲಿಂಗೇಶ್ವರ (ಸಿದ್ಧೇಶ್ವರ) ಪುರಾಣ ಪ್ರವಚನಕ್ಕಾಗಿ ಹೋಗಿದ್ದೆ.

ಪುರಾಣ ಮಂಗಲೋತ್ಸವಕ್ಕೆ ಹಾವರಗಿ ಭಕ್ತರು ಶಿವಯೋಗ ಸಾಧನೆಯಲ್ಲಿಯೇ ಮುಪ್ಪಾದ ಶ್ರೀ ನಿ. ಪ್ರ. ಅನ್ನದಾನ ಮಹಾಸ್ವಾಮಿಗಳವರು ಹಾಲಕೆರೆ ಅವರನ್ನು ಪ್ರತಿವರ್ಷದಂತೆ ಬಿನ್ನವಿಸಲು ಹೋದಾಗ ಶ್ರೀಗಳು ತಾವು ಬಾರದೆ ಸಂತೇಕೆಲ್ಲೂರ ಶ್ರೀಗಳವರಿಗೆ ಆಮಂತ್ರಣ ಕೊಟ್ಟು ಊರಿಗೆ ಮರಳಿದರು.

ಹೀಗೆ ಆಮಂತ್ರಿತರಾಗಿ ಆಗಮಿಸಲಿರುವ ಸಂತೇಕೆಲ್ಲೂರಿನ ಶ್ರೀಗಳ ಬಗೆಗೆ ಆ ಭಾಗದಲ್ಲಿ ಸಾಕಷ್ಟು ಕೀರ್ತಿ ಆಗಲೇ ವ್ಯಾಪಕವಾಗಿತ್ತು. ಆಸ್ತಿಯಿದ್ದ ಮಠಕ್ಕೆ ಅಧಿಕಾರಿಯಾಗಬಯಸದೆ ವಿರಾಗಮೂರ್ತಿಯಾದ ಶ್ರೀ ಘನಮಠೇಶನ ಆದರ್ಶಪಾಲನೆಯ ದೀಕ್ಷೆ ತೊಟ್ಟಿದ್ದು. ಶ್ರೀ ಘನಮಠೇಶನ ಗದ್ದುಗೆಯ ಮೇಲೆ ನೆರಳು ಮಾಡಿದವರ ವಂಶ ಕ್ಷಯವಾಗುವದೆಂಬ ಭೀತಿಯಿದ್ದರೂ ಆ ಬಗ್ಗೆ ನಿದರ್ಶನವಾಗಿದ್ದರೂ ನಿರ್ಭೀತರಾಗಿ ಗದ್ದುಗೆಯ ಮೇಲೆ ಶಿಲಾಮಂಟಪ ರಚಿಸಿದ್ದು.

ಸಂತೇಕೆಲ್ಲೂರಿನಲ್ಲಿಯ ಶಿಥಿಲವಾದ ಶ್ರೀ ತೋಂಟದಾರ್ಯಮಠ ಹಾಗೂ ಅದರಲ್ಲಿಯ ಶ್ರೀ ಘನಮಠೇಶರ ಗದ್ದುಗೆಯ ಮೇಲೆ ಇಮಾರತಿ ರಚಿಸಲು ಅಂದಾಜು ೭೦–೮೦ ಸಾವಿರ ರೂಪಾಯಿ ಬೆಲೆ ಬಾಳುವ ಕಟ್ಟಡವನ್ನು ಕೇವಲ ೩–೪ ವರ್ಷಗಳಲ್ಲಿ ಸ್ವಂತ ಪರಿಶ್ರಮದಿಂದ ನಿರ್ಮಿಸಿದ್ದು. ಬಿಡುವಿಲ್ಲದ ಕಾರ್ಯಬಾಹುಳ್ಯ ದಲ್ಲಿಯೂ ''ಶ್ರೀ ಘನಮಠೇಶ ಪುರಾಣ'' ''ಕೃಷಿಜ್ಞಾನ ಪ್ರದೀಪಿಕೆ''ಗಳಂಥ ಉದ್ಗ್ರಂಥಗಳನ್ನು ಪುನಮುದ್ರಣಗೊಳಿಸಿದ್ದು.

ಶ್ರೀ ಘನಮಠೇಶರ ''ಪುಣ್ಯತಿಥಿ''ಯನ್ನು ಕೇವಲ ಸಾಂಪ್ರದಾಯಕವಾಗಿ ಮಾಡದೆ, ಅದನ್ನು ಸಾಂಸ್ಕೃತಿಕ ಪ್ರಚಾರ ಸಾಧನೆಯನ್ನಾಗಿ ಮಾಡಿ ಜನ ಪ್ರೀಯ ಗೊಳಿಸಿದ್ದು. ಶ್ರೀಗಳದು ಎತ್ತರವಲ್ಲದ ತಿಳುವಾದ ಶಾಮಲ ವರ್ಣದ ಶರೀರ. ಕಾಂತಿಯುಕ್ತ ಕಣ್ಣುಗಳು, ಕಂಚಿನಂಥ ಕಂಠ, ಮಾತಿನಲ್ಲಿ ಎಂಥವರನ್ನೂ ತಮ್ಮವರನ್ನಾಗಿಸುವ ಸೌಜನ್ಯ. ವಯಸ್ಸು ೨೪ ಎಂದು ತಿಳಿದ ಮೇಲೆ ಮೂಕವಿಸ್ಮಿತನಾದೆ. ಇಷ್ಟೊಂದು ಚಿಕ್ಕ ವಯಸ್ಸಿನಲ್ಲಿ ಹಿಂದೆ ವಿವರಿಸಿದ ಅಷ್ಟೊಂದು ಅದ್ಭುತ ಸಾಧನೆಯನ್ನು ಸಾಧಿಸಿದ ಬಗೆ ಹೇಗೆ ?

ಅನುಷ್ಠಾನ ಬಲದಿಂದಾದ ಆತ್ಮ ಶಕ್ತಿಯ ಪ್ರಭಾವವಲ್ಲದೆ ಬೇರೇನಲ್ಲವೆಂಬುದೇ ಅದರ ಅರ್ಥ. ವರುಷ ಉರುಳಿ ಮತ್ತೊಮ್ಮೆ ಪುರಾಣ ಪ್ರವಚನಕ್ಕಾಗಿ ಈ ಸಲ ಹಾವರಗಿಗೆ ಹೋದಾಗ ಅದೇ ಸಂತೇಕೆಲ್ಲೂರ ಶ್ರೀಗಳೇ ಪುರಾಣ ಮಂಗಲೋತ್ಸವಕ್ಕೆ ಹಾವರಗಿಗೆ ಆಗಮಿಸಿದರು. ಶ್ರೀಗಳು ಶ್ರೀ ಘನ ಮಠೇಶರ ತತ್ತ್ವಪದ ಗ್ರಂಥ ಪ್ರಕಾಶನ ಕುರಿತು ನನ್ನೊಡನೆ ಪ್ರಸ್ತಾಪಿಸಿದುದರ ಫಲಶ್ರುತಿಯೇ ಈಗ ಅರಳಿ ಭಕ್ತರ ಕೈಸೇರಿದ ಗ್ರಂಥಕುಸುಮ.

ಗದಗ

ದಿ. ೧೫-೧೧-೧೯೭೦

ಸಿದ್ಧಲಿಂಗಯ್ಯ ಹೊಸಮಠ

■■

*

## ಸಹಕಾರ ತತ್ತ್ವದ ಸಾಂಸ್ಕೃತಿಕ ಆಂದೋಲನ*

ಅರವತ್ತು ವರ್ಷಗಳ ಹಿಂದೆ ನಮ್ಮ ನಾಡಿಗೆ ಸಹಕಾರ ತತ್ತ್ವ ಪಾದಾರ್ಪಣೆ ಮಾಡಿದ ನಂತರ ಮುಂದೆ ಒಂದೇ ದಶಕದಲ್ಲಿ ''ಗದಗ ಅರ್ಬನ್ ಕೋ-ಅ-ಬ್ಯಾಂಕ್'' ಮೈದೋರಿ ಇಂದು ತನ್ನ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರುವದು ಅತ್ಯಂತ ಆನಂದದ ಸಂಗತಿಯಾಗಿದೆ.

ಸಹಕಾರ ತತ್ತ್ವದ ಅಮೃತ ಫಲವಾಗಿ ಬಂದ ''ಬ್ಯಾಂಕಿಂಗ್ ಪದ್ಧತಿ'' ಗದುಗಿನಲ್ಲಿ ಹೆಮ್ಮರವಾಗಿ ಬೆಳೆದು ''ಸುವರ್ಣ ಮಹೋತ್ಸವ'' ದಂಥ ಒಂದು ಭಾಗ್ಯಾವಕಾಶವನ್ನು ಪಡೆದಿರುವದು ಅದರ ಸಹಕಾರಿ ಬಂಧುಗಳಿಗೆಲ್ಲ ಹೆಮ್ಮೆಯ ಮಾತಾಗಿದೆ.

ಒಳ್ಳೆಯದನ್ನು ಗುರುತಿಸಲು ಒಳ್ಳೆಯ ದೃಷ್ಟಿಯೇ ಬೇಕು. ಹೇಗೆ ದೃಷ್ಟಿಯೋ ಹಾಗೆ ಸೃಷ್ಟಿ. ಕವಿಗಳಿಗೆ ನೆಲೆಬೀಡಾಗಿ ಮಹಿಮರಿಗೆ ತಪೋಭೂಮಿಯಾಗಿ ಹರಿ-ಹರರ ಸಾನ್ನಿಧ್ಯದಿಂದ ಸುಕ್ಷೇತ್ರವಾಗಿ ಪತಿಣಮಿಸಿದ ''ಗದುಗು'' ಸಹಕಾರ ''ತತ್ತ್ವದ ವಿಕಾಸಕ್ಕೂ ಅವಕಾಶ ಕಲ್ಪಿಸಿಕೊಟ್ಟದ್ದು ಅದರ ಗುಣೈಕದೃಷ್ಟಿಯನ್ನೇ ಎತ್ತಿ ತೋರಿಸುತ್ತದೆ.

ಈ ಗುಣ ಗ್ರಾಹಕತ್ವಕ್ಕೆ ಹಿನ್ನೆಲೆಯಾಗಿ ''ಸಂಸ್ಕೃತಿ'' ಕಾರಣವಾಗಿರುತ್ತದೆ. ''ಸಂಸ್ಕೃತಿ'' ಎಂದರೆ ಆರ್ಯ ವ್ಯವಸಾಯದ ಫಲ. ಅದು ಒಂದು ದಿನದಲ್ಲಿ ಹುಟ್ಟಿ ಬೆಳೆಯುವದಲ್ಲ. ಅದರ ಸಾಧನೆಗೆ ಸಹಸ್ರಾರು ವರ್ಷಗಳ ಇತಿಹಾಸವಿದೆ. ಇಂದು ನಮ್ಮಲ್ಲಿ ''ಸಂಸ್ಕೃತಿ''ಯ ಉದ್ಗಮ ವಿಕಾಸಗಳಾಗಿದ್ದರೆ, ಅದಕ್ಕೆ ಪೋಷಕವಾಗಿ ವಿಶ್ವ-ರಾಷ್ಟ್ರ ಮುತ್ತು ನಾಡಿನ ಸಂಸ್ಕೃತಿಗಳು ಕಾರಣವಾಗಿರುತ್ತವೆ. ಈ ದೃಷ್ಟಿಯಿಂದ ಅವೆಲ್ಲವುಗಳ ಸಂಕ್ಷಿಪ್ತ ಸಮೀಕ್ಷೆಯನ್ನು ಇಲ್ಲಿ ಮಾಡಿದರೆ ಅಪ್ರಸುತ್ತವಾಗಲಾರದು.

ವಿಶ್ವ:

ವಿಶ್ವದ ರಹಸ್ಯವನ್ನು ಹಿಡಿದು ಹೊರಟಾಗ ನಮಗೆ ಮೊದಲು ಸಹಾಯಕವಾಗುವವು ಪುರಾಣಗಳು. ಪುರಾಣಗಳೆಂದರೆ ಭಾರತೀಯ ಸಂಸ್ಕೃತಿಯ ಜೀವಂತ ಪ್ರತೀಕಗಳು. ಈ ಬಗ್ಗೆ ಪ್ರಸಿದ್ಧ ಪಾಶ್ಚಾತ್ಯ ಪಂಡಿತರಾದ ಎಚ್. ಜಿ. ವೇಲ್ಸ ಅವರು ತಮ್ಮ "But lines of world History" ಎಂಬ ಗ್ರಂಥದಲ್ಲಿ ''ಜಗತ್ತಿನ ನಿರ್ಮಾಣ ಪುರಾಣಗಳಲ್ಲಿಯ ಸೃಷ್ಟಿಯ ಕ್ರಮವನ್ನೇ ಹೋಲುತ್ತದೆ'' ಎಂದು

---

* ಅಪ್ರಕಟಿತ ಲೇಖನ

ಹೇಳಿದ್ದು ಇಲ್ಲಿ ಗಮನಾರ್ಹವಾಗಿದೆ. ಪುರಾಣಗಳಲ್ಲಿ ವರ್ಜಿತವಾದಂತೆ ಪರಮಾತ್ಮನು ತನ್ನಿಂದ ಆಕಾಶವನ್ನು, ಅದರಿಂದ ಗಾಳಿಯನ್ನು, ಗಾಳಿಯಿಂದ ಬೆಂಕಿಯನ್ನು, ಬೆಂಕಿಯಿಂದ ನೀರನ್ನು, ನೀರಿನಿಂದ ಪೃಥ್ವಿಯನ್ನು ಸೃಷ್ಟಿಸಿ ಅವೆಲ್ಲವುಗಳ ''ಸಹಕಾರ''ದಿಂದ ಬ್ರಹ್ಮಾಂಡವನ್ನು ನಿರ್ಮಿಸಿದನು.

ಪರಿವರ್ತನಶೀಲವಾದ ಜಗತ್ತು ಚಕ್ರನೇಮೀ ಕ್ರಮದಲ್ಲಿ ಪರಿಭ್ರಮಣ ಮಾಡುವಾಗ, ಒಂದೊಂದು ದೇಶದ ''ಸಂಸ್ಕೃತಿ'' ಹಾಗೂ ''ನಾಗರೀಕತೆ''ಗಳಲ್ಲಿ ಅಳಿವು–ಉಳಿವುಗಳಾಗಲಿ ಇಲ್ಲವೆ ಬದಲಾವಣೆಗಳಾಗಲಿ ಆಗುವದು ಸ್ವಾಭಾವಿಕ. ಇದಕ್ಕೆ ಪ್ರಾಚೀನ ಸಂಸ್ಕೃತಿಗಳಾದ ಕ್ರೀಟನ್, ಈಜಿಪ್ತಿಯನ್, ಸುಮೇರಿಯನ್, ಅಸ್ಸೀರಿಯನ್, ಬ್ಯಾಬಿಲೋನಿಯನ್ ಮತ್ತು ಐಬೇರಿಯನ್ ಮುಂತಾದ ದೇಶಗಳ ದೃಷ್ಟಾಂತಗಳೇ ನಿದರ್ಶನ.

ಹೀಗೆ ಆಯಾ ಕಾಲದಲ್ಲಿ ಕಾಣಿಸಿಕೊಂಡ ಆಯಾ ಜನಾಂಗಗಳಲ್ಲಿ ವಿವಿಧ ''ಸಂಸ್ಕೃತಿ''ಗಳು ಹುಟ್ಟಿಕೊಂಡದ್ದು ನಿಜ. ಒಂದು ಜನಾಂಗವು ಮತ್ತೊಂದು ಜನಾಂಗದ ''ನಾಗರೀಕತೆ''ಯನ್ನು ಅನುಸರಿಸಬಹುದೇ ಹೊರತು ''ಸಂಸ್ಕೃತಿ''ಯನ್ನು ಅನುಸರಿಸಲಾರದು. ಆದ್ದರಿಂದ ''ನಾಗರೀಕತೆ''ಯಲ್ಲಿ ಸಮಷ್ಟಿರೂಪವಿದೆ ಎಂದು ಭಾವಿಸಿದರೂ ''ಸಂಸ್ಕೃತಿ''ಯಲ್ಲಿ ಅದರದೇ ಆದ ವೈಶಿಷ್ಟ್ಯವಿದ್ದೇ ಇರುತ್ತದೆ.

ಉದಾಹರಣೆಗೆ ಚೀನ ಸಂಸ್ಕೃತಿಯಲ್ಲಿ ನೀತಿ, ಭಾರತೀಯ ಸಂಸ್ಕೃತಿಯಲ್ಲಿ ಅಧ್ಯಾತ್ಮಿಕ ವಿವೇಚನೆ, ಯೇಸು ತಪೋವಿಯ ಸಂಸ್ಕೃತಿಯಲ್ಲಿ ಕೈಗಾರಿಕೆ ಮತ್ತು ವ್ಯಾಪಾರ, ಇಜಿಪ್ತದಲ್ಲಿ ಸಾಮ್ರಾಜ್ಯಾಕಾಂಕ್ಷೆ, ಗ್ರೀಕರಲ್ಲಿ ಕಲಾ ಮತ್ತು ಸ್ವಾತಂತ್ರ್ಯಕಾಂಕ್ಷೆ, ರೋಮನ್ ಸಂಸ್ಕೃತಿಯಲ್ಲಿ ಕಟ್ಟಳೆ ಮತ್ತು ಕಾನೂನು, ಅರಬ್ ಸಂಸ್ಕೃತಿಯಲ್ಲಿಯ ಅಭಿಮಾನ, ಮಧ್ಯಯುಗದ ಯುರೋಪ ಸಂಸ್ಕೃತಿಯಲ್ಲಿ ಸಾಮಾಜಿಕ ಮತ್ತು ನೈತಿಕ ವ್ಯವಸ್ಥೆ ಆಧುನಿಕ ಯುರೋಪ ಸಂಸ್ಕೃತಿಯಲ್ಲಿ ಆರ್ಥಿಕಾಭಿಲಾಷೆ ಇವು ಪ್ರಧಾನಾಂಶಗಳು.

ಈ ಎಲ್ಲ ''ಸಂಸ್ಕೃತಿ'' ಮತ್ತು ''ನಾಗರೀಕತೆ''ಗಳಲ್ಲಿ ಎಷ್ಟೇ ಭಿನ್ನತೆ, ವಿವಿಧತೆ ಗಳಿದ್ದರೂ ಅವುಗಳಲ್ಲಿ ತಾತ್ವಿಕವಾದ ಏಕರೂಪತೆ ಇರುವದೆಂಬುದನ್ನು ಅಲ್ಲಗಳೆಯಲಿ ಕ್ಕಾಗದು. ಏಕೆಂದರೆ ಮಾನವನು ಕೂಡಾ ಒಂದು ಜೀವಿ. ಜೀವ ಲಕ್ಷಣಗಳಿಂದ ಲಕ್ಷಿತನಾಗಿದ್ದಾನೆ. ದೇಶ–ಕಾಲಗಳು ಭಿನ್ನವಾದ ಮಾತ್ರಕ್ಕೆ ಅವನ ಕುಲದ ಬಾಂಧವ್ಯವೆಂದೂ ಬೇರ್ಪಡದು.

ಅಂತೆಯೇ ಪ್ರಾಚೀನ ಶಿಲಾಯುಗದಿಂದ ಹಿಡಿದು ಅರ್ವಾಚೀನ ಯಂತ್ರಯುಗದ ವರೆಗೆ ಸಹಸ್ರಾರು ವರ್ಷಗಳ ಅನುಭವ ಪಡೆದ ಮಾನವೀಯ ''ಸಂಸ್ಕೃತಿ''ಗಳು ಪ್ರಪಂಚದ ಮುನ್ನಡೆಗೆ ಕೊಟ್ಟ ಅಮೂಲ್ಯ ಕಾಣಿಕೆಗಳಾಗಿವೆ. ಅವೆಲ್ಲವುಗಳ ಹಾರ್ದಿಕ ''ಸಹಕಾರ''ದಲ್ಲಿಯೇ ಜಗತ್ತಿನ ಕಲ್ಯಾಣವಿದೆ.

ಭಾರತ :

ಪ್ರಪಂಚದ ದೃಷ್ಟಿಯಲ್ಲಿ ''ಭಾರತ'' ಗೌರವದ ಸ್ಥಾನ ಹೊಂದಿದ್ದರೆ ಅದಕ್ಕೆ ಕಾರಣ ಅದರ ''ಸಂಸ್ಕೃತಿ''. ಸಂಸ್ಕೃತಿ ಎಂದರೆ ಸಾತ್ವಿಕ ಜೀವನ ವಿಧಾನ. ಅದು ಜನ ಜೀವನದ ಸಮಸ್ತ ಕ್ಷೇತ್ರಗಳಿಗೂ ಶುಚಿತ್ವವನ್ನು ತಂದುಕೊಟ್ಟು ಜನತೆಯನ್ನು ಉದಾರ ಚರಿತನನ್ನಾಗಿ ಪರಿವರ್ತಿಸುವದು. ಇದರಿಂದ ಮಾನವನಲ್ಲಿ ವಿಶ್ವಾತ್ಮ ಭಾವನೆ ಉಂಟಾಗಿ ಅವನು ವಿಶ್ವ ಕುಟುಂಬಿಯಾಗುವನು.

''ಸಂಸ್ಕೃತಿ''ಯು ಮುಖ್ಯಾರ್ಥದಲ್ಲಿ ಆಧ್ಯಾತ್ಮಿಕ ಪ್ರಗತಿಯನ್ನು ಸೂಚಿಸುತ್ತಿದೆ. ಗುಣಾರ್ಥದಲ್ಲಿ ದೇಶ–ಕಾಲ–ಪರಿಸ್ಥಿತಿಗಳನ್ನು ಅನುಸರಿಸಿದ ''ನಾಗರೀಕತೆ'' ಎಂದು ಅರ್ಥವಾಗುತ್ತಿದೆ. ಮಾನವನ ಪ್ರಗತಿಯಲ್ಲಿ ''ಸಂಸ್ಕೃತಿ''ಯು ಜೀವಸ್ವರೂಪ. ''ನಾಗರೀಕತೆ'' ಸಾಮಾಜಿಕ ವ್ಯವಸ್ಥೆ ಮತ್ತು ''ಸಂಸ್ಕೃತಿ''ಯಲ್ಲಿ ಘನದ ಪ್ರಾಧಾರ್ಭಾವವಿದ್ದರೆ ''ನಾಗರೀಕತೆ''ಯಲ್ಲಿ ವಿಘನದ ಅವಿಷ್ಕಾರವಿರುತ್ತಿದೆ. ಈ ಕಾರಣದಿಂದ ''ನಾಗರಿಕತೆ'', ''ಸಂಸ್ಕೃತಿ''ಗೆ ಕೇವಲ ಉಪಷ್ಟಂಭಕ.

ಸಂಸ್ಕೃತಿ ಮೂಲತಃ ಒಂದು. ಆದರೆ ಅದು ಆಯಾ ದೇಶಗಳಲ್ಲಿ ಕಾಣಿಸಿಕೊಳ್ಳುವ ರೀತಿ ನೀತಿಗಳು ಮಾತ್ರ ಬೇರೆ. ಇಂದು ಪ್ರಪಂಚದಲ್ಲಿ ಕಾಣಿಸಿಕೊಳ್ಳುವ ಸಂಸ್ಕೃತಿಗಳು ಎರಡು. ಒಂದು ಭಾರತೀಯ ಸಂಸ್ಕೃತಿ ಇನ್ನೊಂದು ಪಾಶ್ಚಾತ್ಯ ಸಂಸ್ಕೃತಿ. ಸಧ್ಯ ಎರಡೂ ಪ್ರಭಾವಿಗಳಾಗಿದ್ದರೂ ಭಾರತೀಯ ಸಂಸ್ಕೃತಿಗೆ ತನ್ನದೇ ಆದ ವೈಶಿಷ್ಟ್ಯವಿದೆ.

ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಮಾನವನ ಪೌರುಷ ಪ್ರಾಧಾನ್ಯತೆ ಇದೆ. ಆದರೆ ಭಾರತೀಯ ಸಂಸ್ಕೃತಿಯಲ್ಲಿ ''ತೇನವಿ ನಾ ತೃಣಮಪಿ ನ–ಚಲತಿ'' ಎಂಬ ನಂಬಿಕೆ ಇರುವದರಿಂದ ಭಗವಾನುಗ್ರಹ ಪ್ರಾಪ್ತಿಯೇ ಇಲ್ಲಿ ಮುಖ್ಯವಾಗಿದೆ. ಇಂದು ಪಾಶ್ಚಾತ್ಯರಲ್ಲಿ ಮಿತಿ ಮೀರಿದ ರಾಷ್ಟ್ರೀಯತೆ ಬೇರೆ ದೇಶಗಳನ್ನು ಗೌಣವಾಗಿ ಕಾಣುವಂತೆ ಮಾಡಿದೆ. ಅಂತೆಯೇ ತಮ್ಮ ರಾಷ್ಟ್ರದ ಸಂಪದಾಭಿವೃದ್ಧಿಗಾಗಿ ಇನ್ನುಳಿದ ರಾಷ್ಟ್ರಗಳಿಗೆ ಪೀಡೆಯನ್ನುಂಟು ಮಾಡುವದು ಅಲ್ಲಿಯ ಸಂಸ್ಕೃತಿಯ ಫಲವಾಗಿದೆ.

ಆದರೆ ಭಾರತೀಯ ಸಂಸ್ಕೃತಿಯಲ್ಲಿ ಈ ಸಂಕುಚಿತ ದೃಷ್ಟಿಯಲ್ಲಿ ಒಂದೇ ಸೃಷ್ಟಿಗೆ ಒಳಪಟ್ಟವರೆಲ್ಲ ಒಬ್ಬ ದೇವರ ಮಕ್ಕಳೆಂಬುದೇ ಭಾರತೀಯರ ಭಾವನೆ. ಇದನ್ನು ''ಸಂತೋಷಂ ಜನಯೇತ್ ಪ್ರಘಃ ತದೇವೇಶ್ವರಪೂಜನಂ'' ಎಂಬ ಭಾರತೀಯರ ಆದರ್ಶದಿಂದ ಅರಿಯಬಹುದು.

ಇಂಥ ಮಹಾಸಂಸ್ಕೃತಿಯ ಫಲವಾಗಿ ಭಾರತೀಯರಲ್ಲಿ ''ಅಧ್ಯಾತ್ಮಿಕ ಮನೋಭಾವ'' ಮತ್ತು ''ಸಹನಶೀಲತೆ'' ಗಳು ಬೆಳೆದುಬಂದವು. ಅದಕ್ಕಾಗಿಯೇ ಭಾರತೀಯ ಸಂಸ್ಕೃತಿ ವಿವಿಧ ಮತ ಪಂಥಗಳಿಗೂ ತನ್ನಲ್ಲಿ ಆಶ್ರಯಕೊಟ್ಟು ಆತ್ಮಸಾಕ್ಷಿ ಮಾಡಿಕೊಂಡಿತು. ಇದು ಪ್ರತಿ ವ್ಯಕ್ತಿ ಸ್ವಾತಂತ್ರ್ಯಕ್ಕೆ ಭಾರತೀಯ ಸಂಸ್ಕೃತಿ ಕೊಟ್ಟ ಮಹಾ ಕಾಣಿಕೆ.

ವಿದೇಶಗಳಲ್ಲಿ ಇಂಥ ಮತವನ್ನೇ ಅಂಗೀಕರಿಸಬೇಕು; ಇಂಥ ಮತ ಗ್ರಂಥವನ್ನೇ ಮನ್ನಿಸಬೇಕು ಎಂಬ ಉಗ್ರ ಕಟ್ಟಳೆ ಇದೆ. ಆದರೆ ಈ ನಿರ್ಬಂಧ ಭಾರತೀಯ ಸಂಸ್ಕೃತಿಯಲ್ಲಿಲ್ಲ. ಭಾರತದಲ್ಲಿ ಪ್ರತಿ ವ್ಯಕ್ತಿಯೂ ತನ್ನ ಮತಾಚರಣೆಯನ್ನು ತನ್ನ ಇಚ್ಛಾನುಸಾರ ಆಚರಿಸಬಹುದು. ಇದರಿಂದ ಆಸೇತು ಹಿಮಾಚಲದವರೆಗೆ ಭಾರತ ಅಖಂಡ. ಇಲ್ಲಿಯ ಪ್ರತಿ ವ್ಯಕ್ತಿಯೂ ಭಾರತೀಯ. ಸಾಮ್ರಾಟ ಅಶೋಕನು ತನ್ನ ಧರ್ಮವನ್ನು ಜಂಬೂ ದ್ವಿಪದಲ್ಲೆಲ್ಲ ಪ್ರಚಾರ ಮಾಡಿದನೆಂದು ಅವನ ಶಾಸನಗಳಿಂದ ತಿಳಿದು ಬರುತ್ತದೆ. ಈ ಜಂಬೂ ದ್ವೀಪವನ್ನು ಸ್ವಾಯಂಭುವ ಮನುವಿನ ಮೊಮ್ಮಗ ''ಅಗ್ನಿದ್ರ'' ಅವನ ಮಗ ''ನಾಭಿರಾಜ'' ಅವನ ಮಗ ದೇವಾಂಶ ಸಂಭೂತನಾದ ''ಋಷಭದೇವ'' ಕ್ರಮವಾಗಿ ಆಳಿದರು.

ಈ ಋಷಭದೇವನನ್ನು ಜೈನಪುರಾಣಗಳು ತಮ್ಮ ತೀರ್ಥಂಕರನೆಂದು ಭಾವಿಸುತ್ತಿವೆ. ಇವನ ಮಗನೇ ''ಭರತ'' ಹಿಂದುಕುಶ್ ಪರ್ವತಾವಳಿಯಿಂದ ಕನ್ಯಾಕುಮಾರಿಯವರೆಗೆ ಹಬ್ಬಿದ ಈ ದೇಶ ಮೊದಲು ''ಅಜನಾಭ ವರ್ಷ''ವೆಂದು ಕರೆಯಲ್ಪಡುತ್ತಿತ್ತು. ನಂತರ ಭರತ ಚಕ್ರವರ್ತಿಯ ಆಳ್ವಿಕೆ ಪ್ರಾರಂಭವಾದ ಮೇಲೆ ''ಭರತವರ್ಷ''ವೆಂದು ಪ್ರಸಿದ್ಧವಾಯಿತು.

**ಕರ್ನಾಟಕ :**

ವಿಶ್ವದ ಇತಿಹಾಸದಲ್ಲಿ ಭಾರತಕ್ಕೆ ಯಾವ ಸ್ಥಾನವಿದೆಯೋ ಭಾರತೀಯ ಚರಿತ್ರೆಯಲ್ಲಿಯೂ ಕನ್ನಡ ನಾಡಿಗೆ ಅದೇ ಸ್ಥಾನವಿದೆ. ಆರ್ಯರು ಭಾರತಕ್ಕೆ ಇನ್ನೂ ಕಾಲಿಡದ ಮುಂಚೆ ತನ್ನದೇ ಆದ ಉಚ್ಛಸಂಸ್ಕೃತಿ ಹಾಗೂ ನಾಗರೀಕತೆಗಳಿಂದ ಕಂಗೊಳಿಸುವ ನಾಡೊಂದು ದಕ್ಷಿಣ ಭಾರತದಲ್ಲಿ ಅತಿ ಉಚ್ಛ್ರಾಯ ಸ್ಥಿತಿಯಲ್ಲಿತ್ತೆಂಬುದನ್ನು ಪ್ರಾಚೀನ ಗ್ರಂಥಗಳು, ಪುರಾತನ ದೇವಾಲಯಗಳು, ಹಳೆಯ ವಾಸ್ತುಶಿಲ್ಪಗಳು ಹಿಂದಿನ ತಾಮ್ರ ಪಟಗಳು ಮತ್ತು ಭೂ ಗರ್ಭದಲ್ಲಿ ದೊರೆತ ಚಿನ್ನ–ಬೆಳ್ಳಿ–ತಾಮ್ರ ನಾಣ್ಯಗಳು ತಿಳಿಸುತ್ತವೆ.

ಮೆಹಂಜೋದಾರರಲ್ಲಿ ಉಪಲಬ್ಧವಾದ ಲಿಪಿಗಳು ಬಹುಮಟ್ಟಿಗೆ ಕನ್ನಡ ಲಿಪಿಯನ್ನೇ ಹೋಲುವದರಿಂದ ದ್ರಾವಿಡಿಯನ್ ಸಂಸ್ಕೃತಿ ಪ್ರಾಗ್ಭಾರತದ ಮೇಲೆ ಹೀಗೆ ತನ್ನ ಪ್ರಭಾವ ಬೀರಿತ್ತೆಂಬುದನ್ನು ಊಹಿಸಲವಕಾಶವಿದೆ.

ಈ ನಾಡಿಗೆ ''ಕರ್ನಾಟಕ'' ಎಂಬ ಹೆಸರು ಬರಲು ಅನೇಕ ಕಾರಣಗಳಿವೆ. ಸಂಸ್ಕೃತ ಕವಿ ವೆಂಕಟಾದ್ವಾರಿ ''ಕರ್ಣಯೋಃ ಅಜತಿ ಕರ್ಣಜ'' ಎಂದು ಹೇಳಿದ್ದಾನೆ. ಅಂದರೆ ಎಲ್ಲರ ಕಿವಿಗಳಲ್ಲಿ ನಿನಾದಿಸುವ ಅರ್ಥಾತ ''ಕೀರ್ತಿ ಶಾಲಿಯಾದ ದೇಶ''ವಂದೇ ಅವನ ಅಭಿಪ್ರಾಯ. ಆದರೆ ಕರ್ನಾಟಕದ ಅಸ್ತಿತ್ವ ಸಂಸ್ಕೃತ ಭಾಷೆ ಭಾರತಕ್ಕೆ ಆಗಮಿಸುವ ಪೂರ್ವದಲ್ಲಿಯೇ ಇದ್ದುದರಿಂದ ಈ ನಾಡಿನ ಹೆಸರಿನ ಮೂಲವನ್ನು ಸಂಶೋಧಕರು ದ್ರಾವಿಡ ಭಾಷೆಗಳ ಮೂಲಕವಾಗಿಯೇ ಪರಿಶೀಲಿಸಿದ್ದಾರೆ.

ದ್ರಾವಿಡ ಭಾಷೆಗಳಲ್ಲಿ ಒಂದಾದ ಮತ್ತು ಎರಡನೇ ಶತಮಾನದ್ದೆಂದು ಹೇಳಲಾಗುವ ''ಶಿಲಪ್ಪದಿಕಾರಂ'' ಎಂಬ ತಮಿಳು ಕಾವ್ಯದಲ್ಲಿ ''ಕನ್ನಡರ್'' ಎಂಬ ಮಾತು ಬರುತ್ತದೆ. ಇದನ್ನು ಪಾಂಡ್ಯರ ದೊರೆ ಶಡೆತುನ್ ಪರಾಂತಕ ಎಂಬವನ ''ಪೆರ್ವಕುಡಿ ಶಾಸನ''ದಲ್ಲಿ ಕಾಣಿಸಿಕೊಳ್ಳುವ ''ಕರ್ನಾಡಗನ್'' ಎಂಬ ಶಬ್ದದೊಡನೆ ಆಧಾರವಾಗಿ ತೆಗೆದುಕೊಂಡು ನೋಡಿದರೆ ''ಕರ್ನಾಡು'' ಎಂಬ ಶಬ್ದವೇ ಶುದ್ಧ ದ್ರಾವಿಡ ಮೂಲವೆಂದು ಅರ್ಥವಾಗುತ್ತದೆ.

ಮೆಹಂಜೋದಾರೋದಲ್ಲಿ ಉಪಲಬ್ಧವಾದ ಚಿತ್ರಲಿಪಿಗಳಲ್ಲಿ ಕಂಡುಬರುವ ''ಕಣ್ಣನೀರ್'' ಇದು ''ಕನ್ನಡಿಗ'' ಶಬ್ದದ ಸಮಾನಾರ್ಥವಾಗಿದೆ ಎಂದು ಸಂಶೋಧಕರ ಅಭಿಪ್ರಾಯ. ದ್ರಾವಿಡ ಭಾಷೆಯಾಧ ತಮಿಳಿನಲ್ಲಿ ''ಕಣ್ಣನ್'' ಎಂದರೆ ''ಶಿವ'' ಎಂದಾಗುತ್ತದೆ. ಇದರಿಂದ ''ಕನ್ನಡಿಗರು ಶಿವಾರಾಧಕರು'' ಎಂದು ಧ್ವನಿತವಾಗುವದರಿಂದ ''ದ್ರಾವಿಡರು ಮೂಲತಃ ಶಿವೋಪಾಸಕರು'' ಎಂಬ ಇತಿಹಾಸ ಅಭಿಮತವನ್ನು ಇದು ದೃಢಪಡಿಸುತ್ತದೆ.

ಇದೇ ವಿಚಾರವನ್ನು ಸಮರ್ಥಿಸುವಂತೆ ಪ್ರಾಚೀನ ಕನ್ನಡ ಗ್ರಂಥಗಳಲ್ಲಿಯೂ ಸಹ ಅನೇಕ ಕಡೆ ''ಕರಿನಾಡು'' ಎಂದು ಬಂದಿದೆ. ''ಕರಿ'' ಎಂದರೆ ''ಶಿವ'' ಎಂದಾಗುತ್ತದೆ. ಈ ನಾಡಿನಲ್ಲಿ ಕಂಗೊಳಿಸುವ ಅನೇಕ ಪ್ರಾಚೀನ ಶಿವಾಲಯಗಳು ''ಕರಿದೇವರ'' ಗುಡಿಗಳೆಂದೇ ಪ್ರಸಿದ್ಧವಾಗಿವೆ. ಅಂತಹದೊಂದು ಪುರಾತನವಾದ ಮತ್ತು ಶಿಲ್ಪಕಲೆಯಿಂದ ಕೂಡಿದ ''ಕರಿದೇವ''ರ ಗುಡಿ ಗದುಗಿನಲ್ಲಿ ಈ ಮಾತಿಗೆ ಸಾಕ್ಷಿಯಾಗಿ ಈಗಲೂ ತಲೆ ಎತ್ತಿ ನಿಂತಿದೆ. ಇದಲ್ಲದೆ ಗದುಗಿನ ಹೊರವಲಯದಲ್ಲಿರುವ ಒಂದು ವಿಶಾಲ ಬಂಡೆಯಲ್ಲಿ ''ಶಕ್ತಿ'' ದೇವತೆಯೊಂದು ಬಹುಕಾಲದ ಹಿಂದೆಯೇ ಆವಿರ್ಭವಿಸಿದ್ದು, ''ಕರಿಯಮ್ಮ''ನೆಂದೇ ಕರೆಯುವರು. ಪ್ರತಿವರ್ಷ ದೇವೀ ಉಪಾಸಕರಿಂದ ''ಆದಿಶಕ್ತಿ''ಯ ಪ್ರತೀಕವಾದ ಈ ''ಕರಿಯಮ್ಮ''ನ ರಥೋತ್ಸವವು ಜರುಗುತ್ತಿದೆ. ಹೀಗೆ ''ಕರಿದೇವ–ಕರಿಯಮ್ಮ'' ಈ ಹೆಸರುಗಳು ''ಶಿವ–ಶಿವೆ''ಯರ ಪರ್ಯಾಯ ನಾಮಗಳಾದ್ದರಿಂದ ಕೊಡಗು ಸಹಿತ ಕನ್ನಡನಾಡಿನ ಎಲ್ಲ ಭಾಗಗಳಲ್ಲಿ ''ಕರಿಯಪ್ಪ –ಕರಿಯವ್ವ'' ಎಂದು ಹೆಸರಿಡುವ ರೂಢಿ ಬಹುಕಾಲದಿಂದಲೂ ಬಳಕೆಯಲ್ಲಿದೆ.

ಗಂಗಾರಾಜ ಭೂವಿಕ್ರಮನ ತಾಮ್ರ ಶಾಸನದಲ್ಲಿ ''ಕನ್ನಡಕ'' ಎಂಬುದಿದೆ. ಇಂದು ನಾವು ಕರೆಯುತ್ತಿರುವ ಹೆಸರಿಗೆ ಇದು ಹೆಚ್ಚು ಸಮೀಪವಾಗಿರುವದರಿಂದ ಕ್ರಮೇಣ ಇದೇ ''ಕರ್ನಾಟಕ''ವಾಗಿರಬಹುದೆಂದು ತರ್ಕಿಸಲು ಅವಕಾಶವಿದೆ. ಭಾರತದಲ್ಲಿ ಪ್ರಚಲಿತವಿರುವ ಎರಡು ಸಂಗೀತ ಪರಂಪರೆಗಳಲ್ಲಿ ದಕ್ಷಿಣಾತ್ಯ ಸಂಗೀತವನ್ನು ''ಕರ್ನಾಟಕಸಂಗೀತ''ವೆಂತಲೇ ಕರೆಯುವರು. ಇದರಿಂದ ''ಕರ್ನಾಟಕ''ವೆನ್ನುವ ಹೆಸರಿಗೆ ಇನ್ನೂ ಹೆಚ್ಚು ಬಲ ಬರುತ್ತಿದೆ.

ನೃಪತುಂಗನ ಕಾಲದಲ್ಲಿ ಪ್ರವಾಸ ಮಾಡಿದ ''ಸುಲೇಮಾನ'' ಎಂಬ ಅರಬ್ಬೀ ವರ್ತಕನು ''ಕನ್ನಡ'' ಭಾಷೆಯನ್ನು ''ಕನರಿ'' ಎಂದು ಕರೆದಿರುವನು. ಇಂದು ವಿದೇಶಿಯರು ನಮ್ಮ ಭಾಷೆಯನ್ನು ಕೆನರೀಜ ಎಂದು ಕರೆಯಲು ಇದೇ ಕಾರಣವಾಗಿರಬೇಕು. ಹೀಗೆ ಅನೇಕ ದೃಷ್ಟಿಯ ವಿವೇಚನೆಯಿಂದ ಈ ನಾಡಿನ ಹೆಸರು ''ಕರ್ನಾಟಕ'' ಎಂಬುದು ನಿರ್ವಿವಾದ

ಕನ್ನಡ ನಾಡಿನ ವ್ಯಾಪ್ತಿಯನ್ನು ಸಾಮ್ರಾಟ ಕವಿ ನೃಪತುಂಗ ''ಕಾವೇರಿಯಿಂದ ಮಾ ಗೋದಾವರಿ ವರಮಿರ್ಧನಾಡದಾ ಕನ್ನಡದೋಳ್'' ಎಂದು ೯ನೇ ಶತಮಾನದಲ್ಲಿಯೇ ಹೆಮ್ಮೆಯಿಂದ ಹಾಡಿಕೊಂಡಿದ್ದಾನೆ. ನೃಪತುಂಗ ಸೂಚಿಸಿದ ಕನ್ನಡ ನಾಡಿನ ಮೇರೆಗಳು ೧೬ನೇ ಶತಮಾನದವರೆಗೂ ಹಾಗೆ ಇದ್ದವೆನ್ನುವದು ನಂಜುಂಡ ಕವಿಯ ಕೃತಿಯಿಂದ ಮತ್ತು ಆನಂತರದ ಕನ್ನಡ–ಸಂಸ್ಕೃತ ಗ್ರಂಥಗಳಿಂದ ಮನಗಾಣಬಹುದು.

ಅನೇಕ ನದಿ–ನದಗಳಿಂದ ಮತ್ತು ಫಲವತ್ತಾದ ವಿಶಾಲ ಭೂವಿಸ್ತಾರದಿಂದ ಕೂಡಿದ ಕನ್ನಡದೇಶ ಜಲ ಸಂಪತ್ತು, ಖನಿಜ ಸಂಪತ್ತು ಮತ್ತು ಸಸ್ಯ ಸಂಪತ್ತುಗಳ ಆಗರವಾಗಿದೆ. ಕನ್ನಡಿಗರು ತತ್ತ್ವ ಜೀವಿಗಳು, ಶಾಂತ ಸ್ವಭಾವದವರು ಮತ್ತು ಉದಾರಿಗಳಾಗಲು ಪ್ರಕೃತಿಮಾತೆಯ ಈ ಭವ್ಯ ಕೊಡುಗೆಯೇ ಬಹುಮಟ್ಟಿಗೆ ಕಾರಣವೆಂದು ಧಾರಾಳವಾಗಿ ಹೇಳಬಹುದು.

ಈ ನಾಡು ಹೀಗೆ ಸಮೃದ್ಧವಾದುದರಿಂದಲೇ ಅನೇಕರ ಆಳ್ವಿಕೆಗೆ ಒಳಪಟ್ಟಿತು. ಈ ನಾಡನ್ನು ಆಳಿದಷ್ಟು ರಾಜಮನೆತನಗಳು ಭಾರತದ ಬೇರಾವ ಪ್ರದೇಶದಲ್ಲಿಯೂ ದೊರೆಯುವದಿಲ್ಲ. ಮೌರ್ಯರು, ಶಾತವಾಹನರು, ಕದಂಬರು, ಗಂಗರು, ಬದಾಮಿಯ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಯಾದವರು, ಕಲಚೂರಿಯರು, ಹೊಯ್ಸಳರು, ವಿಜಯನಗರದ ಅರಸರು ಮತ್ತು ಮೈಸೂರಿನ ಯಾದವರು ಕ್ರಮವಾಗಿ ಆಳಿದರು. ಇವರಲ್ಲಿ ಬದಾಮಿಯ ಚಾಲುಕ್ಯರ ಕಾಲದಲ್ಲಿ ಮತ್ತು ವಿಜಯನಗರದ ಅರಸರ ಕಾಲದಲ್ಲಿ ಕರ್ನಾಟಕ ಅತ್ಯಂತ ಊರ್ಜಿತಾವಸ್ಥೆಗೇರಿತು.

ಕನ್ನಡ ನಾಡನ್ನು ಆಳಿದ ಅವನಿಪಾಲರು ಹೆಚ್ಚಾಗಿ ಧಾರ್ಮಿಕ ಪ್ರವೃತ್ತಿಯವರಿದ್ದುದರಿಂದ ಅವರು ಪ್ರಜೆಗಳ ಕ್ಷೇಮಚಿಂತನೆ ಮತ್ತು ಪ್ರಜಾರಂಜನೆಗಳಿಗೆ ವಿಶೇಷ ಗಮನಕೊಟ್ಟ ಕಾರಣ, ನಾಡಿನಲ್ಲಿ ಧಾರ್ಮಿಕ ಹಾಗೂ ರಾಜಕೀಯ ನೆಮ್ಮದಿಗಳು ಭದ್ರವಾಗಿ ನೆಲೆಗೊಂಡವಲ್ಲದೆ ಶಿಕ್ಷಣ ಮತ್ತು ಲಲಿತಕಲೆಗಳ ಪೋಷಣೆಯೂ ಸಾಕಷ್ಟಾಯಿತು.

ಕನ್ನಡ ಭೂಪಾಲರ ಈ ಧಾರ್ಮಿಕ ದೃಷ್ಟಿಗೆ ಅವರು ಹೊಂದಿದ ''ಸಮ್ಯಕ – ಪ್ರಜಾ–ಪಾಲನ–ಮಾತ್ರಾಧಿಗತ–ರಾಜ್ಯ ಪ್ರಯೋಜನ'' ಇತ್ಯಾದಿ ಬಿರುದಾಂಕಿತಗಳು

ನಿದರ್ಶನವಾಗಿವೆ. ಹೊಯ್ಸಳ ಮತ್ತು ವಿಜಯನಗರ ಅರಸರ ದೈವನಿಷ್ಠೆಯಂತೂ ಐತಿಹಾಸಿಕ ಸತ್ಯವಾಗಿದೆ. ಇದಕ್ಕೆ ಕನ್ನಡಿಗರ ಕುಲದೈವ ಶ್ರೀ ವಿರೂಪಾಕ್ಷಲಿಂಗನೇ ಸಾಕ್ಷಿ.

ಈ ರೀತಿ ಕನ್ನಡ ಅರಸರ ಆಳಿಕೆಯ ಸತ್ಪರಿಣಾಮವಾಗಿ ನಾಡಿನಲ್ಲಿ ಉದಾತ್ತ ''ಸಂಸ್ಕೃತಿ'' ಹಾಗೂ ಶ್ರೇಷ್ಠ ''ನಾಗರೀಕತೆ''ಗಳು ಏರ್ಪಟ್ಟವು. ''ನಾಗರೀಕತೆ'' ಜನಾಂಗದ ಹೊರಮೈಯಾದರೆ ''ಸಂಸ್ಕೃತಿ'', ''ನಾಗರೀಕತೆ''ಗಳಲ್ಲಿ ''ಆರ್ಯ–ದ್ರಾವಿಡ'' ಸಂಸ್ಕೃತಿಯ ಸುಂದರ ಸಮನ್ವಯವನ್ನು ಕಾಣಬಹುದು. ದಕ್ಷಿಣ ಭಾರತದ ಶಿಕ್ಷಣ ರಂಗದಲ್ಲಿ ಆರ್ಯಸಂಸ್ಕೃತಿಯ ಪ್ರಭಾವ ಕಾಣುತ್ತಿದ್ದರೆ ಭವ್ಯ ದೇವಾಲಯಗಳನ್ನು ಕಟ್ಟಿಸಿ ಅಲ್ಲಿ ಶಿವ–ಶಕ್ತಿ–ಗಣಪತಿಗಳ ಉಪಾಸನೆ ಏರ್ಪಡಿಸಿರುವದು ಆರ್ಯ ಜನಾಂಗಕ್ಕೆ ದ್ರಾವಿಡ ಸಂಸ್ಕೃತಿ ಕೊಟ್ಟ ಮಹಾಕಾಣಿಕೆಯಾಗಿದೆ.

ನಿಷ್ಕಪಟ ವೃತ್ತಿ ಕನ್ನಡ ಸಂಸ್ಕೃತಿಯ ಮುಖ್ಯಾಂಶ ಕ್ಷುದ್ರತೆಯನ್ನು ಕನ್ನಡಿಗರು ಅರಿಯರು, ಉದಾರತೆ ಕನ್ನಡತನಕ್ಕೆ ಇನ್ನೊಂದು ಹೆಸರು. ಅಂತೆಯೇ ಸಕಲ ದೇಶಿಯರು ಸಕಲಮತೀಯರು ಕನ್ನಡ ನಾಡಿನಲ್ಲಿಯೇ ನೆಲೆಸಿ ನಾಡಿನ ಅವಿಭಾಜ್ಯ ಅಂಗವಾಗಿರುವದು. ಇಲ್ಲಿಯ ಶೈವ, ವೈಷ್ಣವ, ಜೈನ, ವೀರಶೈವಾದಿ ಮತಗಳಲ್ಲಿರುವ ಮಧುರ ಬಾಂಧವ್ಯವನ್ನು ಬೇಲೂರ ದೇವಾಲಯದಲ್ಲಿ ಕೆತ್ತಿದೆ.

> ''ಯಂ ಶೈವಾಸ್ಸ ಮುಪಾಸತೆ ಶಿವ ಇತಿ ಬ್ರಹ್ಮೇತಿ ವೇದಾಂತಿನಃ ।
> ಬೌದ್ಧಾ ಬುದ್ಧ ಇತಿ ಪ್ರಮಾಣ ಪಜವಃ ಕರ್ತೇ ಹಿನ್ಸೈಯಾಯಕಃ ॥
> ಅರ್ಹಂ ಶ್ಚೇತಿಹ ಜ್ಜೈನ ಶಾಸನ ಮತಿಃ ಕರ್ಮೇತಿ ಮೀಮಾಂಸಕಾಃ ।
> ಸೋಯಂವ್ಪೋ ವಿದಾಧಾತು ವಾಂಛಿತ ಫಲಂ ಶ್ರೀ ಕೇಶವಸ್ಸರ್ವದಾ ॥

ಎಂಬ ಪದವು ಈಗಲೂ ಸಾರುತ್ತದೆ. ಇದು ಕನ್ನಡಿಗರ ಧರ್ಮಸಹಿಷ್ಣುತೆಗೆ ಒಂದು ಪ್ರಾತ್ಯಕ್ಷೆಯಾಗಿದೆ.

**ಧಾರವಾಡ ಜಿಲ್ಲೆ :**

ಧಾರವಾಡ ಜಿಲ್ಲೆಯ ಹೆಸರು ನೆನಪಿಗೆ ಬರುತ್ತಲೆ ಘನಾರ್ಜನೆಯ ಒಂದು ಮಹಾ ಸಾಧನೆಯೇ ಕಣ್ಣೆದುರು ನಿಲ್ಲುತ್ತದೆ. ತಿಳಿದುಕೊಳ್ಳುವದು ಮಾನವನ ಸ್ವಭಾವ ಧರ್ಮ. ಭಗವದ್ಗೀತೆಯಲ್ಲಿ ಇದಕ್ಕೆ ''ಜಿಜ್ಞಾಸೆ''ಯೆಂದು ಹೇಳಿದೆ. ಇದಿಲ್ಲದ ಮಾನವ ಜಡ. ಶಿಕ್ಷಣ ರಂಗದ ವಿವಿಧ ಮುಖಗಳ ಪ್ರಗತಿಗಾಗಿ ಪ್ರಯತ್ನಿಸಿದ ಧಾರವಾಡ ಜಿಲ್ಲೆ ಧಾರ್ಮಿಕ, ಸಾಹಿತ್ಯಕ ಮತ್ತು ರಾಜಕೀಯ ಚಟುವಟಿಕೆಗಳಲ್ಲಿ ಅಪಾರ ಮುನ್ನಡೆ ಸಾಧಿಸಿದ್ದು ನಿಜಕ್ಕೂ ಅಭಿಮಾನಾಸ್ಪದವಾಗಿದೆ.

ಸಹಕಾರ ಕ್ಷೇತ್ರದಲ್ಲಿ ಮೊದಲಬಾರಿ ಕಾಣಿಸಿಕೊಂಡ ಅರ್ಬನ್ ಬ್ಯಾಂಕ್ ರಾಜಸಂಘ, ಮೇಲ್ವಿಚಾರಣೆಯ ಯೂನಿಯನ್, ಶಿಕ್ಷಣ ಹಾಗೂ ಸಾಹಿತ್ಯ ಸಂಘ, ಅಭಿವೃದ್ಧಿ ಮಂಡಲ, ಜಿನಿಂಗಸಂಘ, ಬೀಜ ಹಂಚುವ ಸಂಘ ಇವೆಲ್ಲವುಗಳಿಗೆ ಪ್ರಥಮವಾಗಿ ಧಾರವಾಡ ಜಿಲ್ಲೆಯೇ ಆಶ್ರಯ ನೀಡಿತು.

೧೯೧೯ ನವ್ಹಂಬರ್ ೨೫ಕ್ಕೆ ಹೊರಟ ಮುಂಬಯಿ ಸರಕಾರದ ಗೊತ್ತುವಳಿಯಲ್ಲಿ ''ಕರ್ನಾಟಕ ವಿಶೇಷತಃ ಧಾರವಾಡ ಜಿಲ್ಲೆ ಸಹಕಾರಿ ಆಂದೋಲನದ ಸುಭದ್ರ ಕೋಟೆಯಾಗಿದೆ. ಅಲ್ಲಿ ಸುಶಿಕ್ಷಿತ ಮತ್ತು ನಿಸ್ವಾರ್ಥ ಸಂಘಟಕರ ನೇತೃತ್ವದಲ್ಲಿ ಸಹಕಾರ ಭರದಿಂದ ಬೆಳೆಯತೊಡಗಿದೆ'' ಎಂದು ಕಾಣಿಸಿದ್ದು ಧಾರವಾಡ ಜಿಲ್ಲೆಯ ಸಹಕಾರ ಕ್ಷೇತ್ರದ ಪ್ರಗತಿಯನ್ನು ಎತ್ತಿ ತೋರಿಸುತ್ತಿದೆ.

ಅದೇ ರೀತಿ ಮುಂಬಯಿ ಕೋ–ಆ–ಕ್ವಾಜಲಿನ ಪತ್ರಿಕೆ ಧಾರವಾಡ ಜಿಲ್ಲೆಯ ಸಹಕಾರಿ ಆಂದೋಲನವನ್ನು ಪ್ರಶಂಶಿಸುತ್ತ ''ಸಹಕಾರಿ ಆಂದೋಲನದಲ್ಲಿ ಧಾರವಾಡ ಜಿಲ್ಲೆ ಮೊದಲಿನಿಂದಲೂ ಅಗ್ರಸ್ಥಾನ ಪಡೆಯುತ್ತ ಬಂದಿದೆ. ಮೊದಲನೇ ಸಂಘವೇ ಜಿಲ್ಲೆಯಲ್ಲಿ ಪ್ರಾರಂಭವಾಗಿ ಸಹಕಾರದ ಜನ್ಮಭೂಮಿಯೆಂದು ಪ್ರಸಿದ್ಧವಾಗಿದೆ ''ಎಂದು ಅಭಿಪ್ರಾಯ ಪಟ್ಟಿದ್ದು ಇಲ್ಲಿ ಹೆಮ್ಮೆಯ ಸಂಗತಿಯಾಗಿದೆ.

ಹೀಗೆ ದಾರವಾಡ ಜಿಲ್ಲೆ ವಿವೇಚನಾ ಶಕ್ತಿಯ ಸಂಕೇತವಾಗಿ ಮಾನವನ ಜಿಜ್ಞಾಸಾ ಪ್ರವೃತ್ತಿಗೆ ಪೋಷಕವಾಗಿರುವದು ಅತ್ಯಂತ ಆದರ್ಶಪ್ರಾಯವೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ.

## ಗದಗ

ಪ್ರಾಚೀನ ಪರಂಪರೆಯಿಂದ ಕೂಡಿದ ''ಗದುಗು'' ಅತಿ ಪುರಾತನ ಪಟ್ಟಣ. ಶ್ರೀ ತ್ರಿಕೂಟೇಶ್ವರನ ಸಾನ್ನಿಧ್ಯದಿಂದ ಇದು ಪವಿತ್ರ ಕ್ಷೇತ್ರ, ಇದನ್ನು ಶ್ರೀ ವೇದವ್ಯಾಸ ಮಹರ್ಷಿಗಳಿಂದ ವಿರಚಿತವಾದ ''ಭವಿಷ್ಯೋತ್ತರ ಪುರಾಣ''ದ ಹದಿನೆಂಟನೇ ಸರ್ಗದಲ್ಲಿರುವ ''ಕೃತಪುರ ಮಹಾತ್ಮೆ''ಯಿಂದ ತಿಳಿಯಬಹುದಾಗಿದೆ.

ಕ್ರತು ಬ್ರಹ್ಮ ಮಾನಸ ಪುತ್ರರಲ್ಲಿ ಒಬ್ಬ. ಕ್ರತುವಿನ ಸಂಕಲ್ಪದಂತೆ ಕುಬೇರಾಜ ವನದಲ್ಲಿ ಶ್ರೀ ತ್ರಿಕೂಟೇಶ್ವರ ಲಿಂಗವನ್ನು ಬ್ರಹ್ಮದೇವ ಪ್ರತಿಷ್ಠಾಪಿಸಿದ. ಶ್ರೀ ತ್ರಿಕೂಟೇಶ್ವರ ಸಾನ್ನಿಧ್ಯದಿಂದ ಪರಮ ಪಾವನವಾದ ಕುಬೇರಾಜವನದಲ್ಲಿ ಕ್ರತು ಉಗ್ರ ತಪಸ್ಸನ್ನಾಚರಿಸಿ ಈಶ್ವರ ಸಾಕ್ಷಾತ್ಕಾರ ಮಾಡಿಕೊಂಡದ್ದರಿಂದ ಈ ಪವಿತ್ರಸ್ಥಳ ಮುಂದೆ ಕೃತಪುರವೆಂದು ಪ್ರಸಿದ್ಧವಾಯಿತು.

ಒಳ್ಳೆಯದಕ್ಕೆ ವಿಘ್ನ ಒಡ್ಡುವದು ರಾಕ್ಷಸ ಸ್ವಭಾವ. ಕಪೋತ ಪರ್ವತದ ಒಂದು ಭಾಗದಲ್ಲಿ ವಾಸಮಾಡಿದ ಕಪ್ಯೋತರೋಮನೆಂಬ ರಾಕ್ಷಸನು ತನ್ನ ಮಡದಿಯ ಬಂಧುಗಳಾದ ಬೆಳಧಡಿಯ ಬಲಧಾಜ, ಕಳಸಾಪುರ ಕಲಶಾಷ ಮತ್ತು ನಾಗಾವಿಯ ನಾಗಾರ್ಜುನ ಅವರೆಲ್ಲರೊಡನೆ ಕ್ರತುವಿನ ನಿತ್ಯದ ಧರ್ಮಾಚರಣೆಗೆ ಹಿಂಸೆಕೊಡಹತ್ತಿದ. ಕಪ್ಯೋತ ರೋಮನಿಗೆ ದೇವ ಮತ್ತು ಮಾನವರಿಂದ ಮರಣವಾಗಬಾರದೆಂಬ ಈಶ್ವರನ ''ವರ''ವಿದ್ದುದರಿಂದ ಆಪ್ರಮತ್ತ ದೈತ್ಯನನ್ನು ಹೇಗೆ ನಿಗ್ರಹಿಸಬೇಕೆಂಬುದು ಕ್ರತುವಿಗೆ ತಿಳಿಯದಾಯಿತು.

ಭಕ್ತನಾದ ಕ್ರತುವಿನ ಅನುಪಾತವನ್ನರಿತ ಈಶ್ವರನು ಕ್ರತುವಿಗೆ ಪ್ರತ್ಯಕ್ಷನಾಗಿ ''ಕಪ್ಯೋತರೋಮನು ದೇವ'' ಹಾಗೂ ''ಮಾನವ''ರಿಂದ ಮಾತ್ರ ಅವಧ್ಯನಾಗಿರುವನು ಕಾರಣ ತಪೋನಿರತನಾದ ನಾರಾಯಣ ಋಷಿಯನ್ನು ಬದರಿಕಾಶ್ರಮದಿಂದ ಬರಮಾಡಿಕೊಂಡು ಆತನಿಂತ ರಾಕ್ಷಸ ಸಂಹಾರವನ್ನು ಮಾಡಿಸು. ಏಕೆಂದರೆ ಮುನಿತ್ವ ''ದೇವ'' ''ಮಾನವ'' ಸ್ಥಿತಿಗಳನ್ನು ಮೀರಿದುದಾಗಿದೆ ಎಂದು ನಿರೂಪಿಸಿ ಅಂತರ್ಧಾನವಾದನು.

ಕ್ರತು ಈಶ್ವರನ ಅಪ್ಪಣೆಯ ಮೇರೆಗೆ ಬದರಿಕಾಶ್ರಮಕ್ಕೆ ಹೋಗಿ ನಾರಾಯಣ ಮುನಿಯನ್ನು ಕಂಡು ಆತನಿಗೆ ಈಶ್ವರನ ಆದೇಶವನ್ನು ತಿಳಿಸಿ ಕರೆತಂದನು. ನಾರಾಯಣ ಮುನಿಯು ತನ್ನ ಯೋಗ ಶರೀರವನ್ನು ಹೊಂಬಳದಲ್ಲಿಟ್ಟು ವೀರನಾರಾಯಣನಾಗಿ ಕಪ್ಯೋತರೋಮನಾದಿಯಾಗಿ ಎಲ್ಲ ರಾಕ್ಷಸರ ಸಂಹಾರ ಮಾಡಿದನು.

ಇದರಿಂದ ಸಂಪ್ರೀತನಾದ ಕ್ರತು ವೀರನಾರಾಯಣನಿಗೆ ಕೃತಪುರದಲ್ಲಿಯೇ ನೆಲಿಸಬೇಕೆಂದು ಭಿನ್ನವಿಸಲು ವೀರನಾರಾಯಣನು ಕ್ಷೇತ್ರಪತಿಯಾದ ಶ್ರೀ ತ್ರಿಕೂಟೇಶ್ವರನು ಒಪ್ಪಿದರೆ ಮಾತ್ರ ತಾನು ಇಲ್ಲಿ ನೆಲೆಸುವದಾಗಿ ಕ್ರತುವಿಗೆ ತಿಳಿಸಿದನು. ಅದಕ್ಕೆ ಶ್ರೀ ತ್ರಿಕೂಟೇಶನು ಹರಿ–ಹರರಲ್ಲಿ ಭೇದವಿಲ್ಲೆಂದು ತಿಳಿಸಿ ಒಪ್ಪಿಕೊಳ್ಳಲು ಶ್ರೀವೀರ ನಾರಾಯಣನು ಕೃತಪುರದಲ್ಲಿಯೇ ಸ್ಥಿರವಾಗಿ ನೆಲೆಸಿದನು.

ಕೃತಪುರ ಹಾಗೂ ಬಟ್ಟಕೆರೆಗಳ ವಿಷಯ ಶಿಲಾಶಾಸನಗಳಲ್ಲಿ ದೊರಕುತ್ತಿದೆ. ಪಾಂಡವರ ಕೊನೆಯ ಅರಸು ಜನಮೇಜಯನು ಸರ್ಪಯಾಗದಲ್ಲಿ ''ಕೃತಪುರ'' ''ಬಟ್ಟಕೆರೆ'' ಮತ್ತು ''ಲಕ್ಕುಂಡಿ''ಗಳಲ್ಲಿರುವ ವಿದ್ವಜ್ಜನರಾದ ಬ್ರಾಹ್ಮಣರಿಗೆ ದಾನ–ದತ್ತಿಗಳನ್ನು ಕೊಟ್ಟ ವಿಷಯ ಅದರಲ್ಲಿ ವರ್ಣಿತವಾಗಿದೆ.

ಚಾಲುಕ್ಯ ಅರಸು ಎರಡನೇ ಸತ್ಯಾಶ್ರಯನ ಆಳ್ವಿಕೆಯಲ್ಲಿ ಅರಸು ಶೋಭನನು ತ್ರಿಕೂಟೇಶ್ವರ ದೇವಾಲಯಕ್ಕೆ ದತ್ತಿಯನ್ನು ಕೊಟ್ಟನೆಂದು ೧೦೦೨ ನೇ ಇಸ್ವಿಯ ಶಿಲಾಲಿಪಿ ತಿಳಿಸುತ್ತಿದೆ. ವಿಜಯನಗರದ ಅರಸರು ಕೊಟ್ಟ ದಾನಗಳ ವಿವರಣೆಯಿರುವ ಏಳು ಶಿಲಾಲೇಖಗಳು ಶ್ರೀ ವೀರನಾರಾಯಣ ದೇವಾಲಯದ ಆವಾರದಲ್ಲಿ ಕಾಣಬರುತ್ತವೆ.

ಹೀಗೆ ಪುರಾಣ ಪ್ರಸಿದ್ಧವಾದ ಕೃತಪುರ ಮುಂದೆ ಕಾಲಕ್ರಮದಲ್ಲಿ ''ಗದಗ'' ಎಂಬ ನಾಮಧೇಯವನ್ನು ಹೊಂದಿತು. ''ಕೃತಪುರ''ದಲ್ಲಿ ನೆಲಸಿದ ಶ್ರೀ ವೀರನಾರಾಯಣ ಕುಮಾರವ್ಯಾಸನ ''ಭಾರತ ಕಥಾಮಂಜರಿ'' ಯಲ್ಲಿ ''ಗದುಗಿನ ವೀರ ನಾರಾಯಣ'' ನೆಂದೇ ವರ್ಣೀತನಾಗಿದ್ದಾನೆ.

ಕುಬೇರಾಕ್ಷವೆಂದರೆ ''ಗದಗ'' ಅದೇ ರೂಪಾಂತರಗೊಂಡು ''ಗದಗ'' ಆಗಿರಬಹುದೆಂದು ಕೆಲವರ ತರ್ಕ. ಈ ಬಗ್ಗೆ ಇನ್ನೊಂದು ಆಖ್ಯಾಯಿಕೆ

ಶ್ರೀ ಜಗದ್ಗುರು ತೋಂಟದಾರ್ಯಪರಂಪರೆಯಲ್ಲಿ ಶಿವಾನುಭವ ಚರಮೂರ್ತಿರಾದ ಕರಿಬಸವ ಶಿವಯೋಗಿಗಳೆಂಬ ಮಹಾತಪಸ್ವಿಗಳು ಆಗಿ ಹೋದರು. ಅವರು ಒಮ್ಮೆ ಕೃತಪುರಕ್ಕೆ ಆಗಮಿಸಿ ಇಲ್ಲಿಯೇ ನೆಲಿಸಿ ಮುಂದೆ ಸಮಾಧಿಸ್ಥರಾದ ನಂತರ ಅವರ ''ಗದ್ದುಗೆ'' ಅತ್ಯಂತ ಜಾಗೃತಸ್ಥಲವೆಂದು ಪ್ರಸಿದ್ಧವಾಗಿ ಭಕ್ತರಿಗೆ ಯಾತ್ರಾಸ್ಥಲವಾಯಿತು.

ಸುತ್ತಲಿನ ಗ್ರಾಮದ ಜನರು ತಮ್ಮ ತಾಪತ್ರಯಗಳನ್ನು ನೀಗಿಕೊಳ್ಳಲು ಮಹಿಮಾಸ್ಥಲವಾದ ''ಗದ್ದುಗೆ''ಗೆ ಬರಹೋಗುವದು ಹೆಚ್ಚಾದಂತೆ, ''ಗದ್ದುಗೆ'' ಗೆ ಹೋಗುವದು ಎಂಬ ಮಾತು ಕ್ರಮೇಣ ಬದಲಾಗಿ ''ಗದುಗಿಗೆ'' ಹೋಗುವದು ಎಂಬದೇ ರೂಢವಾಯಿತು. ಕುಮಾರವ್ಯಾಸನೂ ತನ್ನ ಅಮರ ಕಾವ್ಯದಲ್ಲಿ ''ಗದುಗು'' ಎಂದೇ ಹೇಳಿರುವನು ''ಗದುಗು ಗದ್ದುಗೆಯಾಗಬೇಕು'' ಎಂಬ ಕಾಲಜ್ಞಾನದ ವಚನವೂ ಕೂಡಾ ''ಗದುಗು'' ಎಂಬುದನ್ನೇ ಸಮರ್ಥಿಸುತ್ತಿದೆ.

ಹಿಂದೆ ಹೇಳಿದ ಹಾಗೆ ಕೆಲವರ ತರ್ಕದಂತೆ ''ಗಜಗ'' ''ಗದಗ'' ಆಗಿರಬಹುದೆಂದು ಊಹಿಸಿದರೂ ''ಗದುಗು'' ಆಗಲಾರದು. ''ಹುಬ್ಬಳ್ಳಿ'' ''ಹುಬಳಿ''ಯಾದ ಹಾಗೆ ಹಿಂದೆ ಹೇಳಿದಂತೆ ''ಗದ್ದುಗೆ'' ''ಗದುಗು'' ಆಗುವದು ಹೆಚ್ಚು ಸಂಭವನೀಯವಾಗಿದೆ. ಮೇಲಾಗಿ ''ಗಜಗ'' ಒಂದು ''ವಸ್ತು'' ವಾಚಕ. ''ಗದ್ದುಗೆ'' ಸ್ಥಾನ ಸೂಚಕ. ಪ್ರಸಿದ್ಧಿಗೆ ''ಸ್ಥಾನ'' ಮುಖ್ಯವೇ ಹೊರತು ''ವಸ್ತು'' ವಲ್ಲ ''ವಸ್ತು''ವಿನಲ್ಲಿ ''ಜಡತ್ವ''ವಿದೆ. ''ಸ್ಥಾನ''ದಲ್ಲಿ ''ಚೈತನ್ಯ''ವಿದೆ.

**ಆಧುನಿಕ ಗದಗ* :**

ಕರ್ನಾಟಕದ ಉತ್ತರ ದಿಕ್ಕಿನಲ್ಲಿರುವ ಗದಗ–ಬೆಟಗೇರಿಗಳು ಪೌರಾಣಿಕ ಪ್ರಸಿದ್ಧಿಯನ್ನು ಪಡೆದ ಪುರಾತನ ಪಟ್ಟಣಗಳು. ಮೊದಲು ''ಕೃತಪುರ–ಬಟ್ಟಕೆರೆ'' ಗಳೆಂಬ ಹೆಸರು ಪಡೆದು ಇದೀಗ ''ಗದಗದ–ಬೆಟಗೇರಿ''ಗಳಾಗಿ ಪರಿವರ್ತನ ಹೊಂದಿದೆ. ಅವಳಿ–ಜವಳಿ ಮಕ್ಕಳಂತಿರುವ ಈ ಉಭಯ ನಗರಗಳು ಆಧುನಿಕವಾಗಿ ಬೆಳೆಯುತ್ತ ಹೋದಂತೆ ಈಗ ಒಂದರಲ್ಲೊಂದು ಸಮಾವೇಶವಾಗಿವೆ. ಮಧ್ಯದಲ್ಲಿ ಹಾಯ್ದು ರೇಲ್ವೆ ಮಾರ್ಗ ಮಾತ್ರ ಇವುಗಳನ್ನು ಬೇರ್ಪಡಿಸಿದೆ.

ಪ್ರಾರಂಭದಲ್ಲಿ ಗದಗ–ಬೆಟಗೇರಿಗಳು ೧೮೮೯ರಲ್ಲಿ ಪ್ರತ್ಯೇಕ ಮುನ್ಸಿಪಲ್ ಆಡಳಿತವನ್ನು ಸರಕಾರ ನಿಯುಕ್ತ ಅಧಿಕಾರಿಗಳ ಮೂಲಕ ಹೊಂದಿದ್ದರೂ ಮುಂದೆ ೧೮೭೩–೭೪ರಲ್ಲಿ ಅವೆರಡೂ ಮುನ್ಸಿಪಾಲಿಟಿಗಳು ''ಗದಗ–ಬೆಟಗೇರಿ ಮುನ್ಸಿಪಾಲಿಟಿ'' ಎಂಬ ಒಂದೇ ಆಡಳಿತಕ್ಕೆ ಒಳಪಟ್ಟಿದ್ದು ಉಭಯ ನಗರಗಳ ಪ್ರಾದೇಶಿಕ ಐಕ್ಯತೆಗೆ ನಾಂದಿಯಾಯಿತು.

---

* ಲೇಖಕರು ಈ ಲೇಖನ ಬರೆದಾಗ ತಾಲೂಕಾಗಿತ್ತು. ಈಗ ೫ ತಾಲೂಕಗಳನ್ನೊಳಗೊಂಡು ೧೯೯೭ರಲ್ಲಿ ಗದಗ ಜಿಲ್ಲೆಯಾಯಿತು.

ಮುಂದೆ ೧೯೧೭ರಲ್ಲಿ ಶ್ರೀಯುತ ಶಾಂತಾರಾಮ ವೀಣೇಕರ ವಕೀಲರು "ಗದಗ-ಬೆಟಗೇರಿ ಮುನಿಸಿಪಾಲಿಟಿ"ಗೆ ಲೋಕನಿಯುಕ್ತ ಅಧ್ಯಕ್ಷರೆಂದು ಪ್ರಪ್ರಥಮವಾಗಿ ಆಯ್ಕೆಯಾದ ನಂತರ ಕೆಲಕಾಲದ ಮೇಲೆ ಈ ನಗರಸಭೆಯು ೧೯೨೫ರ ಮುನ್ಸಿಪಲ್ ಬರೋ ಆ್ಯಕ್ಟಿನನ್ವಯ "ಗದಗ-ಬೇಟಗೇರಿ ಮುನ್ಸಿಪಲ್ ಬರೊ" ಎಂದು ಪರಿಗಣಿಸಲ್ಪಟ್ಟಿತು. ಜಿಲ್ಲಾ ಸ್ಥಳವಾದ ಗದಗ ಅಸಿಸ್ಟಂಟ್ ಕಮೀಶನರ್ ಅವರ ಡಿವ್ಹಿಜನಲ್ ಹೆಡ್‌ಕ್ವಾರ್ಟರ್ ಆಗಿದೆ. ಈಗ ಇಲ್ಲಿ ಒಂದು ಸಿವ್ಹಿಲ್‌ಕೋರ್ಟ ಇದ್ದು ಮೂರು ಮ್ಯಾಜಿಸ್ಟ್ರೇಟ್ ಕೋರ್ಟುಗಳು ಇವೆ. ರೇಲ್ವೆ ಜಂಕ್ಶನ್ ಸ್ಥಳವಾದ ಗದುಗು ಮೈಸೂರು ಸರಕಾರದ ರೋಡ ಟ್ರಾನ್ಸಪೋರ್ಟ ಡಿಪೋ ಮತ್ತು ಬಸ್‌ಸ್ಟ್ಯಾಂಡ್ ಹೊಂದಿದ್ದು ಬೆಳೆಯುತ್ತಿರುವ ನಗರದ ಸಂಪರ್ಕ ಸಾಧನೆಗೆ ಇದರಿಂದ ತುಂಬಾ ಪ್ರಯೋಜನವಾಗಿದೆ.

ಗದುಗಿಗೆ ಪಶ್ಚಿಮದಿಂದ ದಕ್ಷಿಣಕ್ಕೆ ತುಂಗಾತೀರದವರೆಗೂ ೩೦ ಮೈಲು ಹಬ್ಬಿದ ಕಪ್ಪತಗುಡ್ಡವು ಅನೇಕ ವಿಧದ ಖನಿಜ ಸಂಪತ್ತಿನಿಂದ ಕೂಡಿಕೊಂಡಿದೆ. ಔಷಧೋಪಯೋಗಿ ವನಸ್ಪತಿಗಳು ಇಲ್ಲಿ ಹೇರಳವಾಗಿ ದೊರೆಯುತ್ತಿವೆ. ಈಗ್ಗೆ ಬಹಳ ವರ್ಷಗಳ ಹಿಂದೆ ಕಬಲಾಯತಿ ಕಟ್ಟಿ ಬಳಿಯಲ್ಲಿ ಯುರೋಪಿಯನ್ ಕಂಪನಿಯವರು ಬಂಗಾರ ತೆಗೆಯುವ ಪ್ರಯತ್ನ ಮಾಡಿದರೂ ಅದು ಯಶಸ್ವಿಯಾಗಲಿಲ್ಲ. "ತುಂಗಭದ್ರ" ಗದಗ ಜಿಲ್ಲೆಯಲ್ಲಿ ಹರಿದಿರುವಂತೆ ಹಿರೇಹಳ್ಳವೇ ಮುಂತಾದ ಅನೇಕ ಚಿಕ್ಕ-ದೊಡ್ಡ ಹಳ್ಳಗಳು ಹರಿದು ತಮ್ಮ ರೇವಿನಿಂದ ಇಲ್ಲಿಯ ಭೂಮಿಯನ್ನು ಫಲವತ್ತಾಗಿ ಮಾಡಿವೆ.

■■

*

# ಸಹಕಾರಿ ಆಂದೋಲನ*

ಕ್ರಿ. ಶ. ೧೯೪೭ ರಲ್ಲಿ ನಾವು ಸ್ವಾತಂತ್ರ್ಯ ಪಡೆದ ಮೇಲೆ ನಮ್ಮ ರಾಷ್ಟ್ರದ ಆರ್ಥಿಕ ಸ್ಥಿತಿ ಪರಕೀಯರ ಶೋಷಣೆಯಿಂದಾಗಿ ಅಷ್ಟು ಚೆನ್ನಾಗಿರಲಿಲ್ಲ. ಈ ಕಾರಣದಿಂದ ನಮ್ಮ ರಾಷ್ಟ್ರದ ಧುರೀಣರು ದೇಶದ ಆರ್ಥಿಕಾಭಿವೃದ್ಧಿಯ ಕುರಿತು ಆಲೋಚಿಸಬೇಕಾಯಿತು.

ಭಾರತದ ಮಹಾನಾಯಕ ದಿವಂಗತ ಜವಾಹರಲಾಲ ನೆಹರೂ ಪ್ರಧಾನ ಮಂತ್ರಿ ಪದವಿಯನ್ನು ಪ್ರಪ್ರಥಮವಾಗಿ ವಹಿಸುತ್ತಾ ''ಬಹುಕಾಲ ಹೋರಾಟದ ನಂತರ ನಮ್ಮ ದೇಶಕ್ಕೆ ''ಸ್ವರಾಜ್ಯ'' ಸಿಕ್ಕಿತು. ಆದರೆ ಈ ದೇಶದ ಆರ್ಥಿಕ ತೊಂದರೆಗಳ ನಿವಾರಣೆಗೆ ರಾಜಕೀಯ ಸ್ವಾತಂತ್ರ್ಯವೇ ಕೊನೆಯದಲ್ಲ. ''ಸ್ವರಾಜ್ಯ'', ''ಸುರಾಜ್ಯ''ವಾಗಬೇಕು'' ಎಂದು ಘೋಷಿಸಿದರು.

ಶ್ರೀನೆಹರು ಬಯಸಿದ ''ಸುರಾಜ್ಯ'' ಪ್ರಾಪ್ತಿಗೆ ಯಾವುದು ತರುಣೋಪಾಯ ವೆಂಬುದೇ ಆಗಿನ ಚರ್ಚಾಸ್ಪದ ವಿಷಯವಾಯಿತು. ಜಗತ್ತಿನಲ್ಲಿ ಪ್ರಧಾನವಾಗಿ ಕಾಣುತ್ತಿರುವ ವಾದಗಳು ಎರಡು. ಒಂದು ''ಕಮ್ಯುನಿಜಂ'' (ಸಮತಾವಾದ) ಇನ್ನೊಂದು ''ಕ್ಯಾಪ್ಟಾಲಿಜಂ'' (ಬಂಡವಾಳವಾದ).

ಈ ಎರಡೂ ವಾದಗಳಲ್ಲಿ ಒಂದಿದ್ದರೆ ಒಂದಿಲ್ಲ. ನಮ್ಮ ಜನಕ್ಕೆ ಸಂಪತ್ತಿನ ವಿವರಣೆಯೂ ಬೇಕು. ವ್ಯಕ್ತಿಯ ಸ್ವಾತಂತ್ರ್ಯವೂ ಬೇಕು. ಈ ದೃಷ್ಟಿಯಿಂದ ಶ್ರೀ ನೆಹರೂ ಮೂರನೇ ಹಾದಿಯನ್ನು ಹಿಡಿದು ''ದೇಶದಲ್ಲಿಯ ಸಾಮಾಜಿಕ ಆರ್ಥಿಕ ಅನಿಷ್ಟಗಳ ನಿವಾರಣೆಗೆ ಸಹಕಾರೀ ತಳಹದಿಯ ಮೇಲೆ ಸಮಾಜವಾದೀ ಸಮಾಜ ನಿರ್ಮಾಣ ಮಾಡುವದೊಂದೆ ಮಾರ್ಗ'' ವೆಂದು ಹೇಳಿ, ಅದರ ಸಾಧನೆಗಾಗಿ ತಮ್ಮ ಕೊನೆಯ ಉಸುರಿನವರೆಗೂ ಶ್ರಮಿಸಿದರು. ನಿಜವಾಗಿಯೂ ಪ್ರಜಾಪ್ರಭುತ್ವದ ಮೂಲಕ ಸಮಾಜವಾದಿ ಸಮಾಜವನ್ನು ರಚಿಸಿ ಸುರಾಜ್ಯವನ್ನು ಸ್ಥಾಪಿಸಲು ಸಹಕಾರೀ ಆಂದೋಲನ ಒಂದು ಪ್ರಭಾವೀ ಸಾಧನೆಯೆಂಬುದನ್ನು ನಾವು ಒಪ್ಪಲೇಬೇಕು. ನಾಡಿನ ಆರ್ಥಿಕ ಪರಿಸ್ಥಿತಿಯನ್ನು ಭದ್ರಪಡಿಸುವಲ್ಲಿ ಮತ್ತು ಸ್ವಾವಲಂಬನೆ ಹಾಗೂ ಪರಸ್ಪರ ಸಹಾಯ ಭಾವನೆಗಳನ್ನು ಅಭಿವೃದ್ಧಿಗೊಳಿಸು ವದರಲ್ಲಿ ಸಹಕಾರೀ ಆಂದೋಲನವು ಮಹತ್ವವಾದ ಪಾತ್ರ ವಹಿಸುತ್ತ ಬಂದಿರುವದು ಗಮನಾರ್ಹವಾಗಿದೆ.

---

* ಅಪ್ರಕಟಿತ ಲೇಖನ

ಬಂಡವಾಳದ ಉತ್ಪಾದನಾ ಕಾರ್ಯಕ್ಕನುಗುಣವನ್ನು ಮತ್ತು ಸಮಾಜವಾದದ ಸಮಾನತೆಯ ಸದ್ಗುಣವನ್ನು ಈ ಸಹಕಾರತತ್ತ್ವ ತನ್ನಲ್ಲಿ ಅಳವಡಿಸಿಕೊಂಡು ಅವೆರಡರಲ್ಲಿಯ ತ್ಯಾಜ್ಯವಾದ ದೋಷಗಳನ್ನು ದೂರೀಕರಿಸಿದುದರಿಂದ ಸಹಕಾರೀ ಆಂದೋಲನ ದೇಶದ ಧೋರಣೆಗಳನ್ನು ಸತ್ವಯುತವಾಗಿ ಪ್ರತಿಬಿಂಬಿಸಲು ಸಮರ್ಥವಾಯಿತು.

ಅಂತೆಯೇ ಶ್ರೀ ನೆಹರೂ ''ಭಾರತೀಯರೆಲ್ಲ ಸಹಕಾರವನ್ನೇ ಉಸಿರಾಡಿಸಬೇಕೆಂಬುದು ನನ್ನ ಉದ್ದೇಶ. ಪ್ರಬುದ್ಧ ಭಾರತ ಕಟ್ಟುವ ಚಟುವಟಿಕೆಗಳಲ್ಲೆಲ್ಲ ಸಹಕಾರವೇ ಮೂಲ ತಳಹದಿಯಾಗಬೇಕು'' ಎಂದು ಹೇಳಿದರು. ರಾಷ್ಟ್ರ ನಿರ್ಮಾಣಕಾರ್ಯದಲ್ಲಿ ಸಹಕಾರವೇ ಏಕೆ? ಎಂಬ ಪ್ರಶ್ನೆಗೆ ಶ್ರೀ ನೆಹರೂ ಕೊಟ್ಟ ಉತ್ತರವಂತೂ ಇನ್ನೂ ಅಮೋಘವಾಗಿದೆ. ''ಸಹಕಾರ ಎರಡನೆಯವರನ್ನು ತುಳಿದು ತಾ ಮುಂದೆ ಸಾಗುವದಲ್ಲ. ಎಲ್ಲರನ್ನು ತನ್ನವರೆಂದು ಭಾವಿಸಿ ಅವರನ್ನು ಕೂಡಿಕೊಂಡು ಮುಂದುವರಿಯುವದಾಗಿದೆ''

ಅಖಿಲ ಭಾರತ ಮಟ್ಟದಲ್ಲಿ ಸಹಕಾರ ತತ್ತ್ವವನ್ನು ಮಾನ್ಯಮಾಡಿದವರು ಶ್ರೀ ನೆಹರೂ ಅಷ್ಟೇ ಅಲ್ಲ. ಅವರ ರಾಜಕೀಯ ಗುರುಗಳಾದ ರಾಷ್ಟ್ರಪಿತ ಗಾಂಧೀಜಿ ಕೂಡ ''ಸಹಕಾರ ತತ್ತ್ವದಲ್ಲಿ ಜನ ನಂಬಿಕೆ ಇಟ್ಟರೆ ಅದರ ಶಕ್ತಿಯನ್ನು, ಮಹತ್ವವನ್ನು ಅರಿತರೆ ನಮ್ಮ ದೇಶದ ಕಲ್ಯಾಣ ಶೀಘ್ರಗತಿಯಲ್ಲಿ ಸಾಧಿಸಬಹುದು'' ಎಂದು ಅಭಿಪ್ರಾಯ ಪಟ್ಟಿದ್ದು ಇಲ್ಲಿ ಉಲ್ಲೇಖನೀಯವಾಗಿದೆ.

ಸಾರಾಂಶವಾಗಿ ''ಸಹಕಾರ'' ವ್ಯಷ್ಟಿಗತವಾಗಿ ಆಗದ ಕಾರ್ಯವನ್ನು ಸಮಷ್ಟಿಯಿಂದ ಪೂರೈಸಬಲ್ಲದು ಹಲವಾರು ಹಕ್ಕುಗಳ ಆರ್ಥಿಕ ನೆರವನ್ನು ಸಂಗ್ರಹಿಸಿ ಒಂದು ಮಹಾ ಶಕ್ತಿಯನ್ನೇ ನಿರ್ಮಿಸಬಲ್ಲದು''. ಹೀಗೆ ತನ್ನವರ ಆರ್ಥಿಕ ನೆರವನ್ನು ಊರ್ಜಿತಗೊಳಿಸುವದರ ಜೊತೆಗೆ ಅವರೆಲ್ಲರ ಅನುಭವ ಶಕ್ತಿ ಹಾಗೂ ಬುದ್ಧಿಮತ್ತೆಗಳನ್ನು ಕೇಂದ್ರೀಕರಿಸಿ ತನ್ನವರ ತಕ್ಕ ಸಮಸ್ಯೆಗಳಿಗೆ ಯೋಗ್ಯ ಪರಿಹಾರ ನೀಡಬಲ್ಲದು.

ಜನತೆಯ ಆರ್ಥಿಕೋನ್ನತಿಯಷ್ಟೇ ಸಹಕಾರದ ಕಾರ್ಯವಲ್ಲ ಅದರ ಜೊತೆಗೆ ಜನತೆಯಲ್ಲಿ ಮಿತವ್ಯಯದ ಕಲ್ಪನೆಯನ್ನು ತಂದುಕೊಟ್ಟು, ಅವರನ್ನು ಉತ್ತಮ ನಾಗರೀಕರನ್ನಾಗಿ ಪರಿವರ್ತಿಸುವದೂ ಅದರ ಧ್ಯೇಯಗಳಲ್ಲಿ ಒಂದಾಗಿದೆ.

ಹೀಗೆ ಶ್ರೇಷ್ಠ ಆದರ್ಶಗಳನ್ನು ಹೊಂದಿದ ಸಹಕಾರಕ್ಕೆ ತನ್ನದೇ ಆದ ಸುದೀರ್ಘವಾದ ಇತಿಹಾಸವಿದೆ. ಆದರೆ ಅದನ್ನೆಲ್ಲ ಇಲ್ಲಿ ಪ್ರಸ್ತಾಪಿಸುವದು ಅಪ್ರಸ್ತುತವಾದ್ದರಿಂದ ಸಂಕ್ಷೇಪವಾಗಿ ಮಾತ್ರ ಇಲ್ಲಿ ವಿವರಿಸಲಾಗಿದೆ.

ರಾಜ್ಯದಾಹಕ್ಕಾಗಿ ಆಗಮಿಸಿದ ಬ್ರಿಟಿಷರು ಒಡೆದು ಆಳುವ ತಮ್ಮ ಸ್ವಭಾವಕ್ಕನುಸರಿಸಿ ಹಳ್ಳಿಗಳ ನಾಡಾದ ಭಾರತದಲ್ಲಿ ಪಟೇಲ, ಕುಲಕರ್ಣಿ,

ದೇಸಾಯಿ, ದೇಶಪಾಂಡೆ ಮುಂತಾದ "ವತನದಾರ"ರ ವರ್ಗವನ್ನೇ ನಿರ್ಮಾಣ ಮಾಡಿ ಅವರೆಲ್ಲರಿಗೆ ಹಳ್ಳಿಗಳಲ್ಲಿ ದೊಡ್ಡ ದೊಡ್ಡ ಜಮೀನುಗಳನ್ನು "ವತನ" ಹಾಕಿಕೊಟ್ಟು ತನ್ಮೂಲಕ ರಾಷ್ಟ್ರದ ಚುಕ್ಕಾಣಿಯನ್ನು ತಮ್ಮ ಅಂಕಿತದಲ್ಲಿಟ್ಟುಕೊಂಡರು.

ಆಳರಸರ ಈ ಭೇದನೀತಿಯ ಫಲವಾಗಿ ಆಹಾರೋತ್ಪಾದನೆಗೆ ಆಧಾರ ಭೂತವಾದ ಭೂಮಿಗಳು ಬಹು ದೊಡ್ಡ ಪ್ರಮಾಣದಲ್ಲಿ ಕೆಲವರ ಸೊತ್ತಾಗಿ ಮಾತ್ರ ಉಳಿದುದರಿಂದ ಬಹು ಸಂಖ್ಯೆಯ ಜನಕ್ಕೆ ಭೂಮಿಯೇ ಇಲ್ಲದಂತಾಯಿತು. ಕೆಲವರಿಗೆ ಅಲ್ಪ ಸ್ವಲ್ಪ ಭೂಮಿಗಳು ಉಳಿದರೂ ಅದರಿಂದ ಅವರ ಉದರಂಭರಣ ವಾಗುವಂತಿರಲಿಲ್ಲ. ಹೀಗಾಗಿ ಧನಿಕ–ದರಿದ್ರರೆಂಬ ಭೇದಗಳುಂಟಾಗಿ ಬಡವರು ಹಣವಂತರಲ್ಲಿ ಋಣಯಾಚನೆಗೆ ಕೈ ನೀಡಬೇಕಾಯಿತು.

ಈ ರೀತಿ ಸಾಲದ ಬಲೆಯಲ್ಲಿ ಸಿಕ್ಕ ರೈತ, ಸಾಹುಕಾರರ ಅಪರಿಮಿತ ಬಡ್ಡಿಯನ್ನು ತೆತ್ತಲಾಗದೆ ಅವರಲ್ಲಿ ಅಡವಾಗಿಟ್ಟು ತನ್ನ ಭೂಮಿಗಳನ್ನು ಮರಳಿ ಪಡೆಯಲು ಅಸಮರ್ಥನಾದ. ಹೀಗಾಗಿ ಸಾಹುಕಾರರಲ್ಲಿ ವಿಶೇಷವಾಗಿ ಸಂಗ್ರಹಿತವಾದ ಭೂಮಿಗಳು ಸಾಗುವಳಿಗೂ ಶಕ್ಯವಿಲ್ಲದೆ ಪಡಬೀಳಹತ್ತಿದವು. ಇದರಿಂದಾಗಿ ರಾಷ್ಟ್ರದ ಸಂಪತ್ತು ಕುಗ್ಗಹತ್ತಿತಲ್ಲದೆ ರೈತನ ಶೋಷಣೆಗೆ ಎಣೆಯಿಲ್ಲದಾಯಿತು. ಹಳ್ಳಿಯ ರೈತನ ಸ್ಥಿತಿ ಈ ರೀತಿ ಅವನತಿಗಿಳಿದರೆ ಶಹರದ ಶ್ರೀ ಸಾಮಾನ್ಯನ ಪರಿಸ್ಥಿತಿಯೂ ಮತ್ತೊಂದು ರೀತಿಯಲ್ಲಿ ದುರ್ಭರವಾಗಹತ್ತಿತ್ತು.

ಭರತವರ್ಷ ಪಾಶ್ಚಾತ್ಯ ಆಳ್ವಿಕೆಗೆ ಒಳಪಟ್ಟಿದ್ದರಿಂದ ಸ್ವಾಭಾವಿಕವಾಗಿ ಅಲ್ಲಿಯ ನಾಗರೀಕತೆ ನಮ್ಮ ದೇಶದಲ್ಲಿ ಕಾಲು ಚಾಚಹತ್ತಿತ್ತು. ಪಾಶ್ಚಾತ್ಯರ ಯಂತ್ರ ಸಾಮಗ್ರಿಗಳು ನಮ್ಮ ದೇಶದ ಪ್ರಜೆಯ ಲಾಭ ಪಡೆದುಕೊಂಡು ಕ್ರಮೇಣ ನಮ್ಮಲ್ಲಿ ತಳವೂರ ಹತ್ತಿದವು. ಅನೇಕ ಜನರಿಂದಾಗುವ ಕಾರ್ಯವನ್ನು ಒಂದೊಂದೇ ಯಂತ್ರಗಳು ಪೂರೈಸುತ್ತಿದ್ದರಿಂದ ಕೂಲಿಯ ಉಳಿತಾಯಕ್ಕಾಗಿ ಲಾಭದಾಯಕವಾದ ಕಾರಖಾನೆಗಳನ್ನು ನಮ್ಮ ದೇಶದ ಬಂಡವಾಳದಾರರು ಅಲ್ಲಲ್ಲಿ ಸ್ಥಾಪಿಸಿದರು. ಇದರ ಪರಿಣಾಮವಾಗಿ ನಮ್ಮಲ್ಲಿ ಮೊದಲಿದ್ದ ಕೈಗಾರಿಕೆಗಳು ಕುಸಿದುಬಿದ್ದವಲ್ಲದೆ, ನಮ್ಮವರ ಸ್ವಾವಲಂಬನಾ ಶಕ್ತಿಯೂ ಕುಂಠಿತವಾಯಿತು. ಹೀಗಾಗಿ ಬಹು ಸಂಖ್ಯೆಯಲ್ಲಿ ಶಹರದ ಶ್ರೀ ಸಾಮಾನ್ಯರು ನೀರುದ್ಯೋಗಿಗಳಾದರು.

ಹೀಗೆ ನಿರುದ್ಯೋಗಿಗಳು ಹೊಟ್ಟೆಯ ಹಿಟ್ಟಿಗಾಗಿ ಅಂಡಲಿಯುತ್ತಿರುವಾಗ ಅವರಲ್ಲಿ ಕೆಲವರಿಗೆ ಕಾರಖಾನೆಗಳೇ ಕೊನೆಗೆ ಗತಿಯಾದವು. ಆದರೆ, ಇದರಿಂದ ಕಾರಖಾನೆಗಳ ಒಡೆಯರ ಬೊಕ್ಕಸ ಬೆಳೆಯಹತ್ತಿತೇ ಹೊರತು ಬಡ ಕಾರ್ಮಿಕನ ಬರಿದಾದ ಹೊಟ್ಟೆ ಮಾತ್ರ ಪೂರ್ತಿಯಾಗಿ ತುಂಬಲಿಲ್ಲ.

ಈ ಮೊದಲು ಹೇಳಿದಂತೆ ಕಾಲ ಗತಿಯಿಂದಾಗಿ ಒಂದೇ ಸಮಯದಲ್ಲಿ "ಹಳ್ಳಿಯ ರೈತ" ಹಾಗೂ "ಶಹರದ ಕಾರ್ಮಿಕ" ಧನಿಕರ ದುರಾಸೆಯ ದವಡೆಯಲ್ಲಿ

ಸಿಕ್ಕು ಬಳಲಹತ್ತಿದ್ದು ಮಾನವ ಇತಿಹಾಸದಲ್ಲಿಯೇ ಶೋಚನೀಯ ಸಂಗತಿಯಾಗಿದೆ. ಈ ಪ್ರಪಂಚದಲ್ಲಿ ಯಾವದು ಸ್ಥಿರ? ಕವಿದ ಕಾರ್ಗತ್ತಲೆ ಬೆಳಗಿನ ಮುನ್ಸೂಚನೆಯಾಗಿರುವಂತೆ ಭಾರತೀಯ ಬಡವರ ಭವಣೆಯೂ ಕೊನೆಯಾಗುವ ಕಾಲ ಸನ್ನಿಹಿತವಾಯಿತು.

ಭಾರತೀಯ ''ರೈತ'' ಮತ್ತು ''ಕಾರ್ಮಿಕ''ರಿಗೆ ಬಂದ ದುರಾವಸ್ಥೆ ಹದಿನೆಂಟನೇ ಶತಮಾನದ ಉತ್ತರಾರ್ಧದಲ್ಲಿ ಇಂಗ್ಲಂಡ ಮುಂತಾದ ಪಾಶ್ಚಾತ್ಯ ರಾಷ್ಟ್ರಗಳ ಶ್ರಮ ಜೀವಿಗಳಿಗೂ ಬಂದಿತ್ತು ಆಗ ಬಡ ಶ್ರಮಜೀವಿಗಳ ಕಲ್ಯಾಣಕ್ಕಾಗಿ ಶ್ರಮಿಸಿದ ಮಹಾನುಭಾವ ಶ್ರೀಯುತ ರಾಬರ್ಟ ಓವನ್ ಈತನನ್ನು ಚರಿತ್ರಕಾರರು ''ಸಹಕಾರ ತತ್ತ್ವದ ದೃಷ್ಟಾರ''ನೆಂದು ವರ್ಣಿಸಿದ್ದಾರೆ.

ವ್ಯಕ್ತಿಯ ವ್ಯಕ್ತಿತ್ವದ ವಿಕಾಸಕ್ಕೆ ಅವನಿರುವ ಪರಿಸರವೇ ಕಾರಣವಾಗಿರುತ್ತದೆ. ತನ್ನ ಸುತ್ತಲೂ ಇದ್ದ ಬಡಪಾಯಿ ಕಾರ್ಮಿಕರು ಅಷ್ಟ ದಾರಿದ್ರ್ಯಗಳ ಮೂಲಕ ಸಿರಿವಂತರ ಶೋಷಣೆಗೆ ಗುರಿಯಾಗುತ್ತಿರುವದು ಸಾತ್ವಿಕ ಹೃದಯದ ರಾಬರ್ಟ ಓವನ್‌ನ ಕೋಮಲಾಂತಃಕರಣವನ್ನು ಕಲಕಿರಬೇಕು. ಅಂತೆಯೇ ಅವನು ಆ ವಾತಾವರಣವನ್ನು ಪರಿಷ್ಕರಿಸಲು ಒಂದು ನಿರ್ದಿಷ್ಟ ಮಾರ್ಗವನ್ನು ಕೈಕೊಳ್ಳಬೇಕಾಯಿತು. ಮುಂದೆ ಅದೇ ''ಸಹಕಾರ ತತ್ವ''ವೆಂದು ಪ್ರಸಿದ್ಧವಾಯಿತು.

''ಸಹಕಾರ''ವೆಂದರೆ ಸಾಮಾನ್ಯ ಅರ್ಥದಲ್ಲಿ ''ಒಂದುಗೂಡಿ ಕೆಲಸಮಾಡು'' ಎಂದಾಗುತ್ತದೆ. ಹೀಗೆ ಒಂದು ಗೂಡಿ ಕೆಲಸ ಮಾಡುವದು ಪ್ರಕೃತಿ ನಿಯಮ ಇದನ್ನು ಜೇನುಹುಳ ಮತ್ತು ಇರುವೆ ಇವುಗಳ ಜೀವನ ಕ್ರಮದಲ್ಲಿ ಹೆಚ್ಚಾಗಿ ಕಾಣಬಹುದು.

ಇನ್ನು ಮಾನವ ಜೀವನದಲ್ಲಿ ಸಹಕಾರದ ಅರ್ಥ ಇದಕ್ಕೂ ಹೆಚ್ಚು ವ್ಯಾಪಕವಾಗುತ್ತದೆ. ''ಅರ್ಥ'' ಮತ್ತು ''ಧರ್ಮ'' ಈ ಎರಡೂ ಪುರುಷಾರ್ಥ ಗಳನ್ನು ಒಂದಕ್ಕೊಂದು ಬಾಧಕವಾಗದೆ ಸಾಧಕವಾಗುವಂತೆ ಸಾಧಿಸುವದೇ ''ಸಹಕಾರ ತತ್ತ್ವ''ದ ತಿರುಳಾಗಿರುತ್ತದೆ.

ಮಾನವ ತನ್ನ ಜೀವಿತಕ್ಕಾಗಿ ದುಡಿಯಲೇಬೇಕು. ಇದು ಮಾನವನ ಸಮಾಜದ ಅರ್ಥವ್ಯವಸ್ಥೆ. ಅದಕ್ಕಾಗಿಯೇ ಶ್ರೀ ಬಸವಣ್ಣನವರು ಕೂಡಾ ಕಾಯಕವೇ ಕೈಲಾಸವೆಂದು ಸಾರಿದರು. ದ್ರವ್ಯಾರ್ಜನೆ ಜೀವನದಲ್ಲಿ ಅನಿವಾರ್ಯವಾದರೂ ಅದು ತನ್ನ ವ್ಯಕ್ತಿಗತ ಉಪಯೋಗಕ್ಕಷ್ಟೇ ಇರಕೂಡದು. ''ತನಗಾಗಿ ಎಲ್ಲರು ಎಲ್ಲರಿಗಾಗಿ ತಾನು'' ಎಂಬ ವಿಶಾಲ ಭಾವನೆಯಿಂದ ಸಾಮೂಹಿಕ ಸಾಧಿಸುವದೇ ''ಸಹಕಾರ'' ಧರ್ಮವಾಗಿದೆ.

ಇದನ್ನೇ ಕುರಿತು ಶ್ರೀ ಬಸವಣ್ಣನವರೂ ಸಹ ''ಕಾಗೆ ಒಂದಗಳ ಕಂಡರೆ ಕರೆಯದೆ ತನ್ನ ಕುಲವನೆಲ್ಲವ, ಕೋಳಿ ಒಂದು ಗುಟುಕು ಕಂಡರೆ ಕೂಗದೇ ತನ್ನ ಬಳಗವೆಲ್ಲವನು'' ಎಂದು ಹೇಳಿ ಸಹಕಾರ ತತ್ತ್ವವನ್ನು ಪರ್ಯಾಯವಾಗಿ

ಬೋಧಿಸಿರುವದನ್ನು ಅವರ ಸಮಾಜ ಕ್ರಾಂತಿಯ ಇತಿಹಾಸದಿಂದ ಅರಿಯಬಹುದಾಗಿದೆ.

ಹೀಗೆ ಸಹಕಾರದಲ್ಲಿ ಸ್ವಹಿತದೊಡನೆ ಪರಹಿತವೂ ಸಾಧಿಸಲ್ಪಡುವದರಿಂದ ಚತುರ್ವಿಧ ಪುರುಷಾರ್ಥಗಳಲ್ಲಿಯ ''ಧರ್ಮ'' ಮತ್ತು ''ಅರ್ಥ'' ಇವೆರಡರ ಸುಂದರ ಸಮನ್ವಯವನ್ನು ಇಲ್ಲಿ ಕಾಣಬಹುದಾಗಿದೆ.

ಯಾವುದೋ ಒಂದು ತತ್ತ್ವ ಹೊಸದಾಗಿ ದೃಷ್ಟಿಗೆ ಬಿದ್ದರೆ ಅದು ಹಳೆಯಧರ ರೂಪಾಂತರವೇ ಹೊರತು ಬೇರೆ ಏನೂ ಅಲ್ಲ. ಯಾವದು ''ಸತ್ಯ''ವೋ ಅದೇ ''ತತ್ತ್ವ''ವು ಸನಾತನವೂ ಅವಿನಾಶಿಯೂ ಆಗಿರುವಂತೆ, ''ತತ್ತ್ವ''ವು ಪ್ರಾಚೀನವೂ ತ್ರಿಕಾಲಾ ಬಾಧಿತವೂ ಆಗಿರುತ್ತದೆ. ಆದರೆ ಕಾಲಗತಿಗನುಸಾರವಾಗಿ ಅದು ಒಂದೊಂದು ವಿಧವಾಗಿ ಮಾತ್ರ ಅಭಿವ್ಯಕ್ತವಾಗಬಹುದು ಅಷ್ಟೆ.

ಇಂದು ''ಸಹಕಾರ''ವೆಂಬ ಪದವು ನೂತನವಾಗಿ ಕೇಳಿ ಬರುತ್ತಿದ್ದರೂ ಅದು ನಮ್ಮ ವೇದದಲ್ಲಿ ಬರುವ ''ಸಹನಾವತು'' ಎಂಬುದರ ವಿಶ್ವ ಬಾಂಧವ್ಯವನ್ನೇ ಬೋಧಿಸುತ್ತದೆ. ಜಗತ್ತೆಲ್ಲವೂ ಕುಡಿ ಬಾಳಬೇಕೆಂಬುದೇ ಅದರ ಆದರ್ಶ. ''ಸಹ ಜೀವನ'', ''ಸಹಕಾರ'' ಮತ್ತು ''ಸಹಬಾಳ್ವೆ'' ಇವು ಜಗತ್ತನ್ನು ಒಂದುಗೂಡಿಸುವ ವಿಶ್ವ ವ್ಯಾಪಿ ಮನೋಭಾವನೆಗಳು.

ಮೂಲತಃ ಜಗತ್ತಿಗೆ ಅಧಿಷ್ಠಾನವಾಗಿರುವದು ಒಂದೇ ತತ್ತ್ವ. ಇದನ್ನು ಉಪನಿಷತ್ತು ''ಈಶಾ ವಾಸ್ಯಮಿದಂ ಸರ್ವಂ'' ಎಂದು, ಭಗವದ್ಗೀತೆ ''ಈಶ್ವರಸ್ಸರ್ವ ಭೂತಾನಾಂ'' ಎಂದು ಉದ್ಘೋಷಿಸಿವೆ. ಆದರೆ ಮಾನವನ ಕ್ಷುದ್ರವಾದ ಮನಸ್ಸು ಈ ಏಕತೆಯಲ್ಲಿ ಭಿನ್ನತೆಯನ್ನು ಕಲ್ಪಿಸಿ ಜಗತ್ತಿನ ಅಶಾಂತಿಗೆ ಕಾರಣವಾಗಿರುತ್ತದೆ.

ಮಾನವನ ಈ ಸಂಕೋಚ ಪ್ರವೃತ್ತಿಯನ್ನು ಕಳೆಯಲೆಂದೇ ಅನೇಕ ಮಹಾನುಭಾವರು ಆಗಾಗ್ಗೆ ಪ್ರಾಧುರ್ಭವಿಸಿ ಕತ್ತಲೆಯಿಂದ ಕೂಡಿದ ಜಗತ್ತಿಗೆ ''ತಮಸೋಮಾ ಜ್ಯೋತಿರ್ಗಮಯ'' ಎಂಬ ಆದೇಶದಂತೆ ಬೆಳಕನ್ನು ನೀಡುತ್ತ ಬಂದಿದ್ದಾರೆ.

ಗುಣಕ್ಕೆ ಮತ್ಸರ ಉಂಟೆ ? ಮನು ಕುಲವೆಲ್ಲ ಒಂದೇ ಆದ್ದರಿಂದ ಮಹಾಪುರುಷರಿಗೆ ದೇಶ ಕಾಲಗಳ ನಿಯಮವಿಲ್ಲ. ಯಾವ ಕಾಲದಲ್ಲಿ ಯಾವದು ಅಗತ್ಯವೋ ಅದನ್ನು ಪೂರೈಸಲು ಅವರು ಜಗತ್ತಿನ ಯಾವ ಮೂಲೆಯಿಂದಾದರು ಕಾಣಿಸಿಕೊಂಡು ಮಾನವ ಲೋಕವನ್ನು ಉದ್ಧರಿಸಬಹುದು.

ಅದರಂತೆ ಹಿಂದೆ ಹೇಳಿದ ''ಸಹಕಾರ'' ತತ್ತ್ವದ ಪ್ರತಿಪಾದಕನಾದ ರಾಬರ್ಟ ಓವನ್ ಕ್ರಿ. ಶ. ೧೭೭೧ ರಲ್ಲಿ ಪಾಶ್ಚಾತ್ಯ ಕ್ಷಿತಿಜದ ಮೇಲೆ ಕಾಣಿಸಿಕೊಂಡು ಸ್ವಾರ್ಥ ದುರಾಸೆ ಮೂಲಕ ಭ್ರಾತೃತ್ವ ಭಾವನೆಯನ್ನು ಮರೆತು ಮಾನವ ಜನಾಂಗಕ್ಕೆ ''ಸಹಕಾರ''ದ ಉದಾತ್ತ ತತ್ತ್ವಗಳನ್ನು ಉಪದೇಶಿಸಿ ಹತಭಾಗ್ಯರಾದ ಶ್ರಮ

ಜೀವಿಗಳನ್ನು ಎತ್ತಿ ಹಿಡಿದ. ಮುಂದೆ ಈ ಮಹಾ ತತ್ತ್ವಕ್ಕೆ ಮಾರು ಹೋದ ರಾಕ್‌ಡೇಲಿನ ಅಗ್ರಗಾಮಿಗಳು ಜಯ ಡಿಂಡಿಮವನ್ನು ಬಾರಿಸಿ ಜಗತ್ತನ್ನೇ ದಿಗ್ಭ್ರಮೆಗೊಳಿಸಿದರು.

ಹೀಗೆ ರಾಬರ್ಟ ಓವನ್ ಮಹಾಶಯನ ಪ್ರಯತ್ನದ ಫಲವಾಗಿ ''ಫ್ಯಾಕ್ಟ್ರಿ'' ಪದ್ಧತಿ ಇಂಗ್ಲಂಡದಲ್ಲಿ ಜನ್ಮತಾಳಿದ್ದರಿಂದ ಬಡಕಾರ್ಮಿಕರ ಜೀವನ ಸುಗಮವಾಗಿ ಸಾಗಹತ್ತಿತ್ತು.

ಇದರಿಂದ ಆಕರ್ಷಿತರಾದ ನಾರ್ವೆ, ಸ್ವೀಡನ್, ಹಾಲೆಂಡ, ಡೆನ್‌ಮಾರ್ಕಗಳ ರೈತರು ''ಸಹಕಾರ'' ತತ್ತ್ವವನ್ನು ತಮ್ಮ ದೇಶದಲ್ಲಿ ಅನುಷ್ಠಾನಕ್ಕೆ ತಂದುಕೊಂಡಿದ್ದರಿಂದ ಕೃಷಿ ಕ್ಷೇತ್ರದಲ್ಲಿಯೂ ಅದ್ಭುತ ಕ್ರಾಂತಿಯಾಗಿ ಶೋಷಿತ ರೈತ ವರ್ಗದ ನೆಮ್ಮದಿಯ ಜೀವನಕ್ಕೆ ಹೆದ್ದಾರಿಯಾಯಿತು.

ಜಗತ್ತು ಅನುಕರಣ ಶೀಲವಲ್ಲವೆ? ಐರೋಪ್ಯ ರಾಷ್ಟ್ರಗಳು ತಮ್ಮಲ್ಲಿಗೆ ''ವರದಾನ''ವಾಗಿ ಬಂದ ''ಸಹಕಾರ'' ತತ್ವದನ್ವಯ ತಮ್ಮಲ್ಲಿಯ ''ರೈತ'' ಹಾಗೂ ''ಕಾರ್ಮಿಕ''ರ ಸಮಸ್ಯೆಗಳಿಗೆ ಪರಿಹಾರ ಒದಗಿಸಿರುವದು ಅಂತಹ ಸ್ಥಿತಿಯನ್ನೇ ಅನುಭವಿಸುತ್ತಿರುವ ಭಾರತೀಯರ ಗಮನವನ್ನು ಸೆಳೆಯಿತು.

ಪರಿಸ್ಥಿತಿಯ ಒತ್ತಡದಿಂದಾಗಿ ಪಾಶ್ಚಾತ್ಯರಲ್ಲಿ ಕಂಡು ಬಂದ ''ಸಹಕಾರ'' ಭಾರತೀಯರಿಗೆ ಅತ್ಯಂತ ಆಕರ್ಷಿತವಾಗಿ ಹಾಗೂ ವಿನೂತನವಾಗಿ ಕಂಡು ಬಂದರೂ ''ಸಹಕಾರ''ದ ವಿಶ್ವಬಾಂಧವ್ಯದ ಉದಾತ್ತತತ್ತ್ವ ಮಾತ್ರ ತತ್ತ್ವಭೂಮಿಯಾದ ಭಾರತಕ್ಕೇನು ಹೊಸದಲ್ಲ. ಅದು ಭಾರತೀಯರಿಗೆ ರಕ್ತಗತವಾಗಿ ಬಂದ ಮಹಾ ಸಂಸ್ಕೃತಿ.

ಇಂದು ನಮ್ಮ ದಾರಿಗೆ ಕಾಣ ಬರುತ್ತಿರುವ ಬೃಹದಾಕಾರದ ದೇಗುಲಗಳು, ವಿಶಾಲವಾದ ಕೆರೆ, ಕಟ್ಟೆ, ಕಾಲುವೆಗಳು ಕೇವಲ ವ್ಯಕ್ತಿಗತವಾಗಿ ಆದವುಗಳಲ್ಲ. ಅವಕ್ಕೆಲ್ಲ ಸಹಕಾರ ಭಾವನೆಯೇ ಕಾರಣವೆಂಬುದನ್ನು ಪ್ರತ್ಯೇಕ ಹೇಳುವದು ಬೇಡ.

ಸಹಕಾರದ ಬಗ್ಗೆ ನಮ್ಮ ಪ್ರಾಚೀನ ಉಲ್ಲೇಖಗಳಲ್ಲಿಯೂ ಸಹ ಸಾಕಷ್ಟು ಆಧಾರಗಳಿವೆ. ಇದಕ್ಕೆ ವೇದ ಪ್ರಾಮಾಣ್ಯವನ್ನು ಕೊಡಬಹುದು. ಮನಸ್ಮೃತಿ ಮತ್ತು ಕೌಟಿಲ್ಯನ ಅರ್ಥಶಾಸ್ತ್ರಗಳಲ್ಲಿ ಹೇರಳ ಉದಾಹರಣೆಗಳನ್ನು ಕೊಡಬಹುದು.

ಇದು ಪ್ರಾಚೀನ ಕಾಲದ ಮಾತು. ಇನ್ನು ಅರ್ವಾಚೀನ ಭಾರತದ ಬಗ್ಗೆ ಸಾಕಷ್ಟು ಅಧ್ಯಯನ ಮಾಡಿದ ಶ್ರೀಯುತ ಮಾಲ್ಕಮ್ ಡಾರ್ಲಿಂಗ್ ಅವರ ಗ್ರಂಥದ ಮೇರೆಗೆ ಪಂಜಾಬ, ಮದ್ರಾಸ್ ಮತ್ತು ಮೈಸೂರುಗಳಲ್ಲಿ ಸಹಕಾರಿ ಸಂಘಟನೆಗಳ ಹೇರಳ ದೃಷ್ಟಾಂತಗಳನ್ನು ಕೊಡಬಹುದು. ಆದರೆ ಅವೆಲ್ಲವುಗಳು ವಿಫಲಗೊಳ್ಳಲಿಕ್ಕೆ ಆಗಿನ ಜನತೆಯ ಅಜ್ಞಾನ ಹಾಗೂ ಆ ಕಾಲದ ದೂಷಿತ ವಾತಾವರಣ ಕಾರಣವೆಂಬುದನ್ನು ಇತಿಹಾಸವೇ ಹೇಳುತ್ತದೆ.

ಈ ರೀತಿ ನಮ್ಮ ದೇಶದಲ್ಲಿ ಸಹಕಾರ ತತ್ವ ಸಂಸ್ಕೃತಿಯಷ್ಟೇ ಪ್ರಾಚೀನವಾಗಿದ್ದರೂ ಪಾರತಂತ್ರ್ಯದ ಮೂಲಕ ಆತ್ಮವಿಸ್ಮೃತಿ ಹೊಂದಿದ ಭಾರತೀಯರಿಗೆ ಪಾಶ್ಚಾತ್ಯ ಪ್ರಣೀತ ಸಹಕಾರ ನೂತನವಾಗಿ ಕಂಡುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಕನ್ನಡಿಯ ಪ್ರತಿಬಿಂಬದಲ್ಲಿ ನಮ್ಮನ್ನೇ ನಾವು ಕಂಡುಕೊಳ್ಳುವಂತೆ ಪಾಶ್ಚಾತ್ಯರಿಂದ ನವೀಕರಣಹೊಂದಿದ ''ಸಹಕಾರ''ವನ್ನು ಪುನಃ ನಾವೇ ಅನುಕರಣ ಮಾಡಿಕೊಳ್ಳಬೇಕಾಯಿತು.

ಕೃಷಿ ಪ್ರಧಾನವಾದ ಭಾರತದಲ್ಲಿ ರೈತನ ಉದ್ಧಾರವಾಗದೆ, ಭಾರತದಲ್ಲಿ ಶಾಂತಿ ನೆಲೆಸದೆಂದು ಭಾವಿಸಿದ ಕೆಲ ಜನ ಸಹೃದಯ ಮಹನೀಯರು ರೈತರ ಕಲ್ಯಾಣಕ್ಕಾಗಿ ಶ್ರಮಿಸಿದರು. ಇದರ ಪರಿಣಾಮವಾಗಿ ೧೮೮೨ ರಲ್ಲಿ ನ್ಯಾ. ಮೂ. ರಾನಡೆ ಮತ್ತು ಸರ್. ವಿಲಿಯಂ ತೆಡರ್‌ಬರ್ನ ಅವರಿಂದ ''ಬ್ಯಾಂಕ'' ಸ್ಥಾಪನೆಯ ಯೋಜನೆಯೊಂದು ರೂಪಗೊಂಡಿತು.

ಈ ಯೋಜನೆಗೆ ಆಗಿನ ಬ್ರಿಟಿಷ್ ಆಡಳಿತ ಮನ್ನಣೆ ನೀಡದಿದ್ದರೂ ಈ ಯೋಜನೆಯ ಅಂಶಗಳನ್ನು ಭೂಸುಧಾರಣೆ ಹಾಗೂ ರೈತರ ಸಾಲದ ಕಾಯದೆ ೧೮೮೩ XIX ರ ಮತ್ತು ೧೮೮೪ XIIರ ಕಾಯಿದೆಗಳಲ್ಲಿ ಅಳವಡಿಸಿಕೊಳ್ಳಲಾಯಿತು. ಈ ಕಾಯಿದೆ ಮೇರೆಗೆ ರೈತರ ಭೂಸುಧಾರಣೆ ಹಾಗೂ ಇನ್ನಿತರ ಉತ್ಪಾದಕ ಕಾರ್ಯಗಳಿಗಾಗಿ ಹಣವನ್ನು ಕೊಡಲಾಗುತ್ತಿತ್ತು. ಇದಕ್ಕೆ ತಗಾಯೊ ಸಾಲವೆಂದು ಹೆಸರು. ಈ ಪದ್ಧತಿ ಇಂದಿಗೂ ಜಾರಿಯಲ್ಲಿದೆ. ಆದರೆ ಇಂಥ ಕ್ರಮಗಳಿಂದ ರೈತರ ಪರಿಸ್ಥಿತಿ ಸುಧಾರಿಸಲು ಸಾಧ್ಯವಾಗಲಿಲ್ಲ.

ಇದೆಲ್ಲವನ್ನು ಮನಗಂಡು ಆಗಿನ ಮದ್ರಾಸ್ ಸರಕಾರದವರು ೧೮೯೨ರಲ್ಲಿ ಸರ್. ಪ್ರೆಡ್ರಿಕ್ ನಿಕೋಲ್ಸನ್ ಎಂಬುವರನ್ನು ಸಹಕಾರ ತಳಹದಿಯ ಮೇಲೆ ಸಂಘಗಳನ್ನು ಸ್ಥಾಪಿಸುವದರ ಸಲುವಾಗಿ ಅಭ್ಯಸಿಸಿಕೊಂಡು ಬರಲು ಯೋರೋಪಿಗೆ ಕಳಿಸಿಕೊಟ್ಟರು.

ಶ್ರೀಯುತ ನಿಕೋಲ್ಸನ್ ಅವರು ಇಟಲಿ, ಜರ್ಮನಿಗಳಲ್ಲಿ ಸಂಚರಿಸಿ ಅದೇ ತಾನೇ ಅಲ್ಲಿ ಪ್ರಚಾರದಲ್ಲಿದ್ದ ಗ್ರಾಮ ಬ್ಯಾಂಡುಗಳ ಪೂರ್ಣ ಮಾಹಿತಿ ಪಡೆದುಕೊಂಡು ಭಾರತಕ್ಕೆ ಮರಳಿದ ನಂತರ ಅಭ್ಯಾಸ ಪೂರ್ಣವಾದ ವರದಿಗಳನ್ನು ೧೮೯೫ ಮತ್ತು ೧೮೯೭ ರಲ್ಲಿ ಮದ್ರಾಸ್ ಸರಕಾರಕ್ಕೆ ಅರ್ಪಿಸಿದರು.

ಶ್ರೀ ನಿಕೋಲ್ಸನ್ ಅವರು ತಮ್ಮ ವರದಿಗಳಲ್ಲಿ ''ಭಾರತದಲ್ಲಿ ವ್ಯವಸಾಯದ ವಿನಾಶಕ್ಕೆ ಹಳ್ಳಿಗಾಡಿನ ಋಣಬದ್ಧತೆ, ಬೆಳೆಯುತ್ತಿದ್ದ ಬಡತನ ಮತ್ತು ಸಾಹುಕಾರರ ಅತಿ ಶ್ರೀಮಂತಿಗೆ ಇವುಗಳೇ ಕಾರಣವಿದ್ದು, ಅವುಗಳ ನಿವಾರಣೆಗೆ ಸಹಕಾರ ಸಂಘಗಳನ್ನು ಸಂಘಟಿಸಿ ಅವುಗಳ ಮುಖಾಂತರ ದೇಶದ ಸಮಸ್ಯೆಗಳನ್ನು ಬಿಡಿಸುವದೇ ತರುಣೋಪಾಯ'' ಎಂದು ಅಭಿಪ್ರಾಯಪಟ್ಟಿದ್ದನ್ನು ಮದ್ರಾಸ ಸರಕಾರ ಪರಿಶೀಲಿಸಿತು.

ಮದ್ರಾಸ ಸರಕಾರದವರು ೧೮೯೯ ರಲ್ಲಿ ಸರ್ ಫ್ರೆಡ್ರಿಕ್ ನಿಕೋಲ್ಸನ್ ವರದಿಯನ್ನು ಕೂಲಂಕುಷವಾಗಿ ಚರ್ಚಿಸಿದ ನಂತರ ಕೇಂದ್ರ ಸರಕಾರದ ಗಮನವನ್ನು ಅದರೆಡೆಗೆ ಸೆಳೆದುದರ ಪರಿಣಾಮವಾಗಿ ೧೯೦೦ ರಲ್ಲಿ ''ಕಮೀಟಿಯೊಂದು ಕಲ್ಕತ್ತೆಯಲ್ಲಿ ಸೇರಿ ದೇಶದ ಸಮಸ್ಯೆಯ ನಿವಾರಣೆಗೆಂದು ಪತ್ತಿನ ಸಹಕಾರಿ ಸಂಘಗಳನ್ನು ರಿಫೇಜನ್ ಮಾದರಿಯ ಮೇರೆಗೆ ಪ್ರಾರಂಭಿಸಬೇಕು'' ಎಂದು ನಿರ್ಣಯ ಕೈಗೊಂಡಿತು.

ಹೀಗೆ ಭಾರತದಲ್ಲಿ ಸಹಕಾರ ಚಳುವಳಿಯ ಹುಟ್ಟು, ಸಹಕಾರಿ ಸಂಘಗಳ ಉಗಮ, ಮತ್ತು ಸಹಕಾರಿ ಸಂಘಗಳ ಸ್ಥಾಪನೆ ಇವೆಲ್ಲವುಗಳಿಗೆ ಸರ್ ಫ್ರೆಡ್ರಿಕ್ ನಿಕೋಲ್ಸನ್ ಅವರು ಮಾಡಿದ ಶಿಫಾರಸಗಳೇ ಕಾರಣವಾದ್ದರಿಂದ ಶ್ರೀಯುತರು ''ಭಾರತದ ಸಹಕಾರಿ ಚಳುವಳಿಯ ಪಿತೃ'' ಗೌರವಕ್ಕೆ ಪಾತ್ರರಾದರು.

ಈ ಮೇರೆಗೆ ಸರ್ ಫ್ರೆಡ್ರಿಕ್ ನಿಕೋಲ್ಸನ್ ಅವರು ತಮ್ಮ ಸಾತ್ವಿಕತೆ ಹಾಗೂ ಬುದ್ಧಿಕುಶಲತೆಗಳಿಂದ ಹೆಸರುವಾಸಿಗಳಾದುದನ್ನು ಕಂಡು ಅದೇ ಸಮಯದಲ್ಲಿ ಪ್ರಾಪ್ತವಾದ ಬರಗಾಲ ದುಃಸ್ಥಿತಿಯ ನಿವಾರಣೆಗಾಗಿ ಕೇಂದ್ರ ಸರಕಾರದವರು ತಾವು ರಚಿಸಿದ ಬರಗಾಲ ಸಮಿತಿಯಲ್ಲಿ ಶ್ರೀ ನಿಕೋಲ್ಸನ್ ಅವರನ್ನು ಸೇರ್ಪಡೆ ಮಾಡಿದರು. ಇದಾದ ಮೇಲೆ ಬರಗಾಲ ಸಮಿತಿಯು ವರದಿಯೊಂದನ್ನು ಹೊರಡಿಸಿ ''ದೇಶವನ್ನು ಬರಗಾಲದ ಭವಣೆಯಿಂದ ಪಾರುಗೈಯಬೇಕಾದರೆ ಪರಸ್ಪರ ಸಹಕಾರಿ ಪತ್ತಿನ ಸಹಕಾರಿ ಸಂಘಗಳನ್ನು ಸ್ಥಾಪಿಸಬೇಕು'' ಎಂದು ಸಲಹೆ ನೀಡಿತು.

ಇದರ ಫಲವಾಗಿ ಸರ್ ಡೆಂಝಿಲ್ ಇಜಿಟ್‌ಸನ್ ಅವರು ಸಹಕಾರಿ ಸಂಘಗಳ ಮಸೂದೆಯೊಂದನ್ನು ಶಾಸನ ಸಭೆಯಲ್ಲಿ ಮಂಡಿಸಿದರು. ಶಾಸನ ಸಭೆಯಲ್ಲಿ ಮುಂದೆ ತರಬೇಕಾದ ಮಸೂದೆ ಮತ್ತು ಮಾದರಿಯ ನಿಯಮಗಳನ್ನು ಸಿಮ್ಲಾದಲ್ಲಿ ಸೇರಿದ ಪರಿಷತ್ತು ೧೯೦೩ ರಲ್ಲಿ ಸಿದ್ಧಪಡಿಸಿತ್ತು. ಈ ಎಲ್ಲ ನಿಯಮಗಳನ್ನು ''ಇಂಗ್ಲೀಷ ಫ್ರೆಂಡ್ಲಿ ಸೊಸೈಟಿ ಆ್ಯಕ್ಟ'' ಇದರ ಮೇರೆಗೆ ರಚಿಸಲಾಗಿದ್ದಿತು. ಮುಂದೆ ೧೯೦೪ ಮಾರ್ಚ ೨೫ಕ್ಕೆ ಈ ಮಸೂದೆಯು ಕಾಯಿದೆ ಸ್ವರೂಪವನ್ನು ಹೊಂದಿ ಪಾಸು ಮಾಡಲ್ಪಟ್ಟಿತ್ತು. ಅಂದಿನಿಂದ ''ಸಹಕಾರಿ ಪತ್ತಿನ ಸಂಘಗಳ ಕಾಯಿದೆ'ಯು ಅಸ್ತಿತ್ವದಲ್ಲಿ ಬಂದಿತು.

ಈ ಕಾಯಿದೆಯ ಫಲವಾಗಿ ಭಾರತದಲ್ಲಿ ಅನೇಕ ಸಹಕಾರಿ ಪತ್ತಿನ ಸಂಘಗಳ ಜನ್ಮತಾಳಿದ್ದರಿಂದ ಸಹಕಾರಿ ಆಂದೋಲನ ಕ್ರಮೇಣ ಪ್ರಗತಿ ಹೊಂದುತ್ತ ನಡೆಯಿತು. ಕೇವಲ ಪ್ರಯೋಗಾವಸ್ಥೆಯಲ್ಲಿದ್ದ ಈ ಕಾಯಿದೆಯಿಂದ ಅನೇಕ ಅಡ್ಡಿ ಆತಂಕಗಳು ಕಾಣಿಸಿಕೊಳ್ಳಹತ್ತಿದ್ದವು. ಹೀಗಾಗಿ ಈ ಕಾಯಿದೆಯಲ್ಲಿ ಬದಲಾವಣೆ ಅತ್ಯವಶ್ಯವೆಂದು ಕಂಡುಬಂದಿತು. ಅನಿವಾರ್ಯವಾಗಿ ತಿದ್ದುಪಡೆಗೆ ಒಳಗಾದ ಈ ಕಾಯಿದೆಯನ್ನು ೧೯೧೨ರಲ್ಲಿ ''ಸಹಕಾರಿ ಸಂಘಗಳ ಕಾಯಿದೆ'' ಎಂದು ಕರೆಯಲ್ಪಟ್ಟಿತು. ನಂತರ ಈ ಕಾಯದೆಯ ಮೇರೆಗೆ ಬಿನ್ ಪತ್ತಿನ ಆಂದೋಲನವು ಭರದಿಂದ ಸಾಗತೊಡಗಿತು.

ಈ ಆಂದೋಲನವನ್ನು ಭಾವೀ ಪ್ರಗತಿಯ ದೃಷ್ಟಿಯಿಂದ ಪರಿಶೀಲಿಸಿ ವರದಿ ಮಾಡಲು ೧೯೧೪ರಲ್ಲಿ ಸರ್ ಎಡ್ವರ್ಡ್ ಮೆಕ್ಲಗಾನ್ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಲಾಯಿತು. ಇದಾದ ಮೇಲೆ ೧೯೧೯ರಲ್ಲಿ ಮಾಂಟೆಗೋ ಚೇಮ್ಸ ಫೋರ್ಡ್ ಸುಧಾರಣೆಗಳು ಬಳಕೆಯಲ್ಲಿ ಬಂದವು. ಆಗ ಸಹಕಾರವು ಪ್ರಾಂತಿಕ ವಿಷಯವೆಂದು ನಿರ್ಧರಿಸಲ್ಪಟ್ಟು ಪ್ರಾಂತಗಳಿಗೆ ತಮಗನುಕೂಲ ವಾಗುವಂತೆ ಸಹಕಾರಿ ಕಾಯಿದೆಯನ್ನು ಪಾಸ ಮಾಡಿಕೊಳ್ಳಲು ಆದೇಶವೀಯ ಲಾಯಿತು.

ಅದೇ ಮೇರೆಗೆ ೧೯೨೫ರಲ್ಲಿ ಮುಂಬಯಿ ಸರಕಾರವು ''ಸಹಕಾರಿ ಸಂಘಗಳ ಕಾನೂನ''ನ್ನು ರಾಜ್ಯದಾದ್ಯಂತ ಜಾರಿಯಲ್ಲಿ ತಂದಿತು. ಈ ಕಾಯಿದೆಯನ್ನು ತರುವಾಗ ಹಿಂದಿನ ಅನುಭವಗಳ ಬಗ್ಗೆ ಸಾಕಷ್ಟು ಗಮನ ಕೊಟ್ಟಿದ್ದರಿಂದ ಸಹಕಾರಿ ಸಂಘಗಳ ವ್ಯವಹಾರ ನಿರಾತಂಕವಾಗಿ ಸಾಗಲು ಅನುಕೂಲವಾಯಿತು. ಮುಂದೆ ೧೯೫೬ರ ನಂತರ ಕರ್ನಾಟಕವು ಮುಂಬಯಿ ಪ್ರಾಂತದಿಂದ ಪ್ರತ್ಯೇಕವಾದ್ದರಿಂದ ಮೈಸೂರ ರಾಜ್ಯದಲ್ಲಿ ೧೯೫೯ ರಂದು ''ಮೈಸೂರ ಸಹಕಾರಿ ಸಂಘಗಳ ಕಾಯಿದೆ'' ಅಮಲಿನಲ್ಲಿ ಬಂದಿತು. ಆನಂತರ ಈ ಕಾಯಿದೆಗನುಗುಣವಾಗಿಯೇ ಮೈಸೂರ ರಾಜ್ಯದ ಸಹಕಾರಿ ಸಂಘಗಳ ಆಡಳಿತ ನಡೆದಿರುತ್ತದೆ.

೧೯೩೦ರ ನಂತರ ಕಾಣಿಸಿಕೊಂಡ ಆರ್ಥಿಕ ಮುಗ್ಗಟ್ಟು ಜಗತ್ತನ್ನೇ ವ್ಯಾಪಿಸಿದ್ದರಿಂದ ಸಹಕಾರ ಆಂದೋಲನಕ್ಕೆ ಆಗ ತಾತ್ಪೂರ್ತಿಕ ವಿಘ್ನ ಪ್ರಾಪ್ತವಾದಂತಾಯಿತು. ಈ ಸ್ಥಿತಿ ೧೯೩೬–೩೭ರ ವರೆಗೂ ಮುಂದುವರೆಯಿತು. ಆ ಬಳಿಕ ೧೯೩೭ ರಲ್ಲಿ ಅಧಿಕಾರ ಸೂತ್ರ ವಹಿಸಿಕೊಂಡ ಜನತಾ ಸರಕಾರ ಸಹಕಾರ ಭಾಸ್ಕರನಿಗೆ ಅಡ್ಡೈಸಿ ಕಾರ್ಮೋಡಗಳನ್ನು ಚದುರಿಸಿದ್ದರಿಂದ ಸಹಕಾರವು ಪುನಃ ತೇಜಃಪುಂಜವಾಯಿತು. ಭಾರತೀಯ ಸ್ವಾತಂತ್ರ್ಯ ಪ್ರಾಪ್ತಿಯ ನಂತರ ಕಾಂಗ್ರೆಸ್ ಆಡಳಿತ ಸಹಕಾರವನ್ನು ತನ್ನ ಧೋರಣೆಯನ್ನಾಗಿಯೇ ಅಂಗೀಕರಿಸಿದ್ದರಿಂದ ಪಂಚವಾರ್ಷಿಕ ಯೋಜನೆಗಳಲ್ಲಿ ಸಹಕಾರಕ್ಕೆ ಪ್ರಥಮ ಪ್ರಾಶಸ್ತ್ಯ ದೊರಕಿತು. ಇಂದು ರಾಷ್ಟ್ರವ್ಯಾಪ್ತಿ ಹೊಂದಿದ ಸಹಕಾರವನ್ನು ಪ್ರಪ್ರಥಮವಾಗಿ ಸ್ವಾಗತಿಸಿದ ಶ್ರೇಯಸ್ಸು ಕನ್ನಡನಾಡಿಗಿದೆ. ಇದು ನಿಜವಾಗಿಯೂ ಹೆಮ್ಮೆಪಡುವ ಸಂಗತಿ.

ಸಹಕಾರ ಸಂಘಗಳ ಕಾಯಿದೆ ಪಾಸಾಗಿ ಒಂದು ವರ್ಷ ಕಳೆಯುವದರೊಳಗಾಗಿ ಕರ್ನಾಟಕದ ಆಗಿನ ಧಾರವಾಡ ಜಿಲ್ಲೆಯ ಕಣಗಿನಹಾಳ ಗ್ರಾಮದಲ್ಲಿ ''ಸಹಕಾರಿ ಪತ್ತಿನ ಸಂಘ''ವು ೧೯೦೫ ಮೇ ೮ ರಂದು ಸ್ಥಾಪಿಸಲ್ಪಟ್ಟಿತು. ಅಂದಿನಿಂದ ಸಹಕಾರದ ವ್ಯಾಪ್ತಿ ಬೆಳೆದಂತೆಲ್ಲ ರೈತನ ಆರ್ಥಿಕ ತೊಂದರೆಯ ನಿವಾರಣೆಗಾಗಿ ಎಲ್ಲ ಕಡೆಗೂ ''ಸಹಕಾರಿ ಪತ್ತಿನ ಸಂಘ''ಗಳು ಉದಯವಾಗಹತ್ತಿದವು. ಗ್ರಾಮಾಂತರ ಪ್ರದೇಶಗಳಲ್ಲಿ ''ಸಹಕಾರಿ ಪತ್ತಿನ ಸಂಘ''ಗಳು ರೈತನ ಆಧಾರ ಸ್ಥಂಭಗಳಾದಂತೆ ಶಹರದಲ್ಲಿಯ ವ್ಯಾಪಾರಸ್ಥರಿಗೆ

ಹಾಗೂ ಉದ್ಯಮದಾರರಿಗೆ ''ಅರ್ಬನ್ ಕೋ – ಆಪರೇಟಿವ್ಹ್ ಬ್ಯಾಂಕು''ಗಳ ಅವಶ್ಯಕತೆ ತುಂಬಾ ಆಯಿತು.

''ಅರ್ಬನ್ ಕೋ–ಆಪರೇಟಿವ್ಹ್ ಬ್ಯಾಂಕು'' ಗಳು ತಮ್ಮ ಕಾರ್ಯಕ್ಷೇತ್ರದಲ್ಲಿ ಮಿತವ್ಯಯದ ಪಾಠ ಕಲಿಸುತ್ತವೆಂಬುದು ಅನುಭವ ಸಿದ್ಧ ಮಾತು. ಮಾನವ ಹಿತಕ್ಕೆ ಮಿತವ್ಯಯವೇ ಮುಖ್ಯವೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಆತಿ ಪ್ರಸರಣ ಕಾಲದಲ್ಲಿಯಂತೂ ಅನಾವಶ್ಯಕ ಬೇಡಿಕೆಗಳನ್ನು ಪೂರೈಸಿಕೊಳ್ಳುವದು ಇನ್ನೂ ಗಂಡಾಂತರ ಈ ಎಲ್ಲ ಕಾರಣದಿಂದ ಮಿತವ್ಯಯದ ಭಾವನೆ ಜೀವನದಲ್ಲಿ ತುಂಬಾ ಅಗತ್ಯ.

ಹೀಗೆ ಮಿತವ್ಯಯದ ಸಾಧನೆಗಾಗಿ ಔದ್ಯೋಗಿಕ ಪ್ರಗತಿಗಾಗಿ ಅನ್ಯರನ್ನು ಅವಲಂಬಿಸಿ ಅವರ ಸ್ವಾರ್ಥದ ಬಲೆಯಲ್ಲಿ ಬಿದ್ದು ನರಳುವದಕ್ಕಿಂತ ''ಸಹಕಾರ''ದ ನೆರವಿನಿಂದ ಬಂಡವಾಲ ನಿರ್ಮಾಣ ಮಾಡಿಕೊಂಡು ಆರ್ಥಿಕಾಭಿವೃದ್ಧಿ ಸಾಧಿಸುವದು ಅತ್ಯಂತ ಶ್ರೇಯಸ್ಕರ. ಈ ದಿಸೆಯಲ್ಲಿ ಅರ್ಬನ್ ಕೋ– ಆಪರೇಟಿವ್ಹ್ ಬ್ಯಾಂಕುಗಳ ಪಾತ್ರ ಹಿರಿದು ಎಂಬುದು ನಿರ್ವಿವಾದ.

ಭಾರತ ಸರಕಾರ ''ಸಹಕಾರಿ ಪತ್ತಿನ ಸಂಘಗಳ ಕಾಯಿದೆ''ಯನ್ನು ಪಾಸು ಮಾಡಿದ ನಂತರ ಅದರ ಪ್ರಥಮ ರಜಿಸ್ಟ್ರಾರರಾದ ಶ್ರೀಯುತ ಮ್ಯಾಕನೀಲ ಎಂಬುವರು ಸಹಕಾರಿ ಪತ್ತಿನ ಉದ್ದೇಶಗಳನ್ನು ಪ್ರಚಾರ ಮಾಡುವದಕ್ಕಾಗಿ ಅಲ್ಲಲ್ಲಿ ಸಂಚಾರ ಕೈಗೊಂಡರು. ಆದರೆ ಅವರಿಗೆ ಜನತೆಯ ಅಜ್ಞಾನ ದೆಸೆಯಿಂದಾಗಿ ಎಲ್ಲಿಯೂ ಯಶದೊರೆಯಲಿಲ್ಲ.

ಕೊನೆಗೆ ನಿರಾಶರಾದ ಶ್ರೀ ಮ್ಯಾಕ್‌ನೀಲ ಆವರು ಗದಗ ಬೆಟಗೇರಿಗೆ ಬಂದಾಗ ಬೆಟಗೇರಿಯಲ್ಲಿ ಕ್ರಿಸ್ತಧರ್ಮೋಪದೇಶಕ್ಕಾಗಿ ವಿದೇಶದಿಂದ ಬಂದು ನೆಲೆಸಿದ ರೆವ್ಹರೆಂಡ್ ಕ್ಯಾನನ್, ಸಿ. ಎಸ್. ರಿವ್ವಿಂಗಗ್ಬನ್ ಅವರು ಶ್ರೀಯುತ ಮ್ಯಾಕ್‌ನೀಲ ಅವರೊಡನೆ ಹಾರ್ದಿಕವಾಗಿ ಸಹಕರಿಸಿದುದರ ಪರಿಣಾಮವಾಗಿ ೧೯೦೫ ರಲ್ಲಿ ''ದಿ ಬೆಟಗೇರಿ ಕೋ–ಆ–ಬ್ಯಾಂಕ್'' ಜನ್ಮತಾಳಿತು.

ಈ ದಿಸೆಯಲ್ಲಿ ರೆವ್ಹರೆಂಡಕ್ಯಾನ್ ಮತ್ತು ಅವರ ಇನ್ನುಳಿದ ಸಹಕಾರಿಗಳಾದ ಸರ್ವ ಶ್ರೀ ಶಿವಾಜಿ ರಾಮಚಂದ್ರ ಕುಲಕರ್ಣಿ, ಎಮ್. ಎಸ್. ಕುಲಕರ್ಣಿ, ಭವಾನಸಾ ಧರ್ಮಸಾ ಕಬಾಡಿ, ನಾಗೋಸಾ ಭವಾನಸಾ ಕಬಾಡಿ, ರಾ. ಸಾ. ಮಲ್ಲೇಶಪ್ಪ ಮಾನ್ವಿ, ವಿರೂಪಾಕ್ಷಪ್ಪ ಮಾನ್ವಿ, ಈಶ್ವರಪ್ಪ ಬುಳ್ಳಾ, ಶಾಂತಪ್ಪ ಕೋಟಿ ಮತ್ತು ಸಿದ್ಧರಾಮಪ್ಪ ಮಾನ್ವಿ ಮುಂತಾದ ಗದಗು–ಬೆಟಗೇರಿಯ ಪ್ರತಿಷ್ಠಿತ ಗ್ರಹಸ್ಥರೆಲ್ಲ ನಾಗರೀಕರ ಅಭಿನಂದನೆಗೆ ಪಾತ್ರರಾಗಿದ್ದಾರೆ.

ಹೀಗೆಯೇ ಬೆಟಗೇರಿ ಆರ್ಬನ್ ಬ್ಯಾಂಕ್ ಗದಗು–ಬೆಟಗೇರಿಯ ಯಾವತ್ತೂ ಜನರ ಸಂಪರ್ಕ ಹೊಂದಿ ಹತ್ತು ವರ್ಷಗಳ ಕಾಲ ಮುನ್ನಡೆಯಿತು. ಆದರೆ

ಬೆಳೆಯುತ್ತಿರುವ ಗದುಗಿಗೆ ವ್ಯವಹಾರ ಸೌಕರ್ಯಕ್ಕಾಗಿ ಇನ್ನೊಂದು ಬ್ಯಾಂಕಿನ ಅವಶ್ಯಕತೆ ಅನಿರ್ವಾವಾಯಿತು. ಅಂತೆಯೇ ಮುಂದೆ ೧೯೧೫ರಲ್ಲಿ ''ಗದಗ ಆರ್ಬನ್ ಕೋ–ಆಪರೇಟಿವ್ಹ ಬ್ಯಾಂಕ್'' ಅನೇಕ ಜನ ಸಹೃದಯರ ಸಹಕಾರದಿಂದ ಮೈತಾಳಿನಿಂತಿತು.

ಈ ಬಗ್ಗೆ ಪ್ರಪ್ರಥಮವಾಗಿ ಪ್ರಯತ್ನಿಸಿದ ಶ್ರೇಯಸ್ಸು ರಿಟಾಯರ್ಡ ಓವ್ಹಸೀಯರ ಆದ ಶ್ರೀಯುತ ಗಣಪತರಾವ ರಾಮಚಂದ್ರ ಸೋಹಜಿ ಅವರಿಗೆ ಸಲ್ಲತಕ್ಕದ್ದು. ಶ್ರೀಯುತರು ಬೆಳೆಯುತ್ತಿರುವ ನಗರವಾದ ಗದುಗಿಗೆ ಅರ್ಬನ್ ಕೋ–ಆಪರೇಟಿವ್ಹ ಬ್ಯಾಂಕಿನ ಅವಶ್ಯಕತೆ ತುಂಬಾ ಅಗತ್ಯವೆಂದು ಕಂಡು, ಈ ಕುರಿತು ಆಗ ಸಾರ್ವಜನಿಕ ಕಾರ್ಯದಲ್ಲಿ ಆಸಕ್ತಿಯಿಂದ ಭಾಗವಹಿಸುತ್ತಿದ್ದ ಸನ್ಮಾನ್ಯರಾದ ಸರ್ವ ಶ್ರೀ ರಾ. ಸಾ. ವೀರಪ್ಪ ಚವಡಿ, ಗುರಪ್ಪ ಆಲೂರ, ಶಾಂತಾರಾಮ ವೀಣೆಕರ, ಶಾಂತಪ್ಪ ಕೋಟಿ ಮತ್ತು ಈಶ್ವರಪ್ಪ ಬುಳ್ಳಾ ಇವರೆಲ್ಲರನ್ನು ಕರೆದು ತಮ್ಮ ಅಭಿಪ್ರಾಯ ತಿಳಿಸಿ ಅವರೆಲ್ಲರ ಅಪಾರ ಸಹಾನುಭೂತಿಯನ್ನು ಪಡೆದುಕೊಂಡು ಆಗಿನ ಸಬ್‌ಜಡ್ಜರಾದ ಶ್ರೀಯುತ ಇಡಗುಂಜಿ ಅವರ ಅಧ್ಯಕ್ಷತೆಯಲ್ಲಿ ಒಂದು ಸಭೆಯನ್ನೇರ್ಪಡಿಸಿದರು.

ಮೇಲ್ಕಂಡ ಸಭೆಯಲ್ಲಿ ಗದುಗಿನಲ್ಲಿಯೂ ಒಂದು ''ಶಹರ ಸಹಕಾರಿ ಸಂಘ'' ಅಗತ್ಯವೆಂಬ ನಿರ್ಣಯ ಸ್ವೀಕೃತವಾಯಿತು. ಅದರಂತೆ ಆರ್. ಬಿ. ಯು ಬ್ಯಾಂಕ ರಿಜಿಸ್ಟ್ರಾರ ಸಹಕಾರಿ ಸಂಘಗಳು ಮುಂಬಯಿ, ಅವರ ಕಡೆಗೆ ಮೇಲೆ ಕಾಣಿಸಿದ ಮಹನೀಯರನ್ನೊಳಗೊಂಡು ಒಟ್ಟು ಹದಿನೇಳು ಜನರಿಂದ ಕೂಡಿದ ಒಂದು ಅರ್ಜಿಯನ್ನು ಕಳಿಸಿಕೊಡಲಾಯಿತು. ಆ ಬಳಿಕ ಮೇ ೧೧ ರ ರಜಿಸ್ಟರ ಅವರು ೧೯೧೩ನೇ ಸಪ್ಟಂಬರ ೧೩ ರಂದು ಶಹರ ಸಹಕಾರಿ ಸಂಘವನ್ನು ರಜಿಸ್ಟರ ಮಾಡಿ ಆ ಬಗ್ಗೆ ೭೫೦ / ೧೯೧೩ನೇ ಸರ್ಟಿಫಿಕೇಟನ್ನು ಕಳಿಸಿಕೊಟ್ಟರು.

ಇದಾದ ನಂತರ ರಾ. ಬ. ಶ್ರೀನಿವಾಸ ಅವರ ನೇತ್ರುತ್ವದಲ್ಲಿ ''ಗದಗ ಬಿನ್ ಶೇತ್ಕಿ ಸಹಕಾರಿ ಪತ್ತಿನ ಸಂಘದ'' ಪ್ರಾಥಮಿಕ ಸಭೆ ಕರೆಯಲ್ಪಟ್ಟಿತು. ಈ ಪ್ರಥಮ ಸಭೆಯ ಅಧ್ಯಕ್ಷತೆಯನ್ನು ಶ್ರೀಮಂತ ಕೇಶವೀದಾಸ ದೇವೀದಾಸ ಸಾಹುಕಾರ ಅವರು ವಹಿಸಿದ್ದರು.

ಈ ಸಭೆಯಲ್ಲಿ ಸರ್ವ ಶ್ರೀ ರಾ. ಬ. ಶಿವಪ್ಪ ದುಂಡಪ್ಪ ಮಾನ್ವಿ, ರಾ. ಸಾ. ವೀರಪ್ಪ ಚವಡಿ, ಈಶ್ವರಪ್ಪ ಹೊಳೆಯಪ್ಪ ಬುಳ್ಳಾ, ಶಾಂತಪ್ಪ ವೀರಪ್ಪ ಕೋಟಿ, ರಾ. ಸಾ. ವೀರಪ್ಪ ಮಾನ್ವಿ, ಶಾಂತಾರಾಮರಾವ್ ವೀಣೆಕರ ಮತ್ತು ಗುರಪ್ಪ ಆಲೂರ ಈ ಪ್ರಕಾರ ಏಳು ಜನ ಸದಸ್ಯರಿದ್ದ ಮ್ಯಾನೇಜಿಂಗ್ ಕಮೀಟಿ ರಚಿತವಾಯಿತು. ಅದರ ಚೇರ್ಮನ್‌ರಾಗಿ ಶ್ರೀಯುತ ಈಶ್ವರಪ್ಪ ಹೊಳೆಯಪ್ಪ ಬುಳ್ಳಾ ಅವರು ಆರಿಸಲ್ಪಟ್ಟರು. ಮುಂದೆ ೧೯೧೪–೧೫ರಲ್ಲಿ ಸಂಘದ ಚೇರ್ಮನ್‌ರೆಂದು ಆಯ್ಕೆಯಾದ ಶ್ರೀಯುತ

ಶಾಂತಪ್ಪ ವೀರಪ್ಪ ಕೋಟಿ ಅವರು ೧೯೨೯ರ ವರೆಗೂ ಅದೇ ಸ್ಥಾನದಲ್ಲಿ ಮುಂದುವರೆದರು. ಶ್ರೀಯುತರ ಕಾಲಾವಧಿಯಲ್ಲಿಯೇ ಮೊದಲು ''ಬಿನ್‌ಶೇತ್ಕಿ ಸಹಕಾರಿ ಪತ್ತಿನ ಸಂಘ''ವೆಂದು ಇದ್ದುದು ೧೯೨೩ ರಲ್ಲಿ ''ಗದಗ ಶಹರ ಸಹಕಾರಿ ಬ್ಯಾಂಕ್'' ದರ್ಜೆಗೆ ಏರಿಸಲ್ಪಟ್ಟಿತು.

ಹೀಗೆ ಬ್ಯಾಂಕಿನ ಪ್ರಗತಿ ತ್ವರಿತಗತಿಯಿಂದಾಗಲಿಕ್ಕೆ ಅದರ ಅಭಿವೃದ್ಧಿಯ ಕುರಿತು ಶ್ರಮಿಸಿದ ಅದರ ಚೇರಮನ್‌ರಾಗಿ ಯಾವತ್ತುಸದಸ್ಯರು ಹಾಗೂ ಬ್ಯಾಂಕಿನ ಸಿಬ್ಬಂದಿ ಜನರ ಕಾರ್ಯಕ್ಷಮತೆಯೇ ಕಾರಣವೆಂದು ಧಾರಾಳವಾಗಿ ಹೇಳಬಹುದು.

■■

## ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ
ಡಂಬಳ–ಗದಗ

ಆದರಣೀಯ ಶ್ರೀ ಮಹಾಂತೇಶ ಹೊಸಮಠ ಅವರಿಗೆ

ಶಿವಶರಣು

ಸಹೃದಯರೆ,

ನೀವು ಬರೆದ ಪತ್ರ ಪೂಜ್ಯರಿಗೆ ತಲುಪಿದೆ. ಪತ್ರ ಓದಿ ಮನಸ್ಸಿಗೆ ತುಂಬಾ ನೋವು ಆಯಿತು. ಶ್ರೀ ಶಾಸ್ತ್ರೀಗಳ ಅಗಲುವಿಕೆ ನಿಮ್ಮನ್ನು ತಬ್ಬಲಿ ಮಾಡಿತು. ಶ್ರೀ ಸಿದ್ಧಲಿಂಗಯ್ಯನವರು ತಮ್ಮ ಇಳಿವಯಸ್ಸಿನಲ್ಲಿಯೂ ಓಡಾಡಿಕೊಂಡು ಶಾಸ್ತ್ರ–ಪುರಾಣ ನೀತಿ–ನಿಯಮಗಳನ್ನು ಒಬ್ಬ ಸಂತನಂತೆ ಹೇಳುವ ಪರಿ, ಬರವಣಿಗೆಯ ಕಾರ್ಯ ಇವೆಲ್ಲ ಕಣ್ಣಿಗೆ ಕಟ್ಟಿದಂತಿದೆ.

ಬಂದುದನ್ನು ಎದುರಿಸಬೇಕು, ಅಳು ನುಂಗಿ ನಗಬೇಕು, ಅನಾಥ ಪ್ರಜ್ಞೆಯ ನೋವನ್ನು ಸಹಿಸಬೇಕು, ಒಂದು ಗಿಡದಲ್ಲಿ ಹೂವು ಉಂಟು; ಮುಳ್ಳೂ ಉಂಟು. ಮುಳ್ಳಿನ ಸ್ವಭಾವಕ್ಕೆ – ಆ ಕಡೆಗೆ ಹೂವು ಲಕ್ಷ ಹಾಕುವದಿಲ್ಲ. ಹಾಗೆ ನೀವೂ ಕೂಡ ಧೈರ್ಯವಾಗಿ ಮುನ್ನಡೆಯಿರಿ.

ತಂದೆಯ ಗುಣ–ಮೌಲ್ಯಗಳನ್ನು, ತಂದೆಯ ಹೆಸರನ್ನು ಉಳಿಸುವದೇ ಮಕ್ಕಳ ಕರ್ತವ್ಯ. ಈ ದಿಸೆಯಲ್ಲಿ ಶ್ರೀ ಶಾಸ್ತ್ರಿಗಳ ಹೆಸರಿನಲ್ಲಿ ಸ್ಥಾಪಿಸಿದ ಟ್ರಸ್ಟ ಮೂಲಕ ಅನೇಕ ಒಳ್ಳೊಳ್ಳೆಯ ಕಾರ್ಯಗಳನ್ನು ಮಾಡುವದೇ ತಂದೆಗೆ ಸಲ್ಲಿಸುವ ಗೌರವವಾಗಿದೆ.

ಕಾರಣ ನೀವು ನಿಮ್ಮ ನೋವನ್ನೆಲ್ಲ ಮರೆತು ಹೊಸ ಮನುಷ್ಯರಾಗಿ ಇನ್ನೂ ವಿದಾಯಕ ಕಾರ್ಯಗಳನ್ನು ಮಾಡುವದರ ಮೂಲಕ ಆ ಕೆಲಸದಲ್ಲಿಯೇ ತಂದೆಯನ್ನು ಕಾಣಬೇಕು. ''ನಿದ್ದೆಗೊಮ್ಮೆ ನಿತ್ಯಮರಣ; ಎದ್ದ ಸಲ ನವೀನ ಜನನ'' ಎಂಬ ಕವಿವಾಣಿಯಲ್ಲಿ ನಂಬಿಕೆ ಇಟ್ಟು ಮುನ್ನಡೆಯಬೇಕು.

ಇತಿ ಶರಣು

ಕಾರ್ಯದರ್ಶಿ

॥ ಶ್ರೀ ಬಸವೇಶ್ವರ ಪ್ರಸನ್ನ ॥

ಶ್ರೀ ಪೂಜ್ಯ ಸಿದ್ಧಲಿಂಗ ಶಾಸ್ತ್ರಿಗಳವರಲ್ಲಿ ಅಮರಾವತಿಯ ಸದ್ಭಕ್ತ ಮಂಡಳಿಯ ವತಿಯಿಂದ ನೀಲಕಂಠಯ್ಯನವರು ಸೊಲ್ಲಾಪುರ ಇವರು ಸಲ್ಲಿಸುವ ಅನಂತ ಪ್ರೀತಿ ಪೂರ್ವಕ ಪ್ರಣಾಮಗಳು–

ಪೂಜ್ಯರೆ! ನಾವು ಶ್ರಾವಣಮಾಸ ಬಂದಾಗಲೇ ತಮ್ಮನ್ನು ನೆನಿಸಿಕೊಂಡು ಬರುತ್ತಿದ್ದೆವು. ಆದರೆ ತಾವು ಶ್ರೀ ಸಂಗಪ್ಪನವರು ಕರಡಿ ಇವರ ಹೆಸರಲ್ಲೆ ಟಪಾಲು ಬರೆದು ನಮ್ಮನ್ನು ಮುಂಚಿತವಾಗಿ ಎಚ್ಚರಿಸಿದಿರಿ.

ಶ್ರೀಗಳವರೆ! ನಾವು ಪ್ರತಿವರ್ಷದಂತೆ ಈ ವರ್ಷವೂ ಶ್ರಾವಣ ಮಾಸದಲ್ಲಿ ಪುರಾಣ ಹಚ್ಚುವದನ್ನು ನಿರ್ಧರಿಸಿದ್ದೇವೆ. ಯಾವ ಪುರಾಣ ಹಚ್ಚಬೇಕೆಂಬುದನ್ನು ಭಕ್ತ ಮಂಡಳಿ ಹಿಂದಿನಿಂದ ನಿರ್ಧರಿಸಿ ತಮಗೆ ತಿಳಿಯಪಡಿಸುತ್ತದೆ.

ಮಹನೀಯರೆ! ತಾವು ಹೋದ ಸಲ ನಮ್ಮೂರಿನಲ್ಲಿ ಶ್ರೀ ಶರಣ ಬಸವೇಶ್ವರ ಪುರಾಣವನ್ನು ಒಳ್ಳೇ ಮಾರ್ಮಿಕವಾಗಿ ಹಳ್ಳಿಗಾಡ ಜನರ ಹೃದಯ ಹಿಡಿಯುವಂತೆ ಹೇಳಿ ಎಲ್ಲ ಭಕ್ತರ ಹೃದಯದಲ್ಲಿ ಭಕ್ತಿಯ ಬೀಜವನ್ನೇ ಅಂಕುರಿಸಿ ಹೋಗಿದ್ದೀರಿ. ಅಂದ ಮೇಲೆ ನಮ್ಮೂರಿನ ಭಕ್ತರು ಇನ್ನಾರನ್ನು ಹುಡುಕುತ್ತ ಹೋಗಬೇಕು ? ಅದಕ್ಕಾಗಿ ಈ ವರ್ಷದ ಪುರಾಣ ಪ್ರವಚನಕ್ಕೆ ತಮ್ಮನ್ನು ನಾವೆಲ್ಲಾ ಭಕ್ತರು ತುಂಬು ಹೃದಯದಿಂದ ಸ್ವಾಗತಿಸುತ್ತೇವೆ.

ತಮ್ಮಂಥ ಪಾಂಡಿತ್ಯ ಪೂರ್ಣ ಪುರಾಣಿಕರನ್ನು ಅಮರಾವತಿಯ ಭಕ್ತರಿಗೆ ಒದಗಿಸಿ ಅಮರಾವತಿಯ ಭಕ್ತರನ್ನು ಪುನೀತರನ್ನಾಗಿ ಮಾಡಿದ ಶ್ರೇಯಸ್ಸು ಶ್ರೀ ಜಗದ್ಗುರು ತೋಂಟದಾರ್ಯ ಮಹಾಸ್ವಾಮಿಗಳವರಿಗೆ ಸಲ್ಲುತ್ತದೆಂದು ನಾವೆಲ್ಲಾ ಭಕ್ತರು ಅನಂತಾನಂತ ಪ್ರಣಾಮಗಳನ್ನು ಸಲ್ಲಿಸುತ್ತೇವೆ.

ತಾವುಗಳು ನಮ್ಮ ಈ ವರ್ಷದ ಬೇಡಿಕೆಯನ್ನು ಶ್ರೀಗಳವರಿಗೆ ತಿಳಿಸಿ ಅವರ ಪ್ರೀತಿಯ ಆಶೀರ್ವಚನ ಪಡೆದು, ನಮಗೆ ತಿಳಿಸಬೇಕು. ಶ್ರಾವಣ ಮಾಸದಲ್ಲಿ ಪುರಾಣ ಹಚ್ಚುವ ಕಾಲಕ್ಕೆ ಒಬ್ಬರನ್ನು ನಿಮ್ಮನ್ನು ಕರೆಯಲಿಕ್ಕೆ ಕಳಿಸಿಕೊಡುತ್ತೇವೆ.

ಶ್ರೀಗಳವರ ಆಶೀರ್ವಚನ ಪಡೆದು ನಮಗೆ ಅತಿ ಜರೂರ ಉತ್ತರ ಬರೆಯಿರಿ.

ಅಮರಾವತಿ ಅಮರಾವತಿಯ ಸದ್ಭಕ್ತರು

ದಿ. ೧೬-೬-೮೨

ತರುಣಸಂಘ ಶಹಪೂರಪೇಟ, ಗದಗ

ಸ್ಥಾಪನೆ : ೧೩-೧೧-೧೯೫೦

ಚಾತುರ್ವಾರ್ಷಿಕ

# ಸೇವೆಯ ನಿವೇದನೆ

ದಿ : ೧೩ - ೧೧ - ೫೦ ರಿಂದ ದಿ. ೧೨ - ೧೧ - ೫೪ ರ ವರೆಗೆ

*

## ತರುಣಸಂಘ ಶಹಪೂರಪೇಟ, ಗದಗ

## ಚಾತುರ್ವಾರ್ಷಿಕ ಸೇವೆಯ ನಿವೇದನೆ

ಮಹನೀಯರೇ,

ಜಗತ್ತಿನ ಯಾವತ್ತೂ ಆಗು ಹೋಗುಗಳಿಗೆ ಯಾವ ವಸ್ತುವು ಮೂಲಕಾರಣ ವಾಗಿದೆಯೋ ಆ ಪರವಸ್ತುವಿನ ಸಂಕಲ್ಪದಂತೆ ''ತರುಣ ಸಂಘ ಶಹಪೂರಪೇಟೆ ಗದಗ'' ಜನ್ಮತಾಳಿ ತನ್ನ ನಾಲ್ಕೂ ವರ್ಷದ ''ಸಂಯುಕ್ತ ವರದಿ''ಯನ್ನು ಸಹೃದಯರ ಕೈಗೆ ನೀಡುತ್ತಿರುವದು ಆನಂದದಾಯಕವಾಗಿದೆ.

ಭಾರತದ ಪರದಾಸ್ಯ ಶೃಂಖಲೆಗಳು ಕಳಚಿ ಬಹುದಿನಗಳಾಗಿಲ್ಲ. ರಾಷ್ಟ್ರದ ಪ್ರಗತಿಗಾಗಿ ಜನನಾಯಕರು ''ಸಮತೆ'' ಹಾಗೂ ''ಸಹಜೀವನ''ಗಳ ಉದಾತ್ತ ತತ್ತ್ವಗಳನ್ನು ಪ್ರತಿಪಾದಿಸುತ್ತ, ಅವುಗಳನ್ನು ಕಾರ್ಯಗತಗೊಳಿಸಲು ವಿಶೇಷವಾಗಿ ಪ್ರಯತ್ನಿಸುತ್ತಿದ್ದಾರೆ. ಆದರೆ ಜನತೆಗೆ ಸ್ವಾತಂತ್ರ್ಯದ ನಂತರ ದೊರೆಯಬಹುದಾದ ಸುಖ, ಶಾಂತಿ, ನೆಮ್ಮದಿಗಳು ನಿರೀಕ್ಷಿಸಿದಂತೆ ಇನ್ನೂ ದೊರೆತಿಲ್ಲವೆನ್ನುವ ಮನೋಭಾವ ಮಾತ್ರ ಹಾಗೆಯೇ ಉಳಿದಿದೆ.

ಜನತೆಯ ಈ ಮನೋಭಾವನೆಗೆ ಅವರ ಅಜ್ಞಾನವೇ ಕಾರಣವಾಗಿದೆ. ರಾಷ್ಟ್ರದ ತೀವ್ರ ಸಂಪತ್ತಿಯನ್ನು ಜನ ಅಪೇಕ್ಷಿಸುತ್ತಿರುವಂತೆ ರಾಷ್ಟ್ರದ ಅಭಿವೃದ್ಧಿ ಯನ್ನು, ತಮ್ಮ ಕರ್ತವ್ಯವೇನೆಂಬುವದನ್ನು ಬಹುಜನರು ಆಲೋಚಿಸುವದಿಲ್ಲ.

ಜನತೆಯ ಈ ಜ್ಞಾನದಾರಿದ್ರ್ಯವನ್ನು ಹೋಗಲಾಡಿಸುವಲ್ಲಿ ಕೇವಲ ಶೈಕ್ಷಣಿಕ ಕ್ಷೇತ್ರವಷ್ಟೇಸಾಲದು. ಸಾಂಘಿಕ ಪ್ರಯತ್ನಗಳ ಮೂಲಕವಾಗಿ ಜನತೆಯ ಮನೋಧರ್ಮವನ್ನರಿತು ಅದಕ್ಕನುಗುಣವಾದ ಜ್ಞಾನ ಸೌಕರ್ಯಮಾಡಿ ಕೊಡುವದು ತುಂಬಾ ಅವಶ್ಯವಾಗಿದೆ.

ಮಧ್ಯಯುಗದ ಕೊನೆಯಕಾಲದಲ್ಲಿ ವರ್ಣಾಶ್ರಮಿಗಳ ಸಂಕುಚಿತ ಮನೋವೃತ್ತಿಯಿಂದ ಜ್ಞಾನಾರ್ಜನೆ ಸಾರ್ವತ್ರಿಕವಾಗಿ ದೊರೆಯದಂತಾಯಿತು. ಜ್ಞಾನದ ಅಭಾವದಿಂದ ಪ್ರಾಚೀನ ಭಾರತದ ಕ್ಷಾತ್ರ ಹಾಗೂ ಬ್ರಹ್ಮ ತೇಜಸ್ಸುಗಳು ಮಾಯವಾಗುತ್ತ ಹೋದಂತೆ ರಾಗ, ದ್ವೇಷ, ಅಸೂಯೆಗಳ ಕರಿಯ ಛಾಯೆ ದೇಶವನ್ನೆಲ್ಲ ವ್ಯಾಪಿಸಿತು. ಇದರಿಂದ ರಾಷ್ಟ್ರದಲ್ಲಿ ಅನೈಕ್ಯತೆಯುಂಟಾಗಿ ಪರಕೀಯರ ಆಕ್ರಮಣಕ್ಕೆ ಭಾರತ ಬಲಿ ಯಾಗಬೇಕಾಯಿತು.

ಮುಂದೆ ಭಾರತೀಯ ಸ್ವಾತಂತ್ರ್ಯಕ್ಕಾಗಿ ಪ್ರಯತ್ನಗಳು ನಡೆಯದೆ ಹೋಗಲಿಲ್ಲ. ಶತಮಾನಗಳ ಕಾಲದವರೆಗೆ ಅನೇಕ ರಕ್ತ ಕ್ರಾಂತಿಗಳಾದವು. ಒಂದೂ

ಜಯಪ್ರದವಾಗಲಿಲ್ಲ. ಆದರೆ ಭಾರತೀಯ ಸಂಸ್ಕೃತಿಯ ಪ್ರತೀಕಗಳಾದ ಸತ್ಯ, ಶಾಂತಿ, ಅಹಿಂಸೆಗಳ ಮೂಲಕ ರಾಷ್ಟ್ರಪಿತ ಬಾಪೂ ಹೂಡಿದ ಅಹಿಂಸಾತ್ಮಕ ಅಂದೋಲನಕ್ಕೆ ಮಾತ್ರ ವಿಜಯಶ್ರೀಯುಂಟಾಗಿ ಭಾರತ ಸ್ವತಂತ್ರವಾಯಿತು.

ಇದರಿಂದ ಸಂಸ್ಕೃತಿಯ ವಿಸ್ಮರಣೆಯೇ ರಾಷ್ಟ್ರದ ಅಧೋಗತಿಗೆ ಕಾರಣ ಮತ್ತು ಸಂಸ್ಕೃತಿಯ ರಕ್ಷಣೆಯೇ ರಾಷ್ಟ್ರದ ಪುರೋಭಿವೃದ್ಧಿಗೆ ಕಾರಣ ಎನ್ನುವ ಮೂಲಭೂತ ತತ್ತ್ವ ಸ್ಪಷ್ಟವಾದಂತಾಯಿತು.

ಜಗತ್ತು ಇಂದು ಸಮತಾವಾದ ಹಾಗೂ ಬಂಡವಾಳಶಾಹಿಗಳ ತಾಕಲಾಟದಲ್ಲಿ ಅಗ್ನಿ ಕುಂಡವಾಗಿದೆ. ಸ್ವಾರ್ಥಪರಾಯಣತೆಯ ಗಾಢಾಂಧಕಾರವು ಪ್ರಪಂಚವನ್ನೆಲ್ಲ ವ್ಯಾಪಿಸಿದೆ. ವಿಜ್ಞಾನ ದುರುಪಯೋಗವು ವಿಶ್ವಶಾಂತಿಯನ್ನು ಕದಡಿದೆ. ಇಂದಿನ ನವನಾಗರಿಕತೆಯ ಮಾನವನಲ್ಲಿ ವಿಷಯದಾಹವನ್ನು ಹೆಚ್ಚಿಸಿದೆ. ಆರ್ಥಿಕ ಮುಗ್ಗಟ್ಟು ಜನಸಾಮಾನ್ಯರನ್ನು ಅನೀತಿ ಜೀವಿಗಳನ್ನಾಗಿ ಮಾಡಹತ್ತಿದೆ. ಇದರಿಂದ ಜೀವನದಲ್ಲಿ ತೃಪ್ತಿ ಆತ್ಮಿಕಶಾಂತಿ ಇಲ್ಲದಾಗಿವೆ.

ಜಗತ್ತಿನ ಇಂಥ ಸಂದಿಗ್ಧಸಮಯದಲ್ಲಿ ಭಾವಿಜನಾಂಗವಾದ ತರುಣ ಪೀಳಿಗೆ ತನ್ನ ಮುಂದಿನ ಕರ್ತವ್ಯವೇನೆಂಬುದನ್ನು ಪರ್ಯಾಲೋಚಿಸುವದು ಅತ್ಯಂತ ಅಗತ್ಯವಾಗಿದೆ. ಸಾಮಾನ್ಯವಾಗಿ ತರುಣರ ಪ್ರವೃತ್ತಿ ವಿಷಯಲೋಲುಪತೆ ಕಲ್ಪನಾವಿಲಾಸ ಹಾಗೂ ಸ್ವೇಚ್ಛಾಚಾರಗಳಲ್ಲಿ ಆಸಕ್ತವಾಗಿರುವದರಿಂದ ಅವರ ಭಾವಿಜೀವನ ಆಲಸ್ಯ ಹಾಗೂ ಅನಾರೋಗ್ಯಗಳಿಗೆ ಗುರಿಯಾಗಿ, ಪರಿಣಾಮದಲ್ಲಿ ದಾರಿದ್ರ್ಯ ಹಾಗೂ ಪಶ್ಚಾತ್ತಾಪಗಳಲ್ಲಿ ಕೊನೆಗೊಳ್ಳುವದು. ಎರಡನೇ ಮಹಾಯುದ್ಧ ನಡೆದಾಗ ಹಿಟ್ಲರನು ''ಫ್ರಾನ್ಸ ಸೋತರೆ ವಿಲಾಸ ಜೀವನ ಕೊನೆಗೊಳ್ಳುವದು; ಜರ್ಮನಿ ಸೋತರೆ ವಿಜ್ಞಾನ ಕೊನೆಗೊಳ್ಳುವದು'' ಎಂದು ತೆಗೆದ ಉದ್ಗಾರ ತರುಣರಿಗೆ ಮಾರ್ಗದರ್ಶಿಕೆಯಾಗಿದೆ.

ವಿಲಾಸ ಜೀವನದಲ್ಲಿ ಮನುಷ್ಯನ ಮನಸ್ಸು ಸಂಕುಚಿತವಾಗಿ ಸ್ವಾರ್ಥ ಭಾವನೆಯುಂಟಾಗುವದು. ಇಂದಿನ ಜಾಗತಿಕ ಅಶಾಂತಿಗೆ ಈ ಸ್ವಾರ್ಥವೇ ಮೂಲ ಸೂತ್ರವಾಗಿದೆ. ವ್ಯಕ್ತಿ ರಾಷ್ಟ್ರದ ಘಟಕವಾಗಿರುವದರಿಂದ ರಾಷ್ಟ್ರಕಲ್ಯಾಣದಲ್ಲಿಯೇ ವ್ಯಕ್ತಿಯ ಕಲ್ಯಾಣವಿದೆ. ಇಂದು ಪ್ರಪಂಚದಲ್ಲಿ ಪ್ರಗತಿಶೀಲವಾಗಿರುವ ಬ್ರಿಟನ್, ರಷ್ಯಾ, ಅಮೇರಿಕಾ ಮುಂತಾದ ರಾಷ್ಟ್ರಗಳು ಇಷ್ಟೊಂದು ಸಾಂಪತ್ತಿಕ ಸ್ಥಿತಿಯಲ್ಲಿರಲಿಕ್ಕೆ ಅಲ್ಲಿಯ ಅಪಾರ ರಾಷ್ಟ್ರೀಯ ಪ್ರೇಮವೇ ಮುಖ್ಯವಾಗಿದೆ.

''ತನ್ನಂತೆ ಜಗತ್ತನ್ನು ಕಾಣುವದು'' ಭಾರತೀಯರಿಗೇನು ಹೊಸದಲ್ಲ. ''ಸರ್ವೇ ಜನಾಃ ಸುಖಿನೊ ಭವಂತು'', ''ಆತ್ಮವತ್ ಸರ್ವಭೂತೇಷು'', ''ಸಕಲ ಜೀವಿಗಳಿಗೆ ಲೇಸನೇ ಬಯಸು'', ''ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಣವಕ್ಕು'' ಮುಂತಾದ ಉಚ್ಚತತ್ತ್ವಗಳು ಭಾರತೀಯ ಸಂಸ್ಕೃತಿಯ ಹೃದಯ ವೈಶಾಲ್ಯದ ದ್ಯೋತಕಗಳಾಗಿವೆ.

ಇಡೀ ಪ್ರಪಂಚಕ್ಕೆ ''ತತ್ವಜ್ಞಾನ''ದ ಕಾಣಿಕೆಯನ್ನು ಕೊಟ್ಟ ಭಾರತವು ಇಂದು ''ರಾಷ್ಟ್ರಪ್ರೇಮ''ದ ಪಾಠವನ್ನು ಪರರಾಷ್ಟ್ರಗಳಿಂದ ಕಲಿಯಬೇಕಾದ ದುರವಸ್ಥೆಗೀಡಾಗಿದೆ. ಇದಕ್ಕೆ ಭಾರತೀಯರ ಸಂಸ್ಕೃತಿಯ ವಿಸ್ಮರಣೆಯೇ ಮುಖ್ಯಕಾರಣವಾಗಿದೆ.

''ಸಂಸ್ಕೃತಿ'' ಪ್ರತಿಯೊಂದು ರಾಷ್ಟ್ರಕ್ಕೂ ಹೃದಯದಂತಿದೆ. ಅದನ್ನು ದುರ್ಬಲವಾಗಿಟ್ಟು ಯಾವ ರಾಷ್ಟ್ರವೂ ಸ್ವತಂತ್ರವಾಗಿ ಬದುಕಲಾರದು. ಮನುಷ್ಯನ ಎಲ್ಲ ಕ್ರಿಯೆಗಳಿಗೂ ಅವನ ಮನಸ್ಸೇ ಕಾರಣವಾಗಿದೆ. ಚಿಕ್ಕ ವಯಸ್ಸಿನಲ್ಲಿ ಕೊಡುವ ಮಾನಸಿಕ ಸಂಸ್ಕಾರಗಳೇ ಅವನ ಭಾವೀ ಜೀವನವನ್ನು ರೂಪಿಸುವವು. ಮನಸ್ಸು ಸ್ವಾಭಾವಿಕವಾಗಿ ಅಧೋಗಾಮಿಯಾಗಿದ್ದು, ಇಂದ್ರಿಯಗಳ ಚಾಪಲ್ಯಕ್ಕೆಳಸಿ ಮಾನವನನ್ನು ದಾನವನನ್ನಾಗಿ ಮಾಡುತ್ತದೆ. ಆದರೆ ಸಂಸ್ಕೃತಿ ಮನಸ್ಸಿನ ಹರಿದಾಟವನ್ನು ತಡೆದು ನಿಲ್ಲಿಸಿ, ಊರ್ಧ್ವಗಾಮಿಯನ್ನಾಗಿ ಮಾಡಿ ಮನುಷ್ಯನ ಜೀವಗುಣಗಳನ್ನು ಕಳೆದು ದೇವಮಾನವನ್ನಾಗಿ ಮಾಡುತ್ತದೆ. ಒಟ್ಟನಮೇಲೆ ಮನುಷ್ಯನಲ್ಲಿ ಸದ್ಗುಣಗಳು ನೆಲೆಸುವಂತೆ ಕ್ರಮಬದ್ಧವಾಗಿ ಕೊಡುವ ಮಾನಸಿಕ ಶಿಕ್ಷಣವೇ ''ಸಂಸ್ಕೃತಿ'' ಎಂದೆನಿಸುವದು.

ಇತ್ತೀಚಿಗೆ ಭಾರತ ಸರಕಾರವು ಸಂಸ್ಕೃತಿಯ ರಕ್ಷಣೆ ಹಾಗೂ ಅದರ ಪ್ರಸಾರ ಕಾರ್ಯಕ್ಕಾಗಿ ವಿಶೇಷ ಆಸಕ್ತಿವಹಿಸುತ್ತಿರುವದಲ್ಲದೆ ರಾಷ್ಟ್ರ ಧುರೀಣರು ಮೇಲಿಂದ ಮೇಲೆ ''ಶೀಲಬಲ ಸಂವರ್ಧನೆ''ಗಾಗಿ ತರುಣರನ್ನೇ ಕೇಳಿಕೊಳ್ಳುತ್ತಿರುವದು. ಗಮನಾರ್ಹವಾಗಿದೆ. ತರುಣರೇ ಭಾವಿ ಜನಾಂಗವಾಗಿದ್ದು ರಾಷ್ಟ್ರದ ಭವಿತವ್ಯವು ಅವರನ್ನೇ ಕೂಡಿದೆ. ಕಲ್ಯಾಣರಾಷ್ಟ್ರ ಕಟ್ಟುವದಕ್ಕಾಗಿ ತರುಣರು ಮುಂದೆಬಂದು ಸಂಸ್ಕೃತಿಯ ತಿರುಳನ್ನು ಅರಿತು ಆಚರಿಸಿದಷ್ಟು ರಾಷ್ಟ್ರಕ್ಕೆ ಉಪಕಾರವಾಗುವದು.

ಹೀಗೆ ರಾಷ್ಟ್ರದ ಹಿತವನ್ನು ಅನುಲಕ್ಷಿಸಿ ತರುಣವರ್ಗದಲ್ಲಿ ಶೀಲ–ಬಲ ಸಂವರ್ಧನೆಯುಂಟಾಗುವಂತೆ ತರುಣರನ್ನು ವಿಧಾಯಕವಾಗಿ ಸಂಘಟಿಸಲು ದಿನಾಂಕ ೧೩–೧೧–೧೯೫೦ ರಲ್ಲಿ ಶ್ರೀಮಾನ್ ಕೆ. ಎಚ್. ಓಲಿ. ಬಿ. ಎ. ಬಿ. ಟಿ. ಅವರ ಅಧ್ಯಕ್ಷತೆಯ ''ತರುಣಸಂಘ ಶಹಪೂರಪೇಟ ಗದಗ'' ಸ್ಥಾಪನೆಯಾಯಿತು. ಸಂಘದ ಉದ್ಘಾಟನೆಗಾಗಿ ಗದಗ ಸಾವಧಾನ ಪತ್ರಿಕೆಯ ಸಂಪಾದಕರಾದ ಪಂಡಿತ ನಾಗಭೂಷಣ ಶಾಸ್ತ್ರಿಗಳು ಆಗಮಿಸಿದ್ದರು.

### ಸಂಘದ ಧ್ಯೇಯ ಧೋರಣೆಗಳು

೧. ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನಿಟ್ಟುಕೊಳ್ಳುವದು.

೨. ಸಂಗೀತ, ಸಾಹಿತ್ಯ ಮತ್ತು ನಾಟ್ಯಕಲೆಗಳಿಗೆ ಪ್ರೋತ್ಸಾಹಕೊಡುವದು.

## ಧ್ಯೇಯಸಾಧನೆಗಾಗಿ ಸಂಸ್ಥೆಯಿಂದ ಪ್ರಾರಂಭಿಸಲ್ಪಟ್ಟ ಉಪಕ್ರಮಗಳು

೧. ಜ್ಞಾನ ಪ್ರಸಾರಾತ್ಮಕ ಸಭೆ : ನಾಡಿನ ವಿದ್ಯಾವಂತರನ್ನು, ಅನುಭಾವಿಗಳನ್ನು, ಮತ್ತು ಕಲಾವಿದರನ್ನು ಬರಮಾಡಿಕೊಂಡು ತಿಂಗಳಿಗೆ ಒಂದು ಸಲ ಮಾಸಿಕ ಸಭೆಯನ್ನು ಏರ್ಪಡಿಸುವದು.

೨. ವಾಕ್ ಸ್ಪರ್ಧೆ : ಮಾನವನ ವ್ಯಕ್ತಿತ್ವ ವಿಕಾಸದಲ್ಲಿ ತಾನರಿತುದದನ್ನು ಮತ್ತು ಅನುಭವಿಸಿದುದನ್ನು ಇತರರ ಮನಸ್ಸಿನ ಮೇಲೆ ಪರಿಣಾಮಕಾರಿಯಾಗಿ ತಿಳಿಸಿಕೊಡುವದು ಒಂದು ''ಕಲೆ''ಯೇ ಆದ್ದರಿಂದ ಸಂಘದ ಸದಸ್ಯರಲ್ಲಿ ''ವಕ್ತೃತ್ವ ಕಲೆ'' ಬೆಳೆದು ಬರುವಂತೆ ವಾರಕ್ಕೆ ಒಂದು ಸಲ ಚರ್ಚಾಕೂಟವನ್ನು ಏರ್ಪಡಿಸುವದು.

೩. ಅರಳು ಮಲ್ಲಿಗೆ : ವಕ್ತೃತ್ವ ಕಲೆಯಷ್ಟೇ ಪ್ರಾಧಾನ್ಯ ಪಡೆದಿರುವದು ''ಲೇಖನ ಕಲೆ'' ವಿಚಾರಗಳ ಪ್ರಚಾರ ಸಾಧನೆಯಲ್ಲಿ ಇದು ಅತ್ಯಂತ ಅವಶ್ಯವಾಗಿದೆ. ಸಂಘದ ಸದಸ್ಯರಲ್ಲಿ ಲೇಖನಕಲೆ ಅಭಿವೃದ್ಧಿ ಹೊಂದುವಂತೆ ''ಅರಳು ಮಲ್ಲಿಗೆ'' ಎಂಬ ಕೈ ಬರಹದ ಮಾಸ ಪತ್ರಿಕೆಯನ್ನು ಹೊರಡಿಸುವದು.

೪. ಲಲಿತ ಕಲೆ : ಮನುಷ್ಯನು ಅನ್ನವಿಲ್ಲದೆ ಬದುಕಬಹುದು ಆದರೆ ಆನಂದ ವಿಲ್ಲದೆ ಬದುಕಲಾರ. ಇಂಥ ಆನಂದವನ್ನು ತಾನು ಹೊಂದಿ ಇತರರನ್ನು ಆನಂದಗೊಳಿಸುವಲ್ಲಿ ಪ್ರಾಚೀನ ಕಲೆಗಳಾದ ಸಂಗೀತ, ಸಾಹಿತ್ಯ ನೃತ್ಯ, ಅಭಿನಯ, ಶಿಲ್ಪ ಮತ್ತು ಚಿತ್ರಕಲೆಗಳು ತುಂಬಾ ಸಹಾಯಕವಾಗಿವೆ. ಕಾರಣ, ಈ ಲಲಿತಕಲೆಗಳ ಪ್ರೋತ್ಸಾಹನೆಗಾಗಿ ವಿವಿಧ ಕಾರ್ಯಕ್ರಮ ಗಳನ್ನು ಆಗಾಗ್ಗೆ ಏರ್ಪಡಿಸುವದು.

## ಸಂಘದ ಕಾರ್ಯ ನಿರ್ವಾಹಕ ಸಮಿತಿ

### ಅಧಿಕಾರಿ ಮಂಡಲಿ

| | |
|---|---|
| ಮಹಾಗುಂಡಪ್ಪಾ ರ್‍ಯಾವಪ್ಪಾ, ಇಟಗಿ | ಅಧ್ಯಕ್ಷ |
| ಚನ್ನಬಸಪ್ಪಾ ತೋಟಪ್ಪಾ ಬಡಿಗಣ್ಣವರ | ಉಪಾಧ್ಯಕ್ಷ |
| ವೀರಭದ್ರಪ್ಪಾ ಕರಬಸಪ್ಪಾ ಬೇವಿನಮರದ | ಕೋಶಾಧ್ಯಕ್ಷ |
| ಎಸ್. ಕೆ. ಹೊಸಮಠ | ಪ್ರಧಾನ ಗೌರವ ಕಾರ್ಯದರ್ಶಿ |
| ಎಸ್. ಕೆ. ಶೆಟ್ಟರ | ಸಹಕಾರ್ಯದರ್ಶಿಗಳು |
| ಆಯ್. ಎಸ್. ಬಡಿಗಣ್ಣವರ | ,, |
| ಎಸ್. ಎ. ಸಂಬರಗಿ | ,, |

### ಕಾರ್ಯಕಾರೀ ಮಂಡಲಿ

ರಾಚಪ್ಪಾ, ಶಂಕ್ರಪ್ಪಾ ಹುಣಶೀಮರದ

ಬಸಪ್ಪಾ ಗೂಳಪ್ಪಾ ತಡಸದ

ರಾಚಪ್ಪಾ ಶಿವಪ್ಪಾ ಚಳ್ಳಮರದ

ಚನ್ನಪ್ಪಾ ಕರಬಸಪ್ಪಾ ಕಾಡಪ್ಪನವರ

ರುದ್ರಪ್ಪಾ ವೀರಭದ್ರಪ್ಪಾ ಬೇವಿನಮರದ

ಸದಾಶಿವ, ವೀರುಪಾಕ್ಷಪ್ಪಾ ಬಡಿಗಣ್ಣವರ

ಶಂಕರಪ್ಪಾ ಅಣವೀರಪ್ಪಾ ಹುಣಸೀಮರದ

ಕಲ್ಯಾಣಪ್ಪಾ ರಾಚಪ್ಪಾ ಮೂರ್ಕಂಡಿ

ಶಂಕರ ಹಾಲಪ್ಪಾ ತಡಸದ

ಪ್ರಮಥನಾಥ ವೀರಪ್ಪಾ ಉಮಚಗಿ

ಗಂಗಾಧರ ಕೊಟ್ರಬಸಪ್ಪಾ ಬಡಿಗಣ್ಣವರ

ಬಸಪ್ಪಾ ಶಂಕರಪ್ಪ ಹೆಬಸೂರ

### ಸಲಹಾ ಮಂಡಲಿ

ಗುರುಶಿದ್ದಪ್ಪಾ ವೀರಪ್ಪ ಹುಣಸೀಮರದ

ನೂರಂದಪ್ಪಾ ಚನಬಸಪ್ಪಾ ಕುಬಸದ

ರಾಚಪ್ಪಾ ಕರಿಯಪ್ಪಾ ಜಂಗಮನಿ

ತಿಪ್ಪಣ್ಣಾ ಮಲ್ಲಪ್ಪಾ ಯಂಡಿಗೇರಿ

ನಾಗಪ್ಪಾ ವೀರಭದ್ರಪ್ಪಾ ಮೂರಶೀಳಿನ

### ''ಜ್ಞಾನ ಪ್ರಸಾರಾತ್ಮಕ ಕಾರ್ಯಕ್ರಮ''ದಲ್ಲಿ ಭಾಗವಹಿಸಿದ ಮಹನೀಯರು

ಶ್ರೀ ಕೆ. ಎಚ್. ಓಲಿ., ಬಿ.ಎ., ಬಿ.ಟಿ.

ಪಂ. ನಾಗಭೂಷಣ ಶಾಸ್ತ್ರಿಗಳು, ಸಂಪಾದಕ ''ಸಾವಧಾನ''

ಶ್ರೀ ಎಸ್. ವ್ಹಿ ಕಲ್ಮಠ, ಎಮ್.ಎ., ಬಿ. ಟಿ.

ದಿವಂಗತ ಶ್ರೀ ವ್ಹಿ ಆರ್. ಕುಲಕರ್ಣಿ

ಶ್ರೀ ಸಿ. ಜಿ. ಹುಂಡೇಕಾರ, ಬಿ.ಎ., ಎಲ್.ಎಲ್.ಬಿ.

ಪಂ. ಬಸವರಾಜ ಶಾಸ್ತ್ರಿಗಳು ಪಗಡದಿನ್ನಿ ಹಿರೇಮಠ

ಶ್ರೀ ಗೋಪಾಲರಾವ ಬದಾಮಿ

ಶ್ರೀ ತೋಟಪ್ಪನವರು ಕೋಟಿ, ಬಿ.ಎ., ಎಲ್.ಎಲ್.ಬಿ.

ಶ್ರೀ ಜಿ. ಬಿ. ಜೋಶಿ, ಎಮ್.ಎ., ಬಿ.ಟಿ

ಶ್ರೀ ಸಿ. ಎಫ್. ಅಂಗಡಿ ಮಾಜಿ ನಗರಾಧ್ಯಕ್ಷ

ಶ್ರೀ ಬಿ. ಕ. ಪಾಟೀಲರು

ಶ್ರೀ ಅಯ್ಯಪ್ಪ ಶಾಸ್ತ್ರಿಗಳು

ಡಾ. ಸಿದ್ಧಲಿಂಗಯ್ಯನವರು, ಎಮ್.ಎ., ಪಿ. ಎಚ್. ಡಿ.

ಆಸ್ಥಾನ ವಿದ್ವಾನ್ ಶ್ರೀ ವೈ. ನಾಗೇಶ ಶಾಸ್ತ್ರಿಗಳು ಸರ್ವದರ್ಶನ ತೀರ್ಥ ಬಳ್ಳಾರಿ.

ಶ್ರೀ ಟಿ. ಸಿದ್ದಪ್ಪನವರು ಮಾಜಿ ಸಂಪಾದಕ ''ನವಯುಗ''

ಶ್ರೀ ವೀರಭದ್ರಪ್ಪನವರು ಮಲ್ಲಾಬಾದಿ

ರೆಡಿಯೋ ಸ್ಟಾರ ಶ್ರೀ ಆರ್. ಪಿ. ಹೂಗಾರ ಕರ್ನಾಟಕಕಿನ್ನರ

ಶ್ರೀ ಸಿ. ಪದ್ಮನಾಭ, ಬಿ.ಎ.

ಶ್ರೀ ವ್ಹಿ ವ್ಹಿ ಗಡಾದ

ಶ್ರೀ ಆಯ್. ಕೆ. ಕಾಲವಾಡಮಠ

ಶ್ರೀ ಟಿ. ಎಸ್. ಕೊಟಗಿ, ಬಿ.ಎ., ಬಿ.ಟಿ.

ಪ್ರೊ. ಹಿರೇಮಲ್ಲೂರ ಈಶ್ವರನ್, ಎಮ್.ಎ.

ಪ್ರಿನ್ಸಿಪಾಲ್ ಎಸ್. ಡಿ. ಇಂಚಲ

ಶ್ರೀ ಶಿವಮೂರ್ತಿ ಸ್ವಾಮಿಗಳು, ಎಂ.ಪಿ.

ಶ್ರೀ ಹಳಪೇಟ ಚಿಂತಾಮಣಿರಾಯರು

ಶ್ರೀ ಪಾಟೀಲ ಪುಟ್ಟಪ್ಪ ಸಂಪಾದಕ ''ನವಯುಗ''

ಶ್ರೀ ಪೇಜಾವರ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು ಉಡುಪಿ.

ಶ್ರೀ ದೇ. ಭ. ಅಂದಾನಪ್ಪನವರು ದೊಡ್ಡಮೇಟಿ, ಮಾಜಿ ಎಮ್.ಎಲ್.ಎ.

### ಸಾಪ್ತಾಹಿಕ ವಾಕ್ ಸ್ಪರ್ಧೆ

ಪ್ರತಿವಾರ ನಿರ್ಧಿಷ್ಟ ಪಡಿಸಿದ ವಿಷಯ ಕುರಿತು ಸಂಘದ ಯಾವತ್ತೂ ಸದಸ್ಯರಿಂದ ಚರ್ಚಾಕೂಟವನ್ನು ಅವಿಚ್ಛಿನ್ನವಾಗಿ ಸಾಗಿಸಿಕೊಂಡು ಬರಲಾಯಿತು.

## ಅರಳು ಮಲ್ಲಿಗೆ

ಶ್ರೀ ಎಸ್. ಕೆ. ಹೊಸಮಠ ಅವರ ಸಂಪಾದಕತ್ವದಲ್ಲಿ ಸಂಘದ ಪರವಾಗಿ ಹೊರಡುವ ಕೈ ಬರಹದ ಮಾಸಪತ್ರಿಕೆ ''ಅರಳು ಮಲ್ಲಿಗೆ''ಯು ವಿವೇಕವಾಣಿ, ಚಿಕ್ಕಕಥೆ, ಪ್ರಬಂಧ, ಭಾವಗೀತೆ ಮತ್ತು ಲಘು ಹರಟೆಗಳಿಂದ ಒಳಗೊಂಡಿರುತ್ತದೆ. ಈ ಎಲ್ಲ ಕೃತಿಗಳಿಗೆ ಸಂಪಾದಕರಿಂದ ವಿಮರ್ಶೆ ಬರೆಯಲಾಗುತ್ತದೆ. ಶ್ರೀ ಸಿದ್ಧೇಶ್ವರರ ವಚನಗಳನ್ನು ಸಂಪಾದಕರ ವಿವರಣೆಯೊಡನೆ ''ವಿವೇಕವಾಣಿ''ಯಲ್ಲಿ ಹಾಕಲಾಗುತ್ತದೆ. ಸಂಚಿಕೆಯ ಮುಖಪುಟವು ಸಂಘದ ಕಲಾವಿದರಿಂದ ಚಿತ್ರಿಸಲ್ಪಟ್ಟಿರುತ್ತದೆ.

ಮೇಲ್ಕಂಡ ರೀತಿಯಲ್ಲಿ ''ಅರಳು ಮಲ್ಲಿಗೆ'' ಪ್ರಕಟವಾಗುತ್ತಿದ್ದು ಅದರ ಮೂಲಕವಾಗಿ ತಮ್ಮ ಲೇಖನ ಕಲೆಯನ್ನು ಅಭಿವೃದ್ಧಿಗೊಳಿಸಿಕೊಂಡು ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಹೆಸರುವಾಸಿಗಳಾದ ಶ್ರೀ ಶಂಕರ ತಡಸ ಅವರ ಬಗ್ಗೆ ಸಂಘವು ಹೆಮ್ಮೆಪಡುತ್ತದೆ. ಮತ್ತು ಹಿರಿಯರಾದರೂ ಕಿರಿಯರಲ್ಲಿ ಸಹಕರಿಸಿ ''ಅರಳು ಮಲ್ಲಿಗೆ''ಯ ಲೇಖನ ಮಾಲೆಯಲ್ಲಿ ಭಾಗವಹಿಸಿ ಉಳಿದವರಿಗೆ ಮಾರ್ಗದರ್ಶನ ಮಾಡಿದ ಶ್ರೀಮಾನ್ ''ಗುರುಸಿದ್ಧಪ್ಪನವರು ಹುಣಸೀಮರದ'' ಅವರಿಗೆ ಸಂಘವು ಹೃತ್ಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

## ಲಲಿತ ಕಲೆ

ಸಂಘದ ವಾರ್ಷಿಕೋತ್ಸವದ ನಿಮಿತ್ತವಾಗಿ ಕೈಕೊಂಡ ಮನರಂಜನೆಯ ಕಾರ್ಯಕ್ರಮಗಳಲ್ಲಿ ಕೆಳಗೆ ಕಾಣಿಸಿದ ನಾಟಕಗಳನ್ನು ಅಭಿನಯಿಸಿ, ಸಂಘದವತಿಯಿಂದ ''ಲಲಿತಕಲೆ''ಗೆ ಯಥಾಶಕ್ತಿ ಸೇವೆಯನ್ನು ಸಲ್ಲಿಸಲಾಯಿತು.

ರೇಡಿಯೋ ಸ್ಟಾರ ಶ್ರೀಮಾನ್ ಆರ್. ಪಿ. ಹೂಗಾರ ಧಾರವಾಡ ಅವರ ಸಂಗೀತ ನಿರ್ದೇಶಕತ್ವದಲ್ಲಿ ಶ್ರೀ ಬಸವಜಯಂತಿಯಲ್ಲಿ ''ಕ್ರಾಂತಿ ದೀಪ'' ಎಂಬ ನಾಟಕವನ್ನು ಮತ್ತು ವಾರ್ಷಿಕೋತ್ಸವಗಳಲ್ಲಿ ''ಮಗಳ ಮದುವೆ'' ''ಹಾಳುತೋಟ'' ಎಂಬ ಸಾಮಾಜಿಕ ನಾಟಕಗಳನ್ನು ಅಭಿನಯಿಸಲಾಯಿತು.

ಲಿಂಗೈಕ್ಯ ಶ್ರೀ ಪಂಚಾಕ್ಷರ ಗವಾಯಿಗಳ ಶಿಷ್ಯರ ಸಂಗೀತ ನಿರ್ದೇಶಕತ್ವದಲ್ಲಿ ಸಂಘದ ವಾರ್ಷಿಕೋತ್ಸವದ ಅಂಗವಾಗಿ ಶ್ರೀ ಪರ್ವತವಾಣಿಯವರ ''ಬಹದ್ದೂರ ಗಂಡ'' ಎಂಬ ನಾಟಕವನ್ನು ಪ್ರಯೋಗಿಸಲಾಯಿತು.

ಗದಗದ ಮುನಸಿಪಲ್ ಹಾಯ್‌ಸ್ಕೂಲಿನ ಸ್ನೇಹ ಸಮ್ಮೇಲನದ ನಾಟಕ ಕಾರ್ಯಕ್ರಮಗಳಲ್ಲಿ ನಮ್ಮ ಸಂಘವು ಭಾಗವಹಿಸಿ ''ಮಗಳ ಮದುವೆ'' ''ಹಾಳುತೋಟ'' ಎಂಬ ಹಾಸ್ಯ ಪ್ರಧಾನ ನಾಟಕಗಳನ್ನು ಆಡಿ ಎಲ್ಲರ ಮೆಚ್ಚುಗೆಯನ್ನು ಪಡೆಯಿತು.

## ಸಂಘದ ಇತರ ಚಟುವಟಿಕೆಗಳು

ಜ್ಞಾನ ಪ್ರಸಾರ ಕಾರ್ಯವು ತರುಣ ಸಂಘದ ಮುಖ್ಯ ಗುರಿಯಾದ್ದರಿಂದ ಗದಗ ಶ್ರೀ ಜಗದ್ಗುರು ತೋಂಟದಾರ್ಯ ಯಾತ್ರಾ ಮಹೋತ್ಸವದ ಅಂಗವಾಗಿ ಜರಗುವ ಜ್ಞಾನ ಪ್ರಸಾರ ಕಾರ್ಯಕ್ರಮಗಳಲ್ಲಿ ಸನ್ನಿಧಿಯ ಅಪ್ಪಣೆಯ ಮೇರೆಗೆ ನಮ್ಮ ಸಂಸ್ಥೆಯು ವಿಶೇಷ ಆಸಕ್ತಿಯಿಂದ ಭಾಗವಹಿಸಿ ಸೇವೆ ಮಾಡಿದೆ.

ಸಾಂಸ್ಕೃತಿಕ ಚಟುವಟಿಕೆಯು ನಮ್ಮ ತರುಣ ಸಂಘದ ಗುರಿಗಳಲ್ಲಿ ಒಂದಾಗಿದ್ದರಿಂದ ಅನೇಕ ವರ್ಷಗಳಿಂದ ಶ್ರೀ ಬಸವಜಯಂತಿಯನ್ನು ಒಳ್ಳೇ ಯಶಸ್ವಿಯಾಗಿ ಆಚರಿಸುತ್ತ ಬಂದ ''ಗದಗ ವೀರಶೈವತರುಣ ಸಂಘ''ದ ಶ್ರೀ ಬಸವ ಜಯಂತಿ ಕಾರ್ಯಕ್ರಮದಲ್ಲಿ ಆ ಸಂಸ್ಥೆಯ ಕೋರಿಕೆಯ ಮೇರೆಗೆ ನಮ್ಮ ಸಂಸ್ಥೆಯು ಪ್ರತಿವರ್ಷ ಹಾರ್ದಿಕವಾಗಿ ಸಹಕರಿಸುತ್ತ ಬಂದಿದೆ.

ಧಾರವಾಡ ಬಾನುಲಿ ಕೇಂದ್ರದಲ್ಲಿ ಶ್ರೀ ಶಿವಶರಣರ ''ವಚನಗಾಯನ''ಕ್ಕೆ ತಡೆಯುಂಟಾದುದನ್ನು ನಮ್ಮ ಸಂಘವು ಪ್ರತಿಭಟಿಸಿ, ಕೇಂದ್ರ ಸರಕಾರದ ಗಮನವನ್ನು ಸೆಳೆದು ''ವಚನಗಾಯನ''ವು ಧಾರವಾಡ ಬಾನುಲಿ ಕೇಂದ್ರದಲ್ಲಿ ಪುನಃ ಪ್ರಾರಂಭವಾಗುವಂತೆ ಪ್ರಯತ್ನಿಸಿ ಯಶಸ್ವಿಯಾಯಿತು.

ಮಹನೀಯರೇ

ಪ್ರಾರಂಭದಲ್ಲಿ ತಿಳಿಸಿದಂತೆ ನೂರಾರು ಯುವಕರನ್ನು ಸಂಘದ ಪರವಾಗಿ ಸಂಘಟಿಸಿ ವಿಧಾಯಕ ಕಾರ್ಯದಲ್ಲಿ ಈ ರೀತಿ ಕಾರ್ಯಶೀಲರನ್ನಾಗಿ ಮಾಡಿದ್ದು ನಮ್ಮ ಈವರೆಗಿನ ವಿವರಣೆಯಿಂದ ತಮ್ಮ ಗಮನಕ್ಕೆ ಬಂದಿರಬಹುದು.

ನಮ್ಮ ಸಂಘ, ಇನ್ನೂ ನಾಲ್ಕು ವರ್ಷದ ಮಗು. ಅದು ಕೇವಲ ತಮ್ಮೆಲ್ಲರ ಔದಾರ್ಯದ ಆಶ್ರಯದಲ್ಲಿ ಬೆಳೆಯಬೇಕಾಗಿದೆ. ಸೇವೆ ನಮ್ಮದು; ಸಹಕಾರ ತಮ್ಮದು.

ಸಂಘದ ಉದಯಕ್ಕೆ, ಅದರ ಈ ವರೆಗಿನ ಬೆಳವಣಿಗೆಗೆ ಮತ್ತು ಅದು ತನ್ನ ಯಥಾಶಕ್ತಿ ಸೇವೆಯನ್ನು ಸಲ್ಲಿಸಲಿಕ್ಕೆ ನೆರವು ನೀಡಿದ ಯಾವತ್ತೂ ಹಿರಿಕಿರಿಯರಿಗೆ ನಮ್ಮ ಸಂಸ್ಥೆಯ ಹೃತ್ಪೂರ್ವಕ ಕೃತಜ್ಞತೆಗಳು. ಸರ್ವಶಕ್ತನಾದ ಭಗವಂತನು ಸರ್ವರಿಗೂ ಸನ್ಮಂಗಲವನ್ನುಂಟು ಮಾಡಲಿ

ಓಂ ಸಹನಾವವತು ಸಹನೌಭುನಕ್ತು
ಸಹವೀರ್ಯಂಕರವಾವಹೈ
ತೇಜಸ್ವಿನಾವವಧೀತಮಸ್ತು
ಮಾವಿದ್ವಿಷಾವಹೈ !
ಓಂ ಶಾಂತಿಃ ಶಾಂತಿಃ ಶಾಂತಿಃ

■■

## ದಿ. ೧೩-೧೧-೫೦ ರಿಂದ ದಿ. ೧೨-೧೧-೫೪ ರ ವರೆಗಿನ ಆಯವ್ಯಯಪತ್ರಿಕೆ

| ಜಮಾ | | ಖರ್ಚು | |
|---|---|---|---|
| ೧೭೫–೦–೦ | ಸಂಘಸ್ಥಾಪನೆಯ ಕಾಲಕ್ಕೆ ಸಾಮೂಹಿಕವಾಗಿ ದೇಣಿಗೆ ರೂಪದಿಂದ ಬಂದ ಹಣ | ೨೫೮–೧೦–೩ | ಪ್ರವಾಸ ಖಾತೆಕ್ಕೆ ಖರ್ಚು ಜ್ಞಾನಪ್ರಸಾರಾತ್ಮಕ ಸಭೆಗಳಿಗೆ ಅತಿಥಿಗಳ ಬರಹೋಗುವ ಖರ್ಚು |
| ೧೦೦–೦–೦ | ಶ್ರೀ ಕಾಶಪ್ಪ ಚನಬಸಪ್ಪ ಬಡಿಗಣ್ಣವರ ಗದಗ ಇವರಿಂದ ದೇಣಿಗೆ | ೭೩–೩–೦ | ಸಾದಿಲವಾರ ಖಾತೆಗೆ ಖರ್ಚು ಮಾಸಿಕ ಸಭೆಗಳಲ್ಲಿ ಹಾರ, ತುರಾಯಿ ಹಾಗೂ ಸಂಘದ ಲೆಟರಹೆಡ್ಸ, ನೋಟ ಬುಕ್ಕಗಳನ್ನು ಖರೀದಿ ಮಾಡಿದ್ದು |
| ೧೦೦–೦–೦ | ಶ್ರೀ ನೂರಂದಪ್ಪ ಚನಬಸಪ್ಪ ಕುಬಸದ ಗದಗ ಇವರಿಂದ ದೇಣಿಗೆ | | |
| ೧೦೦–೦–೦ | ಶ್ರೀ ಚನ್ನಪ್ಪ ನಾಗಪ್ಪ ಪಿಳ್ಳಿ ಗದಗ ಇವರಿಂದ ದೇಣಿಗೆ | ೩೧೮–೧೫–೬ | ಇತರ ಖಾತೆಗೆ ಖರ್ಚು ವಾರ್ಷಿಕೋತ್ಸವಗಳಲ್ಲಿ ನಾಟಕ ಫೋಟೋ ವ ಪಡದೆ ಬಣ್ಣ ವಗೈರೆ |
| ೮೨–೦–೦ | ಸಂಘದ ಸದಸ್ಯರಿಂದ ವರ್ಗಣಿ | ೮–೧–೯ | ಟಪಾಲ ಖಾತೆಗೆ ಖರ್ಚು |
| ೪೩೯–೮–೦ | ನಾಟಕದ ಕಾಲಕ್ಕೆ ಸಾರ್ವಜನಿಕರಿಂದ ಬಂದ ದೇಣಿಗೆ | ೬೫೮–೧೪–೬ | ರೂ. ಖರ್ಚು |
| ೯೯೬–೮–೦ | ಅಂತೂ ಜಮಾ | ೩೩೭–೯–೬ | ರೋಖ ಶಿಲ್ಕು |
| | | ೯೯೬–೮–೦ | ಅಂತೂ ಖರ್ಚು |

*

## ಸಂದರ್ಶಕರ ಅಭಿಪ್ರಾಯಗಳು

ಇಂದು ಗದಗ ಶಹಪೂರಪೇಟ ತರುಣ ಸಂಘದ ಆಮಂತ್ರಣದ ಮೇರೆಗೆ ಕಾರ್ಯಾಲಯಕ್ಕೆ ಭೆಟ್ಟಿಕೊಡುವ ಸುಸಮಯವನ್ನು ಒದಗಿಸಿಕೊಟ್ಟದ್ದಕ್ಕಾಗಿ ಆಭಾರ ಮನ್ನಿಸುವೆ. ಈ ಸಂಘದ ಕಾರ್ಯ ಕರ್ತರು ಉತ್ಸಾಹಿಗಳಾಗಿ ಸಾಂಸ್ಕೃತಿಕ ಕಾರ್ಯಗಳನ್ನು ಒಳ್ಳೇ ಉತ್ತಮ ರೀತಿಯಿಂದ ನಡೆಸಿದ್ದಾರೆ. ಹೆಚ್ಚಿನ ಸಹಾಯವನ್ನು ಸಾರ್ವಜನಿಕರು ಒದಗಿಸಿಕೊಟ್ಟಲ್ಲಿ ಇವರಿಂದ ದೇಶಕ್ಕೆ ಹೆಚ್ಚಿನ ಸೇವೆ ಸಲ್ಲಿಸಬಹುದೆಂದು ಆಶೆ........

ತಾ. ೩೧ ಆಗಸ್ಟು ೧೯೫೩ ಬಿ. ಶಿವಮೂರ್ತಿಸ್ವಾಮಿ ಎಂ. ಪಿ.

ಗದಗ ''ತರುಣ ಸಂಘ''ವನ್ನು ಸಂದರ್ಶಿಸಿದೆವು. ಸಂಘದ ಉದ್ದೇಶ ಮತ್ತು ಚಟುವಟಿಕೆಗಳನ್ನು ನಿರೀಕ್ಷಿಸಿ ಆನಂದಗೊಂಡಿರುವೆವು. ತರುಣರ ಉತ್ಸಾಹ, ಕ್ರಿಯಾ ಶಕ್ತಿಗಳ ರಶ್ಮಿಗಳು ಈ ಸಂಸ್ಥೆಯ ಚಂದ್ರನ ಕಡೆಗೆ ಒಮ್ಮುಖವಾಗಿ ಹರಿದು ಈ ಸಂಸ್ಥೆಯು ದಿವ್ಯವೂ ಶಾಂತವೂ ಆದ ಆಧ್ಯಾತ್ಮಿಕ ಪ್ರಭೆಯನ್ನು ಸಮಾಜಕ್ಕೆ ನೀಡಲಿ ಎಂದು ಆಶಿಸುವೆವು.

ತಾ. ೧೪-೭-೧೯೫೪ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು
ಪೇಜಾವರಮಠ, ಉಡಪಿ

### ಸಾಧನೆಯ ಕಾಲ

ನೆರೆ ಕೆನ್ನೆಗೆ, ತೆರೆಗಲ್ಲಕ್ಕೆ, ಶರೀರಗೂಡವೋಗದ ಮುನ್ನ
ಹಲ್ಲುಹೋಗಿ ಬೆನ್ನು ಬಾಗಿ ಅನ್ಯರಿಗೆ ಹಂಗಾಗದ ಮುನ್ನ
ಕಾಲಮೇಲೆ ಕೈಯನೂರಿ ಕೋಲಹಿಡಿಯದ ಮುನ್ನ
ಮುಪ್ಪಿಂದೊಪ್ಪುವಳಿಯದ ಮುನ್ನ
ಪೂಜಿಸು ನಮ್ಮ ಕೂಡಲ ಸಂಗಮದೇವನ

– ಶ್ರೀ ಬಸವಣ್ಣನವರು

## ಸಾಧನಕ್ಕೆ ಅಧಿಕಾರಿ

ಎಳೆಯ ಬಿದರನ್ನು ಸುಲಭವಾಗಿ ಬಗ್ಗಿಸಬಹುದು. ಆದರೆ ಬಲಿತ ಬಿದರನ್ನು ಬಗ್ಗಿಸಲು ಪ್ರಯತ್ನಿಸಿದರೆ ಮುರಿದುಹೋಗುವದು. ದೇವರ ಕಡೆಗೆ ಎಳೆಯರ ಮನಸ್ಸು ತಿರಿಗಿಸುವದು ಸುಲಭ. ಆದರೆ ವಯಸ್ಸಾದವರ ಮನಸ್ಸು ಹಾಗೆ ಯತ್ನಿಸಿದಾಗ ಅದು ತಪ್ಪಿಸಿಕೊಳ್ಳುವದು.

– ಶ್ರೀ ರಾಮಕೃಷ್ಣ ಪರಮಹಂಸರು

## ಸಾಧನೆಯ ಕಾಲ

ನಿನ್ನ ಅಕ್ಕ ಪಕ್ಕದ ಜನರು ನೀತಿ ಭ್ರಷ್ಟರಾಗಿ ಧನಿಕರಾಗುವದಾದರೆ ಆಗಲಿ, ನೀನು ಮಾತ್ರ ಬಡವನಾಗಿಯೇ ಬಾಳು. ವಂಚಕತನದಿಂದ ಹೆಚ್ಚಿನ ಸ್ಥಾನಕ್ಕೆ ಹೋಗುವವರು ಹೋಗಲಿ ನೀನು ಅಂಥ ಹೀನ ಕೃತಿಯಿಂದ ದೊರಕುವ ಯಾವ ಸ್ಥಾನಕ್ಕೂ ಆಸೆಪಡಬೇಡ. ಮುಖಸ್ತುತಿಯಿಂದ ತಮ್ಮ ಕಾರ್ಯ ಸಾಧಿಸಿಕೊಳ್ಳುವವರು ಸಾಧಿಸಿಕೊಳ್ಳಲಿ, ನೀನು ಮಾತ್ರ ನಿನ್ನ ನಿರಾಸೆಗಳನ್ನು ಸಹನಶೀಲತೆಯಿಂದ ಶಾಂತಗೊಳಿಸು. ಆತ್ಮಗೌರವ ಕಳೆದುಕೊಂಡು ದೊಡ್ಡವರ ಸಹವಾಸ ಮಾಡುವದಕ್ಕಿಂತ ಆತ್ಮ ಗೌರವಪೂರಿತ ನಿನ್ನ ನೈತಿಕಾಚರಣೆಯಲ್ಲಿಯೇ ನೀನು ನಿಷ್ಠನಾಗು. ಇದರಲ್ಲಿ ನೀನು ಮುಪ್ಪುಗಳೆದರೂ ಚಿಂತೆಯಿಲ್ಲ, ಭಗವಂತನ ಅಭಯ ಹಸ್ತವು ನಿನ್ನ ಮೇಲೆ ನಿತ್ಯವೂ ಇರುತ್ತದೆ.

– ಕನ್‌ಫ್ಯೂಷಿಯಸ್

■■

## ಸಿದ್ಧಲಿಂಗಶಾಸ್ತ್ರಿಗಳ ಮನೆತನದ ವಂಶಾವಳಿ





ಗ್ರಂಥದಾನಿಗಳು
ಶ್ರೀ ಮಹಾಂತೇಶ ಹೊಸಮಠ, ಹೈಕೋರ್ಟ ವಕೀಲರು



ಶಾಸ್ತ್ರಿಗಳ ಮಗಳು ಅನ್ನಪೂರ್ಣ, ಅಳಿಯ ಮಲ್ಲಿಕಾರ್ಜುನ
ಮೊಮ್ಮಕ್ಕಳು ಚೈತ್ರ, ಜ್ಯೋತಿ, ಅನುಷ



ಶಾಸ್ತ್ರಿಗಳು ಕಾಲ್ಮುರಿದುಕೊಂಡಾಗಿನ ಚಿತ್ರ



ಶಾಸ್ತ್ರಿಗಳು ಅನಾರೋಗ್ಯದಲ್ಲಿದ್ದಾಗ ಹಾಲು ಪೂರೈಸಿದ ಕಾಮದೇನು (ಕಪಿಲೆ)



ಗದುಗಿನ ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳಿಗೆ
ಕೋಮಸೌಹಾರ್ದ ಪ್ರಶಸ್ತಿ ಬಂದಾಗ



ಗದುಗಿನ ಪೂಜ್ಯರು, ಮಾಜಿ ಸಚಿವರಾದ ಎಚ್.ಡಿ.ರೇವಣ್ಣ
ಸಾಹಿತಿ ಚಂದ್ರಶೇಖರ ವಸ್ತ್ರದ, ಸಿದ್ಧಲಿಂಗಶಾಸ್ತ್ರಿಗಳ ಚಿರಂಜೀವಿ
ಶ್ರೀ ಮಹಾಂತೇಶ ಹೊಸಮಠ ಮತ್ತು ವೀರಣ್ಣ ಬೇವಿನಮರದ



೧೯೬೩ರಲ್ಲಿ ಸ್ಥಾಪಿಸಿದ ಶಿವಾನುಭವಸಂಸ್ಥೆ ಶಿಬಿರದ ವಿದ್ಯಾರ್ಥಿಗಳೊಂದಿಗೆ
ಪಂಡಿತ ನಾಗಭೂಷಣಶಾಸ್ತ್ರಿಗಳು ಮತ್ತು ಸಿದ್ಧಲಿಂಗಶಾಸ್ತ್ರಿಗಳು.



ಸಿದ್ಧಲಿಂಗಶಾಸ್ತ್ರಿಗಳು ಸ್ಥಾಪಿಸಿದ ಶಹಪೂರ ಪೇಟೆಯ ತರುಣಸಂಘ
"ಕ್ರಾಂತಿದೀಪ" ಧಾರ್ಮಿಕ ನಾಟಕವಾಡಿದಾಗ ಸ್ಮರಣೆಗೆ ತೆಗೆಸಿದ ಚಿತ್ರ



ಶಾಸ್ತ್ರಿಗಳಿಗೆ ೬೦ ವರ್ಷತುಂಬಿದಾಗ ಸುಮಿತ್ರಮ್ಮನಿಂದ ಮಾಲೆ
ಹಾಕಿಸಿದ ಸಂತಸದಲ್ಲಿ ಪೂಜ್ಯ ಜಗದ್ಗುರುಗಳು



ಅಣ್ಣಿಗೆರಿಯ ಜಗದ್ಗುರು ತೋಂಟದಾರ್ಯಮಠದಲ್ಲಿ
ಪುರಾಣ ಪ್ರವಚನ ಮಾಡುತ್ತಿರುವದು



೭೦ ವರ್ಷತುಂಬಿದ ಶಾಸ್ತ್ರಿಗಳು ಇನ್ನೂ ಬಾಲಕನಂತಿದ್ದಾನೆಂದು
ಹಾಸ್ಯ ಮಾಡುತ್ತಿರುವ ಪೂಜ್ಯ ತೋಂಟದ ಜಗದ್ಗುರುಗಳು.



ಹಿಂದಿನ ಕನ್ನಡ ಸಾಹಿತ್ಯಪರಿಷತ್ ಅಧ್ಯಕ್ಷರಾದ
ಪಂ. ಬಿ. ಶಿವಮೂರ್ತಿಶಾಸ್ತ್ರಿಗಳೊಡನೆ ಸಿದ್ಧಲಿಂಗಶಾಸ್ತ್ರಿಗಳು



ಎಡೆಯೂರು ಕ್ಷೇತ್ರಕ್ಕೆ ಭೇಟಿನೀಡಿದಾಗ
ಶ್ರೀ ಬಸವಲಿಂಗಯ್ಯನವರೊಂದಿಗೆ ಶಾಸ್ತ್ರಿಗಳು ಮತ್ತು ಅವರ ಧರ್ಮಪತ್ನಿ



ಶಾಸ್ತ್ರಿಗಳು ಮತ್ತು ಅವರ ಧರ್ಮಪತ್ನಿ ಪೂಜ್ಯರಿಂದ ಆಶೀರ್ವಾದ ಪಡೆಯುತ್ತಿರುವದು.



ಧರ್ಮಸ್ಥಳದ ವೀರೇಂದ್ರ ಹೆಗ್ಗಡೆಯರೊಂದಿಗೆ ಶಾಸ್ತ್ರಿಗಳು



ಶಾಸ್ತ್ರಿಗಳಿಗೆ ಹಾಳಕೆರೆಮಠದಲ್ಲಿ ಪೂಜ್ಯರಿಂದ ಸನ್ಮಾನ



ಮೈಮರೆತು ವ್ಯಾಖ್ಯಾನಮಾಡುತ್ತಿರುವ ಶಾಸ್ತ್ರಿಗಳು



ಶಾಸ್ತ್ರಿಗಳ ಕಾರ್ಯಕ್ರಮದಲ್ಲಿ ಸೊಂಡೂರ ಪ್ರಭುದೇವರು





ಗದುಗಿನ ಪೂಜ್ಯರಿಂದ ಶಾಸ್ತ್ರಿಗಳ ಧರ್ಮಪತ್ನಿ ಆಶೀರ್ವಾದ ಪಡೆಯುತ್ತಿರುವುದು





ಗದುಗಿನ ಪೂಜ್ಯರು, ಆದಿಚುಂಚನಗಿರಿ ಪೂಜ್ಯರು
ಮತ್ತು ಕರ್ನಾಟಕದ ಮಾಜಿಮುಖ್ಯಮಂತ್ರಿ ಎಸ್.ಎಂ. ಕೃಷ್ಣ



ಕೆಲವರಿರುತ್ತಾರೆ, ಬೆಳೆವ ಸಸಿಗೆ ನೀರು, ಗಾಳಿ, ಗೊಬ್ಬರವನ್ನೊದಗಿಸುವ ರೈತನ ಕೈಗಳಂತೆ; ಬೆಳೆದ ಸಸಿ ತೆನೆದುಂಬಿ ತಲೆದೂಗುವುದನ್ನು ನೋಡಿ ಸಂತೋಷಪಡುವ ಹೃದಯವಂತರಿವರು. ಇಂಥ ವಿರಳರ ಸಾಲಿನಲ್ಲಿ ನಿಲ್ಲುವ ವ್ಯಕ್ತಿ ಪಂ. ಸಿದ್ಧಲಿಂಗಶಾಸ್ತ್ರಿಗಳು.

ಪಂ. ಸಿದ್ಧಲಿಂಗ ಶಾಸ್ತ್ರಿಗಳಿಗೆ 'ಎಡೆಯೂರು ಸಿದ್ಧಲಿಂಗ' ಎಂದರೆ ಸಾಕು ಮೈದುಂಬಿ ಭಾವಪರವಶರಾಗಿ ಬಿಡುತ್ತಿದ್ದರು. ಸಿದ್ಧಲಿಂಗೇಶ್ವರ ಪುರಾಣ ಪ್ರವಚಿಸುವಾಗ ಅವರಿಗೆ ಇಹದ ಪರಿವೆಯೇ ಇರುತ್ತಿರಲಿಲ್ಲ. ಒಂದರ್ಥದಲ್ಲಿ ವಾಗ್ಭಾವ ಸಮಾಧಿ ಅದು. ೧೯೭೪ರಲ್ಲಿ ನಾವು ಗದುಗಿನ ತೋಂಟದಾರ್ಯಮಠದ ಸ್ವಾಮಿಗಳಾಗಿ ಅಧಿಕಾರ ವಹಿಸಿಕೊಂಡ ಮೇಲೆ ಸಿದ್ಧಲಿಂಗಯ್ಯನವರ ನಿಕಟ ಸಂಪರ್ಕ ಬಂತು. ಶ್ರೀಮಠದಲ್ಲಿ ಲಿಂಗಾಯತ ಪ್ರಗತಿಶೀಲ ಸಂಘದ ಆಶ್ರಯದಲ್ಲಿ ಪ್ರತಿ ಸೋಮವಾರ ನಡೆಯುವ ಕಾರ್ಯಕ್ರಮಗಳು, ಪ್ರತಿನಿತ್ಯದ ಪ್ರಾತಃಕಾಲದ ಶಿವಾನುಭವ, ಸಿದ್ಧಲಿಂಗಯ್ಯನವರ ಅನುಭಾವಪಥವನ್ನು ವಿಸ್ತರಿಸಿದವು. ಯಾವ ವಿಶ್ವವಿದ್ಯಾಲಯದಲ್ಲಿ ಓದದಿದ್ದ ಸಿದ್ಧಲಿಂಗಯ್ಯ ಜನತಾ ವಿಶ್ವವಿದ್ಯಾಲಯದಿಂದ ಶಾಸ್ತ್ರಿಗಳೆಂಬ ಅಭಿದಾನಕ್ಕೆ ಪಾತ್ರರಾದರು; ಜನರ ಪ್ರೀತಿಯ ಸಿದ್ಧಲಿಂಗಯ್ಯ ಶಾಸ್ತ್ರಿಗಳಾದರು.

ತೋಂಟದ ಸಿದ್ಧಲಿಂಗೇಶ್ವರನಲ್ಲಿ ಅವರ ಅನನ್ಯ ಭಕ್ತಿಗೆ ಕಾರಣ, ಅವರ ಬಾಲ್ಯಜೀವನ ಕಳೆದದ್ದು ಶ್ರೀಮಠದಲ್ಲಿಯೇ. ಅವರ ಸಿದ್ಧಲಿಂಗೇಶ್ವರರ ಬಗೆಗಿನ ಪ್ರವಚನ ಕೇಳಿದ ಕಿವಿಗಳೇ ಧನ್ಯ. ಪೂಜ್ಯರ ಶಾಖಾಮಠಗಳಲ್ಲಿ ಹಾಗೂ ಪ್ರತಿವರ್ಷ ಶ್ರಾವಣ ಮಾಸದಲ್ಲಿ, ಕುಷ್ಟಗಿಯಲ್ಲಿ ಇವರ ಪ್ರವಚನ ನಿರಂತರ ನಡೆಯಿತು. ಇವರ ಪ್ರವಚನ ಪ್ರಭಾವ ಬೆಳೆದಂತೆ ಬೇರೆ ಬೇರೆ ಊರು, ನಗರ, ಗ್ರಾಮಗಳಲ್ಲಿ ಪ್ರವಚನ ನಡೆಯಿತು. ಜತೆಗೆ ಗ್ರಂಥ, ಲೇಖನ ವ್ಯವಸಾಯ ಕೂಡ ಮುಂದುವರೆಯಿತು.

ಪಂ. ಸಿದ್ಧಲಿಂಗಶಾಸ್ತ್ರಿಗಳವರ ಶಿಷ್ಯಬಳಗ ತುಂಬ ದೊಡ್ಡದು. ಇಂದು ಈ ಕೃತಿ ಪ್ರಕಟನೆಗೆ ಕಾರಣರಾದ ಸೊಂಡೂರಿನ ಶ್ರೀ ಪ್ರಭುಸ್ವಾಮಿಗಳು ಶಾಸ್ತ್ರಿಗಳ ಪ್ರೀತಿಯ ಶಿಷ್ಯರೇ. ಇವರು ಶ್ರೀ ಶಾಸ್ತ್ರಿಗಳು ಬರೆದ ಎಲ್ಲ ಗ್ರಂಥಗಳ, ಲೇಖನಗಳ ಸಂಗ್ರಹ ಒಂದೇ ಕಡೆ ತರುವ ಮೂಲಕ ತುಂಬಾ ಒಳ್ಳೆಯ ಕಾರ್ಯಮಾಡಿದ್ದಾರೆ. ಈ ಕೃತಿಯ ಸಂಪಾದಕರಾದ ಪ್ರೊ. ಪಂಡಿತ ರಾಠೋಡ ಈ ಕೃತಿಯನ್ನು ಚಂದವಾಗಿ ಸಂಪಾದಿಸಿದ್ದಾರೆ. ಪ್ರಕಾಶಕರಿಗೆ, ಸಂಪಾದಕರಿಗೆ ಮಂಗಳವಾಗಲಿ.

ಜಯ ಬಸವ

**ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರ**

ಶುಭ ನುಡಿಯಿಂದ

**ಪ್ರಭುದೇವರ ಜನಕಲ್ಯಾಣ ಸಂಸ್ಥೆ**
**ಶ್ರೀ ಪ್ರಭುದೇವರ ಸಂಸ್ಥಾನ ವಿರಕ್ತಮಠ**
**ಸೊಂಡೂರು - ೫೮೩೧೧೯**